ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೩೬




ಅನುವಾದಕ :

**ಪಂಡಿತ ಬಿ. ಚನ್ನಕೇಶವಯ್ಯ,**

ಆಸ್ಥಾನ ವಿದ್ವಾನ್.



ಮೈಸೂರು

ಶ್ರೀ ಬಸವೇಶ್ವರ ಎಲೆಕ್ಟ್ರಿಕ್ ಪ್ರೆಸ್.

೧೯೫೦

|| ಶ್ರೀ ||

ಗಣೇಶ ಶಾರದಾ ಗುರುಭ್ಯೋನಮಃ

# ಮುನ್ನುಡಿ

ಒಂದು ದೇಶದ ಹಿಂದಿನ ಸಂಸ್ಕೃತಿಯನ್ನು ಅರಿಯಲು ಆ ದೇಶಗಳಲ್ಲಿ ದೊರಕುವ ಪ್ರಾಚೀನ ಗ್ರಂಥಗಳೇ ಮುಖ್ಯಾಧಾರ. ಅದರಂತೆ ನಮ್ಮ ಭಾರತೀಯರ ಸಂಸ್ಕೃತಿ ಪ್ರದರ್ಶಕಗಳೆಂದರೆ ಈ ಪುರಾಣೇತಿಹಾಸಾದಿಗಳೇ! ಸಂಸ್ಕೃತಿಯನ್ನು ವಿಚಾರಮಾಡುವಾಗ ಸಾಮಾನ್ಯವಾಗಿ ನಮ್ಮ ಹಿಂದಿನವರು ನಮಗಿಂತ ಸುಖಿಗಳಾಗಿದ್ದರೆ? ಅವರ ದೇಹದಾರ್ಢ್ಯ, ಅವರ ನಡೆನುಡಿಗಳು, ನಮ್ಮ ಇಂದಿನ ಸ್ಥಿತಿಗತಿಗಳಿಗಿಂತ ಎಷ್ಟರಮಟ್ಟಿನ ವ್ಯತ್ಯಾಸವನ್ನೆ ಪಡೆದಿದ್ದುವು? ಎಂಬೀ ಅಂಶಗಳನ್ನು ಮುಖ್ಯವಾಗಿ ಗಮನಿಸುವರು. ಅದರಲ್ಲಿ ಕೆಲವರು ತಮ್ಮ ಹಿಂದಿನವರ ಶಕ್ತಿಸಾಹಸಗಳನ್ನು ತಮ್ಮ ದೃಷ್ಟಿಯಿಂದ ಅಳೆದು ನೋಡಿ, ಅದು ಕೇವಲ ಉತ್ಪ್ರೇಕ್ಷೆಯೆಂದೂ ಅಸಂಭಾವಿತವೆಂದೂ ಅಲ್ಲಗಳೆಯುವುದೂ ಉಂಟು. ಇರುವೆಯ ದೃಷ್ಟಿಗೆ ಕಾಲುವೆಯು ಮಹಾಜಲಧಿಯಂತಾಗುವುದು ಸಹಜವಷ್ಟೆ. ಹಾಗೆಯೇ ನಮ್ಮಲ್ಲಿ ಕೆಲವರ ದೃಷ್ಟಿಕೋಣಕ್ಕೆ ನಮ್ಮ ಪ್ರಾಚೀನ ಭಾರತೀಯರ ಜೀವನಕ್ರಮವು ಮಿಥ್ಯಾಭೂತವಾಗಿ ಕಾಣುತ್ತಿದೆ. ಲೋಕದಲ್ಲಿ ಜನ್ಮವೆತ್ತಿದವರೆಲ್ಲರೂ ಮಹಾತ್ಮರೂ ಆದರ್ಶಪುರುಷರೂ ಎನಿಸುವುದಿಲ್ಲ. ಕೆಲವು ಕಾಲಗಳಲ್ಲಿ ಕೆಲಕೆಲವರು ಮಾತ್ರ ಆ ಮಹಿಮೆಯನ್ನು ಪಡೆಯುವರು. "ಶತೇಷು ಜಾಯತೇ ಶೂರಃ ಸಹಸ್ರೇಷು ಚ ಪಂಡಿತಃ" ಎಂಬ ಆರ್ಯೋಕ್ತಿಯಂತೆ ಮಹಾತ್ಮನೆನಿಸುವನು ಯುಗಕ್ಕೆ ಒಬ್ಬನೇ. ಉಳಿದವರೆಲ್ಲಾ ಮಧ್ಯಮ ವರ್ಗಕ್ಕೋ ಅಥವಾ ಅಧಮವರ್ಗಕ್ಕೋ ಸೇರುವರು. ಈ ಎರಡು ವರ್ಗದ ಮಾನವರ ಉದ್ಧಾರವೂ ಈ ಪುರಾಣಾದಿ ಗ್ರಂಥಗಳಿಂದ ಆಗಬೇಕು. ಹಿಂದಿನವರು ಅದಕ್ಕಾಗಿಯೇ ಈ ರೀತಿಯ ಗ್ರಂಥಗಳನ್ನು ರಚಿಸಿರುವರು.

ಭವಿಷ್ಯಮಹಾಪುರಾಣದ ಈ ಸಂಪುಟದಲ್ಲಿ ಅನೇಕ ವ್ರತಗಳು, ಪ್ರಾಯಶ್ಚಿತ್ತ ಕರ್ಮಗಳು, ಕಾಮ್ಯಕರ್ಮಗಳು, ಅವುಗಳ ಸ್ವರೂಪ, ಕ್ರಮ, ಫಲ ಇವು ವಿವರವಾಗಿ ಪ್ರತಿಪಾದಿತಗಳಾಗಿವೆ. ಫಲೇಚ್ಛೆಯಿಲ್ಲದೆ ಯೋಗಿಗಳು ಕೂಡ ಕಾರ್ಯೋನ್ಮುಖರಾಗುವುದಿಲ್ಲ. ಇನ್ನು ಸಂಸಾರಿಗಳ ಮಾತೇನು? ಅದಕ್ಕಾಗಿಯೇ

ನಮ್ಮ ಎಲ್ಲ ಕರ್ಮಗಳಿಗೂ ಪುರಾಣಕಾರರು ಒಂದೊಂದು ಫಲವನ್ನು ಗುರಿಯನ್ನಾಗಿ ಮಾಡಿರುವರು. "ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ" ಇತ್ಯಾದಿ ಭಗವದ್ವಾಕ್ಯಗಳು ಒಂದೆಡೆ ಇವೆ. ಅದನ್ನು ಗಮನಿಸಿದರೆ ನಾವು ಫಲೋದ್ದೇಶದಿಂದ ಕರ್ಮ ಮಾಡಬಾರದು ಎನ್ನಿಸುವುದು. ಆದರೆ ಹಾಗೆ ನಿಷ್ಕಾಮ ಕರ್ಮದಲ್ಲಿ ಆಸಕ್ತಿಯುಳ್ಳವರು ಬಹು ವಿರಳ. ಅಂತಹವರು ಜೀವನ್ಮುಕ್ತರೇ ಆಗುವರು. ಜೀವನ್ಮುಕ್ತಾವಸ್ಥೆಗೆ ಬರುವವರು ಮೊದಮೊದಲು ಕಾಮ್ಯಕರ್ಮಾಚರಣೆಯಿಂದಲೇ ಹೊರಡುವರು. ಈ ಅಭಿಪ್ರಾಯದಿಂದಲೇ ಈ ಗ್ರಂಥದಲ್ಲಿ ಸಕಲ ಕರ್ಮಕ್ಕೂ ಒಂದು ಫಲವನ್ನು ನಿರೂಪಿಸುತ್ತಿರುವರು. ಕಾಮ್ಯಕರ್ಮಗಳಲ್ಲಿ ಸಾಮಾನ್ಯವಾಗಿ ಪ್ರಾಯಶ್ಚಿತ್ತ ಸಂಸ್ಕಾರಗಳೂ ಸೇರಿಬಿಡುತ್ತವೆ. ಜನ್ಮಾಂತರಗಳಲ್ಲಿ ಸಂಪಾದಿಸಿದ ಪಾಪರಾಶಿಯನ್ನು ನಿವೃತ್ತಿಗೊಳಿಸುವುದೂ, ಪ್ರಾಯಶ್ಚಿತ್ತಾದಿಗಳಿಂದ ಮುಂದಿನ ಅಥವಾ ಅಂದಿನ ಜನ್ಮದ ಪಾಪರಾಶಿಯನ್ನು ತಡೆಗಟ್ಟುವುದೂ, ವ್ರತಾಚರಣೆಯಿಂದ ಸಾಧ್ಯ. ಈ ಎರಡುತರಹ ಕರ್ಮಗಳೂ, ಚಿತ್ತಶುದ್ಧಿಯನ್ನುಂಟುಮಾಡುವುವು. ಪಾಂಚಭೌತಿಕವಾದೀ ದೇಹವು ಎಂದೂ ಪರಿಶುದ್ಧವಾದುದಲ್ಲ. ಅದಕ್ಕೆ ನಿತ್ಯವೂ ಬಾಹ್ಯ ಮತ್ತು ಆಭ್ಯಂತರಿಕಶುದ್ಧಿ ಕರ್ಮಗಳಿರಲೇಬೇಕು. ಹೀಗೆ ಪರಿಶುದ್ಧಿಹೊಂದಿದ ಜೀವಿಯು ಐಹಿಕ ಮತ್ತು ಆಮುಷ್ಮಿಕ ಸುಖಗಳನ್ನು ಪಡೆಯುವನಲ್ಲದೆ ಇತರ ಮಾನವವರ್ಗಕ್ಕೂ ಸುಖಪ್ರದನಾಗುವನು. ಈ ಉದ್ದೇಶದಿಂದಲೇ ಪುರಾಣಕಾರರು ನಾನಾರೀತಿಯ ಚಿತ್ತಶುದ್ಧಿ ಸಂಸ್ಕಾರಗಳನ್ನು ತಮ್ಮ ಗ್ರಂಥಗಳಲ್ಲಿ ನಿರೂಪಿಸಿರುವರು. ಇನ್ನು ಐಹಿಕ ಸುಖಸಾಧನಗಳಾದ ಬಾವಿ, ಕೆರೆ, ಉದ್ಯಾನ, ದೇವಾಲಯ, ಮಂಟಪ, ಸೋಪಾನ ಇವುಗಳ ರಚನೆಗೂ ಒಂದೊಂದು ನಿಯಮ, ಕಾಲ, ದೇಶಗಳನ್ನು ಈ ಭಾಗದಲ್ಲಿ ಸೂಚಿಸಿರುವರು. ನಿಯಮರಹಿತವಾಗಿ ಮಾಡಿದ ಯಾವ ಕರ್ಮವೂ ಶಾಶ್ವತವಾಗಿ ನಿಲ್ಲುವುದಿಲ್ಲ. ಕ್ರಮಬದ್ಧವಾಗಿ ನಡೆಯಿಸಿರುವ ಸಕಲ ಕಾರ್ಯಗಳೂ ಪ್ರಜಾರಂಜಕಗಳಾಗಿ ಇಂದಿಗೂ ಶೋಭಿಸುತ್ತಾ ಇವೆ. ಈ ವಿಚಾರವನ್ನು ಗಮನಿಸಿ ವಾಚಕರು ಇದರಲ್ಲಿ ಹೇಳಿರುವ ಕ್ರಮವನ್ನನುಸರಿಸಿ ಕಾರ್ಯೋನ್ಮುಖರಾಗುವುದು ಶ್ರೇಯಸ್ಕರ. "ಕ್ಷಿಪ್ರಂ ಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ" ಎಂಬ ಭಗವದ್ವಾಕ್ಯದಂತೆ ಭವಿಷ್ಯಮಹಾಪುರಾಣದ ಎಲ್ಲ ಭಾಗಗಳಲ್ಲಿಯೂ ಮಾನವರ ಐಹಿಕಾಮುಷ್ಮಿಕ ಗುಣಗಳಿಗೆ ಕಾರಣವಾದ ಕರ್ಮಸ್ವರೂಪವೇ ವಿಶೇಷವಾಗಿ ಉಕ್ತವಾಗಿದೆ. ಕೆಲವು ಭಾಗಗಳಲ್ಲಿ ಮಾತ್ರ ಕೇವಲ ಚಾರಿತ್ರಿಕ ವಿಷಯಗಳು ಕಂಡು ಬರುತ್ತಿವೆ. ಆದರೆ ಅಷ್ಟಾದಶ ಮಹಾಪುರಾಣಗಳಲ್ಲಿ ಭವಿಷ್ಯಮಹಾಪುರಾಣದಲ್ಲಿರುವಷ್ಟು ಐತಿಹಾಸಿಕ ವಿಷಯಗಳು ಮಿಕ್ಕವುಗಳಲ್ಲಿ ಕಂಡುಬರುವುದಿಲ್ಲ. ತಾತ್ವಿಕ ವಿಷಯಗಳಲ್ಲಿ ಇತರ ಪುರಾಣಗಳು ಇದಕ್ಕಿಂತ ಮುಂದುವರಿದಿವೆ

ಎನ್ನಬಹುದು. ಆಧುನಿಕ ಸಂಶೋಧಕರು ಈ ಪುರಾಣದ ಕೆಲವುಭಾಗಗಳು **ಈಚಿನ** ಕಲ್ಪನೆ ಎಂದು ಅಭಿಪ್ರಾಯಪಡುವರು. ಹಾಗೆ ಹೇಳುವುದಕ್ಕೆ ಅವ **ಕಾಶವೂ** ಉಂಟು. ಪ್ರಾಚೀನವಾಗಲಿ ನವೀನವಾಗಲಿ ರತ್ನವು ರತ್ನವೇ! " ಪುರಾಣಮಿತ್ಯೇವ ನ ಸಾಧು ಸರ್ವಂ ನ ಚಾಪಿ ಕಾವ್ಯಂ ನವಮಿತ್ಯವದ್ಯಂ " ಎಂದು ಕಾಳಿದಾಸ ಮಹಾಕವಿ ಹೇಳಿರುವಂತೆ ಹಳೇಯದೆಲ್ಲಾ ಸಾಧುವಲ್ಲ. ಹೊಸದೆಲ್ಲಾ ದೂಷ್ಯವಲ್ಲ. ವಿಷಯ ಜಿಜ್ಞಾಸುಗಳಾದವರಿಗೆ ಎರಡೂಬೇಕು. ಎರಡು ಮಾರ್ಗದಿಂದಲೂ ಮಾನವಕುಲ ಉದ್ಧಾರವಾಗುವುದು.

ಇಂತಹ ಮಹಾಗ್ರಂಥಗಳ ಪರಿವರ್ತನೆಯ ಮಹಾಕಾರ್ಯಕ್ಕೆ ಸಂಪೂರ್ಣವಾದ ಸಹಾಯವನ್ನು ಕಲ್ಪಿಸಿರುವವರು ನಮ್ಮನ್ನಾಳುವ ಶ್ರೀಮನ್ಮಹಾರಾಜರವರಾದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ. ಸಿ. ಬಿ., ಜಿ. ಸಿ. ಎಸ್. ಐ.,** ಮಹಾಪ್ರಭುಗಳು. ಇಂತಹ ಆಸ್ತಿಕ ರಾಜಶ್ರೇಷ್ಠರಿಗೂ, ಅವರ ಕುಟುಂಬವರ್ಗಕ್ಕೂ ಸರ್ವೇಶ್ವರನು ಸಕಲ ಸನ್ಮಂಗಳಗಳನ್ನೂ ಸುಖ ಸಂತೋಷಗಳನ್ನೂ ಒದಗಿಸಿ ಚಿರಕಾಲ ಸಲಹುತ್ತಿರಲಿ ಎಂದು ಅನನ್ಯ ಭಾವನೆ ಯಿಂದ ಪ್ರಾರ್ಥಿಸುವೆನು.

ಶ್ರೀ ಖರಸಂವತ್ಸರ,
ಜ್ಯೇಷ್ಠ ಕೃಷ್ಣ ತ್ರಯೋದಶೀ
ತಾ॥ ೧-೭-೫೧.

ಸಜ್ಜನ ವಿಧೇಯ,
**ಬಿ. ಚನ್ನಕೇಶವಯ್ಯ.**



## ಭವಿಷ್ಯಮಹಾಪುರಾಣ ಉತ್ತರಪರ್ವದ ತೃತೀಯ ಸಂಪುಟದ
## (ನೂರ ಒಂದರಿಂದ ನೂರ ಐವತ್ತೆರಡು ಅಧ್ಯಾಯಗಳ)

# ವಿಷಯಾನುಕ್ರಮಣಿಕೆ

ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ

## ನೂರಇಪ್ಪತ್ತೇಳನೆಯ ಅಧ್ಯಾಯ—

### ವಾಪೀಕೂಪತಡಾಗೋತ್ಸರ್ಗ ವಿಧಿ.



## ನೂರಇಪ್ಪತ್ತೆಂಟನೆಯ ಅಧ್ಯಾಯ—

### ವೃಕ್ಷೋದ್ಯಾಪನ ವಿಧಿ.

ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ

ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ತೃತೀಯ ಸಂಪುಟದ ವಿಷಯಾನುಕ್ರಮಣಿಕೆ ಸಂಪೂರ್ಣಂ.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣ
## ಉತ್ತರಪರ್ವಣಿ
## ಏಕಾಧಿಕಶತತಮೋಽಧ್ಯಾಯಃ

|| ಯುಧಿಷ್ಠಿರ ಉವಾಚ ||

ಪುನರ್ಮೇ ಬ್ರೂಹಿ ದೇವೇಶ ತ್ವದ್ಭಕ್ತ್ಯಾ ಭಾವಿತಾತ್ಮನಃ ।
ಕಥ್ಯಮಾನಮಿಹೇಚ್ಛಾಮಿ ಶುಭಧರ್ಮಪದಂ ಮಹತ್ || ೧ ||

ಯತ್ರಾಣ್ವಪಿ ನರೈರ್ದತ್ತಂ ಜಪ್ತಂ ವಾ ಸುಮಹದ್ಭವೇತ್ || ೨ ||

|| ಶ್ರೀ ಕೃಷ್ಣ ಉವಾಚ ||

ಶೃಣು ಪಾಂಡವ ತೇ ವಚ್ಮಿ ರಹಸ್ಯಂ ದೇವನಿರ್ಮಿತಂ ।
ಯನ್ಮಯಾ ಕಸ್ಯಚಿನ್ನೋಕ್ತಂ ಸುಪ್ರಿಯಸ್ಯಾಪಿ ಭಾರತ || ೩ ||

---

### ನೂರೊಂದನೆಯ ಅಧ್ಯಾಯ

೧-೨. ಯುಧಿಷ್ಠಿರನು ಹೇಳುತ್ತಾನೆ—ಎಲೈ ದೇವಾಧೀಶನೇ! ನಿನ್ನ ಭಕ್ತಿಯಿಂದ ಪರಿಶುದ್ಧಹೊಂದಿದ ಅಂತಃಕರಣವುಳ್ಳ ನನಗೆ, ಮತ್ತೊಮ್ಮೆ ಉಪದೇಶಮಾಡು. ನೀನು ಸಾರವತ್ತಾಗಿ ಹೇಳುವ ಮಹತ್ತಾದ ಶುಭಧರ್ಮವನ್ನು ಇನ್ನೊಂದುಸಾರಿ ಕೇಳಬೇಕೆನ್ನಿಸುತ್ತದೆ. ಪುರುಷರು ಯಾವ ದಾನ, ಜಪ ಇವುಗಳನ್ನು ಅಣುಮಾತ್ರವೇ ಮಾಡಿದರೂ, ಅದು ಮಹತ್ತಾದ ಫಲವುಳ್ಳದ್ದಾಗುವುದೋ ಅಂತಹ ದಾನ, ಜಪಾದಿಗಳನ್ನು ಹೇಳು ಎಂದನು.

೩. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಪಾಂಡುಪುತ್ರನೇ! ದೇವನಿರ್ಮಿತವಾದ ಒಂದು ರಹಸ್ಯವನ್ನು ನಾನು ನಿನಗೆ ಹೇಳುತ್ತೇನೆ. ಅಯ್ಯಾ ಭರತವಂಶಜನೇ!. ಈ ವಿಷಯವನ್ನು ಈ ಹಿಂದೆ ಯಾವ ಆಪ್ತನಿಗೂ ನಾನು ಹೇಳಲಿಲ್ಲ.

ವೈಶಾಖಮಾಸಸ್ಯ ತು ಯಾ ತೃತೀಯಾ ।
ನವಮ್ಯಸೌ ಕಾರ್ತಿಕಶುಕ್ಲಪಕ್ಷೇ ॥
ನಭಸ್ಯಮಾಸಸ್ಯ ತು ಕೃಷ್ಣಪಕ್ಷೇ ।
ತ್ರಯೋದಶೀಂ ಪಂಚದಶೀಂ ಚ ಮಾಘೇ ॥ ೪ ॥

ವೈಶಾಖಸ್ಯ ತೃತೀಯಾ ತು ಸಮಾ ಕೃತಯುಗೇನ ತು ।
ನವಮೀ ಕಾರ್ತಿಕೇ ಯಾ ತು ತ್ರೇತಾಯುಗಸಮಾಮತಾ ॥ ೫ ॥

ತ್ರಯೋದಶೀ ನಭಸ್ಯೇ ತು ದ್ವಾಪರೇಣ ಸಮಾಮತಾ ।
ಮಾಘೇ ಪಂಚದಶೀ ರಾಜನ್ಕಲಿಕಾಲಾದಿರುಚ್ಯತೆ ॥ ೬ ॥

ಏತಾಶ್ಚತಸ್ರೋ ರಾಜೇಂದ್ರ ಯುಗಾನಾಂ ಪ್ರಭವಾದ್ಯಥಾ ।
ಯುಗಾದಯಶ್ಚ ಕಥ್ಯಂತೆ ತಥೈತಾಃ ಸರ್ವಸೂರಿಭಿಃ ॥ ೭ ॥

ಉಪವಾಸಸ್ತಪೋ ದಾನಂ ಜಪಹೋಮಕ್ರಿಯಾಸ್ತಥಾ ।
ಯದ್ಯತ್ತು ಕ್ರಿಯತೇ ಕಿಂಚಿತ್ಸರ್ವಂ ಕೋಟಿಗುಣಂ ಭವೇತ್ ॥ ೮ ॥

---

೪. ವೈಶಾಖಮಾಸದ ಶುಕ್ಲಪಕ್ಷದ ತೃತೀಯೆ, ಕಾರ್ತಿಕ ಶುಕ್ಲಪಕ್ಷದ ನವಮಿ, ಭಾದ್ರಪದ ಕೃಷ್ಣಪಕ್ಷದ ತ್ರಯೋದಶಿ, ಮಾಘಮಾಸದ ಹುಣ್ಣಿಮೆ ಈ ನಾಲ್ಕು ತಿಥಿಗಳು ಅತಿ ಪ್ರಶಸ್ತಗಳು.

೫. ಅದರಲ್ಲಿ ವೈಶಾಖ ಶುಕ್ಲ ತೃತೀಯೆಯು ಕೃತಯುಗವು ಪ್ರಾರಂಭವಾದ ದಿನ. ಕಾರ್ತಿಕ ಶುಕ್ಲ ನವಮಿಯು ತ್ರೇತಾಯುಗದ ಆರಂಭದ ದಿವಸ.

೬. ಅಯ್ಯಾ ರಾಜನೇ! ಭಾದ್ರಪದ ಕೃಷ್ಣಪಕ್ಷದ ತ್ರಯೋದಶಿಯು ದ್ವಾಪರಯುಗಾರಂಭವೆಂದು ಪ್ರಸಿದ್ಧಿ. ಮಾಘಮಾಸದ ಹುಣ್ಣಿಮೆಯು ಕಲಿಯುಗದ ಪ್ರಾರಂಭ ದಿನವೆಂದು ಉಕ್ತವಾಗಿದೆ.

೭. ಅಯ್ಯಾ ರಾಜೇಂದ್ರನೇ! ನಾನು ಹೇಳಿದ ಈ ನಾಲ್ಕು ತಿಥಿಗಳು ಯುಗ ಪ್ರಾರಂಭದ ದಿನಗಳಾದುದರಿಂದ ಪಂಡಿತರು ಈ ತಿಥಿಗಳನ್ನು ಯುಗಾದಿ ಎಂದು ಹೇಳುತ್ತಾರೆ.

೮. ಈ ತಿಥಿಗಳಲ್ಲಿ ಉಪವಾಸ, ತಪಸ್ಸು, ದಾನ, ಜಪ, ಹೋಮಕರ್ಮ, ಮೊದಲಾದುವನ್ನು ಅತ್ಯಲ್ಪವಾಗಿ ಮಾಡಿದರೂ ಅದೆಲ್ಲಾ ಕೋಟಿ ಗುಣವುಳ್ಳದ್ದಾಗುವುದು.

ವೈಶಾಖಸ್ಯ ತೃತೀಯಾಯಾಂ ಶ್ರೀಸಮೇತಂ ಜಗದ್ಗುರುಂ ।
ನಾರಾಯಣಂ ಪೂಜಯೇಥಾಃ ಪುಷ್ಪಧೂಪವಿಲೇಪನೈಃ ॥
ವಸ್ತ್ರಾಲಂಕಾರಸಂಭಾರೈರ್ನೈವೇದ್ಯೈರ್ವಿವಿಧೈಸ್ತಥಾ ॥ ೯ ॥

ತತಸ್ತಸ್ಯಾಗ್ರತೋ ಧೇನುರ್ಲವಣಸ್ಯಾಢಕೇನ ತು ।
ಕಾರ್ಯಾ ಕುರುಕುಲಶ್ರೇಷ್ಠ ಚತುರ್ಭಾಗೇಣ ವತ್ಸಕಃ ॥ ೧೦ ॥

ಅವಿಚರ್ಮೋಪರಿ ಸ್ಥಾಪ್ಯ ಕಲ್ಪಯಿತ್ವಾ ವಿಧಾನತಃ ।
ಶಾಸ್ತ್ರೋಕ್ತಕ್ರಮಯೋಗೇನ ಬ್ರಾಹ್ಮಣಾಯೋಪಪಾದಯೇತ್ ॥೧೧॥

ಶ್ರೀಧರಃ ಶ್ರೀಪತಿಃ ಶ್ರೀಮಾನ್ಶ್ರೀಶಃ ಸಂಪ್ರೀಯತಾಮಿತಿ ।
ಅನೇನ ವಿಧಿನಾ ದತ್ವಾ ಧೇನುಂ ವಿಪ್ರಾಯ ಭಾರತ ॥
ಗೋಸಹಸ್ರಂ ದಶಗುಣಂ ಪ್ರಾಪ್ನೋತೀಹ ನ ಸಂಶಯಃ ॥ ೧೨ ॥

---

೯. ವೈಶಾಖ ಶುಕ್ಲ ತೃತೀಯೆಯಲ್ಲಿ ಜಗತ್ಪತಿಯಾದ ಶ್ರೀಮನ್ನಾರಾಯಣನನ್ನು ಲಕ್ಷ್ಮೀಸಮೇತವಾಗಿ ಪುಷ್ಪ, ಧೂಪ, ವಸ್ತ್ರ, ಅಲಂಕಾರ ಇತ್ಯಾದಿ ಪೂಜಾಸಾಮಗ್ರಿಗಳಿಂದಲೂ, ವಿವಿಧ ನೈವೇದ್ಯಗಳಿಂದಲೂ ಪೂಜಿಸಬೇಕು.

೧೦. ಅಯ್ಯಾ ಕುರುಕುಲಶ್ರೇಷ್ಠನೇ! ಪೂಜಿತನಾದ ಆ ಸ್ವಾಮಿಯ ಮುಂಭಾಗದಲ್ಲಿ ಒಂದು ಆಢಕ ಪರಿಮಾಣದ ಲವಣಧೇನುವನ್ನೂ ಆ ಆಢಕದ ನಾಲ್ಕನೆಯ ಒಂದುಭಾಗದಷ್ಟರಲ್ಲಿ ಒಂದು ಕರುವನ್ನೂ ರಚಿಸಬೇಕು.

೧೧. ಅನಂತರ ಆ ದೇವನ ಮುಂಭಾಗದಲ್ಲಿ ಕುರಿಯ ಚರ್ಮವನ್ನು ಹಾಸಿ, ಮೇಲೆ ಸೂಚಿಸಿದಂತೆ ಕರುಸಹಿತವಾದ ಲವಣಧೇನುವನ್ನು ಅದರ ಮೇಲೆ ಸ್ಥಾಪನೆಮಾಡಿ, ಶಾಸ್ತ್ರೋಕ್ತಕ್ರಮದಿಂದ ಬ್ರಾಹ್ಮಣನಿಗೆ ದಾನಮಾಡಬೇಕು.

೧೨. ಅಯ್ಯಾ ಭರತಕುಲಪ್ರಸೂತನೇ! "ಶ್ರೀಧರಃ ಶ್ರೀಪತಿಃ ಶ್ರೀಮಾನ್ ಶ್ರೀಶಃ ಸಂಪ್ರೀಯತಾಂ" ಎಂದು ಹೇಳಿ, ದಾನಕಾಲದಲ್ಲಿ ಆ ಲವಣಧೇನುವನ್ನು ಬ್ರಾಹ್ಮಣನಿಗೆ ದಾನಮಾಡಿದವನು ಈ ಲೋಕದಲ್ಲಿ ಅದಕ್ಕೆ ದಶಗುಣಿತ ಗೋಸಹಸ್ರವನ್ನು ನಿಸ್ಸಂದೇಹವಾಗಿ ಹೊಂದುತ್ತಾನೆ.

ತಥೈವ ಕಾರ್ತಿಕೇ ಮಾಸಿ ನವಮ್ಯಾಂ ನಕ್ತಭುಙ್ನರಃ ।
ಸ್ನಾತ್ವಾ ನದೀತಡಾಗೇಷು ದೇವಖಾತೇಷು ವಾ ಪುನಃ ॥ ೧೩ ॥

ಉಮಾಸಹಾಯಂ ವರದಂ ನೀಲಕಂಠಮಥಾರ್ಚಯೇತ್ ।
ಪುಷ್ಪಧೂಪಾದಿನೈವೇದ್ಯೈರನಿಂದ್ಯೈಃ ಶಂಕರಂ ಶಿವಂ ॥ ೧೪ ॥

ಧೇನುಂ ತಿಲಮಯೀಂ ದದ್ಯಾತ್ಪುರಾಣೋಕ್ತವಿಧಾನತಃ ।
ಅಷ್ಟಮೂರ್ತಿರ್ನೀಲಕಂಠಃ ಪ್ರೀಯತಾಮಿತಿ ಚಿಂತಯೇತ್ ॥ ೧೫ ॥

ಯದತ್ರ ಪ್ರಾಪ್ಯತೇ ಪುಣ್ಯಂ ಪಾರ್ಥ ತತ್ಕೇನ ವರ್ಣ್ಯತೆ ।
ದತ್ವಾ ತಿಲಮಯೀಂ ಧೇನುಂ ಶಿವಲೋಕಮವಾಪ್ನುಯಾತ್ ॥ ೧೬ ॥

---

೧೩. ಮತ್ತು ಕಾರ್ತಿಕಮಾಸದ ನವಮಿಯಲ್ಲಿ ಪುರುಷನು "ಈ ದಿನ ನಕ್ತಭೋಜನ ಮಾಡುತ್ತೇನೆಂದು" ಸಂಕಲ್ಪಿಸಿ, ಅನಂತರ ನದಿಯಲ್ಲಿಯೋ ಅಥವಾ ದೇವತೆಗಳು ಅಗೆದು ಮಾಡಿರುವ ಪುರಾತನವಾದ ಪುಷ್ಕರಿಣಿಗಳಲ್ಲೋ ಸ್ನಾನಮಾಡಬೇಕು.

೧೪. ಅನಂತರ ವರಪ್ರದನಾದ ಪರಮೇಶ್ವರನನ್ನು ಪಾರ್ವತೀ ಸಹಿತವಾಗಿ ಪೂಜಿಸಬೇಕು. ಈ ಸಂದರ್ಭದಲ್ಲಿ ಯಥೋಕ್ತರೀತಿ ತಿಲಧೇನುವನ್ನು ರಚಿಸಿ, ಯೋಗ್ಯಗಳಾದ ಪುಷ್ಪ, ಧೂಪಾದಿಗಳಿಂದಲೂ ನೈವೇದ್ಯಗಳಿಂದಲೂ ಪೂಜಿಸಬೇಕು.

೧೫. ಆಮೇಲೆ ಪುರಾಣೋಕ್ತಪ್ರಕಾರವಾಗಿ "ಅಷ್ಟಮೂರ್ತಿರ್ನೀಲಕಂಠಃ ಪ್ರೀಯತಾಂ" ಎಂದು ಹೇಳಿ, ಆ ತಿಲಧೇನುವನ್ನು ಬ್ರಾಹ್ಮಣನಿಗೆ ದಾನ ಕೊಡಬೇಕು. ಜಲಾದಿ ಅಷ್ಟಮೂರ್ತ್ಯಾತ್ಮಕನಾದ ಶ್ರೀ ಪರಮೇಶ್ವರನು ಈ ದಾನದಿಂದ ಸುಪ್ರೀತನಾಗಲಿ ಎಂದು ದಾನಮಂತ್ರದ ಅರ್ಥವು.

೧೬. ಅಯ್ಯಾ ಪಾರ್ಥನೇ! ಈ ತಿಲಧೇನು ದಾನದಿಂದ ಬರುವ ಫಲವನ್ನು ವಿವರಿಸಿ ಹೇಳಲು ಯಾವನಿಗೆ ತಾನೆ ಸಾಧ್ಯ? ಮುಖ್ಯವಾಗಿ ಈ ತಿಲಧೇನು ದಾನಮಾಡಿದವನು ಶಿವಲೋಕವನ್ನು ಪಡೆಯುತ್ತಾನೆ.

ತ್ರಯೋದಶೀ ನಭಸಿ ಯಾ ಕೃಷ್ಣಮಸ್ಯಾಂ ಸಮರ್ಚಯೇತ್ ।
ಪಿತ್ನ್ಪಾಯಸದಾನೇನ ಮಧುನಾ ಚ ಘೃತೇನ ತು ॥
ಭೋಜಯೇದ್ಬ್ರಾಹ್ಮಣಾನ್ಭಕ್ತ್ಯಾ ವೇದವೇದಾಂಗಪಾರಗಾನ್ ॥೧೭॥

ಪಿತ್ನನುದ್ದಿಶ್ಯ ದಾತವ್ಯಾ ಸವತ್ಸಾ ಕಾಂಸ್ಯದೋಹನೀ ।
ಪ್ರತ್ಯಕ್ಷಾ ಗೌರ್ಮಹಾರಾಜ ತರುಣೀ ಸುಪಯಸ್ವಿನೀ ॥ ೧೮ ॥

ಪಿತಾ ಪಿತಾಮಹಶ್ಚೈವ ತಥೈವ ಪ್ರಪಿತಾಮಹಃ ।
ಪ್ರೀಯಂತಾಂ ಗೋಪ್ರದಾನೇನ ಇತಿ ದತ್ವಾ ವಿಸರ್ಜಯೇತ್ ॥ ೧೯ ॥

ಕೃತೇನಾನೇನ ರಾಜೇಂದ್ರ ಯತ್ಪುಣ್ಯಂ ಪ್ರಾಪ್ಯತೇ ನೃಭಿಃ ।
ತತ್ಕೇನ ವರ್ಣಿತುಂ ಯಾತಿ ವರ್ಷಕೋಟಿಶತೈರಪಿ ॥ ೨೦ ॥

---

೧೭. ಭಾದ್ರಪದ ಕೃಷ್ಣ ತ್ರಯೋದಶಿಯಲ್ಲಿ ಶ್ರೀ ಕೃಷ್ಣನನ್ನು ಆರಾಧಿಸಬೇಕು. ಅಲ್ಲದೆ ಪಿತೃಗಳನ್ನುದ್ದೇಶಿಸಿ, ವೇದವೇದಾಂಗಪಾರಂಗತರಾದ ಬ್ರಾಹ್ಮಣರಿಗೆ ಪಾಯಸ, ಮಧು, ಘೃತ ಇವುಗಳಿಂದ ಭಕ್ತಿಪೂರ್ವಕವಾಗಿ ಭೋಜನ ಮಾಡಿಸಬೇಕು.

೧೮. ಅಯ್ಯಾ ಮಹಾರಾಜನೇ! ಪಿತೃಪ್ರೀತ್ಯರ್ಥವಾಗಿ ಕರುಸಹಿತವಾಗಿರುವ ಕರೆಯುವ ಹಸುವನ್ನು ಕಂಚಿನ ಪಾತ್ರೆಸಹಿತ ದಾನಮಾಡಬೇಕು.

೧೯. ದಾನಕಾಲವಲ್ಲಿ ಈ ಮಂತ್ರವನ್ನು ಹೇಳಬೇಕು. ತಂದೆ, ಅಜ್ಜ, ಮುತ್ತಜ್ಜ ಈ ಪಿತೃಗಳು ಈ ಗೋದಾನದಿಂದ ಸುಪ್ರೀತರಾಗಲಿ ಎಂದು ಈ ಮಂತ್ರಾರ್ಥ.

೨೦. ಅಯ್ಯಾ ರಾಜೇಂದ್ರನೇ! ಈ ದಾನಕರ್ಮದಿಂದ ಪುರುಷನು ಎಷ್ಟು ಪುಣ್ಯವನ್ನು ಹೊಂದುತ್ತಾನೆ ಎಂಬುದನ್ನು ಶತಕೋಟಿ ವರ್ಷಗಳ ಕಾಲ ಹೇಳಿದರೂ ಪೂರೈಸಲಾರದು.

ಪುತ್ರಾನ್ಪೌತ್ರಾನ್ಪ್ರಪೌತ್ರಾಂಶ್ಚ ಧನಂ ಚ ಮಹದೀಪ್ಸಿತಂ ।
ಇಹ ಚಾಪ್ನೋತಿ ಪುರುಷಃ ಪರತ್ರ ಚ ಶುಭಾಂ ಗತಿಂ ॥ ೨೦ ॥

ಪಂಚದಶ್ಯಾಂ ಚ ಮಾಘಸ್ಯ ಪೂಜಯಿತ್ವಾ ಪಿತಾಮಹಂ ।
ಗಾಯತ್ರ್ಯಾ ಸಹಿತಂ ದೇವಂ ವೇದವೇದಾಂಗಭೂಷಿತಂ ॥ ೨೨ ॥

ನವನೀತಮಯೀಂ ಧೇನುಂ ಫಲೈರ್ನಾನಾವಿಧೈರ್ಯುತಾಂ ।
ಸಹಿರಣ್ಯಾಂ ಸವತ್ಸಾಂ ಚ ಬ್ರಾಹ್ಮಣಾಯ ನಿವೇದಯೇತ್ ॥
ಕೀರ್ತಯೇತ್ಪ್ರೀಯತಾಮತ್ರ ಪದ್ಮಯೋನಿಃ ಪಿತಾಮಹಃ ॥ ೨೩ ॥

ಯತ್ಸ್ವರ್ಗೇ ಯಚ್ಚ ಪಾತಾಲೇ ಯಚ್ಚ ಮರ್ತ್ಯೇ ಸುದುರ್ಲಭಂ ।
ತದವಾಪ್ನೋತ್ಯಸಂದಿಗ್ಧಂ ಪದ್ಮಯೋನಿಪ್ರಸಾದತಃ ॥ ೨೪ ॥

ಯಾನಿ ಚಾನ್ಯಾನಿ ದಾನಾನಿ ದತ್ತಾನಿ ಸುಬಹೂನ್ಯಪಿ ।
ಯುಗಾದಿಷು ಮಹಾರಾಜ ಅಕ್ಷಯಾನಿ ಭವಂತಿ ಹಿ ॥ ೨೫ ॥

---

೨೧. ಮುಖ್ಯವಾಗಿ ಈ ಕರ್ಮವನ್ನು ಮಾಡಿದವನು ಇಹಲೋಕದಲ್ಲಿ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು, ಇಷ್ಟವಾದ ಮಹಾಧನ, ಇವುಗಳನ್ನೆಲ್ಲಾ ಪಡೆದು ಮರಣಾನಂತರದಲ್ಲಿ ಸದ್ಗತಿಯನ್ನು ಹೊಂದುತ್ತಾನೆ.

೨೨. ಮಾಘಮಾಸದ ಹುಣ್ಣಿಮೆಯಲ್ಲಿ ವೇದವೇದಾಂಗಗಳಿಂದ ಅಲಂಕೃತನಾದ ಶ್ರೀ ಬ್ರಹ್ಮದೇವನನ್ನು ಗಾಯತ್ರೀದೇವಿಸಹಿತವಾಗಿ ಪೂಜಿಸಬೇಕು.

೨೩. ಆಗ ವತ್ಸಸಹಿತವಾದ ನವನೀತ (ಬೆಣ್ಣೆಯ) ಧೇನುವನ್ನು ನಾನಾವಿಧ ಫಲ, ಹಿರಣ್ಯ ಇವುಗಳ ಸಮೇತ ದಾನಮಾಡಬೇಕು. ಆಗ "ಪದ್ಮಯೋನಿಃ ಪಿತಾಮಹಃ ಪ್ರೀಯತಾಂ" ಎಂದು ಹೇಳಬೇಕು.

೨೪. ಇದನ್ನು ಆಚರಿಸಿದವನು ಶ್ರೀ ಬ್ರಹ್ಮದೇವನ ಪ್ರಸಾದದಿಂದ ಸ್ವರ್ಗ, ಮರ್ತ್ಯ, ಪಾತಾಳಗಳಲ್ಲಿ ಸಹ ದುರ್ಲಭವಾದ ವಸ್ತುಗಳನ್ನು ಪಡೆಯುತ್ತಾನೆ.

೨೫. ಅಯ್ಯಾ ಮಹಾರಾಜನೇ! ಈ ಹಿಂದೆ ಹೇಳಿದ ನಾಲ್ಕು ಯುಗಾದಿಗಳಲ್ಲಿ ತಮಗೆ ಅಭಿಮತವಾದ ಇತರ ದಾನಗಳನ್ನು ಕೊಟ್ಟರೆ ಅವುಗಳು ಅಕ್ಷಯ ಫಲದಾಯಕಗಳಾಗುವುವು.

ಅಲ್ಪಮಲ್ಪಂ ಹಿ ಯಃ ಕಶ್ಚಿತ್ಪ್ರದದ್ಯಾನ್ನಿರ್ಧನೋಽಪಿ ಸನ್ ।
ತದಕ್ಷಯಂ ಭವೇತ್ಸರ್ವಂ ಯುಗಾದಿಷು ನ ಸಂಶಯಃ ॥ ೨೬ ॥

ವಿತ್ತಾನುಸಾರಂ ಸ್ವಂ ಜ್ಞಾತ್ವಾ ವಿತ್ತವಾನ್ಪಾರ್ಥಿವೋಽಪಿ ವಾ ।
ಅನುಸಾರೇಣ ವಿತ್ತಸ್ಯ ಅಸಾಧ್ಯೇನ ಸಮಾಧಿನಾ ॥ ೨೭ ॥

ಭೂರ್ಹಿರಣ್ಯಂ ಗೃಹಂ ವಾಸಃ ಶಯನಾನ್ಯಾಸನಾನಿ ಚ ।
ಛತ್ರೋಪಾನತ್ಸುಯುಗ್ಮಾನಿ ಪ್ರದೇಯಾನಿ ದ್ವಿಜಾತಿಷು ॥ ೨೮ ॥

ಏವಂ ದತ್ವಾ ಯಥಾಶಕ್ತ್ಯಾ ಭೋಜಯಿತ್ವಾ ದ್ವಿಜಾನಪಿ ।
ಪಶ್ಚಾದ್ಭುಂಜೀತ ಸುಮನಾ ವಾಗ್ಯತಃ ಸ್ವಜನೈಃ ಸಹ ॥ ೨೯ ॥

ಯತ್ಕಿಂಚಿನ್ಮಾನಸಂ ಪಾಪಂ ಕಾಯಿಕಂ ವಾಚಿಕಂ ತಥಾ ।
ತತ್ಸರ್ವಂ ನಾಶಮಾಯಾತಿ ಯುಗಾದಿತಿಥಿಪೂಜನಾತ್ ॥ ೩೦ ॥

---

೨೬. ಈ ಯುಗಾದಿಗಳಲ್ಲಿ ಬಡವನು ತನ್ನ ಶಕ್ತಿಯಿದ್ದಷ್ಟರಲ್ಲಿ ಸ್ವಲ್ಪವೇ ದಾನಮಾಡಿದರೂ ಅವೆಲ್ಲವೂ ಅಕ್ಷಯ ಫಲಗಳನ್ನು ಕೊಡುತ್ತವೆ.

೨೭–೨೮. ರಾಜರು ಅಥವಾ ಇತರ ಧನಿಕರು, ಈ ಯುಗಾದಿಗಳಲ್ಲಿ ತಮ್ಮ ತಮ್ಮ ದ್ರವ್ಯಾನುಕೂಲವನ್ನು ಅನುಸರಿಸಿ, ದೃಢಚಿತ್ತತೆಯಿಂದ ಭೂಮಿ, ಸುವರ್ಣ, ಗೃಹ, ವಸ್ತ್ರ, ಶಯ್ಯೆ, ಪೀಠ, ಛತ್ರಿ, ಪಾದುಕೆ ಇವುಗಳನ್ನು ಬ್ರಾಹ್ಮಣರಿಗೆ ದಾನ ಮಾಡಬೇಕು.

೨೯. ಈರೀತಿ ಯಥಾಶಕ್ತಿ ದಾನಮಾಡಿ ಬ್ರಾಹ್ಮಣರಿಗೆ ಭೋಜನ ಮಾಡಿಸಿ, ಆ ಮೇಲೆ ಹೃಷ್ಟಚಿತ್ತನಾಗಿ ಸ್ವಜನಸಮೇತ ಮೌನದಿಂದ ಭೋಜನ ಮಾಡಬೇಕು.

೩೦. ಈ ಯುಗಾದಿ ತಿಥಿಗಳಲ್ಲಿ ಈ ಹಿಂದೆ ಹೇಳಿದಂತೆ ಪೂಜೆಮಾಡಿದ ಪುರುಷನು ಜ್ಞಾತಾಜ್ಞಾತವಾಗಿ ಆಚರಿಸಿದ ಕಾಯಿಕ, ವಾಚಿಕ, ಮಾನಸಿಕವೆಂಬ ತ್ರಿವಿಧ ಪಾಪಗಳಾಗಲಿ, ಅಥವಾ ಅವೇ ಬಗೆಯ ಬೇರೆ ಪಾಪಗಳಾಗಲಿ ಎಲ್ಲಾ ನಾಶವಾಗುವವು.

ಉದ್ಗೀಯಮಾನೋ ಗಂಧರ್ವೈಃ ಸ್ತೂಯಮಾನಃ ಸುರಾಸುರೈಃ ।
ರಮತೇ ಚಾಕ್ಷಯಂ ಕಾಲಂ ಸ್ವರ್ಗಲೋಕೇ ನ ಸಂಶಯಃ ॥ ೩೧ ॥

ಯದ್ದೀಯತೇ ಕಿಮಪಿ ಕೋಟಿಗುಣಂ ತದಾಹುಃ
ಸ್ನಾನಂ ಜಪೋನಿಯಮಮಕ್ಷಯಮೇವ ಸರ್ವಂ ।
ಸ್ಯಾದಕ್ಷಯಾಸು ಯುಗಪೂರ್ವತಿಥೀಷು ರಾಜನ್
ವ್ಯಾಸಾದಯೋ ಮುನಿವರಾಃ ಸಮುದಾಹರಂತಿ ॥ ೩೨ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ಯುಗಾದಿತಿಥಿ ವ್ರತಮಾಹಾತ್ಮ್ಯ
ವರ್ಣನಂ ನಾಮ ಏಕಾಧಿಕಶತತಮೋಽಧ್ಯಾಯಃ.



---

೩೧. ಮತ್ತು ಅವನ ಮರಣಾನಂತರ ಸ್ವರ್ಗಕ್ಕೆ ಹೋಗಿ, ಅಲ್ಲಿ ಗಂಧರ್ವರ ಗಾನ, ಸುರಾಸುರರ ಸ್ತುತಿ ಇವುಗಳಿಂದ ಯುಕ್ತನಾಗಿ ನಿಸ್ಸಂದೇಹವಾಗಿ ಅಲ್ಲಿ ಬಹುಕಾಲ ಕ್ರೀಡಿಸುತ್ತಾನೆ.

೩೨. ಅಯ್ಯಾ ರಾಜನೇ ! ಅಕ್ಷಯ ಫಲದಾಯಕಗಳಾದ ಈ ಯುಗಾದಿ ತಿಥಿಗಳಲ್ಲಿ, ಯಾವುದನ್ನಾದರೂ ದಾನಮಾಡಿದರೆ ಅದು ಕೋಟಿಗುಣಫಲದಾಯಕವಾಗುವುದು. ಈ ತಿಥಿಗಳಲ್ಲಿ ಆಚರಿತವಾದ ಸ್ನಾನ, ಜಪ, ತಪ ಇವೆಲ್ಲವೂ ಅಕ್ಷಯ ಫಲಪ್ರದಗಳಾಗುವುವು ಎಂದು ಅನೇಕ ಮುನಿವರ್ಯರು ಹೇಳಿರುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಯುಗಾದಿ ತಿಥಿ ವ್ರತ ಮಾಹಾತ್ಮ್ಯ ವರ್ಣನೆಯೆಂಬ ನೂರೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣ

## ಉತ್ತರಪರ್ವಣಿ

## ದ್ವ್ಯಧಿಕಶತತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಸ್ಮರಯಾಮಿ ಹೃಷೀಕೇಶ ಯನ್ನೋಕ್ತಂ ಭವತಾ ಕ್ವಚಿತ್ ।
ತತ್ಸಾವಿತ್ರೀವ್ರತಂ ಬ್ರೂಹಿ ಮಮೋಪರಿ ದಯಾಂ ಕುರು ॥ ೧ ॥

॥ ಶ್ರೀ ಕೃಷ್ಣ ಉವಾಚ ॥

ಕಥಯಾಮಿ ಕುಲಸ್ತ್ರೀಣಾಂ ಮಹಾಭಾಗ್ಯಂ ಯುಧಿಷ್ಠಿರ ।
ಯಥಾ ಚೀರ್ಣಂ ವ್ರತವರಂ ಸಾವಿತ್ರ್ಯಾ ರಾಜಕನ್ಯಯಾ ॥ ೨ ॥

---

### ನೂರೆರಡನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಇಂದ್ರಿಯಗಳ ಪ್ರೇರಕನೂ ನಿಯಾಮಕನೂ ಆದ ಎಲೈ ಶ್ರೀ ಕೃಷ್ಣನೇ! ವಟಸಾವಿತ್ರೀ ವ್ರತವನ್ನು ಈವರೆಗೂ ನೀನು ಹೇಳಲಿಲ್ಲ. ಅದನ್ನು ನಿನ್ನ ಜ್ಞಾಪಕಕ್ಕೆ ತರುತ್ತೇನೆ. ನನ್ನ ಮೇಲೆ ದಯಮಾಡಿ ಆ ಸಾವಿತ್ರೀವ್ರತವನ್ನು ಹೇಳು ಎಂದನು.

೨. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರನೇ! ಸತ್ಕುಲ ಪ್ರಸೂತರಾದ ಸ್ತ್ರೀಯರಿಗೆ ಮಹಾಸೌಭಾಗ್ಯಪ್ರದವಾದ ಆ ಉತ್ತಮವ್ರತವನ್ನು ಪೂರ್ವದಲ್ಲಿ ರಾಜಪುತ್ರಿಯಾದ ಸಾವಿತ್ರೀದೇವಿಯು ಆಚರಿಸಿದ ರೀತಿಯಲ್ಲೇ ನಿನಗೆ ಹೇಳುತ್ತೇನೆ.

ಆಸೀನ್ಮದ್ರೇಷು ಧರ್ಮಾತ್ಮಾ ಸರ್ವಭೂತಹಿತೇ ರತಃ ।
ಪಾರ್ಥಿವೋಽಶ್ವಪತಿರ್ನಾಮ ಪೌರಜಾನಪದಪ್ರಿಯಃ ॥ ೩ ॥

ಕ್ಷಮಾವಾಂಶ್ಚ ಕ್ಷಿತಿಪತಿಃ ಸತ್ಯವಾಂಶ್ಚ ಜಿತೇಂದ್ರಿಯಃ ।
ಸ ಸಭಾರ್ಯೋ ವ್ರತಮಿದಂ ಚಚಾರ ನೃಪತಿಃ ಸ್ವಯಂ ॥ ೪ ॥

ಸಾವಿತ್ರೀವ್ರತಸಿದ್ಧಂ ತತ್ಸರ್ವಕಾಮಪ್ರದಾಯಕಂ ।
ತಸ್ಯ ತುಷ್ಟಾಭವದ್ರಾಜನ್ಸಾವಿತ್ರೀ ಬ್ರಹ್ಮಣಃ ಪ್ರಿಯಾ ॥ ೫ ॥

ಭೂರ್ಭುವಃಸ್ವರಿತೀತ್ಯೇಷಾ ಸಾಕ್ಷಾನ್ಮೂರ್ತಿಮತೀ ಸ್ಥಿತಾ ।
ಕಮಂಡಲುಧರಾ ದೇವೀ ಪ್ರಸನ್ನವದನೇಕ್ಷಣಾ ॥ ೬ ॥

ಉವಾಚ ದುಹಿತಾಹ್ಯೇಕಾ ತವ ರಾಜನ್ಭವಿಷ್ಯತಿ ।
ಇತ್ಯೇವಮುಕ್ತ್ವಾ ಸಾವಿತ್ರೀ ಜಗಾಮಾದರ್ಶನಂ ಪುನಃ ॥ ೭ ॥

---

೩. ಪೂರ್ವದಲ್ಲಿ ಮದ್ರದೇಶದಲ್ಲಿ ಧರ್ಮಿಷ್ಠನೂ, ಸರ್ವ ಪ್ರಾಣಿಗಳ ಹಿತದಲ್ಲಿ ಆಸಕ್ತನೂ, ರಾಷ್ಟ್ರದ ಪ್ರಜೆಗಳ ಪ್ರೀತಿಗೆ ಪಾತ್ರನೂ, ಆದ ಅಶ್ವಪತಿ ಯೆಂಬ ರಾಜನಿದ್ದನು.

೪. ಕ್ಷಮಾಶೀಲನೂ ಸತ್ಯಸಂಧನೂ ಜಿತೇಂದ್ರಿಯನೂ ಆಗಿದ್ದ ಆ ರಾಜನು, ತನ್ನ ಪತ್ನೀಸಹಿತನಾಗಿ ಈ ವ್ರತವನ್ನು ಆಚರಿಸಿದನು.

೫. ಅಯ್ಯಾ ರಾಜನೇ! ಸರ್ವಕಾಮಪ್ರದಾಯಕವಾದ ಆ ಸಾವಿತ್ರೀ ವ್ರತವನ್ನು ಆಚರಿಸಿದುದರಿಂದ, ಬ್ರಹ್ಮದೇವನ ಪ್ರಿಯಳಾದ ಆ ಸಾವಿತ್ರೀ ದೇವಿಯು ಆ ರಾಜನ ವಿಷಯದಲ್ಲಿ ಸುಪ್ರೀತಳಾದಳು.

೬. "ಭೂಃ ಭುವಃ ಸ್ವಃ" ಎಂಬ ವ್ಯಾಹೃತಿಸ್ವರೂಪಳಾದ ಆ ದೇವಿಯು ಆ ರಾಜನ ವ್ರತದಿಂದ ಸಂತುಷ್ಟಳಾಗಿ ಶರೀರವನ್ನು ಧರಿಸಿ ಕಮಂಡಲುವನ್ನು ಹಿಡಿದುಕೊಂಡು, ಪ್ರಸನ್ನವಾದ ಮುಖ, ಪ್ರಸನ್ನ ನಯನಗಳು ಉಳ್ಳವಳಾಗಿ ಪ್ರತ್ಯಕ್ಷಳಾದಳು.

೭. ಬಳಿಕ ಅವಳು "ಓ ರಾಜನೇ! ನಿನಗೆ ಒಬ್ಬ ಸುಪುತ್ರಿಯು ಜನಿಸುವಳು" ಎಂದು ಹೇಳಿ, ಆ ಸಾವಿತ್ರಿಯು ಅಲ್ಲೇ ಅದೃಶ್ಯಳಾದಳು.

ಕಾಲೇನ ಸಾ ತಥಾ ರಾಜನ್ದುಹಿತಾ ದೇವರೂಪಿಣೀ ।
ಸಾವಿತ್ರ್ಯಾ ಪ್ರೀತಯಾ ದತ್ತಾ ಸಾವಿತ್ರ್ಯಾ ಜಪ್ತಯಾ ತದಾ ॥ ೮ ॥

ಸಾವಿತ್ರೀತ್ಯೇವ ನಾಮಾಸ್ಯಾಶ್ಚಕ್ರುರ್ವಿಪ್ರಾಸ್ತಥಾ ಪಿತಾ ।
ಸಾ ಗೃಹವತೀ ಸಶ್ರೀರ್ವ್ಯವರ್ಧತ ನೃಪಾತ್ಮಜಾ ।
ಸಾವಿತ್ರೀ ಸುಕುಮಾರಾಂಗೀ ಯೌವನಸ್ಥಾ ಬಭೂವ ಹ ॥ ೯ ॥

ತಾಂ ಸುಮಧ್ಯಾಂ ಪೃಥುಶ್ರೋಣೀಂ ಪ್ರತಿಮಾಂ ಕಾಂಚನೀಮಿವ ।
ಪ್ರಾಪ್ತೇವ ದೇವಕನ್ಯೇತಿ ದೃಷ್ಟ್ವಾ ತಾಮಿತರೇ ಜನಾಃ ॥ ೧೦ ॥

ಸಾ ತು ಪದ್ಮಪಲಾಶಾಕ್ಷೀ ಪ್ರಜ್ವಲಂತೀವ ತೇಜಸಾ ।
ಚಚಾರ ಸಾ ಚ ಸಾವಿತ್ರೀವ್ರತಂ ಯದ್ಗುರುಣೋದಿತಂ ॥ ೧೧ ॥

---

೮. ಅಯ್ಯಾ ಧರ್ಮರಾಜನೇ ! ಕೆಲವು ದಿನಗಳು ಕಳೆಯುತ್ತಲೆ ಸಾವಿತ್ರೀ ದೇವಿಯ ಅನುಗ್ರಹದಿಂದ ದೇವಸ್ವರೂಪಿಣಿಯಾದ ಒಬ್ಬ ಪುತ್ರಿಯು ಆ ರಾಜನಿಗೆ ಜನಿಸಿದಳು.

೯. ಆಗ ಆ ಹೆಣ್ಣುಮಗುವಿಗೆ ಬ್ರಾಹ್ಮಣೋತ್ತಮರು ಸಾವಿತ್ರೀ ಎಂಬ ನಾಮಧೇಯವನ್ನೇ ಸೂಚಿಸಿದರು. ಬ್ರಾಹ್ಮಣರು ಹೇಳಿದ ಅದೇ ಹೆಸರನ್ನೇ ಆ ರಾಜನೂ ನಾಮಕರಣಮಾಡಿದನು. ಆ ರಾಜಪುತ್ರಿಯು ಅರಮನೆಯಲ್ಲಿ ಬಹು ಕಾಂತಿಯುತಳಾಗಿ ಬೆಳೆಯುತ್ತಿದ್ದಳು. ಸುಕುಮಾರಿಯಾದ ಆ ಸಾವಿತ್ರಿಯು ಸಲಕ್ಷಣವಾದ ಅಂಗಾಂಗಗಳುಳ್ಳವಳಾಗಿ ಬರಬರುತ್ತಾ ಪ್ರಾಯಭರಿತಳಾದಳು.

೧೦. ಕೃಶೋದರಿಯೂ, ದೊಡ್ಡ ನಿತಂಬಗಳುಳ್ಳವಳೂ, ಭಂಗಾರದ ಪ್ರತಿಮೆಯಂತಿರುವವಳೂ ಆಗಿರುವ, ಆ ಸಾವಿತ್ರಿಯನ್ನು ನೋಡಿ, ಉದಾಸೀನರಾದ ಇತರ ಜನರು, ಯಾವಳೋ ಒಬ್ಬ ದೇವಕನ್ಯೆಯು ಈ ಭೂಲೋಕಕ್ಕೆ ಬಂದಿರಬೇಕೆಂದು ತಿಳಿದುಕೊಂಡರು.

೧೧. ಕಮಲದಳಗಳಂತೆ ವಿಶಾಲಗಳಾದ ನೇತ್ರಗಳುಳ್ಳವಳೂ, ತನ್ನ ಕಾಂತಿಯಿಂದ ಪ್ರಜ್ವಲಿಸುತ್ತಿರುವವಳೂ ಆಗಿರುವ, ಆ ರಾಜಪುತ್ರಿ ಸಾವಿತ್ರಿಯು ತನ್ನ ತಂದೆಯಿಂದ ಉಪದಿಷ್ಟವಾದ ಸಾವಿತ್ರೀ ವ್ರತವನ್ನು ಆಚರಿಸಿದಳು.

ಅಥೋಪೋಷ್ಯ ಶಿರಃಸ್ನಾತಾ ದೇವತಾಮಭಿಗಮ್ಯ ಸಾ ।
ಹುತ್ವಾಗ್ನಿಂ ವಿಧಿವದ್ವಿಪ್ರಾನ್ವಾಚಯಿತ್ವೇಂದುಪರ್ವಣಿ ॥ ೧೨ ॥

ತೇಭ್ಯಃ ಸುಮನಸಃ ಶೇಷಾಃ ಪ್ರತಿಗೃಹ್ಯ ನೃಪಾತ್ಮಜಾ ।
ಸಾಧ್ವೀ ಪತಿವ್ರತಾಭ್ಯೇತ್ಯ ದೇವಸ್ತ್ರೀರಿವ ರೂಪಿಣೀ ॥ ೧೩ ॥

ಸೋಭಿವಾದ್ಯ ಪಿತುಃ ಪಾದೌ ಶೇಷಾನ್ಪೂರ್ವಂ ನಿವೇದ್ಯ ಚ ।
ಕೃತಾಂಜಲಿರ್ವರಾರೋಹಾ ನೃಪತೇಃ ಪಾರ್ಶ್ವತಃ ಸ್ಥಿತಾ ॥ ೧೪ ॥

ತಾಂ ದೃಷ್ಟ್ವಾ ಯೌವನಂ ಪ್ರಾಪ್ತಾಂ ಸ್ವಚ್ಛಾಂ ತಾಂ ದೇವರೂಪಿಣೀಂ ।
ಉವಾಚ ರಾಜಾ ಸಂಮಂತ್ರ್ಯ ಸ್ಮೃತ್ಯರ್ಥಂ ಸಹ ಮಂತ್ರಿಭಿಃ ॥ ೧೫ ॥

---

೧೨. ಆ ಸಾವಿತ್ರಿಯು ಚಂದ್ರನ ಪರ್ವತಿಥಿಯಾದ ಹುಣ್ಣಿಮೆಯ ದಿವಸದಲ್ಲಿ ಶಿರಃಸ್ನಾನವನ್ನು ಮಾಡಿ, ಉಪವಾಸವನ್ನಾಚರಿಸಿ ಶಾಸ್ತ್ರೋಕ್ತ ರೀತಿಯಲ್ಲಿ ಸಾವಿತ್ರೀದೇವಿಯನ್ನು ಪೂಜಿಸಿ, ಅಗ್ನಿಯಲ್ಲಿ ಹೋಮವನ್ನು ಮಾಡಿಸಿ, ಅನಂತರ ಬ್ರಾಹ್ಮಣರಿಂದ ಈ ವ್ರತದ ಕಥಾಶ್ರವಣಮಾಡಿದಳು.

೧೩. ಪತಿವ್ರತೆಯೂ, ಸದಾಚಾರವುಳ್ಳವಳೂ, ದೇವತಾಸ್ತ್ರೀಯರಂತೆ ಸುಂದರಿಯೂ ಆಗಿರುವ ರಾಜಪುತ್ರಿಯಾದ ಆ ಸಾವಿತ್ರಿಯು, ಬ್ರಾಹ್ಮಣರಿಂದ ದೇವತಾಪ್ರಸಾದ, ಪುಷ್ಪ, ತೀರ್ಥಗಳನ್ನು ಸ್ವೀಕರಿಸಿ, ಆ ದೇವಬ್ರಾಹ್ಮಣರ ಸನ್ನಿಧಿಯಿಂದ ಹೊರಟಳು.

೧೪. ಸುಂದರಿಯಾದ ಆ ಸಾವಿತ್ರಿಯು ಅಲ್ಲಿಂದ ಹೊರಟವಳು ತನ್ನ ತಂದೆಯ ಸಮೀಪಕ್ಕೆ ಬಂದು, ಅವನ ಕಾಲುಗಳಿಗೆರಗಿ ಆ ದೇವತಾಪ್ರಸಾದ ವನ್ನು ಮೊದಲು ತನ್ನ ತಂದೆಗೆ ಸಮರ್ಪಿಸಿ, ಅಂಜಲಿಬದ್ಧಳಾಗಿ ರಾಜನ ಪಾರ್ಶ್ವದಲ್ಲಿ ನಿಂತಳು.

೧೫. ಮಂತ್ರಿಸಮೇತನಾಗಿ ಕುಳಿತಿದ್ದ ಅಶ್ವಪತಿರಾಜನು ಯೌವನವತಿ ಯಾಗಿ ಅನುಪಮಲಾವಣ್ಯದಿಂದ ಕೂಡಿ ಸುಂದರಿಯಾಗಿ ಕಾಣಿಸುವ ಆ ಸಾವಿತ್ರಿ ಯನ್ನು ನೋಡಿ, ಧರ್ಮಶಾಸ್ತ್ರಗಳ ಅರ್ಥವನ್ನು ಸ್ಮೃತಿಗೆ ತಂದುಕೊಂಡು ಹೀಗೆಂದನು.

ಯುಕ್ತಃ ಪ್ರದಾನಕಾಲೋಽಸ್ಯಾಸ್ತೇನ ಕಶ್ಚಿದ್ವೃಣೋತ್ವಿಮಾಂ ।
ವಿಚಾರಯಿತ್ವಾ ಪಶ್ಯಾಮಿ ವರಂ ತುಲ್ಯಂ ಮಹಾತ ನಃ ॥ ೧೬ ॥

ದೇವಾದೀನಾಂ ಯಥಾ ವಾಚ್ಯೋ ನ ಭವೇಯಂ ತಥಾ ಕುರು ।
ಬೋಧ್ಯಮಾನಾ ಮಯಾ ಪುತ್ರಿ ಧರ್ಮಶಾಸ್ತ್ರೇಷು ಗಚ್ಛತಂ ॥ ೧೭ ॥

ಪಿತುರ್ಗೃಹೇ ತು ಯಾ ಕನ್ಯಾ ರಜಃಪಶ್ಯತ್ಯಸಂಸ್ಕೃತಾ ।
ಬ್ರಹ್ಮಹತ್ಯಾ ಪಿತುಸ್ತತ್ರ ಸಾ ಕನ್ಯಾ ವೃಷಲೀ ಸ್ಮೃತಾ ॥ ೧೮ ॥

ಅತೋಽರ್ಥಂ ಪ್ರೇಷಯಾಮೀತಿ ಕುರು ಪುತ್ರಿ ಸ್ವಯಂವರಂ ।
ವೃದ್ಧೈರಮಾತ್ಯೈಃ ಸಹಿತಾ ಶೀಘ್ರಂಗಚ್ಛ ವಿಧಾರಯ ॥ ೧೯ ॥

---

೧೬. "ಈ ಸಾವಿತ್ರಿಗೆ ವಿವಾಹಮಾಡುವುದಕ್ಕೆ ಅರ್ಹವಾದ ವಯಸ್ಸಾಯಿತು. ಆದುದರಿಂದ ಈ ನನ್ನ ಮಗಳನ್ನು ಯಾವನಾದರೂ ಅನುರೂಪ ವರನು ಭಾರ್ಯಾರ್ಥವಾಗಿ ವರಿಸಬೇಕು. ನಾನು ವಿಚಾರಿಸಿದ್ದರಲ್ಲಿ ಇವಳಿಗೆ ಯಾವನೋ ಒಬ್ಬ ಮಹಾತ್ಮನ ಪುತ್ರನು ಯೋಗ್ಯವರನೆಂದು ತಿಳಿದುಬಂದಿದೆ."

೧೭. "ಓ ಮಗಳೇ! ಹೇಗೆ ಮಾಡಿದರೆ ನಾನು ದೇವಾದಿಗಳ ನಿಂದೆಗೆ ಪಾತ್ರನಾಗುವುದಿಲ್ಲವೋ, ಆ ರೀತಿಯಲ್ಲಿ ನೀನು ಮಾಡು. ಮತ್ತು ಈಗ ನಾನು ಧರ್ಮಶಾಸ್ತ್ರಗಳಲ್ಲಿ ಹೇಳುವ ವಿಷಯವನ್ನು ನಿನಗೆ ಬೋಧಿಸುತ್ತೇನೆ. ಅವನ್ನು ವಿಮರ್ಶಿಸಿ ತಿಳಿದು ನೀನು ಯೋಗ್ಯವರನನ್ನು ವರಿಸು."

೧೮. "ಯಾವ ಕನ್ನಿಕೆಯು ವಿವಾಹಸಂಸ್ಕಾರವಾಗದೆ ತಂದೆಯ ಮನೆಯಲ್ಲಿಯೇ ಋತುಮತಿಯಾಗುವಳೋ, ಆ ಕನ್ನಿಕೆಯು ಶೂದ್ರಸ್ತ್ರೀ ಸಮಾನಳೆನಿಸುವಳು. ವಿವಾಹಸಂಸ್ಕಾರವಾಗದೆ ಅದಕ್ಕೆ ಮೊದಲು ತಂದೆಯ ಮನೆಯಲ್ಲಿ ಮಗಳು ಋತುಮತಿಯಾದರೆ ಆ ತಂದೆಗೆ ಬ್ರಹ್ಮಹತ್ಯಾ ದೋಷವು ಪ್ರಾಪ್ತಿಯಾಗುತ್ತದೆ."

೧೯. "ಎಲೌ ಮಗಳೇ! ಧರ್ಮಶಾಸ್ತ್ರಗಳಲ್ಲಿ ಈರೀತಿ ಋತುಮತೀ ವಿವಾಹವನ್ನು ನಿಷೇಧಿಸಿರುವುದರಿಂದ, ನಿನ್ನನ್ನು ನಾನು ಕಳುಹಿಸಿಕೊಡುತ್ತೇನೆ. ನೀನು ಸ್ವಯಂವರಮಾಡಿಕೋ. ನನ್ನ ವಚನವನ್ನು ಮನಸ್ಸಿನಲ್ಲಿ ವಿಚಾರಮಾಡಿ ನಿರ್ಧರಿಸಿಕೊಂಡು, ವೃದ್ಧರಾದ ಈ ನನ್ನ ಮಂತ್ರಿಗಳ ಜತೆಯಲ್ಲಿ ಶೀಘ್ರವಾಗಿ ಹೊರಡು" ಎಂದನು.

ಏವಮಸ್ತ್ವಿತಿ ಸಾವಿತ್ರೀ ಪ್ರೋಕ್ತ್ವಾ ತಸ್ಮಾದ್ವಿನಿರ್ಯಯೌ ।
ತಪೋವನಾನಿ ರಮ್ಯಾಣಿ ರಾಜರ್ಷೀಣಾಂ ಜಗಾಮ ಸಾ ॥ ೨೦ ॥

ಮಾನ್ಯಾನಾಮತ್ರ ವೃದ್ಧಾನಾಂ ಕೃತ್ವಾ ಪಾದಾಭಿಷೇಚನಂ ।
ತತೋಽಭಿಗಮ್ಯ ತೀರ್ಥಾನಿ ಸರ್ವಾಣ್ಯೇವಾಶ್ರಯಾಣಿ ಚ ॥೨೧ ॥

ಆಜಗಾಮ ಪುನರ್ವೇಶ್ಮ ಸಾವಿತ್ರೀ ಸಹ ಮಂತ್ರಿಭಿಃ ।
ತತ್ರಾಪಶ್ಯಚ್ಚ ದೇವರ್ಷಿಂ ನಾರದಂ ಪುರತಃ ಪಿತುಃ ॥ ೨೨ ॥

ಆಸೀನಮಾಸನೇ ವಿಪ್ರಂ ಪ್ರಣಮ್ಯ ಸ್ಮಿತಭಾಷಿಣೀ ।
ಕಥಯಾಮಾಸ ತತ್ಸರ್ವಂ ಯಥಾವೃತ್ತಂ ವನೇಽಭವತ್ ॥ ೨೩ ॥

೨೦. ಆಗ ಆ ಸಾವಿತ್ರಿಯು ತಂದೆಯ ಮಾತಿಗೆ " ಹಾಗೆಯೇ ಆಗಲಿ " ಎಂದು ಹೇಳಿ, ಅಲ್ಲಿಂದ ಹೊರಟು ವೃದ್ಧಾಪ್ಯದಲ್ಲಿ ರಾಜ್ಯವನ್ನು ಪುತ್ರನಿಗೆ ವಹಿಸಿ ಕಾಡಿಗೆ ಬಂದು, ಮುನಿವೃತ್ತಿಯಲ್ಲಿರುವ ರಾಜರ್ಷಿಗಳು ವಾಸವಾಗಿರುತ್ತಿದ್ದ, ರಮ್ಯವಾದ ತಪೋವನ ಪ್ರದೇಶಕ್ಕೆ ಬಂದಳು.

೨೧. ಅವಳು ಒಂದು ತಪೋವನಕ್ಕೆ ಹೋಗಿ, ಅಲ್ಲಿದ್ದ ಪೂಜ್ಯರಾದ ವೃದ್ಧಮುನಿಗಳಿಗೆ ಪಾದಪ್ರಕ್ಷಾಳನಾದಿ ಸತ್ಕಾರಗಳನ್ನು ಮಾಡಿ, ಅನಂತರ ಮುಂದಕ್ಕೆ ಬೇರೆ ಶುಭತೀರ್ಥಗಳಿಗೆ ಗಮಿಸುತ್ತಿದ್ದಳು. ಹೀಗೆ ಭೂಮಂಡಲದ ಎಲ್ಲಾ ಪುಣ್ಯಕ್ಷೇತ್ರಗಳನ್ನೂ ಸಂಚರಿಸಿದಳು.

೨೨. ಅನಂತರ ಆ ಸಾವಿತ್ರಿಯು ಆ ಮಂತ್ರಿವೃದ್ಧರಿಂದ ಸಹಿತಳಾಗಿ ಪುನಃ ತಂದೆಯ ಮನೆಗೆ ಬಂದಳು. ಆ ಸಮಯಕ್ಕೆ ಸರಿಯಾಗಿ ದೇವರ್ಷಿಯಾದ ನಾರದರು ಆಗಮಿಸಿ, ತಂದೆಯ ಮುಂಭಾಗದಲ್ಲಿ ಕುಳಿತಿರುವುದನ್ನು ನೋಡಿದಳು.

೨೩. ಮಂದಹಾಸಪೂರ್ವಕವಾಗಿ ಮಾತನಾಡುವ ಆ ಸುಂದರಿಯು, ಆಗ ಆಸನದಲ್ಲಿ ಕುಳಿತಿರುವ ಆ ಬ್ರಹ್ಮರ್ಷಿಯಾದ ನಾರದನಿಗೆ ನಮಸ್ಕಾರಮಾಡಿ, ಕಾಡಿನಲ್ಲಿ ನಡೆದುದೆಲ್ಲವನ್ನೂ ಈರೀತಿ ವಿಜ್ಞಾಪಿಸಿದಳು.

॥ ಸಾವಿತ್ರ್ಯುವಾಚ ॥
ಆಸೀತ್ಸಾಲ್ವೇಷು ಧರ್ಮಾತ್ಮಾ ಕ್ಷತ್ರಿಯಃ ಪೃಥಿವೀಪತಿಃ ।
ದ್ಯುಮತ್ಸೇನ ಇತಿ ಖ್ಯಾತಃ ದೇವದತ್ತೋ ಬಭೂವ ಸಃ ॥ ೨೪ ॥

॥ ನಾರದ ಉವಾಚ ॥
ಅಹೋ ಬತ ಮಹತ್ಕಷ್ಟಂ ಸಾವಿತ್ರ್ಯಾ ನೃಪತೇಃ ಕೃತಂ ।
ಬಾಲ್ಯಭಾವಾದ್ಯದನಯಾ ನ ಕೃತಃ ಸತ್ಯವಾನ್ನೃಪಃ ॥ ೨೫ ॥

ಸತ್ಯಂ ವದತ್ಯಸ್ಯ ಪಿತಾ ಸತ್ಯಂ ಮಾತಾ ಪ್ರಭಾಷತೇ ।
ಉಪೇತೋಽಸ್ತಿ ಗುಣೈಸ್ಸರ್ವೈರ್ದ್ಯುಮತ್ಸೇನಸುತೋ ಬಲೀ ॥ ೨೬ ॥

ಏಕೋ ದೋಷೋಽಸ್ತಿ ನಾನ್ಯೋಽಸ್ಯ ಸೋಽದ್ಯಪ್ರಭೃತಿ ಸತ್ಯವಾಕ್ ।
ಸಂವತ್ಸರೇಣ ಹೀನಾಯುರ್ದೇಹತ್ಯಾಗಂ ಕರಿಷ್ಯತಿ ॥ ೨೭ ॥

---

೨೪. ಸಾವಿತ್ರಿಯು ಹೇಳುತ್ತಾಳೆ—"ಸಾಲ್ವದೇಶದಲ್ಲಿ ಧರ್ಮಿಷ್ಠನೂ ಕ್ಷತ್ರಿಯವಂಶಸಂಭೂತನೂ ಆದ ದ್ಯುಮತ್ಸೇನನೆಂಬ ಪ್ರಸಿದ್ಧನಾದ ಒಬ್ಬ ರಾಜನಿದ್ದಾನೆ. ಆ ದ್ಯುಮತ್ಸೇನನಿಗೆ ದೇವತಾನುಗ್ರಹದಿಂದ ಜನಿಸಿದ ಒಬ್ಬ ಪುತ್ರನಿರುವನು. ಆತನನ್ನು ನಾನು ಪತಿಯಾಗಿ ವರಿಸುತ್ತೇನೆ" ಎಂದಳು.

೨೫. ನಾರದನು ಹೇಳುತ್ತಾನೆ—ಅಯ್ಯೋ ಪಾಪ! ಈ ಸಾವಿತ್ರಿಯು ತನ್ನ ತಂದೆಯಾದ ಅಶ್ವಪತಿಭೂಪನಿಗೆ ಮಹಾಕಷ್ಟವನ್ನು ತಂದಿಟ್ಟಳು. ಇವಳು ತನ್ನ ಬಾಲ್ಯಭಾವದಿಂದ ತನ್ನ ತಂದೆಯಾದ ರಾಜನನ್ನು ಸತ್ಯವಂತನನ್ನಾಗಿ ಮಾಡಿದ ಹಾಗಾಗಲಿಲ್ಲ.

೨೬. ಇವಳು ಪತಿಯಾಗಿ ವರಿಸಿದ ಮಹಾಬಲಶಾಲಿಯಾದ ಸತ್ಯವಾನ್ ಎಂಬವನು ದ್ಯುಮತ್ಸೇನನ ಪುತ್ರನು, ಅವನ ತಂದೆಯಾದ ದ್ಯುಮತ್ಸೇನನು ಸತ್ಯವಾದಿ. ಅವನ ತಾಯಿಯೂ ಸತ್ಯಪರಿಪಾಲನ ಮಾಡುವವಳೇ. ಆ ವರನೂ ಸರ್ವಗುಣಭರಿತನು.

೨೭. ಆ ದ್ಯುಮತ್ಸೇನನ ಪುತ್ರನು ಇಂದಿನವರೆಗೆ ಸತ್ಯಸಂಧನಾಗಿದ್ದಾನೆ. ಆದರೆ ಅವನು ಕ್ಷೀಣಾಯುಷ್ಕನಾಗಿ ಇನ್ನೊಂದು ವರ್ಷದಲ್ಲಿ ದೇಹತ್ಯಾಗಮಾಡುವನು ಎಂಬ ಒಂದೇ ಒಂದು ದೋಷವಿದೆ. ಇನ್ನಾವ ದೋಷವೂ ಇಲ್ಲ" ಎಂದನು.

ನಾರದಸ್ಯ ವಚಃ ಶ್ರುತ್ವಾ ತನಯಾಂ ಪ್ರಾಹ ಪಾರ್ಥಿವಃ ।
ಪುತ್ರಿ ಸಾವಿತ್ರಿ ಗಚ್ಛ ತ್ವಮನ್ಯಂ ವರಯ ಸತ್ಪತಿಂ ॥ ೨೮ ॥

ಸಂವತ್ಸರೇಣ ಸೋಲ್ಪಾಯುರ್ದೇಹತ್ಯಾಗಂ ಕರಿಷ್ಯತಿ ।

॥ ಸಾವಿತ್ರ್ಯುವಾಚ ॥

ಸಕೃಜ್ಜಲ್ಪಂತಿ ರಾಜಾನಃ ಸಕೃಜ್ಜಲ್ಪಂತಿ ಪಂಡಿತಾಃ ।
ಸಕೃತ್ಪ್ರದೀಯತೇ ಕನ್ಯಾ ತ್ರೀಣ್ಯೇತಾನಿ ಸಕೃತ್ಸಕೃತ್ ॥ ೨೯ ॥

ದೀರ್ಘಾಯುರಥವಾಲ್ಪಾಯುಃ ಸಗುಣೋ ನಿರ್ಗುಣೋಽಪಿ ವಾ ।
ಸಕೃದ್ವೃತೋ ಮಯಾ ಭರ್ತಾ ನ ದ್ವಿತೀಯಂ ವೃಣೋಮ್ಯಹಂ ॥೩೦॥

---

೨೮. ನಾರದಮಹರ್ಷಿ ಹೇಳಿದ ಈ ವಚನವನ್ನು ಕೇಳಿ, ಆ ಅಶ್ವಪತಿ ರಾಜನು ತನ್ನ ಮಗಳನ್ನು ಕುರಿತು, " ಎಲೌ ಮಗಳೇ ! ಸಾವಿತ್ರೀ ! ನೀನು ಪುನಃ ಹೋಗು. ಇನ್ನೊಬ್ಬ ಸತ್ಪತಿಯನ್ನು ವರಿಸು. ನೀನೀಗ ವರಿಸಿದ ಸತ್ಯವಾನನೆಂಬುವನು ಹೀನಾಯುಷ್ಕನಾಗಿ ಇನ್ನೊಂದು ವರ್ಷದಲ್ಲಿ ಮೃತನಾಗುವನಂತೆ " ಎಂದು ಹೇಳಿದನು.

೨೯. ಆಗ ಸಾವಿತ್ರಿಯು ಹೇಳುತ್ತಾಳೆ—" ಎಲೈ ತಂದೆಯೇ ! ಅರಸರು ಏಕವಾಕ್ಯಸಂಯುತರು (ಸಮಯವನ್ನು ಅನುಸರಿಸಿ, ಆಡಿದ ಮಾತನ್ನು ಬದಲಾಯಿಸುವವರಲ್ಲ.) ಹಾಗೆಯೇ ಪಂಡಿತರೂ ಒಂದೇ ಮಾತುಳ್ಳವರು. ಕನ್ಯಾದಾನವನ್ನೂ ಒಂದೇಸಲ ಮಾಡುವುದು. ರಾಜೋಕ್ತಿ, ಪಂಡಿತಪ್ರತಿಜ್ಞೆ, ಕನ್ಯಾದಾನ ಈ ಮೂರೂ ಒಂದೇಸಲ ನಡೆಯತಕ್ಕುದು. ಅದಕ್ಕೆ ಬದಲಾವಣೆ ಎಂದಿಗೂ ಇಲ್ಲ."

೩೦. " ನಾನು ವರಿಸಿದವನು ದೀರ್ಘಾಯುವಾಗಲಿ ಅಥವಾ ಅಲ್ಪಾಯುವಾಗಲಿ, ಗುಣಶಾಲಿಯಾಗಲಿ ಅಥವಾ ನಿರ್ಗುಣನಾಗಿರಲಿ, ನಾನು ಒಂದು ಸಲ ಅವನನ್ನು ಪತಿಯೆಂದು ವರಿಸಿದ ಮೇಲೆ ಇನ್ನು ಎರಡನೆಯವನನ್ನು ವರಿಸುವುದಿಲ್ಲ."

ಮನಸಾ ನಿಶ್ಚಯಂ ಕೃತ್ವಾ ತತೋ ವಾಚಾಽಭಿಧೀಯತೇ ।
ಕ್ರಿಯತೇ ಕರ್ಮಣಾ ಪಶ್ಚಾತ್ಪ್ರಮಾಣಂ ಮೇ ಮನಃ ಸದಾ ॥ ೩೧ ॥

॥ ನಾರದ ಉವಾಚ ॥

ಯದ್ಯೇತದಿಷ್ಟಂ ದುಹಿತುಸ್ತತಃ ಶೀಘ್ರಂ ವಿಧೀಯತಾಂ ।
ಅವಿಘ್ನಮಗ್ರೇ ಸಾವಿತ್ರ್ಯಾಃ ಪ್ರದಾನೇ ದುಹಿತುಸ್ತವ ॥ ೩೨ ॥

ಏವಮುಕ್ತ್ವಾ ಸಮುತ್ಪತ್ಯ ನಾರದಸ್ತ್ರಿದಿವಂ ಗತಃ ।
ರಾಜಾ ಚ ದುಹಿತುಃ ಸರ್ವಂ ವೈವಾಹಿಕಮಥಾಕರೋತ್ ॥ ೩೩ ॥

ಶುಭೇ ಮುಹೂರ್ತೇ ಪಾರ್ಶ್ವಸ್ಥೈರ್ಬ್ರಾಹ್ಮಣೈರ್ವೇದಪಾರಗೈಃ ।
ಸಾವಿತ್ರ್ಯಪಿ ವರಂ ಲಬ್ಧ್ವಾ ಭರ್ತಾರಂ ಮನಸೇಪ್ಸಿತಂ ॥
ಮುಮುದೇಽತೀವ ತನ್ವಂಗೀ ಸ್ವರ್ಗಂ ಪ್ರಾಪ್ಯೇವ ಪುಣ್ಯಕೃತ್ ॥ ೩೪ ॥

---

೩೧. "ಮನಸ್ಸಿನಲ್ಲಿ ಒಂದು ವಿಷಯವನ್ನು ಸಂಕಲ್ಪಿಸಿ, ಅನಂತರ ಆ ವಿಷಯವನ್ನು ಮಾತಿನಿಂದ ವ್ಯಕ್ತಪಡಿಸುತ್ತೇವೆ. ಅನಂತರ ಆ ಮಾತಿನ ಹಾಗೆಯೇ ಶರೀರವೂ ಆ ಕೆಲಸವನ್ನು ನೆರವೇರಿಸುತ್ತದೆ. ಹೀಗೆ ಮನೋವಾಕ್ಕಾಯಗಳಿಗೆ ವಿಷಯೈಕ್ಯವಿರಬೇಕು. ನನಗೆ ಯಾವಾಗಲೂ ಕರ್ತವ್ಯವಿಷಯಗಳಲ್ಲಿ ಮನಸ್ಸೇ ಪ್ರಮಾಣವು" ಎಂದಳು.

೩೨. ಆಗ ನಾರದರು ಹೇಳುತ್ತಾರೆ—"ಓ ರಾಜನೇ! ನಿನ್ನ ಮಗಳಿಗೆ ಇದೇ ಇಷ್ಟವಾಗಿದ್ದರೆ ಶೀಘ್ರವಾಗಿ ಹಾಗೆಯೇ ಮಾಡು. ನಿನ್ನ ಮಗಳಾದ ಸಾವಿತ್ರಿಯನ್ನು ಅವನಿಗೆ ದಾನಮಾಡಿದರೆ ಈ ತೊಂದರೆ ಎಲ್ಲಾ ನಿವೃತ್ತಿಯಾಗುವುದು" ಎಂದನು.

೩೩. ಹೀಗೆ ರಾಜನಿಗೆ ಹೇಳಿ ಆ ನಾರದನು ಅಂತರಿಕ್ಷಮಾರ್ಗದಿಂದ ಸ್ವರ್ಗಕ್ಕೆ ಹೊರಟುಹೋದನು. ಆಮೇಲೆ ಆ ರಾಜನು ವೇದಪಾರಂಗತರಾದ ಬ್ರಾಹ್ಮಣರಿಂದ ಸಮೇತನಾಗಿ ತನ್ನ ಮಗಳಿಗೆ ಶುಭಮುಹೂರ್ತದಲ್ಲಿ ವಿವಾಹ ಮಹೋತ್ಸವವನ್ನು ಮಾಡಿಸಿದನು.

೩೪. ಕೃಶಾಂಗಿಯಾದ ಆ ಸಾವಿತ್ರಿಯು ತನ್ನ ಮನಸ್ಸಿಗೆ ಒಪ್ಪಿದ ವರನನ್ನು ಪತಿಯನ್ನಾಗಿ ಪಡೆದು, ಪುಣ್ಯಶಾಲಿಯು ಸ್ವರ್ಗಲೋಕವನ್ನು ಸೇರಿ ಸಂತೋಷಪಟ್ಟಂತೆ ಅಧಿಕವಾಗಿ ಸಂತುಷ್ಟಳಾದಳು.

ಏವಂ ತತ್ರಾಶ್ರಮೇ ತೇಷಾಂ ವಸತಾಂ ಪ್ರೀತಿಪೂರ್ವಕಂ ।
ಕಾಲಸ್ತಪಸ್ಯತಾಂ ಕಶ್ಚಿದತಿಚಕ್ರಾಮ ಭಾರತ ॥ ೩೫ ॥

ಸಾವಿತ್ರ್ಯಾಸ್ತಪ್ಯಮಾನಾಯಾಸ್ತಿಷ್ಠಂತ್ಯಾಶ್ಚ ದಿವಾನಿಶಂ ।
ನಾರದೇನ ಯದುಕ್ತಂ ತದ್ವಾಕ್ಯಂ ಮನಸಿ ವರ್ತತೇ ॥ ೩೬ ॥

ತತಃ ಕಾಲೇ ಬಹುತಿಥೇ ವ್ಯತಿಕ್ರಾಂತೇ ಕದಾಚನ ।
ಸಂಪ್ರಾಪ್ತಕಾಲೋ ಮ್ರಿಯೇತ ಇತಿ ಸಂಚಿಂತ್ಯ ಭಾಮಿನೀ ॥
ಪ್ರೋಷ್ಠಪದೇ ಸಿತೇ ಪಕ್ಷೇ ದ್ವಾದಶ್ಯಾಂ ರಜನೀಮುಖೇ ॥ ೩೭ ॥

ಗಣಯಂತೀ ಚ ಸಾವಿತ್ರೀ ನಾರದೋಕ್ತಂ ವಚೋ ಹೃದಿ ।
ವ್ರತಂ ತ್ರಿರಾತ್ರಮುದ್ದಿಶ್ಯ ದಿವಾರಾತ್ರಂ ವಿನಾಭವತ್ ॥ ೩೮ ॥

---

೩೫. ಅಯ್ಯಾ ಭರತವಂಶಜನೇ ! ಅನಂತರ ಆ ದಂಪತಿಗಳು ಅಲ್ಲಿಂದ ಹೊರಟು ತಮ್ಮ ಆಶ್ರಮಕ್ಕೆ ಹೋಗಿ, ಅಲ್ಲಿ ಅನೋನ್ಯ ಪ್ರೀತಿಯಿಂದ ವಾಸ ಮಾಡುತ್ತಾ ತಪೋನುಷ್ಠಾನನಿರತರಾದರು. ಹೀಗೆ ಕೆಲವುಕಾಲ ಕಳೆಯಿತು.

೩೬. ಆದರೆ ತಪೋನುಷ್ಠಾನಕಾಲದಲ್ಲಿ ನಿಂತಿರುವಾಗ, ಕುಳಿತಿರುವಾಗ ಹಗಲು ರಾತ್ರಿಯಲ್ಲಿ, ಸರ್ವದಾ ನಾರದಮುನಿವರ್ಯನು ಹೇಳಿದ ಆ ಮಾತು ಆ ಸಾವಿತ್ರಿಯ ಮನಸ್ಸಿನಲ್ಲಿ ನಾಟಿ ಬಾಧಿಸುತ್ತಿದ್ದಿತು.

೩೭–೩೮. ಹೀಗೆ ಕೆಲವುದಿನ ಕಳೆದುಹೋದ ಮೇಲೆ ಒಂದುದಿನ ಸಾವಿತ್ರಿಯು ಆ ನಾರದಮುನಿಯ ವಚನವನ್ನು ಹೃದಯದಲ್ಲಿ ಸ್ಮರಿಸಿಕೊಳ್ಳುತ್ತಾ ದಿನಗಳನ್ನು ಎಣಿಸಿ, " ತನ್ನ ಪತಿಯ ಮರಣಕಾಲ ಸಮೀಪಿಸಿತು ಇನ್ನು ಮೃತನಾಗುವನು '' ಎಂದು ಆಲೋಚಿಸಿ, ಆ ಪತಿವ್ರತೆಯು, ಭಾದ್ರಪದ ಮಾಸದ ಶುಕ್ಲಪಕ್ಷ ದ್ವಾದಶಿಯ ದಿನ, ಪ್ರದೋಷಕಾಲ ಮೊದಲುಗೊಂಡು ತ್ರಿರಾತ್ರಿಗಳಲ್ಲಿ ಆಚರಿಸ ಬೇಕಾದ ಒಂದು ವ್ರತವನ್ನು ಪ್ರಾರಂಭಿಸಿ, ಹಗಲು ರಾತ್ರಿ ಎಂಬ ಎಣಿಕೆ ಇಲ್ಲದೆ ಕೇವಲ ಆ ವ್ರತಾನುಷ್ಠಾನತತ್ಪರಳಾದಳು.

ತತಸ್ತ್ರಿರಾತ್ರಂ ನಿರ್ವರ್ತ್ಯ ಸ್ನಾತ್ವಾ ಸಂತರ್ಪ್ಯ ದೇವತಾಃ ।
ಚತುರ್ಥೇಽಹನಿ ಮರ್ತವ್ಯಮಿತಿ ಸಂಚಿಂತ್ಯ ಭಾಮಿನೀ ॥
ಶ್ವಶ್ರೂಶ್ವಶುರಯೋಃ ಪಾದೌ ವವಂದೇ ಚಾರುಹಾಸಿನೀ ॥ ೩೯ ॥

ಅಥ ಪ್ರತಸ್ಥೇ ಪರಶುಂ ಗೃಹೀತ್ವಾ ಸತ್ಯವಾನ್ವನಂ ।
ಸಾವಿತ್ರ್ಯಪಿ ಚ ಭರ್ತಾರಂ ಗಚ್ಛಂತಃ ಪೃಷ್ಠತೋಽನ್ವಗಾತ್ ॥ ೪೦ ॥

ತತೋಽವದತ್ಸ ಭರ್ತಾ ತಾಂ ಪೃಚ್ಛಸ್ವ ಶ್ವಶುರೌ ಪಿಚೌ ।
ತಥೇತ್ಯುಕ್ತ್ವಾ ಹಿ ಪಪ್ರಚ್ಛ ನತ್ವಾ ಶ್ವಶ್ರೂಪದಾನಿ ಸಾ ॥ ೪೧ ॥

ಶ್ವಶುರಾವವದತಾಂ ತಾಂ ಚ ನ ಗಂತವ್ಯಂ ತ್ವಯಾಽನಘೇ ।
ಬಾಲೇ ತ್ವಂ ಪರಮಂ ಭೀರುಃ ಕಥಂ ಗಚ್ಛಸಿ ಕಾನನಂ ॥ ೪೨ ॥

೩೯. ಹೀಗೆ ಮೂರುರಾತ್ರಿ ಈ ವ್ರತವನ್ನು ಆಚರಿಸಿ ನಾಲ್ಕನೆಯ ದಿನ ಸ್ನಾನಮಾಡಿ ದೇವತಾರಾಧನೆಯನ್ನೂ ಪೂರಯಿಸಿ, ಆ ನಾಲ್ಕನೆಯ ದಿನದಲ್ಲಿ ವೈಧವ್ಯದುಃಖನಿವಾರಣೆಗಾಗಿ ತಾನೂ ದೇಹತ್ಯಾಗಮಾಡಬೇಕೆಂದು ನಿರ್ಣಯಿಸಿ, ಮಂದಹಾಸಯುತೆಯಾಗಿ ಆ ಸುಂದರಿಯು ಅತ್ತೆಮಾವಂದಿರ ಅಡಿದಾವರೆಗಳಿಗೆ ಎರಗಿದಳು.

೪೦. ಆ ಕಾಲಕ್ಕೆ ಸರಿಯಾಗಿ ಅವಳ ಪತಿಯಾದ ಸತ್ಯವಾನನು ಕೊಡಲಿಯನ್ನು ಹಿಡಿದುಕೊಂಡು ಕಾಡಿಗೆ ಹೊರಟನು. ಆಗ ಸಾವಿತ್ರಿಯು ಕಾಡಿಗೆ ಹೋಗುವ ಗಂಡನನ್ನು ಹಿಂಬಾಲಿಸಿ ತಾನೂ ಹೋದಳು.

೪೧. ಆಗ ಸತ್ಯವಾನನು ಅವಳನ್ನು ಕುರಿತು "ಎಲೌ ಸಾವಿತ್ರಿ ! ನೀನು ನಿನ್ನ ಅತ್ತೆಮಾವಂದಿರನ್ನು ಕೇಳಿ, ಅವರ ಅನುಜ್ಞೆಯನ್ನು ಪಡೆದು ಬಾ" ಎಂದನು. ಆಗ ಅವಳು ಹಾಗೆಯೇ ಆಗಲಿ ಎಂದು ಹೇಳಿ ಅತ್ತೆಮಾವಂದಿರ ಪಾದಗಳಿಗೆ ವಂದಿಸಿ ಕಾಡಿಗೆ ಹೋಗುವುದಕ್ಕೆ ಅಪ್ಪಣೆ ಕೊಡಬೇಕೆಂದು ಪ್ರಾರ್ಥಿಸಿದಳು.

೪೨. ಆಗ ಅವಳ ಅತ್ತೆಮಾವಂದಿರು "ಓ ನಿಷ್ಕಲ್ಮಷೆಯಾದ ಬಾಲೆಯೇ ! ನೀನು ಕಾಡಿಗೆ ಹೋಗಬಾರದು. ಮೊದಲೇ ನೀನು ಬಹಳ ಭಯಪಡುವ ಸ್ವಭಾವದವಳು. ಹೀಗಿರುವಾಗ ಭಯಂಕರವಾದ ಆ ವನಕ್ಕೆ ನೀನು ಹೇಗೆ ಹೋಗುವೆ?" ಎಂದು ಹೇಳಿದರು.

ಭೂಯೋ ಭಾವೇನ ಸಾ ಪ್ರೋಚೇ ದ್ರಷ್ಟವ್ಯಂ ಕಾನನಂ ಮಯಾ ।
ಗಚ್ಛೇತಿ ತಾಂ ತದೋಚಾತೇ ಶ್ವಶುರೌ ಚಾರುಹಾಸಿನೀಂ ॥ ೪೩ ॥

ತತೋ ಗೃಹೀತ್ವಾ ತರಸಾ ಫಲಪುಷ್ಪಸಮಿತ್ಕುಶಾನ್ ।
ಯಥಾ ಶುಷ್ಕಾಣಿವಾದಾಯ ಕಾಷ್ಠಭಾರಮಕಲ್ಪಯತ್ ॥ ೪೪ ॥

ಅಥ ಪಾಟಯತಃ ಕಾಷ್ಠಂ ಜಾತಾ ಶಿರಸಿ ವೇದನಾ ।
ವ್ಯಥಾ ಮಾಂ ಬಾಧತೇ ಬಾಲೇ ಸ್ವಪ್ತುಮಿಚ್ಛಾಮಿ ಸುಂದರಿ ॥ ೪೫ ॥

ವಿಶ್ರಮಸ್ವ ಮಹಾಬಾಹೋ ಸಾವಿತ್ರೀ ಪ್ರಾಹ ದುಃಖಿತಾ ।
ಪಶ್ಚಾದುಪಗಮಿಷ್ಯಾವಃ ಸ್ವಾಶ್ರಮಂ ಶ್ರಮನಾಶನಂ ॥ ೪೬ ॥

---

೪೩. ಆಗ ಆ ಸಾವಿತ್ರಿಯು ಪುನಃ ಅವರನ್ನು ಕುರಿತು “ನನಗೆ ಕಾಡನ್ನು ನೋಡಬೇಕೆಂದು ಬಹಳ ಆಶೆ” ಎಂದು ವಿಜ್ಞಾಪಿಸಿದಳು. ಆಗ ಆ ಅತ್ತೆಮಾವಂದಿರು ಮನೋಹರವಾದ ಮಂದಸ್ಮಿತವುಳ್ಳ ಆ ಸೊಸೆಯನ್ನು ಕುರಿತು “ಹೋಗಿ ಬಾರಮ್ಮ” ಎಂದು ಅಪ್ಪಣೆಕೊಟ್ಟರು.

೪೪. ಅನಂತರ ಅವರಿಬ್ಬರೂ ಕಾಡಿಗೆ ಹೋಗಿ ಫಲ, ಪುಷ್ಪ, ಸಮಿತ್ತು, ದರ್ಭೆ ಇವುಗಳನ್ನೆಲ್ಲಾ ಶೀಘ್ರವಾಗಿ ಸಂಗ್ರಹಿಸಿದರು. ಹಾಗೆಯೇ ಆ ಸತ್ಯವಾನನು ಒಣಗಿರುವ ಕಟ್ಟಿಗೆಗಳನ್ನೆಲ್ಲಾ ಸಂಗ್ರಹಿಸಿ ಒಂದು ಹೊರೆ ಕಟ್ಟಿದನು.

೪೫. ವೃಕ್ಷಗಳಲ್ಲಿ ಒಣಗಿದ ಇನ್ನೂ ಕೆಲವು ಕಾಷ್ಠಗಳನ್ನು ಮುರಿಯುತ್ತಿದ್ದಾಗ ಸತ್ಯವಾನನಿಗೆ ಬಹಳವಾಗಿ ಶಿರೋವೇದನೆಯು ಹುಟ್ಟಿತು. ಆಗ ಅವನು ತನ್ನ ಪತ್ನಿಯಾದ ಸಾವಿತ್ರಿಯನ್ನು ಕರೆದು “ಓ ಸುಂದರೀ ! ನನಗೆ ಬಹಳ ಸಂಕಟವಾಗುತ್ತಿದೆ. ಸ್ವಲ್ಪ ಮಲಗಿಕೊಳ್ಳಬೇಕು” ಎಂದು ಹೇಳಿದನು.

೪೬. ಆಗ ಆ ಸಾವಿತ್ರಿಯು ಬಹು ದುಃಖಿತಳಾಗಿ “ಓ ಮಹಾಬಾಹುಶಾಲಿಯೇ ! ಇಲ್ಲಿ ಸ್ವಲ್ಪ ಶ್ರಮ ಪರಿಹಾರಮಾಡಿಕೋ ; ಅನಂತರ ನಮ್ಮ ಆಶ್ರಮಕ್ಕೆ ಹೋಗೋಣ” ಎಂದು ಹೇಳಿದಳು.

ಯಾವದುತ್ಸಂಗಕೇ ಕೃತ್ವಾ ಶಿರ ಆಸ್ತೇ ಮಹೀತಲೇ ।
ತಾವದ್ದದರ್ಶ ಸಾವಿತ್ರೀ ಪುರುಷಂ ಕೃಷ್ಣಪಿಂಗಳಂ ॥
ಕಿರೀಟಿನಂ ಪೀತವಸ್ತ್ರಂ ಸಾಕ್ಷಾತ್ಸೂರ್ಯಮಿವೋದಿತಂ ॥ ೪೭ ॥

ತಮುವಾಚಾಥ ಸಾವಿತ್ರೀ ಪ್ರಣಮ್ಯ ಮಧುಪಿಂಗಳಂ ।
ಕಸ್ತ್ವಂ ದೇವೋಽಥವಾ ದೈತ್ಯೋ ಮಾಂ ಧರ್ಷಯಿತುಮಾಗತಃ ॥೪೮॥

ನ ಚಾಹಂ ಕೇನಚಿಚ್ಛಕ್ಯಾ ಸ್ವಧರ್ಮಾದವರೋಪಿತುಂ ।
ಸ್ಪ್ರಷ್ಟುಂ ವಾ ಪುರುಷಶ್ರೇಷ್ಠ ದೀಪ್ತಾ ವಹ್ನಿಶಿಖಾ ಯಥಾ ॥ ೪೯ ॥

॥ ಯಮ ಉವಾಚ ॥

ಯಮಃ ಸಂಯಮನಶ್ಚಾಸ್ಮಿ ಸರ್ವಲೋಕಭಯಂಕರಃ ।

--- ---

೪೭. ಬಳಿಕ ಆ ಸತ್ಯವಾನನು ಆ ಸಾವಿತ್ರಿಯ ತೊಡೆಯ ಮೇಲೆ ತಲೆಯನ್ನು ಇರಿಸಿ ಭೂಮಿಯಲ್ಲಿ ಮಲಗಿದನು. ಅದೇ ಸಮಯಕ್ಕೆ ಸರಿಯಾಗಿ ಕೃಷ್ಣ ಮತ್ತು ಪಿಂಗಲವರ್ಣವುಳ್ಳವನೂ, ಕಿರೀಟವನ್ನು ಧರಿಸಿದವನೂ, ಪೀತವಸ್ತ್ರವನ್ನುಟ್ಟವನೂ, ಸಾಕ್ಷಾದುದಯಿಸಿದ ಸೂರ್ಯನಂತೆ ತೇಜೋಮಯನೂ ಆಗಿರುವ ಒಬ್ಬ ಪುರುಷನು ಅಲ್ಲಿ ಕಾಣಿಸಿಕೊಳ್ಳಲಾಗಿ ಅವನನ್ನು ಆ ಸಾವಿತ್ರಿಯು ನೋಡಿದಳು.

೪೮. ಅನಂತರ ಆ ಸಾವಿತ್ರಿಯು ಕೃಷ್ಣಪಿಂಗಳವರ್ಣದ ಆ ಪುರುಷನಿಗೆ ನಮಸ್ಕರಿಸಿ ಹೀಗೆಂದಳು. “ ಎಲೈ ಮಹಾತ್ಮನೇ ! ನೀನು ಯಾರು ? ದೇವನೋ ಅಥವಾ ನನ್ನನ್ನು ಸೆಳೆಯಲು ಬಂದಿರುವ ದೈತ್ಯನೋ ? ಹೇಳು.”

೪೯. “ ನನ್ನನ್ನು ಪಾತಿವ್ರತ್ಯಧರ್ಮದಿಂದ ಕೆಡಿಸಲು ಯಾರಿಗೂ ಸಾಧ್ಯವಿಲ್ಲ. ಓ ಪುರುಷಶ್ರೇಷ್ಠನೇ ! ಕೊನೆಗೆ ನನ್ನನ್ನು ಸ್ಪರ್ಶಮಾಡುವುದಕ್ಕೂ ಯಾವನಿಗೂ ಸಾಧ್ಯವಿಲ್ಲ. ನನ್ನನ್ನು ಸ್ಪರ್ಶಿಸುವುದೆಂದರೆ ಪ್ರಜ್ವಲಿಸುವ ಅಗ್ನಿಜ್ವಾಲೆಯನ್ನು ಸ್ಪರ್ಶಮಾಡಿದ ಹಾಗೆ. ತಿಳಿಯಿತೇ ! ಎಂದಳು.

೫೦. ಆಗ ಆ ಯಮನು ಹೇಳುತ್ತಾನೆ—ಎಲೌ ಪತಿವ್ರತೆಯೇ ! ಸರ್ವಲೋಕಗಳಿಗೂ ಭಯಂಕರನೂ, ಸರ್ವಪ್ರಾಣಿಗಳನ್ನು ನಿಯಮಿಸುವವನೂ ಆದ ಯಮಧರ್ಮರಾಜನೇ ನಾನು. ಈ ನಿನ್ನ ಪತಿಯು ಕ್ಷೀಣಾಯುಷ್ಯನಾಗಿದ್ದಾನೆ.

ಕ್ಷೀಣಾಯುರೇಷ ತೇ ಭರ್ತಾ ತಂ ನಯಾಮಿ ಪತಿವ್ರತೇ ||
ನ ಶಕ್ಯಃ ಕಿಂಕರೈರ್ನೇತುಮತೋಽಹಂ ಸ್ವಯಮಾಗತಃ || ೫೦ ||

ಏವಮುಕ್ತ್ವಾ ಸತ್ಯವತಃ ಶರೀರಾತ್ಪಾಶಸಂಚಯೈಃ |
ಅಂಗುಷ್ಠಮಾತ್ರಂ ಪುರುಷಂ ನಿಶ್ಚಕರ್ಷ ಯಮೋ ಬಲಾತ್ ||
ಅಥ ಪ್ರಯಾತುಮಾರೇಭೇ ಪಂಥಾನಂ ಪಿತೃಸೇವಿತಂ || ೫೧ ||

ಸಾವಿತ್ರ್ಯಪಿ ವರಾರೋಹಾ ಪೃಷ್ಠತೋಽನುಜಗಾಮ ಹ |
ಪತಿವ್ರತಾಂ ತಥಾ ಶ್ರಾಂತಾಂ ತಾಮುವಾಚ ಯಮಸ್ತದಾ || ೫೨ ||

ನಿವರ್ತ ಗಚ್ಛ ಸಾವಿತ್ರಿ ಸ್ವಗೃಹೇ ತ್ವಮಿಹಾಗತಾ |
ಏಷ ಮಾರ್ಗೋ ವಿಶಾಲಾಕ್ಷಿ ನ ಕೇನಾಪ್ಯನುಗಮ್ಯತೆ || ೫೩ ||

---

ಆದುದರಿಂದ ಅವನನ್ನು ನಾನು ಒಯ್ಯುತ್ತೇನೆ. ಈ ನಿನ್ನ ಪತಿಯನ್ನು ನನ್ನ ಕಿಂಕರರು ಒಯ್ಯಲು ಸಾಧ್ಯವಿಲ್ಲವೆಂದು ಎಣಿಸಿ, ಅದಕ್ಕಾಗಿ ನಾನೇ ಸ್ವಯಂ ಬಂದಿರುತ್ತೇನೆ" ಎಂದನು.

೫೧. ಯಮನು ಆ ಸಾವಿತ್ರಿಗೆ ಈ ಪ್ರಕಾರ ಹೇಳಿ ತನ್ನ ಯಮಪಾಶಗಳನ್ನು ಹಾಕಿ ಆ ಸತ್ಯವಾನನ ಶರೀರದಿಂದ ಅಂಗುಷ್ಠಪರಿಮಾಣಕವಾದ ಹೃದಯೋಪಾಧಿಯಿಂದ ಸಹಿತನಾದುದರಿಂದ ಅಂಗುಷ್ಠಮಾತ್ರನೆಂದು ಕರೆಯಲ್ಪಡುವ ಜೀವಾತ್ಮನನ್ನು, ಬಲಾತ್ಕಾರದಿಂದ ಹೊರಕ್ಕೆ ಸೆಳೆದುಕೊಂಡು ಆಮೇಲೆ ಪಿತೃಗಳಿಗೆ ಆಶ್ರಯವಾದ ಮಾರ್ಗವನ್ನು ಹಿಡಿದು ಮುಂದೆ ಹೋಗುವುದಕ್ಕೆ ಪ್ರಾರಂಭಿಸಿದನು.

೫೨. ಆಗ ಆ ಸಾವಿತ್ರಿಯು ಸುಮ್ಮನಿರದೆ ಅವನ ಹಿಂದೆಯೇ ಹೋದಳು. ಪತಿವ್ರತೆಯೂ ಆಯಾಸಪಟ್ಟವಳೂ ಆಗಿರುವ ಆ ಸಾವಿತ್ರಿಯನ್ನು ಕಂಡು ಆಗ ಯಮನು ಹೀಗೆಂದನು.

೫೩. "ಓ ಸಾವಿತ್ರಿ! ನೀನೇತಕ್ಕೆ ನನ್ನ ಜತೆ ಬರುತ್ತಿರುವೆ? ನಿನ್ನ ಮನೆಗೆ ಹಿಂದಿರುಗಿ ಹೋಗು. ಎಲೌ ವಿಶಾಲಾಕ್ಷೀ! ಈ ದಾರಿಯಲ್ಲಿ ಯಾರೂ ತಾವಾಗಿಯೇ ಅನುಸರಿಸಿ ಬರುವುದಿಲ್ಲ" ಎಂದನು.

॥ ಸಾವಿತ್ರ್ಯುವಾಚ ॥

ನ ಶ್ರಮೋ ನ ಚ ಮೇ ಗ್ಲಾನಿಃ ಕದಾಚಿದಪಿ ಜಾಯತೇ ।
ಭರ್ತಾರಮನುಗಚ್ಛಂತಿ ಯಾಸ್ತಾಸಾಂ ನ ಶ್ರಮಾದಯಃ ॥ ೫೪ ॥

ಸತಾಂ ಸಂತೋ ಗತಿರ್ನಾನ್ಯಾ ಸ್ತ್ರೀಣಾಂ ಭರ್ತಾ ಸದಾ ಗತಿಃ ।
ವೇದೋ ವರ್ಣಾಶ್ರಮಾಣಾಂ ಚ ಶಿಷ್ಯಾಣಾಂ ಚ ಗತಿರ್ಗುರುಃ ॥ ೫೫ ॥

ಸರ್ವೇಷಾಮೇವ ಜಂತೂನಾಂ ಸ್ಥಾನಮಸ್ತಿ ಮಹೀತಲಂ ।
ಭರ್ತಾರಏವ ಮನುಜಸ್ತ್ರೀಣಾಂ ನಾನ್ಯಃ ಸಮಾಶ್ರಯಃ ॥ ೫೬ ॥

ಏವಮನ್ಯೈಶ್ಚ ವಿವಿಧೈರ್ವಾಕ್ಯೈರ್ಧರ್ಮಾರ್ಥಸಂಹಿತೈಃ ।
ತುತೋಷ ಸೂರ್ಯತನಯಃ ಸಾವಿತ್ರೀಂ ಚೇದಮಬ್ರವೀತ್ ॥ ೫೭ ॥

---

೫೪. ಸಾವಿತ್ರಿಯು ಹೇಳುತ್ತಾಳೆ—“ಅಯ್ಯಾ ಯಮಧರ್ಮರಾಜನೇ ! ನನಗೆ ಶ್ರಮವೂ ಇಲ್ಲ. ಯಾವಾಗಲೂ ಬಳಲಿಕೆಯೂ ಹುಟ್ಟುವುದಿಲ್ಲ. ತಮ್ಮ ಗಂಡಂದಿರನ್ನು ಅನುಸರಿಸುವ ಸ್ತ್ರೀಯರಿಗೆ ಎಂದೂ ಶ್ರಮಾದಿಗಳು ಉಂಟಾಗುವುದಿಲ್ಲ.”

೫೫. “ಸಜ್ಜನರಿಗೆ ಸಜ್ಜನರೇ ಗತಿ. ಸ್ತ್ರೀಯರಿಗೆ ಯಾವಾಗಲೂ ಗಂಡನೇ ಗತಿ. ಅವರಿಗೆ ಇನ್ನಾರೂ ಗತಿಯಿಲ್ಲ. ವರ್ಣಾಶ್ರಮ ಧರ್ಮಗಳಿಗೆ ವೇದವೇ ಗತಿ. ವಿದ್ಯಾರ್ಥಿಗಳಿಗೆ ಗುರುವೇ ಗತಿ.”

೫೬. “ಎಲ್ಲಾ ಪ್ರಾಣಿಗಳಿಗೂ ಭೂತಲವೇ ಆಶ್ರಯಸ್ಥಾನ. ಮಾನವ ಸ್ತ್ರೀಯರಿಗೆ ಗಂಡನೇ ಆಶ್ರಯವು. ಹೆಂಗಸರಿಗೆ ಪತಿಯನ್ನು ಬಿಟ್ಟು ಇನ್ನೊಂದು ಅವಲಂಬನವೇ ಇಲ್ಲ.”

೫೭. ಹೀಗೆಯೇ ನಾನಾ ತರಹದ ಅನೇಕ ಧರ್ಮವಿಷಯಭರಿತವಾಗಿ ಸಾವಿತ್ರಿಯು ಆಡಿದ ವಿವಿಧ ವಚನಗಳನ್ನು ಕೇಳಿ ಸೂರ್ಯಪುತ್ರನಾದ ಯಮಧರ್ಮರಾಜನು ಸಂತುಷ್ಟನಾಗಿ, ಸಾವಿತ್ರಿಯನ್ನು ಕುರಿತು ಈ ಮಾತುಗಳನ್ನು ಹೇಳಿದನು.

ತುಷ್ಟೋಽಸ್ಮಿ ತವ ಭದ್ರಂ ತೇ ವರಂ ವರಯ ಭಾಮಿನಿ ।
ಸಾವಿತ್ರ್ಯಪಿ ವರಾನ್ವವ್ರೇ ವಿನಯಾವನತಾನನಾ ॥ ೫೮ ॥

ಚಕ್ಷುಃಪ್ರಾಪ್ತಿಸ್ತಥಾ ರಾಜ್ಯಂ ಶ್ವಶುರಸ್ಯ ಮಹಾತ್ಮನಃ ।
ಪಿತುಃ ಪುತ್ರಶತಂ ಚೈವ ಪುತ್ರಾಣಾಂ ಶತಮಾತ್ಮನಃ ॥ ೫೯ ॥

ಜೀವಿತಂ ಚ ತಥಾ ಭರ್ತುರ್ಧರ್ಮಸಿದ್ಧಿಶ್ಚ ಶಾಶ್ವತೀ ।
ಧರ್ಮರಾಜೋ ವರಾನ್ದತ್ವಾ ಪ್ರೇಷಯಾಮಾಸ ತಾಂ ತತಃ ॥ ೬೦ ॥

ಅಥ ಭರ್ತಾರಮಾಸಾದ್ಯ ಸಾವಿತ್ರೀ ಹೃಷ್ಟಮಾನಸಾ ।
ಜಗಾಮ ಸ್ವಾಶ್ರಮಪದಂ ಸಹಭರ್ತ್ರಾ ನಿರಾಕುಲಾ ॥ ೬೧ ॥

---

೫೮. "ಓ ಸುಂದರೀ! ನಾನು ನಿನ್ನ ಭಕ್ತಿಗೆ ಸಂತುಷ್ಟನಾಗಿದ್ದೇನೆ. ನಿನಗೆ ಮಂಗಳವಾಗಲಿ. ನಿನಗೆ ಬೇಕಾದ ವರಗಳನ್ನು ಬೇಡು" ಎಂದನು. ಆಗ ಸಾವಿತ್ರಿಯು ವಿನಯದಿಂದ ತಲೆ ಬಗ್ಗಿಸಿ ವರಗಳನ್ನು ಬೇಡುವವಳಾಗಿ.

೫೯. "ಓ ಯಮಧರ್ಮರಾಜನೇ! ಮಹಾತ್ಮನಾದ ನನ್ನ ಶ್ವಶುರನಿಗೆ ಕಣ್ಣುಗಳು ಕಾಣಿಸುವಂತೆ ಆಗಬೇಕು. ಮತ್ತು ಅವನಿಗೆ ಕಳೆದುಹೋದ ರಾಜ್ಯವು ಪುನಃ ಲಭಿಸಲಿ. ಹಾಗೆಯೇ ನನ್ನ ತಂದೆಯಾದ ಅಶ್ವಪತಿಗೆ ನೂರು ಮಂದಿ ಪುತ್ರರು ಜನಿಸಲಿ. ನನಗೂ ನೂರುಮಂದಿ ಸತ್ಪುತ್ರರು ಜನಿಸಲಿ."

೬೦. "ಮತ್ತು ನನ್ನ ಪತಿಯು ಪುನಃ ಜೀವಿಸಲಿ. ಮತ್ತು ಶಾಶ್ವತ ಧರ್ಮಲಾಭವು ನಮಗೆ ಆಗಬೇಕು" ಎಂದು ವರಗಳನ್ನು ಬೇಡಿದಳು. ಅನಂತರ ಯಮಧರ್ಮರಾಜನು ಸಾವಿತ್ರಿಗೆ ಆ ವರಗಳನ್ನು ಕೊಟ್ಟು ಅಲ್ಲಿಂದ ಅವಳನ್ನು ಕಳುಹಿಸಿದನು.

೬೧. ಅನಂತರ ಸಾವಿತ್ರಿಯು ತನ್ನ ಪತಿಯನ್ನು ಪುನಃ ಪಡೆದು ಹೃಷ್ಟಚಿತ್ತಳಾಗಿ ಆ ತನ್ನ ಪತಿಯೊಡನೆ ನಿರಾತಂಕದಿಂದ ತನ್ನ ಆಶ್ರಮಕ್ಕೆ ತೆರಳಿದಳು.

ಭಾದ್ರಸ್ಯ ಪೌರ್ಣಮಾಸ್ಯಾಂ ತು ಯಥಾ ಚೀರ್ಣಂ ವ್ರತಂ ತ್ವಿದಂ ।
ಮಾಹಾತ್ಮ್ಯಮಸ್ಯ ನೃಪತೇ ಕಥಿತಂ ಸಕಲಂ ಮಯಾ ॥ ೬೨ ॥

॥ ಯುಧಿಷ್ಠಿರ ಉವಾಚ ॥

ಕೀದೃಶಂ ತದ್ವ್ರತಂ ದೇವ ಸಾವಿತ್ರ್ಯಾ ಯದನುಷ್ಠಿತಂ ।
ತಸ್ಮಿನ್ಭಾದ್ರಪದೇ ಮಾಸಿ ಸಿದ್ಧಾನ್ನಂ ತಸ್ಯ ಕೀದೃಶಂ ॥ ೬೩ ॥

ಕಾ ದೇವತಾ ವ್ರತೇ ತಸ್ಮಿನ್ಬ್ರೂಹಿ ಕಾಮಂ ಪ್ರತಿ ಪ್ರಭೋ ।
ಸವಿಸ್ತರಂ ಹೃಷೀಕೇಶ ಬ್ರೂಹಿ ಧರ್ಮಂ ಸನಾತನಂ ॥ ೬೪ ॥

॥ ಶ್ರೀ ಕೃಷ್ಣ ಉವಾಚ ॥

ಶ್ರೂಯತಾಂ ಪಾಂಡವಶ್ರೇಷ್ಠ ಸಾವಿತ್ರೀವ್ರತಮಾದರಾತ್ ।
ಕಥಯಾಮಿ ಕಥಂ ಚೀರ್ಣಂ ತಯಾ ಸತ್ಯಾ ಯುಧಿಷ್ಠಿರ ॥ ೬೫ ॥

... ............ ...                . .        .                ....        ...

೬೨. ಅಯ್ಯಾ ರಾಜನೇ! ಭಾದ್ರಪದಮಾಸದ ಹುಣ್ಣಿಮೆಯಲ್ಲಿ ಈ ವ್ರತವನ್ನು ಸಾವಿತ್ರಿಯು ಆಚರಿಸಿದುದರಿಂದ ಇದು ಎಂಥ ಪ್ರಭಾವವನ್ನು ತೋರಿಸಿತು ಎಂಬ ಎಲ್ಲಾ ವಿಷಯವನ್ನೂ ನಾನು ನಿನಗೆ ಹೇಳಿರುತ್ತೇನೆ ಎಂದನು.

೬೩. ಯುಧಿಷ್ಠಿರನು ಹೇಳುತ್ತಾನೆ—ಓ ದೇವನೇ! ಆ ಭಾದ್ರಪದಮಾಸದಲ್ಲಿ ಈ ಸಾವಿತ್ರಿಯು ಆಚರಿಸಿದ ವ್ರತದ ಸ್ವರೂಪವೇನು? ಈ ವ್ರತದಲ್ಲಿ ಸಿದ್ಧಮಾಡಬೇಕಾದ ನೈವೇದ್ಯವಸ್ತುಗಳು ಅವುವು?

೬೪. ಓ ಪ್ರಭುವೇ! ಆ ವ್ರತದಲ್ಲಿ ಆರಾಧನೀಯವಾದ ದೇವತೆಯು ಯಾರು? ಓ ಹೃಷೀಕೇಶನೇ! ಆ ಸನಾತನ ವ್ರತಧರ್ಮವನ್ನು ವಿಸ್ತಾರವಾಗಿ ನನಗೆ ಹೇಳು ಎಂದನು.

೬೫. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರನೇ! ಆ ಸತೀ ಸಾವಿತ್ರಿಯು ಆ ವ್ರತವನ್ನು ಹೇಗೆ ಆಚರಿಸಿದಳು ಎಂಬುದನ್ನು ಹೇಳುತ್ತೇನೆ ಅದನ್ನು ಆದರದಿಂದ ಕೇಳು.

ತ್ರಯೋದಶ್ಯಾಂ ಭಾದ್ರಪದೇ ದಂತಧಾವನಪೂರ್ವಕಂ ।
ತ್ರಿರಾತ್ರಂ ನಿಯಮಃ ಕಾರ್ಯ ಉಪವಾಸಸ್ಯ ಭಾರತ ॥ ೬೬ ॥

ಅಶಕ್ತ್ಯಾ ತು ತ್ರಯೋದಶ್ಯಾಂ ನಕ್ತಂ ಕುರ್ಯಾಜ್ಜಿತೇಂದ್ರಿಯಃ ।
ಅಯಾಚಿತಂ ಚತುರ್ದಶ್ಯಾಮುಪವಾಸೇನ ಪೂರ್ಣಿಮಾಂ ॥ ೬೭ ॥

ನಿತ್ಯಂ ಸ್ನಾತ್ವಾ ಮಹಾನದ್ಯಾಂ ತಟಾಕೇ ವಾಥ ನಿರ್ಝರೇ ।
ವಿಶೇಷಃ ಪೌರ್ಣಮಾಸ್ಯಾಂ ತು ಸ್ನಾನಂ ಸರ್ಷಪಮೃಜ್ಜಲೈಃ ॥ ೬೮ ॥

ಗೃಹೀತ್ವಾತಿಲಕಾನ್ಪಾತ್ರೇ ಪ್ರಸ್ಥಮಾತ್ರಂ ಯುಧಿಷ್ಠಿರ ।
ಅಥ ವಾ ಧಾನ್ಯಮಾದಾಯ ಯವಶಾಲಿತಿಲಾದಿಕಂ ॥ ೬೯ ॥

---

೬೬. ಅಯ್ಯಾ ಭರತವಂಶಜನೇ! ಈ ವ್ರತಾನುಷ್ಠಾತೃವು ಭಾದ್ರಪದ ಶುದ್ಧ ತ್ರಯೋದಶೀ ದಿನ ಪ್ರಾತಃಕಾಲದಲ್ಲಿ ದಂತಧಾವನಾದಿಗಳನ್ನು ನೆರವೇರಿಸಿ, ಇಂದಿನಿಂದ ಮೂರು ರಾತ್ರಿಗಳು ಉಪವಾಸವನ್ನು ಆಚರಿಸುವೆನೆಂದು ನಿಯಮವನ್ನು ಪರಿಗ್ರಹಿಸಬೇಕು.

೬೭. ಮೂರು ದಿವಸ ಉಪವಾಸಮಾಡಲು ಶಕ್ತಿ ಇಲ್ಲದಿದ್ದರೆ ತ್ರಯೋದಶೀ ದಿನ ನಕ್ತಭೋಜನಮಾಡಿ ಜಿತೇಂದ್ರಿಯನಾಗಿರಬೇಕು. ಚತುರ್ದಶಿಯಲ್ಲಿ ಅಯಾಚಿತವಾಗಿ ಲಬ್ಧವಾದುದನ್ನು ತಿನ್ನಬೇಕು. ಹುಣ್ಣಿಮೆಯ ದಿನ ಪೂರ್ಣ ಉಪವಾಸ ಮಾಡಬೇಕು.

೬೮. ತ್ರಯೋದಶೀ ಮೊದಲ್ಗೊಂಡು ಪ್ರತಿನಿತ್ಯವೂ ಮಹಾನದಿಯಲ್ಲೋ, ಅಥವಾ ಕೊಳಗಳಲ್ಲಿಯೋ, ಇಲ್ಲವಾದರೆ ಪರ್ವತದಿಂದಿಳಿಯುವ ಜಲಪಾತದಲ್ಲಿಯೋ ಸ್ನಾನಮಾಡಬೇಕು. ಪೌರ್ಣಿಮಾಸಿಯಲ್ಲಿ ಸ್ನಾನಮಾಡುವಾಗ ಸಾಸುವೆ ತೈಲ, ಮೃತ್ತಿಕೆ ಇವುಗಳನ್ನು ಪಯೋಗಿಸಿ ಸ್ನಾನಮಾಡತಕ್ಕದ್ದು.

೬೯. ಅಯ್ಯಾ ಯುಧಿಷ್ಠಿರನೇ! ಅನಂತರ ಒಂದು ಸೇರು ಎಳ್ಳನ್ನು ಒಂದು ಪಾತ್ರೆಯಲ್ಲಿ ಹಾಕಬೇಕು. ಅಥವಾ ಅಷ್ಟೇ ಯವ, ಶಾಲಿ, ತಿಲ, ಇವೇ ಮೊದಲಾದ ಇತರ ಧಾನ್ಯಗಳನ್ನಾದರೂ ಆ ಪಾತ್ರೆಯಲ್ಲಿ ಹಾಕಬಹುದು.

ತತೋ ವಂಶಮಯೇ ಪಾತ್ರೇ ವಸ್ತ್ರಯುಗ್ಮೇನ ವೇಷ್ಟಯೇತ್ ।
ಸಾವಿತ್ರೀಪ್ರತಿಮಾಂ ಕೃತ್ವಾ ಸರ್ವಾವಯವಶೋಭನಾಂ ॥ ೭೦ ॥

ಸೌವರ್ಣೀಂ ಮೃನ್ಮಯೀಂ ವಾಪಿ ಸ್ವಶಕ್ತ್ಯಾ ರೌಪ್ಯನಿರ್ಮಿತಾಂ ।
ರಕ್ತವಸ್ತ್ರಯುಗಂ ದದ್ಯಾತ್ಸಾವಿತ್ರ್ಯೈ ಬ್ರಹ್ಮಣೇ ತಥಾ ॥ ೭೧ ॥

ಸಾವಿತ್ರೀಂ ಬ್ರಹ್ಮಣಾಸಾರ್ಧಮೇವಂ ಭಕ್ತ್ಯಾ ಪ್ರಪೂಜಯೇತ್ ।
ಗಂಧೈಸ್ಸುಗಂಧಿಪುಷ್ಪೈಶ್ಚ ಧೂಪನೈವೇದ್ಯದೀಪಕೈಃ ॥ ೭೨ ॥

ಪೂರ್ಣೈಃ ಕೋಶಾತಕೈರ್ಭಕ್ಷ್ಯೈಃ ಕೂಷ್ಮಾಂಡೈಃ ಕರ್ಕಟೀಫಲೈಃ ।
ನಾಲಿಕೇರೈಶ್ಚ ಖರ್ಜೂರೈಃ ಕಪಿತ್ಥೈರ್ದಾಡಿಮೀಫಲೈಃ ॥ ೭೩ ॥

ಜಂಬೂಜಂಬೀರನಾರಂಗೈಃ ಕರ್ಕಟ್ಯೈಃ ಪನಸೈಸ್ತಥಾ ।
ಜೀರಕೈಃ ಕಟುಖಂಡೈಶ್ಚ ಗುಡೇನ ಲವಣೇನ ಚ ॥ ೭೪ ॥

---

೭೦. ಸರ್ವಾಂಗಸುಂದರಿಯಾದ ಶ್ರೀ ಸಾವಿತ್ರೀದೇವಿಯ ಶುಭಪ್ರತಿಮೆಯನ್ನು ಮಾಡಿಸಿ, ಅದನ್ನು ಬಿದಿರಿನಿಂದ ಮಾಡಿದ ಪಾತ್ರೆಯಲ್ಲಿಟ್ಟು ವಸ್ತ್ರಯುಗಳದಿಂದ ಆ ಪ್ರತಿಮೆಯನ್ನು ಆಚ್ಛಾದಿಸಬೇಕು.

೭೧. ಬ್ರಹ್ಮ ಮತ್ತು ಸಾವಿತ್ರಿ ಇವರ ಪ್ರತಿಮೆಗಳನ್ನು ಸ್ವಶಕ್ತ್ಯನುಸಾರವಾಗಿ ಬಂಗಾರದಿಂದಲೋ, ಬೆಳ್ಳಿಯಿಂದಲೋ, ಮಣ್ಣಿನಿಂದಲೋ ಮಾಡಿಸಿ, ಆ ಸಾವಿತ್ರೀಬ್ರಹ್ಮರಿಗೆ ರಕ್ತವಸ್ತ್ರಯುಗ್ಮಗಳಿಂದ ಪೂಜೆಮಾಡಬೇಕು.

೭೨. ಈರೀತಿ ಬ್ರಹ್ಮದೇವಸಮೇತನಾಗಿ ಸಾವಿತ್ರೀದೇವಿಯನ್ನು ಗಂಧ, ಸುಗಂಧಿಪುಷ್ಪ, ಧೂಪ, ನೈವೇದ್ಯ, ದೀಪ ಇವುಗಳಿಂದ ಭಕ್ತಿಪೂರ್ವಕವಾಗಿ ಪೂಜಿಸಬೇಕು.

೭೩–೭೬. ಬಳಿಕ ವೇಣುಪಾತ್ರೆಗಳಲ್ಲಿ ಪಡವಲಕಾಯಿ, ಇತರ ಭಕ್ಷ್ಯಗಳು, ಬೂದಿಗುಂಬಳಕಾಯಿ, ಸೌತೇಕಾಯಿ, ತೆಂಗಿನಕಾಯಿ, ಖರ್ಜೂರ, ಬೇಲದಹಣ್ಣು, ದಾಳಿಂಬದಹಣ್ಣು, ನೇರಿಳೇಹಣ್ಣು, ನಿಂಬೇಹಣ್ಣು, ಕಿತ್ತಳೇಹಣ್ಣು, ಹಾಗಲಕಾಯಿ, ಹಲಸಿನಹಣ್ಣು, ಜೀರಿಗೆ, ಕುಟುಕರೋಹಿಣೀ, ಬೆಲ್ಲ,

ವಿರೂಢೈಃ ಸಪ್ತಧಾನ್ಯೈಶ್ಚ ವಂಶಪಾತ್ರೇ ಪ್ರಕಲ್ಪಿತೈಃ ।
ರಾಜನ್ಯಾ ಸೂತ್ರಕಂಟ್ಯೈಶ್ಚ ಶುಭ್ಯೈಃ ಕುಂಕುಮಕೇಸರೈಃ ॥ ೭೫ ॥

ಅವತಾರವತೀತ್ಯೇವಂ ಸಾವಿತ್ರೀಬ್ರಹ್ಮಣಃ ಪ್ರಿಯಾ ।
ತಾಮರ್ಚಯೇತ ಮಂತ್ರೇಣ ಸಾವಿತ್ರೀಂ ಬ್ರಾಹ್ಮಣಃ ಸ್ವಯಂ ॥
ಇತರೇಷಾಂ ಪುರಾಣೋಕ್ತಮಂತ್ರೋಽತ್ರ ಸಮುದಾಹೃತಃ ॥ ೭೬ ॥

ಓಂಕಾರಪೂರ್ವಕೇ ದೇವಿ ವೀಣಾಪುಸ್ತಕಧಾರಿಣೀ ।
ವೇದಮಾತರ್ನಮಸ್ತುಭ್ಯಮವೈಧವ್ಯಂ ಪ್ರಯಚ್ಛ ಮೇ ॥ ೭೭ ॥

ಏವಂ ಸಂಪೂಜ್ಯ ವಿಧಿವಜ್ಜಾಗರಂ ಕಾರಯೇತ್ತತಃ ।
ಗೀತವಾದಿತ್ರಶಬ್ದೇನ ಹೃಷ್ಟತಾರೀಕದಂಬಕೈಃ ॥ ೭೮ ॥

---

ಉಪ್ಪು, ಸಪ್ತಧಾನ್ಯಗಳು, ರಾಜಬಾಳೇಹಣ್ಣು, ಕುಂಕುಮಕೇಸರಿ, ಇವುಗಳನ್ನೆಲ್ಲಾ ತುಂಬಿ ಬ್ರಹ್ಮದೇವನಿಗೆ ಪ್ರೀತಿಪಾತ್ರಳಾದ ಈ ಸಾವಿತ್ರಿಯು ಅವತಾರಮೂರ್ತಿಯೆಂದು ಭಾವಿಸಿ ಅವಳಿಗೆ ಆ ವೇಣುಪಾತ್ರೆಯಲ್ಲಿದ್ದ ಫಲಗಳನ್ನೆಲ್ಲಾ ಸಮರ್ಪಿಸಬೇಕು. ಈ ವ್ರತಾನುಷ್ಠಾತೃವು ವೇದಾಧಿಕಾರಿಯಾದರೆ ವೇದೋಕ್ತಮಂತ್ರಪೂರ್ವಕವಾಗಿ ಆ ಸಾವಿತ್ರಿಯನ್ನು ಪೂಜಿಸಬೇಕು, ಇತರರು ಆಚರಿಸುವುದಾದರೆ ಅವರಿಗೆ ಈ ಪುರಾಣೋಕ್ತ ಮಂತ್ರವು ಹೇಳಲ್ಪಟ್ಟಿದೆ.

೭೭. ಓಂಕಾರೋಚ್ಚಾರಣ ಪೂರ್ವಕ ಸ್ತುತ್ಯಳೂ, ವೀಣೆ ಮತ್ತು ಪುಸ್ತಕ ಇವನ್ನು ಧರಿಸಿದವಳೂ, ವೇದಮಾತೆಯೂ ಆಗಿರುವ ಸಾವಿತ್ರೀದೇವಿಯೇ ! ನೀನು ನನಗೆ ವೈಧವ್ಯ ಬಾರದ ಹಾಗೆ ಮಾಡಿ, ಸೌಮಂಗಲ್ಯವನ್ನು ಕೊಡು ಎಂದು ಈ ಮಂತ್ರದ ತಾತ್ಪರ್ಯ.

೭೮. ಈರೀತಿ ಶಾಸ್ತ್ರೋಕ್ತರೀತಿಯಲ್ಲಿ ಪೂಜೆಮಾಡಿ ಅನಂತರ ಆದಿನ ರಾತ್ರಿ ಸಂಗೀತ, ಅಷ್ಟವಿಧ, ವಾದ್ಯ, ತಾಳ, ಭಜನ ಮುಂತಾದುವುಗಳ ಮೂಲಕವೋ.

ನೃತ್ಯಹಾಸ್ಯೈರ್ನಯೇದ್ರಾತ್ರಿಂ ಪೃಷ್ಮತಶ್ಚ ಕಥಾನಕೈಃ ।
ಸಾವಿತ್ರ್ಯಾಖ್ಯಾನಕಂ ವಾಪಿ ವಾಚಯೇದ್ದ್ವಿಜಸತ್ತಮಂ ॥
ಯಾವತ್ಪ್ರಭಾತಸಮಯಂ ಗೀತ್ಯಾ ಭಾವರಸೈಃ ಸಮಂ ॥ ೭೯ ॥

ತತಃ ಪ್ರಭಾತೇ ವಿಮಲ ಉಷಃಕಾಲೇ ಹ್ಯುಪಸ್ಥಿತೇ ।
ಬ್ರಾಹ್ಮಣೇ ವೇದವಿದುಷಿ ಸಾವಿತ್ರೀಂ ವಿನಿವೇದಯೇತ್ ॥ ೮೦ ॥

ಯಥಾ ಸಾವಿತ್ರಕಲ್ಪಜ್ಞೇ ಸಾವಿತ್ರ್ಯಾಖ್ಯಾನವಾಚಕೇ ।
ದೈವಜ್ಞ ಉಂಛವೃತ್ತೌ ಚ ದರಿದ್ರೇ ಚಾಗ್ನಿಹೋತ್ರಿಣಿ ॥ ೮೧ ॥

ಮಂತ್ರೇಣಾನೇನ ಕೌಂತೇಯ ಪ್ರಣಮ್ಯ ವಿಧಿಪೂರ್ವಕಂ ।
ದರ್ಭಾಕ್ಷತತಿಲೈರ್ಮಿಶ್ರಾ ಪೂರ್ವಾಶಾಭಿಮುಖಾಸ್ಥಿತಾ ॥ ೮೨ ॥

೭೯. ಅಥವಾ ನರ್ತನ, ವಿನೋದ, ಪುಣ್ಯಚರಿತ್ರೆಯ ಅಭಿನಯ, ಬ್ರಾಹ್ಮಣೋತ್ತಮನಿಂದ ಶ್ರೀ ಸಾವಿತ್ರೀ ಕಥಾವಾಚನ ; ರಸಭಾವ ಸಹಿತವಾದ ಸಂಗೀತ ಇವೇ ಮೊದಲಾದುವುಗಳಿಂದ ಬೆಳಗಾಗುವವರೆಗೂ ಜಾಗರಣೆ ಮಾಡಬೇಕು.

೮೦. ಅನಂತರ ಬೆಳಗಿನಜಾವ ನಿರ್ಮಲವಾದ ಉಷಃಕಾಲವು ಪ್ರಾಪ್ತವಾದಾಗ, ವೇದಾಧ್ಯಯನ ಮಾಡಿದ ಬ್ರಾಹ್ಮಣನಿಗೆ ಆ ಸಾವಿತ್ರೀ ಪ್ರತಿಮೆಯನ್ನು ದಾನಮಾಡಬೇಕು.

೮೧. ಮತ್ತು ಆ ಸಾವಿತ್ರೀ ಪ್ರತಿಮೆಯನ್ನು ಪ್ರತಿಗ್ರಹಮಾಡುವ ಬ್ರಾಹ್ಮಣನು ಸಾವಿತ್ರೀ ವ್ರತಾನುಷ್ಠಾನಕ್ರಮವನ್ನು ಯಥಾವತ್ತಾಗಿ ತಿಳಿದವನಾಗಿ ಸಾವಿತ್ರೀ ಪುಣ್ಯಕಥಾವಾಚಕನೂ, ಜ್ಯೋತಿಶ್ಶಾಸ್ತ್ರಜ್ಞನೂ, ಉಂಛವೃತ್ತಿಯಿಂದ ಜೀವನ ಮಾಡುವವನೂ, ಅಗ್ನಿಹೋತ್ರವನ್ನು ಮಾಡುವವನೂ, ಆಗಿರಬೇಕು

೮೨. ಅಯ್ಯಾ ಕುಂತೀಪುತ್ರನೇ! ಈ ದಾನಮಾಡುವ ಹೆಂಗಸು ಅಥವಾ ಗಂಡಸು ಪೂರ್ವಾಭಿಮುಖವಾಗಿ ಕುಳಿತು ದರ್ಭೆ, ಅಕ್ಷತೆ, ತಿಲ ಇವುಗಳನ್ನು ಮಿಶ್ರಮಾಡಿ ಕೈಯಲ್ಲಿ ಹಿಡಿದುಕೊಂಡು "ಓಂಸ್ವಸ್ತಿ" ಎಂದು ಮೊದಲು ಹೇಳಿ, ಈಮುಂದೆ ಹೇಳುವ ಮಂತ್ರವನ್ನು ಪಠಿಸಿ ಆ ಪ್ರತಿಮೆಯನ್ನು ಮಂತ್ರಪೂರ್ವಕವಾಗಿ ದಾನಮಾಡಬೇಕು.

ಸುಧೀ ವಿಪ್ರವರೋ ವಿಪ್ರ ಓಂಕಾರಸ್ವಸ್ತಿಪೂರ್ವಕೇ ।
ಸಾವಿತ್ರೀಯಂ ಮಯಾ ದತ್ತಾ ಸಹಿರಣ್ಯಾ ಮಹಾಸತೀ ॥
ಬ್ರಹ್ಮಣಃ ಪ್ರೀಣನಾರ್ಥಾಯ ಬ್ರಾಹ್ಮಣ ಪ್ರತಿಗೃಹ್ಯತಾಂ ॥ ೮೩ ॥

ಏವಂ ದತ್ವಾ ದ್ವಿಜೇಂದ್ರಾಯ ಸಾವಿತ್ರೀಂ ತಾಂ ಯುಧಿಷ್ಠಿರ ।
ನೈವೇದ್ಯಾದಿ ಚ ತತ್ಸರ್ವಂ ಬ್ರಾಹ್ಮಣಂ ಸ್ವಗೃಹಂ ನಯೇತ್ ॥
ಸ್ವಯಂ ದಶಪದಂ ಗಚ್ಛೇತ್ಸ್ವವೇಶ್ಮ ಪುನರಾವಿಶೇತ್ ॥ ೮೪ ॥

ತತ್ರ ಭುಕ್ತ್ವಾ ಹವಿಷ್ಯಾನ್ನಂ ಬ್ರಾಹ್ಮಣೈರ್ಬಾಂಧವೈಸ್ಸಹ ।
ವಿಸರ್ಜಯೇತ್ತತೋ ವಿಪ್ರಾನ್ಸಾವಿತ್ರೀ ಪ್ರೀಯತಾಮಿತಿ ॥ ೮೫ ॥

ಪಂಚದಶ್ಯಾಂ ತಥಾ ಜ್ಯೇಷ್ಠೇ ವಟಕೇ ಚ ಮಹಾಸತೀ ।
ತ್ರಿರಾತ್ರೋಪೋಷಿತಾ ನಾರೀ ವಿಧಿನಾನೇನ ಪೂಜಯೇತ್ ॥ ೮೬ ॥

---

೮೩. ಎಲೈ ಬ್ರಾಹ್ಮಣನೇ ! ಶ್ರೀ ಬ್ರಹ್ಮದೇವನು ಸುಪ್ರೀತನಾಗುವುದಕ್ಕಾಗಿ ಮಹಾಪತಿವ್ರತೆಯಾದ ಶ್ರೀ ಸಾವಿತ್ರೀದೇವಿಯ ಪ್ರತಿಮೆಯನ್ನು ಹಿರಣ್ಯ ಸಮೇತವಾಗಿ ನಿನಗೆ ದಾನಮಾಡಿರುತ್ತೇನೆ. ಅದನ್ನು ನೀನು ಪ್ರತಿಗ್ರಹಿಸು ಎಂಬುದು ಇದರ ತಾತ್ಪರ್ಯ.

೮೪. ಅಯ್ಯಾ ಯುಧಿಷ್ಠಿರನೇ ! ಆ ಬ್ರಾಹ್ಮಣೋತ್ತಮನಿಗೆ ಈರೀತಿಯಾಗಿ ಸಾವಿತ್ರೀ ಪ್ರತಿಮಾದಾನಮಾಡುವುದಲ್ಲದೆ ನೈವೇದ್ಯಾರ್ಥವಾಗಿ ವೇಣು ಪಾತ್ರೆಯಲ್ಲಿಟ್ಟಿದ್ದ ಫಲಾದಿಗಳನ್ನೆಲ್ಲಾ ಆ ಬಾಹ್ಮಣನ ಮನೆಗೇ ಕಳುಹಿಸಬೇಕು. ಮತ್ತು ಅವನನ್ನು ಕಳುಹಿಸುವಾಗ ಹತ್ತು ಹೆಜ್ಜೆ ಅನುಸರಿಸಿ ಹೋಗಬೇಕು. ಅನಂತರ ಪುನಃ ಸ್ವಗೃಹ ಪ್ರವೇಶಮಾಡಬೇಕು.

೮೫. ಆ ಸ್ವಗೃಹದಲ್ಲಿ ದೇವರಿಗೆ ನಿವೇದನಮಾಡಿದ ಅನ್ನವನ್ನು ಬ್ರಾಹ್ಮಣರು ಮತ್ತು ತನ್ನ ಬಂಧುಗಳು ಇವರ ಸಮೇತ ಭೋಜನಮಾಡಿ ಆಮೇಲೆ ಆ ಬ್ರಾಹ್ಮಣರ ಸಮುಖದಲ್ಲಿ ಸಾವಿತ್ರೀ ಪ್ರೀಯತಾಂ ಎಂದು ಹೇಳಿ ಅವರನ್ನು ಕಳುಹಿಸಬೇಕು.

೮೬. ಇದೇರೀತಿ ಸ್ತ್ರೀಯು ತ್ರಿರಾತ್ರೋಪವಾಸವನ್ನು ಸಂಕಲ್ಪಪೂರ್ವಕವಾಗಿ ಮಾಡಿ, ಮೇಲೆ ಹೇಳಿದಂತೆ ಜ್ಯೇಷ್ಠಮಾಸದ ಹುಣ್ಣಿಮೆಯಲ್ಲಿ ವಟವೃಕ್ಷ ಮೂಲದಲ್ಲಿ ಮಹಾಪತಿವ್ರತೆಯಾದ ಶ್ರೀ ಸತೀಸಾವಿತ್ರಿಯನ್ನು ಪೂಜಿಸಬೇಕು.

**ಸಾರ್ಧಂ ಸತ್ಯವತಾ ಸಾಧ್ವೀಂ ಫಲನೈವೇದ್ಯದೀಪಕೈಃ ।**
**ಪಟ್ಟಾವಲಂಬನಂ ಕೃತ್ವಾ ಕಾಷ್ಠಭಾರಂ ಯುಧಿಷ್ಠಿರ　　॥ ೮೭ ॥**

**ರಾತ್ರೌ ಜಾಗರಣಂ ಕೃತ್ವಾ ನೃತ್ಯಗೀತಪುರಸ್ಸರೈಃ ।**
**ಪ್ರಭಾತೇ ವಿಧಿನಾ ಪೂರ್ವಂ ಪೂರ್ವೋಕ್ತೇನ ನರೋತ್ತಮ ॥**
**ತತ್ಸರ್ವಂ ಬ್ರಾಹ್ಮಣೇ ದದ್ಯಾತ್ಪ್ರಣಿಪತ್ಯ ಕ್ಷಮಾಪಯೇತ್　　॥ ೮೮ ॥**

**ಏತತ್ತು ತೇ ವ್ರತಮಿದಂ ಕಥಿತಂ ವಿಧಿವನ್ಮಯಾ ।**
**ಯಾಶ್ಚರಿಷ್ಯಂತಿ ಲೋಕೇಸ್ಮಿನ್ಪುತ್ರಪೌತ್ರಸಮನ್ವಿತಾಃ ॥**
**ಭುಕ್ತ್ವಾ ಭೋಗಾಂಶ್ಚಿರಂ ಭೂಮೌ ಯಾಸ್ಯಂತಿ ಬ್ರಹ್ಮಣಃ ಪದಂ॥೮೯॥**

**ಏತತ್ಪುಣ್ಯಂ ಪಾಪಹರಂ ಧನ್ಯಂ ದುಃಸ್ವಪ್ನನಾಶನಂ ।**
**ಜಪತಾಂ ಶೃಣ್ವತಾಂ ಚೈವ ಸಾವಿತ್ರೀವ್ರತಮಾದರಾತ್　　॥ ೯೦ ॥**

---

೮೭. ಅಯ್ಯಾ ಯುಧಿಷ್ಠಿರನೇ ! ಆ ವಟವೃಕ್ಷದ ಮೂಲದಲ್ಲಿ ಒಂದು ಸೌದೆಯ ಹೊರೆಯನ್ನು ಇಟ್ಟು, ಅಲ್ಲಿ ಸತ್ಯವಾನ್ ಸಮೇತ ಶ್ರೀ ಸತೀಸಾವಿತ್ರಿಯನ್ನು ಫಲ, ನೈವೇದ್ಯ, ದೀಪಾದಿಗಳಿಂದ ಪೂಜಿಸಬೇಕು.

೮೮. ಅಯ್ಯಾ ರಾಜೇಂದ್ರನೇ! ಆದಿನ ರಾತ್ರಿ ನೃತ್ಯ, ಗೀತ ಪುರಸ್ಸರವಾಗಿ ಅಲ್ಲಿ ಜಾಗರಣೆಮಾಡಿ ಬೆಳಗಾದ ಮೇಲೆ ಹಿಂದೆ ಹೇಳಿದಂತೆ ಆ ಎಲ್ಲವನ್ನೂ ಬ್ರಾಹ್ಮಣೋತ್ತಮನಿಗೆ ದಾನಕೊಟ್ಟು ಅವನಿಗೆ ನಮಸ್ಕಾರಮಾಡಿ ಕ್ಷಮೆ ಬೇಡಬೇಕು.

೮೯. ಅಯ್ಯಾ ಯುಧಿಷ್ಠಿರನೇ ! ಶಾಸ್ತ್ರೋಕ್ತರೀತಿಯಾಗಿ ಈ ವ್ರತ ವಿಧಾನವನ್ನು ನಾನು ನಿನಗೆ ಹೇಳಿದೆನು. ಈ ಲೋಕದಲ್ಲಿ ಈ ವ್ರತವನ್ನು ಆಚರಿಸಿದ ಹೆಂಗಸರು ಈ ಭೂಲೋಕದಲ್ಲಿ ಪುತ್ರಪೌತ್ರಸಮನ್ವಿತರಾಗಿ ಬಹು ಕಾಲದವರೆಗೆ ಅನೇಕ ಭೋಗಗಳನ್ನು ಅನುಭವಿಸಿ ದೇಹಾಂತದಲ್ಲಿ ಬ್ರಹ್ಮ ಲೋಕವನ್ನು ಸೇರುತ್ತಾರೆ.

೯೦. ಈ ಸಾವಿತ್ರೀವ್ರತವನ್ನು ಆದರದಿಂದ ಪಠಿಸುವರಿಗೂ, ಶ್ರವಣ ಮಾಡುವವರಿಗೂ, ಅವರ ಪಾಪಪರಿಹಾರವೂ, ಪುಣ್ಯಪ್ರಾಪ್ತಿಯೂ, ಕೃತಕೃತ್ಯತಾ ಸಂಪಾದಕವೂ, ದುಃಸ್ವಪ್ನಾದಿ ಅನಿಷ್ಟನಿವಾರಕವೂ ಆಗುವುದು.

ಸ್ಮೃತ್ಯರ್ಥವೇದಜನನೀಂ ಸಹಶಂಭುಜಾಯಾಂ
ಸಂಪೂಜಯೇದಿಹ ತ್ರಿರಾತ್ರಕೃತೋಪವಾಸಾ ।
ಸಾವಿತ್ರಿವತ್ಪಿತೃಕುಲಂ ಚ ತಥಾ ಸ್ವಭರ್ತು
ರುದ್ಧಾರಯೇಚ್ಚ ವಿಭುನಕ್ತಿ ಚಿರಂ ಸುಖಾನಿ ॥ ೯೧ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ವಟಸಾವಿತ್ರೀ ವ್ರತವರ್ಣನಂ
ನಾಮ ದ್ವ್ಯಧಿಕಶತತಮೋಧ್ಯಾಯಃ.



---

೯೧. ಸ್ಮೃತ್ಯರ್ಥಗಳನ್ನು ಸಾಕ್ಷಾತ್ತಾಗಿ ಪ್ರತಿಪಾದಿಸುವ ವೇದಗಳಿಗೆ ಮಾತೆಯಾಗಿಯೂ, ಸ್ವಯಂಭುವಾದ ಬ್ರಹ್ಮದೇವನ ಪತ್ನಿಯಾಗಿಯೂ ಇರುವ ಸಾವಿತ್ರಿಯನ್ನು ಈ ಲೋಕದಲ್ಲಿ ಯಾವಳು ಮೂರು ರಾತ್ರಿ ಉಪವಾಸವನ್ನು ಆಚರಿಸಿ ಪೂಜಿಸುವಳೋ, ಅಂತಹವಳು ಸತೀಸಾವಿತ್ರಿಯಂತೆ ತನ್ನ ಪಿತೃ ಮತ್ತು ಭರ್ತೃ ಈ ಉಭಯ ಕುಲಗಳನ್ನೂ ಉದ್ಧಾರಮಾಡಿ ಬಹುಕಾಲ ಸುಖವನ್ನು ಅನುಭವಿಸುವಳು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ವಟಸಾವಿತ್ರೀ
ವ್ರತವರ್ಣನೆಯೆಂಬ ನೂರೆರಡನೆಯ ಅಧ್ಯಾಯವು ಮುಗಿದುದು.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣ

## ಉತ್ತರಪರ್ವಣಿ

## ತ್ರ್ಯಧಿಕಶತತಮೋಽಧ್ಯಾಯಃ

|| ಶ್ರೀ ಕೃಷ್ಣ ಉವಾಚ ||

**ಪೂರ್ವಮಾಸೀತ್ಕೃತಯುಗೇ ಕ್ಷತ್ರಿಣೀ ಬಹುಪುತ್ರಿಣೀ |**
**ನಾಮ್ನಾ ಕಲಿಂಗಭದ್ರೇತಿ ರೂಪಲಾವಣ್ಯಸಂಯುತಾ || ೧ ||**

**ತುಂಗಸ್ತನೀ ಪದ್ಮನೇತ್ರಾ ಹಂಸನಾಗೇಂದ್ರಗಾಮಿನೀ |**
**ಸೌಭಾಗ್ಯಗುಣಸಂಪೂರ್ಣಾ ಚಂದ್ರಬಿಂಬನಿಭಾನನಾ || ೨ ||**

**ಧನರತ್ನೈಶ್ಚ ಸಂಪೂರ್ಣಾ ಮಧ್ಯದೇಶೇ ವೃಷಸ್ಥಲೇ |**
**ರಾಜ್ಞಃ ಪತ್ನೀ ತು ಸಾ ದೇವೀ ದಿಲೀಪಸ್ಯ ಮಹಾತ್ಮನಃ ||**
**ಕಲಿಂಗಭದ್ರಾ ಲಲಿತಾ ಮಹಾದೇವೀ ಗುಣಾನ್ವಿತಾ || ೩ ||**

---

### ನೂರಮೂರನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಪೂರ್ವದಲ್ಲಿ ಕೃತಯುಗದಲ್ಲಿ ಬಹು ಪುತ್ರವತಿಯೂ, ರೂಪಲಾವಣ್ಯಯುತಳೂ ಎನಿಸಿ ಕಳಿಂಗಭದ್ರಾ ಎಂಬ ನಾಮಧೇಯವುಳ್ಳ ಕ್ಷತ್ರಿಯ ರಮಣಿಯಿದ್ದಳು.

೨. ಆ ಕಲಿಂಗಭದ್ರೆಯು ಎತ್ತರವಾದ ಸ್ತನಗಳುಳ್ಳವಳೂ, ಕಮಲದ ಎಸಳಿನಂತಿರುವ ನೇತ್ರಗಳುಳ್ಳವಳೂ, ಹಂಸ ಮತ್ತು ಗಜೇಂದ್ರ ಇವುಗಳಂತೆ ಗಮನವುಳ್ಳವಳೂ, ಸೌಭಾಗ್ಯಗುಣಸಂಪನ್ನೆಯೂ, ಚಂದ್ರವದನೆಯೂ ಆಗಿದ್ದಳು.

೩. ಮತ್ತು ಅವಳು ಧನ, ರತ್ನ ಇವುಗಳಿಂದ ಕೂಡಿದವಳಾಗಿ ಮಧ್ಯ ಭೂಮಿಯಾದ ವೃಷಸ್ಥಳದಲ್ಲಿ, ಮಹಾತ್ಮನಾದ ದಿಲೀಪ ಮಹಾರಾಜನಿಗೆ ಪತ್ನಿಯಾಗಿದ್ದಳು. ಆ ಕಲಿಂಗಭದ್ರೆಯು ಅತಿಸುಂದರಿಯೂ, ಮಹಾರಾಣಿಯಪ್ಪರ ಬೇಕಾದ ಸಮಸ್ತ ಗುಣಯುತೆಯೂ ಆಗಿದ್ದಳು.

ಮಹಾಪ್ರಸಾದಂ ಮನ್ವಾನಾ ಬಹುಮಾನಪುರಸ್ಸರಂ ।
ಬ್ರಾಹ್ಮಣೇಭ್ಯಶ್ಚ ದಾನಾನಿ ಪ್ರಯಚ್ಛತಿ ಮಹಾಸತೀ ॥ ೪ ॥

ತ್ಯಾಗಸಂಭೋಗಸೌಭಾಗ್ಯೇ ದ್ವಿತೀಯಾ ನೈವ ತಾದೃಶೀ ।
ನಾರೀಣಾಂ ತು ನರಶ್ರೇಷ್ಠ ದಿಲೀಪಸ್ಯ ಯಥಾವಿಧಾ ॥ ೫ ॥

ಯಥಾ ಚ ಕಾರ್ತಿಕೇ ಮಾಸಿ ಗೃಹೀತಂ ಕೃತ್ತಿಕಾವ್ರತಂ ।
ಷಣ್ಮಾಸೇನ ವ್ರತಂ ಯಾವದಿದಂ ಸಂಚಿಂತ್ಯ ಚೇತಸಿ ॥
ಪಾರಿತಂ ಚ ತಯಾ ಸರ್ವಂ ಕಿಂಚಿನ್ಮಾತ್ರಂ ತು ವರ್ತತೆ ॥ ೬ ॥

ಪಾರಣೇಪಾರಣೇ ವಾಪಿ ಪುರಾಣಜ್ಞೇ ದ್ವಿಜೋತ್ತಮೇ ।
ಉದ್ಯಾಪನಂ ಪ್ರಯಚ್ಛಂತೀ ಕಾಲಂ ನಯತಿ ಸುಂದರೀ ॥ ೭ ॥

---

೪. ಆ ಮಹಾಪತಿವ್ರತೆಯು ತನಗೆ ಲಭಿಸಿದ ಮಹರಾಣೀ ಪದವಿಯು ದೇವರ ಮಹಾಪ್ರಸಾದವೆಂದು ತಿಳಿದುಕೊಂಡು, ಯಾವಾಗಲೂ ಬ್ರಾಹ್ಮಣರಿಗೆ ಬಹುಮಾನಪುರಸ್ಸರವಾಗಿ ದಾನಗಳನ್ನು ಕೊಡುತ್ತಿದ್ದಳು.

೫. ಅಯ್ಯಾ ರಾಜನೇ! ಆ ದಿಲೀಪಮಹಾರಾಜನ ಪತ್ನಿ ಯಾವ ಕಲಿಂಗ ಭದ್ರೆಯು ದಾನ, ಭೋಗ, ಸೌಭಾಗ್ಯ ಈ ವಿಷಯಗಳಲ್ಲಿ ಪರಮಾವಧಿಯನ್ನು ಪಡೆದಿದ್ದ ಮಟ್ಟಿಗೆ ಹೆಂಗಸರಲ್ಲಿ ಇತರರು ಯಾರೂ ಪಡೆದಿರಲಿಲ್ಲ.

೬. ಕದಾಚಿತ್ ಆ ಕಲಿಂಗಭದ್ರೆಯು ಇನ್ನು ಆರುಮಾಸಗಳು ಪೂರ್ತ ವಾಗುವವರೆಗೆ ಈ ವ್ರತವನ್ನು ನಾನು ಆಚರಿಸುತ್ತೇನೆಂದು ಮನಸ್ಸಿನಲ್ಲಿ ಸಂಕಲ್ಪಿಸಿ, ಕಾರ್ತಿಕಮಾಸದಲ್ಲಿ ಕೃತ್ತಿಕಾವ್ರತವನ್ನು ಪರಿಗ್ರಹಿಸಿದಳು. ಅವಳು ತನ್ನ ಸಂಕಲ್ಪಾನುಸಾರವಾಗಿ ಎಲ್ಲವನ್ನೂ ಮಾಡಿ ಪೂರಯಿಸಿದಳು. ಆದರೆ ಆರು ತಿಂಗಳು ಪೂರ್ಣವಾಗುವುದಕ್ಕೆ ಸ್ವಲ್ಪಕಾಲ ಮಾತ್ರ ಉಳಿದಿತ್ತು.

೭. ಮತ್ತು ಆ ಸುಂದರಿಯು ಪ್ರತಿಮಾಸದಲ್ಲೂ ಈ ವ್ರತಾಂಗವಾದ ಪಾರಣೆಯ ಕಾಲದಲ್ಲಿ ಪೂಜಿತವಾದ ಪ್ರತಿಮಾದಿ ಸಂಭಾರಗಳನ್ನು ಪುರಾಣಜ್ಞನಾದ ಬ್ರಾಹ್ಮಣೋತ್ತಮನಿಗೆ ದಾನಮಾಡುತ್ತಾ ಕಾಲಕಳೆಯುತ್ತಿದ್ದಳು.

**ಕದಾಚಿದರ್ಧರಾತ್ರೇ ತು ಸುಪ್ತಾ ಭರ್ತ್ರಾಸಹೈವ ಸಾ ।**
**ದಷ್ಟಾ ಸರ್ಪೇಣ ರೌದ್ರೇಣ ಜಗಾಮ ನಿಧನಂ ಕ್ಷಣಾತ್ ॥ ೮ ॥**

**ತೇನ ದೋಷೇಣ ಸಾ ಬಾಲಾ ಅಜಾಯೋನೌ ಹ್ಯಜಾಯತ**
**ವನೇಚರೀ ಧರ್ಮಪರಾ ಪೂರ್ವಜಾತಿಸ್ಮರಾ ದೃಢಾ ॥ ೯ ॥**

**ಪೂರ್ವಾಭ್ಯಾಸೇನ ತೇನೈವ ಗೃಹೀತಂ ಕೃತ್ತಿಕಾವ್ರತಂ ।**
**ವ್ಯಸ್ತಾ ಯೂಥಪರಿಭ್ರಷ್ಟಾ ಉಪವಾಸಪರಿಸ್ಥಿತಾ ॥ ೧೦ ॥**

**ಪರಕ್ಷೇತ್ರೇಣ ಗಚ್ಛಂತೀ ಅಜಾ ಸಸ್ಯಾವಮರ್ದನೀ ।**
**ಕಾರ್ತಿಕ್ಯಾಂ ಗಲಕೇ ಬದ್ಧ್ವಾ ಗ್ರಾಮ್ಯಕೇಣ ಚಿರಾಗತಾ ॥ ೧೧ ॥**

---

೮. ಹಿಂದೆ ಹೇಳಿದಂತೆ ಈ ಕೃತ್ತಿಕಾವ್ರತವು ಸ್ವಲ್ಪಾವಶಿಷ್ಟವಾದ ಕಾಲದಲ್ಲಿ ಕದಾಚಿತ್ ಆ ಕಲಿಂಗಭದ್ರೆಯು ರಾತ್ರಿ ತನ್ನ ಪತಿಯೊಡನೆ ಮಲಗಿರುವಾಗ ಅರ್ಧರಾತ್ರಿಯ ವೇಳೆಯಲ್ಲಿ ಭಯಂಕರವಾದ ಒಂದು ಮಹಾಸರ್ಪವು ಬಂದು ಅವಳನ್ನು ಕಡಿಯಿತು. ಅದರಿಂದ ಅವಳು ಕ್ಷಣಮಾತ್ರದಲ್ಲೇ ಮೃತಳಾದಳು.

೯. ಆ ದುರ್ಮರಣದೋಷದಿಂದ ಆ ಕಲಿಂಗಭದ್ರೆಯು ಆಡಿನ ಜನ್ಮ ವೆತ್ತಿದಳು. ಆ ರೂಪದಲ್ಲಿ ಕಾಡಿನಲ್ಲಿ ಸಂಚರಿಸುತ್ತಿದ್ದರೂ, ಧರ್ಮಪರಾಯಣೆಯೂ, ಪೂರ್ವಜನ್ಮ ವೃತ್ತಾಂತಸ್ಮರಣೆಯುಳ್ಳವಳೂ ಆಗಿದ್ದಳು.

೧೦. ಹಿಂದಿನ ಜನ್ಮದ ಸಂಸ್ಕಾರಬಲದಿಂದ ಆ ಅಜಜನ್ಮದಲ್ಲೂ ಕೃತ್ತಿಕಾವ್ರತವನ್ನು ಪರಿಗ್ರಹಿಸಿ, ಉಪವಾಸದಿಂದಿರುತ್ತಾ ತನ್ನ ಜತೆಯ ಆಡುಗಳ ಗುಂಪನ್ನು ಪರಿತ್ಯಾಗಮಾಡಿ ಒಂಟಿಯಾಗಿದ್ದಿತು.

೧೧. ಆಗ ಆ ಆಡಿನರೂಪದ ಕಲಿಂಗಭದ್ರೆಯು ಒಂದುದಿನ ಒಬ್ಬ ರೈತನ ಹೊಲವನ್ನು ಹಾಯ್ದು ಹೋಗುವಾಗ, ಆ ಕ್ಷೇತ್ರದ ಸಸಿಗಳೆಲ್ಲಾ ಮರ್ದಿತವಾಯಿತು. ಇದನ್ನು ಕಂಡು ಆ ರೈತನು ಆ ಆಡಿನ ಕತ್ತಿಗೆ ಹಗ್ಗಹಾಕಿ ಕಟ್ಟಿಹಾಕಿದನು. ಇದರಿಂದ ಆ ಆಡಿಗೆ ಕಾರ್ತಿಕದಲ್ಲಿ ಆ ವ್ರತ ಪಾರಣೆಯನ್ನು ಮಾಡುವುದಕ್ಕೆ ವಿಘ್ನವುಂಟಾಯಿತು.

ದೃಷ್ಟ್ವಾತ್ರಿಣಾ ಮಹಾಭಾಗಾ ಪೂರ್ವಜಾತಿಸ್ಮರೇಣ ಸಾ ।
ಕಾರಣಂ ಬುಧ್ಯ ತಾಂ ಬುಧ್ವಾ ಸಹಕಾಲಿಂದಭದ್ರಿಕಾಂ ॥ ೧೨ ॥

ನೋಕ್ಷಿತಾ ಬದರೀಬದ್ಧಾ ಚರಂತೀ ಕೃತ್ತಿಕಾವ್ರತಂ ।
ಗೋಪಾಲಬಂಧನಾತ್ಸಾಧ್ವೀ ಅನಿರ್ವೇದಪರಾ ತು ಸಾ ॥ ೧೩ ॥

ಸಂಪ್ರಾಶ್ಯ ಬದರೀಪತ್ರಂ ಪೀತ್ವಾ ಪುಷ್ಕರಿಣೀಪಯಃ ।
ಮಮೇತ್ಯುಕ್ತ್ವಾ ಹ್ಯಸಂಭ್ರಾಂತಾ ಪಾರಯಾಮಾಸ ತದ್ವ್ರತಂ ॥
ತಸ್ಯೈ ಯೋಗಂ ತತೋ ದತ್ವಾ ಜಗಾಮಾತ್ರಿಸ್ತಪೋವನಂ ॥ ೧೪ ॥

ಸಾಽಪಿ ಯೋಗೇಶ್ವರೀ ಭೂತ್ವಾ ನಿಂದಿತ್ವಾ ಜನ್ಮ ಚಾತ್ಮನಃ ।
ತತ್ಯಾಜ ಯೋಗಾತ್ಸ್ವಪ್ರಾಣಾನ್ಸ್ಥಿತಾ ಗೌತಮಸ್ಯ ಹಿ ॥
ಋಷೇರ್ಬಭೂವ ದುಹಿತಾ ಹ್ಯಹಲ್ಯಾಗರ್ಭಸುಂದರೀ ॥ ೧೫ ॥

---

೧೨. ಆಗ ಜಾತಿಸ್ಮರವೂ ಮಹಾಭಾಗ್ಯಶಾಲಿಯೂ ಆದ ಅಜರೂಪಿನ ಕಲಿಂಗಭದ್ರೆಯನ್ನು ಅತ್ರಿಮಹರ್ಷಿಯು ನೋಡಿದನು. ಅವನು ಕೂಡಲೆ ತನ್ನ ದಿವ್ಯದೃಷ್ಟಿಯಿಂದ ಅದರ ಪೂರ್ವವೃತ್ತಾಂತವನ್ನೂ, ಈ ಜನ್ಮವನ್ನು ಪಡೆಯಲು ಕಾರಣವನ್ನೂ ತಿಳಿದುಕೊಂಡನು.

೧೩. ಅನಂತರ ಆ ಅತ್ರಿಮಹರ್ಷಿಯು ಬದರೀವೃಕ್ಷದಲ್ಲಿ ಬಂಧಿತವಾಗಿದ್ದ ಆ ಆಡನ್ನು ಕೃಷಿಕನ ಬಂಧನದಿಂದ ಬಿಡಿಸಿದನು. ಅದು ತನಗೆ ಬಂಧನ ವಾಯಿತಲ್ಲಾ ಎಂದು ಎಣಿಸಿ ಆ ವ್ರತಾನುಷ್ಠಾನಕ್ಕೆ ಬೇಸರಪಡಲಿಲ್ಲ.

೧೪. ಆಗ ಅದು ಬದರೀಪತ್ರವನ್ನು ಪ್ರಾಶನೆಮಾಡಿ, ಸರೋವರದ ಜಲವನ್ನು ಕುಡಿದು, ಸಂಕಲ್ಪಾನುಸಾರವಾಗಿ ನನ್ನ ವ್ರತವು ಪೂರ್ತಿಯಾಯಿ ತೆಂದು ಭಾವಿಸಿ, ಆ ವ್ರತಾಂಗವಾದ ಪಾರಣೆಯನ್ನು ನೆರವೇರಿಸಿತು. ಅನಂತರ ಇದನ್ನು ನೋಡುತ್ತಿದ್ದ ಆ ಅತ್ರಿಮುನಿಯು ಅದಕ್ಕೆ ಯೋಗವನ್ನು ಉಪದೇಶ ಮಾಡಿ ತಪೋವನಕ್ಕೆ ಹೋದನು.

೧೫. ಬಳಿಕ ಆ ಆಡು, ಅತ್ರಿ ಉಪದೇಶಿಸಿದ ಯೋಗವನ್ನು ಆಚರಿಸಿ ಸಿದ್ಧಿಯನ್ನು ಹೊಂದಿ ಯೋಗೇಶ್ವರಿಯಾಗಿ, ತನಗೆ ಲಭಿಸಿದ ಅಜಜನ್ಮವನ್ನು ನಿಂದಿಸಿ, ಯೋಗಬಲದಿಂದ ತನ್ನ ಪ್ರಾಣ ಪರಿತ್ಯಾಗಮಾಡಿ, ಗೌತಮಮುನಿಯ ಪತ್ನಿಯಾದ ಅಹಲ್ಯೆಗೆ ಪುತ್ರಿಯಾಗಿ ಜನಿಸಿ ಸುಂದರಿಯಾಗಿ ಬೆಳೆಯುತ್ತಿದ್ದಳು.

ಯೋಗಲಕ್ಷ್ಮೀತಿ ನಾಮ್ನಾ ಸಾ ಕನ್ಯಾ ಗುಣಗಣೈರ್ಯುತಾ ।
ವಿದ್ಯೇವ ದತ್ತಾ ಸಾ ಪಿತ್ರಾ ಶಾಂಡಿಲ್ಯಾಯ ಮಹರ್ಷಯೇ ॥
ತಪೋಧನಾಯ ದಾಂತಾಯ ನಿತ್ಯಂ ಸಹಚರೀ ಬಭೌ ॥ ೧೬ ॥

ಬ್ರಾಹ್ಮಲಕ್ಷ್ಮ್ಯಾ ದೀಪ್ಯಮಾನಾ ಸಾಕ್ಷಾದ್ವೇದಸ್ಮೃತಿರ್ಯಥಾ ।
ಸರಸ್ವತೀ ಚ ಸ್ವಾಹಾ ಚ ಶಚೀ ಚಾರುಂಧತೀ ಯಥಾ ॥ ೧೭ ॥

ಗೌರೀ ರಾಜ್ಞೀ ತಥಾ ಲಕ್ಷ್ಮೀರ್ಗಾಯತ್ರೀ ಚೋತ್ತಮಾ ಸತೀ ।
ಮಹಾಲಕ್ಷ್ಮೀಸ್ತಥಾ ರಾಜಞ್ಶಾಂಡಿಲ್ಯಸ್ಯ ಗೃಹೇ ಬಭೌ ॥ ೧೮ ॥

ಪಿತೃದೇವಮನುಷ್ಯಾಣಾಂ ನಿತ್ಯಂ ಶುಶ್ರೂಷಣೇ ರತಾ ।
ಅಥ ತೇನಾತ್ರಿಣಾ ದೃಷ್ಟ್ವಾ ಪುನರ್ಗರ್ಭವತೀ ಗೃಹೇ ॥ ೧೯ ॥

---

೧೬. ಆ ಗೌತಮಪುತ್ರಿಯು 'ಯೋಗಲಕ್ಷ್ಮೀ' ಎಂಬ ನಾಮಧೇಯವುಳ್ಳವಳಾಗಿ ಕನ್ಯೆಯರಲ್ಲಿ ಇರಬೇಕಾದ ಸಕಲ ಸುಗುಣಗಳಿಂದ ವಿರಾಜಿಸುತ್ತಿದ್ದಳು. ಅವಳ ತಂದೆಯಾದ ಗೌತಮನು ತಪೋಧನನೂ, ಜಿತೇಂದ್ರಿಯನೂ, ಮಹರ್ಷಿಯೂ ಆದ ಶಾಂಡಿಲ್ಯನಿಗೆ ತಾನು ವಿದ್ಯೆಯನ್ನು ದಾನಮಾಡಿವಂತೆಯೇ ಕನ್ಯಾದಾನಮಾಡಿ ವಿವಾಹಮಾಡಿದನು. ಅಂದಿನಿಂದ ಆ ಯೋಗಲಕ್ಷ್ಮಿಯು ಆ ಶಾಂಡಿಲ್ಯನ ಸಹಧರ್ಮಚಾರಿಣಿಯಾಗಿ ಪ್ರಕಾಶಿಸುತ್ತಿದ್ದಳು.

೧೭–೧೮. ಅಯ್ಯಾ ರಾಜನೇ! ಆ ಯೋಗಲಕ್ಷ್ಮಿಯು ಶಾಂಡಿಲ್ಯಮುನಿಯ ಗೃಹದಲ್ಲಿ ಬ್ರಹ್ಮತೇಜೋಯುಕ್ತಳಾಗಿ ಸಾಕ್ಷಾತ್ ವೇದ, ಸ್ಮೃತಿ, ಸರಸ್ವತಿ, ಸ್ವಾಹಾ (ಅಗ್ನಿಪತ್ನಿ), ಶಚೀ, ಅರುಂಧತೀ, ಗೌರೀ, ರಾಜ್ಞೀ (ಸೂರ್ಯಪತ್ನಿ), ಗಾಯತ್ರೀ, ಉತ್ತಮಸತೀ, ಮಹಾಲಕ್ಷ್ಮೀ ಇವರಿಗೆ ಸಮಾನಳಾಗಿ ಪ್ರಕಾಶಮಾನಳಾಗಿದ್ದಳು.

೧೯. ಮತ್ತು ಅವಳು ಆ ಪತಿಗೃಹದಲ್ಲಿ ನಿತ್ಯವೂ ದೇವತೆಗಳು, ಪಿತೃಗಳು, ಅತಿಥಿಗಳು ಇವರ ಶುಶ್ರೂಷೆಯಲ್ಲಿ ಸದಾ ಆಸಕ್ತಳಾಗಿದ್ದಳು. ಕಾಲಕ್ರಮದಲ್ಲಿ ಆಕೆ ಪತಿಗೃಹದಲ್ಲಿ ಗರ್ಭಿಣಿಯಾಗಿರುವಾಗ ಒಂದಾನೊಂದು ದಿನ ಆ ಅತ್ರಿಮಹರ್ಷಿಯು ಪುನಃ ಅವಳನ್ನು ಕಂಡನು.

ಭಕ್ತ್ಯಾ ಭಿಕ್ಷಾಂ ಪ್ರಯಚ್ಛಂತೀ ಬ್ರಾಹ್ಮಣಾನಾಮನಿಂದಿತಾ ।
ಯೋಗಾದ್ವಿದಿತ್ವಾ ತಾಮೂಚೇ ಭಗವಾನ್ಪೂರ್ವವಚ್ಛನೈಃ ॥ ೨೦ ॥

ಯೋಗಲಕ್ಷ್ಮಿ ಮಹಾಭಾಗೇ ವರ್ತಂತೇ ಕತಿ ಕೃತ್ತಿಕಾಃ ।
ಸಾಪಿ ಜಾತಿಸ್ಮರಾ ಪ್ರಾಹ ಭಗವಂತಂ ಮಹಾಸತೀ ॥
ಷಷ್ವರ್ತಂತೇ ಮಹಾಯೋಗಿನ್ನೇಕಾ ಪರವಶೇ ಸ್ಥಿತಾ ॥ ೨೧ ॥

ತಚ್ಛ್ರುತ್ವಾಸ್ಯೈ ಭಗವತಾ ಸಕಾರುಣ್ಯೇನ ಚೇತಸಾ ।
ದತ್ತಂ ವ್ರತಂ ತಥಾ ಮಂತ್ರೋ ಯೇನ ಸ್ವರ್ಗಂ ಜಗಾಮ ಸಾ ॥ ೨೨ ॥

ಇಹ ಭುಕ್ತ್ವಾ ಚಿರಂ ಭೋಗಾನ್ಪುತ್ರಪೌತ್ರಶ್ರಿಯಾ ವೃತಾ ।
ತತಃ ಸಾ ತತ್ಪದಂ ಪ್ರಾಪ್ತಾ ಪುನರಾವೃತ್ತಿದುರ್ಲಭಂ ॥ ೨೩ ॥

೨೦. ಆಕೆ ಭಕ್ತಿಯಿಂದ ಬ್ರಾಹ್ಮಣರಿಗೆ ಭಿಕ್ಷೆಯನ್ನು ದಾನಮಾಡುತ್ತಿದ್ದಳು. ಆಗ ಪರಮಪೂಜ್ಯನಾದ ಆ ಅತ್ರಿಮಹರ್ಷಿಯು ತನ್ನ ಯೋಗಬಲದಿಂದ ಅವಳನ್ನು ಗುರ್ತಿಸಿ, ಮೊದಲಿನಂತೆ ಮೆಲ್ಲನೆ ಅವಳನ್ನು ಕುರಿತು ಮಾತನಾಡುವವನಾಗಿ.

೨೧. "ಮಹಾಭಾಗ್ಯಶಾಲಿನಿಯಾದ ಯೋಗಲಕ್ಷ್ಮಿಯೇ! ಕೃತ್ತಿಕಾ ದೇವತೆಗಳು ಎಷ್ಟುಮಂದಿ ಇದ್ದಾರೆ?'' ಎಂದನು. ಮುನಿಯ ಈ ಪ್ರಶ್ನೆಯನ್ನು ಕೇಳಿ ಮಹಾಪತಿವ್ರತೆಯೂ ಜಾತಿಸ್ಮರಳೂ ಆಗಿರುವ ಆ ಯೋಗಲಕ್ಷ್ಮಿಯು "ಅಯ್ಯಾ ಮಹಾಯೋಗಿಯೇ! ನೀನು ಕೇಳಿದ ಕೃತ್ತಿಕೆಯರು ಆರುಮಂದಿ ಇದ್ದಾರೆ. ಅವರಲ್ಲಿ ಒಬ್ಬಳು ಪರಾಧೀನೆಯಾಗಿದ್ದಾಳೆ'' ಎಂದು ಅವನಿಗೆ ಉತ್ತರ ಹೇಳಿದಳು.

೨೨. ಅವಳ ಆ ಮಾತನ್ನು ಕೇಳಿ ಪೂಜ್ಯನಾದ ಆ ಅತ್ರಿಮುನಿಯು ದಯಾಪೂರ್ಣನಾಗಿ ಕೃತ್ತಿಕಾವ್ರತವನ್ನೂ, ಅದರ ಮಂತ್ರವನ್ನೂ ಅವಳಿಗೆ ಉಪದೇಶಮಾಡಿದನು. ಅದರ ಅನುಷ್ಠಾನದಿಂದ ಆ ಯೋಗಲಕ್ಷ್ಮಿಯು ಸಫಲ ಮನೋರಥಳಾಗಿ.

೨೩. ಈ ಮರ್ತ್ಯಲೋಕದಲ್ಲಿ ಪುತ್ರಪೌತ್ರಾದಿ ಸಂಪದ್ಯುಕ್ತಳಾಗಿ, ಬಹುಕಾಲ ಸಕಲಭೋಗಗಳನ್ನೂ ಅನುಭವಿಸಿ, ಅನಂತರ ಪುನರಾವೃತ್ತಿಯಿಲ್ಲದ ಆ ಕೃತ್ತಿಕಾಸ್ಥಾನವನ್ನು ಪಡೆದಳು.

॥ ಯುಧಿಷ್ಠಿರ ಉವಾಚ ॥

ಕೀದೃಶಂ ತದ್ವ್ರತಂ ಕೃಷ್ಣ ಮಂತ್ರಶ್ಚಾಪಿ ಜನಾರ್ದನ ।
ವಿಧಾನಂ ಕೃತ್ತಿಕಾನಾಂ ಚ ತಂ ಚ ಕಾಲಂ ವದಸ್ವ ಮೇ ॥ ೨೪ ॥

॥ ಶ್ರೀಕೃಷ್ಣ ಉವಾಚ ॥

ಕೃತ್ತಿಕಾಸು ಸ್ವಯಂ ಸೋಮಃ ಕೃತ್ತಿಕಾಸು ಬೃಹಸ್ಪತಿಃ ।
ಯದಾ ಸ್ಯಾತ್ಸೋಮವಾರೇಣ ಸಾ ಮಹಾಕಾರ್ತಿಕೀ ಸ್ಮೃತಾ ॥ ೨೫ ॥

ಈದೃಶೀ ಬಹುಭಿರ್ವರ್ಷೈರ್ಬಹುಪುಣ್ಯೈಶ್ಚ ಲಭ್ಯತೇ ।
ತಥಾ ಸಾ ನ ವೃಥಾ ನೇಯಾ ಯದೀಚ್ಛೇಚ್ಛ್ರೇಯ ಆತ್ಮನಃ ॥ ೨೬ ॥

ಅನ್ಯಾಪಿ ಕಾರ್ತಿಕೀ ಪಾರ್ಥ ಸಮುಪೋಷ್ಯ ವಿಧಾನತಃ ।
ತಸ್ಯಾ ವಿಧಾನಂ ರಾಜೇಂದ್ರ ಶೃಣುಷ್ವೈಕಮನಾ ಭವ ॥ ೨೭ ॥

೨೪. ಯುಧಿಷ್ಠಿರನು ಕೇಳುತ್ತಾನೆ—ಓ ಜನಾರ್ದನನೇ! ಆ ಕೃತ್ತಿಕಾ ವ್ರತವು ಎಂತಹುದು? ಅದಕ್ಕೆ ಉಕ್ತವಾದ ಮಂತ್ರವು ಯಾವುದು? ಹಾಗೆಯೇ ಅದರ ಅನುಷ್ಠಾನ ಕ್ರಮ, ಅನುಷ್ಠಾನ ಕಾಲ ಇವುಗಳನ್ನು ನನಗೆ ವಿವರವಾಗಿ ಹೇಳು ಎಂದನು.

೨೫. ಶ್ರೀ ಕೃಷ್ಣನು ಹೇಳುತ್ತಾನೆ—ಕೃತ್ತಿಕೆಯರಲ್ಲಿ ಚಂದ್ರನು ಸಾಕ್ಷಾತ್ತಾಗಿ ಸನ್ನಿಹಿತನಾಗಿರುವನು. ಹಾಗೆಯೇ ಬೃಹಸ್ಪತಿಯೂ ಕೃತ್ತಿಕೆಯರಲ್ಲಿ ಸಾನ್ನಿಧ್ಯ ಹೊಂದಿರುತ್ತಾನೆ. ಕಾರ್ತಿಕಮಾಸದಲ್ಲಿ ಕೃತ್ತಿಕಾ ನಕ್ಷತ್ರವು ಸೋಮವಾರಯುತವಾಗಿ ಬಂದಾಗ ಆ ದಿನಕ್ಕೆ ಮಹಾಕಾರ್ತಿಕೀ ಎಂಬದಾಗಿ ಉಕ್ತವಾಗಿದೆ.

೨೬. ಇಂತಹ ದಿನವು ಅನೇಕ ವರ್ಷಗಳಿಗೆ ಒಮ್ಮೆ ಬಹು ಪುಣ್ಯವಶದಿಂದ ಲಭಿಸುತ್ತದೆ. ತನಗೆ ಶ್ರೇಯಃಪ್ರಾಪ್ತಿಯಾಗಬೇಕೆಂದಿರುವವನು ಆ ಮಹಾಕಾರ್ತಿಕೀ ದಿನವು ಬಂದಾಗ ಪುಣ್ಯಕರ್ಮವನ್ನು ಮಾಡದೆ ವ್ಯರ್ಥವಾಗಿ ಕಳೆಯಬಾರದು.

೨೭. ಅಯ್ಯಾ ಕುಂತೀಪುತ್ರನೇ! ಈ ಮಹಾಕಾರ್ತಿಕೀ ದಿನವಲ್ಲದೆ ಸುಲಭವಾದ ಇನ್ನೊಂದು ಕಾರ್ತಿಕೀ ದಿನವೂ ಇದೆ. ಆ ತಿಥಿಯಲ್ಲಿಯೂ ಉಪವಾಸಪೂರ್ವಕವಾಗಿ ಈ ಕೃತ್ತಿಕಾವ್ರತವನ್ನು ಮಾಡಬೇಕು. ಅಯ್ಯಾ ರಾಜೇಂದ್ರನೇ! ಅದರ ವಿಧಾನವನ್ನು ಹೇಳುತ್ತೇನೆ. ಏಕಾಗ್ರತೆಯಿಂದ ಶ್ರವಣ ಮಾಡು.

ಕಾರ್ತಿಕೇ ಶುಕ್ಲಪಕ್ಷಸ್ಯ ಪೂರ್ಣಮಾಸ್ಯಾಂ ದಿನೋದಯೇ ।
ನಕ್ತಾಯ ನಿಯಮಂ ಕುರ್ಯಾದ್ದಂತಧಾವನಪೂರ್ವಕಂ ॥ ೨೮ ॥

ಉಪವಾಸಸ್ಯ ವಾ ಶಕ್ತ್ಯಾ ತತಃ ಸ್ನಾತ್ವಾ ಜಲಾಶಯೇ ।
ಕುರುಕ್ಷೇತ್ರೇ ಪ್ರಯಾಗೇ ವಾ ಪುಷ್ಕರೇ ನೈಮಿಷೇ ತಥಾ ॥ ೨೯ ॥

ಶಾಲಗ್ರಾಮೇ ಕುಶಾವರ್ತೇ ಮೂಲಸ್ಥಾನೇ ಸಕುಂತಲೇ ।
ಗೋಕರ್ಣೇ ವಾರ್ಬುದೇ ಪುಣ್ಯೇಽಥ ವಾಪ್ಯಮರಕಂಟಕೇ ॥ ೩೦ ॥

ಪುರೇ ವಾ ನಗರೇ ವಾಪಿ ಗ್ರಾಮೇ ಘೋಷೇಽಥ ಪತ್ತನೇ ।
ಯತ್ರ ವಾ ತತ್ರ ವಾ ಸ್ನಾಯಾನ್ನರೋ ಯೋಷಿದಥಾಪಿ ವಾ ॥
ದೇವರ್ಷಿಪಿತೃಪೂಜಾಂ ಚ ಕೃತ್ವಾ ಹೋಮಂ ಯುಧಿಷ್ಠಿರ ॥ ೩೧ ॥

ತತೋಽಸ್ತಸಮಯೇ ಪ್ರಾಪ್ತೇ ಪಾತ್ರಂ ಗವ್ಯಸ್ಯ ಸರ್ಪಿಷಃ ।
ಕ್ಷೀರಸ್ಯ ವಾ ಸುಸಂಪೂರ್ಣಂ ಕೃತ್ವಾ ಗುಡಫಲಾನ್ವಿತಂ ॥
ಷಟ್ಪ್ರಮಾಣಂ ಯಥಾ ಪ್ರೋಕ್ತಂ ಕೃತ್ತಿಕಾಕಲಶಂ ನ್ಯಸೇತ್ ॥ ೩೨ ॥

---

೨೮. ಕಾರ್ತಿಕ ಶುದ್ಧ ಹುಣ್ಣಿಮೆಯ ದಿನ ಸೂರ್ಯೋದಯ ಕಾಲದಲ್ಲಿ ದಂತ ಧಾವನಾದಿಗಳನ್ನು ನೆರವೇರಿಸಿ ನಕ್ತಭೋಜನ ನಿಯಮವನ್ನು ಪರಿಗ್ರಹಿಸಬೇಕು.

೨೯–೩೧. ಅಯ್ಯಾ ಯುಧಿಷ್ಠಿರನೇ! ಶಕ್ತಿಸಂಪನ್ನನಾದರೆ ಆದಿನ ನಕ್ತ ಭೋಜನವನ್ನು ಮಾಡದೆ ಸಂಪೂರ್ಣ ನಿರಾಹಾರ ನಿಯಮವನ್ನೇ ಪರಿಗ್ರಹಿಸ ಬೇಕು. ಈ ವ್ರತವನ್ನು ಆಚರಿಸುವ ಗಂಡಸು ಅಥವಾ ಹೆಂಗಸು, ಕುರುಕ್ಷೇತ್ರ ಅಥವಾ ಪ್ರಯಾಗ, ಪುಷ್ಕರ, ನೈಮಿಶಾರಣ್ಯ, ಶಾಲಗ್ರಾಮ, ಕುಶಾವರ್ತ, ಮೂಲಸ್ಥಾನ, ಶಕುಂತಲ, ಗೋಕರ್ಣ, ಅರ್ಬುದ, ಅಮರಕಂಟಕ, ಈ ಪುಣ್ಯ ಕ್ಷೇತ್ರಗಳ ಜಲಾಶಯಗಳಲ್ಲಿಯಾಗಲಿ, ಅಥವಾ ಪಟ್ಟಣ, ನಗರ, ಗ್ರಾಮ, ಗೊಲ್ಲರ ಹಳ್ಳಿ, ಮುಂತಾದುವಕ್ಕೆ ಸಮೀಪವಾದ ಜಲಾಶಯಗಳಲ್ಲಿಯಾಗಲಿ ಸ್ನಾನ ಮಾಡಬೇಕು. ಅನಂತರ ದೇವತಾರ್ಚನೆ, ಋಷಿ, ಪಿತೃ, ತರ್ಪಣಾದಿಗಳನ್ನು ಮಾಡಿ ಹೋಮವನ್ನು ಮಾಡಬೇಕು.

೩೨. ಬಳಿಕ ಸೂರ್ಯಾಸ್ತಮಯ ಸಮಯದಲ್ಲಿ ಒಂದು ಪಾತ್ರೆಯಲ್ಲಿ ಅಂತ ರಿಕ್ಷದಲ್ಲಿರುವ ಆರು ಕೃತ್ತಿಕಾ ನಕ್ಷತ್ರಗಳಿಗೂ ತೃಪ್ತಿಯುಂಟಾಗುವಂತೆ ಹಸುವಿನ ತುಪ್ಪ ಆರುಸೌಟು, ಹಾಲು ಆರುಸೌಟು, ಇದನ್ನು ತುಂಬಿಸಿ ಗುಡ, ಫಲ, ಇವು ಗಳ ಸಹಿತವಾಗಿ ಆ ಕಲಶವನ್ನು ಸ್ಥಾಪಿಸಬೇಕು.

ಷಟ್ಕೃತ್ತಿಕಾನಾಂ ಬಿಂಬಾನಿ ಸ್ವರ್ಣರೌಪ್ಯಮಯಾನಿ ಚ ।
ರತ್ನಗರ್ಭಾಣಿ ಕುರ್ಯಾಚ್ಚ ಸ್ವಶಕ್ತ್ಯಾ ಪಾಂಡುನಂದನ ॥ ೩೩ ॥

ಪ್ರಥಮಾ ಸ್ವರ್ಣನಿಷ್ಪನ್ನಾ ದ್ವಿತೀಯಾ ರೌಪ್ಯಕೀಕೃತಾ ।
ತೃತೀಯಾ ರತ್ನಘಟಿತಾ ಚತುರ್ಥೀ ನವನೀತಜಾ ॥ ೩೪ ॥

ಪಂಚಮೀ ಕಣಿಕಾನ್ಯೂನಾ ಷಷ್ಠೀ ಪಿಷ್ಟಮಯೀ ಕೃತಾ ।
ಷಟ್ಕೃತ್ತಿಕಾಃ ಕೃತಬಿಂಬಾಃ ಕೃತ್ವಾಲಕ್ತಕಸೂತ್ರಿಕಾಃ ॥ ೩೫ ॥

ರತ್ನಗರ್ಭಾಃ ಕುಂಕುಮಾಕ್ತಾಃ ಪುಷ್ಪೈಃ ಸ್ತಬಕಾನ್ವಿತಾಃ ।
ಸಿಂದೂರಚಂದನಾಭ್ಯಕ್ತಾ ಜಾತೀಪುಷ್ಪೈಸ್ಸುಪೂಜಿತಾಃ ॥
ಮಂತ್ರೇಣಾನೇನ ರಾಜೇಂದ್ರ ದ್ವಿಜಾಯ ಪ್ರತಿಪಾದಯೇತ್ ॥ ೩೬ ॥

---

೩೩. ಅಯ್ಯಾ ಪಾಂಡುಪುತ್ರನೇ ! ಈ ವ್ರತಾನುಷ್ಠಾನ ಮಾಡುವವನು ಸ್ವಶಕ್ತ್ಯಾನುಸಾರವಾಗಿ ಆ ಆರು ಕೃತ್ತಿಕೆಯರ ಪ್ರತಿಮೆಗಳನ್ನು ಸಾಧ್ಯವಿದ್ದರೆ ರತ್ನಯುಕ್ತವಾಗಿ ಭಂಗಾರ, ಬೆಳ್ಳಿ ಇತ್ಯಾದಿಗಳಿಂದ ಮಾಡಿಸಬಹುದು.

೩೪–೩೫. ಅಥವಾ ಪ್ರಥಮ ಕೃತ್ತಿಕೆಯ ಪ್ರತಿಮೆಯನ್ನು ಸುವರ್ಣದಿಂದಲೂ, ದ್ವಿತೀಯ ಕೃತ್ತಿಕೆಯ ಪ್ರತಿಮೆಯನ್ನು ಬೆಳ್ಳಿಯಿಂದಲೂ, ಮೂರನೆಯ ಪ್ರತಿಮೆಯನ್ನು ರತ್ನಖಚಿತವಾಗಿಯೂ, ನಾಲ್ಕನೆಯ ಪ್ರತಿಮೆಯನ್ನು ಬೆಣ್ಣೆಯಿಂದಲೂ, ಐದನೆಯ ಪ್ರತಿಮೆಯನ್ನು ನೆಲ್ಲಿಯ ಮರದಿಂದಲೂ, ಆರನೆಯ ಪ್ರತಿಮೆಯನ್ನು ಹಿಟ್ಟಿನಿಂದಲೂ ಮಾಡಿಸಬೇಕು. ಹೀಗೆಯೇ ಆರು ಕೃತ್ತಿಕೆಯರ ಬಿಂಬಗಳನ್ನೂ ಮಾಡಿಸಿ, ಅರಗು ಸೂತ್ರ ಇವುಗಳಿಂದ ಅವನ್ನು ಅನ್ಯೋನ್ಯವಾಗಿ ಜೋಡಿಸಿಡಬೇಕು.

೩೬. ಅಯ್ಯಾ ರಾಜೇಂದ್ರನೇ ! ಆಮೇಲೆ ಆ ಬಿಂಬಗಳ ಒಳಗೆ ರತ್ನಗಳನ್ನಿಟ್ಟು, ಕುಂಕುಮ ಲೇಪನಮಾಡಿ, ಪುಷ್ಪಗಳ ಗೊಂಚಲುಗಳಿಂದ ಅವುಗಳನ್ನು ಅಲಂಕರಿಸಿ, ಚಂದ್ರದ ಪುಡಿ, ಚಂದನ ಇವುಗಳನ್ನು ಲೇಪಿಸಿ, ಜಾಜೀ ಹೂವುಗಳಿಂದ ಚೆನ್ನಾಗಿ ಪೂಜಿಸಿ, ಈ ಮುಂದೆ ಹೇಳುವ ಅರ್ಘ್ಯವುಳ್ಳ ಮಂತ್ರವನ್ನು ಪಠಿಸಿ ಬ್ರಾಹ್ಮಣನಿಗೆ ಅವುಗಳನ್ನು ದಾನಕೊಡಬೇಕು.

" ಓಂ ಸಪ್ತರ್ಷಿದಾರಾ ಹ್ಯನಲಸ್ಯ ವಲ್ಲಭಾ ।
ಯಾ ಬ್ರಹ್ಮಣಾ ರಕ್ಷಿತಯೇತಿ ಯುಕ್ತಾಃ ॥
ತುಷ್ಟಾಃ ಕುಮಾರಸ್ಯ ಯಥಾರ್ಥಮಾತರೋ ।
ಮಮಾಪಿ ಸುಪ್ರೀತತರಾ ಭವಂತು—ಸ್ವಾಹಾ " ॥ ೩೭ ॥

ಏವಮುಚ್ಚಾರ್ಯ ವಿಪ್ರಾಯ ಪ್ರದೇಯಾಃ ಕೃತ್ತಿಕಾ ನೃಪ ।
ಬ್ರಾಹ್ಮಣೋಽಪಿ ಪ್ರತೀಚ್ಛೇತ ಮಂತ್ರೇಣಾನೇನ ಪಾಂಡವ ॥ ೩೮ ॥

ಧರ್ಮದಾಃ ಕಾಮದಾಃ ಸಂತು ಇಮಾ ನಕ್ಷತ್ರಮಾತರಃ ।
ಕೃತ್ತಿಕಾ ದುರ್ಗಸಂಸಾರಾತ್ತಾರಯಂತ್ವಾವಯೋಃ ಕುಲಂ ॥ ೩೯ ॥

ಅನೇನ ವಿಧಿನಾ ದತ್ವಾ ದೃಷ್ಟ್ವಾ ಚೈವಾಂಬರೇ ಸ್ಥಿತಾಃ ।
ವಿಸೃಜ್ಯ ಬ್ರಾಹ್ಮಣಾನ್ಭಕ್ತ್ಯಾ ಚಾನುವ್ರಜ್ಯ ಪದಾನಿ ಷಟ್ ।
ನಿವರ್ತ್ಯ ಚ ಕಥಾರ್ಥಂ ತು ಶೃಣುಯಾತ್ಫಲಮಾಪ್ನುಯಾತ್ ॥ ೪೦ ॥

---

೩೭. ಸಪ್ತರ್ಷಿಗಳಿಗೆ ಪತ್ನಿಯರಾಗಿಯೂ, ಅಗ್ನಿದೇವನಿಗೆ ಪ್ರೀತಿಪಾತ್ರರಾಗಿಯೂ, "ಕುಮಾರಸ್ವಾಮಿಗೆ ಸ್ತನ್ಯಾದಿಗಳನ್ನು ಕೊಟ್ಟು ರಕ್ಷಿಸಿ" ಎಂದು ಬ್ರಹ್ಮದೇವನ ಆಜ್ಞೆಯನ್ನು ಹೊಂದಿ ಸಂತುಷ್ಟರಾಗಿ ಆ ಷಣ್ಮುಖನನ್ನು ಸ್ತನ್ಯಾದಿಗಳಿಂದ ರಕ್ಷಣೆಮಾಡಿದ್ದರಿಂದ ಆ ಕುಮಾರಸ್ವಾಮಿಗೆ ಯಥಾರ್ಥ ಮಾತೃಗಳಾಗಿಯೂ, ಇರುವ ಷಟ್‌ಕೃತ್ತಿಕೆಯರು ನನಗೆ ಸುಪ್ರೀತರಾಗಲಿ ಎಂದು ಈ ಮಂತ್ರದ ತಾತ್ಪರ್ಯ.

೩೮. ಅಯ್ಯಾ ರಾಜನೇ ! ಆ ಯಜಮಾನನು ಈ ಮಂತ್ರವನ್ನುಚ್ಚರಿಸಿ ಆ ಆರು ಕೃತ್ತಿಕಾಪ್ರತಿಮೆಗಳನ್ನೂ ಬ್ರಾಹ್ಮಣನಿಗೆ ದಾನಕೊಡಬೇಕು. ಅಯ್ಯಾ ಪಾಂಡವನೇ ! ಪ್ರತಿಗ್ರಹಮಾಡುವ ಆ ಬ್ರಾಹ್ಮಣನೂ ಸಹ ಮಂತ್ರಪೂರ್ವಕವಾಗಿ ಆ ದಾನವನ್ನು ಪ್ರತಿಗ್ರಹಿಸಬೇಕು.

೩೯. ಈ ಮಾತೃಸ್ವರೂಪರಾದ ಷಟ್‌ಕೃತ್ತಿಕಾ ನಕ್ಷತ್ರಗಳು ನಮಗೆ ಪುಣ್ಯಪ್ರದಗಳೂ, ಇಷ್ಟಾರ್ಥಪ್ರದಗಳೂ ಆಗಲಿ. ಹಾಗೆಯೇ ಈ ದುರವಗಾಹವಾದ ಸಂಸಾರಸಾಗರದಿಂದ ನಮ್ಮಿಬ್ಬರ ವಂಶಗಳನ್ನೂ ಪಾರುಮಾಡಲಿ ಎಂಬುದು ಈ ಮಂತ್ರಾರ್ಥ.

೪೦. ಯಜಮಾನನು ಈ ಕ್ರಮದಲ್ಲಿ ಆ ಪ್ರತಿಮೆಗಳನ್ನು ದಾನಮಾಡಿ ಅಂತರಿಕ್ಷದಲ್ಲಿರುವ ಕೃತ್ತಿಕಾ ನಕ್ಷತ್ರಗಳನ್ನು ದರ್ಶನಮಾಡಬೇಕು. ಬಳಿಕ

**ವಿಮಾನೇನಾರ್ಕವರ್ಣೇನ ಗತ್ವಾ ನಕ್ಷತ್ರಮಂಡಲಂ ।**
**ದಿವ್ಯೇನ ವಪುಷಾ ಯುಕ್ತಃ ಸ್ರಕ್ಚಂದನವಿಭೂಷಿತಃ　　|| ೪೧ ||**

**ದಿವ್ಯನಾರೀಗಣವೃತಃ ಸುಖಂ ಭುಂಕ್ತೇ ಹ್ಯನಾಮಯಂ ।**
**ದೋಧೂಯಮಾನಶ್ಚಮರೈಃ ರತ್ನಪಂಕ್ತ್ಯಾ ವಿರಾಜಿತಃ　　|| ೪೨ ||**

**ಪಾರಿಜಾತಕಮಂದಾರಪುಷ್ಪಭಾರೋಪಶೋಭಿತಃ ।**
**ಕೃತಾರ್ಥಃ ಪರಿಪೂರ್ಣಾಶಸ್ತಿಷ್ಠೇದಾಭೂತಸಂಪ್ಲವಂ　　|| ೪೩ ||**

**ತಾರಾಃ ಕೃತ್ವಾ ವ್ರತಾಂತೇ ವಾ ಗತ್ವಾ ಸ್ವರ್ಗಂ ಸಭರ್ತೃಕಾ ।**
**ರಮತೇ ನಿರ್ಭಯಾ ಸಾಧ್ವೀ ಸರ್ವಭೋಗಸಮನ್ವಿತಾ　　|| ೪೪ ||**

---

ಬ್ರಾಹ್ಮಣರನ್ನು ಅವರ ಮನೆಗೆ ಕಳುಹಿಸುವಾಗ ಭಕ್ತಿಯಿಂದ ಅರುಹೆಜ್ಜೆ ದೂರ ಅವರನ್ನು ಅನುಸರಿಸಿ ಹೋಗಬೇಕು. ಅನಂತರ ಹಿಂದಿರುಗಿ ಮನೆಗೆ ಬಂದು ಈ ವ್ರತ ಕಥಾಶ್ರವಣ ಮಾಡಬೇಕು. ಹೀಗೆ ಆಚರಿಸಿದರೆ ಅವನು ಈ ವ್ರತದ ಸಂಪೂರ್ಣ ಫಲಭಾಗಿಯಾಗುತ್ತಾನೆ.

೪೧. ಈ ವ್ರತಾನುಷ್ಠಾತೃವು ಸೂರ್ಯನಂತೆ ತೇಜಸ್ವಿಯಾದ ವಿಮಾನವನ್ನು ಏರಿಕೊಂಡು ನಕ್ಷತ್ರಮಂಡಲಕ್ಕೆ ಹೋಗಿ ದಿವ್ಯದೇಹಧರಿಸಿದವನಾಗಿ ಸ್ರಕ್ಚಂದನಾದಿಗಳಿಂದ ಅಲಂಕೃತನಾಗುವನು.

೪೨. ಅಲ್ಲದೆ ಅವನು ಆ ನಕ್ಷತ್ರಮಂಡಲದಲ್ಲಿ ಚಾಮರಗಳಿಂದ ಬೀಸಲ್ಪಡುವವನೂ, ರತ್ನಪಂಕ್ತಿಗಳಿಂದ ಪ್ರಕಾಶಿಸುತ್ತಿರುವವನೂ, ದಿವ್ಯಸ್ತ್ರೀ ವೃಂದದಿಂದ ಪರಿವೃತನೂ ಆಗಿ, ನಿರುಪದ್ರವವಾದ ಸುಖವನ್ನು ಅನುಭವಿಸುವನು.

೪೩. ಮತ್ತು ಅವನು ಅಲ್ಲಿ ಪಾರಿಜಾತ, ಮಂದಾರ, ಇತ್ಯಾದಿ ದೇವ ಕುಸುಮ ಸಮೂಹಗಳಿಂದ ಶೋಭಿತನೂ, ಪರಿಪೂರ್ಣಮನೋರಥನಾದವನೂ, ಕೃತಕೃತ್ಯನೂ ಆಗಿ, ಪ್ರಳಯವಾಗುವವರೆಗೂ ಸುಖವಾಗಿರುತ್ತಾನೆ.

೪೪. ಪತಿವ್ರತೆಯಾದ ಸ್ತ್ರೀಯು ಈ ಕೃತ್ತಿಕಾತಾರಾವ್ರತವನ್ನು ಮಾಡಿದರೆ ಆ ವ್ರತಪ್ರಭಾವದಿಂದ ಅವಳು ತನ್ನ ಪತಿಸಮೇತಳಾಗಿ ಸ್ವರ್ಗಲೋಕಕ್ಕೆ ಹೋಗಿ, ಅಲ್ಲಿ ನಿರಾತಂಕವಾಗಿ ಸರ್ವಭೋಗ ಸಮನ್ವಿತೆಯಾಗಿ ಕ್ರೀಡಿಸುತ್ತಾಳೆ.

ಯಚ್ಚೈತಚ್ಛೃಣುಯಾತ್ಪಾರ್ಥ ಭಕ್ತಿಯುಕ್ತಃ ಸಮಾಧಿನಾ ।
ನಾರೀ ವಾ ಪುರುಷೋ ವಾಪಿ ಮುಚ್ಯತೇ ಸರ್ವಕಿಲ್ಬಿಷೈಃ ॥ ೪೫ ॥

ಸೌವರ್ಣರೌಪ್ಯಮಣಿಗೋನವನೀತಸಿದ್ಧಾಃ ।
ಷಟ್ಕೃತ್ತಿಕಾಃ ಕಣಿಕಪಿಷ್ಟಮಯೀಶ್ಚ ಕೃತ್ವಾ ॥
ಪಾತ್ರೇ ನಿಧಾಯ ಕುಸುಮಾಕ್ಷತಧೂಪದೀಪೈಃ ।
ಸಂಪೂಜ್ಯ ಜನ್ಮಗಹನಂ ನ ವಿಶಂತಿ ಮರ್ತ್ಯಾಃ ॥ ೪೬ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ಕಾರ್ತಿಕ್ಯಾಂ ಕೃತ್ತಿಕಾ ವ್ರತವರ್ಣನಂ
ನಾಮ ತ್ರ್ಯಧಿಕಶತತಮೋಽಧ್ಯಾಯಃ.



---

೪೫. ಅಯ್ಯಾ ಪಾರ್ಥನೇ ! ಸ್ತ್ರೀಯಾಗಲಿ ಪುರುಷನಾಗಲಿ ಭಕ್ತಿಯುಕ್ತರಾಗಿ ಚಿತ್ತೈಕಾಗ್ರತೆಯಿಂದ ಈ ವ್ರತಕಥಾಶ್ರವಣವನ್ನು ಮಾಡಿದರೆ ಅವರು ತಮ್ಮ ಸಕಲಪಾಪಗಳಿಂದಲೂ ಮುಕ್ತರಾಗುತ್ತಾರೆ.

೪೬. ಪುರುಷರು ಕ್ರಮವಾಗಿ ಚಿನ್ನ, ಬೆಳ್ಳಿ, ರತ್ನ, ಹಸುವಿನಬೆಣ್ಣೆ, ನೆಲ್ಲೀಮರ, ಹಿಟ್ಟು, ಇವುಗಳಿಂದ ಆರು ಕೃತ್ತಿಕೆಯರ ಪ್ರತಿಮೆಗಳನ್ನು ಮಾಡಿಸಿ ಪಾತ್ರೆಯಲ್ಲಿಟ್ಟು ಅದನ್ನು ಪುಷ್ಪ, ಅಕ್ಷತೆ, ಧೂಪ, ದೀಪ, ಇವುಗಳಿಂದ ಪೂಜಿಸಿದರೆ ಅವರಿಗೆ ಎಂದಿಗೂ ಪುನರ್ಜನ್ಮ ಪ್ರಾಪ್ತಿಯು ಇಲ್ಲ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಕಾರ್ತಿಕಮಾಸದ
ಕೃತ್ತಿಕಾವ್ರತವರ್ಣನೆಯೆಂಬ ನೂರಮೂರನೆಯ
ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣ
## ಉತ್ತರಪರ್ವಣಿ
## ಚತುರಧಿಕಶತತಮೋಽಧ್ಯಾಯಃ

॥ ಶ್ರೀ ಕೃಷ್ಣ ಉವಾಚ ॥

**ಪಂಚದಶ್ಯಾಂ ಶುಕ್ಲಪಕ್ಷೇ ಫಾಲ್ಗುನಸ್ಯ ನರೋತ್ತಮ ।**
**ಪಾಖಂಡಾನ್ಪತಿತಾಂಶ್ಚೈವ ತಥೈವಾಂತ್ಯಾವಸಾಯಿನಃ ॥ ೧ ॥**

**ನಾಸ್ತಿಕಾನ್ಭಿನ್ನವೃತ್ತಾಂಶ್ಚ ಪಾಪಿನೋ ನೈವ ಚಾಲಪೇತ್ ।**
**ನಾರಾಯಣೇ ಗತಮನಾಃ ಪುರುಷೋ ಹಿ ಜಿತೇಂದ್ರಿಯಃ ॥ ೨ ॥**

**ತಿಷ್ಠನ್ವ್ರಜನ್ಪ್ರಸ್ಖಲನ್ವಾ ಭುಂಜಾನೋಽಪಿ ಜನಾರ್ದನಂ ।**
**ಕೀರ್ತಯೇಚ್ಚ ಕ್ರಿಯಾಕಾಲೇ ಸಪ್ತಕೃತ್ವೋ ಮಹೀಪತೇ ॥ ೩ ॥**

### ನೂರನಾಲ್ಕನೆಯ ಅಧ್ಯಾಯ

೧–೨. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ರಾಜನೇ! ಫಾಲ್ಗುಣ ಮಾಸದ ಶುಕ್ಲಪಕ್ಷದ ಹುಣ್ಣಿಮೆಯಲ್ಲಿ; ವೇದದೂಷಕರಾದ ಪಾಷಂಡರು, ಪತಿತರು, ಅಂತ್ಯಜರು, ನಾಸ್ತಿಕರು, ಆಚಾರಭ್ರಷ್ಟರು, ಪಾಪಿಗಳು ಇವರುಗಳೊಡನೆ ಸಂಭಾಷಣೆಮಾಡಬಾರದು. ಮತ್ತು ಜಿತೇಂದ್ರಿಯನಾಗಿ ಶ್ರೀಮನ್ನಾರಾಯಣನಲ್ಲಿಯೇ ಮನಸ್ಸಿಟ್ಟಿರಬೇಕು.

೩. ಅಯ್ಯಾ ರಾಜನೇ! ವ್ರತಿಯು ತಾನು ನಿಂತಿರುವಾಗಲೂ, ಸಂಚರಿಸುವಾಗಲೂ, ಎಡವಿದಾಗಲೂ ಶ್ರೀ ಜನಾರ್ದನನ ನಾಮಸಂಕೀರ್ತನೆ ಮಾಡುವುದಲ್ಲದೆ ಈ ವ್ರತಾನುಷ್ಠಾನಕಾಲದಲ್ಲಿ ಏಳುಸಲ ಜನಾರ್ದನನ ನಾಮಕೀರ್ತನವನ್ನು ಮಾಡಬೇಕು.

ಲಕ್ಷ್ಮ್ಯಾ ಸಮನ್ವಿತಂ ದೇವಮರ್ಚಯೇಚ್ಚ ಜನಾರ್ದನಂ ।
ಸಂಧ್ಯಾದ್ಯುಪರಮೇ ಚಂದ್ರಸ್ವರೂಪಂ ಹರಿಮೀಶ್ವರಂ ॥
ರಾತ್ರೌ ಚ ಲಕ್ಷ್ಮೀಂ ಸಂಚಿಂತ್ಯ ಸಮ್ಯಗರ್ಘ್ಯೇಣ ಪೂಜಯೇತ್ ॥೪॥

ಶ್ರೀನಿಶಾಕರರೂಪಸ್ತ್ವಂ ವಾಸುದೇವ ಜಗತ್ಪತೇ ।
ಮನೋಽಭಿಲಷಿತಂ ದೇವ ಪೂರಯಸ್ವ ನಮೋನಮಃ ॥ ೫ ॥

ಮಂತ್ರೇಣಾನೇನ ದತ್ವಾರ್ಘ್ಯಂ ದೇವದೇವಸ್ಯ ಭಕ್ತಿತಃ ।
ನಕ್ತಂ ಭುಂಜೀತ ನ ಸ್ವೈರಂ ತೈಲಕ್ಷಾರವಿವರ್ಜಿತಂ ॥ ೬ ॥

ತಥೈವ ಚೈತ್ರೇ ವೈಶಾಖೇ ಜ್ಯೇಷ್ಠೇ ಚ ನೃಪಸತ್ತಮ ।
ಅರ್ಚಯೇಚ್ಚ ಯಥಾಪ್ರೋಕ್ತಂ ಮಾಸಿಮಾಸಿ ಚ ತದ್ದಿನೇ ॥ ೭ ॥

---

೪. ಆದಿನ ಶ್ರೀಲಕ್ಷ್ಮೀ ಸಮನ್ವಿತನಾದ ನಾರಾಯಣನನ್ನು ಪೂಜಿಸಬೇಕು. ಸಂಧ್ಯಾಕಾಲ ಕಳೆದ ಮೇಲೆ ರಾತ್ರಿ ಜಗದೀಶ್ವರನೂ, ಚಂದ್ರಸ್ವರೂಪನೂ ಆಗಿರುವ ನಾರಾಯಣನನ್ನೂ ಲಕ್ಷ್ಮಿಯನ್ನೂ ಧ್ಯಾನಾವಾಹನಪೂರ್ವಕವಾಗಿ ಪೂಜಾದ್ರವ್ಯಗಳಿಂದ ಚೆನ್ನಾಗಿ ಪೂಜಿಸಬೇಕು.

೫. "ಚಂದ್ರಸ್ವರೂಪನಾದ ಶ್ರೀ ವಾಸುದೇವನೇ, ಜಗತ್ಪತಿಯೇ, ಪೂಜ್ಯನೇ ನನ್ನ ಮನೋಭಿಲಷಿತಗಳನ್ನು ನೇರವೇರಿಸು. ನಿನಗೆ ವಂದನೆಗಳು" ಎಂಬ ಅರ್ಥವುಳ್ಳ ಮಂತ್ರವನ್ನು ಪಠಿಸಿ ದೇವದೇವನಾದ ಶ್ರೀ ನಾರಾಯಣನಿಗೆ ಭಕ್ತಿಯಿಂದ ಅರ್ಘ್ಯಪ್ರದಾನ ಮಾಡಬೇಕು.

೬. ನಿಯಮರಹಿತನಾಗಿ ಸ್ವೇಚ್ಛಾನುಸಾರ ವರ್ತಿಸದೆ ತೈಲ, ಲವಣ ವರ್ಜಿತವಾಗಿ ನಕ್ತಭೋಜನ (ರಾತ್ರಿ ಭೋಜನ) ವನ್ನು ಮಾಡಬೇಕು.

೭. ಅಯ್ಯಾ ನೃಪೋತ್ತಮನೇ! ಅದೇ ಪ್ರಕಾರವಾಗಿ ಚೈತ್ರ, ವೈಶಾಖ, ಜ್ಯೇಷ್ಠ ಈ ಮಾಸಗಳಲ್ಲಿಯೂ ಹಿಂದೆ ಹೇಳಿದ ರೀತಿಯನ್ನೇ ಅನುಸರಿಸಿ, ಆ ಶುಕ್ಲ ಪೂರ್ಣಿಮೆಯ ದಿನ ಶ್ರೀಮನ್ನಾರಾಯಣನನ್ನು ಅರ್ಚಿಸಿ ಚಂದ್ರನಿಗೆ ಅರ್ಘ್ಯಕೊಡಬೇಕು.

ನಿಷ್ಪಾದಿತಂ ಭವೇದೇಕಂ ಪಾರಣಂ ಪಾರ್ಥ ಶಕ್ತಿತಃ ।
ದ್ವಿತೀಯಂ ಚಾಪಿ ವಕ್ಷ್ಯಾಮಿ ಪಾರಣಂ ತೇ ನರೋತ್ತಮ ॥ ೮ ॥

ಆಷಾಢೇ ಶ್ರಾವಣೇ ಮಾಸಿ ಪ್ರಾಪ್ತೇ ಭಾದ್ರಪದೇ ತಥಾ ।
ತಥೈವಾಶ್ವಯುಜೇಽಭ್ಯರ್ಚ್ಯ ಶ್ರೀಧರಂ ಪ್ರಿಯಯಾ ಸಹ ॥
ಅರ್ಘಂ ಚಂದ್ರಮಸೇ ದತ್ವಾ ಭುಂಜೀತಾಥ ಯಥಾವಿಧಿ ॥ ೯ ॥

ದ್ವಿತೀಯಮೇತದಾಖ್ಯಾತಂ ತೃತೀಯಂ ಪಾರಣಂ ಶೃಣು ।
ಕಾರ್ತಿಕಾದಿಷು ಮಾಸೇಷು ತಥೈವಾಭ್ಯರ್ಚ್ಯ ಕೇಶವಮ್ ॥
ಭೂತ್ವಾ ಸಮುನ್ನಿತಂ ದದ್ಯಾಚ್ಛಶಾಂಕಾಯ ತಥಾ ನಿಶಿ ॥ ೧೦ ॥

ಭುಂಜೀತ ಚ ಯಥಾಖ್ಯಾತಂ ತೃತೀಯಂ ಪಾರಣಂ ಶೃಣು ।
ಪ್ರತಿಪೂಜ್ಯ ತತೋ ದದ್ಯಾದ್ಬ್ರಾಹ್ಮಣೇಭ್ಯಶ್ಚ ದಕ್ಷಿಣಾಂ ॥
ಪ್ರತಿಮಾಸಂ ಚ ವಕ್ಷ್ಯಾಮಿ ಪ್ರಾಶನಂ ಕಾಯಶುದ್ಧಯೇ ॥ ೧೧ ॥

---

೮. ಅಯ್ಯಾ ಕುಂತೀಪುತ್ರನೇ! ಹೀಗೆ ಫಾಲ್ಗುಣದಿಂದ ಆರಂಭಿಸಿ ಜ್ಯೇಷ್ಠಾಂತ್ಯವಾದ ನಾಲ್ಕು ತಿಂಗಳುಗಳಲ್ಲಿ ಈರೀತಿ ಪೂಜೆಯನ್ನು ಮಾಡಿ, ಆಗ ಸ್ವಶಕ್ತ್ಯನುಸಾರವಾಗಿ ಒಂದನೆಯ ಪಾರಣೆಯನ್ನು ನಡೆಸಬೇಕು. ಅಯ್ಯಾ ರಾಜನೇ! ಈಗ ಎರಡನೆಯ ಪಾರಣೆಯ ಕ್ರಮವನ್ನು ಹೇಳುತ್ತೇನೆ ಕೇಳು.

೯. ಆಷಾಢ, ಶ್ರಾವಣ, ಭಾದ್ರಪದ ಮತ್ತು ಆಶ್ವಯುಜ ಈ ನಾಲ್ಕು ತಿಂಗಳುಗಳ ಹುಣ್ಣಿಮೆಗಳಲ್ಲೂ ಲಕ್ಷ್ಮೀ ಸಹಿತನಾದ ಶ್ರೀಮನ್ನಾರಾಯಣನನ್ನು ಪೂಜಿಸಿ, ಚಂದ್ರನಿಗೆ ಅರ್ಘ್ಯವನ್ನು ಕೊಟ್ಟು, ಆಶ್ವಯುಜ ಮಾಸದಲ್ಲಿ ಶಾಸ್ತ್ರೋಕ್ತ ಪ್ರಕಾರವಾಗಿ ವ್ರತಾಂಗವಾದ ಪಾರಣವನ್ನು ಮಾಡಬೇಕು.

೧೦. ಈ ಎರಡನೆಯ ಪಾರಣೆಯಕ್ರಮವನ್ನು ನಿನಗೆ ಹೇಳಿದ್ದಾಯಿತು. ಈಗ ಮೂರನೆಯ ಪಾರಣೆಯ ಕ್ರಮವನ್ನು ಹೇಳುತ್ತೇನೆ. ಕಾರ್ತಿಕಾದಿ ನಾಲ್ಕು ಮಾಸಗಳಲ್ಲಿಯೂ, ಹಾಗೆಯೇ ಲಕ್ಷ್ಮೀಸಹಿತನಾದ ಶ್ರೀ ನಾರಾಯಣನನ್ನು ಅರ್ಚಿಸಿ, ರಾತ್ರಿಯಲ್ಲಿ ಚಂದ್ರನಿಗೆ ಅರ್ಘ್ಯಪ್ರದಾನ ಮಾಡಬೇಕು.

೧೧–೧೨. ಅನಂತರ ವ್ರತಾಂಗವಾದ ಪಾರಣೆಯಲ್ಲಿ ಪೂರ್ವೋಕ್ತರೀತಿ ಕ್ಷಾರ ಲವಣವರ್ಜಿತವಾಗಿ ಭೋಜನಮಾಡಬೇಕು. ಈ ತೃತೀಯ ಪಾರಣೆಯಲ್ಲಿ

ಚತುರಃ ಪ್ರಥಮಾನ್ಮಾಸಾನ್ಪಂಚಗವ್ಯಮುದಾಹೃತಂ ।
ಕುಶೋದಕಂ ತಥೈವಾನ್ಯದುಕ್ತಂ ಮಾಸಚತುಷ್ಟಯಂ ॥ ೧೨ ॥

ಸೂರ್ಯಾಂಶುತಪ್ತಂ ತದ್ವಚ್ಚ ಜಲಂ ಕಾಯವಿಶೋಧನಂ ।
ಗೀತವಾದ್ಯಾದಿಕಂ ರಾತ್ರೌ ತಥಾ ಕೃಷ್ಣಕಥಾಂ ಶುಭಾಂ ॥
ಕಾರಯೇಚ್ಚೈವ ದೇವಸ್ಯ ಪಾರಣೇಪಾರಣೇ ಗತೇ ॥ ೧೩ ॥

ಜನಾರ್ದನಂ ಸಪತ್ನೀಕಮರ್ಚಯೇತ್ಪ್ರಥಮಂ ತತಃ ।
ಸಶ್ರೀಕಂ ಶ್ರೀಧರಂ ತದ್ವತ್ತೃತೀಯೇ ಭೂತಿಕೇಶವೌ ॥ ೧೪ ॥

ಪ್ರತಿಮಾಸಂ ತು ನಾಮಾನಿ ಕೃಷ್ಣಸ್ಯೈತಾನಿ ಭಾರತ ।
ಕೃತೋಪವಾಸಃ ಸುಸ್ನಾತಃ ಪೂಜಯಿತ್ವಾ ಜನಾರ್ದನಂ ॥
ಉಚ್ಚಾರಯನ್ನರೋ ಯಾತಿ ಯಥಾಲೋಕಂ ಯಥಾಸುಖಂ ॥ ೧೫ ॥

---

ಬ್ರಾಹ್ಮಣರಿಗೆ ಪೂಜೆಮಾಡಿ, ಅನಂತರ ಅವರಿಗೆ ದಕ್ಷಿಣೆಯನ್ನು ಕೊಡಬೇಕು. ಮೊದಲನೆಯ ನಾಲ್ಕು ತಿಂಗಳುಗಳಲ್ಲಿ ಪಂಚಗವ್ಯವನ್ನೂ, ಎರಡನೆಯ ನಾಲ್ಕು ತಿಂಗಳುಗಳಲ್ಲಿ ಕುಶೋದಕವನ್ನೂ ಶರೀರಶುದ್ಧಿಗಾಗಿ ಪ್ರಾಶನಮಾಡಬೇಕು.

೧೩. ಫಾಲ್ಗುಣಾದಿಯಾದ ನಾಲ್ಕು ಮಾಸಗಳಲ್ಲಿ ಸೂರ್ಯಕಿರಣಗಳಿಂದ ಬಿಸಿಯಾದ ಜಲವನ್ನು ಶರೀರಶೋಧನಾರ್ಥವಾಗಿ ಪ್ರಾಶನೆಮಾಡಬೇಕು. ಪ್ರತಿ ಪಾರಣೆಯಲ್ಲೂ ಆದಿನ ರಾತ್ರಿಯಲ್ಲಿ ಶ್ರೀಹರಿಪ್ರೀತ್ಯರ್ಥವಾಗಿ ಗೀತ, ವಾದ್ಯ ವಾದನ, ಹರಿಕಥಾಶ್ರವಣ ಮುಂತಾದುವನ್ನೂ ಮಾಡಿಸಬೇಕು.

೧೪. ಮೊದಲ ನಾಲ್ಕು ತಿಂಗಳುಗಳಲ್ಲಿ ಸಪತ್ನೀಕಜನಾರ್ದನಾಯನಮಃ ಎಂದು ಹೇಳಿ ಪೂಜಿಸಬೇಕು. ಎರಡನೆಯ ನಾಲ್ಕು ಮಾಸಗಳಲ್ಲಿ ಶ್ರೀಸಹಿತ ಶ್ರೀಧರಾಯನಮಃ ಎಂದು ಹೇಳಿ ಅರ್ಚಿಸಬೇಕು. ಹಾಗೆಯೇ ಮೂರನೆಯ ನಾಲ್ಕು ಮಾಸಗಳಲ್ಲಿ ಭೂತಿಸಹಿತ ಕೇಶವಾಯನಮಃ ಎಂದು ಹೇಳಿ ಪೂಜಿಸ ಬೇಕು.

೧೫. ಅಯ್ಯಾ ಭರತವಂಶಜನೇ! ಇವು ಶ್ರೀ ಕೃಷ್ಣನಿಗೆ ಪ್ರತಿಮಾಸದಲ್ಲೂ ಪೂಜೆಮಾಡುವಾಗ ಹೇಳಬೇಕಾದ ನಾಮಗಳಾಗಿವೆ. ವ್ರತವದಿವಸ ಪವಿತ್ರ ಜಲದಲ್ಲಿ ಚೆನ್ನಾಗಿ ಸ್ನಾನಮಾಡಿ, ಉಪವಾಸವನ್ನು ಆಚರಿಸಿ, ಶ್ರೀ ಜನಾರ್ದನ ನನ್ನು ಪೂಜಿಸಿ, ಈ ನಾಮೋಚ್ಚಾರಣೆಯನ್ನು ಮಾಡಿದ ಪುರುಷನು ಉತ್ತಮ ಲೋಕವನ್ನು ಸೇರಿ ಸ್ವಕರ್ಮಾನುಸಾರವಾಗಿ ಸುಖವನ್ನು ಅನುಭವಿಸುವನು.

ತತೋ ವಿಪ್ರಾಯ ವೈ ದದ್ಯಾದುದಕುಂಭಂ ಸದಕ್ಷಿಣಂ ।
ಉಪಾನದ್ವಸ್ತ್ರಯುಗ್ಮಂ ಚ ಛತ್ರಂ ಕನಕಮೇವ ಚ　|| ೧೬ ||

ಯದ್ಯೈ ಮಾಸಗತಂ ನಾಮ ಪ್ರೀಯತಾಮಿತಿ ಕೀರ್ತಯೇತ್ ।
ಕೇಶವಂ ಮಾರ್ಗಶೀರ್ಷೇ ತು ಪೌಷೇ ನಾರಾಯಣಂ ತಥಾ　|| ೧೭ ||

ಮಾಧವಂ ಮಾಘಮಾಸೇ ತು ಗೋವಿಂದಮಪಿ ಫಾಲ್ಗುನೇ ।
ಚೈತ್ರಮಾಸೇ ತಥಾ ವಿಷ್ಣುಂ ವೈಶಾಖೇ ಮಧುಸೂದನಂ　|| ೧೮ ||

ಜ್ಯೇಷ್ಠೇ ತ್ರಿವಿಕ್ರಮೋ ಜ್ಞೇಯಸ್ತಥಾಷಾಢೇ ಚ ವಾಮನಃ ।
ಶ್ರೀಧರಃ ಶ್ರಾವಣೇ ತದ್ವದ್ಧೃಷೀಕೇಶೇತಿ ಚಾಪರಮ್　|| ೧೯ ||

---

೧೬. ಅನಂತರ ಈ ವ್ರತಾಂತ್ಯದಲ್ಲಿ ಬ್ರಾಹ್ಮಣನಿಗೆ ದಕ್ಷಿಣಾಸಮೇತ ಉದಕುಂಭ ದಾನಮಾಡಬೇಕು. ಮತ್ತು ಪಾದುಕಾಯುಗಳ, ವಸ್ತ್ರಯುಗ್ಮ, ಛತ್ರಿ, ಹಿರಣ್ಯ ಮುಂತಾದವುಗಳನ್ನೂ ದಾನಕೊಡಬೇಕು.

೧೭. ದಾನಕಾಲದಲ್ಲಿ ಶ್ರೀಹರಿಯ ಪೂಜೆಗೆ ಆ ಮಾಸದಲ್ಲಿ ಹೇಳುವ ನಾಮ ಯಾವುದೋ ಅದನ್ನು ಉಚ್ಚರಿಸಿ, ಪ್ರೀಯತಾಂ ಎಂದು ಹೇಳಿ ಅರ್ಪಿಸಬೇಕು. ಮಾರ್ಗಶೀರ್ಷಮಾಸದಲ್ಲಿ ಕೇಶವ ಎಂಬ ನಾಮವನ್ನೂ, ಮತ್ತು ಪುಷ್ಯಮಾಸದಲ್ಲಿ ನಾರಾಯಣ ಎಂಬ ನಾಮವನ್ನೂ,

೧೮. ಮಾಘಮಾಸದಲ್ಲಿ ಮಾಧವ ಎಂಬ ನಾಮವನ್ನೂ, ಫಾಲ್ಗುಣ ಮಾಸದಲ್ಲಿ ಗೋವಿಂದ ಎಂಬ ನಾಮವನ್ನೂ, ಚೈತ್ರಮಾಸದಲ್ಲಿ ವಿಷ್ಣು ಎಂಬ ನಾಮವನ್ನೂ, ವೈಶಾಖದಲ್ಲಿ ಮಧುಸೂಧನ ಎಂಬ ನಾಮವನ್ನೂ ಧ್ಯಾನಾದಿಗಳಲ್ಲಿ ಉಪಯೋಗಿಸಬೇಕು.

೧೯. ಜ್ಯೇಷ್ಠಮಾಸದಲ್ಲಿ ತ್ರಿವಿಕ್ರಮ ಎಂಬ ನಾಮವನ್ನೂ, ಆಷಾಢದಲ್ಲಿ ವಾಮನ ಎಂಬ ನಾಮವನ್ನೂ, ಶ್ರಾವಣದಲ್ಲಿ ಶ್ರೀಧರ ಅಥವಾ ಹೃಷೀಕೇಶ ಎಂಬ ನಾಮವನ್ನೂ ಹೇಳಿ ಧ್ಯಾನಾದಿಗಳನ್ನು ಮಾಡಬೇಕು.

ರಾಮೋ ಭಾದ್ರಪದೇ ಮಾಸಿ ಗೀಯತೇ ಪುಣ್ಯಕಾಂಕ್ಷಿಭಿಃ ।
ಪದ್ಮನಾಭಮಾಶ್ವಯುಜಿ ದಾಮೋದರಮತಃ ಪರಂ ॥ ೨೦ ॥

ಕಾರ್ತಿಕೇ ದೇವದೇವೇಶಂ ಸ್ತುವಂಸ್ತರತಿ ದುರ್ಗತಿಂ ।
ಏವಂ ಸಂವತ್ಸರಸ್ಯಾಂತೇ ಪ್ರತಿಮಾಸಿ ಕ್ರಮೋದಿತಂ ॥
ಯದಿ ದಾತುಂ ನ ಶಕ್ನೋತಿ ದದ್ಯಾಚ್ಚೈವೈಕಹೇಲಯಾ ॥ ೨೧ ॥

ವಿಶೇಷಶ್ಚಾತ್ರ ಕಥಿತಶ್ಚಂದ್ರಂ ಕೃತ್ವಾ ಹಿರಣ್ಮಯಂ ।
ಪೂಜಯಿತ್ವಾ ಫಲೈರ್ವಸ್ತ್ರೈರ್ಬ್ರಾಹ್ಮಣಾಯ ನಿವೇದಯೇತ್ ॥ ೨೨ ॥

ಸ್ತುವನ್ನೇವಂ ವಿಧಾನೇನ ಪಾರಣೇಽಭ್ಯರ್ಚಯೇತ್ಪ್ರಭುಂ ।
ತಾವಂತಿ ಜನ್ಮಾನ್ಯಸುಖಂ ನಾಪ್ನೋತೀಷ್ಟವಿಯೋಗಜಂ ॥ ೨೩ ॥

---

೨೦. ಪುಣ್ಯಾಭಿಲಾಷಿಗಳಾದವರು ಭಾದ್ರಪದ ಮಾಸದಲ್ಲಿ 'ರಾಮ' ಎಂಬ ನಾಮವನ್ನು ಪಠಿಸುತ್ತಾರೆ. ಆಶ್ವಯುಜದಲ್ಲಿ ಪದ್ಮನಾಭ ಅಥವಾ ದಾಮೋದರ ಎಂಬ ನಾಮವನ್ನು ಹೇಳಬೇಕು.

೨೧. ಕಾರ್ತಿಕಮಾಸದಲ್ಲಿ ದೇವದೇವೇಶನೆಂದು ಹೇಳಿ ದಾನ ಮಾಡುವವನು ದುರ್ಗತಿಯಿಂದ ಮುಕ್ತನಾಗುತ್ತಾನೆ. ಹಿಂದೆ ಹೇಳಿದ ದಾನಗಳನ್ನು ಪ್ರತಿ ತಿಂಗಳಲ್ಲೂ ಕೊಡಲು ಅಶಕ್ತನಾದರೆ ಕೇವಲ ಪೂಜೆಯನ್ನು ಆಚರಿಸಿ ಆ ವರ್ಷಾಂತದಲ್ಲಿ ಒಂದುಸಲವಾದರೂ ಪೂರ್ವೋಕ್ತಗಳಾದ ದಾನಗಳನ್ನು ಕೊಡಬೇಕು.

೨೨. ವರ್ಷಾಂತದಲ್ಲಿನ ಕಾರ್ಯವಿಧಾನವು ಈರೀತಿ ಉಕ್ತವಾಗಿದೆ. ಸುವರ್ಣದಿಂದ ಚಂದ್ರಪ್ರತಿಮೆಯನ್ನು ಮಾಡಿ, ಅದನ್ನು ಫಲ ವಸ್ತ್ರಾದಿಗಳಿಂದ ಪೂಜಿಸಿ, ಬ್ರಾಹ್ಮಣನಿಗೆ ದಾನಮಾಡಬೇಕು. ಇದು ವಿಶೇಷ ವಿಧಿ.

೨೩. ಈ ಪ್ರಕಾರವಾಗಿ ಶ್ರೀಮನ್ನಾರಾಯಣನನ್ನು ಸ್ತೋತ್ರಮಾಡುತ್ತಾ ಆ ಸ್ವಾಮಿಯನ್ನು ಪೂಜಿಸಿ, ಪಾರಣೆಯನ್ನು ಮಾಡಿದರೆ ಆ ಪೂಜಾಸಂಖ್ಯೆಯನ್ನು ಅನುಸರಿಸಿ, ಅಷ್ಟು ಜನ್ಮಗಳಲ್ಲಿ ಇಷ್ಟಜನ ವಿಯೋಗದಿಂದುಂಟಾಗುವ ದುಃಖವನ್ನು ಅವನು ಹೊಂದುವುದಿಲ್ಲ.

ಇಹೈವ ಸ್ವಸ್ಥತಾಂ ಪ್ರಾಪ್ಯ ಮರಣೇ ಸ್ಮರಣಂ ತತಃ ।
ಸ್ಥಾನಂ ತು ಮಮ ಸಂಪ್ರಾಪ್ಯ ಸ್ವರ್ಗಲೋಕೇ ಮಹೀಯತೆ ॥ ೨೪ ॥

ತತೋ ಮಾನುಷ್ಯಮಾಸಾದ್ಯ ನಿರಾತಂಕೋ ಗತಜ್ವರಃ ।
ಧನಧಾನ್ಯವತಿ ಸ್ಫೀತೇ ಜನ್ಮ ಸಾಧುಕುಲೇಽರ್ಹತಿ ॥ ೨೫ ॥

ಶ್ರೀ ಶರ್ವರೀ ಮಧುನಿ ಹಾ ಭಗವಾಞ್ಛಶಾಂಕಃ ।
ಸಂಕಲ್ಪ್ಯ ಚಂದನ ತಿಲಾಕ್ಷತಪುಷ್ಪಮಿಶ್ರಂ ॥
ಯಚ್ಛಂತಿ ಯೇಽರ್ಘಮನಯಾ ನೃಪ ಪೂರ್ಣಿಮಾಯಾಂ ।
ನೂನಂ ಭವಂತಿ ಪರಿಪೂರ್ಣಮನೋರಥಾಸ್ತೇ ॥ ೨೬ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಪೂರ್ಣಮನೋರಥವ್ರತಂ ನಾಮ ಚತುರಧಿಕಶತತಮೋಽಧ್ಯಾಯಃ.

---

೨೪. ಈ ಲೋಕದಲ್ಲಿ ಸುಖದಿಂದ ಸ್ವಸ್ಥಚಿತ್ತನಾಗಿದ್ದು, ಮರಣಕಾಲದಲ್ಲಿ ಶ್ರೀಮನ್ನಾರಾಯಣನ ನಾಮವು ಸ್ಮರಣೆಗೆ ಬಂದು, ಅದರಿಂದ ನನ್ನ ಸ್ಥಾನವಾದ ಸ್ವರ್ಗಲೋಕವನ್ನು ಪಡೆದು ಅಲ್ಲಿ ಸರ್ವೋತ್ಕೃಷ್ಟನಾಗಿರುವನು.

೨೫. ಅನಂತರ ಮನುಷ್ಯಜನ್ಮವನ್ನು ಹೊಂದಿ ನಿರುಪದ್ರವನೂ ನೀರೋಗಿಯೂ ಧನಧಾನ್ಯಸಮೃದ್ಧನೂ ಆಗಿ ಸರ್ವೋತ್ಕೃಷ್ಟವಾಗಿರುವ ಸಾಧುವಂಶದಲ್ಲಿ ಜನಿಸುವನು.

೨೬. ಅಯ್ಯಾ ರಾಜನೇ! ಹುಣ್ಣಿಮೆಯ ದಿನದ ರಾತ್ರಿಯ ಕಾಲದಲ್ಲಿ ಮಧುನಾಮಕ ದೈತ್ಯಸಂಹಾರಕನೂ, ಶ್ರೀ ಚಂದ್ರಸ್ವರೂಪಿಯೂ ಆಗಿರುವ ಭಗವಂತನಿಗೆ ಸಂಕಲ್ಪಪೂರ್ವಕವಾಗಿ ಚಂದನ, ತಿಲಾಕ್ಷತ, ಪುಷ್ಪ ಮಿಶ್ರವಾಗಿ ಯಾರು ಅರ್ಘ್ಯಕೊಡುತ್ತಾರೋ ಅಂತಹವರು ಸತ್ಯವಾಗಿ ಪರಿಪೂರ್ಣಮನೋರಥರಾಗುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಪೂರ್ಣಮನೋರಥ ವ್ರತವೆಂಬ ನೂರನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಪಂಚಾಧಿಕಶತತಮೋಽಧ್ಯಾಯಃ

॥ ಶ್ರೀಕೃಷ್ಣ ಉವಾಚ ॥

ಅಶೋಕಪೂರ್ಣಿಮಾಂ ಚಾನ್ಯಾಂ ಶೃಣುಷ್ವ ಗದತೋ ಮಮ ।
ಯಾಮುಪೋಷ್ಯ ನರಾಃ ಶೋಕಂ ನಾಪ್ನುವಂತಿ ಕದಾಚನ ॥ ೧ ॥

ಫಾಲ್ಗುನಾಮಲಪಕ್ಷಸ್ಯ ಪೌರ್ಣಮಾಸ್ಯಾಂ ನರೋತ್ತಮ ।
ಮೃಜ್ಜಲೇನ ನರಃ ಸ್ನಾತ್ವಾ ದತ್ವಾ ಶಿರಸಿ ವೈ ಮೃದಂ
ಮೃತ್ಪ್ರಾಶನಂ ತತಃ ಕೃತ್ವಾ ಕೃತ್ವಾ ಚ ಸ್ಥಂಡಿಲಂ ಮೃದಾ ॥ ೨ ॥

ಪುಷ್ಪೈಃ ಪತ್ರೈಸ್ತಥಾಭ್ಯರ್ಚ್ಯ ಭೂಧರಂ ನಾಮ ನಾಮತಃ ।
ಧರಣೀಂ ಚ ತಥಾ ದೇವೀಮಶೋಕೇತ್ಯಭಿಕೀರ್ತಯೇತ್ ॥ ೩ ॥

---

### ನೂರಐದನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಅಶೋಕಪೂರ್ಣಿಮೆ ಎಂಬ ಇನ್ನೊಂದು ವ್ರತವನ್ನು ಹೇಳುತ್ತೇನೆ ಶ್ರವಣಮಾಡು. ಈ ಪೂರ್ಣಿಮೆಯಲ್ಲಿ ಉಪವಾಸ ಮಾಡಿದ ಪುರುಷರು ಯಾವ ಕಾಲದಲ್ಲೂ ಶೋಕವನ್ನು ಹೊಂದುವುದಿಲ್ಲ.

೨. ಅಯ್ಯಾ ರಾಜನೇ! ಈ ವ್ರತಾನುಷ್ಠಾನಮಾಡುವ ಪುರುಷನು ಫಾಲ್ಗುಣಮಾಸದ ಶುಕ್ಲಪಕ್ಷದ ಹುಣ್ಣಿಮೆಯ ದಿನ, ಶಿರಸ್ಸಿನಲ್ಲಿ ಮೃತ್ತಿಕೆಯನ್ನು ಲೇಪಿಸಿಕೊಂಡು ಪವಿತ್ರಕ್ಷೇತ್ರದ ಜಲವಲ್ಲಿ ಸ್ನಾನಮಾಡಬೇಕು.

೩. ಆಮೇಲೆ ಮೃತ್ತಿಕೆಯನ್ನು ಪ್ರಾಶನೆಮಾಡಿ ಮೃತ್ತಿಕೆಯಿಂದಲೇ ಸ್ಥಂಡಿಲವನ್ನು ರಚಿಸಿ, ಭೂಧರ ಎಂಬ ನಾಮವನ್ನು ಹೇಳಿ, ಶ್ರೀಮನ್ನಾರಾಯಣ ನನ್ನು ಪುಷ್ಪ, ಪತ್ರ, ಇತ್ಯಾದಿಗಳಿಂದ ಅರ್ಚಿಸಬೇಕು. ‘ ಅಶೋಕಾ ’ ಎಂಬ ದಾಗಿ ನಾಮವನ್ನು ಸಂಕೀರ್ತನೆಮಾಡಿ ಭೂದೇವಿಯನ್ನು ಪೂಜಿಸಬೇಕು.

ಯಥಾ ವಿಶೋಕಾಂ ಧರಣೇ ಕೃತವಾಂಸ್ತ್ವಾಂ ಜನಾರ್ದನಃ ।
ತಥಾ ಮಾಂ ಸರ್ವಶೋಕೇಭ್ಯೋ ಮೋಚಯಾಶೇಷಧಾರಿಣಿ ॥ ೪ ॥

ಯಥಾ ಸಮಸ್ತಭೂತಾನಾಮಾಧಾರಸ್ತ್ವಂ ವ್ಯವಸ್ಥಿತಾ ।
ತಥಾ ವಿಶೋಕಂ ಕುರು ಮಾಂ ಸಕಲೇಚ್ಛಾವಿಭೂತಿಭಿಃ ॥ ೫ ॥

ಧ್ಯಾನಮಾತ್ರೇ ಯಥಾ ವಿಷ್ಣೋಃ ಸ್ವಾಸ್ಥ್ಯಂ ಜಾನಾಸಿ ಮೇದಿನಿ ।
ತಥಾ ಮನಃ ಸ್ವಸ್ಥತಾಂ ಮೇ ಕುರು ತ್ವಂ ಭೂತಧಾರಿಣಿ ॥ ೬ ॥

ಏವಂ ಸ್ತುತ್ವಾ ತಥಾಭ್ಯರ್ಚ್ಯ ಚಂದ್ರಾಯಾರ್ಘ್ಯಂ ನಿವೇದ್ಯ ಚ ।
ಉಪೋಷಿತವ್ಯಂ ನಕ್ತಂ ವಾ ಭೋಕ್ತವ್ಯಂ ತೈಲವರ್ಜಿತಂ ॥ ೭ ॥

---

೪. ಚರಾಚರಾದಿ ನಿಖಿಲವಸ್ತುಧಾರಕಳಾದ ಭೂಮಾತೆಯೇ! ಶ್ರೀ ಜನಾರ್ದನನು ನಿನ್ನನ್ನು ಹೇಗೆ ವಿಶೋಕಳನ್ನಾಗಿ ಮಾಡಿದನೋ, ಹಾಗೆಯೇ ನೀನೂ ನನ್ನನ್ನು ಸರ್ವಶೋಕಮುಕ್ತನನ್ನಾಗಿ ಮಾಡು ಎಂಬ ಅರ್ಥವುಳ್ಳ ಮಂತ್ರವನ್ನೂ.

೫. ಸಮಸ್ತ ಭೂತಗಳಿಗೂ ನೀನು ಹೇಗೆ ಆಧಾರಳಾಗಿರುವೆಯೋ ಹಾಗೆಯೇ ನನಗೆ ಸಕಲ ಅಭೀಷ್ಟ, ಸಂಪತ್ತುಗಳನ್ನೂ ಕೊಟ್ಟು ನನ್ನನ್ನು ವಿಶೋಕನನ್ನಾಗಿ ಮಾಡು ಎಂಬ ಅರ್ಥವುಳ್ಳ ಮಂತ್ರವನ್ನೂ.

೬. ಓ ಭೂತಧಾರಿಣಿಯಾದ ಭೂದೇವಿಯೇ! ಶ್ರೀ ಮಹಾವಿಷ್ಣುವಿನ ಧ್ಯಾನಮಾತ್ರದಿಂದ ನೀನು ಹೇಗೆ ಚಿತ್ತಸ್ವಾಸ್ಥ್ಯ ಹೊಂದಿರುವೆಯೋ ಹಾಗೆಯೇ ನೀನು ನನಗೆ ಮನಃಸ್ವಾಸ್ಥ್ಯವನ್ನು ಕೊಡು ಎಂಬ ಅರ್ಥವುಳ್ಳ ಮಂತ್ರವನ್ನೂ ಉಚ್ಚರಿಸಿ ಪ್ರಾರ್ಥಿಸಬೇಕು.

೭. ಈ ಪ್ರಕಾರವಾಗಿ ಭೂದೇವಿಯನ್ನು ಸ್ತುತಿಸಿ, ಅರ್ಚನೆ ಮಾಡಿ, ಚಂದ್ರನಿಗೆ ಅರ್ಘ್ಯವನ್ನು ಕೊಟ್ಟು, ಆ ದಿನವೆಲ್ಲಾ ಉಪವಾಸಮಾಡಬೇಕು. ಅಥವಾ ತೈಲ, ಕ್ಷಾರವರ್ಜಿತವಾಗಿ ನಕ್ತಭೋಜನವನ್ನಾದರೂ ಮಾಡಬಹುದು.

ಅನೇನೈವ ಪ್ರಕಾರೇಣ ಚತ್ವಾರಃ ಫಾಲ್ಗುನಾದಯಃ ।
ಉಪೋಷ್ಯಾ ನೃಪತೇ ಮಾಸಾಃ ಪ್ರಥಮಂ ಪಾರಣಂ ಸ್ಮೃತಂ ॥ ೮ ॥

ಆಷಾಢಾದಿಷು ಮಾಸೇಷು ತದ್ವತ್ಸ್ನಾನಂ ಮೃದಂಬುನಾ ।
ತಥೈವ ಪ್ರಾಶನಂ ಪೂಜಾ ತದ್ವದಿಂದೋಸ್ತಥಾರ್ಘಣಂ ॥ ೯ ॥

ಚತುರ್ಷ್ವನ್ಯೇಷು ಚೈವೋಕ್ತಂ ಕಾರ್ತಿಕಾದಿಷು ಪಾರಣಂ ।
ಪಾರಣತ್ರಿತಯೇ ಚೈವ ಚಾತುರ್ಮಾಸಿಕಮುಚ್ಯತೇ ॥ ೧೦ ॥

ವಿಶೇಷಪೂಜಾ ದಾನಂ ಚ ತಥಾ ಜಾಗರಣಂ ನಿಶಿ ।
ವಿಶೇಷೇಣೈವ ಕರ್ತವ್ಯಂ ಪಾರಣೇಪಾರಣೇ ಗತೇ ॥ ೧೧ ॥

---

೮. ಅಯ್ಯಾ ರಾಜನೇ! ಫಾಲ್ಗುಣಮಾಸ ಮೊದಲ್ಗೊಂಡು ನಾಲ್ಕು ತಿಂಗಳುಗಳಲ್ಲಿ ಉಪವಾಸ ನಿಯಮವನ್ನು ಪರಿಗ್ರಹಿಸಿ, ಇದೇ ಪ್ರಕಾರ ಆಚರಿಸಿ, ಆ ನಾಲ್ಕನೆಯ ಮಾಸದಲ್ಲಿ ವ್ರತಾಂಗವಾದ ಮೊದಲನೆಯ ಪಾರಣೆಯನ್ನು ಮಾಡಬೇಕು.

೯. ಆಷಾಢಾದಿ ನಾಲ್ಕು ಮಾಸಗಳಲ್ಲಿಯೂ ಮೊದಲಿನಂತೆಯೇ ಮೃಜ್ಜಲದಿಂದ ಸ್ನಾನವನ್ನೂ, ಹಾಗೆಯೇ ಮೃತ್ತಿಕಾ ಪ್ರಾಶನವನ್ನೂ, ವಿಷ್ಣು ಮುಂತಾದವರ ಪೂಜೆಯನ್ನೂ ಮತ್ತು ಚಂದ್ರನಿಗೆ ಅರ್ಘ್ಯಪ್ರದಾನವನ್ನೂ ಮಾಡಬೇಕು.

೧೦. ಹಾಗೆಯೇ ಕಾರ್ತಿಕಾದಿ ಮಿಕ್ಕ ನಾಲ್ಕು ಮಾಸಗಳಲ್ಲೂ ಸ್ನಾನ ಪೂಜಾದಿಗಳನ್ನು ಇದೇರೀತಿ ನೆರವೇರಿಸಬೇಕು. ನಾಲ್ಕು ನಾಲ್ಕು ತಿಂಗಳಿಗೆ ಒಂದೊಂದು ಪಾರಣೆಯ ಪ್ರಕಾರ ಈ ವ್ರತದಲ್ಲಿ ಮೂರು ಪಾರಣೆಗಳಿವೆ. ಆದುದರಿಂದ ಅದಕ್ಕೆ ಚಾತುರ್ಮಾಸಿಕ ಪಾರಣವೆಂದು ಹೆಸರಾಯಿತು.

೧೧. ಪ್ರತಿ ಚಾತುರ್ಮಾಸಿಕ ಪಾರಣದಲ್ಲೂ ವಿಶೇಷ ಪೂಜೆ, ದಾನ ಮತ್ತು ರಾತ್ರಿಯಲ್ಲಿ ಜಾಗರಣೆ ಇವುಗಳನ್ನೆಲ್ಲಾ ವಿಜೃಂಭಣೆಯಿಂದ ವಿಶೇಷ ರೀತಿಯಲ್ಲಿ ನಡೆಸಬೇಕು.

ಪ್ರಥಮೇ ಧರಣೀ ನಾಮ ತುಭ್ಯಂ ಮಾಸಚತುಷ್ಟಯಂ ।
ದ್ವಿತೀಯೋ ಮೇದಿನೀ ವಾಚ್ಯಾ ತೃತೀಯೇ ಚ ವಸುಂಧರಾ ॥ ೧೨ ॥

ಪಾರಣೇಪಾರಣೇ ಪಾರ್ಥ ಯುಗ್ಮಾನೇವಾರ್ಚಯೇದ್ದ್ವಿಜಾನ್ ।
ಧರಣೀಂ ದೇವದೇವಂ ಚ ತತ್ತತ್ ಸ್ಥಾನೇನ ಕೇಶವಂ ॥ ೧೩ ॥

ವಸ್ತ್ರಾಭಾವೇ ಚ ಸೂತ್ರೇಣ ಪೂಜಯೇದ್ಧರಣೀಂ ತಥಾ ।
ಘೃತಾಭಾವೇ ತಥಾ ಕ್ಷೀರಂ ಶಸ್ತಂ ವಾ ಸಲಿಲಂ ಹರೇಃ ॥ ೧೪ ॥

ಏವಂ ಸಂವತ್ಸರಸ್ಯಾಂತೇ ಗೌಃ ಸವತ್ಸಾ ದ್ವಿಜಾತಯೇಂ ।
ಪ್ರದೇಯಾ ಧರಣೀ ದೇವೀ ವಸ್ತ್ರಾಲಂಕಾರಸಂಯುತಾ ॥ ೧೫ ॥

ಪಾತಾಲಸಂಸ್ಥಯಾ ದೇವ್ಯಾ ಚೀರ್ಣಮೇತನ್ಮಹಾವ್ರತಂ ।
ಧರಣ್ಯಾ ಕೇಶವಪ್ರೀತ್ಯೈ ತತಃ ಪ್ರಾಪ್ತಾ ಸಮುನ್ನತಿಃ ॥ ೧೬ ॥

---

೧೨. ಮೊದಲನೆಯ ಚಾತುರ್ಮಾಸದಲ್ಲಿ 'ಧರಣಿ' ಎಂಬ ನಾಮವನ್ನು ಹೇಳಿ ಪೂಜಿಸಬೇಕು. ಎರಡನೆಯದರಲ್ಲಿ 'ಮೇದಿನಿ' ಎಂದು ಹೇಳಿ ಪೂಜಿಸಬೇಕು. ಮೂರನೆಯದರಲ್ಲಿ 'ವಸುಂಧರಾ' ಎಂಬ ನಾಮವನ್ನು ಹೇಳಿ ಅರ್ಚಿಸಬೇಕು.

೧೩. ಅಯ್ಯಾ ಪಾರ್ಥನೇ! ಪ್ರತಿ ಪಾರಣೆಯಲ್ಲೂ ಬ್ರಾಹ್ಮಣರಿಬ್ಬರನ್ನು ಪೂಜಿಸಬೇಕು. ಧರಣೀ, ದೇವದೇವನಾದ ಶ್ರೀಮನ್ನಾರಾಯಣ ಇವರ ಸ್ಥಾನದಲ್ಲಿ ಅವರನ್ನು ಸ್ಥಾಪಿಸಿ ಪೂಜಿಸಬೇಕು.

೧೪. ಸಾಕ್ಷಾತ್ತಾಗಿ ವಸ್ತ್ರವಿಲ್ಲದ ಸಂಬಂಧದಲ್ಲಿ, ಶ್ರೀ ಭೂದೇವಿಗೆ ತಂತು ಸಮರ್ಪಣದಿಂದಲಾದರೂ ಪೂಜೆಮಾಡಬೇಕು. ಹಾಗೆಯೇ ತುಪ್ಪಕ್ಕೆ ಅಭಾವ ವಾದರೆ ಕ್ಷೀರವೇ ಪೂಜೆಗೆ ಸಾಕಾಗಿದೆ. ಶ್ರೀ ಹರಿಗೆ ಜಲಾಭಿಷೇಕದಿಂದಲೇ ಪೂಜೆಮಾಡಬಹುದು.

೧೫. ಈರೀತಿ ಆಚರಿಸಿ ವರ್ಷಾಂತ್ಯದಲ್ಲಿ ಶ್ರೀ ಭೂದೇವಿಯ ಪ್ರೀತ್ಯರ್ಥ ವಾಗಿ ವಸ್ತ್ರಾಲಂಕಾರಯುಕ್ತವಾಗಿಯೂ ಕರುಸಹಿತವಾಗಿಯೂ ಇರುವ ಕರೆಯುವ ಹಸುವನ್ನು ಬ್ರಾಹ್ಮಣನಿಗೆ ದಾನಮಾಡಬೇಕು.

೧೬. ಪೂರ್ವದಲ್ಲಿ ಭೂದೇವಿಯು ಪಾತಾಳಲೋಕದಲ್ಲಿ ಸೇರಿ ಹೋಗಿ ದ್ದಾಗ, ಶ್ರೀಹರಿ ಪ್ರೀತ್ಯರ್ಥವಾಗಿ ಈ ಮಹಾವ್ರತವನ್ನು ಆಚರಿಸಿದಳು. ಅದರಿಂದ ಅವಳು ಆ ಸ್ಥಿತಿಯಿಂದ ಬಿಡುಗಡೆಯನ್ನು ಪಡೆದಳು.

ದೇವೇನ ಚೋಕ್ತಾ ಧರಣೀ ವರಾಹವಪುಷಾ ಪುರಾ ।
ಉಪವಾಸವ್ರತಪರಾಂ ಸಮುದ್ಧೃತ್ಯ ರಸಾತಲಾತ್ ॥ ೧೭ ॥

ವ್ರತೇನಾನೇನ ಕಲ್ಯಾಣಿ ತ್ವಯಾಹಂ ಪರಿಪೋಷಿತಃ ।
ತಸ್ಮಾತ್ಪ್ರಸಾದಮತುಲಂ ಕರೋಮಿ ತವ ಸುವ್ರತೇ ॥ ೧೮ ॥

ಯಥೈವ ಕುರುಷೇ ಭಕ್ತ್ಯಾ ಪೂಜಾಂ ಮಮ ಸುಶೋಭನಾಂ ।
ತಥೈವ ತವ ಕಲ್ಯಾಣಿ ಪ್ರಣತೋ ಯಃ ಕರಿಷ್ಯತಿ ॥ ೧೯ ॥

ವ್ರತಮೇತದುಪಾಶ್ರಿತ್ಯ ಪಾರಣಂ ಚ ಯಥಾವಿಧಿ ।
ಸರ್ವಬಾಧಾವಿನಿರ್ಮುಕ್ತೋ ಜನ್ಮಜನ್ಮಾಂತರಾಣ್ಯಪಿ ॥
ವಿಶೋಕಸ್ಸರ್ವಕಲ್ಯಾಣಭಾಜನಂ ಸ್ಯಾನ್ನಸಂಶಯಃ ॥ ೨೦ ॥

ಯಥಾ ತ್ವಮೇವ ವಸುಧೇ ಸಂಪ್ರಾಪ್ತಾ ನಿರ್ವೃತೇಃ ಪದಂ ।
ತಥಾ ಸ ಪರಮಂ ಲೋಕೇ ಸುಖಂ ಪ್ರಾಪ್ಸ್ಯತಿ ಮಾನವಃ ॥ ೨೧ ॥

---

೧೭. ಪೂರ್ವದಲ್ಲಿ ವರಾಹರೂಪವನ್ನು ಧರಿಸಿದ ಶ್ರೀ ಹರಿಯು, ಉಪವಾಸ ವ್ರತಪರಳಾಗಿದ್ದ ಶ್ರೀ ಭೂಮಾತೆಯನ್ನು ಪಾತಾಳಲೋಕದಿಂದ ಮೇಲಕ್ಕೆ ಎತ್ತಿ, ಈ ವಚನವನ್ನು ಹೇಳಿದನು.

೧೮. " ಓ ಮಂಗಳಕರಳೇ ! ಈ ವ್ರತಾಚರಣದಿಂದ ನೀನು ನನ್ನನ್ನು ಸಂತೋಷಪಡಿಸಿರುವೆ. ಓ ಸುವ್ರತಳೇ ! ಆದುದರಿಂದ ನಾನು ನಿನಗೆ ಅಪರಿಮಿತ ವಾಗಿ ಅನುಗ್ರಹಮಾಡುವೆನು.''

೧೯–೨೦. "ಓ ಕಲ್ಯಾಣೀ ! ನನಗೆ ಮಂಗಳಕರವಾದ ಈ ಪೂಜೆಯನ್ನು ನೀನು ಭಕ್ತಿಯಿಂದ ಮಾಡಿರುವ ಹಾಗೆ, ಯಾವನು ಈ ವ್ರತವನ್ನು ಪರಿಗ್ರಹಿಸಿ ಶಾಸ್ತ್ರೋಕ್ತರೀತಿಯಾಗಿ ಪಾರಣಾದಿಗಳನ್ನು ಮಾಡಿ, ನಿನಗೂ ನಮಸ್ಕಾರಮಾಡಿ ಸಾಂಗವಾಗಿ ಇವನ್ನು ಮಾಡುವನೋ, ಅವನು ಸರ್ವಬಾಧಾವಿನಿರ್ಮುಕ್ತನೂ ಜನ್ಮಜನ್ಮಾಂತರಗಳಲ್ಲೂ ಶೋಕರಹಿತನೂ, ಮತ್ತು ನಿಸ್ಸಂದೇಹವಾಗಿ ಸರ್ವ ಕಲ್ಯಾಣಪಾತ್ರನೂ ಆಗುತ್ತಾನೆ.

೨೧. ಓ ಭೂದೇವೀ ! ಈ ವ್ರತಾಚರಣದಿಂದ ನೀನು ಹೇಗೆ ಪರಮ ಪದವನ್ನು ಹೊಂದಿದೆಯೋ ಹಾಗೆಯೇ ಈ ವ್ರತಾನುಷ್ಠಾನಮಾಡಿದವನು ಉತ್ತಮಲೋಕಗಳಿಗೆ ಹೋಗಿ ಅಲ್ಲಿ ಸುಖಹೊಂದುವನು.

ಏವಮೇತನ್ಮಹಾಪುಣ್ಯಂ ಸರ್ವಪಾಪಪ್ರಶಾಂತಿದಂ ।
ವಿಶೋಕಾಖ್ಯಂ ವ್ರತವರಂ ತತ್ಕುರುಷ್ವ ಮಹಾವ್ರತಂ || ೨೨ ||

ಸಮ್ಯಗ್ವಿಶೋಕಕರಣೀ ನೃಪಪೂರ್ಣಿಮಾ ತೇ ।
ಖ್ಯಾತಾ ಮಯಾ ಮನುಮಹೇಂದ್ರಸಮಾನಕೀರ್ತೇ ||
ಏವಂ ಕರೋತಿ ಕುರುಪುಂಗವ ಯಃ ಪ್ರಯತ್ನಾತ್ ।
ಶೋಕೋ ನ ತಸ್ಯ ಭವತೀಹ ಕುಲೇಽಪಿ ಪುಂಸಃ || ೨೩ ||

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ
ಯುಧಿಷ್ಠಿರ ಸಂವಾದೇ ವಿಶೋಕಪೂರ್ಣಿಮಾವ್ರತಂ
ನಾಮ ಪಂಚಾಧಿಕಶತತಮೋಽಧ್ಯಾಯಃ.



---

೨೨. ಅಯ್ಯಾ ರಾಜನೇ! ಈ ಪ್ರಕಾರ ವಿಶೋಕಾ ಎಂಬ ಈ ವ್ರತವು ಮಹಾಪುಣ್ಯದಾಯಕವೂ, ಸರ್ವಪಾಪನಾಶಕವೂ ಆಗಿದೆ. ಆದುದರಿಂದ ಈ ಮಹಾವ್ರತವನ್ನು ನೀನೂ ಆಚರಿಸು.

೨೩. ಮನು, ಮಹೇಂದ್ರರಂತೆ ಕೀರ್ತಿಭಾಜನನಾದ ರಾಜನೇ! ಶೋಕ ವನ್ನು ನಿಶ್ಶೇಷವಾಗಿ ನಾಶಮಾಡುವ ಈ ವಿಶೋಕಪೂರ್ಣಿಮಾವ್ರತವನ್ನು ನಾನು ನಿನಗೆ ಹೇಳಿ ಆಯಿತು. ಅಯ್ಯಾ ಕುರುಕುಲೋತ್ತಮನೇ! ಯಾವ ಪುರುಷನು ಪ್ರಯತ್ನಪೂರ್ವಕವಾಗಿ ಈ ವ್ರತವನ್ನು ಆಚರಿಸುವನೋ ಅವನಿಗೆ ಇಹದಲ್ಲಿ ಶೋಕ ಪ್ರಾಪ್ತಿಯಾಗುವುದಿಲ್ಲ. ಮತ್ತು ಅವನ ವಂಶಕ್ಕೆ ಶೋಕದ ಸೋಂಕೂ ಸಹ ಇರುವುದಿಲ್ಲ ಎಂದನು.

ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ವಿಶೋಕಪೂರ್ಣಿಮಾ
ವ್ರತವರ್ಣನೆಯೆಂಬ ನೂರೈದನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಷಡಧಿಕಶತತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಸರ್ವಕಾಮಾನವಾಪ್ನೋತಿ ಸಮಾರಾಧ್ಯ ಜನಾರ್ದನಂ ।
ಪ್ರಕಾರೈ ರ್ಬಹುಭಿಃ ಕೃಷ್ಣ ಯಾನ್ಯಾನಿಚ್ಛತಿ ಚೇತಸಾ ॥ ೧ ॥

ನೃಣಾಂ ಸ್ತ್ರೀಣಾಂ ಚ ಸರ್ವೇಷಾಂ ನಾನ್ಯಚ್ಛೋಕಸ್ಯ ಕಾರಣಂ ।
ಅಪತ್ಯಾದಧಿಕಂ ಕಿಂಚಿತ್ ವಿದ್ಯತೇ ಹ್ಯತ್ರ ಜನ್ಮನಿ ॥ ೨ ॥

ಅಪುತ್ರತಾ ಮಹಾದುಃಖಮತಿದುಃಖಂ ಕುಪುತ್ರತಾ ॥
ಸುಪುತ್ರಸ್ಸರ್ವಸೌಖ್ಯಾನಾಂ ಹೇತುಭೂತಂ ಮತೋ ಮಮ ॥ ೩ ॥

---

### ನೂರಆರನೆಯ ಅಧ್ಯಾಯ

೧. ಎಲೈ ಶ್ರೀ ಕೃಷ್ಣನೇ! ಪುರುಷನು ತನ್ನ ಮನಸ್ಸಿನಲ್ಲಿ ಆಶಿಸಿದ ಫಲಪ್ರಾಪ್ತಿಗಾಗಿ ಶ್ರೀ ಜನಾರ್ದನನನ್ನು ಅನೇಕ ಪ್ರಕಾರಗಳಿಂದ ಆರಾಧಿಸಿ ತನ್ನ ಸರ್ವಕಾಮಗಳನ್ನೂ ಪಡೆಯುತ್ತಾನೆಯಷ್ಟೆ.

೨. ಈ ಜನ್ಮದಲ್ಲಿ ಸಂತಾನಕ್ಕಿಂತಲೂ ಅಧಿಕವಾದುದು ಇನ್ನೊಂದಿಲ್ಲ. ಹೆಂಗಸಿಗೂ ಗಂಡಸಿಗೂ ಎಲ್ಲರಿಗೂ ಶೋಕಕ್ಕೆ ಕಾರಣವಾದದ್ದು ಸಂತತಿಯನ್ನು ಬಿಟ್ಟರೆ ಇನ್ನೊಂದೂ ಇಲ್ಲ.

೩. ಅಪುತ್ರತ್ವವು ಮಹಾದುಃಖದಾಯಕವಾದುದು. ದುಷ್ಪುತ್ರತ್ವವು ಅತಿ ದುಃಖದಾಯಕವು ಮಾತ್ರವಲ್ಲದೆ ಹೇಯವೂ ಆದುದು. ಆದುದರಿಂದ ಸುಪುತ್ರನೇ ಸರ್ವಸೌಖ್ಯಗಳಿಗೂ ಕಾರಣನೆಂದು ನನ್ನ ಅಭಿಪ್ರಾಯ.

ಧನ್ಯಾಸ್ತೇ ಯೇ ಸುತಂ ಪ್ರಾಪ್ತಾಃ ಸರ್ವದುಃಖವಿವರ್ಜಿತಂ ।
ಶಕ್ತಂ ಪ್ರಶಾಂತಂ ಬಲಿನಂ ಪರಾಂ ನಿರ್ವೃತಿಮಾಗತಂ ॥ ೪ ॥

ಸ್ವಕರ್ಮಾಭಿರತಂ ನಿತ್ಯಂ ದೇವ ದ್ವಿಜಪರಾಯಣಂ ।
ಶಾಸ್ತ್ರಜ್ಞಂ ಸರ್ವಧರ್ಮಜ್ಞಂ ದೀನಾನಾಥಾನುಕಂಪಿನಂ ॥ ೫ ॥

ವಿನಿರ್ಜಿತಾರಿಸರ್ವಸ್ವಂ ಮನೋಹೃದಯನಂದನಂ ।
ದೇವಾನುಕೂಲತಾಯುಕ್ತಂ ಯುಕ್ತಂ ಸಮ್ಯಗ್ಗುಣೇನ ಚ ॥ ೬ ॥

ಮಿತಸ್ವಜನಸನ್ಮಾನಲಬ್ಧಂ ನಿರ್ವಾಣಮುತ್ತಮಂ ।
ಯಃ ಪ್ರಾಪ್ನೋತಿ ಸುತಂ ತಸ್ಮಾನ್ನಾನ್ಯೋ ಧನ್ಯತರೋ ಭುವಿ ॥ ೭ ॥

ಸೋಽಹಮೇವಂವಿಧಂ ಶ್ರೋತುಂ ಕರ್ಮೇಚ್ಛಾಮಿ ಮಹಾಮತೇ ।
ಯೇನೇದೃಗ್ಲಕ್ಷಣಃ ಪುತ್ರಃ ಪ್ರಾಪ್ಯತೇ ಭುವಿ ಮಾನವೈಃ ॥ ೮ ॥

---

೪. ಸರ್ವದುಃಖವರ್ಜಿತನೂ, ಶಕ್ತನೂ, ಶಾಂತನೂ, ಬಲಶಾಲಿಯೂ, ಪರಮಸಂತೋಷಯುಕ್ತನೂ, ಆದ ಪುತ್ರನನ್ನು ಯಾರು ಪಡೆದಿರುವರೋ ಅವರೇ ಧನ್ಯರು.

೫. ಮತ್ತು ಯಾವಾಗಲೂ ಸತ್ಕರ್ಮಗಳಲ್ಲಿ ಆಸಕ್ತನೂ, ದೇವಬ್ರಾಹ್ಮಣ ಪೂಜಾಪರಾಯಣನೂ, ಶಾಸ್ತ್ರಜ್ಞನೂ, ಸರ್ವಧರ್ಮಜ್ಞನೂ, ದೀನಾನಾಥರಲ್ಲಿ ದಯೆಯುಳ್ಳವನೂ.

೬. ಮತ್ತು ಶತ್ರುವನ್ನು ಜಯಿಸಿ ಅವನ ಸರ್ವಸ್ವವನ್ನೂ ಸ್ವಾಧೀನ ಪಡಿಸಿಕೊಂಡವನೂ, ಮನಸ್ಸಿಗೆ ಆಹ್ಲಾದವನ್ನುಂಟುಮಾಡುವವನೂ, ದೈವಾನು ಕೂಲ್ಯವುಳ್ಳವನೂ, ಸದ್ಗುಣಭರಿತನೂ.

೭. ಮತ್ತು ಸ್ವಜನಪ್ರಿಯನೂ, ಜನಾದರಣೆ ಪಡೆದವನೂ ಆದ ಉತ್ತಮ ಪುತ್ರನನ್ನು ಯಾವನು ಪಡೆಯುವನೋ ಅವನಿಗಿಂತ ಕೃತಾರ್ಥನು ಈ ಭೂಲೋಕ ದಲ್ಲಿಯೇ ಇಲ್ಲ.

೮. ಎಲೈ ಮಹಾಪ್ರಾಜ್ಞನೇ ! ಪುರುಷನು ಇಂತಹ ಶುಭಲಕ್ಷಣಗಳಿಂದ ಕೂಡಿದ ಮಗನನ್ನು ಯಾವ ಕರ್ಮಾಚರಣದಿಂದ ಹೊಂದಬಹುದು ? ಅಂತಹ ಕರ್ಮವಿಶೇಷವನ್ನು ನಿನ್ನಿಂದ ತಿಳಿದುಕೊಳ್ಳಲು ಅಪೇಕ್ಷಿಸುತ್ತೇನೆ ಎಂದನು.

॥ ಶ್ರೀಕೃಷ್ಣ ಉವಾಚ ॥
ಏವಮೇತನ್ಮಹಾಭಾಗ ಪುತ್ರಾಪುತ್ರಸಮುದ್ಭವಂ ।
ದುಃಖಂ ಪ್ರಯಾತ್ಯುಪಶಮಂ ತನಯಾನ್ನೇಹ ಕೇನಚಿತ್ ॥ ೯ ॥

ಅತ್ರಾಪಿ ಶ್ರೂಯತಾಂ ವೃತ್ತಂ ಯತ್ಪೂರ್ವಮಭವನ್ಮುನೇ ।
ಉತ್ಪತ್ತೌ ಕಾರ್ತವೀರ್ಯಸ್ಯ ಹೈಹಯಸ್ಯ ಮಹಾತ್ಮನಃ ॥ ೧೦ ॥

ಕೃತವೀರ್ಯೋ ಮಹೀಪಾಲಃ ಹೈಹಯೋ ನಾಮ ವೈ ಪುರಾ ।
ತಸ್ಯ ಶೀಲಧನಾ ನಾಮ ಬಭೂವ ವರವರ್ಣಿನೀ ॥ ೧೧ ॥

ಪತ್ನೀಸಹಸ್ರಪ್ರವರಾ ಮಹಿಷೀ ಶೀಲಮಂಡನಾ ।
ಸಾ ತ್ವಪುತ್ರಾ ಮಹಾಭಾಗಾ ಮೈತ್ರೇಯೀಂ ಪರ್ಯಪೃಚ್ಛತ ॥ ೧೨ ॥

---

೯. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಮಹಾಭಾಗ್ಯಶಾಲಿಯೇ! ನೀನು ಕೇಳುವುದು ಶ್ಲಾಘ್ಯವಾಗಿದೆ. ಈ ಭೂಲೋಕದಲ್ಲಿ ದುಷ್ಪುತ್ರತ್ವದ ಸಂಕಟವೂ, ಅಪುತ್ರತ್ವದಿಂದ ಹುಟ್ಟಿದ ದುಃಖವೂ, ಸತ್ಪುತ್ರನಿಂದಲಲ್ಲದೆ ಬೇರೆ ಯಾವುದರಿಂದಲೂ ಉಪಶಮನವಾಗುವುದಿಲ್ಲ.

೧೦. ಅಯ್ಯಾ ಮನನಶೀಲನೇ! ಈ ವಿಷಯದಲ್ಲಿ ಪೂರ್ವದಲ್ಲಿ ಮಹಾತ್ಮನಾಗಿಯೂ, ಹೈಹಯಕುಲೋತ್ಪನ್ನನಾಗಿಯೂ ಇರುವ ಕಾರ್ತವೀರ್ಯಾರ್ಜುನನ ಉತ್ಪತ್ತಿವಿಷಯಕವಾದ ಇತಿಹಾಸವನ್ನು ಹೇಳುತ್ತೇನೆ ಶ್ರವಣಮಾಡು.

೧೧. ಪೂರ್ವದಲ್ಲಿ ಹೈಹಯಕುಲೋತ್ಪನ್ನನಾದ ಕೃತವೀರ್ಯನೆಂಬ ಅರಸನಿದ್ದನು. ಅವನಿಗೆ ಶೀಲಧನೆ ಎಂಬ ಸುಂದರಿಯು ಧರ್ಮಪತ್ನಿಯಾಗಿದ್ದಳು.

೧೨. ಆ ರಾಜನ ಧರ್ಮಪತ್ನಿಯಾದ ಅವಳು ಸ್ತ್ರೀಸಮುದಾಯದಲ್ಲಿ ಉತ್ತಮಳೂ, ಆಚಾರವೇ ಭೂಷಣವಾಗಿ ಉಳ್ಳವಳೂ ಎನಿಸಿ, ಪಟ್ಟದರಸಿಯಾಗಿದ್ದಳು. ಆದರೂ ಆ ಮಹಾಭಾಗ್ಯವತಿಯು ಅಪುತ್ರಳಾದುದರಿಂದ ಪೂಜ್ಯಳಾದ ಮೈತ್ರೇಯನನ್ನು ಈರೀತಿ ಪ್ರಶ್ನೆಮಾಡಿದಳು.

ಗುಣವತ್ಪುತ್ರಲಾಭಾಯ ಕೃತಾಸನಪರಿಗ್ರಹಂ ।
ತಯಾ ಪೃಷ್ಟಾಥ ಸಾ ಸಮ್ಯಕ್ ಮೈತ್ರೇಯೀ ಬ್ರಹ್ಮವಾದಿನೀ ॥ ೧೩ ॥

ಕಥಯಾಮಾಸ ಪರಮಂ ನಾಮ್ನಾನಂತವ್ರತಂ ಮಹತ್ ।
ಸರ್ವಕಾಮಫಲಾವಾಪ್ತಿಕಾರಣಂ ಪಾಪನಾಶನಂ ॥
ತಸ್ಯಾಃ ಸುಪುತ್ರಲಾಭಾಯ ರಾಜಪುತ್ರ್ಯಾಸ್ತಪಸ್ವಿನೀ ॥ ೧೪ ॥

॥ ಮೈತ್ರೇಯ್ಯುವಾಚ ॥
ಯೋ ಯಮಿಚ್ಛೇನ್ನರಃ ಕಾಮಂ ನಾರೀ ವಾ ವರವರ್ಣಿನೀ ॥ ೧೫ ॥

ಸ ತಂ ಸಮಾರಾಧ್ಯ ವಿಭುಂ ಸಮಾಪ್ನೋತಿ ಜನಾರ್ದನಾತ್ ।
ಮಾರ್ಗಶೀರ್ಷೇ ಮೃಗಶಿರೋ ಭೀಮೋ ಯಸ್ಮಿನ್ ದಿನೇಽಭವತ್॥೧೬॥

---

೧೩–೧೪. ಒಂದುದಿನ ಬ್ರಹ್ಮವಾದಿನಿಯಾದ ಮೈತ್ರೇಯಿಯು ಆ ರಾಣಿಯ ಬಳಿಗೆ ಬಂದು, ಸತ್ಕೃತಳಾಗಿ ಆಸನ ಪರಿಗ್ರಹಮಾಡಿದಳು. ಬಳಿಕ ಆ ಶೀಲಧನ ರಾಣಿಯು ಸುಪುತ್ರಪ್ರಾಪ್ತಿಯ ವಿಚಾರವಾಗಿ ಆಕೆಯನ್ನು ಪ್ರಶ್ನೆಮಾಡಿದಳು. ಆಗ ಮೈತ್ರೇಯಿಯು ಆ ರಾಜಪುತ್ರಿಗೆ ಸುಪುತ್ರಾವಾಪ್ತಿಸಾಧನವೂ, ಸರ್ವಾಭೀಷ್ಟ ಸಿದ್ಧಿಪ್ರದವೂ, ಪಾಪನಾಶಕವೂ, ಮಹಿಮಾಯುಕ್ತವೂ, ಆದ ಅನಂತವ್ರತವೆಂಬ ಸರ್ವೋತ್ತಮವಾದ ವ್ರತವನ್ನು ಉಪದೇಶಮಾಡತೊಡಗಿದಳು.

೧೫. ಮೈತ್ರೇಯಿಯು ಹೇಳುತ್ತಾಳೆ—ಭೀಮನು ಯಾವ ದಿವಸವಲ್ಲಿ ಜನಿಸಿದನೋ ಅಂತಹ ಮೃಗಶಿರ ನಕ್ಷತ್ರದಿಂದ ಕೂಡಿದ ಮಾರ್ಗಶೀರ್ಷಮಾಸದ ಶುಭದಿನದಲ್ಲಿ ಸ್ವಾಮಿಯಾದ ಶ್ರೀ ಮಹಾವಿಷ್ಣುವನ್ನು ಆರಾಧಿಸಬೇಕು.

೧೬. ಹೀಗೆ ಆರಾಧಿಸಿದರೆ ಆ ಶ್ರೀ ಜನಾರ್ದನನ ಪರಪ್ರಸಾದ ದಿಂದ ಗಂಡಸಾಗಲಿ ಅಥವಾ ಶೀಲವತಿಯಾದ ಹೆಂಗಸಾಗಲಿ ಯಾವ ಯಾವ ಇಷ್ಟಾರ್ಥವನ್ನು ಬೇಡುವರೋ ತಯಾಯಾ ಇಷ್ಟಾರ್ಥವನ್ನು ಹೊಂದುವರು.

ತಸ್ಮಿನ್ ಸಂಪ್ರಾಶ್ಯ ಗೋಮೂತ್ರಂ ಸ್ನಾತೋ ನಿಯತಮಾನಸಃ ।
ಪುಷ್ಪೈರ್ಧೂಪೈಸ್ತಥಾಗಂಧೈರುಪವಾಸೈಶ್ಚ ಭಕ್ತಿತಃ ॥
ವಾಮಪಾದಮನಂತಸ್ಯ ಪೂಜಯೇದ್ವರವರ್ಣಿನಿ ॥ ೧೭ ॥

ಅನಂತಃಸರ್ವಕಾಮಾನಾಮನಂತಂ ಭಗವಾನ್ಫಲಂ ।
ದದಾತ್ವನಂತಂ ಚ ಪುನಸ್ತದೇವಾನ್ಯತ್ರ ಜನ್ಮನಿ ॥ ೧೮ ॥

ಅನಂತಪುಣ್ಯೋಪಚಯಮನಂತಂ ತು ಮಹಾವ್ರತಂ ।
ಯಥಾಭಿಲಷಿತಾವಾಪ್ತಿಂ ಕುರು ಮೇ ಪುರಷೋತ್ತಮ ॥ ೧೯ ॥

ಇತ್ಯುಚ್ಚಾರ್ಯಾಭಿಪೂಜ್ಯೈನಂ ಯಥಾವದ್ವಿಧಿನಾ ನರಃ ।
ಸಮಾಹಿತಮನಾ ಭೂತ್ವಾ ಪ್ರಣಿಪಾತ ಪುರಸ್ಸರಂ ॥ ೨೦ ॥

---

೧೭. ಎಲೌ ಸುಂದರಿ ! ಆ ದಿನದಲ್ಲಿ ನಿಯಮಯುಕ್ತಮನಸ್ಸುಳ್ಳವನಾಗಿ ಸ್ನಾನಮಾಡಿ, ಗೋಮೂತ್ರ ಪ್ರಾಶನಮಾಡಿ, ಉಪವಾಸದಿಂದಿದ್ದು ಭಕ್ತಿಪೂರ್ವಕವಾಗಿ ಗಂಧ, ಪುಷ್ಪ, ಧೂಪಾದಿಗಳಿಂದ ಶ್ರೀ ಅನಂತನ ವಾಮಪಾದವನ್ನು ಪೂಜಿಸಬೇಕು.

೧೮–೧೯. ಶ್ರೀ ಅನಂತನು ಸರ್ವಕಾಮಗಳಿಗೂ ಸಾರ್ಥಕನು. ಪೂಜ್ಯನಾದ ಅನಂತನು ಅನಂತಫಲದಾಯಕನು. ಆದುದರಿಂದ ಅವನು ಜನ್ಮಾಂತರಗಳಲ್ಲೂ ನನಗೆ ಅನಂತಫಲವನ್ನು ಕೊಡಲಿ. ಅನಂತನಾಮಕ ಈ ಮಹಾವ್ರತವು ಅನಂತ ಪುಣ್ಯೋಪಚಯವನ್ನು ಉಂಟುಮಾಡಲಿ. ಓ ಪುರುಷೋತ್ತಮನೇ ! ಅಭಿಲಷಿತ ಫಲಪ್ರಾಪ್ತಿಯನ್ನು ನನಗೆ ಅನುಗ್ರಹಿಸು ಎಂದು, ಅರ್ಥವುಳ್ಳ ಮಂತ್ರ ಹೇಳಿ ಪ್ರಾರ್ಥನೆಮಾಡಬೇಕು.

೨೦. ಈ ವ್ರತಾನುಷ್ಠಾನಮಾಡುವಾತನು ಏಕಾಗ್ರವಾದ ಮನಸ್ಸುಳ್ಳವನಾಗಿ, ನಮಸ್ಕಾರಪೂರ್ವಕವಾಗಿ ಈರೀತಿ ಪ್ರಾರ್ಥನಾಮಂತ್ರವನ್ನುಚ್ಚರಿಸಿ, ಶ್ರೀ ಅನಂತದೇವನನ್ನು ಪೂಜಿಸಬೇಕು.

**ವಿಪ್ರಾಯ ದಕ್ಷಿಣಾಂ ದದ್ಯಾದನಂತಃ ಪ್ರೀಯತಾಮಿತಿ ।**
**ಸಮುಚ್ಚಾರ್ಯ ತತೋ ನಕ್ತಂ ಭುಂಜೀತ ತೈಲವರ್ಜಿತಂ ॥ ೨೧ ॥**

**ತತಶ್ಚ ಪೌಷೇ ಪುಷ್ಯರ್ಕ್ಷೇ ತಥೈವ ಭಗವತ್ಕಟಿಂ ।**
**ವಾಮಾಮಭ್ಯರ್ಚಯೇದ್ಭಕ್ತ್ಯಾ ಗೋಮೂತ್ರಪ್ರಾಶನಂ ತತಃ ॥೨೨॥**

**ಅನಂತಃ ಸರ್ವಕಾಮಾನಾಮಿತಿ ಚೋಚ್ಚಾರಯೇತ್ಸ್ವನಃ ।**
**ಭೋಜಯೇತ ತಥಾ ವಿಪ್ರಾನ್ ವಾಚಯಿತ್ವಾ ಯಥಾವಿಧಿ ॥ ೨೩ ॥**

**ಮಾಘೇ ಮಘಾಸು ತದ್ವಚ್ಚ ಬಾಹುಂ ದೇವಸ್ಯ ಪೂಜಯೇತ್ ।**
**ಸ್ಕಂಧೌ ಚ ಮಮಘಾಲ್ಗುನ್ಯೋಃ ಫಾಲ್ಗುನೇ ಮಾಸಿ ಭಾಮಿನಿ ॥ ೨೪ ॥**

---

೨೧. ಅನಂತರ 'ಅನಂತಃ ಪ್ರೀಯತಾಂ' ಎಂದು ಹೇಳಿ, ಬ್ರಾಹ್ಮಣನಿಗೆ ದಕ್ಷಿಣೆಯನ್ನು ಕೊಟ್ಟು ಆದಿನ ರಾತ್ರಿಯಲ್ಲಿ ತೈಲವರ್ಜಿತವಾಗಿ ಭೋಜನ ಮಾಡಬೇಕು.

೨೨. ಬಳಿಕ ಪುಷ್ಯಮಾಸದಲ್ಲಿ ಪುಷ್ಯನಕ್ಷತ್ರಯುಕ್ತವಾದ ದಿನದಲ್ಲಿ, ಹೀಗೆಯೇ ಭಗವಂತನ ಎಡದ ಕಟಿಪ್ರದೇಶವನ್ನು ಭಕ್ತಿಯಿಂದ ಪೂಜಿಸಬೇಕು. ಅನಂತರ ಗೋಮೂತ್ರ ಪ್ರಾಶನವನ್ನು ಮಾಡಬೇಕು.

೨೩. ಈ ತಿಂಗಳಿನ ಪೂಜೆಯಲ್ಲಿ ಹಿಂದೆ ಹೇಳಿದಂತೆಯೇ "ಅನಂತನು ಸರ್ವಕಾಮಗಳಿಗೂ" ಇತ್ಯಾದಿ ಅರ್ಥವುಳ್ಳ ಎರಡು ಮಂತ್ರಗಳನ್ನೂ ಪಠಿಸಬೇಕು. ಮತ್ತು ಶಾಸ್ತ್ರಪ್ರಕಾರವಾಗಿ ಬ್ರಾಹ್ಮಣರಿಂದ ಮಂತ್ರವಾಚನ ಮಾಡಿಸಿ, ಅವರಿಗೆ ಭೋಜನಮಾಡಿಸಬೇಕು.

೨೪. ಎಲೌ ಭಾಗ್ಯವತೀ! ಅದೇರೀತಿ ಮಾಘಮಾಸದಲ್ಲಿ ಮಘಾನಕ್ಷತ್ರ ಯುಕ್ತವಾದ ದಿನದಲ್ಲಿ, ಶ್ರೀ ಅನಂತದೇವನ ಬಾಹುಪ್ರದೇಶವನ್ನು ಪೂಜಿಸಬೇಕು. ಫಾಲ್ಗುಣಮಾಸದಲ್ಲಿ ಉತ್ತರಫಲ್ಗುನೀ ನಕ್ಷತ್ರದ ದಿವಸ ಶ್ರೀ ಅನಂತದೇವನ ಸ್ಕಂಧ (ಹೆಗಲು) ಪ್ರದೇಶವನ್ನು ಪೂಜಿಸಬೇಕು.

ಚತುರ್ಷ್ವೇತೇಷು ಗೋಮೂತ್ರಂ ಪ್ರಾಶಯೇನ್ನೃಪನಂದಿನಿ ।
ಬ್ರಾಹ್ಮಣಾಯ ತಥಾ ದದ್ಯಾತ್ತಿಲಾನ್ಕನಕಮೇವ ಚ ॥ ೨೫ ॥

ದೇವಸ್ಯ ದಕ್ಷಿಣಂ ಸ್ಕಂಧಂ ಚೈತ್ರೇ ಚಿತ್ರಾಸು ಪೂಜಯೇತ್ ।
ತಥೈವ ಪ್ರಾಶನಂ ಚಾತ್ರ ಪಂಚಗವ್ಯಮುದಾಹೃತಂ ॥
ವಿಪ್ರೇಪ್ರವಾಚಕೇ ದದ್ಯಾದ್ಯವಾನ್ಮಾಸಚತುಷ್ಟಯಂ ॥ ೨೬ ॥

ವೈಶಾಖೇ ಚ ವಿಶಾಖಾಸು ಬಾಹುಂ ಸಂಪೂಜ್ಯ ದಕ್ಷಿಣಂ ।
ತಥೈವೋಕ್ತಾನ್ಯವಾನ್ದದ್ಯಾನ್ನಕ್ತಂ ಕುರ್ಯಾದ್ದ್ವಿಜಕ್ರಿಯಾಂ ॥ ೨೭ ॥

ಜ್ಯೇಷ್ಠಾಸು ಕಟಿಪೂಜಾಂ ಚ ಜ್ಯೇಷ್ಠಮಾಸಿ ಶುಭವ್ರತೇ ।
ಆಷಾಢಾಸು ತಥಾಷಾಢೇ ಕುರ್ಯಾತ್ಪಾದಾರ್ಚನಂ ಶುಭೇ ॥ ೨೮ ॥

---

೨೫. ಎಲೌ ರಾಜಪುತ್ರೀ! ಹಿಂದೆ ಹೇಳಿದಂತೆ ಈ ಮಾಘ, ಫಾಲ್ಗುಣ ಮಾಸಗಳಲ್ಲಿಯೂ, ಗೋಮೂತ್ರಪ್ರಾಶನೆಮಾಡಬೇಕು. ಮತ್ತು ಮಾಘದಲ್ಲಿ ತಿಲವನ್ನೂ, ಫಾಲ್ಗುಣದಲ್ಲಿ ಹಿರಣ್ಯವನ್ನೂ ಬ್ರಾಹ್ಮಣನಿಗೆ ದಾನಮಾಡಬೇಕು.

೨೬. ಚೈತ್ರಮಾಸದ ಚಿತ್ತಾನಕ್ಷತ್ರಯುತವಾದ ದಿನದಲ್ಲಿ ಶ್ರೀ ಅನಂತ ದೇವನ ದಕ್ಷಿಣ ಸ್ಕಂಧವನ್ನು ಪೂಜಿಸಬೇಕು. ಮತ್ತು ಆದಿನ ಪಂಚಗವ್ಯ ಪ್ರಾಶನೆಮಾಡಬೇಕೆಂದು ಉಕ್ತವಾಗಿದೆ. ಈ ಚೈತ್ರಾದಿ ನಾಲ್ಕು ಮಾಸಗಳಲ್ಲಿ ಪ್ರವಚನತತ್ಪರನಾದ ಬ್ರಾಹ್ಮಣನಿಗೆ ಯವಧಾನ್ಯವನ್ನು ದಾನಮಾಡಬೇಕು.

೨೭. ವೈಶಾಖಮಾಸದಲ್ಲಿ ವಿಶಾಖಾನಕ್ಷತ್ರಯುಕ್ತವಾದ ದಿನದಲ್ಲಿ, ಶ್ರೀ ದೇವನ ದಕ್ಷಿಣ ಬಾಹುವನ್ನು ಪೂಜಿಸಿ, ಹಾಗೆಯೇ ಹಿಂದೆ ಹೇಳಿದ ಯವ ಧಾನ್ಯವನ್ನು ಬ್ರಾಹ್ಮಣನಿಗೆ ದಾನಮಾಡಿ, ಆದಿನ ರಾತ್ರಿ ಭೋಜನಮಾಡಬೇಕು.

೨೮. ಓ ಶುಭವ್ರತಳೇ! ಜ್ಯೇಷ್ಠಮಾಸದಲ್ಲಿ ಜ್ಯೇಷ್ಠಾನಕ್ಷತ್ರದ ದಿನ ಶ್ರೀ ಅನಂತನ ಕಟಿಯನ್ನು ಪೂಜೆಮಾಡಬೇಕು. ಓ ಮಂಗಳಕರಳೇ! ಹಾಗೆಯೇ ಆಷಾಢಮಾಸದಲ್ಲಿ ಪೂರ್ವಾಷಾಢ ನಕ್ಷತ್ರದಲ್ಲಿ ಆ ಶ್ರೀದೇವನ ದಕ್ಷಿಣ ಪಾದವನ್ನು ಪೂಜೆಮಾಡಬೇಕು.

ಪಾದದ್ವಯಂ ತು ಶ್ರವಣೇ ಶ್ರಾವಣೇ ಮಾಸಿ ಪೂಜಯೇತ್ ।
ಘೃತಂ ವಿಪ್ರಾಯ ದಾತವ್ಯಂ ಪ್ರಾಶನೀಯಂ ಯಥಾವಿಧಿ　　॥ ೨೯ ॥

ಶ್ರಾವಣಾದಿಷು ಮಾಸೇಷು ಪ್ರಾಶನಂ ದಾನಮೇವ ಚ ।
ಏತದೇವಂ ಸಮಾಖ್ಯಾತಂ ದೇವಾಂಸ್ತದ್ವಚ್ಚ ಪೂಜಯೇತ್　　॥ ೩೦ ॥

ಗುಹ್ಯಂ ಪ್ರೋಷ್ಠಪದಾಯೋಗೇ ಮಾಸಿ ಭಾದ್ರಪದೇಽರ್ಚಯೇತ್ ।
ತದ್ವದಾಶ್ವಯುಜೇ ಪೂಜ್ಯಂ ಹೃದಯಂ ಚಾಶ್ವಿನೀಷು ಚ　　॥ ೩೧ ॥

ಕುರ್ಯಾತ್ಸಮಾಹಿತಮನಾಃ ಸ್ನಾನಂ ಪ್ರಾಶನಮರ್ಚನಂ ।
ಅನಂತಶಿರಸಃ ಪೂಜಾಂ ಕಾರ್ತಿಕೇ ಕೃತ್ತಿಕಾಸು ಚ　　॥ ೩೨ ॥

---

೨೯. ಶ್ರಾವಣಮಾಸದ ಶ್ರವಣನಕ್ಷತ್ರದಲ್ಲಿ ಪಾದದ್ವಯಾರ್ಚನೆಯನ್ನು ಮಾಡಬೇಕು. ಮತ್ತು ಬ್ರಾಹ್ಮಣನಿಗೆ ಘೃತದಾನಮಾಡಿ ತಾನೂ ಶಾಸ್ತ್ರೋಕ್ತವಾಗಿ ಘೃತಪ್ರಾಶನೆಯನ್ನು ಮಾಡಬೇಕು.

೩೦. ಶ್ರಾವಣಾದಿಯಾಗಿ ಮುಂದಿನ ಮಾಸಗಳಲ್ಲಿ, ಪ್ರಾಶನಕ್ಕೂ ದಾನಕ್ಕೂ ಈ ಘೃತವೇ ಉಕ್ತವಾಗಿದೆ. ಮೊದಲಿನಂತೆಯೇ ದೇವಪೂಜಾದಿಗಳನ್ನು ಮಾಡಬೇಕು.

೩೧. ಭಾದ್ರಪದಮಾಸದ ಪ್ರೋಷ್ಠಪದ ನಕ್ಷತ್ರಯುತವಾದ ದಿನದಲ್ಲಿಯೂ, ಹಾಗೆಯೇ ಆಶ್ವಯುಜಮಾಸದ ಅಶ್ವಿನೀ ನಕ್ಷತ್ರಯುತವಾದ ದಿನದಲ್ಲಿಯೂ. ಸ್ವಾಮಿಯ ಹೃದಯಪೂಜೆಯನ್ನು ಮಾಡಬೇಕು.

೩೨. ಈ ವ್ರತಾನುಷ್ಠಾನಮಾಡುವಾತನು ಏಕಾಗ್ರತೆಯ ಮನಸ್ಸುಳ್ಳವನಾಗಿ ಸ್ನಾನ, ಪ್ರಾಶನೆ, ಅರ್ಚನೆ ಇವುಗಳನ್ನೆಲ್ಲಾ ಮಾಡಬೇಕು. ಕಾರ್ತಿಕಮಾಸದಲ್ಲಿ ಕೃತ್ತಿಕಾ ನಕ್ಷತ್ರಯುತವಾದ ದಿನದಲ್ಲಿ, ಶ್ರೀ ಅನಂತದೇವನ ಶಿರಸ್ಸನ್ನು ಪೂಜೆಮಾಡತಕ್ಕದು.

ಯಸ್ಮಿನ್ಯಸ್ಮಿನ್ದಿನೇ ಪೂಜಾ ತತ್ರತತ್ರ ತದಾ ದಿನೇ ।
ನಾಮಾನಂತಸ್ಯ ಜಪ್ತವ್ಯಂ ಕ್ಷುತಪ್ರಸ್ಖಲಿತಾದಿಷು ॥ ೩೩ ॥

ಘೃತೇನಾನಂತಮುದ್ದಿಶ್ಯ ಪೂರ್ವಂ ಮಾಸಚತುಷ್ಟಯಂ ।
ಕುರ್ವೀತ ಹೋಮಂ ಚೈತ್ರಾದೌ ಶಾಲಿನಾ ಕುಲನಂದಿನಿ ॥ ೩೪ ॥

ಕ್ಷೀರೇಣ ಶ್ರಾವಣಾದೌ ಚ ಹೋಮೋ ಮಾಸಚತುಷ್ಟಯಂ ।
ಪ್ರಶಸ್ತಂ ಸರ್ವಮಾಸೇಷು ಹವಿಷ್ಯಾನ್ನೇನ ಭೋಜನಂ ॥ ೩೫ ॥

ಏವಂ ದ್ವಾದಶಭಿರ್ಮಾಸೈಃ ಪಾರಣಾತ್ರಿತಯಂ ಶುಭೇ ।
ವ್ರತಾವಸಾನೇ ಚಾನಂತಂ ಸೌವರ್ಣಂ ಕಾರಯೇಚ್ಛುಭಂ ॥ ೩೬ ॥

---

೩೩. ಯಾವ ಯಾವ ದಿನದಲ್ಲಿ ಶ್ರೀ ಅನಂತದೇವನ ಪೂಜೆ ಮಾಡಬೇಕೋ, ಆಯಾಯಾ ದಿನದಲ್ಲಿ, ಪೂಜಾಕಾಲದಲ್ಲಿ ಕ್ಷುತ (ಸೀನು), ಸ್ವರ ವರ್ಣಾದಿ ಸ್ಖಾಲಿತ್ಯ ಇತ್ಯಾದಿ ದೋಷಗಳು ಪ್ರಾಪ್ತವಾದರೆ, ಆ ದೋಷದ ಪ್ರಾಯಶ್ಚಿತ್ತಾರ್ಥವಾಗಿ ಶ್ರೀ ಅನಂತದೇವನ ನಾಮವನ್ನು ಜಪಿಸಬೇಕು.

೩೪. ಎಲೌ ಕುಲಸ್ತ್ರೀಯೇ! ಮಾರ್ಗಶೀರ್ಷಾದಿ ಮೊದಲನೆಯ ನಾಲ್ಕು ತಿಂಗಳುಗಳಲ್ಲಿ, ಶ್ರೀ ಅನಂತದೇವನನ್ನು ಉದ್ದೇಶಿಸಿ ಘೃತಹೋಮವನ್ನು ಮಾಡಬೇಕು. ಚೈತ್ರಾದಿ ನಾಲ್ಕು ತಿಂಗಳುಗಳಲ್ಲಿ, ಶಾಲಿ (ಭತ್ತ) ಹೋಮವನ್ನು ಮಾಡಬೇಕು.

೩೫. ಶ್ರಾವಣಾದಿ ನಾಲ್ಕು ತಿಂಗಳುಗಳಲ್ಲಿ ಕ್ಷೀರದಿಂದ ಹವನವನ್ನು ನಡೆಸಬೇಕು. ಎಲ್ಲಾ ತಿಂಗಳುಗಳಲ್ಲೂ ಈ ಹುತಶಿಷ್ಟಾನ್ನವನ್ನು ಭುಂಜಿಸುವುದು ಪ್ರಶಸ್ತವಾದುದು.

೩೬. ಎಲೌ ಸೌಭಾಗ್ಯವತೀ! ಈರೀತಿ ನಾಲ್ಕು ನಾಲ್ಕು ತಿಂಗಳಿಗೊಮ್ಮೆ ಒಂದು ಪಾರಣದಂತೆ, ವರ್ಷದಲ್ಲಿ ಮೂರು ಪಾರಣೆ ಪೂರ್ತಿಯಾಗುವುದು. ಈ ವ್ರತ ಸಮಾಪ್ತಿಯಲ್ಲಿ ಶ್ರೀ ಅನಂತದೇವನ ಶುಭಪ್ರತಿಮೆಯನ್ನು ಚಿನ್ನದಿಂದ ಮಾಡಿಸಬೇಕು.

ರಾಜತಂ ಮುಸಲಂ ಚೈವ ಹಲಂ ಪಾರ್ಶ್ವೇಷು ವಿನ್ಯಸೇತ್ |
ಪುಷ್ಪಧೂಪಾದಿನೈವೇದ್ಯೈಃ ಪೂಜಾ ಕಾರ್ಯಾ ಯಥಾವಿಧಿ || ೩೭ ||

ತಾಮ್ರಪೀಠೋಪರಿ ಹರೇರ್ಮಂತ್ರೈರೇಭಿರ್ಯಥಾಕ್ರಮಂ |
ನಮೋಽಸ್ತ್ವನಂತಾಯ ಶಿರಃ ಪಾದೌ ಸರ್ವಾತ್ಮನೇ ನಮಃ || ೩೮ ||

ಶೇಷಾಯ ಜಾನುಯುಗಳಂ ಕಾಮಾಯೇತಿ ಕಟಿಂ ನಮಃ |
ನಮೋಽಸ್ತು ವಾಸುದೇವಾಯ ಪಾರ್ಶ್ವಂ ಸಂಪೂಜಯೇದ್ಧರೇಃ ||೩೯||

ಸಂಕರ್ಷಣಾಯೇತ್ಯುದರಂ ಭುಜಂ ಸರ್ವಾಸುಧಾರಿಣೇ |
ಕಂಠಂ ಶ್ರೀಕಂಠನಾಥಾಯ ಮುಖಮಿಂದುಮುಖಾಯ ಚ || ೪೦ ||

---

೩೭. ಮತ್ತು ಹಲ (ನೇಗಿಲು), ಮುಸಲ (ಒನಕೆ) ಇವೆರಡನ್ನೂ ಬೆಳ್ಳಿಯಿಂದ ಮಾಡಿಸಿ, ಆ ಸುವರ್ಣದ ಅನಂತ ಪ್ರತಿಮೆಯ ಪಾರ್ಶ್ವದಲ್ಲಿ ಇರಿಸಿ, ಶಾಸ್ತ್ರೋಕ್ತರೀತಿಯಲ್ಲಿ ಪುಷ್ಪ, ಧೂಪಾದಿಗಳಿಂದ ಪೂಜಿಸಿ, ನೈವೇದ್ಯ ಸಮರ್ಪಣೆ ಮಾಡಬೇಕು.

೩೮. ತಾಮ್ರದ ಪೀಠದ ಮೇಲೆ ಶ್ರೀ ಹರಿಯ ಪ್ರತಿಮೆಯನ್ನಿಟ್ಟು, ಕ್ರಮಪ್ರಕಾರವಾಗಿ ಈ ಮುಂದೆ ಹೇಳುವ ನಾಮಮಂತ್ರಗಳಿಂದ ಪೂಜೆಮಾಡಬೇಕು. "ಅನಂತಾಯನಮಃ" ಎಂದು ಶಿರಸ್ಸನ್ನೂ, "ಸರ್ವಾತ್ಮನೇನಮಃ" ಎಂದು ಪಾದದ್ವಯಗಳನ್ನೂ ಪೂಜಿಸಬೇಕು.

೩೯. "ಶೇಷಾಯನಮಃ" ಎಂದು ಎರಡು ಮೊಣಕಾಲುಗಳನ್ನೂ, "ಕಾಮಾಯನಮಃ" ಎಂದು ಕಟಿಪ್ರದೇಶವನ್ನೂ, "ವಾಸುದೇವಾಯನಮಃ" ಎಂದು ಶ್ರೀ ಹರಿಯ ಪಾರ್ಶ್ವವನ್ನೂ ಸಹ ಪೂಜಿಸಬೇಕು.

೪೦. "ಸಂಕರ್ಷಣಾಯನಮಃ" ಎಂದು ಉದರವನ್ನೂ, "ಸರ್ವಾಸುಧಾರಿಣೇನಮಃ" ಎಂದು ಭುಜವನ್ನೂ, "ಶ್ರೀಕಂಠನಾಥಾಯನಮಃ" ಎಂದು ಕಂಠವನ್ನೂ, "ಇಂದುಮುಖಾಯನಮಃ" ಎಂದು ಹೇಳಿ ಮುಖವನ್ನೂ ಅರ್ಚಿಸಬೇಕು.

ಹಲಂ ಚ ಮುಸಲಂ ಚೈವ ಸ್ವನಾಮ್ನಾ ಪೂಜಯೇದ್ಬುಧಃ ।
ಏವಂ ಸಂಪೂಜ್ಯ ಗೋವಿಂದಂ ಸಿತವಸ್ತ್ರ ವಿಭೂಷಿತಂ ॥ ೪೧ ॥

ಛತ್ರೋಪಾನತ್ಸುಸಂಯುಕ್ತಂ ಸ್ರಗ್ದಾಮಾಲಂಕೃತಂ ತಥಾ ॥
ನಕ್ಷತ್ರದೇವತಾಃ ಪೂಜ್ಯಾ ನಕ್ಷತ್ರಾಣಿ ಚ ಸರ್ವಶಃ ॥ ೪೨ ॥

ಸೋಮೋ ನಕ್ಷತ್ರರಾಜಶ್ಚ ಮಾಸಃ ಸಂವತ್ಸರಂ ತಥಾ ॥
ದ್ವಾದಶಾತ್ರ ಘಟಾನ್ಕುರ್ಯಾತ್ಸತೋಯಾಂಶ್ಚಾನ್ನ ಸಂಯುತಾನ್॥೪೩॥

ಏವಂ ಸಂಪೂಜ್ಯ ವಿಧಿವತ್ ದೇವದೇವಂ ಜನಾರ್ದನಂ ।
ಬ್ರಾಹ್ಮಣಂ ಪೂಜಯಿತ್ವಾ ಚ ವಸ್ತ್ರೈರಾಭರಣೈಸ್ತಥಾ ॥ ೪೪ ॥

---

೪೧. ಈ ವ್ರತಾನುಷ್ಠಾನಮಾಡುವ ಪಂಡಿತನು ಹಲ, ಮುಸಲ ಇವನ್ನು ಆಯಾಯಾ ನಾಮಗಳನ್ನೇ ಹೇಳಿ ಪೂಜಿಸಬೇಕು. ಬಳಿಕ ಶುಕ್ಲವಸ್ತ್ರದಿಂದ ಅಲಂಕರಿಸಿ, ಶ್ರೀ ಹರಿಯನ್ನು ಪೂಜಿಸಬೇಕು.

೪೨. ಮತ್ತು ಛತ್ರಿ, ಪಾದುಕಾಯುಗಳ ಇವುಗಳನ್ನು ಸಮರ್ಪಿಸಿ ಉಪಚರಿಸಿ, ಗಂಧಮಾಲ್ಯಾದಿಗಳಿಂದಲೂ ಅಲಂಕರಿಸಿ ಅರ್ಚಿಸಬೇಕು. ಮತ್ತು ಎಲ್ಲಾ ನಕ್ಷತ್ರಾಭಿಮಾನಿದೇವತೆಗಳನ್ನೂ, ನಕ್ಷತ್ರಗಳನ್ನೂ ಪೂಜಿಸಬೇಕು.

೪೩. ಹಾಗೆಯೇ ನಕ್ಷತ್ರರಾಜನಾದ ಚಂದ್ರನನ್ನೂ, ಮಾಸ, ಸಂವತ್ಸರಗಳ ಅಭಿಮಾನದೇವತೆಗಳನ್ನೂ ಪೂಜಿಸಬೇಕು. ಮತ್ತು ಈ ವ್ರತದಲ್ಲಿ ಜಲಪೂರಿತವಾಗಿಯೂ, ಅನ್ನಸಹಿತವಾಗಿಯೂ ಇರುವ, ಹನ್ನೆರಡು ಕಲಶಗಳನ್ನು ಸ್ಥಾಪಿಸಿ ಪೂಜಿಸಬೇಕು.

೪೪. ಈರೀತಿ ಶಾಸ್ತ್ರೋಕ್ತಪ್ರಕಾರವಾಗಿ ದೇವದೇವನಾದ ಶ್ರೀ ಜನಾರ್ದನನನ್ನು ಪೂಜಿಸಿ, ಆಮೇಲೆ ವಸ್ತ್ರಾಭರಣಾದಿಗಳಿಂದ ಬ್ರಾಹ್ಮಣನನ್ನು ಪೂಜೆ ಮಾಡಬೇಕು.

ಕರ್ಣಾಂಗುಲ್ಯೈಃ ಪವಿತ್ರೈಶ್ಚ ಶಾಂತಂ ದಾಂತಂ ಜತೇಂದ್ರಿಯಂ ।
ಪುರಾಣಜ್ಞಂ ಧರ್ಮನಿತ್ಯಮವ್ಯಂಗಂ ಸುಪ್ರಿಯಂವದಂ ॥ ೪೫ ॥

ತಸ್ಮೈ ದೇಯಂ ಸಮಸ್ತಂ ತದನಂತಃ ಪ್ರೀಯತಾಮಿತಿ ।
ಅನ್ಯೇಷಾಂ ಬ್ರಾಹ್ಮಣಾನಾಂ ಚ ದೇಯಂ ಶಕ್ತ್ಯಾ ಯಥೇಪ್ಸಿತಂ ॥೪೬॥

ಅನೇನ ವಿಧಿನಾ ಪಾರ್ಥ ವ್ರತಂ ಚೈತತ್ಸಮಾಪ್ಯತೆ ।
ಪಾರಿತೇ ಚ ಸಮಾಪ್ನೋತಿ ಸರ್ವಾನೇವ ಮನೋರಥಾ ॥ ೪೭ ॥

ಪುತ್ರಾರ್ಥಿಭಿರ್ವಿತ್ತಕಾಮೈ ರ್ಭೃತ್ಯದಾರಾನಭೀಪ್ಸುಭಿಃ ।
ಪ್ರಾರ್ಥಯದ್ಭಿಶ್ಚ ಮರ್ತ್ಯೈರ್ಽಸ್ಮಿನ್ನಾರೋಗ್ಯಫಲಸಂಪದಃ ॥ ೪೮ ॥

---

೪೫. ಮತ್ತು ಆ ಬ್ರಾಹ್ಮಣನಿಗೆ ಕರ್ಣಕುಂಡಲ, ಪವಿತ್ರದುಂಗುರ ಇತ್ಯಾದಿಗಳನ್ನು ಕೊಟ್ಟು ಉಪಚರಿಸಬೇಕು. ಆ ಪೂಜ್ಯಬ್ರಾಹ್ಮಣನು ಶಾಂತನೂ, ಜಿತೇಂದ್ರಿಯನೂ, ಪುರಾಣಜ್ಞನೂ ಯಾವಾಗಲೂ ಧರ್ಮಾನುಷ್ಠಾನಪರನೂ, ಅಂಗವೈಕಲ್ಯರಹಿತನೂ, ಪ್ರಿಯವಾದಿಯೂ ಆಗಿರಬೇಕು.

೪೬. ಅಂತಹ ಬ್ರಾಹ್ಮಣನಿಗೆ "ಶ್ರೀ ಅನಂತಃ ಪ್ರೀಯತಾಂ" ಎಂದು ಹೇಳಿ, ಆ ಅನಂತಪ್ರತಿಮೆ, ಕಲಶ ಇತ್ಯಾದಿಗಳನ್ನೆಲ್ಲಾ ದಾನಕೊಡಬೇಕು. ಇತರ ಬ್ರಾಹ್ಮಣರಿಗೂ, ಸ್ವಶಕ್ತ್ಯನುಸಾರವಾಗಿ ಇತರ ವಸ್ತುಗಳನ್ನು ದಾನ ಮಾಡಬೇಕು.

೪೭. ಅಯ್ಯಾ ಪಾರ್ಥನೇ! ಈ ವಿಧಿಯಿಂದ ಆಚರಿಸಿದರೆ, ಈ ವ್ರತವು ಸಾಂಗವಾಗಿ ಸಮಾಪ್ತಿಹೊಂದುವುದು. ಈ ವ್ರತವನ್ನು ಸಾಂಗವಾಗಿ ಆಚರಿಸಿ, ವ್ರತಾಂಗವಾದ ಪಾರಣೆಯನ್ನೂ ಕ್ರಮವಾಗಿ ಪೂರೈಸಿದರೆ, ಆ ಪುರುಷನು ತನ್ನ ಮನೋರಥಗಳನ್ನೆಲ್ಲಾ ಪಡೆಯುತ್ತಾನೆ.

೪೮. ಈ ಲೋಕದಲ್ಲಿ ಪುತ್ರಾಭಿಲಾಷೆಯುಳ್ಳವರು, ಧನಾಭಿಲಾಷಿಗಳು, ಭೃತ್ಯ, ಪತ್ನಿ, ಇವರನ್ನು ಇಚ್ಛಿಸುವವರು, ಹಾಗೆಯೇ ಆರೋಗ್ಯ ಫಲ ಸಂಪತ್ತುಗಳನ್ನು ಬಯಸುವವರು ಎಲ್ಲರೂ ಈ ವ್ರತವನ್ನು ಆಚರಿಸತಕ್ಕದ್ದು.

ಏತದ್ವ್ರತಂ ಮಹಾಭಾಗೇ ಪುಣ್ಯಂ ಸ್ವಸ್ತ್ಯಯನಪ್ರದಂ ।
ಅನಂತವ್ರತಸಂಜ್ಞಂ ವೈ ಸರ್ವಪಾಪಪ್ರಣಾಶನಂ ॥ ೪೯ ॥

ತತ್ಕುರುಷ್ವೈವ ದೇವಿ ತ್ವಂ ವ್ರತಂ ಶೀಲಧನೇ ಪರಂ ।
ವರಿಷ್ಠಂ ಸರ್ವಲೋಕಸ್ಯ ಯದಿ ಪುತ್ರಮಭೀಪ್ಸಸಿ ॥ ೫೦ ॥

॥ ಶ್ರೀ ಕೃಷ್ಣ ಉವಾಚ ॥

ಇತಿ ಶೀಲಧನಾ ಶ್ರುತ್ವಾ ಮೈತ್ರೇಯೀವಚನಂ ಶುಭಂ ।
ಚಕಾರೈತದ್ವ್ರತವರಂ ಸಾ ವಿಷ್ಣ್ವಾಹಿತಮಾನಸಾ ॥ ೫೧ ॥

ಪುತ್ರಾರ್ಥಿನ್ಯಾಸ್ತತಸ್ತಸ್ಯಾ ವ್ರತೇನಾನೇನ ಸುವ್ರತ ।
ವಿಷ್ಣುಸ್ತುತೋಷ ತುಷ್ಟೇ ಚ ವಿಷ್ಣೌ ಸಾ ಸುಷುವೇ ಸುತಂ ॥ ೫೨ ॥

ತಸ್ಯ ವೈ ಜಾತಮಾತ್ರಸ್ಯ ಪ್ರವವೌ ಚಾನಿಲಃ ಶುಭಂ ।
ನೀರಜಸ್ಕಮಭೂದ್ವ್ಯೋಮ ಮುದಂ ಪ್ರಾಪಾಖಿಲಂ ಜಗತ್ ॥ ೫೩ ॥

---

೪೯. ಎಲೌ ಮಹಾಸೌಭಾಗ್ಯವತೀ ! ಅನಂತವ್ರತವೆಂಬ ನಾಮಧೇಯವನ್ನು ಹೊಂದಿದ ಈ ವ್ರತವು ಪುಣ್ಯಪ್ರದವೂ, ಸಕಲ ಪಾಪನಾಶಕವೂ, ಕಲ್ಯಾಣ ನಿಲಯವೂ ಆಗಿದೆ.

೫೦. ಎಲೌ ಶೀಲಧನದೇವಿಯೇ ! ನೀನು ಪುತ್ರಾಭಿಲಾಷೆಯುಳ್ಳವಳಾದರೆ ಸರ್ವಲೋಕದಲ್ಲೂ ಉತ್ತಮವೆಂದೆನಿಸಿಕೊಂಡ ಈ ಅನಂತವ್ರತವನ್ನು ಆಚರಿಸು ಎಂದಳು.

೫೧. ಶ್ರೀ ಕೃಷ್ಣನು ಮುಂದುವರಿಸಿ ಹೇಳುತ್ತಾನೆ—ಆ ಶೀಲಧನಳೆಂಬ ರಾಜಮಹಿಷಿಯು ಆ ಮೈತ್ರೇಯಿಯು ಆಡಿದ ಈ ಶುಭವಚನವನ್ನು ಕೇಳಿ, ವಿಷ್ಣುವಿನಲ್ಲಿ ಏಕಾಗ್ರಚಿತ್ತವುಳ್ಳವಳಾಗಿ ಈ ಅನಂತವ್ರತವನ್ನು ಆಚರಿಸಿದಳು.

೫೨. ಅಯ್ಯಾ ಸದ್ವ್ರತನೇ ! ಪುತ್ರಾರ್ಥಿನಿಯಾಗಿ ಆ ಶೀಲಧನೆಯು ಆಚರಿಸಿದ ಈ ವ್ರತದಿಂದ ಶ್ರೀ ಮಹಾವಿಷ್ಣುವು ಸಂತುಷ್ಟನಾದನು. ಅವನ ಕೃಪೆಯಿಂದ ಆ ಶೀಲಧನೆಯು ಒಬ್ಬ ಪುತ್ರನನ್ನು ಪ್ರಸುವಿಸಿದಳು.

೫೩. ಆ ಪುತ್ರನು ಭೂಮಿಯಲ್ಲಿ ಜನಿಸಿದ ತತ್ ಕ್ಷಣದಲ್ಲೇ ಮಂದ ಮಾರುತವು ಶುಭಕರವಾಗಿ ಬೀಸಿತು. ಅಂತರಿಕ್ಷವು ನಿರ್ಮಲವಾಯಿತು. ಸಕಲ ಪ್ರಪಂಚವೂ ಸಂತೋಷಹೊಂದಿತು.

ದೇವದುಂದುಭಯೋ ನೇದುಃ ಪುಷ್ಪವೃಷ್ಟಿಃ ಪಪಾತ ಚ ।
ಪ್ರಜಗುರ್ದೇವಗಂಧರ್ವಾ ನನೃತುಶ್ಚಾಪ್ಸರೋಗಣಾಃ || ೫೪ ||

ಧರ್ಮೇ ಮನಃ ಸಮಸ್ತಸ್ಯ ಪಾರ್ಥ ಲೋಕಸ್ಯ ಚಾಭವತ್ ।
ತಸ್ಯ ನಾಮ ಪಿತಾ ಚಕ್ರೇ ತನಯಸ್ಯಾರ್ಜುನೇತಿ ವೈ || ೫೫ ||

ಕೃತವೀರ್ಯಸುತತ್ವಾಚ್ಚ ಕಾರ್ತವೀರ್ಯೋಬಭೂವ ಸಃ ।
ತೇನಾಪಿ ಭಗವಾನ್ವಿಷ್ಣುಃ ದತ್ತಾತ್ರೇಯಸ್ವರೂಪವಾನ್ ||
ಆರಾಧಿತೋऽತಿಮಹತಾ ತಪಸಾ ಪಾರ್ಥ ಭೂಭೃತಾ || ೫೬ ||

ತಸ್ಯ ತುಷ್ಟೋ ಜಗನ್ನಾಥಶ್ಚಕ್ರವರ್ತಿತ್ವಮುತ್ತಮಂ ।
ದದೌ ಶೌರ್ಯಧನೇ ಚಾಪಿ ಸಕಲಾನ್ಯಾಯುಧಾನಿ ಚ ||
ಸ ವವ್ರೇ ಚ ವಧೋ ದೇವ ಮಮ ತ್ವತ್ತೋ ಭವೇದಿತಿ || ೫೭ ||

---

೫೪. ಮತ್ತು ದೇವದುಂಧುಬಿಗಳು ಮೊಳಗಿದವು. ಆಕಾಶದಿಂದ ಪುಷ್ಪವೃಷ್ಟಿಯು ಸುರಿಯಿತು. ದೇವತೆಗಳೂ ಗಂಧರ್ವರೂ ಗಾನಮಾಡಿದರು. ಅಪ್ಸರಸ್ಸಮುದಾಯವು ನರ್ತನಾಭಿನಯ ಮಾಡಿತು.

೫೫. ಅಯ್ಯಾ ಕುಂತೀಪುತ್ರನೇ! ಆಗ ಎಲ್ಲ ಜನರಿಗೂ ಧರ್ಮಮಾರ್ಗದಲ್ಲೇ ಮನಸ್ಸು ಹುಟ್ಟಿತು. ಆ ಮಗುವಿನ ತಂದೆಯಾದ ಕೃತವೀರ್ಯನೂ ಆ ಪುತ್ರನಿಗೆ 'ಅರ್ಜುನ' ಎಂದು ನಾಮಕರಣಮಾಡಿದನು.

೫೬. ಅಯ್ಯಾ ಪಾರ್ಥನೇ! ಕೃತವೀರ್ಯನ ಪುತ್ರನಾದುದರಿಂದ ಆ ಮಗುವಿಗೆ 'ಕಾರ್ತವೀರ್ಯ' ಎಂಬ ನಾಮಧೇಯವು ಬಂದಿತು. ಆ ಕಾರ್ತವೀರ್ಯಾರ್ಜುನನು ಪರಮಪೂಜ್ಯನಾದ ಶ್ರೀ ದತ್ತಾತ್ರೇಯ ಸ್ವರೂಪದ ಶ್ರೀ ಮಹಾವಿಷ್ಣುವನ್ನು ಮಹಾಘೋರ ತಪಸ್ಸಿನಿಂದ ಆರಾಧಿಸಿದನು.

೫೭. ಜಗದೀಶನಾದ ಶ್ರೀ ವಿಷ್ಣುವು-ಆ ತಪಸ್ಸಿಗೆ ಮೆಚ್ಚಿ, ಅವನಿಗೆ ಉತ್ತಮವಾದ ಚಕ್ರವರ್ತಿ ಪದವಿಯನ್ನು ಅನುಗ್ರಹಿಸಿದುದಲ್ಲದೆ ಶೌರ್ಯಧನನಾದ ಆ ಕಾರ್ತವೀರ್ಯಾರ್ಜುನನಿಗೆ ಸಕಲ ಆಯುಧಗಳನ್ನೂ ಕೊಟ್ಟನು. ಆಗ ಕಾರ್ತವೀರ್ಯಾರ್ಜುನನು "ಓ ದೇವಾಧಿದೇವನೇ! ನನಗೆ ಸಾಕ್ಷಾತ್ತಾಗಿ ನಿನ್ನ ಕೈಯಿಂದ ಮರಣವು ಲಭಿಸಬೇಕು" ಎಂದೂ,

ಪರಂ ತು ಸ್ಮರಣಂ ಜ್ಞಾನಂ ಭೀತಾನಾಮಾರ್ತಿನಾಶನಂ ।
ಸ್ಮರಣಾದುಪಕಾರಿತ್ವಂ ಜಗತೋಽಸ್ಯ ಜಗತ್ಪತೇ ॥ ೫೮ ॥

ತಮೂಹ ದೇವದೇವೇಶಃ ಪುಂಡರೀಕನಿಭೇಕ್ಷಣಃ ।
ಸರ್ವ ಮೇತತ್ಸೃಹಾಭಾಗ ತವ ಭೂಯೋ ಭವಿಷ್ಯತಿ ॥ ೫೯ ॥

ಯುಚ್ಚ ಪ್ರಭಾ ತೇ ರಾತ್ರೌ ಚ ತ್ವಾಂ ನರಃ ಕೀರ್ತಯಿಷ್ಯತಿ ।
ನಮೋಽಸ್ತು ಕಾರ್ತವೀರ್ಯಾಯೇತ್ಯಭಿಧಾಸ್ಯತಿ ಚೈವ ಯಃ ॥
ತಿಲಪ್ರಸ್ಥಪ್ರದಾನಸ್ಯ ನರಃ ಪುಣ್ಯಮವಾಪ್ಸ್ಯತಿ ॥ ೬೦ ॥

ಅನಷ್ಟದ್ರವ್ಯತಾ ಚೈವ ತವ ನಾಮಾನುಕೀರ್ತನೇ ।
ಭವಿಷ್ಯತಿ ಮಹೀಪಾಲೇತ್ಯುಕ್ತ್ವಾ ತಂ ಪ್ರಯಯೌ ಹರಿಃ ॥ ೬೧ ॥

---

೫೮. "ಓ ಜಗತ್ಪತಿಯೇ! ಸರ್ವವಿಷಯಕವಾದ ಸ್ಮರಣ, ಜ್ಞಾನ, ಭಯಪೀಡಿತರಾದವರ ಭಯವನ್ನು ನಾಶಮಾಡುವ ಶಕ್ತಿ, ಯಾರಾದರೂ ನನ್ನನ್ನು ಸ್ಮರಿಸಿದ ಮಾತ್ರಕ್ಕೆ ಅವರಿಗೆ ಉಪಕಾರಮಾಡುವ ಶಕ್ತಿ, ಇವೆಲ್ಲಾ ನನಗೆ ಬರಬೇಕು" ಎಂದೂ ಕೇಳಿಕೊಂಡನು.

೫೯. ಕಮಲದಳನಯನನೂ ದೇವಾಧಿದೇವನೂ ಆದ ಶ್ರೀ ಮಹಾವಿಷ್ಣುವು ಅವನನ್ನು ಕುರಿತು ಹೇಳುತ್ತಾನೆ. "ಅಯ್ಯಾ ಮಹಾಭಾಗ್ಯಶಾಲಿಯೇ! ನೀನು ಕೇಳಿದ ವರವಲ್ಲದೆ ಈ ಮಹಿಮೆಗಳೂ ಕೂಡ ನಿನಗೆ ಲಭಿಸುವುವು."

೬೦. "ಮತ್ತು ಯಾವ ಪುರುಷನು ಪ್ರಾತಃಕಾಲದಲ್ಲಿಯಾಗಲಿ ರಾತ್ರಿಯ ಕಾಲದಲ್ಲಾಗಲಿ ನಿನ್ನ ನಾಮಸಂಕೀರ್ತನೆಮಾಡುವನೋ, ಮತ್ತು "ಕಾರ್ತವೀರ್ಯಾಯನಮೋಸ್ತು" ಎಂದು ಯಾವನು ಹೇಳುವನೋ ಅಂತಹ ಪುರುಷನು ಒಂದುಸೇರು ತಿಲದಾನ ಮಾಡಿದ್ದರಿಂದ ಬರುವಷ್ಟು ಪುಣ್ಯಕ್ಕೆ ಭಾಗಿಯಾಗುವನು."

೬೧. ಅಯ್ಯಾ ರಾಜನೇ! ನಿನ್ನ ನಾಮಸಂಕೀರ್ತನೆ ಮಾಡುವವನಿಗೆ ಯಾವಾಗಲೂ ದ್ರವ್ಯನಷ್ಟ ಸಂಭವಿಸುವಿಕೆಯು ಇಲ್ಲದಂತಾಗುವುದು. ನಷ್ಟವಾದ ದ್ರವ್ಯವೂ ಮತ್ತೆ ಲಭಿಸುವುದು." ಹೀಗೆಂದು ಆ ಕಾರ್ತವೀರ್ಯಾರ್ಜುನನಿಗೆ ಶ್ರೀ ಹರಿಯು ವರಪ್ರದಾನ ಮಾಡಿ ಅಂತರ್ಹಿತನಾದನು.

**ಸ ಚಾಪಿ ವರಮಾಸಾದ್ಯ ಪ್ರಸನ್ನಾದ್ಗರುಡಧ್ವಜಾತ್ ।**
**ಪಾಲಯಾಮಾಸ ಭೂಪಾಲಃ ಸಪ್ತದ್ವೀಪಾಂ ವಸುಂಧರಾಂ ॥ ೬೨ ॥**

**ತೇನೇಷ್ಟಂ ವಿವಿಧೈರ್ಯಜ್ಞೈಃ ಸಮಾಪ್ತವರದಕ್ಷಿಣೈಃ ।**
**ಜಿತ್ವಾರಿವರ್ಗಮಖಿಲಂ ಧರ್ಮತಃ ಪಾಲಿತಾಃ ಪ್ರಜಾಃ ॥ ೬೩ ॥**

**ಅನಂತವ್ರತಮಾಹಾತ್ಮ್ಯಾದಾಸಾದ್ಯ ತನಯಂ ಚ ತಂ ।**
**ಪಿತುಃ ಪುತ್ರೋದ್ಭವಂ ದುಃಖಂ ನಾಸೀತ್ಸ್ವಲ್ಪಮಪಿ ಪ್ರಭೋ ॥ ೬೪ ॥**

**ಏವಮೇತತ್ಸಮಾಖ್ಯಾತಮನಂತಾಖ್ಯಂ ವ್ರತಂ ತವ ।**
**ಯತ್ಕೃತ್ವಾ ರಾಜಪತ್ನೀ ಸಾ ಕಾರ್ತವೀರ್ಯಮಸೂಯತ ॥ ೬೫ ॥**

**ಯಶ್ಚೈತಚ್ಛೃಣುಯಾಜ್ಜನ್ಮ ಕಾರ್ತವೀರ್ಯಸ್ಯ ಮಾನವಃ ।**
**ಸ್ತ್ರೀ ವಾ ದುಃಖಮಪತ್ಯೋತ್ಥಂ ಸಪ್ತಜನ್ಮಸು ನಾಽಶ್ನುತೇ ॥ ೬೬ ॥**

---

೬೨. ಆ ರಾಜನು ಪ್ರಸನ್ನನಾದ ಗರುಡಧ್ವಜನಿಂದ ಈ ವರಗಳನ್ನು ಪಡೆದು, ಸಪ್ತದ್ವೀಪಸಹಿತವಾದ ಈ ಭೂಮಂಡಲವನ್ನು ರಕ್ಷಿಸುತ್ತಿದ್ದನು.

೬೩. ಇಂತಹ ಆ ಕಾರ್ತವೀರ್ಯಾರ್ಜುನ ಚಕ್ರವರ್ತಿಯು ಉತ್ತಮವಾದ ದಕ್ಷಿಣೆ ಕೊಟ್ಟು, ಸಾಂಗವಾಗಿ ಆಚರಿಸಬಹುದಾದ ವಿವಿಧ ಯಾಗಗಳನ್ನು ಮಾಡಿದನು. ಬ್ರಾಹ್ಮಣಾದಿ ನಾಲ್ಕುವರ್ಣದ ಪ್ರಜೆಗಳನ್ನೂ, ಧರ್ಮಮಾರ್ಗದಿಂದಲೇ ಪರಿಪಾಲಿಸುತ್ತಿದ್ದನು.

೬೪. ಅಯ್ಯಾ ರಾಜನೇ! ಆ ಕಾರ್ತವೀರ್ಯಾರ್ಜುನನ ತಂದೆಗೆ ಈ ಅನಂತವ್ರತಮಾಹಾತ್ಮ್ಯದಿಂದ ಸತ್ಸಂತಾನ ಪ್ರಾಪ್ತಿಯಾಗಿ, ಅವನಿಗೆ ಸ್ವಲ್ಪವೂ ಪುತ್ರಶೋಕವು ಒದಗಲಿಲ್ಲ.

೬೫. ಈರೀತಿ ಈ ಅನಂತ ವ್ರತವೆಂಬುದನ್ನು ನಾನು ನಿನಗೆ ಹೇಳಿದ್ದಾಯಿತು. ಈ ವ್ರತವನ್ನು ವಿಧಿಪೂರ್ವಕವಾಗಿ ಆಚರಿಸಿ, ರಾಜಪತ್ನಿಯಾದ ಆ ಶೀಲಧನಳು ಕಾರ್ತವೀರ್ಯನೆಂಬ ಪುತ್ರನನ್ನು ಪ್ರಸುವಿಸಿದಳು.

೬೬. ಆದುದರಿಂದ ಈ ಕಾರ್ತವೀರ್ಯಾರ್ಜುನನ ಕಥೆಯನ್ನು ಗಂಡಸಾಗಲಿ ಅಥವಾ ಹೆಂಗಸಾಗಲಿ ಶ್ರವಣ ಮಾಡಿದಪಕ್ಷದಲ್ಲಿ ಅವರು ಏಳು ಜನ್ಮಗಳ ವರೆಗೂ ಪುತ್ರಶೋಕವೆಂಬುದನ್ನೇ ಹೊಂದುವುದಿಲ್ಲ.

ಐಶ್ವರ್ಯಮಪ್ರತಿಹತಂ ಪರಮಂ ವಿವೇಕಂ।
ಪುತ್ರಾನಮಿತ್ರಹೃದಯಾರ್ತಿಕರಾನ್ಬಹೂಂಶ್ಚ
ಕೃತ್ವಾತ್ವನಂತ ಇತಿ ಯದ್ವ್ರತನಾಮಧೇಯಂ ॥
ಪ್ರಾಪ್ನೋತ್ಯನಂತವಿಭವಸ್ಯ ವಿಭೋಃ ಪ್ರಸಾದಾತ್ ॥ ೬೭ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ಅನಂತವ್ರತವರ್ಣನಂ ನಾಮ ಷಡಧಿಕಶತತಮೋಽಧ್ಯಾಯಃ.



---

೬೭. ಅನಂತ ಎಂಬ ನಾಮಧೇಯವುಳ್ಳ ಈ ವ್ರತವನ್ನು ಆಚರಿಸಿದರೆ ಅಂತಹವನು ಅನಂತ ಮಹಿಮೆಯುಳ್ಳ ಸ್ವಾಮಿಯಾದ ಶ್ರೀಹರಿಯ ವರಪ್ರಸಾದ ದಿಂದ ಅಪ್ರತಿಹತವಾದ ಐಶ್ವರ್ಯವನ್ನೂ ಸೌಭಾಗ್ಯವನ್ನೂ ಪರಮವಿವೇಕವನ್ನೂ ಶತ್ರು ಹೃದಯವಿದಾರಕರಾದ ಬಹುಪುತ್ರರನ್ನೂ ಪಡೆಯುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪವದಲ್ಲಿ ಅನಂತವ್ರತವರ್ಣನೆ ಯೆಂಬ ನೂರಆರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣ
## ಉತ್ತರಪರ್ವಣಿ
## ಸಪ್ತಾಧಿಕಶತತಮೋಽಧ್ಯಾಯಃ

---

॥ ಯುಧಿಷ್ಠಿರ ಉವಾಚ ॥

ಅಪ್ರಾಪ್ತೈರ್ನ ತಥಾ ದುಃಖಮೈಶ್ವರ್ಯಾದ್ಯೈರ್ನರೋತ್ತಮ ।
ಯಥಾ ಮನೋರಥೈಃ ಸ್ವೈಃಸ್ವೈ ರ್ನಾನಾದುಃಖಂ ಭವೇನ್ನೃಣಾಂ ॥೧॥

ಯಥಾ ಮನೋರಥೈರ್ಲಬ್ಧೈ ರ್ನಸ್ಯಾದ್ದುಃಖಭಯಂ ನೃಣಾಂ ।
ಐಶ್ವರ್ಯಾದ್ವಿಚ್ಯುತೋ ವಾಪಿ ಸಂತತೇರ್ದೇವಲೋಕತಃ ॥ ೨ ॥

---

## ನೂರಏಳನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಎಲೈ ಪುರುಷೋತ್ತಮನೆ ! ಪುರುಷರಿಗೆ ಐಶ್ವರ್ಯವೇ ಮೊದಲಾದ ಮನೋರಥಗಳು ಸಂಪೂರ್ಣವಾಗಿ ನಾಶವಾದರೆ ನಾನಾತರಹದ ದುಃಖಗಳು ಬರುವವಷ್ಟೆ. ಆ ಐಶ್ವರ್ಯಾದಿ ಮನೋರಥಗಳು ಕೈಗೂಡದಿದ್ದರೂ ಅಂತಹ ದುಃಖವು ಆಗುವುದಿಲ್ಲ.

೨. ಪುರುಷರಿಗೆ ಮನೋರಥಗಳು ಪ್ರಾಪ್ತಿಯಾಗಿ ದುಃಖಭಯವು ಬಾರದೇ ಇರುವಂತಹ ಒಂದು ಉಪಾಯವನ್ನು ಹೇಳು. ಐಶ್ವರ್ಯಚ್ಯುತಿ, ಸಂತತಿನಾಶ, ದೇವಲೋಕದಿಂದ ಚ್ಯುತಿ, ಇತ್ಯಾದಿಯಾದ ಮನೋರಥನಾಶದಿಂದ ಬರುವ ದುಃಖವೆಲ್ಲಾ ನಾಶವಾಗಬೇಕು.

ಅಭೀಷ್ಟಾದನ್ಯತೋ ವಾಪಿ ಯದಾಘೇನ ವಿನಿಷ್ಕೃತಂ ।
ಪ್ರಾಪ್ನೋತಿ ಪುರುಷೋ ವಾಥ ನಾರೀ ವಾ ಪುಣ್ಯಸಂಚಯಾತ್ ॥
ತನ್ಮಮಾಚಕ್ಷ್ವ ಭಗವನ್ಯೇನ ನಾಭ್ಯೇತಿ ವಿಚ್ಯುತಿಂ ॥ ೩ ॥

॥ ಶ್ರೀಕೃಷ್ಣ ಉವಾಚ ॥

ಸತ್ಯಮೇನ್ಮಹಾಭಾಗ ದುಃಖಂ ಪ್ರಾಪ್ನೋತ್ಯಸಂಶಯಃ ॥ ೪ ॥

ಐಶ್ವರ್ಯೋದಯಚಿತ್ತಸ್ಯ ಬಂಧುವರ್ಗಸುಖಸ್ಯ ಚ ।
ತದೇತಚ್ಛ್ರೂಯತಾಂ ಪಾರ್ಥ ಯಥಾ ನೇಷ್ಟಾತ್ಪರಿಚ್ಯುತಿಃ ॥ ೫ ॥

ಸ್ವರ್ಗಾದೇರ್ಜಾಯತೇ ಸಮ್ಯಗುಪವಾಸವತಾಂ ಸತಾಂ ।
ದ್ವಾದಶರ್ಕ್ಷಾಣಿ ರಾಜೇಂದ್ರ ಪ್ರತಿಮಾಸಂ ತು ಯಾನಿ ವೈ ॥ ೬ ॥

---

೩. ಓ ಭಗವಂತನೇ ! ಪುರುಷನು ತನ್ನ ದುಷ್ಕರ್ಮವಿಪಾಕದಿಂದ ಇತರ ಇಷ್ಟವಸ್ತುಗಳಿಂದ ವಿಯೋಗಹೊಂದಿ ದುಃಖಿಸುವನು. ಆದುದರಿಂದ ಗಂಡಸು ಅಥವಾ ಹೆಂಗಸು ಯಾವ ಕರ್ಮ ಮಾಡಿದರೆ, ಆ ಪುಣ್ಯದಿಂದ ಅವರ ಅಭೀಷ್ಟಫಲ ಚ್ಯುತಿಯಾಗುವುದಿಲ್ಲವೋ ಅಂತಹ ಕರ್ಮವನ್ನು ನನಗೆ ಉಪದೇಶಿಸು ಎಂದನು.

೪. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಮಹಾಭಾಗ್ಯಶಾಲಿಯೇ! ಈ ನಿನ್ನ ಮಾತು ನಿಜ. ಪುರುಷನಿಗೆ ಅಭೀಷ್ಟಚ್ಯುತಿಯಾದರೆ ನಿಸ್ಸಂದೇಹವಾಗಿ ಅವನು ದುಃಖಹೊಂದುತ್ತಾನೆ.

೫. ಅಯ್ಯಾ ಕುಂತೀಪುತ್ರನೇ ! ಐಶ್ವರ್ಯಪ್ರಾಪ್ತಿಯಾಗಿ ತದೇಕಮಗ್ನವಾದ ಚಿತ್ತವುಳ್ಳವನಿಗೂ, ಬಂಧುವರ್ಗದಿಂದ ಸುಖವನ್ನು ಪಡೆದವನಿಗೂ, ಆ ಇಷ್ಟವಾದ ಐಶ್ವರ್ಯ, ಬಂಧು, ಮೊದಲಾದವರ ಚ್ಯುತಿಯಿಂದ ದುಃಖವುಂಟಾಗದ ಹಾಗೆ ಮಾಡುವ ವ್ರತವೊಂದನ್ನು ಹೇಳುತ್ತೇನೆ ಕೇಳು.

೬. ಅಯ್ಯಾ ರಾಜೇಂದ್ರನೇ ! ಇಷ್ಟವಾದ ಸ್ವರ್ಗಾದಿ ಲೋಕಗಳಿಂದ ವಿಚ್ಯುತಿ ಬಾರದೆ ಇರುವುದಕ್ಕಾಗಿ, ವಿಹಿತಕ್ರಮದಿಂದ ಉಪವಾಸವನ್ನು ಆಚರಿಸಿ, ಪ್ರತಿತಿಂಗಳಿನಲ್ಲೂ ಆಯಾಯಾ ಮಾಸನಾಮಕನಾದ ನಕ್ಷತ್ರಗಳನ್ನು ಆರಾಧಿಸಬೇಕು. ಈರೀತಿ ಹನ್ನೆರಡು ತಿಂಗಳುಗಳಲ್ಲಿಯೂ ಕ್ರಮವಾಗಿ ಹನ್ನೆರಡು ನಕ್ಷತ್ರಗಳನ್ನೂ ಆರಾಧಿಸಬೇಕು.

ತಸ್ಮಾನ್ನಾ ಚಾಚ್ಯುತಂ ತೇಷು ಸಮ್ಯಕ್ಸಂಪೂಜಯೇನ್ನೃಪ ।
ಪುಷ್ಪೈರ್ಧೂಪೈಸ್ತಥಾಂಭೋಭಿರಭೀಷ್ಟೈರಪರೈರಪಿ ॥ ೭ ॥

ಆದಿತಃ ಕೃತ್ತಿಕಾಂ ಕೃತ್ವಾ ಕಾರ್ತಿಕೇ ನೃಪಸತ್ತಮ ।
ಕೃಶರಾಮತ್ರ ನೈವೇದ್ಯಂ ಪೂರ್ವಂ ಮಾಸಚತುಷ್ಟಯಂ ॥ ೮ ॥

ನಿವೇದಯೇತ್ಫಾಲ್ಗುನಾದಿ ಸಂಯಾವಂ ಚ ತತಃ ಪರಂ ।
ಆಷಾಢಾದಿಷು ದೇವಾಯ ಪಾಯಸಂ ವಿನಿವೇದಯೇತ್ ॥ ೯ ॥

ತೇನೈವಾನ್ನೇನ ರಾಜೇಂದ್ರ ಬ್ರಾಹ್ಮಣಾನ್ಭೋಜಯೇದ್ಬುಧಃ ।
ಪಂಚಗವ್ಯಜಲಸ್ನಾನಂ ತಸ್ಯೈವ ಪ್ರಾಶನಾಚ್ಛುಚಿಃ ॥ ೧೦ ॥

---

೭. ಅಯ್ಯಾ ರಾಜನೇ ! ನಕ್ಷತ್ರಾರಾಧನಾರೂಪವಾಗಿ ಆಯಾತಿಂಗಳುಗಳಲ್ಲಿ ಆ ನಕ್ಷತ್ರನಾಮಗಳಿಂದ ಶ್ರೀಹರಿಯನ್ನು ಪುಷ್ಪ, ಧೂಪ, ಜಲ, ಮತ್ತು ಅಭೀಷ್ಟವಾದ ಇತರ ಪೂಜಾಸಾಮಗ್ರಿಗಳು, ಇವುಗಳಿಂದ ಚೆನ್ನಾಗಿ ಪೂಜಿಸಬೇಕು.

೮. ಅಯ್ಯಾ ರಾಜಶ್ರೇಷ್ಠನೇ ! ಈ ವ್ರತವನ್ನು ಕಾರ್ತಿಕಮಾಸದಲ್ಲಿ ಆರಂಭಿಸಿ, ಕೃತಿಕಾನಕ್ಷತ್ರವನ್ನು ಮೊದಲು ಮಾಡಿಕೊಂಡು ಪೂಜಿಸಬೇಕು. ಮೊದಲನೆಯ ಪರ್ಯಾಯದ ಕಾರ್ತಿಕ ಮೊದಲ್ಗೊಂಡು ನಾಲ್ಕು ತಿಂಗಳುಗಳಲ್ಲಿ ಕೃಶರವನ್ನು ನೈವೇದ್ಯಮಾಡಬೇಕು.

೯. ಅನಂತರ ಫಾಲ್ಗುಣ ಮೊದಲ್ಗೊಂಡು ನಾಲ್ಕುತಿಂಗಳುಗಳಲ್ಲಿ ಸಜ್ಜಿಗೆಯನ್ನು ನಿವೇದನ ಮಾಡಬೇಕು. ಆಷಾಢ ಮೊದಲಾಗಿ ನಾಲ್ಕು ತಿಂಗಳುಗಳಲ್ಲಿ ದೇವನಿಗೆ ಪಾಯಸವನ್ನು ನೈವೇದ್ಯ ಮಾಡಬೇಕು.

೧೦. ಅಯ್ಯಾ ರಾಜೇಂದ್ರನೇ ! ಈ ವ್ರತವನ್ನು ಆಚರಿಸುವ ಪ್ರಾಜ್ಞನು ಆ ದೇವರಿಗೆ ನಿವೇದಿತವಾದ ಅನ್ನಾದಿಗಳಿಂದಲೇ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಮತ್ತು ಅವನು ಪಂಚಗವ್ಯಜಲದಲ್ಲಿ ಸ್ನಾನಮಾಡಿ ಆ ಪಂಚಗವ್ಯವನ್ನೇ ಪ್ರಾಶನೆ ಮಾಡುವುದರಿಂದ ಶುಚಿಯಾಗುತ್ತಾನೆ.

ಸಮ್ಯಕ್ಸಂಪೂಜ್ಯ ರಾಜೇಂದ್ರ ತಮೇವ ಪುರುಷೋತ್ತಮಂ ।
ಪ್ರಣಮ್ಯ ಪ್ರಾರ್ಥಯೇದ್ವಿಷ್ಣುಂ ಶುಚಿಃ ಸ್ನಾತೋ ಯಥಾವಿಧಿ ॥೧೧॥

ನಮೋನಮಸ್ತೇಽಚ್ಯುತ ಮೇ ಕ್ಷಯೋಽಸ್ತು ।
ಪಾಪಸ್ಯ ವೃದ್ಧಿಂ ಸಮುಪೈತು ಪುಣ್ಯಂ ॥
ಐಶ್ವರ್ಯವಿತ್ತಾದಿ ತಥಾಽಕ್ಷಯಂ ಮೇ ।
ಕ್ಷಯಂ ಚ ಮಾ ಸಂತತಿರಭ್ಯುಪೈತು ॥ ೧೨ ॥

ಯಥಾಚ್ಯುತಸ್ತ್ವಂ ಪರತಃ ಪರಸ್ಮಾತ್ ।
ಸ ಬ್ರಹ್ಮಭೂತಃ ಪರತಃ ಪರಾತ್ಮಾ ॥
ತಥಾಚ್ಯುತಂ ಮೇ ಕುರು ವಾಂಛಿತಂ ತ್ವಂ ।
ಪರಸ್ವ ಪಾಪಂ ಚ ತಥಾಪ್ರಮೇಯ ॥ ೧೩ ॥

ಅಚ್ಯುತಾನಂತಗೋವಿಂದ ಪ್ರಸೀದ ಯದಭೀಪ್ಸಿತಂ ।
ತದಕ್ಷಯಮಮೇಯಾತ್ಮನ್ ಕುರುಷ್ವ ಪುರುಷೋತ್ತಮ ॥ ೧೪ ॥

---

೧೧. ಅಯ್ಯಾ ರಾಜೇಂದ್ರನೇ ! ಈ ವ್ರತವನ್ನು ಆಚರಿಸುವವನು ಸ್ನಾನ ಮಾಡಿ ಶುಚಿಯಾಗಿ ಆ ಪುರುಷೋತ್ತಮನಾದ ಶ್ರೀ ವಿಷ್ಣುವನ್ನು ವಿಧ್ಯುಕ್ತರೀತಿ ಭಕ್ತಿಯಿಂದ ಪೂಜೆಮಾಡಿ ನಮಸ್ಕರಿಸಿ ಪ್ರಾರ್ಥನೆ ಮಾಡಿಕೊಳ್ಳಬೇಕು.

೧೨. ಓ ಹರಿಯೇ ! ನಿನಗೆ ಅನೇಕ ವಂದನೆಗಳು. ನನ್ನ ಪಾಪವು ನಾಶವಾಗಲಿ, ಪುಣ್ಯವು ವೃದ್ಧಿಹೊಂದಲಿ, ಮತ್ತು ನನ್ನ ಐಶ್ವರ್ಯಧನಾದಿಗಳು ಅಕ್ಷಯಗಳಾಗಲಿ, ಮತ್ತು ನನ್ನ ಸಂತತಿಯು ನಾಶವಾಗದಿರಲಿ.

೧೩. ನೀನು ಕಾರ್ಯವರ್ಗಕ್ಕಿಂತ ಭಿನ್ನವಾದ ಮಾಯೆಗೂ ಪರನಾಗಿ ಅಚ್ಯುತನೂ, ಮತ್ತು ಬ್ರಹ್ಮಸ್ವರೂಪಿಯೂ ಸರ್ವೋತ್ತಮನಾದ ಪರಮಾತ್ಮಸ್ವರೂಪನೂ ಹೇಗೆ ಆಗಿರುವೆಯೋ, ಹಾಗೆಯೇ ನೀನು ನನ್ನ ಮನೋರಥಕ್ಕೆ ಚ್ಯುತಿ ಇಲ್ಲದ ಹಾಗೆ ಮಾಡು. ಓ ಅಪ್ರಮೇಯನೇ ! ನನ್ನ ಸಕಲ ಪಾಪವನ್ನೂ ನಾಶಮಾಡು.

೧೪. ಓ ಅಚ್ಯುತ ! ಅನಂತ !! ಗೋವಿಂದ !!! ನೀನು ನನಗೆ ಪ್ರಸನ್ನನಾಗು. ಸ್ವಾಮಿ ಪುರುಷೋತ್ತಮನೇ! ನನಗೆ ಯಾವುದು ಇಷ್ಟವಾದ ವಸ್ತುವೋ ಅದೆಲ್ಲಾ ಅಕ್ಷಯವಾಗಲಿ, ಎಂಬ ಅರ್ಥವುಳ್ಳ ಈ ಮಂತ್ರಗಳ ಪೂರ್ವಕ ಪ್ರಾರ್ಥನೆ ಮಾಡಿಕೊಳ್ಳಬೇಕು.

ಏವಮೇವಂ ಸಮಭ್ಯರ್ಚ್ಯ ಪ್ರಾರ್ಥಯಿತ್ವಾ ತಥಾ ಶಿವಂ ।
ನೈವೇದ್ಯಂ ಸ್ವಯಮಶ್ನೀಯಾನ್ನಕ್ತಂ ಸಂಪೂಜಿತೇಽಚ್ಯುತೆ ॥ ೧೫ ॥

ತತಃ ಸಂವತ್ಸರಸ್ಯಾಂತೇ ಸುಖಸುಪ್ತೋತ್ಥಿತೇಽಚ್ಯುತೇ ।
ಘೃತಪೂರ್ಣಂ ತಾಮ್ರಪಾತ್ರಂ ಬ್ರಾಹ್ಮಣಾಯ ನಿವೇದಯೇತ್ ॥೧೬॥

ಶಕ್ತಿತೋ ದಕ್ಷಿಣಾಂ ದದ್ಯಾದಚ್ಯುತಃ ಪ್ರೀಯತಾಮಿತಿ ।
ತತಸ್ತು ಸಪ್ತಮೇ ವರ್ಷೇ ಕುರ್ಯಾದುದ್ಯಾಪನಂ ಬುಧಃ ॥ ೧೭ ॥

ಕಾರ್ಯಾ ಚೈವಾಚ್ಯುತಸ್ಯಾರ್ಚಾ ಶಕ್ತ್ಯಾ ಸ್ವರ್ಣಮಯೀ ನೃಪ ।
ತದಗ್ರೇ ಬ್ರಾಹ್ಮಣೀ ಸ್ಥಾಪ್ಯಾ ಸ್ಥವಿರಾ ಸಾಂಭರಾಯಣೀ ॥ ೧೮ ॥

ಮಹಾಸತೀ ರೌಪ್ಯಮಯೀ ಸಮಾನಾರ್ಹಾ ಸದೇವತಾ ।
ತತಸ್ತೌ ಪೂಜಯಿತ್ವಾ ಚ ಮಾಲ್ಯವಸ್ತ್ರವಿಲೇಪನೈಃ ॥ ೧೯ ॥

---

೧೫. ಈರೀತಿ ಶ್ರೀಹರಿಯನ್ನು ಪೂಜಿಸಿ ಹಿಂದೆ ಹೇಳಿದಂತೆಯೇ ಕಲ್ಯಾಣ ಕಾಂಕ್ಷಿಯಾಗಿ ಶ್ರೀಹರಿಪೂಜೆ ಮಾಡಿದ ಮೇಲೆ ರಾತ್ರಿಯಲ್ಲಿ ಆ ನೈವೇದ್ಯವನ್ನೇ ತಾನು ಭುಂಜಿಸಬೇಕು.

೧೬. ಅನಂತರ ವರ್ಷದ ಕೊನೆಯಲ್ಲಿ ಸುಪ್ತನಾಗಿದ್ದ ಶ್ರೀ ಹರಿಯು ಎದ್ದ ಮೇಲೆ ಘೃತಪೂರಿತವಾದ ತಾಮ್ರಪಾತ್ರೆಯನ್ನು ಬ್ರಾಹ್ಮಣನಿಗೆ ದಾನಮಾಡಬೇಕು

೧೭. ಶ್ರೀ ಅಚ್ಯುತಃ ಪ್ರೀಯತಾಂ ಎಂದು ಹೇಳಿ ಸ್ವಶಕ್ತ್ಯಾನುಸಾರ ದಕ್ಷಿಣೆ ಯನ್ನು ಕೊಡಬೇಕು. ಪ್ರಾಜ್ಞನಾದವನು ಅನಂತರ ಏಳನೆಯ ವರ್ಷದಲ್ಲಿ ಈ ವ್ರತೋದ್ಯಾಪನ ಮಾಡಬೇಕು.

೧೮. ಅಯ್ಯಾ ರಾಜನೇ! ಆಗ ಸ್ವಶಕ್ತ್ಯನುಸಾರ ಸ್ವರ್ಣಮಯವಾದ ಶ್ರೀ ಹರಿಪ್ರತಿಮೆಯನ್ನು ಮಾಡಿಸಿ ಪೂಜಿಸಬೇಕು. ಆಗ ಹರಿಯಪ್ರತಿಮೆ ಮುಂಭಾಗ ದಲ್ಲಿ ವೃದ್ಧ ಬ್ರಾಹ್ಮಣಿರೂಪದ ಸಾಂಭರಾಯಣೀ ಪ್ರತಿಮೆಯನ್ನು ಸ್ಥಾಪಿಸಬೇಕು.

೧೯. ಮಹಾಪತಿವ್ರತೆಯಾದ ಆ ಸಾಂಭರಾಯಣಿಯ ಪ್ರತಿಮೆಯನ್ನು ಬೆಳ್ಳಿಯಿಂದ ಮಾಡಿಸಬೇಕು. ಸಾಂಭರಾಯಣಿಯನ್ನು ಶ್ರೀಹರಿಸಮಾನವಾಗಿ ಭಾವಿಸಿ, ದೇವತಾಭಿಮಾನದಿಂದ ಮಾಲ್ಯ ವಸ್ತ್ರ ವಿಲೇಪನ ಇವುಗಳಿಂದ ಆ ಹರಿ ಯನ್ನೂ ಸಾಂಭರಾಯಣಿಯನ್ನೂ ಪೂಜಿಸಬೇಕು.

ಮಂತ್ರೇಣಾನೇನ ರಾಜೇಂದ್ರ ಪ್ರಣಿಪತ್ಯ ವಿಧಾನತಃ ।
ಪ್ರತಿವರ್ಷಂ ಚ ದತ್ತಂ ಚೇತ್ತಾಮ್ರಂ ಪಾತ್ರಂ ದ್ವಿಜಾತಯೇ ॥ ೨೦ ॥

ತದೇವಹೇಲಯಾ ದದ್ಯಾತ್ಸಹಿರಣ್ಯಾಶ್ವಸಂಯುತಂ ।
ಗಾಶ್ಚ ಪ್ರದದ್ಯಾತ್ಸಂಪೂಜ್ಯ ಸವತ್ಸಾಃ ಕಾಂಸ್ಯದೋಹನಾಃ ॥ ೨೧ ॥

ಏಕಾಂ ವಾ ಶಕ್ತಿತೋ ದದ್ಯಾದ್ಭಕ್ತ್ಯಾ ತುಷ್ಯತಿ ಕೇಶವಃ ।
ಘಟಾಃ ಸತ್ಪಾತ್ರನಿರ್ದಿಷ್ಟಾಃ ಸಾನ್ನಾಃ ಪೂರ್ಣಜಲೋಜ್ಜ್ವಲಾಃ ॥೨೨॥

ಛತ್ರೋಪಾನದ್ಯುಗೈಃ ಸಾರ್ಧಮೇವಂ ದತ್ವಾ ವಿಸರ್ಜಯೇತ್ ।
ಶಯ್ಯಾಂ ಸತೂಲಿಕಾಂ ದದ್ಯಾದ್ಗೃಹಂ ಚೋಪಸ್ಕರೈಸ್ಸಹ ॥ ೨೩ ॥

ಶ್ರಿಯಾಂ ಚ ಸಹ ವಿಷ್ಣುಂ ಚ ಪೂಜಯೇದ್ಭೂಷಯೇತ್ಪ್ರಭುಂ ।
ವಸ್ತ್ರೈರಾಭರಣೈಶ್ಚೈವ ಪ್ರಣಿಪತ್ಯ ಕ್ಷಮಾಪಯೇತ್ ॥ ೨೪ ॥

---

೨೦-೨೧. ಅಯ್ಯಾ ರಾಜೇಂದ್ರನೇ! ನಮಸ್ಕಾರಪೂರ್ವಕವಾಗಿ ಈ ಹಿಂದೆ ಹೇಳಿದ ಮಂತ್ರವನ್ನು ಹೇಳಿ ಶಾಸ್ತ್ರಪ್ರಕಾರವಾಗಿ ಪೂಜೆಮಾಡಬೇಕು. ಪ್ರತಿವರ್ಷದಲ್ಲೂ ಬ್ರಾಹ್ಮಣನಿಗೆ ತಾಮ್ರದ ಪಾತ್ರೆಯನ್ನು ದಾನ ಮಾಡುತ್ತಿದ್ದರೆ ಈ ಉದ್ಯಾಪನೆಯ ಸಮಯದಲ್ಲಿಯೂ ಅದನ್ನೇ ಹಿರಣ್ಯ, ಮತ್ತು ಅಶ್ವ, ಇವುಗಳ ಸಹಿತವಾಗಿ ದಾನಮಾಡಬೇಕು. ಕಂಚಿನ ಹಾಲುಕರೆಯುವ ಪಾತ್ರೆಸಮೇತ ಕರೆಯುವ ಹಸುವನ್ನೂ, ಕರುವನ್ನೂ ಪೂಜಿಸಿ ಬ್ರಾಹ್ಮಣರಿಗೆ ದಾನ ಮಾಡಬೇಕು.

೨೨. ಅಥವಾ ಸ್ವಶಕ್ತ್ಯನುಸಾರವಾಗಿ ಭಕ್ತಿಯಿಂದ ಒಂದು ಗೋವನ್ನಾದರೂ ದಾನ ಮಾಡಬೇಕು. ಯಾವಾಗಲೂ ಶ್ರೀಹರಿಯು ಭಕ್ತಿಯಿಂದ ಸಂತುಷ್ಟನಾಗುತ್ತಾನೆ.

೨೩. ಜಲಪೂರಿತಳಾಗಿ ಪ್ರಕಾಶಮಾನಗಳಾಗಿರುವ ಕಲಶಗಳನ್ನೂ ಅನ್ನದ ತಪ್ಪಲೆ, ಪಾದುಕೆ, ಇವುಗಳನ್ನು ಬ್ರಾಹ್ಮಣನಿಗೆ ದಾನಮಾಡಿ ಅವರನ್ನು ಕಳುಹಿಸಬೇಕು. ಮತ್ತು ಹಾಸಿಗೆ ಸಮೇತ ಮಂಚವನ್ನೂ ಉಪಕರಣ ಸಹಿತವಾಗಿ ಗೃಹ ದಾನಮಾಡಬೇಕು.

೨೪. ಲಕ್ಷ್ಮೀಸಮೇತನಾದ ಶ್ರೀಮಹಾವಿಷ್ಣುವನ್ನು ವಸ್ತ್ರಾಭರಣಾದಿಗಳಿಂದ ಅಲಂಕರಿಸಿ ಪೂಜಿಸಿ ನಮಸ್ಕಾರಮಾಡಿ ಕ್ಷಮೆಬೇಡಬೇಕು.

ಕೃತೇನಾನೇನ ರಾಜೇಂದ್ರ ಚ್ಯುತಿಂ ನಾಪ್ನೋತಿ ಮಾನವಃ ।
ಸಂತತೇಃ ಸ್ವರ್ಗವಿತ್ತಾದೇರೈಶ್ವರ್ಯಸ್ಯ ತಥೈವ ಚ ॥
ಯುದ್ವಾಭಿಮತಮನ್ಯಚ್ಚ ತತೋ ನ ಚ್ಯವತೇ ನರಃ ॥ ೨೫ ॥

ತಸ್ಮಾತ್ಸರ್ವಪ್ರಯತ್ನೇನ ಮಾಸನಕ್ಷತ್ರಪೂಜನೈಃ ।
ಯಜೇತಾಕ್ಷಯಕಾಮಸ್ತು ಸದೈವ ಪುರುಷೋತ್ತಮಂ ॥ ೨೬ ॥

॥ ಶ್ರೀಕೃಷ್ಣ ಉವಾಚ ॥

ಅತ್ರಾಪಿ ಶ್ರೂಯತೇ ಕಾಚಿತ್ಸಿದ್ಧಾ ಸ್ವರ್ಗೇ ಮಹಾವ್ರತಾ ।
ನಾರೀ ತಪೋಧನಾ ಭೂತ್ವಾ ಪ್ರಖ್ಯಾತಾ ಸಾಂಭರಾಯಣೀ ॥
ಸಮಸ್ತಸಂದೇಹಹರಾ ಸದಾ ಸ್ವರ್ಗೌಕಸಾಂ ಹಿ ಸಾ ॥ ೨೭ ॥

ಕಸ್ಯಚಿತ್ತ್ವಥ ಕಾಲಸ್ಯ ದೇವರಾಜಃ ಶತಕ್ರತುಃ ।
ಪೂರ್ವೇಂದ್ರಚರಿತಂ ರಾಜನ್ ಪಪ್ರಚ್ಛೇದಂ ಬೃಹಸ್ಪತಿಂ ॥ ೨೮ ॥

---

೨೫. ಅಯ್ಯಾ ರಾಜೇಂದ್ರನೇ ! ಈರೀತಿ ಮಾಡಿದ್ದರಿಂದ ಪುರುಷನಿಗೆ ಸಂತತಿ, ಭೂವೃದ್ಧಿ, ಮತ್ತು ಐಶ್ವರ್ಯ, ಸ್ವರ್ಗ, ಇವುಗಳಿಂದ ಚ್ಯುತಿ ಬರುವುದಿಲ್ಲ. ಮತ್ತು ಆ ಪುರುಷನಿಗೆ ಅಭಿಮತವಾದದ್ದು ಇನ್ನು ಯಾವುದು ಇರುವುದೋ ಅದರಿಂದಲೂ ಅವನು ಚ್ಯುತನಾಗುವುದಿಲ್ಲ.

೨೬. ಆದುದರಿಂದ ಅಭೀಷ್ಟ ವಸ್ತುವಿನ ಅಕ್ಷಯಾಭಿಲಾಷಯುಳ್ಳವನು ಸರ್ವಪ್ರಯತ್ನದಿಂದಲೂ ಯಾವಾಗಲೂ ಮಾಸನಕ್ಷತ್ರಪೂಜನರೂಪವಾಗಿ ಶ್ರೀ ಪುರುಷೋತ್ತಮನನ್ನು ಆರಾಧಿಸಬೇಕು.

೨೭. ಶ್ರೀ ಕೃಷ್ಣನು ಹೇಳುತ್ತಾನೆ—ಮಹಾವ್ರತಳೆನಿಸಿ ಸಿದ್ಧಿಹೊಂದಿದವಳೂ, ತಪೋಧನೆಯೂ ಆದ ಸಾಂಭರಾಯಣಿ ಎಂದು ಪ್ರಸಿದ್ಧಳಾದ ಒಬ್ಬಳು ಹೆಂಗಸು, ಈ ವ್ರತವನ್ನು ಆಚರಿಸಿ ಸ್ವರ್ಗದಲ್ಲಿ ಇರುವಳೆಂದೂ, ಅವಳು ಯಾವಾಗಲೂ ಸ್ವರ್ಗನಿವಾಸಿಗಳಾದ ದೇವತೆಗಳ ಸಮಸ್ತ ಸಂದೇಹವನ್ನೂ ನಿವಾರಿಸುವಳೆಂದೂ ಕೇಳಿದ್ದೇನೆ.

೨೮. ಅಯ್ಯಾ ರಾಜನೇ ! ನೂರು ಅಶ್ವಮೇಧ ಯಾಗಗಳನ್ನು ಮಾಡಿ ದೇವರಾಜಪದವಿಗೆ ಬಂದ ದೇವೇಂದ್ರನು ಒಂದಾನೊಂದು ಕಾಲದಲ್ಲಿ ಬೃಹಸ್ಪ

ಪೂರ್ವೇಂದ್ರಾಶ್ಚರತಃ ಪೂರ್ವೇ ಯೇ ಬಭೂವುಃ ಸುರೇಶ್ವರಾಃ ।
ತೇಷಾಂ ಚರಿತಮಿಚ್ಛಾಮಿ ಶ್ರೋತುಮಂಗಿರಸಾಂ ವರ ॥ ೨೯ ॥

ಏವಮುಕ್ತಸ್ತದಾ ತೇನ ದೇವೇಂದ್ರೇಣಾಮಲದ್ಯುತಿಃ ।
ಪ್ರಾಹ ಧರ್ಮಭೃತಾಂ ಶ್ರೇಷ್ಠಃ ಪರಮರ್ಷಿರ್ಬೃಹಸ್ಪತಿಃ ॥ ೩೦ ॥

ನಾಹಂ ಚಿರಂತನಾನ್ವೇದ್ಮಿ ದೇವರಾಜ ಸುರೇಶ್ವರಾನ್ ।
ಆತ್ಮನಃ ಸಮಕಾಲೀನಮವೇಹಿ ಚ ಸುರೇಶ್ವರ ॥ ೩೧ ॥

ತತಃ ಪ್ರಪಚ್ಛ ದೇವೇಂದ್ರಃ ಕೋಽಸ್ಮಾಭಿರ್ಮುನಿಪುಂಗವಃ ।
ಪ್ರಷ್ಟವ್ಯೋಽತ್ರ ಮಹಾಭಾಗ ಕೃತಾದಿವಸತಿರ್ದಿವಿ ॥ ೩೨ ॥

---

ತ್ಯಾಚಾರ್ಯನನ್ನು ಕುರಿತು ತನಗಿಂತ ಹಿಂದೆ ಆಳಿದ ಇಂದ್ರರ ಚರಿತ್ರೆಯ ವಿಷಯ ವಾಗಿ ಈರೀತಿ ಪ್ರಶ್ನೆಮಾಡಿದನು.

೨೯. "ಅಯ್ಯಾ ಆಂಗೀರಸಶ್ರೇಷ್ಠನೇ! ಪೂರ್ವಕಾಲದಲ್ಲಿ ಯಾವ ಯಾವ ಇಂದ್ರರು ಈ ದೇವತೆಗಳಿಗೆ ರಾಜರಾಗಿದ್ದರೋ ಅವರ ಚರಿತ್ರೆಯನ್ನು ಶ್ರವಣಮಾಡಬೇಕೆಂಬ ಅಭಿಲಾಷೆಯುಳ್ಳವನಾಗಿದ್ದೇನೆ" ಎಂದನು.

೩೦. ದೇವೇಂದ್ರನು ಈರೀತಿ ಪ್ರಶ್ನೆಮಾಡಲಾಗಿ ಮಹಾತೇಜಸ್ವಿಯೂ, ಧರ್ಮಾತ್ಮರಲ್ಲಿ ಉತ್ತಮನೂ, ಮಹರ್ಷಿಯೂ ಆಗಿರುವ ಆ ಬೃಹಸ್ಪತಿಯು ಉತ್ತರವನ್ನು ಹೇಳತೊಡಗಿ.

೩೧. "ಅಯ್ಯಾ ದೇವರಾಜನೇ! ಪ್ರಾಚೀನರಾದ ಆ ಸುರೇಂದ್ರರ ವಿಚಾರವು ನನಗೂ ತಿಳಿಯದು. ಅಯ್ಯಾ ದೇವೇಂದ್ರನೇ! ನೀನು ನನ್ನನ್ನು ನಿನ್ನ ಸಮಕಾಲಿಕನೆಂದೇ ತಿಳಿ" ಎಂದನು.

೩೨. ಈ ಮಾತನ್ನು ಕೇಳಿದ ಆ ದೇವೇಂದ್ರನು "ಈ ವಿಷಯ ತಿಳಿಯ ಬೇಕಾದರೆ ಯಾವ ಋಷಿಶ್ರೇಷ್ಠನನ್ನು ಪ್ರಶ್ನೆಮಾಡಬೇಕು? ಮೊದಲಿನಿಂದ ಈ ಸ್ವರ್ಗದಲ್ಲಿ ವಾಸವಾಗಿದ್ದು ಇದನ್ನೆಲ್ಲಾ ಬಲ್ಲವರು ಯಾರು?" ಎಂದು ಬೃಹಸ್ಪತಿಯನ್ನು ಪುನಃ ಕೇಳಿದನು.

ಬೃಹಸ್ಪತಿಶ್ಚಿರಂ ಧ್ಯಾತ್ವಾ ತತಃ ಪ್ರಾಹ ಶಚೀಶ್ವರಂ ।
ತಪಸ್ವಿನೀಂ ಮಹಾಭಾಗಾಂ ಪೃಚ್ಛ್ಯತಾಂ ಸಾಂಭರಾಯಣೀಂ ॥ ೩೩ ॥

ಇತ್ಯುಕ್ತಸ್ತೇನ ದೇವೇಂದ್ರಃ ಕೌತೂಹಲಸಮನ್ವಿತಃ ।
ಯಯೌ ಯತ್ರ ಮಹಾಭಾಗಾ ಸಮ್ಯಗಾಸ್ತೇ ತಪಸ್ವಿನೀ ॥ ೩೪ ॥

ಸಾ ತೌ ದೃಷ್ಟ್ವಾ ಸಮಾಯಾಂತೌ ದೇವರಾಜ ಬೃಹಸ್ಪತೀ ।
ಸಮ್ಯಗರ್ಘ್ಯೇಣ ಸಂಪೂಜ್ಯ ಪ್ರಣಿಪತ್ಯಾಹ ಸುವ್ರತಾ ॥ ೩೫ ॥

ನಮೋಽಸ್ತು ದೇವರಾಜಾಯ ತಥೈವಾಂಗಿರಸೇ ನಮಃ ।
ಯದ್ವಾಂ ಕಾರ್ಯಂ ಮಹಾಭಾಗೌ ಸಕಲಂ ತದಿಹೋಚ್ಯತಾಂ ॥೩೬॥

---

೩೩. ಅದಕ್ಕೆ ಬೃಹಸ್ಪತ್ಯಾಚಾರ್ಯರು ಬಹುಕಾಲ ಧ್ಯಾನನಿಷ್ಠರಾಗಿ ಬಳಿಕ ಯೋಗದೃಷ್ಟಿಯಿಂದ ತಿಳಿದು, ಅನಂತರ ಶಚೀಪತಿಯಾದ ಇಂದ್ರನನ್ನು ಕುರಿತು “ಓ ಇಂದ್ರನೇ ! ತಪಸ್ವಿನಿಯೂ, ಮಹಾಸೌಭಾಗ್ಯವತಿಯೂ ಆದ ಸಾಂಭರಾಯಣಿಯನ್ನು ಈ ವಿಷಯವಾಗಿ ಪ್ರಶ್ನೆಮಾಡಿ ತಿಳಿದುಕೋ ” ಎಂದು ಹೇಳಿದನು.

೩೪. ಬೃಹಸ್ಪತಿಯು ಹೀಗೆ ಹೇಳಿದ ಮೇಲೆ ದೇವೇಂದ್ರನು ಕುತೂಹಲ ಯುಕ್ತನಾಗಿ ಆ ಮಹಾಸೌಭಾಗ್ಯವತಿಯೂ, ತಪಸ್ವಿನಿಯೂ ಆದ ಸಾಂಭರಾಯ ಣಿಯು ಇರುವಲ್ಲಿಗೆ ಬೃಹಸ್ಪತಿಯೊಡನೆ ಹೋದನು.

೩೫. ಸುವ್ರತೆಯಾದ ಆ ಸಾಂಭರಾಯಣಿಯು ದೇವೇಂದ್ರ ಮತ್ತು ಬೃಹಸ್ಪತಿ ಇವರಿಬ್ಬರೂ ತನ್ನ ಬಳಿಗೆ ಬರುತ್ತಿರುವುದನ್ನು ನೋಡಿ, ಅರ್ಘ್ಯಾದ್ಯುಪ ಚಾರಗಳಿಂದ ಚೆನ್ನಾಗಿ ಅವರಿಗೆ ಪೂಜೆಮಾಡಿ, ನಮಸ್ಕರಿಸಿ.

೩೬. “ ಓ ದೇವೇಂದ್ರನೇ ! ನಿನಗೆ ನಮಸ್ಕಾರ. ಆಂಗೀರಸಕುಲಭೂಷಣ ರಾದ ಬೃಹಸ್ಪತ್ಯಾಚಾರ್ಯರೇ ! ನಿಮಗೆ ನಮಸ್ಕಾರ. ಓ ಮಹಾಭಾಗ್ಯ ಶಾಲಿಗಳೇ ! ನಿಮಗೆ ನನ್ನಿಂದ ಏನು ಕಾರ್ಯವಾಗಬೇಕಾಗಿದೆ ಎಂಬುವನ್ನು ಹೇಳಬೇಕು.”

ಯದಿ ಕರ್ತುಂ ಮಯಾ ಶಕ್ಯಂ ತತ್ಕರಿಷ್ಯೇ ವಿಮೃಶ್ಯ ಚ ॥ ೩೭ ॥

॥ ಬೃಹಸ್ಪತಿರುವಾಚ ॥

ಆವಾಮಭ್ಯಾಗತೌ ಪ್ರಷ್ಟುಂ ತ್ವಾಮತ್ರಾತಿವಿವೇಕಿನೀಂ ।
ಯಚ್ಚ ಕಾರ್ಯಂ ಮಹಾಭಾಗೇ ಪೃಷ್ಟಂ ತತ್ಕಥಯಸ್ವ ನಃ ॥ ೩೮ ॥

ಯದಿ ಸ್ಮರಸಿ ಕಲ್ಯಾಣಿ ಪೂರ್ವೇಂದ್ರಚರಿತಾನಿ ವೈ ।
ತದಾಖ್ಯಾಹಿ ಮಹಾಭಾಗೇ ದೇವೇಂದ್ರಸ್ಯ ಕುತೂಹಲಂ ॥ ೩೯ ॥

॥ ಸಾಂಭರಾಯಣ್ಯುವಾಚ ॥

ಯೋ ವೈ ಪೂರ್ವಂ ಸುರೇಂದ್ರಸ್ಯ ತತಶ್ಚ ಪ್ರಥಮೋ ಹಿ ಯಃ ।
ತಸ್ಮಾತ್ಪೂರ್ವತರೋ ಯಸ್ಯ ತಸ್ಯಾಪಿ ಪ್ರಥಮಶ್ಚ ಯಃ ॥ ೪೦ ॥

---

೩೭. ನಿಮ್ಮ ಆ ಕಾರ್ಯವನ್ನು ಮಾಡುವುದಕ್ಕೆ ನನಗೆ ಶಕ್ತಿ ಇದ್ದು ಅದನ್ನು ಮಾಡುವುದಕ್ಕೆ ನಾನು ಅರ್ಹಳೋ, ಅಲ್ಲವೋ ಎಂದು ವಿಮರ್ಶೆಮಾಡಿ, ಆ ಕಾರ್ಯವನ್ನು ಮಾಡುತ್ತೇನೆ '' ಎಂದಳು.

೩೮. ಬೃಹಸ್ಪತ್ಯಾಚಾರ್ಯರು ಹೇಳುತ್ತಾರೆ—" ಓ ಮಹಾಸೌಭಾಗ್ಯವತೀ ! ಅತಿವಿವೇಕಿನಿಯಾದ ನಿನ್ನಲ್ಲಿ ಪ್ರಶ್ನೆ ಮಾಡಿ, ನಾವಿಬ್ಬರೂ ಕೆಲವು ವಿಷಯಗಳನ್ನು ತಿಳಿದುಕೊಳ್ಳುವುದಕ್ಕೆ ಇಲ್ಲಿಗೆ ಬಂದಿದ್ದೇವೆ. ನಮ್ಮ ಕಾರ್ಯವೆಂದರೆ ನಮ್ಮ ಪ್ರಶ್ನೆಗೆ ಉತ್ತರಹೇಳುವುದಿಷ್ಟೆ. ಆದುದರಿಂದ ನಾವು ಕೇಳುವ ಪ್ರಶ್ನೆಗೆ ಉತ್ತರವನ್ನು ನಮಗೆ ಹೇಳು.

೩೯. ಓ ಮಂಗಳಕರಳೇ ! ಹಿಂದೆ ಆಳಿದ ಇಂದ್ರರ ವಿಷಯವು ನಿನಗೆ ಜ್ಞಾಪಕವಿರುವುದಾದರೆ ಅದನ್ನು ನಮಗೆ ಹೇಳು. ಓ ಮಹಾಸೌಭಾಗ್ಯವತೀ ! ಆ ಪೂರ್ವದ ಇಂದ್ರರ ಚರಿತ್ರೆಯನ್ನು ಶ್ರವಣಮಾಡಬೇಕೆಂದು ಈ ದೇವೇಂದ್ರನಿಗೆ ಬಹು ಕುತೂಹಲವಿದೆ ಎಂದರು.

೪೦–೪೧. ಸಾಂಭರಾಯಣಿಯು ಹೇಳುತ್ತಾಳೆ—ಅಯ್ಯಾ ಅಂಗೀರಸ ಶ್ರೇಷ್ಠನೇ ! ಈ ಸುರೇದ್ರನಿಗಿಂತ ಹಿಂದೆ ಸುರೇಂದ್ರನಾಗಿದ್ದವನು, ಅವನಿಗಿಂತ ಮುಂಚೆ ದೇವೇಂದ್ರನಾಗಿದ್ದವನು, ಅವನಿಗಿಂತ ಅತಿಪೂರ್ವದಲ್ಲಿ ಇಂದ್ರಪದದಲ್ಲಿ

ತೇಷಾಂ ಪೂರ್ವತರಾ ಯೇ ಚ ವೇದ್ಮಿ ತಾನಖಿಲಾನಹಂ ।
ತೇಷಾಂ ಚ ಚರಿತಂ ಕೃತ್ಸ್ನಂ ಜಾನಾಮ್ಯಂಗಿರಸಾಂ ವರ ॥ ೪೧ ॥

ಮನ್ವಂತರಾಣ್ಯನೇಕಾನಿ ಸೃಷ್ಟೀಶ್ಚ ತ್ರಿದಿವೌಕಸಾಂ ।
ಸಪ್ತರ್ಷೀನ್ಸುಬಹೂನ್ವೇದ್ಮಿ ಮನೂನಾಂ ಚ ಸುತಾನ್ನೃಪಾನ್ ॥ ೪೨ ॥

ಏವಮುಕ್ತ್ವಾ ತತಸ್ತಾಭ್ಯಾಂ ಸುಹೃಷ್ಟಾ ಸಾಂಭರಾಯಣೀ ।
ಯಥಾವದಾಚಷ್ಟ ತಯೋಃ ಪೂರ್ವೇಂದ್ರಚರಿತಂ ಮಹತ್ ॥ ೪೩ ॥

ಸ್ವಾಯಂಭುವೇ ಯಸ್ತು ಮನೌ ಮನೌ ಸ್ವಾರೋಚಿಷೇ ಚ ಯಃ ।
ಉತ್ತಮೇ ತಾಮಸೇ ಚೈವ ರೈವತೇ ಚಾಕ್ಷುಷೇ ತಥಾ ॥ ೪೪ ॥

ಯೇ ಬಭೂವುರ್ಹಿ ದೇವೇಂದ್ರಾಸ್ತಸ್ಯ ತಸ್ಯ ತಪಸ್ವಿನೀ ।
ತದಾ ಜಗಾದ ಚರಿತಂ ಯಥಾವತ್ಸಾಂಭರಾಯಣೀ ॥ ೪೫ ॥

---

ದ್ದವನು, ಅವನಿಗಿಂತಲೂ ಪೂರ್ವದಲ್ಲಿ ಇಂದ್ರನಾಗಿದ್ದವನು, ಇಷ್ಟುಮಂದಿ ಇಂದ್ರರಿಗಿಂತ ಪ್ರಾಚೀನರಾಗಿ ಇಂದ್ರರೆನಿಸಿದ್ದವರು, ಅವರೆಲ್ಲರ ಜ್ಞಾಪಕವೂ ನನಗಿದೆ. ಆ ಎಲ್ಲ ಇಂದ್ರರ ಚರಿತ್ರೆಯೂ ನನಗೆ ಗೊತ್ತು.

೪೨. ಅನೇಕ ಮನ್ವಂತರಗಳು ಆಗ ಆದ ಬಹು ದೇವತೆಗಳ ಸೃಷ್ಟಿ, ಸಪ್ತರ್ಷಿಗಳು, ಮನುಪುತ್ರರಾದ ಅನೇಕ ಅರಸರು, ಇವರುಗಳನ್ನೆಲ್ಲಾ ನಾನು ತಿಳಿದಿದ್ದೇನೆ ಎಂದಳು.

೪೩. ಆ ಸಾಂಭರಾಯಣಿಯು ಈ ರೀತಿ ಹೇಳಲಾಗಿ ಆದರಿಂದ ಆ ಬೃಹಸ್ಪತಿಯೂ ಇಂದ್ರನೂ ಸಂತುಷ್ಟರಾದರು. ಬಳಿಕ ಆಕೆ ಪ್ರಾಚೀನರಾದ ಇಂದ್ರರ ಚರಿತ್ರೆಯನ್ನು ಯಥಾವತ್ತಾಗಿ ಹೇಳತೊಡಗಿದಳು.

೪೪–೪೫. ಸ್ವಾಯಂಭುವಮನುವಿನ ಕಾಲದಲ್ಲಿ ಯಾವನು ಇಂದ್ರನಾಗಿದ್ದನೋ, ಹಾಗೆಯೇ ಸ್ವಾರೋಚಿಷಮನ್ವಂತರದಲ್ಲಿ ಯಾವನು ಇಂದ್ರನಾಗಿದ್ದನೋ, ಮತ್ತು ಉತ್ತಮ, ತಾಮಸ, ರೈವತ, ಚಾಕ್ಷುಷ, ಈ ಮನ್ವಂತರಗಳಲ್ಲಿ ಯಾರು ಯಾರು ಇಂದ್ರರಾಗಿರುತ್ತಿದ್ದರೋ, ಆ ದೇವೇಂದ್ರರ ಚರಿತ್ರೆಯನ್ನು ಯಥಾವತ್ತಾಗಿ ಹೇಳಿದಳು.

ಕಥಯಾಮಾಸ ಚಾಶ್ಚರ್ಯಂ ತಚ್ಚಾಪಿ ಕಥಯಾಮಿ ತೇ ॥ ೪೬ ॥

ಶಂಕುಕರ್ಣಸ್ತದಾ ದೈತ್ಯೋ ಬಭೂವಾತ್ಯಂತದುರ್ಜಯಃ ।
ಸ ಲೋಕಪಾಲಾನ್ಸಮರೇ ವಿಜಿತ್ಯ ಸಹ ದೈವತೈಃ ॥
ಇಂದ್ರಸ್ಯಾಸಾದ್ಯ ಭವನಂ ಪ್ರವಿವೇಶ ಸುನಿರ್ಭಯಃ ॥ ೪೭ ॥

ತಂ ದೃಷ್ಟ್ವಾ ಸಹಸಾ ಪ್ರಾಪ್ತಂ ಶಕ್ರಃ ಶಯ್ಯಾತಲೇಽಲುಠತ್ ।
ಜುಗೋಪ ಸಹಸಾತ್ಮಾನಂ ಶಂಕುಕರ್ಣಭಯಾರ್ದಿತಃ ॥ ೪೮ ॥

ದಾನವಃ ಶಕ್ರಶಯನೇ ತಸ್ಮಿನ್ನುಪವಿವೇಶ ಹ ।
ಇಂದ್ರಾಣ್ಯಪಿ ತಥಾ ಭೀತಾ ಗತಾ ವಾಚಸ್ಪತೇರ್ಗೃಹಂ ॥ ೪೯ ॥

---

೪೬. ಅಯ್ಯಾ ರಾಜನೇ ! ಆ ಇಂದ್ರ, ಬೃಹಸ್ಪತಿ, ಇವರಿಗೆ ಆ ಸಾಂಭ ರಾಯಣಿಯು ಇನ್ನೂ ಒಂದು ಆಶ್ಚರ್ಯವನ್ನು ಹೇಳಿದಳು. ಅದನ್ನು ನಿನಗೆ ನಾನು ಹೇಳುತ್ತೇನೆ.

೪೭. ಪೂರ್ವದಲ್ಲಿ ಅತ್ಯಂತ ದುರ್ಜಯನಾದ ಶಂಕುಕರ್ಣನೆಂಬ ಒಬ್ಬ ದೈತ್ಯನಿದ್ದನು. ಆ ದೈತ್ಯನು ದೇವತೆಗಳ ಸಮೇತರಾವ ಲೋಕಪಾಲಕರನ್ನೆಲ್ಲಾ ಯುದ್ಧದಲ್ಲಿ ಗೆದ್ದು, ಇಂದ್ರನಭವನಕ್ಕೆ ಬಂದು ನಿರ್ಭಯನಾಗಿ ಅದನ್ನು ಪ್ರವೇಶಿಸಿದನು.

೪೮. ತನ್ನ ಭವನಕ್ಕೆ ಥಟ್ಟನೆ ಪ್ರವೇಶಮಾಡಿದ ಆ ದೈತ್ಯನನ್ನು ಕಂಡು ಇಂದ್ರನು ಅಲ್ಲೇ ಹಾಸಿಗೆಯಿಂದ ಕೆಳಗೆ ಬಿದ್ದುಬಿಟ್ಟನು ಆ ಶಂಕುಕರ್ಣನ ಭಯದಿಂದ ಪೀಡಿತನಾದ ಅವನು ಹೇಗೋ ಕಣ್ಮರೆಯಾಗಿ ತನ್ನನ್ನು ರಕ್ಷಿಸಿಕೊಂಡನು.

೪೯. ಆ ದೈತ್ಯನು ಇಂದ್ರಭವನವನ್ನು ಪ್ರವೇಶಿಸಿ ಆ ಇಂದ್ರನ ಮಂಚದ ಮೇಲೆಯೇ ಕುಳಿತನು. ಆಗ ಇಂದ್ರಾಣಿಯು ಇಂದ್ರನ ಹಾಗೆಯೇ ಭಯಗ್ರಸ್ತೆಯಾಗಿ ಬೃಹಸ್ಪತಿಯ ಮನೆಗೆ ಹೋದಳು.

**ಅಥದೇವಾ ಸಮಾಜಗ್ಮು ರ್ಭಯಾದ್ದ್ರಷ್ಟುಂ ಸುರದ್ವಿಷಂ ।**
**ಆಸೀನಂ ಶಕ್ರಶಯನೇ ಪ್ರಣಿಪಾತಪುರಸ್ಸರಾಃ ॥ ೫೦ ॥**

**ವಾಸುದೇವೋಽಪಿ ತತ್ರಾಗಾತ್ತಂ ದ್ರಷ್ಟುಂ ದೇವಕಂಟಕಂ ।**
**ದೃಷ್ಟ್ವಾ ಕೃಷ್ಣಮುಪ್ರಾಪ್ತಂ ದಾನವಃ ಪ್ರಾಹ ಹರ್ಷಿತಃ ॥ ೫೧ ॥**

**ಧನ್ಯೋಽಹಂ ಕೃತಕೃತ್ಯೋಽಹಂ ಯಸ್ಯ ಮೇ ಗರುಡಧ್ವಜಃ ।**
**ಶಕ್ರಶಯ್ಯಾಸನಸ್ಥಸ್ಯ ದ್ರಷ್ಟುಮಭ್ಯೇತಿ ಕೇಶವಃ ॥ ೫೨ ॥**

**ತತಃ ಕರೇ ಸಮಾಲಂಬ್ಯ ಶಯನಾಭ್ಯಾಶಮಾನಯತ್ ।**
**ಚಕಾರ ಕಂಠಗ್ರಹಣಂ ಬಾಂಧವಸ್ಯೇವ ಹರ್ಷಿತಃ ॥ ೫೩ ॥**

---

೫೦. ಆ ಸಮಯದಲ್ಲಿ ಎಲ್ಲಾ ದೇವತೆಗಳೂ ಭಯಪಟ್ಟು, ಇಂದ್ರನ ಮಂಚದ ಮೇಲೆ ಕುಳಿತಿರುವ ದೇವದ್ವೇಷಿಯಾದ ಆ ದೈತ್ಯನ ದರ್ಶನಕ್ಕೆ ಬಂದು ಸಾಷ್ಟಾಂಗಪ್ರಣಾಮಮಾಡಿದರು.

೫೧. ಆಗ ದೇವಕಂಟಕನಾದ ಆ ದೈತ್ಯನನ್ನು ನೋಡುವುದಕ್ಕೆ ಶ್ರೀ ಮಹಾವಿಷ್ಣುವೂ ಅಲ್ಲಿಗೆ ಬಂದನು. ಶ್ರೀ ಕೃಷ್ಣನು ಬಂದುದನ್ನು ನೋಡಿ ಆ ದಾನವನು ಸಂತುಷ್ಟನಾಗಿ ಈರೀತಿ ಹೇಳಿದನು.

೫೨. "ಇಂದ್ರ ಶಯ್ಯಾಸನದಲ್ಲಿ ಕುಳಿತಿರುವ ನನ್ನನ್ನು ನೋಡುವುದಕ್ಕೆ ಗರುಡಧ್ವಜನಾದ ಶ್ರೀಮಹಾವಿಷ್ಣುವು ಬಂದುದರಿಂದ ನಾನೇ ಧನ್ಯನು. ನಾನೀಗ ಕೃತಕೃತ್ಯನು."

೫೩. ಈರೀತಿ ಹೇಳಿ ಅನಂತರ ಆ ದೈತ್ಯನು ಆ ವಿಷ್ಣುವಿನ ಕೈಯನ್ನು ಹಿಡಿದುಕೊಂಡು ತಾನು ಕುಳಿತ ಮಂಚದ ಬಳಿಗೆ ಕರೆತಂದನು. ಆಮೇಲೆ ಸಂತುಷ್ಟನಾಗಿ ಬಂಧುವನ್ನು ಕಂಠಾಲಿಂಗನ ಮಾಡುವ ಹಾಗೆ ಆ ವಿಷ್ಣುವಿನ ಕಂಠಾಲಿಂಗನ ಮಾಡಿದನು.

ತತಃ ಕೃಷ್ಣಸ್ತು ಸಹಸಾ ಗೃಹ್ಯ ದೋರ್ಭ್ಯಾಂ ಶನೈಃ ಶನೈಃ ।
ಪೀಡಯಾಮಾಸ ವಿಹಸನ್ನದಂತಂ ಭೈರವಾನ್ರವಾನ್ ॥
ಮಮಾರ ದಾನವೇಂದ್ರೋऽಸೌ ಬಲಾದ್ಭಗ್ನಾಸ್ಥಿಪಂಜರಃ ॥ ೫೪ ॥

ನಿರ್ಜಗಾಮ ತತಃ ಶಕ್ರಃ ಶಯ್ಯಾಮೂಲಾದವಾಕ್ಶಿರಾಃ ।
ತುಷ್ಟಾವ ಹರಿಮಾಸೀನಂ ಶಂಖಚಕ್ರಗದಾಧರಂ ॥ ೫೫ ॥

ಏತದ್ದೃಷ್ಟಂ ಮಯಾ ಶಕ್ರ ವಸಂತ್ಯಾ ಸುರಸದ್ಮನಿ ॥ ೫೬ ॥

ತತಃ ಕುತೂಹಲಪರಃ ದೇವರಾಟ್ ತಾಂ ತಪಸ್ವಿನೀಂ ।
ಉವಾಚ ಜಾನಾಸಿ ಕಥಂ ತ್ವಮೇತಾನ್ಸಾಂಭರಾಯಣಿ ॥ ೫೭ ॥

---

೫೪. ಅನಂತರ ಆ ಕೃಷ್ಣನು ಮೆಲ್ಲಮೆಲ್ಲನೆ ಸರಸವಾಡುತ್ತಾ ಭಯಂಕರವಾಗಿ ಕಿಟ್ಟನೆ ಕೂಗಿಕೊಳ್ಳುವ ಹಾಗೆ ಆ ದೈತ್ಯನನ್ನು ತನ್ನ ತೋಳುಗಳಿಂದ ಬಿಗಿಯಾಗಿ ಅದುಮಿ ಹಿಡಿದನು. ಆಗ ಆ ದಾನವೇಂದ್ರನು ಕೃಷ್ಣನ ಬಲದಿಂದ ಮುರಿದುಹೋದ ಅಸ್ಥಿಪಂಜರವುಳ್ಳವನಾಗಿ ಮರಣಹೊಂದಿದನು.

೫೫. ಆ ಮಂಚದ ಕೆಳಗೆ ಅವಿತುಕೊಂಡಿದ್ದ ಇಂದ್ರನು ಬಳಿಕ ಈಚೆಗೆ ಬಂದು ತಲೆಬಾಗಿಸಿಕೊಂಡು, ಶಂಖಚಕ್ರಗದಾಧಾರಿಯಾಗಿ ಮಂಚದ ಮೇಲೆ ಕುಳಿತಿರುವ ಆ ಶ್ರೀಹರಿಯನ್ನು ಕಂಡು, ಸ್ತೋತ್ರಮಾಡಿದನು ಎಂದು ಹೇಳಿದುದಲ್ಲದೆ.

೫೬. ಅಯ್ಯಾ ಇಂದ್ರನೇ ! ಆಗ ಈ ಇಂದ್ರಭವನದಲ್ಲಿ ವಾಸವಾಗಿದ್ದ ನಾನು ಅದನ್ನೆಲ್ಲಾ ನೋಡಿದ್ದೇನೆ ” ಎಂದಳು.

೫೭. ಆಮೇಲೆ ಕುತೂಹಲಪರನಾದ ಆ ದೇವೇಂದ್ರನು ಆ ತಪಸ್ವಿನಿಯನ್ನು ಕುರಿತು “ ಓ ಸಾಂಭರಾಯಣೀ ! ನೀನು ಅಷ್ಟು ಹಿಂದಿನ ವಿಚಾರವಾದ ಇದನ್ನು ಹೇಗೆ ಜ್ಞಾಪಕವಿಟ್ಟುಕೊಂಡಿದ್ದೀ ? ಅದು ಹೇಗೆ ಸಾಧ್ಯವಾಯಿತು ? ” ಎಂದು ಕೇಳಿದನು.

|| ಸಾಂಭರಾಯಣ್ಯುವಾಚ ||
ಸರ್ವ ಏವ ಹಿ ದೇವೇಂದ್ರಾಃ ಸ್ವರ್ಗಸ್ಥಾ ಯೇಽಮರೇಶ್ವರಾಃ |
ಬಭೂವುರೇತೇ ಚರಿತಮೇತೇಷಾಂ ವೇದ್ಮಿ ತೇನ ವೈ ||
ಚರಿತಂ ಚ ಮಯಾ ತೇಷಾಂ ಶ್ರುತಂ ದೃಷ್ಟಂ ತಥೈವ ಚ || ೫೮ ||

|| ಇಂದ್ರ ಉವಾಚ ||
ಕಿಂ ಕೃತಂ ವದ ಧರ್ಮಜ್ಞೇ ತ್ವಯಾ ಯೇನೇಯಮಕ್ಷಯಾ |
ಸ್ವರ್ಲೋಕೇ ವಸತಿಃ ಪ್ರಾಪ್ತಾ ಯಥಾ ನಾನ್ಯೇನ ಕೇನಚಿತ್ || ೫೯ ||

ಅಹೋ ಸರ್ವವ್ರತಾನಾಂ ತು ಹ್ಯುಪೋಷಿತಮಥಾದ್ಭುತಂ |
ಪ್ರಧಾನತರಮತ್ಯಂತಂ ಸ್ವರ್ಗವಾಸಪ್ರದಂ ಮತಂ || ೬೦ ||

ಏವಮುಕ್ತ್ವಾ ತತಸ್ತೇನ ದೇವೇಂದ್ರೇಣ ತಪಸ್ವಿನೀ |
ಪ್ರತ್ಯುವಾಚ ಮಹಾಭಾಗಾ ಯಥಾವತ್ಸಾಂಭರಾಯಣೀ || ೬೧ ||

---

೫೮. ಸಾಂಭರಾಯಣಿಯು ಹೇಳುತ್ತಾಳೆ—"ಯಾರ್ಯಾರು ಈ ದೇವತೆಗಳಿಗೆ ಇಂದ್ರರಾಗಿದ್ದರೋ ಆ ಎಲ್ಲ ಇಂದ್ರರನ್ನೂ ನಾನು ನೋಡಿರುತ್ತೇನೆ. ಆದರಿಂದ ಅವರ ಚರಿತ್ರೆಯು ನನಗೆ ಗೊತ್ತು. ಆ ದೇವೇಂದ್ರರ ಚರಿತ್ರೆಯನ್ನು ನಾನು ಕೇಳಿ ಇದ್ದೇನೆ. ಮತ್ತು ನೋಡಿಯೂ ಇರುತ್ತೇನೆ" ಎಂದಳು.

೫೯. ಇಂದ್ರನು ಹೇಳುತ್ತಾನೆ—ಎಲೌ ಧರ್ಮಜ್ಞಳೇ! ನೀನು ಯಾವ ಪುಣ್ಯಕರ್ಮವನ್ನು ಮಾಡಿರುವೆ? ಇಂತಹ ಅಕ್ಷಯವಾದ ಸ್ವರ್ಗಲೋಕವಾಸವನ್ನು ಹೊಂದಿರುತ್ತೀಯೆ. ಈಪರಿ ಚ್ಯುತಿಇಲ್ಲದ ಸ್ವರ್ಗವಾಸವು ನಿನಗಿರುವ ಹಾಗೆ ಇನ್ನಾರಿಗೂ ಲಭಿಸಿಲ್ಲ.

೬೦. "ಇದು ಅತ್ಯಾಶ್ಚರ್ಯ! ಎಲ್ಲಾ ವ್ರತಗಳಿಗಿಂತ ಉಪವಾಸವ್ರತವೆಂಬುದು ಅತ್ಯದ್ಭುತವೂ, ಅತಿ ಮುಖ್ಯವಾದುದೂ ಆಗಿ, ಸ್ವರ್ಗವಾಸಪ್ರದವೆಂದು ಪ್ರಾಜ್ಞರಿಂದ ಕೇಳಿದ್ದೆ. ನೀನು ಆಚರಿಸಿದ ವ್ರತ ಯಾವುದೋ ತಿಳಿಸು" ಎಂದನು.

೬೧. ಈರೀತಿ ಆ ದೇವೇಂದ್ರನು ಕೇಳಿದ ಮೇಲೆ, ತಪಸ್ವಿನಿಯೂ ಮಹಾಭಾಗ್ಯವತಿಯೂ ಆದ, ಆ ಸಾಂಭರಾಯಣಿಯು ಇಂದ್ರನಿಗೆ ಉತ್ತರ ಕೊಡುವವಳಾಗಿ.

ಮಾಸರ್ಕ್ಷೇ ಹ್ಯಚ್ಯುತೋ ದೇವಃ ಪ್ರತಿಮಾಸಂ ಸುರೇಶ್ವರ ।
ಯಥೋಕ್ತವ್ರತಯಾ ಸಮ್ಯ ಕ್ಸಪ್ತವರ್ಷಾಣಿ ಪೂಜಿತಃ ॥ ೬೨ ॥

ತಸ್ಯೇಯಂ ಕರ್ಮಣೋ ವ್ಯುಷ್ಟಿರಚ್ಯುತಾರಾಧನಸ್ಯ ಮೇ ।
ದೇವಲೋಕಾದಭಿಮತಾ ದೇವರಾಜಪದಚ್ಯುತಿಃ ॥ ೬೩ ॥

ಸ್ವರ್ಗೇಂದ್ರವಿಭವೈಶ್ವರ್ಯಂ ಸಂತತಿಂ ಯಾತಿ ಚಾಚ್ಯುತಿಂ ।
ನರೋ ವಾಂಛತಿ ತೇನೇತ್ಥಂ ತೋಷಣೀಯಸ್ತತಃ ಪ್ರಭುಃ ॥ ೬೪ ॥

ಏತತ್ತೇ ಪೂರ್ವದೇವೇಂದ್ರಚರಿತಂ ಸಕಲಂ ಮಯಾ ।
ಸ್ವರ್ಗವಾಸಾಕ್ಷಯತ್ವಂ ಚ ಮಾಸರ್ಕ್ಷಾಚ್ಯುತ ಪೂಜನಾತ್ ॥
ಯಥಾವತ್ಕಥಿತಂ ದೇವ ಪೃಚ್ಛತಸ್ತ್ರಿದಿವೇಶ್ವರ ॥ ೬೫ ॥

---

೬೨. "ಅಯ್ಯಾ ದೇವೇಂದ್ರನೇ ! ಪ್ರತಿಮಾಸದಲ್ಲಿ ಮಾಸನಾಮಕ ನಕ್ಷತ್ರದ ದಿನ, ಶ್ರೀ ವಿಷ್ಣುವನ್ನು ಯಥೋಕ್ತ ವ್ರತಾಚರಣೆಯಿಂದ, ಏಳು ವರ್ಷಗಳ ಕಾಲ ನಾನು ಚೆನ್ನಾಗಿ ಪೂಜಿಸಿರುತ್ತೇನೆ."

೬೩. "ದೇವೇಂದ್ರಸ್ಥಾನವಾದ ಈ ಸ್ವರ್ಗಲೋಕದಿಂದ ಚ್ಯುತಿಬಾರದೆ ಇರುವಂಥ ಫಲ ಪ್ರಾಪ್ತಿಯಾಗಲು, ಅಚ್ಯುತಾರಾಧನರೂಪವಾದ ಆ ವ್ರತಾ ಚರಣವೇ ಕಾರಣ. ಅದರ ಫಲವೇ ಇದು."

೬೪. "ಯಾವ ಪುರುಷನಾದರೂ ಸ್ವರ್ಗವಾಸದ ಸಂಪತ್ತು ಪರಿಚ್ಯುತ ವಾಗದೆ ಸ್ಥಿರವಾಗಿರಬೇಕೆಂದೂ, ಮತ್ತು ಸಂತತಿಯು ವಿಯೋಗವಾಗದೆ ಸ್ಥಿರ ವಾಗಿರಬೇಕೆಂದೂ, ಬಯಸುವುದಾದರೆ ಅಂತಹ ಪುರುಷನು ಸ್ವಾಮಿಯಾದ ಶ್ರೀ ವಿಷ್ಣುವನ್ನು ಈ ವ್ರತದಿಂದ ಸಂತೋಷಪಡಿಸಬೇಕು."

೬೫. "ಅಯ್ಯಾ ಸ್ವರ್ಗಾಧಿಪತಿಯಾದ ಇಂದ್ರನೇ ! ಈ ಎಲ್ಲಾ ಪೂರ್ವ ದೇವೇಂದ್ರರ ಚರಿತ್ರೆಯನ್ನು ನಿನಗೆ ನಾನು ಹೇಳಿದೆನು. ಮಾಸನಾಮ ನಕ್ಷತ್ರ ಗಳಲ್ಲಿ ಶ್ರೀಹರಿಪೂಜೆಯನ್ನು ಮಾಡುವುದರಿಂದ ಸ್ವರ್ಗವಾಸವು ಅಕ್ಷಯವಾಗಿ ಲಭಿಸುವುದೆಂದು ಹೇಳಿದುದಾಯಿತು."

ಧರ್ಮಾರ್ಥಕಾಮಮೋಕ್ಷಾಶ್ಚ ವಾಂಛಿತಾ ವಿಬುಧಾಧಿಪ ।
ವಿಷ್ಣೋರಾರಾಧನಾದನ್ಯತ್ಪರಮಂ ಸಿದ್ಧಿಕಾರಣಂ　　　　|| ೬೬ ||

ತಸ್ಯಾಸ್ತದ್ವಚನಂ ಶ್ರುತ್ವಾ ದೇವರಾಜ ಬೃಹಸ್ಪತೀ ।
ತತ್ತಥೇತ್ಯೂಚತುಃ ಸಾಧ್ವೀಂ ಚೇರತುಶ್ಚಾಪಿ ತದ್ವ್ರತಂ　　　　|| ೬೭ ||

ತಸ್ಮಾತ್ಪಾರ್ಥ ಪ್ರಯತ್ನೇನ ಪ್ರತಿಮಾಸಂ ಸಮಾಹಿತಃ ।
ಮಾಸರ್ಕ್ಷೇಽಚ್ಯುತಪೂಜಾಯಾಂ ಭವೇಥಾಸ್ತನ್ಮನಾಃ ಸದಾ　　　　|| ೬೮ ||

ಯೇ ಸಾಂಭರಾಯಣಿಕಥಾಚರಿತವ್ರತೇಽಸ್ಮಿನ್ ।
ವರ್ಷಾಣಿ ಸಪ್ತ ವಿಧಿನಾ ಸುಧಿಯೋ ನಯಂತಿ ||

---

೬೬. "ಅಯ್ಯಾ ದೇವೇಂದ್ರನೇ! ಪುರುಷಾರ್ಥಗಳಾದ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವರ್ಗಸಿದ್ಧಿಗೆ ವಿಷ್ಣುವಿನ ಆರಾಧನೆಗಿಂತ ಬೇರೆ ಯಾವುದೂ ಇಲ್ಲ" ಎಂದಳು.

೬೭. ಆ ಸಾಂಭರಾಯಣಿಯು ಹೇಳಿದ ಆ ಮಾತನ್ನು ಆ ದೇವರಾಜ ಮತ್ತು ಬೃಹಸ್ಪತಿ ಇವರು ಕೇಳಿ, ಆ ಪತಿವ್ರತೆಯನ್ನು "ಕುರಿತು ನೀನು ಹೇಳಿದ ಹಾಗೆಯೇ ಸರಿ, ಎಂಬ ಅಂಗೀಕಾರವಚನವನ್ನು ಹೇಳಿ, ತಾವೂ ಆ ವ್ರತವನ್ನು ಆಚರಿಸಿದರು.

೬೮. ಅಯ್ಯಾ ಕುಂತೀಪುತ್ರನೇ! ಆದುದರಿಂದ ನೀನು ಸರ್ವಪ್ರಯತ್ನ ದಿಂದಲೂ ಪ್ರತಿಮಾಸದಲ್ಲೂ ಆ ಮಾಸನಾಮಕ ನಕ್ಷತ್ರದಲ್ಲಿ ಶ್ರೀಹರಿ ಪೂಜೆ ಯನ್ನು ಏಕಾಗ್ರತೆಯಿಂದ ನೆರವೇರಿಸು.

೬೯. ಯಾವ ಪಂಡಿತರು ಈ ಸಾಂಭರಾಯಣೀ ಕಥಾ (ಚರಿತ್ರ) ಶ್ರವಣ ಮತ್ತು ಈ ವ್ರತಾಚರಣೆಯಲ್ಲಿ ಶಾಸ್ತ್ರೋಕ್ತಪ್ರಕಾರವಾಗಿ ಏಳು ವರ್ಷಗಳನ್ನು

**ತೇ ಸ್ವರ್ಗಲೋಕಮಭಿಗಮ್ಯ ಕೃತಾಧಿವಾಸಾಃ ।**
**ಕಲ್ಪಾಯುತಾಯುತಶತೈರಪಿ ನ ಚ್ಯವಂತೆ ॥ ೬೯ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಸಾಂಭರಾಯಣೀ ವ್ರತವರ್ಣನಂ ನಾಮ ಸಪ್ತಾಧಿಕ ಶತತಮೋಽಧ್ಯಾಯಃ.**



---

ಕಳೆಯುತ್ತಾರೋ ಅವರು ಸ್ವರ್ಗಲೋಕವನ್ನು ಹೊಂದಿ ಅಲ್ಲಿ ವಾಸವಾಗಿರುತ್ತಾ ನೂರಾರು ಕಲ್ಪಗಳು ಕಳೆದರೂ ಅಲ್ಲಿಂದ ಚ್ಯುತಿಯನ್ನು ಹೊಂದುವುದಿಲ್ಲ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ಸಾಂಭರಾಯಣಿ ವ್ರತವರ್ಣನೆಯೆಂಬ ನೂರೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣ

## ಉತ್ತರಪರ್ವಣಿ

## ಅಷ್ಟಾಧಿಕಶತತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಸುರೂಪತಾಂ ಮನುಷ್ಯಾಣಾಂ ಸ್ತ್ರೀಣಾಂ ಚ ಯದುಸತ್ತಮ ।
ಕರ್ಮಣಾ ಜಾಯತೇ ಕೇನ ತನ್ಮಮಾಖ್ಯಾತುಮರ್ಹಸಿ ॥ ೧ ॥

ಸುರೂಪಾಣಾಂ ಸುಗಾತ್ರಾಣಾಂ ಸುವೇಷಾಣಾಂ ತಥೈವ ಚ ।
ನ್ಯೂನಂ ತಥಾಧಿಕಂ ಚಾಪಿ ಯಥಾ ನಾಂಗಂ ಪ್ರಜಾಯತೇ ॥ ೨ ॥

ಸಮಸ್ತೈಃ ಶೋಭನೈರಂಗೈರ್ನರಾಃ ಕೇಚಿದ್ಯದೂತ್ತಮ ।
ಕಾಣಾಃ ಕುಬ್ಜಾಶ್ಚ ಜಾಯಂತೇ ತ್ರುಟಿತಶ್ರವಣಾಸ್ತಥಾ ॥ ೩ ॥

---

### ನೂರಎಂಟನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಎಲೈ ಯಾದವೋತ್ತಮನೇ ! ಯಾವ ಕರ್ಮಾಚರಣದಿಂದ ಗಂಡಸರಿಗಾಗಲಿ, ಹೆಂಗಸರಿಗಾಗಲಿ ಸೌಂದರ್ಯವು ಲಭಿಸುವುದೆಂಬುದನ್ನು ನಿರೂಪಿಸು. ಇದಕ್ಕೆ ನೀನೇ ಸಮರ್ಥನು.

೨. ಸುರೂಪಿಗಳೂ ಸುಂದರಶರೀರವುಳ್ಳವರೂ ಮತ್ತು ಸುಭಗಾಲಂಕೃತರೂ ಆಗಿರುವರಿಗೆ ಅಂಗಗಳಲ್ಲಿ ನ್ಯೂನತೆ ಅಥವಾ ಅಧಿಕ್ಯ ಇವು ಯಾವ ಕರ್ಮದಿಂದ ಬಾರದೆ ಇರಬಹುದೋ ಅಂತಹ ಕರ್ಮವನ್ನು ಹೇಳು.

೩. ಓ ಯಾದವೋತ್ತಮನೇ! ಕೆಲವರು ಸುಂದರವಾದ ಅಂಗಗಳಿಂದ ಕೂಡಿದ್ದರೂ ಕುರುಡರು, ಕುಬ್ಜರು, ಸೊಟ್ಟಕಿವಿಯವರು ಆಗಿರುತ್ತಾರೆ.

ನರಾಣಾಂ ಯೋಷಿತಾಂ ಚೈವ ಸಮಸ್ತಾಂಗಸುರೂಪತಾ ।
ಕರ್ಮಣಾ ಯೇನ ಭವತಿ ತತ್ಪೂರ್ವಂ ಕಥಯಾಮಲ ॥ ೪ ॥

ಲಾವಣ್ಯಗತಿವಾಕ್ಯಾನಿ ಸತಿ ರೂಪೇ ಮಹಾಮತೇ ।
ಕುರ್ವಂತ್ಯಭ್ಯಧಿಕಾಂ ಶೋಭಾಂ ಸಮಸ್ತಾಃ ಪರಮಾ ಗುಣಾಃ ॥ ೫ ॥

ವಾಕ್ಯಲಾವಣ್ಯಸಂಸ್ಕಾರವಿಲಾಸಲಲಿತಾ ಗತಿಃ ।
ವಿಡಂಬನಾ ಕುರೂಪಾಣಾಂ ಕೇವಲಾ ಸಾ ಹಿ ಜಾಯತೇ ॥ ೬ ॥

ರೂಪಕಾರಣಭೂತಾಯ ಕರ್ಮಣಾ ಪ್ರಯತೋ ಭವೇತ್ ।
ತಸ್ಮಾತ್ತನ್ಮೇ ಸಮಾಚಕ್ಷ್ವ ಕರ್ಮ ಯಚ್ಚಾರು ರೂಪದಂ ॥ ೭ ॥

॥ ಶ್ರೀ ಕೃಷ್ಣ ಉವಾಚ ॥

ಸಮ್ಯಕ್ಪೃಷ್ಟಂ ತ್ವಯಾ ಹೀದಮುಪವಾಸಾಶ್ರಿತಂ ನೃಪ ।
ಕಥಯಾಮಿ ಯಥಾ ಪ್ರೋಕ್ತಂ ವಶಿಷ್ಠೇನ ಮಹಾತ್ಮನಾ ॥ ೮ ॥

---

೪. ಓ ನಿಷ್ಕಲ್ಮಷನೇ ! ಗಂಡಸರಿಗಾಗಲಿ, ಹೆಂಗಸರಿಗಾಗಲಿ ಸಮಸ್ತ ಅಂಗಗಳ ಸೌಂದರ್ಯವು ಯಾವ ಕರ್ಮಾಚರಣದಿಂದ ಲಭಿಸುವುದೋ ಅಂತಹ ಕರ್ಮನನ್ನು ಹೇಳು.

೫. ಓ ಮಹಾಜ್ಞಾನಿಯೇ ! ಮನುಷ್ಯರಿಗೆ ಸೌಂದರ್ಯವಿರುವುದರ ಜತೆಗೆ ಚಿತ್ತಾಕರ್ಷಕವಾದ ನಡೆನುಡಿಗಳೂ ಇದ್ದರೆ ಅವುಗಳ ಮೇಳನವು ಅತ್ಯಧಿಕವಾಗಿ ಶೋಭಾಯಮಾನವಾಗುವುದು.

೬. ಕುರೂಪಿಗಳಿಗೆ ಆಕರ್ಷಣೀಯವಾದ ನುಡಿ, ಸಂಸ್ಕಾರಹೊಂದಿದ ಪ್ರವಚನ, ವಿಲಾಸ, ಸುಂದರವಾದ ಗಮನ, ಇವುಗಳೆಷ್ಟೇ ಇದ್ದರೂ ಕೇವಲ ವಿಡಂಬನೆಯೆನಿಸುತ್ತವೆ.

೭. ಆದುದರಿಂದ ಸೌಂದರ್ಯಸಂಪಾದಕವಾದ ಕರ್ಮವನ್ನು ಮಾಡಲು ಪ್ರಯತ್ನಮಾಡಬೇಕು. ಸೌಂದರ್ಯಪ್ರಾಪ್ತಿಗೆ ಕಾರಣವಾದ ಕರ್ಮ ಯಾವು ದೆಂಬುದನ್ನು ನನಗೆ ಹೇಳು '' ಎಂದನು.

೮. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾರಾಜನೇ ! ನೀನು ಕೇಳಿದ ಪ್ರಶ್ನೆ ಶ್ಲಾಘ್ಯವಾದುದು. ಅದು ಉಪವಾಸ ವಿಚಾರವನ್ನು ಅವಲಂಬಿಸಿದ್ದು ಮಹಾತ್ಮನಾದ ವಶಿಷ್ಠಮಹರ್ಷಿಯು ಈ ವಿಷಯದಲ್ಲಿ ಏನುಹೇಳಿರುವನೋ ಅದನ್ನೇ ನಿನಗೆ ನಾನು ಹೇಳುತ್ತೇನೆ.

ವಶಿಷ್ಠಮೃಷಿಮಾಸೀನಂ ಸಪ್ತರ್ಷಿಪ್ರವರಂ ದ್ವಿಜಂ ।
ಪಪ್ರಚ್ಛಾರುಂಧತೀ ಪೃಷ್ಟ್ವಾ ಯದೇತದ್ಭವತಾ ವಯಂ ॥ ೯ ॥

ತಸ್ಯಾಸ್ತು ಪರಿಪೃಚ್ಛಂತ್ಯಾಃ ಜಗಾದ ಮುನಿಸತ್ತಮಃ ।
ಯತ್ತ್ವಚ್ಛೃಣುಷ್ವ ಕೌಂತೇಯ ಮಮೇದಂ ವದತೋಽಖಿಲಂ ॥೧೦॥

॥ ವಶಿಷ್ಠ ಉವಾಚ ॥

ಶ್ರೂಯತಾಂ ಯದಹಂ ಪೃಷ್ಟಸ್ತ್ವಯೈತದ್ವರವರ್ಣಿನಿ ।
ಸುರೂಪತಾ ನೃಣಾಂ ಯೇನ ಯೋಷಿತಾಂ ಚೋಪಜಾಯತೇ ॥೧೧॥

ಅನಭ್ಯರ್ಚ್ಯ ತು ಗೋವಿಂದಮನಾರಾಧ್ಯ ಚ ಕೇಶವಂ ।
ರೂಪಾದಿಕಾ ಗುಣಾಃ ಕೇನ ಪ್ರಾಪ್ಯಂತೇಽನ್ಯೇನ ಕರ್ಮಣಾ ॥ ೧೨ ॥

ತಸ್ಮಾದಾರಾಧನೀಯೋಽಗ್ರೇ ವಿಷ್ಣುರೇವ ಯಶಸ್ವಿನಿ ।
ಪಾರತ್ರ್ಯಂ ಪ್ರಾಪ್ತುಕಾಮೇನ ರೂಪಸಂಪತ್ಸುತಾದಿಕಂ ॥ ೧೩ ॥

---

೯. ಸಪ್ತರ್ಷಿ ಶ್ರೇಷ್ಠನಾದ ವಶಿಷ್ಠಮಹರ್ಷಿಯು ಒಂದುದಿನ ಕುಳಿತಿರುವಾಗ ಅವನ ಪತ್ನಿಯಾದ ಅರುಂಧತಿಯು ಪತಿಯನ್ನು ಕುರಿತು, ನಮ್ಮಲ್ಲಿ ನೀನು ಕೇಳಿದ ಪ್ರಶ್ನೆಯನ್ನೇ ಆಕೆಯೂ ಕೇಳಿದಳು.

೧೦. ಅಯ್ಯಾ ಕುಂತೀಪುತ್ರನೇ ! ಹಾಗೆ ಪ್ರಶ್ನೆಮಾಡಿದ ಅರುಂಧತಿಗೆ ಋಷಿವರ್ಯನಾದ ಆ ವಶಿಷ್ಠನು ಹೇಳಿದ ಉತ್ತರವನ್ನೇ ಈಗ ನಾನು ನಿನಗೆ ಹೇಳುತ್ತೇನೆ ಶ್ರವಣಮಾಡು.

೧೧. ವಶಿಷ್ಠನು ಹೇಳುತ್ತಾನೆ—ಓ ಸುಂದರೀ ! ಗಂಡಸರಿಗೂ ಹೆಂಗಸರಿಗೂ ಸೌಂದರ್ಯವು ಯಾವ ಕರ್ಮಾಚರಣೆಯಿಂದ ಬರುತ್ತವೆ ? ಎಂದು ನನ್ನನ್ನು ಪ್ರಶ್ನೆಮಾಡಿದೆಯಷ್ಟೆ; ಅದಕ್ಕೆ ಉತ್ತರ ಹೇಳುತ್ತೇನೆ ಕೇಳು.

೧೨. ಗೋವಿಂದನನ್ನು ಅರ್ಚಿಸದೆ, ಕೇಶವನನ್ನು ಆರಾಧಿಸದೇ ಇತರ ಯಾವ ಕರ್ಮದಿಂದ ತಾನೇ ರೂಪಾದಿಗುಣಗಳು ಬಂದಾವು. ?

೧೩. ಎಲೌ ಯಶೋವತಿ ! ರೂಪ, ಸಂಪತ್ತು, ಸಂತಾನ, ಇತ್ಯಾದಿ ಐಹಿಕ ಫಲವನ್ನೂ, ಪಾರತ್ರಿಕವನ್ನೂ ಆಶಿಸುವವನು ಮೊದಲು ಶ್ರೀ ಹರಿಯನ್ನೇ ಆರಾಧಿಸಬೇಕು.

ಯಸ್ತು ವಾಂಛತಿ ಧರ್ಮಜ್ಞೇ ರೂಪಂ ಸರ್ವಾಂಗಸುಂದರಂ ।
ನಕ್ಷತ್ರಪುರುಷಂ ಭದ್ರೇ ಜಿತಕ್ರೋಧೋ ಜಿತೇಂದ್ರಿಯಃ ॥ ೧೪ ॥

ಸುಸ್ನಾತಃ ಪ್ರಯತಾಹಾರಃ ಸಂಪೂಜಯತಿ ಯೋಽಚ್ಯುತಂ ।
ಭಕ್ತ್ಯಾ ಯೋಷಿನ್ನರೋ ವಾಪಿ ಸುರೂಪಾಂಗಃ ಪ್ರಜಾಯತೆ ॥ ೧೫ ॥

ಯೋಷಿತಾ ಹಿ ಪರಂ ರೂಪಮಿಚ್ಛಂತ್ಯಾ ಜಗತಃ ಪತಿಃ ।
ಸ ಏವಾರಾಧನೀಯೋಽಗ್ರೇ ನಕ್ಷತ್ರಾಂಗೋ ಜನಾರ್ದನಃ ॥ ೧೬ ॥

॥ ಅರುಂಧತ್ಯುವಾಚ ॥

ನಕ್ಷತ್ರರೂಪೀ ಭಗವಾನ್ಪೂಜ್ಯತೇ ಪುರುಷೋತ್ತಮಃ ।
ಮುನೇ ಯೇನ ವಿಧಾನೇನ ತನ್ಮಮಾಖ್ಯಾತುಮರ್ಹಸಿ ॥ ೧೭ ॥

---

೧೪. ಓ ಧರ್ಮಜ್ಞಳೇ ! ಸರ್ವಾಂಗಸುಂದರವಾದ ರೂಪವನ್ನು ಬಯಸುವವನು, ಜಿತಕ್ರೋಧನೂ, ಜಿತೇಂದ್ರಿಯನೂ, ನಕ್ಷತ್ರಪುರುಷ ಸ್ವರೂಪಿಯೂ, ಆದ ಶ್ರೀ ಹರಿಯನ್ನು ಅರ್ಚಿಸಬೇಕು.

೧೫. ಪುರುಷನು ಅಥವಾ ಸ್ತ್ರೀಯು ಯಥೋಕ್ತಕ್ರಮದಲ್ಲಿ ಸ್ನಾನಮಾಡಿ ಉಪವಾಸವಾಗಿದ್ದು ಭಕ್ತಿಯಿಂದ ಶ್ರೀ ಹರಿಯನ್ನು ಪೂಜಿಸಿದರೆ ಅಂತಹವರು ಸುಂದರವಾದ ಶರೀರವುಳ್ಳವರಾಗುತ್ತಾರೆ.

೧೬. ನಿರತಿಶಯವಾದ ಸೌಂದರ್ಯವನ್ನು ಇಚ್ಛಿಸುವ ಹೆಂಗಸು, ಜಗದೀಶನೂ ನಕ್ಷತ್ರಸ್ವರೂಪಿಯೂ ಆಗಿರುವ ಆ ಜನಾರ್ದನನನ್ನೇ ಪ್ರಥಮತಃ ಆರಾಧಿಸಬೇಕು ಎಂದನು.

೧೭. ಅರುಂಧತಿಯು ಹೇಳುತ್ತಾಳೆ—ಸ್ವಾಮಿ ಮುನಿವರ್ಯರೆ ! ನಕ್ಷತ್ರ ಸ್ವರೂಪಿಯೂ, ಪುರುಷೋತ್ತಮನೂ, ಆದ ಆ ಶ್ರೀ ಹರಿಯನ್ನು ಯಾವ ವಿಧಿ ಪ್ರಕಾರವಾಗಿ ಪೂಜಿಸಬೇಕು ಎಂಬುದನ್ನು ನನಗೆ ಹೇಳಬೇಕು ಎಂದಳು.

|| ವಶಿಷ್ಠ ಉವಾಚ ||

ಚೈತ್ರಮಾಸಾತ್ಸಮಾರಭ್ಯ ವಿಷ್ಣೋಃ ಪಾದಾಭಿಪೂಜನಂ ।
ಯಥಾ ಕುರ್ವೀತ ರೂಪಾರ್ಥಂ ತನ್ನಿಶಾಮಯ ತತ್ವತಃ　　|| ೧೮ ||

ನಕ್ಷತ್ರಮೇಕಮೇಕಂ ವೈ ಸ್ನಾತಃ ಸಮ್ಯಗುಪೋಷಿತಃ ।
ನಕ್ಷತ್ರಪುರುಷಸ್ಯಾಂಗಂ ಪೂಜಯೇಚ್ಚ ವಿಚಕ್ಷಣಃ　　|| ೧೯ ||

ಮೂಲೇ ಪಾದೌ ತಥಾ ಜಂಘೇ ರೋಹಿಣ್ಯಾಮರ್ಚಯೇಚ್ಛುಭೇ ।
ಜಾನುನೀ ಚಾಶ್ವಿನೀಯೋಗೇ ಆಷಾಢೇ ಚೋರುಸಂಜ್ಞಿತೇ　　|| ೨೦ ||

ಫಾಲ್ಗುನೀ ದ್ವಿತಯೇ ಗುಹ್ಯಂ ಕೃತ್ತಿಕಾಸು ತಥಾ ಕಟಿಂ ।
ಪಾರ್ಶ್ವೇ ಭಾದ್ರಪದಾ ಗುಲ್ಫೇ ದ್ವೇ ಕುಕ್ಷೀ ರೇವತೀಷು ಚ　　|| ೨೧ ||

---

೧೮. ವಸಿಷ್ಠನು ಹೇಳುತ್ತಾನೆ—ಸೌಂದರ್ಯ ಲಭಿಸಬೇಕೆಂದು ಅಪೇಕ್ಷಿಸುವವನು ಚೈತ್ರಮಾಸ ಮೊದಲ್ಗೊಂಡು ಶ್ರೀ ವಿಷ್ಣುವಿನ ಪಾದಾರ್ಚನೆಮಾಡಬೇಕು ಅದನ್ನು ಹೇಗೆ ಮಾಡಬೇಕೆಂಬುದನ್ನು ಯಥಾರ್ಥವಾಗಿ ಹೇಳುವೆನು ಕೇಳು.

೧೯. ಪಂಡಿತನಾದವನು ವ್ರತಮಾಡುವ ದಿನ ಯಥೋಕ್ತಕ್ರಮದಲ್ಲಿ ಸ್ನಾನಾದಿಗಳನ್ನು ಮಾಡಿ ಒಂದೊಂದು ನಕ್ಷತ್ರದ ದಿನದಲ್ಲೂ ಸಂಪೂರ್ಣ ಉಪವಾಸದಿಂದಿದ್ದು ನಕ್ಷತ್ರಪುರುಷನಾದ ಶ್ರೀಹರಿಯ ಪ್ರತಿಯೊಂದು ಅಂಗವನ್ನೂ ಪೂಜಿಸಬೇಕು.

೨೦. ಮೂಲಾನಕ್ಷತ್ರದ ದಿನದಲ್ಲಿ ಶ್ರೀಹರಿಯ ಪಾದವನ್ನೂ, ರೋಹಿಣೀ ನಕ್ಷತ್ರದ ದಿನದಲ್ಲಿ ಶ್ರೀಹರಿಯ ಮೊಣಕಾಲುಗಳನ್ನೂ, ಅಶ್ವಿನೀ ನಕ್ಷತ್ರಯುತ ದಿನದಲ್ಲಿ ಜಾನುಗಳನ್ನೂ, ಪೂರ್ವಾಷಾಢದ ದಿನದಲ್ಲಿ ತೊಡೆಗಳನ್ನೂ, ಪೂಜಿಸಬೇಕು.

೨೧. ಎರಡು ಫಲ್ಗುನೀನಕ್ಷತ್ರದ ದಿನಗಳಲ್ಲಿ ಗುಹ್ಯಪ್ರದೇಶವನ್ನೂ, ಕೃತ್ತಿಕಾನಕ್ಷತ್ರದ ದಿನದಲ್ಲಿ ಕಟಿಪ್ರದೇಶವನ್ನೂ, ಭಾದ್ರಪದ ಮಾಸದ ಪೂರ್ವಾಭಾದ್ರ ನಕ್ಷತ್ರದ ದಿನದಲ್ಲಿ ಎರಡು ಕಾಲುಗಳ ಹರಡುಗಳನ್ನೂ, ರೇವತೀ ನಕ್ಷತ್ರದ ದಿನದಲ್ಲಿ ಉದರವನ್ನೂ ಪೂಜಿಸಬೇಕು.

ಅನುರಾಧಾಸೂರಃ ಪೃಷ್ಠಂ ಧನಿಷ್ಠಾಸ್ವಭಿಪೂಜಯೇತ್ ।
ಭುಜಯುಗ್ಮಂ ವಿಶಾಖಾಸು ಹಸ್ತೇ ಚೈವ ಕರದ್ವಯಂ ॥ ೨೨ ॥

ಪುನರ್ವಸಾವಂಗುಲೀಶ್ಚ ಆಶ್ಲೇಷಾಸು ತಥಾ ನಖಾ ।
ಜ್ಯೇಷ್ಠಾಯಾಂ ಪೂಜಯೇದ್ಗ್ರೀವಾಂ ಶ್ರವಣೇ ಶ್ರವಣೇ ತಥಾ ॥೨೩॥

ಪುಷ್ಯೇ ಮುಖಂ ತಥಾ ಸ್ವಾತೌ ದಶನಾನಭಿಪೂಜಯೇತ್ ।
ಆಸ್ಯಂ ಶತಭಿಷಗ್ಯೋಗೇ ಮಘಾಯೋಗೇ ಚ ನಾಸಿಕಾಂ ॥ ೨೪ ॥

ಮೃಗೋತ್ತಮಾಂಗೇ ನಯನೇ ಪೂಜಯೇದ್ಭಕ್ತಿತಃ ಶುಭೇ ।
ಚಿತ್ರಾಯೋಗೇ ಲಲಾಟಂ ಚ ಭರಣೀಷು ತಥಾ ಶಿರಃ ॥ ೨೫ ॥

ಸಂಪೂಜನೀಯಾ ವಿದ್ವದ್ಭಿರಾರ್ದ್ರಾಯಾಂ ಚ ಶಿರೋರುಹಾಃ ।
ಉಪೋಷಿತೋ ನರೋ ಭದ್ರೇ ಸ್ನಾನಮಭ್ಯಂಗಪೂರ್ವಕಂ ॥ ೨೬ ॥

---

೨೨. ಅನೂರಾಧಾನಕ್ಷತ್ರದ ದಿನ ಎದೆಯನ್ನೂ, ಧನಿಷ್ಠಾನಕ್ಷತ್ರದ ದಿನದಲ್ಲಿ ಪೃಷ್ಠವನ್ನೂ, ವಿಶಾಖಾನಕ್ಷತ್ರದ ದಿನ ಭುಜಯುಗಳವನ್ನೂ, ಹಸ್ತನಕ್ಷತ್ರದ ದಿನ ಎರಡು ಕೈಗಳನ್ನೂ, ಪೂಜಿಸಬೇಕು.

೨೩. ಪುನರ್ವಸುನಕ್ಷತ್ರದ ದಿನ ಅಂಗುಳಿಗಳನ್ನೂ, ಆಶ್ಲೇಷಾನಕ್ಷತ್ರದ ದಿನ ಉಗುರುಗಳನ್ನೂ, ಜ್ಯೇಷ್ಠಾನಕ್ಷತ್ರದ ದಿನ ಕಂಠವನ್ನೂ, ಶ್ರವಣನಕ್ಷತ್ರದ ದಿನ ಕಿವಿಗಳನ್ನೂ, ಪೂಜಿಸಬೇಕು.

೨೪. ಪುಷ್ಯನಕ್ಷತ್ರದ ದಿನ ಮುಖವನ್ನೂ, ಸ್ವಾತಿನಕ್ಷತ್ರದ ದಿನ ಹಲ್ಲುಗಳನ್ನೂ, ಶತಭಿಷಾನಕ್ಷತ್ರದ ದಿನ ಬಾಯಿಯನ್ನೂ, ಮಘಾನಕ್ಷತ್ರಯುತವಾದ ದಿನ ಮೂಗನ್ನೂ ಪೂಜಿಸಬೇಕು.

೨೫. ಮೃಗಶಿರಾನಕ್ಷತ್ರದ ದಿವಸ ಕಣ್ಣುಗಳನ್ನೂ, ಚಿತ್ತಾನಕ್ಷತ್ರಯುತವಾದ ದಿನ ಹಣೆಯನ್ನೂ, ಭರಣೀನಕ್ಷತ್ರದ ದಿವಸ ಶಿರಸ್ಸನ್ನೂ ಪೂಜಿಸಬೇಕು.

೨೬–೨೭. ಪಂಡಿತನಾದವನು ಆರಿದ್ರಾನಕ್ಷತ್ರದ ದಿವಸ ಕೇಶವನ್ನು, ಪೂಜಿಸಬೇಕು. ಓ ಸೌಭಾಗ್ಯವತೀ! ಉಪವಾಸವ್ರತವನ್ನು ಆಚರಿಸಿದ ಪುರುಷನು ಸರ್ವಪ್ರಯತ್ನದಿಂದಲೂ ಅಭ್ಯಂಗಸ್ನಾನವನ್ನು ವರ್ಜಿಸಬೇಕು. ಉಪವಾಸದಿಂದ ಈ ವ್ರತಾನುಷ್ಠಾನಮಾಡುವವನಿಗೆ ಅಭ್ಯಂಗಸ್ನಾನವು ಸೌಂದರ್ಯ

**ವರ್ಜನೀಯಂ ಪ್ರಯತ್ನೇನ ರೂಪಘ್ನಂ ತದ್ವಿನಿರ್ದಿಶೇತ್ ।**
**ಪೂಜಯೇತ್ತಚ್ಚ ನಕ್ಷತ್ರಂ ನಕ್ಷತ್ರಸ್ಯ ಚ ದೈವತಂ ॥ ೨೭ ॥**

**ಸೋಮಂ ನಕ್ಷತ್ರರಾಜಾನಂ ಸ್ವಮಂತ್ರೈರರ್ಚಯೇದ್ಬುಧಃ ।**
**ಪ್ರತಿನಕ್ಷತ್ರಯೋಗೇ ಚ ಭೋಜನೀಯಾ ದ್ವಿಜೋತ್ತಮಾಃ ॥ ೨೮ ॥**

**ನಕ್ಷತ್ರಜ್ಞಾಯ ವಿಪ್ರಾಯ ದಾನಂ ದದ್ಯಾಚ್ಚ ಶಕ್ತಿತಃ ।**
**ಅಂತರಾಯೇ ಸಮುತ್ಪನ್ನೇ ಸೂತಕಾಶೌಚಕಾರಿತೇ ॥ ೨೯ ॥**

**ಉಪೋಷ್ಯ ವಾಚೋಪವಿಶೇನ್ನಕ್ಷತ್ರಮಪರಂ ಪುನಃ ।**
**ಏವಂ ಮಾಘಾವಸಾನೇ ತು ವ್ರತಪಾರಃ ಸಮಾಪ್ಯತೇ ॥ ೩೦ ॥**

**ಸಮಾಪ್ತೇ ತು ವ್ರತೇ ದದ್ಯಾಚ್ಛಕ್ತ್ಯಾ ಸೋಪಸ್ಕರಾನ್ವಿತಂ ।**
**ನಕ್ಷತ್ರಪುರುಷಂ ಹ್ಯೇವಂ ಪೂಜಯೇತ್ತತ್ರ ಶಕ್ತಿತಃ ॥ ೩೧ ॥**

---

ನಾಶಕವೇ ಆಗುವುದು. ಆ ನಕ್ಷತ್ರ ಮತ್ತು ಅದರ ಅಭಿಮಾನಿದೇವತೆಗಳನ್ನು ಹೀಗೆ ಪೂಜಿಸಬೇಕು.

೨೮. ನಕ್ಷತ್ರಾಧಿಪನಾದ ಚಂದ್ರಾರ್ಚನೆಗೆ ಉಕ್ತವಾದ ಮಂತ್ರಗಳಿಂದ ಪೂಜಿಸಬೇಕು. ಪ್ರತಿನಕ್ಷತ್ರಯೋಗವಲ್ಲೂ ಬ್ರಾಹ್ಮಣೋತ್ತಮರಿಗೆ ಭೋಜನ ಮಾಡಿಸಬೇಕು.

೨೯–೩೦. ನಕ್ಷತ್ರಜ್ಞನೂ, ಜ್ಯೋತಿಶ್ಶಾಸ್ತ್ರವಿಶಾರದನೂ, ಆದ ವಿಪ್ರನಿಗೆ ಸ್ವಶಕ್ತ್ಯನುಸಾರ ದಾನ ಕೊಡಬೇಕು. ಈ ವ್ರತ ಪ್ರಾರಂಭಮಾಡಿದ ಮೇಲೆ ಆಶೌಚಾದಿಗಳಿಂದ ಮಧ್ಯೆ ವಿಘ್ನ ಸಂಭವಿಸಿದರೆ ಆ ದಿನ ಕೇವಲ ಉಪವಾಸ ವಿರಬೇಕು. ಪುನಃ ಪೂಜಾದಿಗಳನ್ನು ಆಚರಿಸಲು ಇನ್ನೊಂದುಸಲ ಆ ನಕ್ಷತ್ರ ಬರುವವರೆಗೂ ಪ್ರತೀಕ್ಷಿಸುತ್ತಿರಬೇಕು. ಈರೀತಿ ಚೈತ್ರಾದಿಯಾಗಿ ಫಾಲ್ಗುಣವ ವರೆಗೆ ಒಂದುವರ್ಷಕಾಲ ಆಚರಿಸಿ ಸಾಂಗವಾಗಿ ಪಾರಣೆ ನೆರವೇರಿಸಿದರೆ ಈ ವ್ರತವು ಸಮಾಪ್ತಿ ಹೊಂದುವುದು.

೩೧. ವ್ರತ ಸಮಾಪ್ತವಾಗುವಾಗ ಸ್ವಶಕ್ತ್ಯನುಸಾರ ಚಿನ್ನದಿಂದ ನಕ್ಷತ್ರ ಪುರುಷ ಪ್ರತಿಮೆಯನ್ನು ಮಾಡಿಸಿ, ಪೂಜಿಸಿ, ಸರ್ವಸಂಭಾರ ಸಹಿತವಾಗಿ ದಾನ ಕೊಡಬೇಕು.

ಬ್ರಾಹ್ಮಣಂ ಬ್ರಾಹ್ಮಣೀಂ ಚೈವ ವಸ್ತ್ರಾಲಂಕಾರಭೂಷಣೈಃ ।
ಶಯ್ಯಾಯಾಂ ತು ಸಮಾಸನ್ನಂ ಗಂಧಮಾಲ್ಯಾನುಲೇಪನೈಃ ॥ ೩೨ ॥

ಸಪ್ತಧಾನ್ಯಂ ಯಥಾಲಾಭಂ ಗಾಂ ಸವತ್ಸಾಂ ಪಯಸ್ವಿನೀಂ ।
ಛತ್ರೋಪಾನದ್ಯುಗಂ ಚೈವ ಘೃತಪಾತ್ರಂ ತಥೈವ ಚ ॥ ೩೩ ॥

ಮಂತ್ರೇಣಾನೇನ ವಿಪ್ರಾಯ ಸುಶೀಲಾಯ ನಿವೇದಯೇತ್ ।
ಯಥಾ ನ ವಿಷ್ಣುಭಕ್ತಾನಾಂ ವೃಜಿನಂ ಜಾಯತೇ ಕ್ವಚಿತ್ ॥
ತಥಾ ಸುರೂಪತಾರೋಗ್ಯಸುಖಸಂಪದಿಹಾಸ್ತು ಮೇ ॥ ೩೪ ॥

ಯಥಾ ನ ಲಕ್ಷ್ಮ್ಯಾ ಶಯನಂ ತವ ಶೂನ್ಯಂ ಜನಾರ್ದನ ।
ಶಯ್ಯಾ ಮಮಾಪ್ಯಶೂನ್ಯಾಸ್ತು ತಥಾ ಜನ್ಮನಿಜನ್ಮನಿ ॥ ೩೫ ॥

---

೩೨. ಮತ್ತು ಬ್ರಾಹ್ಮಣ ದಂಪತಿಗಳನ್ನು ಹಾಸಿಗೆಯ ಮೇಲೆ ಕುಳ್ಳಿರಿಸಿ, ವಸ್ತ್ರ ಅಲಂಕಾರ ಭೂಷಣ ಗಂಧ ಮಾಲ್ಯ ಅನುಲೇಪನ ಇತ್ಯಾದಿಗಳಿಂದ ಪೂಜಿಸಬೇಕು.

೩೩. ತನಗೆ ಅನುಕೂಲವಿದ್ದಮಟ್ಟಿಗೆ ಸಪ್ತಧಾನ್ಯ ಕರುಸಹಿತವಾಗಿರುವ ಹಾಲು ಕರೆಯುವ ಗೋವು, ಛತ್ರಿ, ಪಾದುಕಾಯುಗಳ, ಘೃತಪಾತ್ರೆ, ಇವುಗಳನ್ನೆಲ್ಲಾ ಮಂತ್ರವತ್ತಾಗಿ ಸತ್ಕರ್ಮನಿರತನಾದ ಬ್ರಾಹ್ಮಣನಿಗೆ ದಾನ ಕೊಡಬೇಕು.

೩೪. (ವಿಷ್ಣುಭಕ್ತರಿಗೆ ಹೇಗೆ ಎಲ್ಲೂ ಪಾಪವು ಸಂಭವಿಸುವುದಿಲ್ಲವೋ ಹಾಗೆಯೇ ನನಗೆ ಕುರೂಪಾದಿಗಳ ಸೋಂಕಿಲ್ಲದೆ ಸೌಂದರ್ಯ, ಆರೋಗ್ಯ, ಸುಖ, ಸಂಪತ್ತು, ಇವುಗಳೆಲ್ಲಾ ಲಭಿಸಲಿ) ಎಂಬುದು ದಾನಮಂತ್ರಾರ್ಥ,

೩೫. ಶಯ್ಯಾ ದಾನಕಾಲದಲ್ಲಿ ಓ ಜನಾರ್ದನನೇ! ನಿನ್ನ ಹಾಸಿಗೆಯು ಲಕ್ಷ್ಮಿಯಿಂದ ರಹಿತವಾಗಿ ಹೇಗೆ ಇರುವುದಿಲ್ಲವೋ ಹಾಗೆಯೇ ನನಗೂ ಕೂಡ ಜನ್ಮಜನ್ಮಾಂತರಗಳಲ್ಲೂ ಪತ್ನೀ ರಾಹಿತ್ಯವಾಗದಿರಲಿ ಎಂಬ ಅರ್ಥವುಳ್ಳ ಮಂತ್ರವನ್ನು ಹೇಳಬೇಕು.

ಏವಂ ನಿವೇದ್ಯ ತತ್ಸರ್ವಂ ಪ್ರಣಿಪತ್ಯ ಕ್ಷಮಾಪಯೇತ್ ।
ಶಕ್ತಿಹೀನಸ್ತು ಗಾಂ ದದ್ಯಾತ್ ಘೃತಪಾತ್ರ ಸಮನ್ವಿತಾಂ　　|| ೩೬ ||

ನಕ್ಷತ್ರಪುರುಷಾಖ್ಯೋಽಯಂ ಯಥಾವತ್ಕಥಿತಸ್ತವ ।
ಪಾಪಾಪನೋದಂ ಕುರುತೇ ಸಮ್ಯಕ್ಛ್ರದ್ಧಾವತಾಂ ಸತಾಂ　　|| ೩೭ ||

ಅಂಗೋಪಾಂಗಾನಿ ಚೈವಾಸ್ಯ ಪಾದಾದೀನಿ ಯಶಸ್ವಿನಿ ।
ಸುರೂಪಾಣ್ಯಭಿಜಾಯಂತೇ ಸದಾ ಜನ್ಮಾಂತರಾಣಿ ವೈ　　|| ೩೮ ||

ಗಾತ್ರಾಣಿ ಚೈವ ಭದ್ರಾಣಿ ಶರೀರಾರೋಗ್ಯಮುತ್ತಮಂ ।
ಸಂತತಿಂ ಮನಸಃ ಪ್ರೀತಿಂ ರೂಪಂ ಚಾತೀವ ಶೋಭನಂ　　|| ೩೯ ||

ವಾಚ್ಮಾಧುರ್ಯಂ ತಥಾ ಕಾಂತಿಂ ಯಚ್ಚಾನ್ಯದಪಿ ವಾಂಛಿತಂ ।
ದದಾತಿ ನಕ್ಷತ್ರಪುಮಾನ್ಪೂಜಿತಶ್ಚ ಜನಾರ್ದನಃ　　|| ೪೦ ||

---

೩೬. ಈರೀತಿಹೇಳಿ ಆ ದಾನವಸ್ತುಗಳನ್ನೆಲ್ಲಾ ಬ್ರಾಹ್ಮಣನಿಗೆ ಕೊಟ್ಟು, ನಮಸ್ಕಾರಮಾಡಿ ಕ್ಷಮೆಬೇಡಬೇಕು. ಇಷ್ಟು ದಾನಕೊಡುವ ಶಕ್ತಿಯಿಲ್ಲದ ಬಡವನಾದರೆ ಘೃತಪಾತ್ರಸಹಿತವಾಗಿ ಕೇವಲ ಗೋದಾನ ಮಾಡಿದರೆ ಸಾಕು.

೩೭. ನಕ್ಷತ್ರಪುರುಷ ನಾಮಧೇಯದ ಈ ವ್ರತವನ್ನು ನಿನಗೆ ನಾನು ಹೇಳಿರುತ್ತೇನೆ. ಶ್ರದ್ಧೆಯಿರುವ ಸಜ್ಜನರಿಗೆ ಅದು ಸರ್ವಪಾಪವನ್ನು ನಾಶಮಾಡುವುದು.

೩೮. ಎಲೌ ಕೀರ್ತಿಮತೀ ! ಈ ವ್ರತಾನುಷ್ಠಾನಮಾಡುವವನ ಪಾದಾದಿ ಅಂಗೋಪಾಂಗಗಳೆಲ್ಲವೂ ಯಾವಾಗಲೂ ಜನ್ಮಜನ್ಮಾಂತರಗಳಲ್ಲೂ ಸೌಂದರ್ಯಯುಕ್ತಗಳಾಗಿಯೇ ಇರುತ್ತವೆ.

೩೯–೪೦. ನಕ್ಷತ್ರಪುರುಷನಾದ ಶ್ರೀ ಜನಾರ್ದನನನ್ನು ಪೂಜಿಸಿದರೆ ಅವನು ಆ ಪುರುಷನಿಗೆ ಮಂಗಳಕರಗಳಾದ ಅವಯವಗಳನ್ನೂ, ಉತ್ತಮವಾದ ಶರೀರಾರೋಗ್ಯವನ್ನೂ, ಸಂತತಿಯನ್ನೂ, ಮನಸ್ಸಂತೋಷವನ್ನೂ, ಅತಿ ಮನೋಹರವಾದ ಸೌಂದರ್ಯವನ್ನೂ, ವಾಚ್ಮಾಧುರ್ಯವನ್ನೂ, ಮತ್ತು ದೇಹಕಾಂತಿಯನ್ನೂ, ಮತ್ತು ಇನ್ನೂ ಏನೇನನ್ನು ಬಯಸುವನೋ ಅವೆಲ್ಲವನ್ನೂ ಕೊಡುತ್ತಾನೆ.

ವಶಿಷ್ಠೇನ ಯಥಾಖ್ಯಾತಂ ಸರ್ವಂ ತತ್ತೇ ನಿವೇದಿತಂ ।
ನಕ್ಷತ್ರಪುರುಷಂ ನಾಮ ವ್ರತಾನಾಮುತ್ತಮೋತ್ತಮಂ ॥ ೪೧ ॥

ಹೃದ್ಬಾಹುಜಾನುನಯನೋರುನಿತಂಬಭಾಗಂ ।
ದಕ್ಷೈಃ ಪ್ರಕಲ್ಪ್ಯ ಸುತನುಂ ಪುರುಷೋತ್ತಮಸ್ಯ ॥
ಯೇ ಪೂಜಯಂತಿ ಜಿತಕೋಪಮನೋವಿಕಾರಾಃ ।
ಕೌಂತೇಯ ತೇ ನನು ಭವಂತಿ ಸುರೂಪದೇಹಾಃ ॥ ೪೨ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ನಕ್ಷತ್ರಪುರುಷ ವ್ರತವರ್ಣನಂ ನಾಮ ಅಷ್ಟಾಧಿಕ ಶತತಮೋಽಧ್ಯಾಯಃ.



---

೪೧. ಅಯ್ಯಾ ರಾಜನೇ ! ವ್ರತಗಳಲ್ಲಿ ಉತ್ತಮೋತ್ತಮವಾದ ಈ ನಕ್ಷತ್ರ ಪುರುಷನಾಮಕ ವ್ರತವನ್ನು ವಶಿಷ್ಠಮಹರ್ಷಿಯು ಅರುಂಧತಿಗೆ ಉಪದೇಶಿಸಿದ ರೀತಿಯಲ್ಲಿ ಸಂಪೂರ್ಣವಾಗಿ ನಾನು ನಿನಗೆ ಹೇಳಿದ್ದಾಯಿತು.

೪೨. ಅಯ್ಯಾ ಕುಂತೀಪುತ್ರನೇ ! ಕೋಪ ಇತರ ಮನೋವಿಕಾರ ಇವುಗಳನ್ನು ಜಯಿಸಿ, ಸಮರ್ಥರಾದ ಪುರುಷರು ಪುರುಷೋತ್ತಮನಾದ ಶ್ರೀ ವಿಷ್ಣುವಿನ ಹೃದಯ, ಬಾಹು, ಜಾನು, ನಯನ, ಊರು, ನಿತಂಬಾದಿ ಅವಯವಗಳನ್ನು ಆಯಾಯ ನಕ್ಷತ್ರಗಳಲ್ಲಿ ಆವಾಹಿಸಿ, ಅದರಿಂದ ಸುಂದರಮೂರ್ತಿಯನ್ನು ಮಾಡಿ ಪೂಜಿಸುತ್ತಾರೋ ಅಂತಹವರು ಸುರೂಪಯುತವಾದ ಶರೀರವುಳ್ಳವರಾಗುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರ ಪರ್ವದಲ್ಲಿ ನಕ್ಷತ್ರಪುರುಷ ವ್ರತವರ್ಣನೆಯೆಂಬ ನೂರೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣ
## ಉತ್ತರಪರ್ವಣಿ
## ನವೋತ್ತರಶತತಮೋಽಧ್ಯಾಯಃ

---

॥ ಯುಧಿಷ್ಠಿರ ಉವಾಚ ॥

**ಉಪವಾಸೇಷ್ವಶಕ್ತಸ್ಯ ತದೇವ ಫಲಮಿಚ್ಛತಃ ।**
**ಅನಭ್ಯಾಸೇನ ಯೋಗಾದ್ವಾ ಕಿಮಿಷ್ಟಂ ವ್ರತಮುಚ್ಯತೆ ॥ ೧ ॥**

**ಶಿವಸ್ಯೋಪರಿ ಯಸ್ಯ ಸ್ಯಾದ್ಭಕ್ತಿಃ ಸೂರ್ಯಸ್ಯ ಸಂಭವೇತ್ ।**
**ನಕ್ಷತ್ರಾಖ್ಯಂ ವ್ರತಂ ತೇನ ಕಥಂ ಕಾರ್ಯಂ ವದಸ್ವ ಮೇ ॥ ೨ ॥**

---

## ನೂರೊಂಬತ್ತನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಅಯ್ಯಾ ಶ್ರೀಕೃಷ್ಣ ! ಅಭ್ಯಾಸವಿಲ್ಲ ದುದರಿಂದಲೋ ಅಥವಾ ಯೋಗದಿಂದಲೋ ಉಪವಾಸಮಾಡಲು ಅಶಕ್ತ ನಾಗಿದ್ದು ಆ ಉಪವಾಸಪೂರ್ವಕವಾಗಿ ಮಾಡಬೇಕಾದ ವ್ರತದ ಫಲವನ್ನೇ ಬಯಸುವವನಿಗೆ ಆ ಫಲಪ್ರಾಪ್ತಿಯಾಗಬೇಕಾಗಿದ್ದರೆ ಇನ್ನು ಯಾವ ವ್ರತವನ್ನಾ ಚರಿಸಬೇಕೆಂದು ಉಕ್ತವಾಗಿದೆ.

೨. ಶಿವನಲ್ಲಿ ಅಥವಾ ಸೂರ್ಯನಲ್ಲಿ ಭಕ್ತಿಪಾರಮ್ಯವುಳ್ಳವನು ಈ ನಕ್ಷತ್ರ ಪುರುಷವ್ರತವನ್ನು ಹೇಗೆ ಮಾಡಬೇಕು ಎಂಬುದನ್ನು ನನಗೆ ಹೇಳು ? ಎಂದನು.

॥ ಶ್ರೀ ಕೃಷ್ಣ ಉವಾಚ ॥

ಉಪವಾಸೇಷ್ವಶಕ್ತಾನಾಂ ನಕ್ತಂ ಭೋಜನಮಿಷ್ಯತೆ ।
ಅಸ್ಮಿನ್ವ್ರತೇ ತದಪ್ಯತ್ರ ಶ್ರೂಯತಾಮಕ್ಷಯಂ ಮಹತ್ ॥ ೩ ॥

ಶಿವನಕ್ಷತ್ರಪುರುಷಂ ಶಿವಭಕ್ತಿಪ್ರದಾಯಕಂ ।
ಯಸ್ಮಿನ್ನಕ್ಷತ್ರಯೋಗೇ ತು ಪುರಾಣಜ್ಞಾಃ ಪ್ರಚಕ್ಷತೆ ॥ ೪ ॥

ಫಾಲ್ಗುನಸ್ಯಾಮಲೇ ಪಕ್ಷೇ ಯದಾ ಹಸ್ತಃ ಪ್ರಜಾಯತೆ ।
ತದಾ ಗ್ರಾಹ್ಯಂ ವ್ರತಂ ಚೈವ ನಕ್ತೇನ ಶಿವಪೂಜನಂ ॥ ೫ ॥

ಶಿವಾಯೇತಿ ಚ ಹಸ್ತೇನ ಪಾದೌ ಪೂಜ್ಯತಮೌ ಸ್ಮೃತೌ ।
ಶಂಕರಾಯ ನಮೋ ಗುಲ್ಫೌ ಪೂಜ್ಯೌ ಚಿತ್ರಾಸು ಪಾಂಡವ ॥ ೬ ॥

---

೩. ಶ್ರೀಕೃಷ್ಣನು ಹೇಳುತ್ತಾನೆ—ಈ ವ್ರತದಲ್ಲಿ ಉಪವಾಸವನ್ನಾಚರಿಸಲು ಅಶಕ್ತರಾದವರಿಗೆ ನಕ್ತಭೋಜನವು ಉಕ್ತವಾಗಿದೆ. ಅದರಿಂದಲೂ ಅಕ್ಷಯವಾದ ಮಹಾಫಲವು ಲಭಿಸುವುದು. ತಿಳಿಯಿತೇ ?

೪. ಶಿವಭಕ್ತಿ ಪ್ರಧಾನರಾದವರು ಈ ವ್ರತದಲ್ಲಿ ಶಿವನಕ್ಷತ್ರಪುರುಷನನ್ನು ಪೂಜಿಸಬೇಕು. ಯಾವ ನಕ್ಷತ್ರಪ್ರಯೋಗದಲ್ಲಿ ಹೇಗೆ ಪೂಜಿಸಬೇಕೆಂಬುದನ್ನು ಪುರಾಣಜ್ಞರು ನಿರೂಪಿಸಿರುತ್ತಾರೆ.

೫. ಫಾಲ್ಗುಣಮಾಸದ ಶುಕ್ಲಪಕ್ಷದಲ್ಲಿ ಹಸ್ತ ನಕ್ಷತ್ರವು ಸೇರಿದದಿನ ಆ ವ್ರತವನ್ನು ಪ್ರಾರಂಭಮಾಡಬೇಕು. ಆದಿನರಾತ್ರಿಯಲ್ಲಿ ಶಿವಪೂಜೆಯನ್ನು ಮಾಡತಕ್ಕುದು.

೬. ಅಯ್ಯಾ ಪಾಂಡವನೇ ! ಹಸ್ತ ನಕ್ಷತ್ರಯುತವಾದ ದಿನದಲ್ಲಿ ಶಿವಾಯ ನಮಃ ಎಂದು ಹೇಳಿ ಶ್ರೀಶಿವನ ಪಾದಗಳನ್ನು ಪೂಜಿಸಬೇಕು. ಚಿತ್ತಾನಕ್ಷತ್ರ ಯುಕ್ತವಾದ ದಿನದಲ್ಲಿ ಶಂಕರಾಯ ನಮಃ ಎಂದು ಹೇಳಿ ಶ್ರೀಶಿವನ ಕಾಲಿನ ಒಂದು ಗಿಣ್ಣನ್ನು ಅರ್ಚಿಸಬೇಕು.

**ಭೀಮಾಯೇತಿ ಚ ಸ್ವಾತೀಷು ಪೂಜಯೇತ್ಪುರುಷರ್ಷಭ ।**
**ಊರುದ್ವಯಂ ವಿಶಾಖಾಸು ತ್ರಿನೇತ್ರಾಯೇತಿ ಪೂಜಯೇತ್ ॥ ೭ ॥**

**ಮೇಢ್ರಂ ಚೈವಾನುರಾಧಾಸು ಅನಂಗಾಂಗಹರಾಯ ಚ ।**
**ಕಟಿಂ ಜ್ಯೇಷ್ಠಾಸು ಚ ತಥಾ ಸುರಜ್ಯೇಷ್ಠೇತಿ ಚಾರ್ಚಯೇತ್ ॥ ೮ ॥**

**ದಾನಾಖ್ಯಾಯ ನಮೋ ನಾಭಿಃ ಪೂಜ್ಯಾ ಮೂಲೇನ ಶೂಲಿನಃ ।**
**ಪೂರ್ವೋತ್ತರಾಷಾಢಯುಗೇ ಪಾರ್ಶ್ವೇ ವೈ ಪಾರ್ವತೀಪತಿಃ ॥ ೯ ॥**

**ಶ್ರವಣೇನ ತಥಾ ಕುಕ್ಷೀ ಪೂಜ್ಯೇ ಕಪಾಲಿನೇತಿ ಚ ।**
**ವಕ್ಷಃಸ್ಥಲಂ ಧನಿಷ್ಠಾಸು ಸದ್ಯೋಜಾತೇತಿ ನಾಮ ಚ ॥ ೧೦ ॥**

---

೭. ಅಯ್ಯಾ ರಾಜನೇ ! ಸ್ವಾತೀ ನಕ್ಷತ್ರಯುಕ್ತವಾದ ದಿನದಲ್ಲಿ ಭೀಮಾಯ ನಮಃ ಎಂದುಹೇಳಿ ಮತ್ತೊಂದು ಗುಲ್ಫವನ್ನು ಪೂಜಿಸಬೇಕು. ವಿಶಾಖಾ ನಕ್ಷತ್ರ ಯುತವಾದ ದಿನದಲ್ಲಿ ತ್ರಿನೇತ್ರಾಯ ನಮಃ ಎಂದುಹೇಳಿ ಊರುದ್ವಯವನ್ನು ಅರ್ಚಿಸಬೇಕು.

೮. ಅನುರಾಧಾ ನಕ್ಷತ್ರದ ದಿನದಲ್ಲಿ ಅನಂಗಾಂಗಹರಾಯ ನಮಃ ಎಂದು ಹೇಳಿ ಶಿಶ್ನವನ್ನು ಪೂಜಿಸಬೇಕು. ಜ್ಯೇಷ್ಠಾನಕ್ಷತ್ರಯುಕ್ತವಾದ ದಿನದಲ್ಲಿ "ಸುರಜ್ಯೇಷ್ಠಾಯ ನಮಃ" ಎಂದು ಹೇಳಿ ಕಟಿಪ್ರದೇಶವನ್ನು ಪೂಜಿಸಬೇಕು.

೯. ಮೂಲಾನಕ್ಷತ್ರಯುಕ್ತವಾದ ದಿನದಲ್ಲಿ ದಾನಾಖ್ಯಾಯ ನಮಃ ಎಂದು ಹೇಳಿ ಶ್ರೀಶಿವನ ನಾಭಿಪ್ರದೇಶವನ್ನು ಪೂಜಿಸಬೇಕು. ಪೂರ್ವಾಷಾಢ ಉತ್ತರಾಷಾಢ ಈ ಎರಡು ನಕ್ಷತ್ರಗಳಲ್ಲಿ ಪಾರ್ವತೀ ಪತಯೇ ನಮಃ ಎಂದು ಹೇಳಿ ಎರಡು ಪಾರ್ಶ್ವಗಳನ್ನು ಪೂಜಿಸಬೇಕು.

೧೦. ಶ್ರವಣ ನಕ್ಷತ್ರದದಿನದಲ್ಲಿ ಕಪಾಲಿನೇ ನಮಃ ಎಂದುಹೇಳಿ ಉದರ ವನ್ನು ಪೂಜಿಸಬೇಕು. ಧನಿಷ್ಠಾ ನಕ್ಷತ್ರದದಿವಸ ಸದ್ಯೋಜಾತಾಯ ನಮಃ ಎಂದು ವಕ್ಷಸ್ಥಳವನ್ನು ಪೂಜಿಸಬೇಕು.

ವಾಮೇತಿ ಪೂಜಯೇತ್ಪಾರ್ಥ ಹೃದಯಂ ಶತಭಿಷಾಸು ಚ ।
ಪೂರ್ವೋತ್ತರಾಯುಗೇ ಬಾಹೂ ನಮಃ ಖಟ್ವಾಂಗಧಾರಿಣೇ ॥ ೧೧ ॥

ಭರಣೀಷು ತತಃ ಪೃಷ್ಠಂ ವೃಷಾಂಕಾಯ ನಮೋಽಸ್ತು ತೇ ।
ಕೃತ್ತಿವಾಸಾಯ ಚ ತಥಾ ಕೃತ್ತಿಕಾಸು ಕೃಕಾಟಿಕಾಂ ॥ ೧೨ ॥

ಪೂಜ್ಯಂ ರುದ್ರಾಯ ಚ ತಥಾ ರೇವತೀಷು ಕರದ್ವಯಂ ।
ನಖಃ ಪೂಜ್ಯೋಽಶ್ವಿನೀಯೋಗೇ ನಮಃ ಖಂಡೇಂದುಧಾರಿಣೇ ॥೧೩॥

ವಾಕ್ಪೂಜ್ಯಾ ರೋಹಿಣೀಯೋಗೇ ನಮೋ ವಾಚಸ್ಪತೇತಿ ಚ ।
ಮೃಗೋತ್ತಮಾಂಗೇ ದಶನಾನ್ಭೈರವಾಯೇತಿ ವೈ ನಮಃ ॥ ೧೪ ॥

---

೧೧. ಅಯ್ಯಾ ಪಾರ್ಥನೇ! ಶತಭಿಷಾನಕ್ಷತ್ರದ ದಿವಸ ವಾಮಾಯ ನಮಃ ಎಂದುಹೇಳಿ ಹೃದಯವನ್ನು ಪೂಜಿಸಬೇಕು. ಪೂರ್ವಾಭಾದ್ರಾ ಉತ್ತರಾ ಭಾದ್ರಾ ಈ ನಕ್ಷತ್ರಗಳ ದಿವಸ " ಖಟ್ವಾಂಗಧಾರಿಣೇ ನಮಃ " ಎಂದು ಹೇಳಿ ಬಾಹುಗಳನ್ನು ಪೂಜಿಸಬೇಕು.

೧೨. ಭರಣೀ ನಕ್ಷತ್ರದದಿನ "ವೃಷಾಂಕಾಯ ನಮಃ" ಎಂದು ಹೇಳಿ ಪೃಷ್ಠವನ್ನು ಅರ್ಚಿಸಬೇಕು. ಕೃತ್ತಿಕಾ ನಕ್ಷತ್ರದದಿನ ಕೃತ್ತಿವಾಸಾಯ ನಮಃ ಎಂದು ಹೆಗ್ಗತ್ತನ್ನು ಪೂಜಿಸಬೇಕು.

೧೩. ಹಾಗೆಯೇ ರೇವತೀ ನಕ್ಷತ್ರದ ದಿವಸ ರುದ್ರಾಯ ನಮಃ ಎಂದು ಹೇಳಿ ಎರಡು ಹಸ್ತಗಳನ್ನು ಪೂಜಿಸಬೇಕು. ಅಶ್ವಿನೀ ನಕ್ಷತ್ರ ಯುಕ್ತವಾದ ದಿನದಲ್ಲಿ ಖಂಡೇಂದುಧಾರಿಣೇ ನಮಃ ಎಂದು ಹೇಳಿ ಉಗುರನ್ನು ಪೂಜಿಸಬೇಕು.

೧೪. ರೋಹಿಣೀ ನಕ್ಷತ್ರಯುತವಾದದಿನ ವಾಚಸ್ಪತಯೇ ನಮಃ ಎಂದು ಹೇಳಿ ಜಿಹ್ವೆಯನ್ನು ಪೂಜಿಸಬೇಕು. ಮೃಗಶಿರಾ ನಕ್ಷತ್ರದದಿನ ಭೈರವಾಯ ನಮಃ ಎಂದುಹೇಳಿ ದಂತಗಳನ್ನು ಪೂಜಿಸಬೇಕು.

ಆರ್ದ್ರಾಸು ಪೂಜ್ಯಾವಥರೌ ಸ್ಥಾಣವೇತಿ ಯುಧಿಷ್ಠಿರ ।
ನಾಸಾ ಪುನರ್ವಸೌ ಪೂಜ್ಯಾ ಪೂಷದಂತವಿನಾಶಿನೇ ॥ ೧೫ ॥

ಪುಷ್ಯೇ ನೇತ್ರತ್ರಯಂ ಪೂಜ್ಯಂ ನಮಸ್ತೇ ಸರ್ವದರ್ಶಿನೇ ।
ಆಶ್ಲೇಷಾಯಾಂ ಲಲಾಟಂ ಚ ತ್ರ್ಯಂಬಕಾಯ ನಮೋನಮಃ ॥ ೧೬ ॥

ಮಘಾಸು ಚ ಜಟಾಜೂಟಂ ಪೂಜಯೇದಂಧಕಾರಯೇ ।
ಪೂರ್ವಾಫಾಲ್ಗುನಿಕಾಯುಗ್ಮೇ ಶ್ರವಣೇ ಸೋಮಧಾರಿಣೇ ॥ ೧೭ ॥

ನಮೋಽಸ್ತು ಪಾಶಾಂಕುಶಪದ್ಮಶೂಲ ।
ಕಪಾಲ ಸರ್ಪೇಂದು ಧನುರ್ಧರಾಯ ॥
ಗಜಾಸುರಾನಂಗ ಧುರಾಂಧಕಾದಿ ।
ವಿನಾಶಮೂಲಾಯ ನಮಃ ಶಿವಾಯ ॥ ೧೮ ॥

---

೧೫. ಅಯ್ಯಾ ಯುಧಿಷ್ಠಿರನೇ! ಆರಿದ್ರಾ ನಕ್ಷತ್ರದದಿನ "ಸ್ಥಾಣವೇ ನಮಃ" ಎಂದು ಹೇಳಿ ತುಟಿಗಳನ್ನು ಪೂಜಿಸಬೇಕು. ಪುನರ್ವಸು ನಕ್ಷತ್ರದದಿನ "ಪೂಷದಂತವಿನಾಶಿನೇ ನಮಃ" ಎಂದು ಹೇಳಿ ನಾಸಿಕೆಯನ್ನು ಪೂಜಿಸಬೇಕು.

೧೬. ಪುಷ್ಯ ನಕ್ಷತ್ರದದಿವಸ "ಸರ್ವದರ್ಶಿನೇ ನಮಃ" ಎಂದು ಹೇಳಿ ಈಶ್ವರನ ನೇತ್ರತ್ರಯವನ್ನು ಪೂಜಿಸಬೇಕು. ಆಶ್ಲೇಷಾ ನಕ್ಷತ್ರದಲ್ಲಿ "ತ್ರ್ಯಂಬಕಾಯ ನಮಃ" ಎಂದು ಹೇಳಿ ಶಿವನ ಲಲಾಟವನ್ನು ಅರ್ಚಿಸಬೇಕು.

೧೭ ಮಘಾ ನಕ್ಷತ್ರದಲ್ಲಿ "ಅಂಧಕಾರಯೇ ನಮಃ" ಎಂದು ಹೇಳಿ ಶಿವನ ಜಟಾಜೂಟವನ್ನು ಪೂಜಿಸಬೇಕು. ಪೂರ್ವಫಲ್ಗುಣೀ ಯುಗಳದಲ್ಲಿ "ಸೋಮ ಧಾರಿಣೇ ನಮಃ" ಎಂದು ಹೇಳಿ ದೇವನ ಕಿವಿಗಳನ್ನು ಪೂಜಿಸಬೇಕು.

೧೮. ಪಾಶ, ಅಂಕುಶ, ಪದ್ಮ, ಶೂಲ, ಕಪಾಲ, ಸರ್ಪ, ಚಂದ್ರ, ಪಿನಾಕ ವೆಂಬ ಧನುಸ್ಸು, ಇವುಗಳನ್ನು ಧರಿಸಿದ ಶ್ರೀ ಪರಮೇಶ್ವರನಿಗೆ ನಮಸ್ಕಾರ ಗಜಾಸುರ, ಮನ್ಮಥ, ಅಂಧಕಾಸುರ, ಮುಂತಾದವರ ವಿನಾಶಕ್ಕೆ ಮೂಲಕಾರಣ ನಾದ ಶ್ರೀ ಶಿವನಿಗೆ ನಮಸ್ಕಾರ.

ಶಿರಃ ಸಂಪೂಜಯೇದ್ವಿದ್ವಾನ್ತತೋ ಧೂಪವಿಲೇಪನಂ ।
ತತಸ್ತು ರಾತ್ರೌ ಭೋಕ್ತವ್ಯಂ ತೈಲಕ್ಷಾರವಿವರ್ಜಿತಂ ॥ ೧೯ ॥

ಶಾಲಿತಂಡುಲಕಪ್ರಸ್ಥಂ ಘೃತಪಾತ್ರೇಣ ಸಂಯುತಂ ।
ದದ್ಯಾತ್ಸರ್ವೇಷು ನಕ್ತೇಷು ಬ್ರಾಹ್ಮಣಾಯ ನೃಪೋತ್ತಮ ॥ ೨೦ ॥

ಶಕ್ತ್ಯಭಾವೇ ನ ದೋಷಃ ಸ್ಯಾದಧಿಕೇ ಚಾಧಿಕಂ ಫಲಂ ।
ನಕ್ಷತ್ರಯುಗಲೇ ಪ್ರಾಪ್ತೇ ನಕ್ತಯುಗ್ಮಂ ಸಮಾಚರೇತ್ ॥ ೨೧ ॥

ಸೂತಕಾಶೌಚ ದೋಷೇ ತು ಪುನರನ್ಯದುಪೋಷಯೇತ್ ।
ಏವಂ ಕ್ರಮೇಣ ಸಂಪ್ರಾಪ್ತೇ ಪಾರಣೇ ಪಾಂಡವಾಧಿಕೇ ॥ ೨೨ ॥

ಬ್ರಾಹ್ಮಣಾನ್ಭೋಜಯೇದ್ಭಕ್ತ್ಯಾ ಗುಡಕ್ಷೀರಘೃತಾದಿಭಿಃ ।
ಕಾಂಚನಂ ಕಾರಯೇದ್ದೇವಮುಮಯಾ ಸಹ ಶಂಕರಂ ॥ ೨೩ ॥

---

೧೯. ಈರೀತಿ ಶ್ರೀ ಶಿವನ ಶಿರಃ ಪೂಜೆಯನ್ನು ಮಾಡಿ, ಆಮೇಲೆ ಆದಿನ ರಾತ್ರಿಯಲ್ಲಿ ತೈಲ ಕ್ಷಾರವರ್ಜಿತವಾಗಿ ಭೋಜನಮಾಡಬೇಕು.

೨೦. ಅಯ್ಯಾ ನೃಪೋತ್ತಮನೇ! ಪ್ರತಿಯೊಂದು ನಕ್ತಭೋಜನದ ದಿನವೂ ಘೃತಪಾತ್ರೆ ಒಂದುಸೇರು ಶಾಲಿತಂಡುಲ ಇವನ್ನು ಬ್ರಾಹ್ಮಣನಿಗೆ ದಾನ ಮಾಡಬೇಕು.

೨೧. ಪ್ರತಿಯೊಂದು ನಕ್ತದಲ್ಲೂ ಆರೀತಿ ದಾನಮಾಡುವ ಶಕ್ತಿ ಇಲ್ಲದಿದ್ದರೆ ದಾನಮಾಡದಿದ್ದರೂ ದೋಷವಿಲ್ಲ. ಅಧಿಕವಾಗಿ ದಾನಮಾಡಿದರೆ ಫಲಾಧಿಕ್ಯ ಇದೆ. ಒಂದು ನಕ್ಷತ್ರವು ೬೦ ಘಳಿಗೆ ಇದ್ದು ಎರಡುದಿನ ವ್ಯಾಪಿಯಾಗಿದ್ದರೆ ನಕ್ತಯುಗಳವನ್ನು ಆಚರಿಸಬೇಕು.

೨೨–೨೩. ಅಯ್ಯಾ ಪಾಂಡವೋತ್ತಮನೇ! ಅಶೌಚಾದಿಗಳು ಸಂಭವಿಸಿ ಈ ವ್ರತವನ್ನು ಮಧ್ಯೆ ಆಚರಿಸಲು ಆಗದೇ ಹೋದರೆ, ಪುನಃ ಇನ್ನೊಂದು ದಿನ ಉಪವಾಸಮಾಡಿ ಆಚರಿಸಬೇಕು. ಈರೀತಿ ಕ್ರಮವಾಗಿ ಆಚರಿಸಿ ವರ್ಷಾಂತದ ಪಾರಣೆಯ ದಿನ ಭಕ್ತಿಯಿಂದ ಬ್ರಾಹ್ಮಣರಿಗೆ ಗುಡ, ಕ್ಷೀರ, ಘೃತಾದಿಗಳಿಂದ ಭೋಜನ ಮಾಡಿಸಬೇಕು. ಮತ್ತು ಪಾರ್ವತೀ ಸಹಿತವಾಗಿ ಶ್ರೀಶಂಕರನ ಪ್ರತಿಮೆಯನ್ನು ಚಿನ್ನದಿಂದ ಮಾಡಿಸಬೇಕು.

ಶಯ್ಯಾಂ ಸುಲಕ್ಷಣಾಂ ಕೃತ್ವಾ ವಿರುದ್ಧಗ್ರಂಥಿವರ್ಜಿತಾಂ ।
ಸೋಪಧಾನಕವಿಶ್ರಾಮಾಂ ಸಾಸ್ತರಾವರಣಾಂ ಶುಭಾಂ ॥ ೨೪ ॥

ಭಾಜನೋಪಾನಹಚ್ಛತ್ರ ಚಾಮರಾಸನದರ್ಪಣೈಃ ।
ಭೂಷಣೈರಪಿ ಸಂಯುಕ್ತಾಂ ಫಲವಸ್ತ್ರಾನುಲೇಪನೈ ॥ ೨೫ ॥

ತಸ್ಯಾಂ ನಿಧಾಯ ತಂ ದೇವಮಲಂಕೃತ್ಯ ಗುಣಾನ್ವಿತಂ ।
ಕಪಿಲಾಂ ವಸ್ತ್ರಸಂವೀತಾಂ ಶುಚಿಶೀಲಾಂ ಪಯಸ್ವಿನೀಂ ॥ ೨೬ ॥

ಸುವರ್ಣಶೃಂಗೀಂ ರೌಪ್ಯಖುರಾಂ ಸವತ್ಸಾಂ ಕಾಂಸ್ಯದೋಹನಾಂ ।
ದದ್ಯಾನ್ಮಂತ್ರೇಣ ಪೂರ್ವಾಹ್ಣೇ ನ ಕಾಲಮಭಿಲಂಘಯೇತ್ ॥ ೨೭ ॥

---

೨೪. ಸುಲಕ್ಷಣವಾಗಿಯೂ, ಮೃದುವಾಗಿಯೂ, ಇರುವ ದಿಂಬು, ವಿಶ್ರಾಂತಿ ಯೋಗ್ಯವಾದ ಮಂಚ, ಮಗ್ಗಲು ಹಾಸಿಗೆ, ಇವುಗಳಿಂದ ಸಹಿತವಾಗಿರುವಂತೆ ಶಯ್ಯೆಯನ್ನು ಮಾಡಿಸಬೇಕು.

೨೫. ಉದಕುಂಭ, ಪಾದುಕಾಯುಗಳ, ಛತ್ರಿ, ಚಾಮರ, ಪೀಠ, ಕನ್ನಡಿ, ಭೂಷಣ ಇವುಗಳಿಂದಲೂ, ಹಾಗೆಯೇ ಫಲ, ಅನುಲೇಪನ ಇತ್ಯಾದಿ ಸಂಭಾರಗಳಿಂದ ಸಹಿತವಾಗಿಯೂ ಇರಬೇಕು.

೨೬–೨೭. ಅಂತಹ ಹಾಸಿಗೆಯಲ್ಲಿ ಶ್ರೀ ಶಿವನ ಭಂಗಾರದ ಪ್ರತಿಮೆಯನ್ನಿಟ್ಟು ಅಲಂಕರಿಸಬೇಕು. ಸಾಧುಸ್ವಭಾವವುಳ್ಳದ್ದಾಗಿ ಹಾಲು ಕರೆಯುತ್ತಿರುವ ಪಸುವಿಗೆ ವಸ್ತ್ರವನ್ನು ಹೊದ್ದಿಸಬೇಕು. ಅದರ ಕೋಂಬಿಗೆ ಸುವರ್ಣದ ಅಣಸು ಹಾಕಿಯೂ, ಗೊರಸಿಗೆ ಬೆಳ್ಳಿಯ ಮುಸುಕು ಹಾಕಿಯೂ ಇರಬೇಕು. ಕರುಸಹಿತವಾಗಿರುವ ಕಪಿಲಗೋವನ್ನು ಕಂಚಿನ ಹಾಲುಕರೆಯುವ ಪಾತ್ರೆ ಸಮೇತ ಈ ಅರ್ಥವುಳ್ಳ ಮಂತ್ರಗಳನ್ನು ಹೇಳಿ, ಶಯ್ಯಾ ಮೊದಲಾದ ಉಪಕರಣಗಳೊಡಗೂಡಿ ಪೂರ್ವಾಹ್ಣಕಾಲದಲ್ಲಿ ಬ್ರಾಹ್ಮಣನಿಗೆ ಮಂತ್ರವತ್ತಾಗಿ ದಾನಕೊಡಬೇಕು. ದಾನಕ್ಕೆ ಉಕ್ತಕಾಲವನ್ನು ಮೀರಬಾರದು.

ಯಥಾ ನ ದೇವಶಯನಂ ತವ ಪರ್ವತಜಾತಯಾ ।
ಶೂನ್ಯಂ ವೃತ್ಯಾಥ ಸಂತತ್ಯಾ ತಥಾ ಮೇ ಸಂತು ಸಿದ್ಧಯಃ ॥ ೨೮ ॥

ಯಥಾ ದೇವ ನ ಶ್ರೇಯೋಽರ್ಥಸ್ತ್ವದನ್ಯೋ ವಿದ್ಯತೇ ಕ್ವಚಿತ್ ।
ತಥಾ ಮಾಮುದ್ಧರಾಶೇಷ ದುಃಖಸಂಸಾರಸಾಗರಾತ್ ॥ ೨೯ ॥

ತತಃ ಪ್ರದಕ್ಷಿಣೀಕೃತ್ಯ ಪ್ರಣಿಪತ್ಯ ವಿಸರ್ಜಯೇತ್ ।
ಶಯ್ಯಾಗವಾದಿತತ್ಸರ್ವಂ ದ್ವಿಜಸ್ಯ ಭವನಂ ನಯೇತ್ ॥ ೩೦ ॥

ನೈತದ್ವಿಶೀಲಾಯ ನ ದಾಂಭಿಕಾಯ ।
ಕುತರ್ಕದುಷ್ಟಾಯ ವಿನಿಂದಕಾಯ ॥
ಪ್ರಕಾಶನೀಯಂ ವ್ರತಮಿಂದುಮೌಳೇಃ ।
ಯಶ್ಚಾಪಿ ಲೋಭೋಪಹತಾಂತರಾತ್ಮಾ ॥ ೩೧ ॥

---

೨೮. ಓ ದೇವನೇ! ಹೇಗೆ ನಿನ್ನ ಶಯ್ಯೆಯು ಪರ್ವತಪುತ್ರಿಯಾದ ಪಾರ್ವತಿಯಿಂದ ಶೂನ್ಯವಾಗಿರುವುದಿಲ್ಲವೋ ಅದೇರೀತಿ ನನ್ನ ಶಯ್ಯೆಯೂ ಪತ್ನೀ, ಪುತ್ರ ಇವರಿಂದ ಶೂನ್ಯವಾಗದಿರಲಿ. ನನ್ನ ಇಷ್ಟಗಳೆಲ್ಲವೂ ಸಿದ್ಧಿಸಲಿ. ಎಂಬುದು ಈ ದಾನ ಮಂತ್ರಾರ್ಥ.

೨೯. ಓ ದೇವ! ನಿನ್ನ ಹೊರತು ಬೇರೆ ಶ್ರೇಯಸ್ಸಾಧನವಸ್ತು ನನಗೆ ಇನ್ನಾರೂ ಬೇಕಿಲ್ಲದ ಹಾಗೆ, ನನ್ನನ್ನು ಅಶೇಷ ಸಂಸಾರಸಾಗರದಿಂದ ಉದ್ಧಾರ ಮಾಡು ಎಂಬುದೂ ದಾನ ಮಂತ್ರಾ.

೩೦. ಆಮೇಲೆ ಆ ಬ್ರಾಹ್ಮಣನಿಗೆ ಪ್ರದಕ್ಷಿಣೆ ನಮಸ್ಕಾರಮಾಡಿ ಕಳುಹಿಸಿ ಕೊಡಬೇಕು. ಹಾಸಿಗೆ, ಹಸು ಇವುಗಳನ್ನೂ ದಾನಕೊಟ್ಟ ಆ ಪದಾರ್ಥಗಳನ್ನೂ ಆ ಬ್ರಾಹ್ಮಣನ ಗೃಹಕ್ಕೆ ಕಳುಹಿಸಿಕೊಡಬೇಕು.

೩೧. ಶ್ರೀ ಚಂದ್ರಶೇಖರನಾದ ಶಿವನ ಉದ್ದಿಶ್ಯಕವಾದ ಈ ವ್ರತ ವಿಚಾರ ವನ್ನು ಆಚಾರ್ಯಶೂನನಿಗೂ, ಡಾಂಭಿಕನಿಗೂ, ಕುತರ್ಕಾದಿವ್ಯವಹಾರದಿಂದ ದುಷ್ಟನಾದವನಿಗೂ, ನಿಂದಿತನಾದವನಿಗೂ ಅತಿ ಲೋಭಾಕ್ರಾಂತಚಿತ್ತನಿಗೂ, ಉಪದೇಶಿಸಬಾರದು.

ಭಕ್ತಾಯ ದಾಂತಾಯ ಗುಣಾನ್ವಿತಾಯ ।
ಪ್ರದೇಯಮೇತಚ್ಛಿವಭಕ್ತಿಯುಕ್ತೈಃ ॥
ಇದಂ ಮಹಾಪಾತಕಕೃನ್ನರಾಣಾಂ ।
ಅಪ್ಯಕ್ಷಯಂ ವೇದವಿದೋ ವದಂತಿ ॥ ೩೨ ॥

ಯಾ ವಾಥ ನಾರೀ ಕುರುತೇಽತಿಭಕ್ತ್ಯಾ ।
ಭರ್ತಾರಮಾಶ್ರಿತ್ಯ ಶುಭಂ ಗುರುಂ ವಾ ॥
ನ ಬಂಧುಪುತ್ರೈರ್ನಧನೈರ್ವಿಯೋಗ- ।
ಮಾಪ್ನೋತಿ ದುಃಖಂ ನ ಸುಹೃತ್ಸಮುತ್ಥಂ ॥ ೩೩ ॥

ಇದಂ ವಶಿಷ್ಠೇನ ಪುರಾಽರ್ಜುನೇನ ।
ಕೃತಂ ಕುಬೇರೇಣ ಪುರಂದರೇಣ ॥
ಯತ್ಕೀರ್ತನಾದಪ್ಯಖಿಲಾನ್ಯಘಾನಿ ।
ವಿಘ್ನಂ ಸಮಾಯಾಂತಿ ನ ಸಂಶಯೋಽತ್ರ ॥ ೩೪ ॥

೩೨. ಸಾಧ್ಯವಿದ್ದರೆ ಶಿವಭಕ್ತಿಯುಳ್ಳವರು ಈ ವ್ರತವನ್ನು ಶಿವಭಕ್ತನೂ, ಜಿತೇಂದ್ರಿಯನೂ, ಸುಗುಣಿಯೂ ಆಗಿರುವ ಪುರುಷನಿಗೆ ಉಪದೇಶಮಾಡಬೇಕು. ಮಹಾಪಾತಕಕರ್ಮವನ್ನು ಮಾಡಿದವರಿಗೆ ಸಹ ಈ ವ್ರತವು ಅಕ್ಷಯ ಫಲ ದಾಯಕವೆಂದು ಶಾಸ್ತ್ರಜ್ಞರಾದ ಪುರುಷರು ಹೇಳುತ್ತಾರೆ.

೩೩. ಯಾವ ಸ್ತ್ರೀಯು ತನ್ನ ಗಂಡನನ್ನಾಗಲಿ ಅಥವಾ ಗುರುವನ್ನಾಗಲಿ ಆಶ್ರಯಿಸಿ, ಅತಿ ಭಕ್ತಿಯಿಂದ ಈ ವ್ರತವನ್ನು ಮಾಡಿದರೆ, ಅವಳು ತನ್ನ ಬಂಧು, ಪುತ್ರ, ಧನ ಇವುಗಳಿಂದ ಎಂದೂ ವಿಯೋಗ ಹೊಂದುವುದಿಲ್ಲ. ಹಾಗೆಯೇ ಮಿತ್ರ ವಿಯೋಗಜನ್ಯವಾದ ದುಃಖವೂ ಬರುವುದಿಲ್ಲ.

೩೪. ಈ ವ್ರತವನ್ನು ಪೂರ್ವದಲ್ಲಿ ವಸಿಷ್ಠಮಹರ್ಷಿ, ಅರ್ಜುನ, ಕುಬೇರ, ದೇವೇಂದ್ರ ಇವರೆಲ್ಲಾ ಆಚರಿಸಿರುತ್ತಾರೆ. ಈ ವ್ರತ ಶ್ರವಣಮಾತ್ರ ದಿಂದ ಸಕಲಪಾಪಗಳೂ, ವಿಘ್ನಗಳೂ ನಾಶವಾಗುವುವು. ಈ ವಿಷಯದಲ್ಲಿ ಸಂದೇಹವಿಲ್ಲ.

ಇತಿ ಪಠತಿ ಶೃಣೋತಿ ವಾ ಯ ಇತ್ಥಂ ।
ಶಿವಪುರುಷಂ ಪುರುಹೂತವಲ್ಲಭಃ ಸ್ಯಾತ್ ॥
ಅಪಿ ನರಕಗತಾನ್ಪಿತೄನಶೇಷಾ ।
ಶಿವಭವನಂ ನಯತೀಹ ಯಃ ಕರೋತಿ ॥ ೩೫ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಶಿವನಕ್ಷತ್ರ ಪುರುಷವ್ರತವರ್ಣನಂ ನಾಮ ನವೋತ್ತರಶತತಮೋಽಧ್ಯಾಯಃ.



---

೩೫. ಶಿವನಕ್ಷತ್ರಪುರುಷ ವ್ರತಪ್ರತಿಪಾದಕವಾದ ಈ ಗ್ರಂಥವನ್ನು ಪಠಿಸುವವನೂ ಶ್ರವಣಮಾಡುವವನೂ ಸ್ವರ್ಗವನ್ನು ಪಡೆದು, ಅಲ್ಲಿ ಇಂದ್ರನಿಗೆ ಪ್ರಿಯನಾಗುತ್ತಾನೆ. ಈ ವ್ರತವನ್ನು ಆಚರಿಸಿದವನ ಪಿತೃಗಳು ನರಕಗತರಾಗಿದ್ದರೂ ಅವರಿಗೆಲ್ಲಾ ಶಿವಲೋಕಪ್ರಾಪ್ತಿಯನ್ನುಂಟುಮಾಡುವನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶಿವನಕ್ಷತ್ರಪುರುಷ ವ್ರತವರ್ಣನೆಯೆಂಬ ನೂರೊಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣ

## ಉತ್ತರಪರ್ವಣಿ

## ದಶಾಧಿಕಶತತಮೋಽಧ್ಯಾಯಃ

---

॥ ಯುಧಿಷ್ಠಿರ ಉವಾಚ ॥

**ಯದಿ ಕರ್ತುಂ ನ ಶಕ್ನೋತಿ ವ್ರತಂ ನಕ್ಷತ್ರಪೌರುಷಂ ।**
**ಗೃಹೀತಂ ರಭಸಾ ಕೃಷ್ಣ ಹ್ಯನ್ಯದ್ವಾ ವ್ರತಮುತ್ತಮಂ ॥ ೧ ॥**
**ಸಂಪೂರ್ಣಂ ಜಾಯತೇ ಯೇನ ಯದಚೀರ್ಣಂ ಪುರಾ ಸ್ಥಿತಂ ।**
**ಕುರು ಪ್ರಸಾದಂ ಗುಹ್ಯಾರ್ಥಮೇತನ್ಮೇ ವಕ್ತುಮರ್ಹಸಿ ॥ ೨ ॥**

॥ ಶ್ರೀಕೃಷ್ಣ ಉವಾಚ ॥

**ಸಾಧು ಸಾಧು ಮಹಾಬಾಹೋ ಕುರುರಾಜ ಯುಧಿಷ್ಠಿರ ।**
**ರಹಸ್ಯಾನಾಂ ರಹಸ್ಯಂ ತೇ ಕಥಯಾಮಿ ವ್ರತೋತ್ತಮಂ ॥ ೩ ॥**

---

### ನೂರಹತ್ತನೆಯ ಅಧ್ಯಾಯ

೧–೨ ಯುಧಿಷ್ಠಿರನು ಹೇಳುತ್ತಾನೆ—ಎಲೈ ಕೃಷ್ಣಪರಮಾತ್ಮನೇ! ಈ ನಕ್ಷತ್ರಪುರುಷಸಂಬಂಧಿಯಾದ ವ್ರತವನ್ನು ಮಾಡುವುದಕ್ಕೆ ಅಸಮರ್ಥನಾಗಿ ಇನ್ನೊಂದು ವ್ರತವನ್ನು ಗ್ರಹಣಮಾಡಿದ್ದರೂ, ಅಥವಾ ಮೊದಲು ಪ್ರಾರಂಭಿಸಿದ ವ್ರತವು ಪೂರ್ತಿಯಾಗದೆ ಇದ್ದರೂ, ಅದು ಯಾವ ಕರ್ಮದಿಂದ ಸಂಪೂರ್ಣವಾಗಬಹುದೋ ಅಂತಹ ಗೋಪ್ಯವಾದ ಕರ್ಮವಿಶೇಷವನ್ನು ನನ್ನಲ್ಲಿ ಅನುಗ್ರಹಿಸಿ ಹೇಳಬೇಕು ಎಂದನು.

೩. ಶ್ರೀ ಕೃಷ್ಣನು ಹೇಳುತ್ತಾನೆ—ಮಹಾಬಾಹುವೂ ಕುರುವಂಶೋತ್ಪನ್ನನೂ ಆದ ಧರ್ಮರಾಯನೇ! ನೀನು ಪ್ರಶ್ನೆಮಾಡಿದುದು ಬಹು ಚೆನ್ನಾಗಿದೆ. ಗೋಪ್ಯಗಳಾದ ವ್ರತಗಳಲ್ಲಿ ಅತಿಗೋಪ್ಯವಾದ ಒಂದು ಉತ್ತಮ ವ್ರತವನ್ನು ನಿನಗೆ ಹೇಳುತ್ತೇನೆ.

ಸಂಪೂರ್ಣಂ ನಾಮ ತಚ್ಚಾಪಿ ವ್ರತಂ ಸಮ್ಯಕ್ಫಲಪ್ರದಂ ।
ಯಚ್ಚೀರ್ಣಂ ನರನಾರೀಭಿರ್ಭವೇತ್ಸಂಪೂರ್ಣಕಾರಕಂ ॥ ೪ ॥

ಅವಶ್ಯಂ ತಚ್ಚ ಕರ್ತವ್ಯಮಕ್ಷೀಣಫಲಕಾಂಕ್ಷಿಭಿಃ ।
ಕಿಂಚಿದ್ಭಗ್ನಂ ಪ್ರಮಾದೇನ ಯದ್ವ್ರತಂ ವ್ರತಿನಾಂ ಸ್ಥಿತಂ ॥
ತತ್ಸಂಪೂರ್ಣಂ ಭವೇತ್ಸರ್ವಂ ವ್ರತೇನಾನೇನ ಪಾಂಡವ ॥ ೫ ॥

ಉಪದ್ರವೈರ್ಬಹುವಿಧೈರ್ಮದಾನ್ಮೋಹಾಚ್ಚ ಪಾರ್ಥಿವ ।
ಯದ್ಭಗ್ನಂ ಕಿಂಚಿದೇವ ಸ್ಯಾದ್ವ್ರತಂ ವಿಘ್ನವಿನಾಯಕೈಃ ॥
ತತ್ಸಂಪೂರ್ಣಂ ಭವೇತ್ಪಾರ್ಥ ಸತ್ಯಂ ಸತ್ಯಂ ನ ಸಂಶಯಃ ॥ ೬ ॥

ಕಾಂಚನಂ ರೌಪ್ಯಕಂ ರೂಪಂ ಶಿಲ್ಪಿನಾ ತದ್ಘಟಾಪಯೇತ್ ।
ಭಗ್ನವ್ರತೇ ತು ಯೋ ದೇವಸ್ತತ್ಸ್ವರೂಪಂ ಸುನಿರ್ಮಿತಂ ॥ ೭ ॥

---

೪. ಆ ವ್ರತವು 'ಸಂಪೂರ್ಣ' ಎಂಬ ನಾಮಧೇಯವುಳ್ಳದ್ದು. ಅದು ವ್ರತಾನುಷ್ಠಾನಮಾಡುವವನಿಗೆ ಚೆನ್ನಾಗಿ ಫಲದಾಯಕವಾಗಿದೆ. ಪುರುಷನಾಗಲಿ ಸ್ತ್ರೀಯಾಗಲಿ ಅದನ್ನು ಆಚರಿಸಿದರೆ ಅವರಿಗೆ ಸಂಪೂರ್ಣತೆಯನ್ನು ಕೊಡುತ್ತದೆ.

೫. ಅಯ್ಯಾ ಪಾಂಡುಪುತ್ರನೇ! ಅಕ್ಷಯವಾದ ಫಲವಾಗಬೇಕೆಂದು ಅಪೇಕ್ಷಿಸುವವರು ಈ ವ್ರತವನ್ನು ಅವಶ್ಯವಾಗಿ ಮಾಡಬೇಕು. ಮತ್ತು ವ್ರತಾಚರಣ ಪರರಾದವರು, ಪ್ರಾರಂಭಿಸಿದ ವ್ರತಕ್ಕೆ ಪ್ರಮಾದಾದಿಗಳಿಂದ ಯತ್ಕಿಂಚಿತ್ ಭಂಗಬಂದರೆ, ಈ ಸಂಪೂರ್ಣ ವ್ರತವನ್ನು ಆಚರಿಸುವುದರಿಂದ ಆ ಎಲ್ಲ ಭಗ್ನ ವ್ರತಗಳಿಗೂ ಸಂಪೂರ್ಣತೆಯು ಬರುವುದು.

೬. ಅಯ್ಯಾ ಕುಂತೀಪುತ್ರನೇ! ಬಹುವಿಧವಾದ ಉಪದ್ರವಗಳಿಂದಾಗಲಿ ಮದ, ಮೋಹ ಇತ್ಯಾಗಳಿಂದಲಾಗಲಿ, ವಿಘ್ನವಿನಾಯಕಾದಿ ದೇವತೆಗಳಿಂದಲಾಗಲಿ, ಆರಂಭಿಸಿದ ವ್ರತಕ್ಕೆ ಯತ್ಕಿಂಚಿತ್ ಭಂಗ ಸಂಭವಿಸಿದ್ದರೆ, ಅದು ಈ ವ್ರತದಿಂದ ಸಂಪೂರ್ಣವಾಗುವುದು. ಇದು ಸತ್ಯ. ಇದಕ್ಕೆ ಯಾವ ಸಂಶಯವೂ ಇಲ್ಲ.

೭. ಯಾವುದಾದರೂ ವ್ರತಕ್ಕೆ ಭಂಗಸಂಭವಿಸಿದ ಪಕ್ಷದಲ್ಲಿ, ಆ ವ್ರತದಲ್ಲಿ ಯಾವನು ಪೂಜ್ಯನಾದ ದೇವನೋ ಆ ದೇವನ ಮೂರ್ತಿಯನ್ನು ಚಿನ್ನದಲ್ಲಾಗಲಿ, ಬೆಳ್ಳಿಯಲ್ಲಾಗಲಿ ಶಿಲ್ಪಿಯಿಂದ ಚೆನ್ನಾಗಿ ರಚಿಸಬೇಕು.

ರೂಪಂ ಸ್ತ್ರೀಪುಂಸಯೋರ್ವಾಪಿ ಪ್ರಾರಬ್ಧಂ ಯದ್ವ್ರತೇ ಕಿಲ ।
ನವನಿಷ್ಪಾದಿತಂ ಕಿಂಚಿದ್ದೈವಾತ್ಸರ್ವಂ ತಥೋತ್ಥಿತಂ ॥ ೮ ॥

ದ್ವಿಭುಜಂ ಪಂಕಜಾರೂಢಂ ಸೌಮ್ಯಪ್ರಹಸಿತಾನನಂ ।
ನಿಷ್ಪಾದಿತಂ ಶಿಲ್ಪಭಾವಾತ್ತಸ್ಮಿನ್ನೇವ ದಿನೇ ದಿನೇ ॥ ೯ ॥

ತನ್ಮಾಸೇ ಚ ಪುನಃ ಪ್ರಾಪ್ತೇ ಬ್ರಾಹ್ಮಣೋ ವಿಧಿನಾ ಗೃಹೇ ।
ಸ್ನಾಪಯೇತ್ಪಯಸಾ ದಧ್ನಾ ಘೃತಕ್ಷೀರರಸಾಂಬುಭಿಃ ॥ ೧೦ ॥

ಗಂಧಚಂದನಪುಷ್ಪೈಶ್ಚ ಚರ್ಚಯೇತ್ಕುಂಕುಮಾದಿನಾ ।
ತೋಯಪೂರ್ಣಸ್ಯ ಕುಂಭಸ್ಯ ಪೃಥ್ವ್ಯಾಂ ವಿನ್ಯಸ್ಯ ಚಂದನೈಃ ॥ ೧೧ ॥

ಧೂಪದೀಪಾಕ್ಷತೈರ್ವಸ್ತ್ರೈ ರತ್ನೈರಪ್ಯುಪಹಾರಕೈಃ ।
ಅರ್ಘ್ಯಂ ದದ್ಯಾಚ್ಚ ತನ್ನಾಮ್ನಾ ಮಂತ್ರೇಣಾನೇನ ಪಾಂಡವ ॥ ೧೨ ॥

---

೮–೯. ಪ್ರಾರಂಭಿಸಿದ ವ್ರತಕ್ಕೆ ದೈವಾತ್ ಕಿಂಚಿದ್ಭಂಗ ಸಂಭವಿಸಿದಾಗ, ಆ ವ್ರತದೇವತೆಯು ಸ್ತ್ರೀದೇವತಾಸ್ವರೂಪವೋ ಅಥವಾ ಪುಂದೇವತಾಸ್ವರೂಪವೋ ಅರಿತು, ಪೂಜ್ಯವಾದ ಆ ದೇವತಾಪ್ರತಿಮೆಯನ್ನು ಪದ್ಮಾಸನಾರೂಢವೂ, ದ್ವಿಭುಜಯುಕ್ತವೂ, ಸೌಮ್ಯವೂ, ಹಸನ್ಮುಖವೂ ಆಗಿರುವಂತೆ ಶಿಲ್ಪಿಯಿಂದ ಆಯಾ ದಿನದಲ್ಲೇ ಮಾಡಿಸಬೇಕು.

೧೦–೧೧. ವ್ರತಾನುಷ್ಠಾನಮಾಡುವ ವಿಪ್ರನು ಪುನಃ ಆ ಮಾಸವು ಪ್ರಾಪ್ತವಾದಾಗ, ಸ್ವಗೃಹದಲ್ಲಿ ಶಾಸ್ತ್ರಪ್ರಕಾರವಾಗಿ ಆ ದೇವನಿಗೆ ಹಾಲು, ಮೊಸರು, ತುಪ್ಪ ಮುಂತಾದ ಪಂಚಾಮೃತಗಳಿಂದಲೂ, ಶುದ್ಧೋದಕಗಳಿಂದಲೂ ಅಭಿಷೇಕ ಮಾಡಿ ಗಂಧ, ಚಂದನ, ಕುಂಕುಮ, ಪುಷ್ಪ ಇತ್ಯಾದಿಗಳಿಂದ ಪೂಜೆಮಾಡಬೇಕು ಮತ್ತು ಜಲಪೂರ್ಣವಾದ ಕಲಶವನ್ನು ಆ ದೇವನ ಮುಂಭಾಗದಲ್ಲಿ ಭೂಮಿಯ ಮೇಲೆ ಸ್ಥಾಪನೆಮಾಡಿ, ಅದನ್ನು ಚಂದನಾದಿಗಳಿಂದ ಪೂಜಿಸಬೇಕು.

೧೨. ಅಯ್ಯಾ ಪಾಂಡವನೇ! ಆ ಕಲಶವನ್ನು ವಸ್ತ್ರ, ರತ್ನ, ಪುಷ್ಪ, ಅಕ್ಷತೆ, ಧೂಪ, ದೀಪ, ಉಪಹಾರ ಮುಂತಾದುವುಗಳಿಂದ ಪೂಜೆಮಾಡಬೇಕು. ಅನಂತರ ಮಂತ್ರವತ್ತಾಗಿ ದೇವತಾನಾಮೋಚ್ಚಾರಣಪೂರ್ವಕವಾಗಿ ಅರ್ಘ್ಯ ಪ್ರದಾನ ಮಾಡಬೇಕು.

ಉಪಸನ್ನಸ್ಯ ದೀನಸ್ಯ ಪ್ರಾಯಶ್ಚಿತ್ತಕೃತಾಂಜಲೇಃ ।
ಶರಣಂ ಚ ಪ್ರಪನ್ನಸ್ಯ ಕುರುಷ್ವಾದ್ಯ ದಯಾಂ ಪ್ರಭೋ ॥ ೧೩ ॥

ಪರತ್ರ ಭಯಭೀತಸ್ಯ ಭಗ್ನಖಂಡವ್ರತಸ್ಯ ಚ ।
ಕುರುಪ್ರಸಾದಂ ಸಂಪೂರ್ಣಂ ವ್ರತಂ ಸಂಪೂರ್ಣಮಸ್ತು ಮೇ ॥ ೧೪ ॥

ತಪಶ್ಛಿದ್ರಂ ವ್ರತಚ್ಛಿದ್ರಂ ಯಚ್ಛಿದ್ರಂ ಭಗ್ನಕೇ ವ್ರತೇ ।
ತವ ಪ್ರಸಾದಾದ್ದೇವೇಶ ಸರ್ವಮಚ್ಛಿದ್ರಮಸ್ತು ನಃ ॥ಸ್ವಾಹಾ॥ ॥೧೫॥

(ಅಮುಕದೇವಾಯ ನಮಃ) ಪೂರ್ವತೋ ದಕ್ಷಿಣತಃ ಪಶ್ಚಿಮತ ।
ಉತ್ತರತಃ। ವಿದಿಕ್ಷು ಚೋಪರ್ಯಧಸ್ತಾದ್ದಿಕ್ಪಾಲೇಭ್ಯೋ ನಮೋ ನಮಃ॥

ಇದಮರ್ಘ್ಯಮಿದಂ ಪಾದ್ಯಂ ನೈವೇದ್ಯಂ ತೇ ನಮೋನಮಃ ।
ಏವಂ ಪ್ರೋಚ್ಯ ತತಃ ಪಾದೌ ಜಾನುನೀಕಟಿಶೀರ್ಷಕೇ ॥ ೧೭ ॥

---

೧೩. ಓ ಸ್ವಾಮಿ! ಬಡವನಾಗಿ ನಿನ್ನ ಹತ್ತಿರಕ್ಕೆ ಬಂದು ಪ್ರಾಯಶ್ಚಿತ್ತಾರ್ಥವಾಗಿ ಕೈಜೋಡಿಸಿಕೊಂಡು ನಿನ್ನನ್ನೇ ಶರಣುಹೊಂದಿದ ನನ್ನಲ್ಲಿ ಈಗ ದಯೆ ತೋರಿಸು.

೧೪. ಪಾರತ್ರಿಕ ಧರ್ಮಭೀತನೂ, ವ್ರತವು ಭಂಗವಾದುದರಿಂದ ಖಂಡ ವ್ರತಿಯೂ ಆಗಿರುವ ನನಗೆ ಪ್ರಸನ್ನನಾಗು. ಭಂಗವಾಗಿರುವ ನನ್ನ ವ್ರತವು ಸಂಪೂರ್ಣವಾಗಲಿ.

೧೫. ಓ ದೇವೇಶನೇ! ಈ ನನ್ನ ಭಗ್ನವ್ರತದಲ್ಲಿ ತಪಶ್ಛಿದ್ರ, ವ್ರತಚ್ಛಿದ್ರ ಮುಂತಾದ ಇತರ ಯಾವ ಛಿದ್ರ ಸಂಭವಿಸಿದ್ದರೂ ಅವೆಲ್ಲವೂ ನಿನ್ನ ಪ್ರಸಾದದಿಂದ ಅಚ್ಛಿದ್ರವಾಗಲಿ.

೧೬. ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ ಮತ್ತು ಈಶಾನ್ಯಾದಿ ಮೂಲೆ ದಿಕ್ಕುಗಳು, ಅಧೋದಿಕ್ಕು, ಊರ್ಧ್ವದಿಕ್ಕು ಈ ಎಲ್ಲ ದಿಕ್ಕುಗಳಲ್ಲಿರುವ ದಿಕ್ಪಾಲರಿಗೆ ಅನೇಕ ವಂದನೆಗಳು. ಮೇಲಿನ ನಾಲ್ಕೂ ಅರ್ಘ್ಯಪ್ರದಾನ ಮಂತ್ರಾರ್ಥ.

೧೭. ಈ ಅರ್ಘ್ಯವನ್ನು ಈ ಪಾದ್ಯವನ್ನು ಈ ನೈವೇದ್ಯವನ್ನು ಸ್ವೀಕರಿಸು. ನಿನಗೆ ನಮಸ್ಕಾರ ಎಂದು ಹೇಳಬೇಕು.

ವಕ್ಷಃ ಕುಕ್ಷಿ ದೃಷ್ಟಿಪೃಷ್ಠ ಬಾಹ್ವಂಸಾಂಕಶಿರೋರುಹಾನ್ ।
ಪೂಜಯೇತ್ತಸ್ಯ ದೇವಸ್ಯ ತತಃ ಪಶ್ಚಾತ್ಕ್ಷಮಾಪಯೇತ್ ॥೧೮॥

ಪೂಜಿತಸ್ತ್ವಂ ಯಥಾಶಕ್ತ್ಯಾ ನಮಸ್ತೇಽಸ್ತು ಸುರೋತ್ತಮ ।
ಐಹಿಕಾಮುಷ್ಮಿಕೀಂ ನಾಥ ಕಾರ್ಯಸಿದ್ಧಿಂ ದಿಶಸ್ವ ಮೇ ॥ ೧೯ ॥

ಏವಂ ಕ್ಷಮಾಪಯಿತ್ವಾ ತು ದೇವರೂಪಂ ವಿಧಾನತಃ ।
ತತೋ ದ್ವಿಜಸ್ಯ ಕೌಂತೇಯ ವಿಧಿಜ್ಞಸ್ಯೋಪಪಾದಯೇತ್ ॥ ೨೦ ॥

ಸ್ಥಿತ್ವಾ ಪೂರ್ವಮುಖೋ ವಿಪ್ರೋ ಗೃಹ್ಣೀಯಾದ್ದರ್ಭಪಾಣಿನಾ ।
ವಿಪ್ರಸ್ಯ ಹಸ್ತೇ ಯಚ್ಛೇಚ್ಚ ದಾತಾ ವೈ ಚೋತ್ತರಾಮುಖಃ ॥
ಮಂತ್ರೇಣಾನೇನ ಕೌಂತೇಯ ಸೋಪವಾಸಃ ಪ್ರಯತ್ನತಃ ॥ ೨೧ ॥

---

೧೮. ಹೀಗೆಂದು ಹೇಳಿ ಆಮೇಲೆ ಆ ದೇವನ ಪಾದ, ಮೊಳಕಾಲು, ಸೊಂಟ, ಶಿರಸ್ಸು, ಎದೆ, ಹೊಟ್ಟೆ, ಕಣ್ಣು, ಪೃಷ್ಠ, ತೋಳು, ಹೆಗಲು, ತೊಡೆ, ಕೇಶ, ಇವುಗಳನ್ನು ಪೂಜಿಸಿ, ಅನಂತರ ಈ ಮಂತ್ರದಿಂದ ಕ್ಷಮೆಯನ್ನು ಪ್ರಾರ್ಥಿಸಬೇಕು.

೧೯. ಷಡ್ಗುಣೈಶ್ವರ್ಯಸಂಪನ್ನನಾದ ಎಲೈ ದೇವೋತ್ತಮನೆ! ನಿನಗೆ ನಾನು ಯಥಾಶಕ್ತಿ ಪೂಜೆಮಾಡಿರುತ್ತೇನೆ. ಹಾಗೆ ಪೂಜಿತನಾದ ನಿನಗೆ ವಂದನೆ. ಓ ಸ್ವಾಮಿ, ನನಗೆ ಐಹಿಕ ಮತ್ತು ಆಮುಷ್ಮಿಕಕಾರ್ಯಸಿದ್ಧಿಯನ್ನು ಕೊಡು. ಇದು ಕ್ಷಮಾ ಪ್ರಾರ್ಥನಾಮಂತ್ರದ ಅರ್ಥ.

೨೦. ಅಯ್ಯಾ ಕುಂತೀಪುತ್ರನೇ! ಈರೀತಿ ಆ ದೇವತೆಯಲ್ಲಿ ವಿಧಿಪ್ರಕಾರ ವಾಗಿ ಕ್ಷಮಾಪ್ರಾರ್ಥನೆಮಾಡಿ, ಆಮೇಲೆ ವ್ರತವಿಧಿಜ್ಞನಾದ ಬ್ರಾಹ್ಮಣನಿಗೆ ಆ ಪ್ರತಿಮೆ ಮೊದಲಾದುವನ್ನು ದಾನಮಾಡಬೇಕು.

೨೧. ಅಯ್ಯಾ ಕುಂತೀಪುತ್ರನೇ! ಆ ದಾನವನ್ನು ಪ್ರತಿಗ್ರಹಿಸುವ ಬ್ರಾಹ್ಮಣನು, ದರ್ಭಪಾಣಿಯಾಗಿ ಪೂರ್ವಾಭಿಮುಖವಾಗಿ ಕುಳಿತು, ಪ್ರತಿಗ್ರಹ ಮಾಡಬೇಕು. ದಾತೃವೂ ಕೂಡ ಪ್ರಯತ್ನಪೂರ್ವಕವಾಗಿ ಉಪವಾಸದಿಂದಿದ್ದು, ಉತ್ತರಾಭಿಮುಖವಾಗಿ ನಿಂತು, ಆ ದಾನವಸ್ತುವನ್ನು ಈ ಮುಂದಿನ ಅರ್ಥವುಳ್ಳ ಮಂತ್ರಪೂರ್ವಕವಾಗಿ ಪ್ರತಿಗೃಹೀತೃ ಬ್ರಾಹ್ಮಣನ ಹಸ್ತದಲ್ಲಿ ಕೊಡಬೇಕು.

ಇದಂ ವ್ರತಂ ಮಯಾ ಖಂಡಂ ಕೃತಮಾಸೀತ್ಪುರಾ ದ್ವಿಜ ।
ಭಗವಂಸ್ತ್ವತ್ಪ್ರಸಾದೇನ ಸಂಪೂರ್ಣಂ ತದಿಹಾಸ್ತು ಮೇ ॥ ೨೨ ॥

ಬ್ರಾಹ್ಮಣೋಽಪಿ ಪ್ರತೀಚ್ಛೇತ್ತು ಮಂತ್ರೇಣಾನೇನ ತದ್ವ್ರತಂ ।
ವಾಕ್ಸಂಪೂರ್ಣಂ ಮನಃಪೂರ್ಣಂ ಪೂರ್ಣಂ ಕಾಯವ್ರತೇನ ತೇ ॥
ಸಂಪೂರ್ಣಸ್ಯ ಪ್ರಸಾದೇನ ಭವ ಪೂರ್ಣಮನೋರಥಃ ॥ ೨೩ ॥

ಬ್ರಾಹ್ಮಣಾ ಯತ್ಪ್ರಭಾಷಂತೇ ಹ್ಯನುಮೋದಂತಿ ದೇವತಾಃ ।
ಸರ್ವದೇವಮಯಾ ವಿಪ್ರಾ ನೈತದ್ವಚನಮನ್ಯಥಾ ॥ ೨೪ ॥

ಜಲಧಿಃ ಕ್ಷಾರತಾಂ ನೀತಃ ಪಾವಕಃ ಸರ್ವಭಕ್ಷತಾಂ ।
ಸಹಸ್ರನೇತ್ರಃ ಶಕ್ರೋಽಪಿ ಕೃತೋ ವಿಪ್ರೈರ್ಮಹಾತ್ಮಭಿಃ ॥ ೨೫ ॥

---

೨೨. ಓ ಬ್ರಾಹ್ಮಣನೇ ! ಮೊದಲು ನಾನು ಈ ವ್ರತವನ್ನು ಖಂಡವಾಗಿ ಆಚರಿಸಿದ್ದೆನು. ಓ ಪೂಜ್ಯನೇ ! ನಿನ್ನ ಅನುಗ್ರಹದಿಂದ ಈಗ ಅದು ನನಗೆ ಸಂಪೂರ್ಣವಾಗಲಿ (ಇದು ಪ್ರಾರ್ಥನಾಮಂತ್ರಾರ್ಥ.)

೨೩. ದಾನವನ್ನು ಪ್ರತಿಗ್ರಹಮಾಡುವ ಬ್ರಾಹ್ಮಣನೂ ಕೂಡ ಈ ಮುಂದಿನ ಅರ್ಥದ ಮಂತ್ರಗಳನ್ನು ಹೇಳುತ್ತಾ, ಅದನ್ನು ಪ್ರತಿಗ್ರಹಿಸಬೇಕು. (ಇದು ಮೊದಲುಗೊಂಡು ನಾಲ್ಕು ಮಂತ್ರಗಳು ಪ್ರತಿಗೃಹೀತೃವಾದ ವಿಪ್ರನು ಹೇಳುವ ಮಂತ್ರ). ಎಲೈ! ನಿನ್ನ ಈ ಪೂರ್ಣವಾದ ಕಾಯಿಕ ವ್ರತದಿಂದ ವಾಚಿಕ ಮಾನಸಿಕ ಈ ಎಲ್ಲ ವ್ರತವೂ ಸಂಪೂರ್ಣವಾಯಿತು (ಇದು ಮಂತ್ರಾರ್ಥ.)

೨೪. ಎಲೈ ! ನೀನು ಈ ಸಂಪೂರ್ಣವ್ರತದ ಪ್ರಸಾದದಿಂದ ಪರಿಪೂರ್ಣ ಮನೋರಥವುಳ್ಳವನಾಗು. ಬ್ರಾಹ್ಮಣರುಗಳಿಂದ ಉಕ್ತವಾದ ವಚನವನ್ನೇ ದೇವತೆಗಳೂ ಅನುಮೋದಿಸುತ್ತಾರೆ. ಬ್ರಾಹ್ಮಣರು ಸರ್ವದೇವತಾಸ್ವರೂಪಿಗಳು ಎಂಬ ಈ ಮಾತು ಅನ್ಯಥಾ ಆಗುವುದಿಲ್ಲ. (ಇದು ಈ ಮಂತ್ರಾರ್ಥ.)

೨೫. ಮಹಾತ್ಮನಾದ ಬ್ರಾಹ್ಮಣನಿಂದ ಸಮುದ್ರದ ನೀರು ಉಪ್ಪಾಗಿ ಪರಿಣಮಿಸಿತು. ಮಹಾತ್ಮರಾದ ವಿಪ್ರರು ಅಗ್ನಿಗೆ ಸರ್ವಭಕ್ಷಕತ್ವವನ್ನು ಕೊಟ್ಟರು. ಹಾಗೆಯೇ ವಿಪ್ರವಾಕ್ಯದಿಂದ ದೇವೇಂದ್ರನು ಸಹಸ್ರಾಕ್ಷನಾಗ ಬೇಕಾಯಿತು. (ಇದು ಈ ಮಂತ್ರಾರ್ಥ.)

ಬ್ರಾಹ್ಮಣಾನಾಂ ತು ವಚನಾದ್ಬ್ರಹ್ಮಹತ್ಯಾ ಪ್ರಣಶ್ಯತಿ ।
ಅಶ್ವಮೇಧಫಲಂ ಸಾಗ್ರಂ ಪ್ರಾಪ್ಸ್ಯತೇ ನಾತ್ರ ಸಂಶಯಃ ॥ ೨೬ ॥

ವ್ಯಾಸವಾಲ್ಮೀಕಿವಚನಾದ್ಬ್ರಾಹ್ಮಣವಚನಾಚ್ಚ ಗರ್ಗಗೌತಮಪರಾಶರ
ಧೌಮ್ಯಾಂಗಿರಸವಶಿಷ್ಠನಾರದಾದಿಮುನಿವಚನಾತ್ಸಂಪೂರ್ಣಂ
ಭವತು ತೇ ವ್ರತಂ ॥ ೨೭ ॥

ಏವಂ ವಿಧಿವಿಧಾನೇನ ಗೃಹೀತ್ವಾ ಬ್ರಾಹ್ಮಣೋ ವ್ರಜೇತ್ ।
ತದ್ದಾನಂ ಪ್ರೇಷಯೇತ್ಸರ್ವಂ ಬ್ರಾಹ್ಮಣಸ್ಯ ಗೃಹೇ ಸ್ವಯಂ ॥ ೨೮ ॥

ತತಃ ಪಂಚಮಹಾಯಜ್ಞಾನ್ನಿರ್ವಪೇದ್ಭೋಜನಾದಿ ಚ ।
ಏವಂ ಯಃ ಕುರುತೇ ಭಕ್ತ್ಯಾ ವ್ರತಮೇತತ್ಸಕೃತ್ತಥಾ ॥
ತಸ್ಯ ಸಂಪೂರ್ಣತಾಂ ಯಾತಿ ತದ್ವ್ರತಂ ಯತ್ಪುರಾ ಸ್ಥಿತಂ ॥ ೨೯ ॥

---

೨೬. ಬ್ರಾಹ್ಮಣರ ವಚನದಿಂದ ಬ್ರಹ್ಮಹತ್ಯಾದೋಷವು ನಾಶವಾಗುವುದು. ಬ್ರಾಹ್ಮಣರನ್ನು ಪೂಜಿಸುವುದರಿಂದ ಸಂಪೂರ್ಣವಾದ ಅಶ್ವಮೇಧ ಯಾಗದ ಫಲವು ಲಭಿಸುತ್ತದೆ. ಈ ವಿಷಯದಲ್ಲಿ ಸಂದೇಹವಿಲ್ಲ. ಇದು ಈ ಮಂತ್ರಾರ್ಥ.

೨೭. ಎಲೈ! ನಿನ್ನ ಈ ವ್ರತವು ವ್ಯಾಸ, ವಾಲ್ಮೀಕ್ಯಾದಿಗಳ ವಚನದಿಂದಲೂ, ಬ್ರಾಹ್ಮಣ ವಚನಪ್ರಕಾರವಾಗಿಯೂ, ಗರ್ಗ, ಗೌತಮ ಮೊದಲಾದ ಮುನಿವಚನಗಳಿಂದಲೂ ಸಂಪೂರ್ಣವಾಗಲಿ. ಇದು ಮಂತ್ರದ ಅರ್ಥ.

೨೮. ಈ ಕ್ರಮದಿಂದ ದಾನವನ್ನು ಪ್ರತಿಗ್ರಹಮಾಡಿ ಬ್ರಾಹ್ಮಣನು ಸ್ವಗೃಹಕ್ಕೆ ಹೋಗಬೇಕು. ಅನಂತರ ಈ ವ್ರತಾನುಷ್ಠಾತೃವಾದ ಯಜಮಾನನು ದಾನಕೊಟ್ಟ ವಸ್ತುಗಳನ್ನೆಲ್ಲಾ ಆ ತತ್ಕ್ಷಣವಲ್ಲಿ ಬ್ರಾಹ್ಮಣನ ಗೃಹಕ್ಕೆ ಹೊರಿಸಿ ಕಳುಹಿಸಿಕೊಡಬೇಕು.

೨೯. ಅನಂತರ ಬ್ರಹ್ಮಯಜ್ಞ ಮುಂತಾದ ಪಂಚಮಹಾಯಜ್ಞಗಳನ್ನು ನೆರವೇರಿಸಿ ಭೋಜನಮಾಡಬೇಕು. ಈರೀತಿ ಭಕ್ತಿಯಿಂದ ಯಾವನು ಒಂದು ಸಲ ಈ ವ್ರತವನ್ನು ಮಾಡುವನೋ ಅವನಿಗೆ ಯಾವ ಭಗ್ನವ್ರತವಿದ್ದರೂ ಅದು ಸಂಪೂರ್ಣತೆಯನ್ನು ಹೊಂದುತ್ತದೆ.

ಖಂಡಂ ಸಂಪೂರ್ಣತಾಂ ಯಾತಿ ಪ್ರಸನ್ನೇ ವ್ರತದೈವತೇ ।
ಸಂಪೂರ್ಣಂ ಚ ತತಃ ಕೃತ್ವಾ ಸಂಪೂರ್ಣಾಂಗೋ ಭವೇದ್ವ್ರತೀ ॥೩೦॥

ಭೋಗೀ ಭವ್ಯೋ ಲಸತ್ಕೀರ್ತಿಃ ಸ್ವಸಂಪೂರ್ಣಮನೋರಥಃ ।
ಸ್ಥಿತ್ವಾ ವರ್ಷಶತಂ ಮರ್ತ್ಯೇ ತತಃ ಸ್ವರ್ಗೇಽಮರೋ ಭವೇತ್ ॥೩೧॥

ಯಥೇಷ್ಟಚೇಷ್ಟಾಚಾರೀ ಚ ಬ್ರಹ್ಮವಿಷ್ಣ್ವಿಂದ್ರಪೂಜಿತಃ ।
ಸ್ವರ್ಗಲೋಕೇ ಚಿರಂ ಸ್ಥಿತ್ವಾ ಪುನರ್ಮೋಕ್ಷಮವಾಪ್ನುಯಾತ್ ॥೩೨॥

ಪ್ರಾಯಶ್ಚಿತ್ತಮಿದಂ ಪ್ರೋಕ್ತಂ ಪುರಾ ಗರ್ಗೇಣ ಮೇ ಪ್ರಭೋ ।
ಗೋಕುಲೇ ಗೋಕುಲಾಕೀರ್ಣೇ ಮಯಾ ಬಾಲ್ಯೇಽಪ್ಯುಪೋಷಿತಂ ॥

---

೩೦. ವ್ರತೋದ್ದಿಷ್ಟದೇವತೆಯು ಪ್ರಸನ್ನವಾದರೆ, ಖಂಡವ್ರತವೂ ಕೂಡ ಸಂಪೂರ್ಣವಾಗುವುದು. ಈ ಸಂಪೂರ್ಣವ್ರತವನ್ನು ಆಚರಿಸಿದ್ದೇ ಆದರೆ, ಈ ವ್ರತಾನುಷ್ಠಾನಮಾಡುವಾತನು ಅದರಿಂದ ಸಂಪೂರ್ಣಾಂಗನಾಗುತ್ತಾನೆ.

೩೧. ಮತ್ತು ಆತನು ಈ ಮರ್ತ್ಯಲೋಕದಲ್ಲಿ ಭೋಗಭಾಜನನೂ, ಸುಂದರನೂ, ಯಶಸ್ವಿಯೂ, ಪರಿಪೂರ್ಣಮನೋರಥನೂ ಆಗಿ, ಇಹಲೋಕದಲ್ಲಿ ನೂರುವರ್ಷ ಆಯುಸ್ಸುಹೊಂದಿ ಬಾಳಿ, ಆಮೇಲೆ ಸ್ವರ್ಗಲೋಕವಾಸವನ್ನು ಪಡೆದು, ಅಲ್ಲಿ ಅಮರನಾಗುತ್ತಾನೆ.

೩೨. ಆ ಸ್ವರ್ಗಲೋಕದಲ್ಲಿ ಆತನು ಬ್ರಹ್ಮ, ವಿಷ್ಣು, ಇಂದ್ರ ಇವರಿಂದ ಪೂಜಿತನಾಗಿ, ಯಥೇಷ್ಟವಾದ ಚೇಷ್ಟಾದಿಗಳು, ಯಥೇಷ್ಟವಾದ ಆಚರಣೆಗಳು, ಇತ್ಯಾದಿಗಳಿಂದ ಸುಖವಾಗಿ ಬಹುಕಾಲ ಇದ್ದು, ಆ ಬಳಿಕ ಮೋಕ್ಷವನ್ನು ಪಡೆಯುತ್ತಾನೆ.

೩೩. ಅಯ್ಯಾ ರಾಜನೇ ! ಪೂರ್ವದಲ್ಲಿ ಗರ್ಗಮಹರ್ಷಿಯು ಪ್ರಾಯಶ್ಚಿತ್ತ ರೂಪವಾಗಿ ನನಗೆ ಇದನ್ನು ನಿರೂಪಿಸಿದನು. ನಾನು ಬಾಲ್ಯದಲ್ಲಿ ಗೋಸಮೂಹ ಯುಕ್ತವಾದ ಗೋಕುಲದಲ್ಲಿ ವಾಸವಾಗಿರುವಾಗ ಉಪವಾಸಪೂರ್ವಕವಾಗಿ ಈ ವ್ರತವನ್ನು ಆಚರಿಸಿರುತ್ತೇನೆ.

**ಏವಂ ತ್ವಮಪಿ ಕೌಂತೇಯ ಚರ ಸಂಪೂರ್ಣಕಂ ವ್ರತಂ**
**ಭಗ್ನಾನಿ ಯಾನಿ ಮದಮೋಹವಶಾದ್ಗೃಹೀತ್ವಾ ।**
**ಜನ್ಮಾಂತರೇಷ್ವಪಿ ನರೇಣ ಸಮತ್ಸರೇಣ　　॥ ೩೪ ॥**

**ಸಂಪೂರ್ಣ ಪೂಜನಪರಸ್ಯ ಪುರೋ ಭವಂತಿ ।**
**ಸರ್ವವ್ರತಾನಿ ಪರಿಪೂರ್ಣಫಲಪ್ರದಾನಿ　　॥ ೩೫ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಸಂಪೂರ್ಣ ವ್ರತವರ್ಣನಂ ನಾಮ ದಶೋತ್ತರಶತತಮೋಽಧ್ಯಾಯಃ.**



---

೩೪.　ಅಯ್ಯಾ ಕುಂತೀಪುತ್ರನೇ! ನೀನೂ ಇದೇ ರೀತಿಯಾಗಿ ಸಂಪೂರ್ಣ ವ್ರತವನ್ನು ಆಚರಿಸು.

೩೫. ಪುರುಷನು ಒಂದು ವ್ರತವನ್ನು ಪರಿಗ್ರಹಿಸಿ ಮಧ್ಯೆ, ಮದ, ಮೋಹ, ಮಾತ್ಸರ್ಯಾದಿ ದೋಷಗಳಿಂದ ಆ ವ್ರತವು ಜನ್ಮಾಂತರದಲ್ಲಿ ಭಗ್ನವಾಗಿ ಪರಿಪೂರ್ಣವಾಗದೆ ಇದ್ದರೂ, ಅವನು ಈಗ ಈ ಸಂಪೂರ್ಣ ವ್ರತದೇವತಾ ಪೂಜನಪರನಾದರೆ, ಆ ಜನ್ಮಾಂತರದಲ್ಲಿ ಭಗ್ನವಾದ ವ್ರತಗಳು ಕೂಡ ಇದರಿಂದ ಸಂಪೂರ್ಣವೆನಿಸಿ ಪರಿಪೂರ್ಣಫಲಪ್ರದಗಳಾಗುತ್ತವೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಸಂಪೂರ್ಣವ್ರತವರ್ಣನೆ ಯೆಂಬ ನೂರಹತ್ತನೆಯ ಅಧ್ಯಾಯ ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣ

## ಉತ್ತರಪರ್ವಣಿ

## ಏಕಾದಶೋತ್ತರಶತತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ವರ್ಣಾಶ್ರಮಾಣಾಂ ಪ್ರಭವಃ ಪುರಾಣೇಷು ಮಯಾ ಶ್ರುತಃ ।
ಪಣ್ಯಸ್ತ್ರೀಣಾಂ ಸಮಾಚಾರಂ ಶ್ರೋತುಮಿಚ್ಛಾಮಿ ತತ್ತ್ವತಃ ॥ ೧ ॥

ಕಾ ಹ್ಯಾಸಾಂ ದೇವತಾ ಕೃಷ್ಣ ಕಿಂ ವ್ರತಂ ಕಿಮುಪೋಷಿತಂ ।
ಕೇನ ಧರ್ಮೇಣ ಚೈವೇತಾಃ ಸ್ವರ್ಗಮಾಪ್ಸ್ಯಂತ್ಯನುತ್ತಮಂ ॥ ೨ ॥

---

### ನೂರಹನ್ನೊಂದನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಎಲೈ ಕೃಷ್ಣನೇ! ಪುರಾಣಗಳಲ್ಲಿ ಹೇಳಿರುವ ವರ್ಣಾಶ್ರಮಧರ್ಮವೆಲ್ಲವನ್ನೂ ಕೇಳಿದೆನು. ಆದರೆ ಅವುಗಳಲ್ಲಿ ವೇಶ್ಯಾ ಧರ್ಮವು ಮಾತ್ರ ನನಗೆ ತಿಳಿಯಲಿಲ್ಲ. ಆದುದರಿಂದ ಆ ವೇಶ್ಯಾಸ್ತ್ರೀಧರ್ಮವನ್ನು ಕೇಳಲು ಕುತೂಹಲವಿದೆ.

೨. ಅವರಿಗೆ ದೇವತೆ ಯಾರು? ಅವರು ಅನುಸರಿಸಬೇಕಾದ ವ್ರತೋಪವಾಸಗಳು ಯಾವುವು? ಯಾವಧರ್ಮಾಚರಣೆಯಿಂದ ಅವರಿಗೆ ಉತ್ತಮವಾದ ಸ್ವರ್ಗಪ್ರಾಪ್ತಿಯಾಗುವುದು? ಇವೆಲ್ಲವನ್ನೂ ನನಗೆ ವಿಸ್ತಾರವಾಗಿ ಹೇಳು ಎಂದನು.

|| ಶ್ರೀ ಕೃಷ್ಣ ಉವಾಚ ||

ಮಮ ಪತ್ನೀಸಹಸ್ರಾಣಿ ಸಂತಿ ಪಾಂಡವ ಷೋಡಶ |
ರೂಪೌದಾರ್ಯಗುಣೋಪೇತಾ ಮನ್ಮಥಾಯತನಾಃ ಶುಭಾಃ || ೩ ||

ತಾಭಿರ್ವಸಂತಸಮಯೇ ಕೋಕಿಲಾಲಿಕುಲಾಕುಲೇ |
ಪುಷ್ಪಿತೋಪವನೋತ್ಫುಲ್ಲಕಲ್ಹಾರಸರಸಸ್ತಟೇ ||
ನಿರ್ಭರಾಪಾನಗೋಷ್ಠೀಷು ಪ್ರಸಕ್ತಾಭಿರಲಂಕೃತೇ || ೪ ||

ಕುರಂಗನಯನಃ ಶ್ರೀಮಾನ್ಮಾಲತೀಕೃತಶೇಖರಃ |
ಗಚ್ಛನ್ಸಮೀಪಮಾರ್ಗೇಣ ಸಾಂಬಃ ಪರಪುರಂಜಯಃ || ೫ ||

ಸಾಕ್ಷಾತ್ಕಂದರ್ಪರೂಪೇಣ ಸರ್ವಾಭರಣಭೂಷಿತಃ |
ಅನಂಗಶರತಪ್ತಾಭಿಃ ಸಾಭಿಲಾಷಮವೇಕ್ಷಿತಃ || ೬ ||

---

೩. ಕೃಷ್ಣನು ಹೇಳುತ್ತಾನೆ—ಎಲೈ ಪಾಂಡುಪುತ್ರನೇ! ರೂಪ, ಔದಾರ್ಯ, ಸದ್ಗುಣ, ಇವುಗಳಿಂದ ಕೂಡಿದವರಾಗಿ, ಮನ್ಮಥನಿಗೆ ಆವಾಸಸ್ಥಾನವೆಂಬಂತೆ ಇರುವ ಹದಿನಾರು ಸಹಸ್ರ ಪತ್ನಿಯರು ನನಗೆ ಇರುವರು. ಎಲ್ಲರೂ ಶುಭಾಂಗಿಯರು.

೪. ಕೋಗಿಲೆಗಳ ಮಧುರಧ್ವನಿಯುಕ್ತವಾದ ವಸಂತಕಾಲದಲ್ಲಿ ಒಂದು ದಿನ ವಿಕಸಿತಪುಷ್ಪಗಳಿಂದ ಅಲಂಕೃತವಾದ ಉಪವನದಲ್ಲಿ ಆ ನನ್ನ ಸ್ತ್ರೀವೃಂದವೆಲ್ಲ ಅಲಂಕರಿಸಿಕೊಂಡು ಅಲ್ಲಿದ್ದ ಸರೋವರದ ದಡದಲ್ಲಿ ಮದ್ಯಸೇವನೆಮಾಡಿ ನನ್ನೊಡನೆ ವಿಹರಿಸುತ್ತಿದ್ದರು.

೫. ಆ ವೇಳೆಯಲ್ಲಿ ಮಾಲತೀಪುಷ್ಪವನ್ನು ಶಿರಸ್ಸಿನಲ್ಲಿ ಧರಿಸಿ, ಹರಿಣಲೋಚನದಂತೆ ಸುಂದರವಾದ ಕಣ್ಣುಳ್ಳವನೂ, ಶತ್ರುನಗರಗಳನ್ನು ಜಯಿಸಿದ ತೇಜಸ್ವಿಯೂ, ಆದ ಸಾಂಬನು ಸಮೀಪಮಾರ್ಗದಲ್ಲಿ ಹೋಗುತ್ತಿದ್ದನು.

೬. ಮನ್ಮಥನಂತೆ ಸುಂದರನೂ, ಸರ್ವಾಭರಣಶೋಭಿತನೂ, ಆದ ಆ ಸಾಂಬನನ್ನು ಈ ಹದಿನಾರು ಸಾವಿರ ಸ್ತ್ರೀವೃಂದವು ನೋಡಿ ಕಾಮಪೀಡಿತೆಯರಾಗಿ ಸಾಭಿಪ್ರಾಯದೃಷ್ಟಿಯಿಂದ ಮತ್ತೆಮತ್ತೆ ನೋಡತೊಡಗಿದರು.

ಪ್ರವೃದ್ಧೋ ಮನ್ಮಥಸ್ತಾಸಾಂ ಸರ್ವಾಂಗಕ್ಷೋಭದಾಯಕಃ ।
ನಿರೀಕ್ಷ್ಯ ತಮಹಂ ಸರ್ವಂ ವಿಕಾರಂ ಜ್ಞಾನಚಕ್ಷುಷಾ ॥ ೭ ॥

ಅಶಪಂ ರುಷಿತಃ ಸರ್ವಾ ಹರಿಷ್ಯಂತೀಹ ದಸ್ಯವಃ ।
ಮಯಿ ಸ್ವರ್ಗಮನುಪ್ರಾಪ್ತೇ ಭವತೀಃ ಕಾಮಮೋಹಿತಾಃ ॥ ೮ ॥

ಏತದ್ವಾಕ್ಯಮುಪಶ್ರುತ್ಯ ಬಾಷ್ಪಪರ್ಯಾಕುಲೇಕ್ಷಣಾಃ ।
ಮಾಮೂಚುರ್ವದ ಗೋವಿಂದ ಕಥಮೇತದ್ಭವಿಷ್ಯತಿ ॥ ೯ ॥

ಭರ್ತಾರಂ ಜಗತಾಮೀಶಂ ಭವಂತಮಪರಾಜಿತಂ ।
ದಿವ್ಯಾನುಭಾವಾಂ ಚ ಪುರೀಂ ರತ್ನವಂತಿ ಗೃಹಾಣಿ ಚ ॥ ೧೦ ॥

ದ್ವಾರಕಾವಾಸಿನಃ ಸರ್ವಾನ್ದೇವರೂಪಾನ್ಕುಮಾರಕಾನ್ ।
ಭಗವನ್ಸರ್ವಲೋಕಸ್ಯ ಕಥಂ ಭೋಗ್ಯಾ ಭವಾಮಹೇ ॥ ೧೧ ॥

---

೭. ಆ ಸ್ತ್ರೀಯರಲ್ಲಿ ಮನ್ಮಥಾವೇಶವು ಮಿತಿಮೀರಿ ಸರ್ವಾಂಗದಲ್ಲೂ ಕ್ಷೋಭೆಯುಂಟಾಗುವಂತೆ ಮಾಡಿತು. ಆಗ ನಾನು ಅವರಿಗೆ ಉಂಟಾಗಿರುವ ಮನೋವಿಕಾರವನ್ನು ಜ್ಞಾನದೃಷ್ಟಿಯಿಂದ ತಿಳಿದೆನು.

೮. ಕೂಡಲೆ ಕೋಪದಿಂದ ಆ ನನ್ನ ಹದಿನಾರು ಸಾವಿರ ಸ್ತ್ರೀಯರನ್ನೂ ಕುರಿತು "ಕಾಮಪರವಶರಾದ ನೀವೆಲ್ಲರೂ ನಾನು ಸ್ವರ್ಗಕ್ಕೆ ತೆರಳಿದನಂತರ ಕಳ್ಳರ ಪಾಲಾಗುವಿರಿ" ಎಂದು ಶಾಪಕೊಟ್ಟೆನು.

೯. ಹೀಗೆ ನಾನು ಶಾಪಕೊಟ್ಟುದನ್ನು ಕೇಳಿ ಅವರೆಲ್ಲರೂ ಕಣ್ಣೀರು ತಂದುಕೊಂಡು ದುಃಖದಿಂದ "ಎಲೈ ಗೋವಿಂದ! ಇದು ಹೇಗೆ ಸಂಭವಿಸೀತು.

೧೦. ಜಗದೊಡೆಯನೂ ಅಜೇಯನೂ ನಮ್ಮ ಸ್ವಾಮಿಯೂ ಆದ ನಿನ್ನನ್ನೂ, ದಿವ್ಯಭೋಗಯುಕ್ತವಾದ ಈ ಪಟ್ಟಣವನ್ನೂ, ರತ್ನ ಆಭರಣ ಮುಂತಾದ ಉಪಭೋಗ ವಸ್ತುಸಮೃದ್ಧವಾದ ಈ ನಿವಾಸಗಳನ್ನೂ.

೧೧. ದ್ವಾರಕಾವಾಸಿಗಳಾಗಿ ದೇವತೆಗಳಂತೆ ಸುಂದರರೂಪುಳ್ಳ ಕುಮಾರರನ್ನೂ ಬಿಟ್ಟು, ಹೇಗೆತಾನೇ ನಾವು ಇತರರ ಪಾಲಾಗಿ, ಸರ್ವರಿಂದ ಉಪಭೋಗಾರ್ಹರಾದೇವು.

ದಾಸಭಾವಮನುಪ್ರಾಪ್ಯ ಭವಿಷ್ಯಾಮಃ ಕಥಂ ಪುನಃ ।
ಕೋ ಧರ್ಮಃ ಕಃ ಸಮಾಚಾರಃ ಕಥಂ ವೃತ್ತಿರ್ಭವಿಷ್ಯತಿ || ೧೨ ||

ತಥಾ ಲಾಲಪ್ಯಮಾನಾಸ್ತಾ ಬಾಷ್ಪಪರ್ಯಾಕುಲೇಕ್ಷಣಾಃ ।
ಮಯಾ ಪ್ರೋಕ್ತಾ ಯುವತ್ಯಸ್ತಾಃ ಸನ್ತಾಪಸ್ತ್ಯಜ್ಯತಾಮಯಂ || ೧೩ ||

ಜಲಕ್ರೀಡಾವಿಹಾರೇಷು ಪುರಾ ಸರಸಿ ಮಾನಸೇ ।
ಭವತೀನಾಂ ಸಗರ್ವಾಣಾಂ ನಾರದೋಽಭ್ಯಾಶಮಾಗತಃ || ೧೪ ||

ಹುತಾಶನಸುತಾಸ್ಸರ್ವಾ ಭವತ್ಯೋಽಪ್ಸರಸಃ ಪುರಾ ।
ಅಪ್ರಣಮ್ಯಾವಲೇಪೇನ ಪರಿಪೃಷ್ಟಃ ಸ ಯೋಗವಿತ್ || ೧೫ ||

ಕಥಂ ನಾರಾಯಣೋಽಸ್ಮಾಕಂ ಭರ್ತಾ ಸ್ಯಾದಿತ್ಯುಪಾದಿಶ ।
ತಸ್ಮಾದ್ವ್ರತಪ್ರದಾನಂ ಚ ಶಾಪದಾನಮಭೂತ್ಪುರಾ || ೧೬ ||

---

೧೨. ಅಲ್ಲದೆ ದಾಸ್ಯವೃತ್ತಿಯನ್ನಾಶ್ರಯಿಸಿ ನಾವು ಹೇಗೆತಾನೇ ಇರುವುದು? ಆಗ ನಮ್ಮ ಧರ್ಮವಾವುದು? ನಮ್ಮ ಜೀವನ ನಿರ್ವಾಹದ ಬಗೆ ಹೇಗೆ?" ಎಂಬದಾಗಿ ಬಹು ಪ್ರಕಾರವಾಗಿ ನನ್ನನ್ನು ಪ್ರಶ್ನೆಮಾಡಿದರು.

೧೩. ಹೀಗೆ ಬಹುಪರಿಯಾಗಿ ಗೋಳಿಡುವ ಆ ಯುವತಿಯರನ್ನು ಕುರಿತು "ಎಲೌ ನಾರೀಮಣಿಯರೇ! ಇದಕ್ಕಾಗಿ ನೀವು ವ್ಯಥೆಪಡಬೇಡಿ. ನಿಶ್ಚಿಂತೆಯಿಂದ ಇರಿ.

೧೪. ಹಿಂದೆ ನೀವು ಮಾನಸ ಸರೋವರದಲ್ಲಿ ಜಲಕ್ರೀಡೆಯಾಡುತ್ತಿದ್ದಾಗ ಮಹಾಗರ್ವಿಷ್ಠೆಯರಾದ ನಿಮ್ಮ ಸಮೀಪಕ್ಕೆ ನಾರದಮಹರ್ಷಿಯು ಬಂದನು.

೧೫. ಅಗ್ನಿಕುಲಸಂಭೂತ ಅಪ್ಸರಸ್ತ್ರೀಯರೆನಿಸಿದ ನೀವೆಲ್ಲ, ಗರ್ವದಿಂದ ಆ ಮಹರ್ಷಿಗೆ ನಮಸ್ಕಾರಮಾಡದೆ ಹೋದುವಲ್ಲದೆ, ಯೋಗಿಯಾದ ಆ ಮಹಾತ್ಮನನ್ನು ಈರೀತಿ ಪ್ರಶ್ನೆಮಾಡಿದಿರಿ.

೧೬. "ಎಲೈ ಋಷಿಯೇ! ಭಗವಂತನಾದ ನಾರಾಯಣನು ನಮಗೆ ಸ್ವಾಮಿಯಾಗುವ ಬಗೆ ಹೇಗೆ? ಎಂಬುದನ್ನು ಉಪದೇಶಮಾಡು" ಎಂದು ಕೇಳಿದಿರಿ. ಆಗ ನಾರದನು ನಿಮಗೆ ಇಂತು ವ್ರತದಾನ ಮತ್ತು ಶಾಪದಾನ ಎರಡನ್ನೂ ಕೊಟ್ಟನು.

ಶಯ್ಯಾದ್ವಯಪ್ರದಾನೇನ ಮಧುಮಾಧವಮಾಸಯೋಃ ।
ಸುವರ್ಣೋಪಸ್ಕರೋತ್ಸರ್ಗಾದ್ದ್ವಾದಶ್ಯಾಂ ಶುಕ್ಲಪಕ್ಷತಃ ॥
ಭರ್ತಾ ನಾರಾಯಣೋ ನೂನಂ ಭವಿಷ್ಯತನ್ಯಜನ್ಮನಿ ॥ ೧೭ ॥

ನ ಕೃತೋ ಯತ್ಪ್ರಣಾಮೋ ಮೇ ರೂಪಸೌಭಾಗ್ಯಮತ್ಸರಾತ್ ।
ಪರಂ ಪೃಷ್ಟೋಽಸ್ಮಿ ತೇನಾಶು ವಿಯೋಗೋ ವೋ ಭವಿಷ್ಯತಿ ॥
ಚೋರೈರಪಹೃತಾಃ ಸರ್ವಾ ವೇಶ್ಯಾತ್ವಂ ಸಮವಾಪ್ಸ್ಯಥ ॥ ೧೮ ॥

ಏವಂ ನಾರದಶಾಪೇನ ಮಚ್ಛಾಪೇನ ಚ ಸಾಂಪ್ರತಂ ।
ನ ಕಾರ್ಯಃ ಸಂಭ್ರಮಃ ಕಶ್ಚಿದ್ದಾಸೀತ್ವಂ ವೋ ಭವಿಷ್ಯತಿ ॥ ೧೯ ॥

ಇದಾನೀಮಪಿ ಯದ್ವಕ್ಷ್ಯೇ ತಚ್ಛೃಣುಧ್ವಂ ವರಾನನಾಃ ।
ಪುರಾ ದೇವಾಸುರೇ ಯುದ್ಧೇ ಹತೇಷು ಶತಶಃ ಪುನಃ ॥
ದಾನವಾಸುರಸೈನ್ಯೇಷು ರಾಕ್ಷಸೇಷು ತತಸ್ತತಃ ॥ ೨೦ ॥

---

೧೭. ಚೈತ್ರ ಅಥವಾ ವೈಶಾಖಮಾಸದ ಶುಕ್ಲಪಕ್ಷದ ದ್ವಾದಶಿಯ ದಿನ ಚಿನ್ನದ ದಿಂಬುಗಳಿಂದ ಕೂಡಿದ ಎರಡು ಹಾಸಿಗೆಗಳನ್ನು ದಾನಮಾಡಿದರೆ, ನಿಮಗೆ ಮುಂದಿನ ಜನ್ಮದಲ್ಲಿ ನಿಜವಾಗಿ ನಾರಾಯಣೇ ಪತಿಯಾಗಿ ಜನಿಸುವನು ಎಂದು ವರಪ್ರದಾನವನ್ನೂ.

೧೮. ನೀವು ರೂಪು, ಸೌಂದರ್ಯವುಳ್ಳವರೆಂಬ ಗರ್ವದಿಂದ ನನಗೆ ನಮಸ್ಕಾರಮಾಡದೆ, ಆತುರಪಟ್ಟು ನನ್ನನ್ನು ಪ್ರಶ್ನೆಮಾಡಿದುದರಿಂದ, ನಿಮಗೆ ಜಾಗ್ರತೆಯಲ್ಲಿ ವಿಯೋಗವುಂಟಾಗುವುದು. ನೀವೆಲ್ಲರೂ ಅನಂತರ ಕಳ್ಳರಿಂದ ಅಪಹೃತರಾಗಿ ವೇಶ್ಯೆಯರಾಗುವಿರಿ ಎಂದು ಶಾಪವನ್ನು ಕೊಟ್ಟನು.

೧೯. ಈರೀತಿಯಾಗಿ ಹಿಂದೆ ನಮಗೆ ನಾರದರು ಕೊಟ್ಟ ಶಾಪದಿಂದಲೂ, ಈಗ ನಾನು ಕೊಟ್ಟಿರುವ ಶಾಪದಿಂದಲೂ ಸಹ ನಮಗೆ ದಾಸೀತ್ವವಾದರೂ ಬರುವುದು. ಇನ್ನೇನು ಸುಖವಾಗಿರುವೆವು ಎಂದು ಸಂಭ್ರಮಪಡಬೇಡಿ.

೨೦–೨೧. ಸುಂದರಾಂಗಿಯರೇ! ಈಗಲೂ ನಾನು ಹೇಳುವುದನ್ನು ಲಾಲಿಸಿ. ಹಿಂದೆ ದೇವಾಸುರಯುದ್ಧದಲ್ಲಿ ನೂರಾರು ಮಂದಿ ಮೃತರಾದರು. ಆಗ ದೇವ ದಾನವ ರಾಕ್ಷಸ ಸೈನ್ಯದಲ್ಲಿ ಮೃತರಾದ ಸಾವಿರಾರುಜನರ ಪತ್ನಿಯರೆಲ್ಲ

ತೇಷಾಂ ನಾರೀಸಹಸ್ರಾಣಿ ಶತಶೋಽಥ ಸಹಸ್ರಶಃ ।
ಪರಿಣೀತಾನಿ ಯಾನಿ ಸ್ಯುರ್ಬಲಾದ್ಭುಕ್ತಾನಿ ಯಾನಿ ವೈ || ೨೧ ||

ತಾನಿ ಸರ್ವಾಣಿ ದೇವೇಶಃ ಪ್ರೋವಾಚ ವದತಾಂವರಃ ।
ವೇಶ್ಯಾಧರ್ಮೇಣ ವರ್ತಧ್ವಮಧುನಾ ನೃಪಮಂದಿರೇ || ೨೨ ||

ಭಕ್ತಿಮತ್ಯೋ ವರಾರೋಹಾಸ್ತದಾ ದೇವಕುಲೇಷು ಚ ।
ರಾಜಾನಃ ಸ್ವಾಮಿನಃ ಸ್ತುತ್ಯಾ ಬ್ರಾಹ್ಮಣಾಶ್ಚ ಬಹುಶ್ರುತಾಃ || ೨೩ ||

ತೇಷಾಂ ಗೃಹೇಷು ತಿಷ್ಠಧ್ವಂ ಸೂತಕಂ ಚಾಪಿ ತತ್ಸಮಂ ।
ಭವಿಷ್ಯತಿ ಚ ಸೌಭಾಗ್ಯಂ ಸರ್ವಾಸಾಮಪಿ ಶಕ್ತಿತಃ || ೨೪ ||

ನ ಚೈಕಸ್ಮಿನ್ರತಿಃ ಕಾರ್ಯಾ ಪುರುಷೇ ಧನವರ್ಜಿತೇ ।
ಅನುಮಾನ್ಯಃ ಪ್ರಸಾದ್ಯಶ್ಚ ಶುಲ್ಕದೋ ದೇವವತ್ಸದಾ || ೨೫ ||

---

ಇತರ ದೇವದಾನವರೊಡನೆ ಪರಿಣಯಪೂರ್ವಕವಾಗಿಯೋ ಬಲಾತ್ಕಾರ ದಿಂದಲೋ ಉಪಭುಕ್ತೆಯರಾದರು.

೨೨. ಆಗ ವಾಗ್ಮಿಯಾದ ದೇವೇಂದ್ರನು ಸಾವಿರಾರು ಮಂದಿ ಸ್ತ್ರೀಯ ರನ್ನು ಕುರಿತು "ನೀವೆಲ್ಲಾ ಇನ್ನು ರಾಜಗೃಹದಲ್ಲಿ ವೇಶ್ಯಾಧರ್ಮವನ್ನಾಶ್ರಯಿಸಿ ಕೊಂಡು ವಾಸಮಾಡಿ."

೨೩. "ಅಲ್ಲದೆ ಭಕ್ತಿಯುಳ್ಳವರಾಗಿ ದೇವಸ್ಥಾನಗಳಲ್ಲಿಯೂ, ರಾಜರ ಮನೆ ಯಲ್ಲಿಯೂ, ಧನಿಕರ ನಿವಾಸದಲ್ಲಿಯೂ, ಪಂಡಿತೋತ್ತಮರಾದ ವಿಪ್ರರ ಗೃಹ ದಲ್ಲಿಯೂ, ಅವರ ಮನ್ನಣೆಗೆ ಪಾತ್ರರಾಗಿ, ವೇಶ್ಯಾಭಾವದಿಂದ ವಾಸಮಾಡಿ."

೨೪. "ನೀವು ಎಲ್ಲಿ ಇರುವಿರೋ ಆಗ ಆ ಮನೆಯ ಸ್ವಾಮಿಗೆ ಪ್ರಾಪ್ತ ವಾದ ಸೂತಕಾದಿಗಳೆಲ್ಲ ನಿಮಗೂ ಸಮಾನವಾಗಿ ಪ್ರಾಪ್ತವಾಗುವುವು. ನಿಮ್ಮ ಶಕ್ತಿಯನ್ನು ಅನುಸರಿಸಿ ನಿಮಗೆ ಸೌಭಾಗ್ಯವುಂಟಾಗುವುದು."

೨೫. "ದ್ರವ್ಯಹೀನನಾದ ಯಾವ ಪುರುಷನಲ್ಲಿಯೂ ನೀವು ಯಾವಾಗಲೂ ಅನುರಕ್ತರಾಗಬೇಡಿ. ದ್ರವ್ಯರೂಪವಾದ ಶುಲ್ಕವನ್ನು ಕೊಡುವ ಮಾನವನನ್ನು ಪ್ರೀತಿಸುತ್ತಾ ದೇವರನ್ನು ಕಂಡಂತೆ ಗೌರವಿಸಬೇಕು."

ಸುರೂಪೋ ವಾ ವಿರೂಪೋ ವಾ ದ್ರವ್ಯಂ ತತ್ರ ಪ್ರಯೋಜನಂ ।
ನ ತದ್ವ್ಯತಿಕ್ರಮಃ ಕಾರ್ಯೋ ಬ್ರಹ್ಮಹತ್ಯಾಮವಾಪ್ನುಯಾತ್ ॥
ನ ಚಾಪಿ ಮದ್ಯಪಾಭಿಶ್ಚ ಭಾವ್ಯಂ ಕೌಟಿಲ್ಯಬುದ್ಧಿಭಿಃ ॥ ೨೬ ॥

ಯಃ ಕಶ್ಚಿಚ್ಛುಲ್ಕಮಾದಾಯ ಗೃಹಮೇಷ್ಯತಿ ವಃ ಸದಾ ।
ನಿಶ್ಛದ್ಮನೈವಾಪಹಾರ್ಯಂ ತತ್ಸರ್ವಂ ದಂಭವರ್ಜಿತಂ ॥ ೨೭ ॥

ವ್ಯಭಿಚಾರೋ ನ ಕರ್ತವ್ಯಃ ಸ್ವಾಮಿನಾ ಸಹ ಕರ್ಹಿಚಿತ್ ।
ರೂಪಯೌವನದರ್ಪೇಣ ಧನಲೋಭೇನ ವಾ ಪುನಃ ॥ ೨೮ ॥

ದಾಸೀ ಭೂತ್ವಾಪಿ ಯಾ ಕಾಚಿದ್ವ್ಯಭಿಚಾರಂ ಕರೋತಿ ಚ ।
ಪತಿನಾ ಸಹ ಪಾಪಿಷ್ಠಾ ಪಾಪಿಷ್ಠಾಂ ಯಾತ್ಯಧೋಗತಿಂ ॥ ೨೯ ॥

---

೨೬. "ನೀವು ಪ್ರೀತಿಸುವವನು ಸುಂದರನಾಗಲಿ, ಕುರೂಪಿಯಾಗಲಿ, ಅವನಿಂದ ದ್ರವ್ಯವನ್ನು ತೆಗೆದುಕೊಂಡ ಮೇಲೆ ಅವನನ್ನು ಪ್ರೀತಿಸಲೇಬೇಕು. ಈ ವಿಷಯದಲ್ಲಿ ದ್ರವ್ಯವೇ ನಿಮ್ಮ ದಾಸ್ಯವೃತ್ತಿಗೆ ಪ್ರಯೋಜನ. ಒಂದುವೇಳೆ ಇದಕ್ಕೆ ವಿರುದ್ಧವಾಗಿ ನಡೆದರೆ (ದುಡ್ಡನ್ನು ಸೆಳೆದುಕೊಂಡು ಕುರೂಪಿಯೆಂದು ತಿರಸ್ಕರಿಸಿದರೆ) ನಿಮಗೆ ಬ್ರಹ್ಮಹತ್ಯಾದೋಷ ಬರುವುದು. ನೀವು ಮದ್ಯಪಾನ ಮಾಡಬಾರದು. ಮತ್ತು ವಕ್ರಬುದ್ಧಿ ತೋರಿಸದೆ ಯೋಗ್ಯರಾಗಿಬೇಕು."

೨೭. "ಶುಲ್ಕವನ್ನು ತೆಗೆದುಕೊಂಡ ಮೇಲೆ ನಿಮ್ಮ ಮನೆಗೆ ಬರುವವನಿಗೆ ಮೋಸಮಾಡದೆ ಅಹಂಕಾರರಹಿತೆಯರಾಗಿ ನಡೆದುಕೊಳ್ಳಬೇಕು. ಮೋಸಪಡಿಸಿ ದ್ರವ್ಯಾಪಹರಣೆಯನ್ನು ಎಂದಿಗೂ ಮಾಡಬಾರದು."

೨೮. "ನಿಮ್ಮ ಸೌಂದರ್ಯ, ಪ್ರಾಯ, ಇವುಗಳ ಕೊಬ್ಬಿನಿಂದ ನಿಮ್ಮ ಸ್ವಾಮಿಯೊಡನೆ ವಿರುದ್ಧಭಾವನೆಯುಳ್ಳವರಾಗಿ ಸಂಭೋಗಮಾಡಬಾರದು."

೨೯. "ದಾಸಿಯಾಗಿದ್ದರೂ ನಿಜಪತಿಯೊಡನೆ ಪ್ರೀತಿಯುಕ್ತಳಾಗಿರದೆ, ವ್ಯಭಿಚಾರಮಾಡುವವಳು, ಪಾಪಭೂಯಿಷ್ಠವಾದ ನರಕವನ್ನು ಹೊಂದುವಳು."

ದೇವತಾನಾಂ ಪಿತೄಣಾಂ ಚ ಪುಣ್ಯೇಽಹ್ನಿ ಸಮುಪಸ್ಥಿತೇ ।
ಗೋಭೂಹಿರಣ್ಯದಾನಾನಿ ಪ್ರದೇಯಾನಿ ಚ ಶಕ್ತಿತಃ　　॥ ೩೦ ॥

ಬ್ರಾಹ್ಮಣೇಭ್ಯೋ ವರಾರೋಹಾಃ ಕಾರ್ಯಾಣಿ ವಚನಾನಿ ಚ ।
ಯಚ್ಚಾಪ್ಯನ್ಯದ್ವ್ರತಂ ಸಮ್ಯಗುಪದೇಕ್ಷ್ಯಾಮಿ ತತ್ತ್ವತಃ　　॥ ೩೧ ॥

ಅವಿಚಾರೇಣ ಸರ್ವಾಭಿರನುಷ್ಠೇಯಂ ಚ ತತ್ಪುನಃ ।
ಸಂಸಾರೋತ್ತಾರಣಾಯಾಲಮೇತದ್ವೇದವಿದೋ ವಿದುಃ　　॥ ೩೨ ॥

ಯದಾ ಸೂರ್ಯದಿನೇ ಪ್ರಾಪ್ತೇ ಪುಷ್ಯೋ ವಾ ಸಪುನರ್ವಸುಃ ।
ಭವೇತ್ಸರ್ವೌಷಧಿಸ್ನಾನಂ ಸಮ್ಯಙ್ನಾರೀ ಸಮಾಚರೇತ್　　॥ ೩೩ ॥

---

೩೦. ದೇವತೆಗಳ ವ್ರತ, ಪಿತೃಗಳ ಪುಣ್ಯದಿವಸ, ಇವು ಬಂದರೆ ನಿಮ್ಮ ಶಕ್ತ್ಯನುಸಾರ ಬ್ರಾಹ್ಮಣರಿಗೆ ಗೋದಾನ, ಭೂದಾನ, ಸುವರ್ಣದಾನ ಮುಂತಾದ್ದನ್ನು ಮಾಡಬೇಕು.''

೩೧. " ಅಲ್ಲದೆ ಹಿತವಚನಗಳನ್ನಾಡುತ್ತಾ ಆ ವಿಪ್ರರ ಸೇವೆಮಾಡಬೇಕು. ಸುಂದರಿಯರೇ ! ತುಂಬಾ ತತ್ವಗಳಿಂದ ಕೂಡಿದ ಇನ್ನೊಂದು ವ್ರತವನ್ನು ನಿಮಗೋಸ್ಕರ ಉಪದೇಶ ಮಾಡುವೆನು.''

೩೨. ಏನೂ ವಿಚಾರಮಾಡದೆ ನೀವೆಲ್ಲ ಅದನ್ನು ಅನುಷ್ಠಾನಮಾಡಬಹುದು. ಈ ವ್ರತವು ಸಂಸಾರದುಃಖವನ್ನು ನಾಶಮಾಡಲು ಮುಖ್ಯಸಾಧನ ಎಂದು ವೇದಜ್ಞರಾದ ಜ್ಞಾನಿಗಳು ಹೇಳಿದ್ದಾರೆ. ಆ ವ್ರತದ ನಿಯಮಗಳನ್ನು ಹೇಳುವೆನು ಕೇಳಿ.

೩೩. " ಭಾನುವಾರದದಿನ ಪುನರ್ವಸು ಅಥವಾ ಪುಷ್ಯನಕ್ಷತ್ರ ಕೂಡಿರುವಾಗ ಸ್ತ್ರೀಯು ಸಕಲಔಷಧಿಯುಕ್ತವಾದ ಜಲದಿಂದ ಚೆನ್ನಾಗಿ ಸ್ನಾನ ಮಾಡಬೇಕು."

ತದಾ ಪಂಚಶರಸ್ಯಾಪಿ ಸಂನಿಧಾತ್ಪೃತ್ವಮೇಷ್ಯತಿ ।
ಅರ್ಚಯೇತ್ಪುಂಡರೀಕಾಕ್ಷಮನಂಗಸ್ಯಾಪಿ ಕೀರ್ತನಂ ॥ ೩೪ ॥

ಕಾಮಾಯ ಪಾದೌ ಸಂಪೂಜ್ಯ ಜಂಘೇ ವೈ ಮೋಹಕಾರಿಣೇ ।
ಮೇಢ್ರಂ ಕಂದರ್ಪನಿಧಯೇ ಕಟಿಂ ಪ್ರೀತಿಯುಜೇ ನಮಃ ॥ ೩೫ ॥

ನಾಭಿಂ ಸೌಖ್ಯಸಮುದ್ರಾಯ ವಾಮನಾಯ ತಥೋದರಂ ।
ಹೃದಯಂ ಹೃದಯೇಶಾಯ ಸ್ತನಾವಾಹ್ಲಾದಕಾರಿಣೇ ॥ ೩೬ ॥

ಉತ್ಕಂಠಾಯೇತಿ ವೈ ಕಂಠಮಾಸ್ಯಮಾನಂದಜಾಯ ಚ ।
ವಾಮಾಂಸಂ ಪುಷ್ಪಚಾಪಾಯ ಪುಷ್ಪಬಾಣಾಯ ದಕ್ಷಿಣಂ ॥ ೩೭ ॥

---

೩೪. "ಹೀಗೆ ಮಾಡಿದರೆ ಅವಳು ಮನ್ಮಥನನ್ನು ಸಹ ನಿಯಮನಮಾಡುವಂತಾಗುವಳು. ಅನಂತರ ಕಮಲಾಕ್ಷನಾದ ನಾರಾಯಣನನ್ನು ಪೂಜಿಸಿ ಸ್ತೋತ್ರಮಾಡಬೇಕು. ಪೂಜಾಪ್ರಕಾರವನ್ನು ಹೇಳುವೆನು ಕೇಳಿ."

೩೫. ಕಾಮಾಯ ನಮಃ ಎಂದು ಪಾದಗಳನ್ನೂ, ಮೋಹಕಾರಿಣೇ ನಮಃ ಎಂದು ಮೊಳಕಾಲುಗಳನ್ನೂ, ಕಂದರ್ಪನಿಧಯೇ ನಮಃ ಎಂದು ಹೇಳಿ ಮೇಢ್ರವನ್ನೂ, ಪ್ರೀತಿಯುಜೇನಮಃ ಎಂದು ಹೇಳಿ ಕಟಿಪ್ರದೇಶವನ್ನೂ ಪೂಜಿಸಬೇಕು.

೩೬. ಸೌಖ್ಯಸಮುದ್ರಾಯ ನಮಃ ಎಂದು ನಾಭಿಯನ್ನೂ, ವಾಮನಾಯ ನಮಃ ಎಂದು ಹೇಳಿ ಹೊಟ್ಟೆಯನ್ನೂ, ಹೃದಯೇಶಾಯ ನಮಃ ಎಂದು ಹೇಳಿ ಹೃದಯವನ್ನೂ, ಆಹ್ಲಾದಕಾರಿಣೇ ನಮಃ ಎಂದು ಹೇಳಿ ಸ್ತನಗಳನ್ನೂ ಪೂಜಿಸಬೇಕು.

೩೭. ಉತ್ಕಂಠಾಯ ನಮಃ ಎಂದು ಹೇಳಿ ಕಂಠವನ್ನೂ, ಆನಂದಜಾಯ ನಮಃ ಎಂಬ ನಾಮದಿಂದ ಮುಖವನ್ನೂ, ಪುಷ್ಪಚಾಪಾಯನಮಃ ಎಂಬ ನಾಮದಿಂದ ಎಡಭುಜವನ್ನೂ, ಪುಷ್ಪಬಾಣಾಯ ನಮಃ ಎಂದು ಬಲಭುಜವನ್ನೂ ಪೂಜಿಸಬೇಕು.

ನಮೋಽನಂತಾಯ ವೈ ಮೌಲಿಂ ವಿಲೋಲಾಯೇತಿ ಚ ಧ್ವಜಂ ।
ಸರ್ವಾತ್ಮನೇ ಶಿರಸ್ತದ್ವದ್ದೇವದೇವಸ್ಯ ಪೂಜಯೇತ್ ॥ ೩೮ ॥

ನಮಃ ಶ್ರೀಪತಯೇ ತಾರ್ಕ್ಷ್ಯಧ್ವಜಾಂಕುಶಧರಾಯ ಚ ।
ಗದಿನೇ ಪೀತವಸ್ತ್ರಾಯ ಶಂಖಿನೇ ಚಕ್ರಿಣೇ ನಮಃ ॥
ನಮೋ ನಾರಾಯಣಾಯೇತಿ ಕಾಮದೇವಾತ್ಮನೇ ನಮಃ ॥ ೩೯ ॥

ನಮಃ ಶಾಂತ್ಯೈ ನಮಃ ಪ್ರೀತ್ಯೈ ನಮೋ ರತ್ಯೈ ನಮಃ ಶ್ರಿಯೇ ।
ನಮಃ ಪುಷ್ಟ್ಯೈ ನಮಸ್ತುಷ್ಟ್ಯೈ ನಮಃ ಸರ್ವಾರ್ಥದಾಯ ಚ ॥೪೦॥

ಏವಂ ಸಂಪೂಜ್ಯ ಗೋವಿಂದಮನಂಗಾತ್ಮಕಮೀಶ್ವರಂ ।
ಗಂಧೈರ್ಮಾಲ್ಯೈಸ್ತಥಾ ಧೂಪೈರ್ನೈವೇದ್ಯೈಶ್ಚೈವ ಭಾಮಿನೀ ॥ ೪೧ ॥

---

೩೮. ಅನಂತಾಯ ನಮಃ ಎಂದು ಹೇಳಿ ಕಿರೀಟವನ್ನೂ, ವಿಲೋಲಾಯ ನಮಃ ಎಂದು ಧ್ವಜವನ್ನೂ, ಸರ್ವಾತ್ಮನೇ ನಮಃ ಎಂದು ಶಿರಸ್ಸನ್ನೂ, ಈರೀತಿ ದೇವದೇವನಾದ ಮನ್ಮಥರೂಪೀ ನಾರಾಯಣನ ಸಮಸ್ತ ಅಂಗಗಳನ್ನೂ, ಕ್ರಮವಾಗಿ ಪೂಜಿಸಬೇಕು.

೩೯. ಅನಂತರ ನಾಮಪೂಜೆಗಾರಂಭಿಸಿ ಓಂಶ್ರೀಪತಯೇ ನಮಃ, ತಾರ್ಕ್ಷ್ಯಧ್ವಜಾಂಕುಶಧರಾಯ ನಮಃ, ಗದಿನೇ ನಮಃ, ಪೀತವಸ್ತ್ರಾಯ ನಮಃ, ಶಂಖಿನೇ ನಮಃ, ಚಕ್ರಿಣೇ ನಮಃ, ನಾರಾಯಣಾಯ ನಮಃ, ಕಾಮದೇವಾತ್ಮನೇ ನಮಃ ಎಂದೂ.

೪೦. ಶಾಂತ್ಯೈ ನಮಃ, ಪ್ರೀತ್ಯೈ ನಮಃ, ರತ್ಯೈ ನಮಃ, ಶ್ರೀಯೈ ನಮಃ, ಪುಷ್ಟ್ಯೈ ನಮಃ, ತುಷ್ಟ್ಯೈ ನಮಃ, ಸರ್ವಾರ್ಥದಾತ್ರ್ಯೈ ನಮಃ.

೪೧. ಎಂಬ ಈ ನಾಮಗಳಿಂದ ಮನ್ಮಥಸ್ವರೂಪನೂ, ಸರ್ವಸಮರ್ಥನೂ, ಆದ ಗೋವಿಂದನನ್ನು ಪೂಜಿಸಿ ಗಂಧ, ಪುಷ್ಪ, ಧೂಪ, ನೈವೇದ್ಯ, ಮಾಲಾದುವುಗಳನ್ನು ಆ ದೇವನಿಗೆ ಸಮರ್ಪಿಸಬೇಕು.

ಅತ್ರ ಚಾಹೂಯ ಧರ್ಮಜ್ಞಂ ಬ್ರಾಹ್ಮಣಂ ವೇದಪಾರಗಂ ।
ಅವ್ಯಂಗಾವಯವಂ ಪೂಜ್ಯ ಗಂಧಪುಷ್ಪಾದಿಭಿಸ್ತಥಾ ॥ ೪೨ ॥

ಶಾಲೇಯತಂಡುಲಪ್ರಸ್ಥಂ ಘೃತಪಾತ್ರೇಣ ಸಂಯುತಂ ।
ತಸ್ಮೈ ವಿಪ್ರಾಯ ಸಾ ದದ್ಯಾನ್ಮಾಧವಃ ಪ್ರೀಯತಾಮಿತಿ ॥ ೪೩ ॥

ಯಥೇಷ್ಟಾಹಾರಭುಕ್ತಂ ಚ ತಮೇವ ದ್ವಿಜಸತ್ತಮಮ್ ।
ರತ್ಯರ್ಥಂ ಕಾಮದೇವೋಽಯಮಿತಿ ಚಿತ್ತೇಽವಧಾರ್ಯ ಚ ॥ ೪೪ ॥

ಯದ್ಯದಿಚ್ಛತಿ ವಿಪ್ರೇಂದ್ರಸ್ತತ್ತತ್ಕುರ್ಯಾದ್ವಿಲಾಸಿನೀ ।
ಸರ್ವಭಾವೇನ ಚಾತ್ಮಾನಮರ್ಪಯೇತ್ಸ್ಮಿತಭಾಷಿಣೀ ॥ ೪೫ ॥

ಏವಮಾದಿತ್ಯವಾರೇಣ ಸದಾ ತದ್ವ್ರತಮಾಚರೇತ್ ।
ತಂಡುಲಪ್ರಸ್ಥದಾನಂ ಚ ಯಾವನ್ಮಾಸಾಂಸ್ತು ದ್ವಾದಶ ॥ ೪೬ ॥

---

೪೨. ಅನಂತರ ಆ ಸ್ತ್ರೀಯು ವೇದವೇದಾಂಗಪಾರಂಗತನೂ, ಧರ್ಮಸೂಕ್ಷ್ಮವನ್ನು ತಿಳಿದವನೂ, ಅಂಗಹೀನನಲ್ಲದವನೂ, ಆದ ಬ್ರಾಹ್ಮಣನನ್ನು ಆಹ್ವಾನಿಸಿ, ಗಂಧಪುಷ್ಪಾದಿಗಳಿಂದ ಆತನನ್ನು ಪೂಜಿಸಬೇಕು.

೪೩. ಒಂದು ಪ್ರಸ್ಥ (ಸೇರು) ಅಕ್ಕಿಯನ್ನು ಒಂದು ಆಜ್ಯಸಹಿತವಾದ ಪಾತ್ರೆಯನ್ನೂ ಆತನಿಗೆ ದಾನಕೊಡಬೇಕು. ಈ ದಾನದಿಂದ ಮಾಧವನು ಸುಪ್ರೀತನಾಗಲಿ ಎಂದು ದಾನಕೊಡುವಾಗ ಹೇಳಬೇಕು.

೪೪. ದಾನಮಾಡಿದ ಆಹಾರವನ್ನು ಆ ಬ್ರಾಹ್ಮಣನು ಯಥೇಷ್ಟವಾಗಿ ಭುಂಜಿಸಿದ ಮೇಲೆ ಆತನನ್ನೇ ಮನ್ಮಥನೆಂದು ಮನದಲ್ಲಿ ಭಾವನೆಮಾಡಿ ಬಳಿಕ ರತಿಕ್ರೀಡಾರ್ಥವಾಗಿ ಆತನನ್ನು ಪ್ರಾರ್ಥಿಸಬೇಕು.

೪೫. ಆ ಬ್ರಾಹ್ಮಣೋತ್ತಮನ ಇಚ್ಛಾನುಸಾರ ನಡೆದುಕೊಳ್ಳುತ್ತಾ ವಿಲಾಸಯುಕ್ತಳಾಗಿ ಮುಗುಳುನಗೆಯಿಂದ ಮಾತನಾಡುತ್ತ " ನನ್ನನ್ನೇ ನಿಮಗೆ ಸಮರ್ಪಿಸಿದೇನೆ ನೀವೇ ನನಗೆ ಸರ್ವಸ್ವ" ಎಂದು ಹೇಳಿ ಅವನ ವಶಳಾಗಬೇಕು.

೪೬. ಈ ದಾನವನ್ನು ಯಾವಾಗಲೂ ಭಾನುವಾರದ ದಿವಸವೇ ಮಾಡಬೇಕು. ಹಿಂದೆ ಹೇಳಿದಂತೆ ಒಂದುಸೇರು ಅಕ್ಕಿಯನ್ನು ಘೃತಪಾತ್ರೆಯೊಡನೆ ದಾನಮಾಡುವ ಈ ವ್ರತವನ್ನು ಹನ್ನೆರಡು ತಿಂಗಳು ಆಚರಿಸಬೇಕು.

ತತಸ್ತ್ರಯೋದಶೇ ಮಾಸಿ ಸಂಪ್ರಾಪ್ತೇ ತಸ್ಯ ಭಾಮಿನೀ ।
ವಿಪ್ರಸ್ಯೋಪಸ್ಕರೈರ್ಯುಕ್ತಾಂ ಶಯ್ಯಾಂ ದದ್ಯಾದ್ವಿಲಕ್ಷಣಾಂ ॥ ೪೭ ॥

ಸೋಪಧಾನಕವಿಶ್ರಾಮಾಂ ಸ್ವಾಸ್ತರಾವರಣಾಂ ಶುಭಾಂ ।
ದೀಪಿಕೋಪಾನಹಚ್ಛತ್ರಪಾದುಕಾಸನಸಂಯುತಾಂ ॥ ೪೮ ॥

ಸಪತ್ನೀಕಮಲಂಕೃತ್ಯ ಹೇಮಸೂತ್ರಾಂಗುಲೀಯಕೈಃ ।
ಸೂಕ್ಷ್ಮವಸ್ತ್ರೈಃ ಸಕಟಕೈರ್ಧೂಪಮಾಲ್ಯಾನುಲೇಪನೈಃ ॥ ೪೯ ॥

ಕಾಮದೇವಂ ಸಪತ್ನೀಕಂ ಗುಡಕುಂಭೋಪರಿ ಸ್ಥಿತಂ ।
ತಾಮ್ರಪಾತ್ರಾಸನಗತಂ ಹೈಮನೇತ್ರಪಟಾವೃತಂ ॥ ೫೦ ॥

೪೭. ಆ ಬಳಿಕ ಹದಿಮೂರನೆಯ ತಿಂಗಳಿನಲ್ಲಿ ಬಹು ಲಕ್ಷಣಯುಕ್ತವಾಗಿರುವ ಶಯ್ಯೆಯನ್ನು ಸೋಪಸ್ಕರ ಸಹಿತವಾಗಿ ಆ ಬ್ರಾಹ್ಮಣನಿಗೇ ದಾನ ಕೊಡಬೇಕು.

೪೮. ಆ ಹಾಸಿಗೆಯಜತೆ ಸುಖವಾಗಿ ವಿಶ್ರಾಮಹೊಂದಲು ಅನುಕೂಲಿಸುವಂಥ ದೊಡ್ಡದಿಂಬು, ಜಮಖಾನ, ಮಗ್ಗಲುಹಾಸಿಗೆ, ಇವುಗಳನ್ನೂ ಮತ್ತು ದೀಪಸ್ತಂಭ, ಜೋಡು, ಛತ್ರಿ, ಪಾದುಕೆ, ಪೀಠ, (ಮಂಚ, ಕುರ್ಚಿ,) ಇವನ್ನೂ ದಾನ ಕೊಡಬೇಕು.

೪೯. ಮತ್ತು ಸುವರ್ಣದ ಸೂತ್ರಗಳು, (ಉಡಿದಾರ) ಉಂಗುರಗಳು, ಸೂಕ್ಷ್ಮವಾದ ಪಟ್ಟೆಯ ವಸ್ತ್ರಗಳು, ಕಟಕ, ಇವುಗಳಿಂದ ರತಿಸಮೇತನಾದ ಕಾಮದೇವನನ್ನು ಅಲಂಕರಿಸಬೇಕು.

೫೦. ಚಿನ್ನದಿಂದ ನಿರ್ಮಿತವಾದ ಆ ಪ್ರತಿಮೆಯನ್ನು, ಬೆಲ್ಲವನ್ನು ತುಂಬಿದ ತಾಮ್ರಪಾತ್ರೆಯ ಕಲಶದ ಮೇಲೆ ಇಡಬೇಕು. ಅದನ್ನು ಆಸನದ ಮೇಲಿಡಬೇಕು. ನೇತ್ರಾವಳಿಯ ಜರತಾರಿವಸ್ತ್ರವನ್ನು ಹೊದ್ದಿಸಬೇಕು. ಕಂಚಿನಪಾತ್ರೆ, ಕಬ್ಬಿನಜಲ್ಲೆ, ಇವುಗಳಿಂದ ಸಹಿತವಾಗಿರುವಂತೆ ಮಾಡಬೇಕು.

ಸಕಾಂಸ್ಯಭಾಜನೋಪೇತಮಿಕ್ಷುದಂಡಸಮನ್ವಿತಂ ।
ದದ್ಯಾದೇತೇನ ಮಂತ್ರೇಣ ತಥೈಕಾಂ ಗಾಂ ಪಯಸ್ವಿನೀಂ ॥ ೫೧ ॥

ಯಥಾಂತರಂ ನ ಪಶ್ಯಾಮಿ ಕಾಮಕೇಶವಯೋಃ ಸದಾ ।
ತಥೈವ ಸರ್ವಕಾಮಾಪ್ತಿರಸ್ತು ವಿಷ್ಣೋಃ ಸದಾ ಮಮ ॥ ೫೨ ॥

ಯಥಾ ನ ಕಾಮಿನೀದೇಹಾತ್ಪ್ರಯಾತಿ ತವ ಕೇಶವ ।
ತಥಾಪಿ ಮಮ ದೇವೇಶ ಶರೀರಸ್ಥಂ ಪತಿಂ ಕುರು ॥
ತಥೈವ ಕಾಂಚನಂ ದೇವಂ ಪ್ರತಿಗೃಹ್ಣನ್ದ್ವಿಜೋತ್ತಮಃ ॥ ೫೩ ॥

"ಕ ಇದಂ ಕೋಽದಾತ್ಕಸ್ಮಾ ಅದಾತ್ಕಾಮಃ ಕಾಮಾಯಾದಾತ್
ಕಾಮೋ ದಾತಾ ಕಾಮಃ ಪ್ರತಿಗ್ರಹೀತಾ ಕಾಮಗ್ಂ ಸಮುದ್ರ
ಮಾವಿಶವ್ಮೈತತ್ತ" ಇತಿ ವೈದಿಕಮಂತ್ರಮೀರಯೇತ್ ॥

---

೫೧. ಬಳಿಕ ಧೂಪಮಾಲ್ಯಾದಿಗಳಿಂದಲೂ, ವಿವಿಧವಾದ ನೈವೇದ್ಯಗಳಿಂದಲೂ, ಪೂಜಿಸಿ ಸಂತೋಷಪಡಿಸಿ, ಅನಂತರ ಆ ಪ್ರತಿಮೆಯಯನ್ನೂ ಒಂದು ಕರೆಯುವ ಹಸುವನ್ನೂ ಮಂತ್ರಪೂರ್ವಕವಾಗಿ ದಾನಮಾಡಬೇಕು.

೫೨. ಮನ್ಮಥಕೇಶವ ಇವರಿಬ್ಬರಿಗೂ ಭೇದವಿಲ್ಲದಿರುವುದರಿಂದ ಎಲೈ ವಿಷ್ಣುವೇ! ಮನ್ಮಥಸ್ವರೂಪನಾದ ನೀನು ನನಗೆ ಯಾವಾಗಲೂ ಸಕಲ ಇಷ್ಟಾರ್ಥಗಳೂ ನೆರವೇರುವಂತೆ ಮಾಡು (ಇದು ಒಂದು ಮಂತ್ರದ ಅರ್ಥ).

೫೩. ಎಲೈ ಕೇಶವನೇ ನಿನ್ನ ಪತ್ನಿಯ ದೇಹದಲ್ಲಿ ಯಾವಾಗಲೂ ಅಗಲದೆ ನೀನು ಸೇರಿರುವಂತೆ ನನ್ನ ಪತಿಯೂ ನನ್ನ ಶರೀರಸ್ಥನಾಗಿರುವಂತೆ ಮಾಡು. ಮತ್ತು ಈ ಸ್ವರ್ಣಮಯ ಮೂರ್ತಿಯನ್ನು ಪ್ರತಿಗ್ರಹಮಾಡು ಎಂಬ ಅರ್ಥವುಳ್ಳ ಮಂತ್ರವನ್ನು ಹೇಳಬೇಕು. ಇದೇ ಸಮಯದಲ್ಲಿ ಮನಸ್ಸಿನಲ್ಲಿ ವಿಷ್ಣುವನ್ನು ಧ್ಯಾನಮಾಡುತ್ತಾ "ಕ ಇದಂ ಕೋಽದಾತ್ಕಸ್ಮಾ ಅದಾತ್ಕಾಮಃ ಕಾಮಾಯಾದಾತ್ ಕಾಮೋದಾತಾ ಕಾಮಃ ಪ್ರತಿಗೃಹೀತಾ ಕಾಮಾಗ್ಂ ಸಮುದ್ರಮಾವಿಶ ವೈತತ್ತ" ಎಂಬ ವೇದ ಮಂತ್ರವನ್ನು ಪಠಿಸಬೇಕು.

ಕೋದಾದಿತಿ ಪಠೇನ್ಮಂತ್ರಂ ಧ್ಯಾಯಂಶ್ಚೇತಸಿ ಮಾಧವಂ ।
ತತಃ ಪ್ರದಕ್ಷಿಣೀಕೃತ್ಯ ವಿಸೃಜೇದ್ದ್ವಿಜಪುಂಗವಮ್ ॥
ಶಯ್ಯಾಸನಾದಿಕಂ ಸರ್ವಂ ಬ್ರಾಹ್ಮಣಸ್ಯ ಗೃಹಂ ನಯೇತ್ ॥ ೫೪ ॥

ತತಃ ಪ್ರಭೃತಿ ಯೋಽನ್ಯೋಽಪಿ ರತ್ಯರ್ಥಂ ಗೃಹಮಾಗತಃ ।
ಸ ಸಮ್ಯಕ್ಸೂರ್ಯವಾರೇಣ ಸಮಂ ಪೂಜ್ಯೋ ಯಥೇಚ್ಛಯಾ ॥ ೫೫ ॥

ಏವಮೇಕಂ ದ್ವಿಜಂ ಶಾಂತಂ ಪುರಾಣಜ್ಞಂ ವಿಚಕ್ಷಣಂ ।
ತಮರ್ಚಯೇತ ಚ ಸದಾ ಅಪರಂ ವಾ ತದಾಜ್ಞಯಾ ॥ ೫೬ ॥

ನ ಪ್ರಾಪ್ನೋತಿ ತದಾ ವಿಘ್ನಂ ಗರ್ಭಸೂತಕಜಂ ಕ್ವಚಿತ್ ।
ದೈವಂ ವಾ ಮಾನುಷಂ ವಾ ಸ್ಯಾದುಪರಾಗೇಣ ವಾ ತತಃ ॥ ೫೭ ॥

---

೫೪. ಅನಂತರ ವ್ರತಾನುಷ್ಠಾನ ಮಾಡಿದ ಸ್ತ್ರೀಯು ಆ ಬ್ರಾಹ್ಮಣೋತ್ತಮನಿಗೆ ಪ್ರದಕ್ಷಿಣ ನಮಸ್ಕಾರಮಾಡಿ ಮನೆಗೆ ಕಳುಹಿಸಿಕೊಡಬೇಕು. ಆತನಿಗೆ ದಾನಕೊಟ್ಟ ಶಯ್ಯಾ, ಆಸನ, ಮೊದಲಾದುವೆಲ್ಲವನ್ನೂ ಆ ಬ್ರಾಹ್ಮಣನ ಮನೆಗೆ ಕಳುಹಿಸಿಕೊಡಬೇಕು.

೫೫. ಅಲ್ಲಿಂದ ಮುಂದೆ ಇನ್ನು ಯಾರಾದರೂ ರತಿಕ್ರೀಡೆಗೋಸ್ಕರ ಮನೆಗೆ ಬಂದರೆ ಅವರನ್ನು ಭಾನುವಾರದದಿನ ಚೆನ್ನಾಗಿ ಸತ್ಕರಿಸಿ ಅವರ ಇಷ್ಟದಂತೆ ವಿಹರಿಸಬಹುದು. ಮಿಕ್ಕದಿನಗಳಲ್ಲಿ ವಿಹರಿಸಬಾರದು.

೫೬. ಶಾಂತಚಿತ್ತನೂ, ಪುರಾಣಜ್ಞನೂ, ಬುದ್ಧಿವಂತನೂ, ಆದ ಬ್ರಾಹ್ಮಣನೊಬ್ಬನನ್ನು ಇದೇರೀತಿ ಪೂಜಿಸಿ, ಅವನೊಡನೆ ವಿಹಾರಾದಿಗಳಿಂದ ಸಂತೋಷಪಡಬೇಕು. ಆ ಬ್ರಾಹ್ಮಣನು ಅನುಜ್ಞೆಕೊಟ್ಟರೆ ಇನ್ನೊಬ್ಬನೊಡನೆ ವಿಹರಿಸಬಹುದು.

೫೭. ಹೀಗೆಮಾಡಿದರೆ ಅವನ ಸಂಬಂಧದಿಂದುಂಟಾದ ಗರ್ಭಸೂತಕಾದಿ ವಿಘ್ನಗಳು ಪರಿಹರವಾಗುವುವು ದೇವತಾಸಂಬಂಧವಾದ ಮತ್ತು ಮನುಷ್ಯಸಂಬಂಧವಾದ ಉಪರಾಗಗಳಾವುವೂ ಇವಳಿಗೆ ಸಂಬಂಧಿಸುವುದಿಲ್ಲ (ಎಂದರೆ ಪ್ರಿಯನ ಅನುಮತಿಯಿಂದ ಬೇರೆಯುವರೊಡನೆ ವಿಹರಿಸಿದರೆ ತಜ್ಜನ್ಯವಾದ ರಜಸ್ಸಂಬಂಧವಾದ ಗರ್ಭಸೂತಕಾದಿಗಳು ಸಂಬಂಧಿಸುವುದಿಲ್ಲವೆಂದು ಅರ್ಥ).

ಸಾಧಾರಣ್ಯೇಕಪಶುವದ್ಯಥಾಶಕ್ತ್ಯಾ ಸಮಾಪಯೇತ್ ।
ಏತದ್ವಃ ಕಥಿತಂ ಸರ್ವಂ ವೇಶ್ಯಾಧರ್ಮಮಶೇಷತಃ ॥ ೫೮ ॥

ಪುರುಹೂತೇನ ಯತ್ಪ್ರೋಕ್ತಂ ದಾನವೀಷು ತತೋ ಮಯಾ ।
ತದಿದಂ ಚ ವ್ರತಂ ಸರ್ವಂ ಭವತೀಷು ಪ್ರಕಾಶಿತಂ ॥ ೫೯ ॥

ಸರ್ವಪಾಪಪ್ರಶಮನಮನಂತಫಲದಾಯಕಮ್ ।
ಕಲ್ಯಾಣಿನೀನಾಂ ಕಥಿತಂ ಕುರುಧ್ವಂ ತದ್ವರಾನನಾಃ ॥ ೬೦ ॥

ಏತತ್ಪಾರ್ಥ ಮಯಾ ಪೂರ್ವಂ ಗೋಪೀನಾಂ ತು ಪ್ರಕಾಶಿತಂ ।
ಪುರಾಣಂ ಧರ್ಮಸರ್ವಸ್ವಂ ವೇಶ್ಯಾಜನಸುಖಪ್ರದಂ ॥ ೬೧ ॥

---

೫೮. ಒಂದು ಹಸುವು ತನ್ನ ಯಜಮಾನನ ಅಧೀನದಲ್ಲಿರುತ್ತಾ ಅವನಿಗೆ ಬೇಕಾದ ಹಾಗೆ ಅವನಿಗೆ ಇಷ್ಟವಾದ ಭೋಜ್ಯವಸ್ತುಗಳನ್ನೊದಗಿಸಿ ಸೇವೆಮಾಡುವಂತೆ, ವೇಶ್ಯಾಸ್ತ್ರೀಯು ಪ್ರಿಯನ ಇಷ್ಟದಂತೆಯೇ ನಡೆದು ಎಲ್ಲಾ ವಿಷಯಗಳಲ್ಲಿಯೂ ಅನುಸರಿಸಿ ಸುಖವುಂಟುಮಾಡಬೇಕು. ಈರೀತಿ ಉತ್ತಮವಾದ ವೇಶ್ಯಾಧರ್ಮವನ್ನು ನಿಮಗೆ ಸಂಪೂರ್ಣವಾಗಿ ತಿಳಿಸಿದೆನು.

೫೯-೬೦. ಹಿಂದೆ ಈ ವೇಶ್ಯಾಧರ್ಮವನ್ನು ಇಂದ್ರನು ರಾಕ್ಷಸಸ್ತ್ರೀಯರಿಗೆ ಹೇಳಿದ್ದನು. ಈಗ ನಾನು ನಿಮಗೆ ಹೇಳಿರುವೆನು. ಈ ವ್ರತವು ಕಲ್ಯಾಣಗುಣಯುಕ್ತೆಯರಾದ ಸ್ತ್ರೀಯರ ಸಕಲಪಾಪಗಳನ್ನೂ ನಾಶಮಾಡಿ ಅನಂತವಾದ ಫಲಗಳನ್ನು ಕೊಡುವುದು. ಆದುದರಿಂದ ಎಲೌ ಸುಂದರಿಯರೇ! ಈ ವ್ರತವನ್ನು ನೀವು ನಿಯಮದಿಂದ ಆಚರಿಸಿ ಎಂದನು.

೬೧. ಅಯ್ಯಾ ಧರ್ಮರಾಜನೇ! ಹಿಂದೆ ನಾನು ಹದಿನಾರುಸಾವಿರ ಮಂದಿ ಗೋಪಿಕಾಸ್ತ್ರೀಯರಿಗೆ ಈ ಪ್ರಕಾರ ತಿಳಿಸಿದ್ದೆನು. ಈ ವ್ರತವು ಬಹಳ ಪುರಾತನವಾದುದೂ, ಧರ್ಮಸೂಕ್ಷ್ಮಗಳಿಂದ ಕೂಡಿದುದೂ, ಆಗಿರುವುದಲ್ಲದೆ ವೇಶ್ಯೆಯರಿಗೆ ತುಂಬಾ ಸುಖಕರವೂ ಆಗಿದೆ.

ಕರೋತಿ ಯಾಶೇಷಮಖಂಡ ಮೇತತ್ ।
ಕಲ್ಯಾಣಿನೀ ಮಾಧವಲೋಕಸಂಸ್ಥಾ ॥
ಸಾ ಪೂಜಿತಾ ದೇವಗಣೈರಶೇಷೈಃ ।
ಆನಂದಕೃತ್ಸ್ಥಾನಮುಪೈತಿ ವಿಷ್ಣೋಃ ॥ ೬೨ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಕಾಮದಾನ ವೇಶ್ಯಾವ್ರತ ವರ್ಣನಂ ನಾಮ ಏಕಾದಶೋತ್ತರ ಶತತಮೋಽಧ್ಯಾಯಃ.



೬೨. ಈ ವ್ರತವನ್ನು ಸಂಪೂರ್ಣವಾಗಿ ಆಚರಿಸುವ ಸ್ತ್ರೀಯು ವಿಷ್ಣು ಲೋಕವನ್ನು ಪಡೆದು, ಅಲ್ಲಿ ಸಮಸ್ತ ದೇವಸಮೂಹದಿಂದಲೂ ಪೂಜಿತೆ ಯಾಗುತ್ತಾ ಶ್ರೇಷ್ಠವಾದ ವಿಷ್ಣುವಿನ ಸ್ಥಾನವನ್ನು ಪಡೆಯುವಳು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ
ವೇಶ್ಯಾವ್ರತವರ್ಣನೆಯೆಂಬ ನೂರಹನ್ನೊಂದನೆಯ
ಅಧ್ಯಾಯ ಮುಗಿದುದು.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣ

## ಉತ್ತರಪರ್ವಣಿ

## ದ್ವಾದಶೋತ್ತರಶತತಮೋऽಧ್ಯಾಯಃ

**|| ಶ್ರೀ ಕೃಷ್ಣ ಉವಾಚ ||**

**ಅಥಾತೋ ವೃಂತಾಕವಿಧಿಂ ವ್ಯಾಖ್ಯಾಸ್ಯಾಮಃ ।**
**ಸಂವತ್ಸರಂ ಚ ಷಣ್ಮಾಸಾಂಸ್ತ್ರೀನ್ಮಾಸಾನ್ವಾ ನ ಭಕ್ಷಯೇತ್ ||**
**ಅಥ ಭರಣ್ಯಾಂ ಮಘಾಯಾಂ ವಾ ಏಕರಾತ್ರೋಪವಾಸಂ**
**ಕೃತ್ವಾ ಸ್ಥಂಡಿಲೇ ದೇವಾನಾಹೂಯ ಗಂಧಧೂಪ**
**ಪುಷ್ಪನೈವೇದ್ಯ ದೀಪಾದಿನಾ ಪೂಜಯೇತ್ ||**
**ದರ್ಭಪಾಣಿರ್ಗಂಧೋದಕೇನಾವಾಹಯೇತ್ ||**

---

## ನೂರಹನ್ನೆರಡನೆಯ ಅಧ್ಯಾಯ

ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಕುಂತೀಪುತ್ರನೇ! ಈಗ ವೃಂತಾಕ ವಿಧಿಯನ್ನು ವಿಸ್ತಾರವಾಗಿ ಹೇಳುವೆನು ಕೇಳು. ಈ ವಿಧಿಯನ್ನು ಆಚರಿಸುವವನು ಒಂದುವರ್ಷ, ಆರುತಿಂಗಳು, ಅಥವಾ ಮೂರುತಿಂಗಳಕಾಲ (ವೃಂತಾಕ) ಬದನೆಯಕಾಯಿಯನ್ನು ತಿನ್ನಬಾರದು. ಭರಣೀ ಅಥವಾ ಮಘಾ ಇವುಗಳಲ್ಲಿ ಯಾವುದಾದರೊಂದು ನಕ್ಷತ್ರಯುಕ್ತವಾದದಿನ ರಾತ್ರಿ ಉಪವಾಸಮಾಡಿ, ಸ್ಥಂಡಿಲದಲ್ಲಿ ದೇವತೆಗಳನ್ನು ಆಹ್ವಾನಮಾಡಿ ಗಂಧ, ಪುಷ್ಪ, ಧೂಪ, ನೈವೇದ್ಯ, ಮೊದಲಾವ ಪೂಜಾಸಾಮಗ್ರಿಗಳಿಂದ ಅರ್ಚನೆ ಮಾಡಬೇಕು. ಯಜಮಾನನು ದರ್ಭೆಯ ಪವಿತ್ರವನ್ನು ಧರಿಸಿ ದೇವತೆಗಳನ್ನು ಗಂಧೋದಕದಿಂದ ಆವಾಹನೆ ಮಾಡಬೇಕು. ಯಮರಾಜನನ್ನು ಆವಾಹಿಸುವೆನು. ಕಾಲನನ್ನು ಆವಾಹಿಸುವೆನು. ಇತ್ಯಾದಿ ಅರ್ಥವುಳ್ಳ ಓಂ ಯಮರಾಜಮಾವಾಹಯಾಮಿ, ಓಂ ಕಾಲಮಾವಾಹಯಾಮಿ,

ಯಮರಾಜಾನಮಾವಾಹಯಾಮಿ ।
ಕಾಲಮಾವಾಹಯಾಮಿ ।
ನೀಲಮಾವಾಹಯಾಮಿ ।
ಚಿತ್ರಗುಪ್ತಮಾವಾಹಯಾಮಿ ।
ವೈವಸ್ವತಮಾವಾಹಯಾಮಿ ।
ಮೃತ್ಯುಮಾವಾಹಯಾಮಿ ।
ಪರಮೇಷ್ಠಿನಮಾವಾಹಯಾಮೀತಿ ॥
ತತೋಽಗ್ನಿಮುಪಸಮಾಧಾಯ ತಿಲಾಜ್ಯೇ ಜುಹುಯಾತ್ ।
ಯಮರಾಜಾಯ ಸ್ವಾಹಾ ।
ಕಾಲಾಯ ಸ್ವಾಹಾ ।
ನೀಲಾಯ ಸ್ವಾಹಾ ।
ಚಿತ್ರಗುಪ್ತಾಯ ಸ್ವಾಹಾ ।
ವೈವಸ್ವತಾಯ ಸ್ವಾಹಾ ।
ಮೃತ್ಯವೇ ಸ್ವಾಹಾ ।
ಪರಮೇಷ್ಠಿನೇ ಸ್ವಾಹೇತಿ ॥

---

ನೀಲಮಾವಾಹಯಾಮಿ, ಚಿತ್ರಗುಪ್ತಮಾವಾಹಯಾಮಿ, ವೈವಸ್ವತಮಾವಾಹಯಾಮಿ, ಮೃತ್ಯುಮಾವಾಹಯಾಮಿ, ಪರಮೇಷ್ಠಿನಮಾವಾಹಯಾಮಿ ಎಂದು ಹೇಳಿ, ಈ ಏಳುಮಂದಿಗಳನ್ನೂ ಆವಾಹನಮಾಡಬೇಕು. ಆಮೇಲೆ ಅಗ್ನಿ ಪ್ರತಿಷ್ಠೆ ಮಾಡಿ ಘೃತಮಿಶ್ರವಾದ ತಿಲದಿಂದ ಯಮರಾಜಾಯಸ್ವಾಹಾ, ಕಾಲಾಯ ಸ್ವಾಹಾ, ನೀಲಾಯಸ್ವಾಹಾ, ಚಿತ್ರಗುಪ್ತಾಯಸ್ವಾಹಾ, ವೈವಸ್ವತಾಯಸ್ವಾಹಾ, ಮೃತ್ಯವೇಸ್ವಾಹಾ, ಪರಮೇಷ್ಠಿನೇಸ್ವಾಹಾ, ಎಂಬದಾಗಿ ಹೇಳಿ ಆ ಏಳು ಮಂದಿಗೂ ಏಳು ಆಹುತಿಗಳನ್ನು ಕೊಡಬೇಕು.

ಬಳಿಕ "ಅಗ್ನಿರ್ಮೂರ್ಧಾದಿವಃಕಕುತ್" ಎಂಬ ಮಂತ್ರಪೂರ್ವಕವಾಗಿ ಎಂಟುನೂರು ಆಹುತಿಗಳನ್ನು ಹೋಮಮಾಡಿ, ಅನಂತರ ಸ್ವಿಷ್ಟಕೃತು ಹೋಮವನ್ನೂ ಪ್ರಾಯಶ್ಚಿತ್ತ ಹೋಮವನ್ನೂ ಸಹ ಮಾಡಬೇಕು. ವೇದಾಧಿಕಾರಿಯಾಗಿದ್ದವನು ತಾನೇ ಸಾಕ್ಷಾತ್ತಾಗಿ ಹೋಮಮಾಡಬೇಕು. ಅನಧಿಕಾರಿಯಾದವನು ಆಚಾರ್ಯಮುಖೇನ ಮಾಡಿಸಬೇಕು.

ಅಗ್ನಿರ್ಮೂರ್ಧೇತ್ಯಾಹುತೀಸ್ತ್ವಷ್ಟಶತಂ ಹುತ್ವಾ ಸ್ವಿಷ್ಟಕೃತಿಂ ಕೃತ್ವಾ ಪ್ರಾಯಶ್ಚಿತ್ತಂ ಹುತ್ವಾ ಬ್ರಾಹ್ಮಣಃ ಸ್ವಯಮೇವ ಕರೋತಿ ।

ಇತರೇಷಾಮಾಚಾರ್ಯಃ ।

ಅಥ ಸೌವರ್ಣಂ ವೃಂತಾಕಂ ಬ್ರಾಹ್ಮಣಾಯ ನಿವೇದಯೇತ್ ।

ಕೃಷ್ಣವೃಷಭಂ ಗಾಂ ಚ ದದ್ಯಾತ್ ।

ಕರ್ಣವೇಷ್ಟಾಂಗುಲೀಯಕೇ ಚ್ಛತ್ರೋಪಾನಹೌ ಕೃಷ್ಣಾಜಿನಂ ಕೃಷ್ಣಕಂಬಲಂ ಚ ದದ್ಯಾತ್ ।

ಬ್ರಾಹ್ಮಣಾನ್ಭೋಜಯಿತ್ವಾ ಆಶಿಷೋ ವಾಚಯೇತ್ ।

ಪೌಂಡರೀಕಾಶ್ವಮೇಧಫಲಮವಾಪ್ನೋತಿ ।

ಸಪ್ತಕೋಟಿಸಹಸ್ರಾಣಿ ನಾಕಪೃಷ್ಠೇ ಮಹೀಯತೇ ॥

ಸಪ್ತಜನ್ಮಾಂತರಂ ಯಾವದ್ಯಮಲೋಕಂ ನ ಪಶ್ಯತೀತ್ಯಾಹ ಭಗವಾನ್ಬೌಧಾಯನಃ ॥

---

ಹೀಗೆ ಹೋಮ ಮುಗಿದಮೇಲೆ ಚಿನ್ನದಿಂದ ಮಾಡಿದ ವೃಂತಾಕವನ್ನು ಬಾಹ್ಮಣನಿಗೆ ದಾನಮಾಡಬೇಕು. ಅಲ್ಲದೆ ಒಂದು ಕಪ್ಪುಎತ್ತನ್ನೂ ಒಂದು ಹಸುವನ್ನೂ ಸಹ ದಾನಮಾಡಬೇಕು. ಸಾಧ್ಯವಿದ್ದರೆ ಕರ್ಣಕುಂಡಲ, ಉಂಗುರ, ಛತ್ರಿ, ಪಾದುಕೆ, ಕೃಷ್ಣಾಜಿನ, ಕರಿಯಕಂಬಳಿ, ಇವುಗಳನ್ನೂ ದಾನ ಮಾಡಬೇಕು.

ಅನಂತರ ಬ್ರಾಹ್ಮಣರಿಗೆ ತೃಪ್ತಿಯಾಗುವಂತೆ ಭೋಜನಮಾಡಿಸಿ ಅವರುಗಳಿಂದ ಆಶೀರ್ವಾದ ಪಡೆಯಬೇಕು. ಹೀಗೆ ನಿಯಮದಿಂದ ಆಚರಿಸಿದವನು ಪುಂಡರೀಕ ಮತ್ತು ಅಶ್ವಮೇಧ ಎಂಬ ಎರಡು ಯಾಗಗಳನ್ನು ಆಚರಿಸಿದುದರಿಂದ ಉಂಟಾಗುವ ಫಲಗಳನ್ನು ಪಡೆಯುವನು ಅಲ್ಲದೆ ಏಳುಸಾವಿರಕೋಟಿ ವರ್ಷಕಾಲ ಸ್ವರ್ಗಲೋಕದಲ್ಲಿ ದಿವ್ಯಸುಖವನ್ನು ಅನುಭವಿಸುತ್ತಾ ವಿರಾಜಿಸುವನು. ಮತ್ತು ಏಳುಜನ್ಮಗಳವರೆಗೂ ಅವನಿಗೆ ಯಮಲೋಕದರ್ಶನವಿಲ್ಲವೆಂದು ಷಡ್ಗುಣೈಶ್ವರ್ಯ ಸಂಪನ್ನರಾದ ಬೋಧಾಯನಾಚಾರ್ಯರು ಹೇಳಿರುವರು.

ಪರಿಶುದ್ಧವಾದ ಚಿನ್ನದಿಂದ ನಿರ್ಮಿಸಿದ ವೃಂತಾಕವನ್ನು ತುಪ್ಪ, ಮಜ್ಜಿಗೆ ಸಮೇತ ಬ್ರಾಹ್ಮಣನಿಗೆ ಒಂದುವರ್ಷಕಾಲ ದಾನಮಾಡುವ ಮೂಲಕ ಈ ವ್ರತ

ವೃಂತಾಕಮಪ್ರತಿಹತಾಂತರ ಹೇಮಸಿದ್ಧಂ ।
ದದ್ಯಾದ್ದ್ವಿಜಾಯ ಘೃತತಕ್ರಸಮನ್ವಿತಂ ಯಃ ॥
ಕೃತ್ವಾ ವ್ರತಂ ತದಿಹವತ್ಸರಮಾಸಮೇಕಂ ।
ಯಾಮ್ಯಂ ನ ಪಶ್ಯತಿ ಪುರಂ ಪುರುಷಃ ಕದಾಚಿತ್ ॥ ೧ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ವೃಂತಾಕ ವ್ರತವಿಧಿ ನಾಮ ದ್ವಾದಶೋತ್ತರಶತತಮೋಽಧ್ಯಾಯಃ.



---

ಮಾಡುವ ಮನುಷ್ಯನು ಈ ವ್ರತಮಹಿಮೆಯಿಂದ ಎಂದಿಗೂ ನರಕದರ್ಶನವಿಲ್ಲದೆ ಸದಾ ಸ್ವರ್ಗಸುಖವನ್ನೇ ಅನುಭವಿಸುತ್ತಾ ಮೆರೆಯುವನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ವೃಂತಾಕ ವ್ರತ ವಿಧಿ ವರ್ಣನೆಯೆಂಬ ನೂರಹನ್ನೆರಡನೆಯ ಅಧ್ಯಾಯ ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣ
## ಉತ್ತರಪರ್ವಣಿ
## ತ್ರಯೋದಶೋತ್ತರಶತತಮೋಽಧ್ಯಾಯಃ

॥ ಶ್ರೀಕೃಷ್ಣ ಉವಾಚ ॥

ಅಥಾತಃ ಸಂಪ್ರವಕ್ಷ್ಯಾಮಿ ರಹಸ್ಯಂ ಹ್ಯೇತದುತ್ತಮಂ ।
ಯೇನ ಲಕ್ಷ್ಮೀರ್ನಿವೃರ್ತಿಸ್ತು ಪುಷ್ಟಿಶ್ಚೈವೋಪಜಾಯತೆ ॥ ೧ ॥

ಸರ್ವೇ ಗ್ರಹಾಃ ಸದಾ ಸೌಮ್ಯಾ ಜಾಯಂತೇ ಯೇನ ಪಾಂಡವ ।
ಆದಿತ್ಯವಾರೇ ಹಸ್ತೇನ ಪೂರ್ವಂ ಗೃಹ್ಯ ವಿಚಕ್ಷಣಃ ॥ ೨ ॥

ನಕ್ತೋಕ್ತವಿಧಿನಾ ಸರ್ವಂ ಕುರ್ಯಾತ್ಪೂಜಾಂ ತಥಾ ರವೇಃ ।
ಪ್ರತ್ಯಕ್ಷಂ ಸಪ್ತ ನಕ್ತಾನಿ ಕೃತ್ವಾ ಭಕ್ತಿಪರೋ ನರಃ ॥ ೩ ॥

---

## ನೂರಹದಿಮೂರನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಇನ್ನು ಮುಂದೆ ಅತ್ಯಂತ ರಹಸ್ಯವಾದ ಕೆಲವು ವಿಷಯಗಳನ್ನು ಹೇಳುವೆನು. ಇದರಿಂದ ಶಾಶ್ವತವಾದ ಐಶ್ವರ್ಯ ಪ್ರಾಪ್ತಿಯೂ ಶರೀರಪುಷ್ಟಿಯೂ ಉಂಟಾಗುವುದು.

೨. ಅಲ್ಲದೆ ನಾನು ಹೇಳುವಂತೆ ನಡೆದರೆ ಈ ವ್ರತಮಹಿಮೆಯಿಂದ ಎಲ್ಲಾ ಗ್ರಹಗಳೂ ಯಾವಾಗಲೂ ಸೌಮ್ಯರಾಗಿ ಶುಭಫಲಗಳನ್ನೇ ಉಂಟುಮಾಡುವರು.

೩. ಪ್ರಾಜ್ಞನಾದವನು ಹಸ್ತನಕ್ಷತ್ರಯುಕ್ತವಾದ ಭಾನುವಾರ ಈ ವ್ರತವನ್ನಾರಂಭಿಸಬೇಕು. ವ್ರತಮಾಡುವದಿನ ಗೃಹ್ಯಸೂತ್ರದಲ್ಲಿ ತನ್ನ ಶಾಖೆಗೆ ಆಚರಣೀಯವೆಂದು ಉಕ್ತವಾಗಿರುವ ನಿತ್ಯಕರ್ಮಾನುಷ್ಠಾನಮಾಡಿ, ಆಮೇಲೆ ನಕ್ತವ್ರತವಿಧಿಯನ್ನು ಅನುಸರಿಸಿ ಸೂರ್ಯನನ್ನು ಆರಾಧಿಸಬೇಕು.

ತತಸ್ತು ಸಪ್ತಮೇ ಪ್ರಾಪ್ತೇ ಕುರ್ಯಾದ್ಬ್ರಾಹ್ಮಣವಾಚನಂ ।
ಭಾಸ್ಕರಂ ಸರ್ವಸೌವರ್ಣಂ ಕೃತ್ವಾ ಯತ್ನೇನ ಮಾನವಃ ॥ ೪ ॥

ತಾಮ್ರಪಾತ್ರೇ ಸ್ಥಾಪಯಿತ್ವಾ ರಕ್ತಪುಷ್ಪೈಃ ಪ್ರಪೂಜ್ಯ ಚ ।
ರಕ್ತವಸ್ತ್ರಯುಗಚ್ಛನ್ನಂ ಛತ್ರೋಪಾನದ್ಯುಗಾನ್ವಿತಂ ॥ ೫ ॥

ಘೃತೇನ ಸ್ನಪನಂ ಕೃತ್ವಾ ಲಡ್ಡುಕಾನ್ವಿನಿವೇದ್ಯ ಚ ।
ಮಂತ್ರೇಣಾನೇನ ವಿದುಷೇ ಬ್ರಾಹ್ಮಣಾಯೋಪಪಾದಯೇತ್ ॥ ೬ ॥

ಆದಿದೇವ ನಮಸ್ತುಭ್ಯಂ ಸಪ್ತಸಪ್ತೇ ದಿವಾಕರ ।
ತ್ವಂ ರವೇ ತಾರಯಸ್ವಾಸ್ಮಾನಸ್ಮಾತ್ಸಂಸಾರಸಾಗರಾತ್ ॥ ೭ ॥

ಕೃತೇನಾನೇನ ರಾಜೇಂದ್ರ ಭವೇದಾರೋಗ್ಯಮುತ್ತಮಂ ।
ದ್ರವ್ಯಸಂಪತ್ಸುತಪ್ರಾಪ್ತಿರಿತಿ ಪೌರಾಣಿಕಾ ವಿದುಃ ॥ ೮ ॥

---

೪. ಹೀಗೆ ಏಳು ನಕ್ತವ್ರತಗಳನ್ನು ಭಕ್ತಿಯಿಂದ ಆಚರಿಸಬೇಕು. ಏಳನೆಯ ನಕ್ತವ್ರತದ ದಿವಸ ಬ್ರಾಹ್ಮಣರಿಂದ ಸ್ವಸ್ತಿವಾಚನವನ್ನು ಮಾಡಿಸಬೇಕು.

೫. ಚಿನ್ನದಲ್ಲಿ ಸೂರ್ಯನ ಪ್ರತಿಮೆಯನ್ನು ಮಾಡಿಸಿ ಆ ಪ್ರತಿಮೆಯನ್ನು ತಾಮ್ರದ ಕಲಶದಲ್ಲಿರಿಸಿ, ಕೆಂಪುಹೂಗಳಿಂದ ಪೂಜಿಸಿ, ಎರಡು ಕೆಂಪುವಸ್ತ್ರಗಳನ್ನೂ ಛತ್ರಿ, ಪಾದುಕೆ, ಇವುಗಳನ್ನೂ ದೇವನಿಗೆ ಸಮರ್ಪಿಸಬೇಕು.

೬–೭. ಆದಿನದ ಪೂಜೆಯಲ್ಲಿ ಸೂರ್ಯದೇವನಿಗೆ ಘೃತಸ್ನಾನಮಾಡಿಸುವುದೂ, ಲಡ್ಡುಕನಿವೇದನಮಾಡುವುದೂ, ವಿಶೇಷಫಲದಾಯಕವು. ಪೂಜೆಮಾಡಿದ ಮೇಲೆ ಏಳುಕುದುರೆಗಳುಳ್ಳ ರಥದಲ್ಲಿ ಸಂಚರಿಸುವವನೂ, ಸರ್ವಲೋಕವನ್ನೂ ಪ್ರಕಾಶಪಡಿಸತಕ್ಕವನೂ ಆದ ರವಿಯೇ! ಸಂಸಾರಸಾಗರದಲ್ಲಿ ಬಿದ್ದು ನರಳುತ್ತಿರುವ ನಮ್ಮನ್ನು ಪಾರುಮಾಡು ಎಂಬ ಅರ್ಥವುಳ್ಳ ಈ ಮಂತ್ರಪೂರ್ವಕವಾಗಿ ಆಸೂರ್ಯಪ್ರತಿಮೆಯನ್ನು ಬ್ರಾಹ್ಮಣನಿಗೆ ದಾನಮಾಡಬೇಕು.

೮. ಅಯ್ಯಾ ಯುಧಿಷ್ಠಿರನೇ! ಈರೀತಿ ಮಾಡಿದರೆ ಇದರಿಂದ ಉತ್ತಮವಾದ ದೇಹಾರೋಗ್ಯವೂ, ದ್ರವ್ಯಸಂಪತ್ತೂ, ಮತ್ತು ಪುತ್ರಪ್ರಾಪ್ತಿಯೂ ಉಂಟಾಗುವುದೆಂದು ಪುರಾಣವನ್ನು ತಿಳಿದ ಪ್ರಾಜ್ಞರು ಹೇಳುವರು. ಈ ವ್ರತವು ಅವಿಸಂವಾದಿಸ್ತೀ ವ್ರತವೆನಿಸಿ ಮಾನವರಿಗೆ ಶಾಂತಿ ಮತ್ತು ಪುಷ್ಟಿಗಳನ್ನುಂಟುಮಾಡುವುದು.

ಅವಿಸಂವಾದಿನೀ ಚೇಯಂ ಶಾಂತಿಪುಷ್ಟಿಪ್ರದಾ ನೃಣಾಂ ।
ತದ್ವಚ್ಚಿತ್ರಾಸು ಸಂಗೃಹ್ಯ ಸೋಮವಾರಂ ವಿಚಕ್ಷಣಃ ॥ ೯ ॥

ಸಪ್ತಮೇ ಚ ತತಃ ಪ್ರಾಪ್ತೇ ದತ್ವಾ ಬ್ರಾಹ್ಮಣಭೋಜನಂ ।
ಕಾಂಸ್ಯಭಾಜನಸಂಸ್ಥಂ ವಾ ರಾಜತಂ ರಾಜತೇಽಥ ವಾ ॥ ೧೦ ॥

ಪಾತ್ರೇ ಕೃತ್ವಾ ಸೋಮರಾಜಂ ಶ್ವೇತವಸ್ತ್ರಾವಗುಂಠಿತಂ ।
ಪಾದುಕೋಪಾನಹಚ್ಛತ್ರಭಾಜನಾಸನಸಂಯುತಂ ॥ ೧೧ ॥

ದಧ್ಯನ್ನಶಿಖರಂ ದತ್ವಾ ಬ್ರಾಹ್ಮಣಾಯ ನಿವೇದಯೇತ್ ।
ಮಂತ್ರೇಣಾನೇನ ರಾಜೇಂದ್ರ ತಂ ಶೃಣುಷ್ವ ವದಾಮಿ ತೇ ॥ ೧೨ ॥

ಶ್ರೀಮಹಾಮಲ್ಲಿಕಾವಲ್ಲೀಪುಷ್ಪಗೋಕ್ಷೀರಪಾಂಡುರ ।
ಸೋಮ ಸೌಮ್ಯೋ ಭವಾಸ್ಮಾಕಂ ಸರ್ವದಾ ಹ್ಯುತ್ತಮೋತ್ತಮ ॥೧೩॥

---

೯–೧೨. ಹೀಗೆಯೇ ಚಿತ್ತಾನಕ್ಷತ್ರಯುಕ್ತವಾದ ಸೋಮವಾರದ ದಿವಸ ನಕ್ತವ್ರತ ಪರಿಗ್ರಹಮಾಡಿ, ಚಂದ್ರ (ಸೋಮ) ನನ್ನು ಪೂಜಿಸಬೇಕು. ಈ ವ್ರತ ವನ್ನೂ ಏಳುದಿವಸ ಮಾಡಬೇಕು. ಕೊನೆಯದಿವಸ ಎಂದರೆ ಏಳನೆಯದಿವಸ ಬ್ರಾಹ್ಮಣಭೋಜನವನ್ನು ಮಾಡಿಸಿ, ಅವರಿಂದ ಆಶೀರ್ವಚನವನ್ನು ಪಡೆದು ಬೆಳ್ಳಿಯಿಂದ ಮಾಡಿದ ಸೋಮಪ್ರತಿಮೆಯನ್ನು ತಾಮ್ರದ ಅಥವಾ ಬೆಳ್ಳಿಯ ಪಾತ್ರೆಯಲ್ಲಿಟ್ಟು ಪೂಜಿಸಿ, ಬಿಳಿಯವಸ್ತ್ರದಿಂದ ಅಲಂಕರಿಸಿ ಪಾದುಕೆ, ಛತ್ರಿ, ತಟ್ಟೆ, ಆಸನ, ಮೊಸರನ್ನ, ಇವನ್ನೂ, ಆ ಚಂದ್ರನ ಪ್ರತಿಮೆಯನ್ನೂ ಭಕ್ತಿಯಿಂದ ಬ್ರಾಹ್ಮಣನಿಗೆ ದಾನಮಾಡಬೇಕು.

೧೩. ಮಲ್ಲಿಕಾಪುಷ್ಪ ಹಸುವಿನಹಾಲು ಇವುಗಳಂತೆ ಶುಭ್ರವಾದ ಶರೀರ ಕಾಂತಿಯುಳ್ಳ ಸರ್ವಶ್ರೇಷ್ಠನಾದ ಚಂದ್ರನೇ! ನೀನು ಯಾವಾಗಲೂ ನಮ್ಮ ವಿಷಯದಲ್ಲಿ ಸೌಮ್ಯತೆಯಿಂದ ಇರುತ್ತಾ ನಮ್ಮನ್ನು ಕಾಪಾಡಬೇಕು. ಎಂಬ ಅರ್ಥವುಳ್ಳ ಈ ಮಂತ್ರಪೂರ್ವಕವಾಗಿ ದಾನಮಾಡಬೇಕು.

ಏವಂ ಕೃತೇ ಮಹಾರಾಜ ಸೋಮಸ್ತುಷ್ಟಿಪ್ರದೋ ಭವೇತ್ ।
ಭವಂತಿ ತುಷ್ಟೇಽತ್ರಿಸುತೇ ಸರ್ವೇ ಸಾನುಗ್ರಹಾ ಗ್ರಹಾಃ ॥ ೧೪ ॥

ಸ್ವಾತ್ಯಾಮಂಗಾರಕಂ ಗೃಹ್ಯ ಕ್ಷಪಯೇನ್ನಕ್ತಭೋಜನಃ ।
ಸಪ್ತಮೇ ತ್ವಥ ಸಂಪ್ರಾಪ್ತೇ ಸ್ಥಾಪಿತಂ ತಾಮ್ರಭಾಜನೇ ॥ ೧೫ ॥

ರಕ್ತವಸ್ತ್ರಯುಗಚ್ಛನ್ನಂ ಕುಂಕುಮೇನಾನುಲೇಪನಂ ।
ನೈವೇದ್ಯಂ ಹಂತಕಾರಂ ಚ ಪ್ರೂಜ್ಯ ಧೂಪಾಕ್ಷತಾದಿಭಿಃ ॥ ೧೬ ॥

ಮಂತ್ರೇಣಾನೇನ ತಂ ದದ್ಯಾದ್ಬ್ರಾಹ್ಮಣಾಯ ಕುಟುಂಬಿನೇ ।
ಕುಜನ್ಮಪ್ರಭವೋಽಪಿ ತ್ವಂ ಮಂಗಲಃ ಪಠ್ಯಸೇ ಬುಧೈಃ ॥
ಅಮಂಗಲಂ ನಿಹತ್ಯಾಶು ಸರ್ವದಾ ಯಚ್ಛ ಮಂಗಲಂ ॥ ೧೭ ॥

---

೧೪. ಹೀಗೆ ಚಂದ್ರನನ್ನು ಪೂಜಿಸಿ ಹಿಂದೆ ಹೇಳಿದ ಮಂತ್ರಪೂರ್ವಕ ಸೋಮಪ್ರತಿಮೆಯನ್ನು ಬ್ರಾಹ್ಮಣಗೆ ದಾನಮಾಡಬೇಕು. ಹೀಗೆ ಮಾಡಿದರೆ ಚಂದ್ರನು ತೃಪ್ತನಾಗಿ ಮನದ ಅಭೀಷ್ಟವನ್ನು ಕೊಡುವನು. ಅತ್ರಿಮಹರ್ಷಿ ಪುತ್ರನಾದ ಈ ಚಂದ್ರನು ತೃಪ್ತನಾದ ಮೇಲೆ ಇತರ ಎಲ್ಲ ಗ್ರಹಗಳೂ ತೃಪ್ತರಾಗುವರು. ಅಲ್ಲದೆ ಅನುಗ್ರಹೋನ್ಮುಖರೂ ಆಗುವರು. ಅಯ್ಯಾ ಮಹಾರಾಜನೇ! ಆದುದರಿಂದ ಚಂದ್ರನ ವ್ರತವು ಬಹು ಶ್ರೇಷ್ಠವಾದುದು.

೧೫–೧೬. ಸ್ವಾತೀನಕ್ಷತ್ರಯುಕವಾದ ಮಂಗಳವಾರದ ದಿವಸ ನಕ್ತಭೋಜನವಿಧಿಯಿಂದ ಅಂಗಾರಕನನ್ನು ಪೂಜಿಸಬೇಕು. ಏಳುದಿವಸಗಳು ಹೀಗೆ ಪೂಜೆಮಾಡಿ ಏಳನೆಯದಿವಸ ಅಂಗಾರಕ ಪ್ರತಿಮೆಯನ್ನು ತಾಮ್ರದ ತಟ್ಟೆಯಲ್ಲಿರಿಸಿ, ಕೆಂಪುವಸ್ತ್ರಗಳಿಂದ ಅಲಂಕರಿಸಿ ಕುಂಕುಮವನ್ನು ಆ ವಿಗ್ರಹಕ್ಕೆ ಲೇಪನಮಾಡಿ ಧೂಪ, ದೀಪ, ನೈವೇದ್ಯಗಳಿಂದ ಪೂಜಿಸಬೇಕು.

೧೭. ಸ್ವಾಮಿಯೇ! ನೀನು ಕುಜನ್ಮದಲ್ಲಿ ಜನಿಸಿದವನಾದರೂ ನಿನ್ನನ್ನು ಪ್ರಾಜ್ಞರು ಮಂಗಳನೆಂದು ಕರೆಯುವರು. ಎಲೈ ಮಂಗಳಕರನೇ! ನಮಗೆ ಈಗ ಉಂಟಾಗಿರುವ, ಮುಂದೆ ಉಂಟಾಗಬಹುದಾದ ಅಮಂಗಳವನ್ನು ಹೋಗಲಾಡಿಸಿ. ಸರ್ವದಾ ನಮಗೆ ಮಂಗಳ ಉಂಟಾಗುವಂತೆ ಕರುಣಿಸು. ಎಂಬ ಅರ್ಥವುಳ್ಳ ಈ ಮಂತ್ರಪೂರ್ವಕವಾಗಿ ಆ ವಿಗ್ರಹವನ್ನು ಸಂಸಾರಿಯಾದ ಬ್ರಾಹ್ಮಣನಿಗೆ ದಾನ ಮಾಡಬೇಕು.

ವಿಶಾಖಾಸು ಬುಧಂ ಗೃಹ್ಯ ಸಪ್ತನಕ್ತಾನ್ಯಥಾಚರೇತ್ ।
ಬುಧಂ ಹೇಮಮಯಂ ಕೃತ್ವಾ ಸ್ಥಾಪಿತಂ ಕಾಂಸ್ಯಭಾಜನೇ ॥ ೧೮ ॥

ಶುಕ್ಲವಸ್ತ್ರಯುಗಚ್ಛನ್ನಂ ಶುಕ್ಲಮಾಲ್ಯಾನುಲೇಪನೈಃ ।
ಗುಡೌದನೋಪಹಾರಂ ತು ಬ್ರಾಹ್ಮಣಾಯ ನಿವೇದಯೇತ್ ॥ ೧೯ ॥

ಬುಧಃ ಸದ್ಬುದ್ಧಿಜನನೋ ಬೋಧದಃ ಸರ್ವದಾ ನೃಣಾಂ ।
ತತ್ತ್ವಾವಬೋಧಂ ಕುರು ಮೇ ರಾಜಪುತ್ರ ನಮೋನಮಃ ॥ ೨೦ ॥

ಅನುರಾಧಾಸ್ವಥಾಚಾರ್ಯಂ ದೇವಾನಾಂ ಪೂಜ್ಯ ಭಕ್ತಿತಃ ।
ಪೂರ್ವೋಕ್ತಕ್ರಮಯೋಗೇನ ಸಪ್ತನಕ್ತಾನ್ಯಥಾಚರೇತ್ ॥ ೨೧ ॥

ಹೈಮಂ ಹೇಮಮಯೇ ಪಾತ್ರೇ ಸ್ಥಾಪಯಿತ್ವಾ ಬೃಹಸ್ಪತಿಂ ।
ಪೀತಾಂಬರಯುಗಚ್ಛನ್ನಂ ಪೀತಯಜ್ಞೋಪವೀತಿನಂ ॥ ೨೨ ॥

---

೧೮–೨೦. ವಿಶಾಖಾ ನಕ್ಷತ್ರಯುತವಾದ ಬುಧವಾರದ ದಿವಸ ಹಿಂದೆ ಸೂರ್ಯಾದಿಗಳ ಆರಾಧನೆಗಳಲ್ಲಿ ಹೇಳಿದಂತೆಯೇ ನಕ್ತವ್ರತಗಳನ್ನು ಆಚರಿಸುತ್ತಾ ಪೂಜಿಸಬೇಕು. ಏಳುದಿವಸ ಈ ನಕ್ತವ್ರತವನ್ನು ಆಚರಿಸಿದ ಮೇಲೆ ಚಿನ್ನದಿಂದ ಬುಧನ ವಿಗ್ರಹವನ್ನು ಮಾಡಿಸಿ ಅದನ್ನು ಕಂಚಿನ ತಟ್ಟೆಯಲ್ಲಿರಿಸಿ, ಆ ವಿಗ್ರಹಕ್ಕೆ ಎರಡು ಬಿಳಿಯವಸ್ತ್ರಗಳನ್ನು ಹೊದ್ದಿಸಿ, ಶ್ವೇತಪುಷ್ಪಮಾಲೆಗಳು, ಗಂಧ ಇವುಗಳನ್ನು ಪೂಜಿಸಿ, ಬೆಲ್ಲದ ಅನ್ನವನ್ನು ನಿವೇದನಮಾಡಬೇಕು. ಒಳ್ಳೆಯ ಬುದ್ಧಿಯನ್ನುಂಟುಮಾಡುವನೂ, ಯಾವಾಗಲೂ ಮಾನವರ ಜ್ಞಾನಾಭಿವೃದ್ಧಿಗೆ ಕಾರಣನೂ ಚಂದ್ರಪುತ್ರನೂ ಆದ ಬುಧದೇವನೇ! ನನಗೆ ತತ್ವಜ್ಞಾನವನ್ನುಂಟು ಮಾಡು. ನಿನ್ನನ್ನು ನಮಸ್ಕರಿಸುವೆನು ಎಂಬ ಅರ್ಥವುಳ್ಳ ಈ ಮಂತ್ರಪೂರ್ವಕ ವಾಗಿ ಆ ವಿಗ್ರಹವನ್ನು ಬ್ರಾಹ್ಮಣನಿಗೆ ದಾನಮಾಡಬೇಕು.

೨೧–೨೩. ಅನೂರಾಧಾ ನಕ್ಷತಯುತವಾದ ಗುರುವಾರದ ದಿವಸ ದೇವ ಗುರುವಾದ ಬೃಹಸ್ಪತಿಯನ್ನು ಹಿಂದೆ ಹೇಳಿದ ನಿಯಮದಂತೆ ಏಳು ನಕ್ತವ್ರತ ಗಳನ್ನು ಆಚರಿಸುತ್ತಾ ಭಕ್ತಿಯಿಂದ ಪೂಜಿಸಬೇಕು. ಚಿನ್ನದಿಂದ ಬೃಹಸ್ಪತಿ ಪ್ರತಿಮೆಯನ್ನು ಮಾಡಿಸಿ, ಚಿನ್ನದ ಪಾತ್ರೆಯಲ್ಲಿ ಸ್ಥಾಪಿಸಿ ಎರಡು ಪೀತಾಂಬರ ಗಳನ್ನೂ ಪೀತವರ್ಣದ ಯಜ್ಞೋಪವೀತಗಳನ್ನೂ ಆ ವಿಗ್ರಹಕ್ಕೆ ಅಲಂಕಾರ

ಪಾದುಕಾಚ್ಛತ್ರಸಹಿತಂ ಸದಂಡಂ ಸಕಮಂಡಲುಮ್ ।
ಸಂಪೂಜ್ಯ ಪುಷ್ಪನಿಕರೈರ್ದೀಪಧೂಪಾಕ್ಷತಾದಿಭಿಃ ॥ ೨೩ ॥

ಖಂಡಖಾದ್ಯೋಪಹಾರೈಶ್ಚ ದ್ವಿಜಾಯ ಪ್ರತಿಪಾದಯೇತ್ ।
ಧರ್ಮಶಾಸ್ತ್ರಾರ್ಥಶಾಸ್ತ್ರಜ್ಞ ಜ್ಞಾನವಿಜ್ಞಾನಪಾರಗ ॥
ಅಗಾಧಬುದ್ಧಿಗಾಂಭೀರ್ಯ ದೇವಾಚಾರ್ಯ ನಮೋಽಸ್ತು ತೇ ॥೨೪॥

ಶುಕ್ರಂ ಜ್ಯೇಷ್ಠಾಸು ಸಂಗೃಹ್ಯ ಕ್ಷಪಯೇನ್ನಕ್ತಭೋಜನೈಃ ।
ಪೂರ್ವೋಕ್ತಕ್ರಮಯೋಗೇನ ದ್ವಿಜಸಂತರ್ಪಣೇನ ಚ ॥ ೨೫ ॥

ಸಪ್ತಮೇ ತ್ವಥ ಸಂಪ್ರಾಪ್ತೇ ಸೌವರ್ಣಂ ಕಾರಯೇಚ್ಛುಭಂ ।
ರೌಪ್ಯೇ ವಾ ವಂಶಪಾತ್ರೇ ವಾ ಸ್ಥಾಪಯಿತ್ವಾ ಭೃಗೋಃ ಸುತಂ ॥೨೬॥

ಸಂಪೂಜ್ಯ ಪರಯಾ ಭಕ್ತ್ಯಾ ಶ್ವೇತವಸ್ತ್ರವಿಲೇಪನೈಃ ।
ಅಗ್ರೇ ತಸ್ಯ ಪ್ರದಾತವ್ಯಂ ಪಾಯಸಂ ಘೃತಸಂಯುತಂ ॥ ೨೭ ॥

---

ಮಾಡಬೇಕು. ಅನಂತರ ಛತ್ರಿ, ಪಾದುಕೆ, ಕಮಂಡಲು, ದಂಡ ಇವುಗಳ ಸಮೇತ ಆ ಬೃಹಸ್ಪತಿಯ ವಿಗ್ರಹವನ್ನು ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯಾದಿಗಳಿಂದ ಪೂಜಿಸಿ.

೨೪. ಧರ್ಮಶಾಸ್ತ್ರದ ತತ್ವವನ್ನು ಅರಿತವನೂ, ಜ್ಞಾನವಿಜ್ಞಾನಪಾರಂಗತನೂ, ಅಪಾರಬುದ್ಧಿಸಂಪನ್ನನೂ, ಗಂಭೀರನೂ, ದೇವಗುರುವೂ, ಆದ ಬೃಹಸ್ಪತಿಯೇ! ನಿನಗೆ ನಮಸ್ಕಾರ ಎಂಬ ಅರ್ಥವುಳ್ಳ ಈ ಮಂತ್ರಪೂರ್ವಕವಾಗಿ ಸತ್ಪಾತ್ರನಾದ ವಿಪ್ರೋತ್ತಮನಿಗೆ ಛತ್ರಿ, ಪಾದುಕಾದಿಗಳ ಸಮೇತ ಆ ವಿಗ್ರಹವನ್ನು ದಾನಮಾಡಬೇಕು.

೨೫–೨೭. ಜ್ಯೇಷ್ಠಾನಕ್ಷತ್ರಯುಕ್ತವಾದ ಶುಕ್ರವಾರದ ದಿವಸ ಪೂರ್ವೋಕ್ತ ಕ್ರಮದಂತೆಯೇ ನಕ್ತವ್ರತವನ್ನು ಆಚರಿಸುತ್ತಾ. ಶುಕ್ರಗ್ರಹಾರಾಧನಮಾಡಬೇಕು. ಬ್ರಾಹ್ಮಣ ಸಂತರ್ಪಣಾದಿಗಳನ್ನು ನಡೆಸುತ್ತಾ ಏಳು ನಕ್ತವ್ರತಗಳನ್ನು ನಿಯಮದಿಂದ ಮಾಡಬೇಕು. ಏಳನೆಯದಿನ ಚಿನ್ನದಿಂದ ಶುಕ್ರನ ಪ್ರತಿಮೆಯನ್ನು ಮಾಡಿಸಿ, ಬೆಳ್ಳಿಯ ಪಾತ್ರೆಯಲ್ಲೋ ಅಥವಾ ಬಿದಿರು ತಟ್ಟೆಯಲ್ಲಿಯೋ ಇರಿಸಿ, ಬಿಳಿಯ ವಸ್ತ್ರಗಳು, ಶ್ರೀಗಂಧ ಮುಂತಾದುವುಗಳನ್ನು ಸಮರ್ಪಿಸಿ, ಘೃತಮಿಶ್ರವಾದ

ದದ್ಯಾದನೇನ ಮಂತ್ರೇಣ ಬ್ರಾಹ್ಮಣಾಯ ವಿಚಕ್ಷಣಃ ।
ಭಾರ್ಗವೋ ಭೃಗುಪುತ್ರೋಽಸಿ ಶುಕ್ರ ಕ್ರಮವಿಶಾರದ ॥ ೨೮ ॥

ಹತ್ವಾ ಗ್ರಹಕೃತಾನ್ದೋಷಾನಾಯುರಾರೋಗ್ಯದೋ ಭವ ॥ ೨೯ ॥

ಮೂಲೇನ ಸೂರ್ಯತನಯಂ ಗೃಹೀತ್ವಾ ಭರತರ್ಷಭ ।
ತಸ್ಮಿನ್ದಿನೇ ಪೂಜನೀಯಂ ಗ್ರಹತ್ರಿತಯಮಾದರಾತ್ ।
ಶನೈಶ್ಚರಶ್ಚ ರಾಹುಶ್ಚ ಕೇತುಶ್ಚೇತಿ ಕ್ರಮಾನ್ನೃಪ ॥ ೩೦ ॥

ಹೋಮಂ ತಿಲಘೃತೈಃ ಕುರ್ಯಾದ್ಗ್ರಹನ್ನಾಮಾ ತು ಮಂತ್ರವಿತ್ ।
ಅರ್ಕಃ ಪಲಾಶಖದಿರೌ ಹ್ಯಪಾಮಾರ್ಗೋಽಥ ಪಿಪ್ಪಲಃ ॥ ೩೧ ॥

ಉದುಂಬರಶಮೀದೂರ್ವಾಕುಶಾಶ್ಚ ಸಮಿಧಃ ಕ್ರಮಾತ್ ।
ಏಕೈಕಸ್ಯ ತ್ವಷ್ಟಶತಮಷ್ಟಾವಿಂಶತಿರೇವ ವಾ ॥ ೩೨ ॥

---

ಪಾಯಸವನ್ನು ನಿವೇದನಮಾಡಬೇಕು. ಬಳಿಕ ಪ್ರಾಜ್ಞನಾದ ಕರ್ತೃವು ಮಂತ್ರಪೂರ್ವಕವಾಗಿ ಸತ್ಪಾತ್ರನಾದ ವಿಪ್ರನಿಗೆ "ಭೃಗುಮಹರ್ಷಿಪುತ್ರನೂ ಭಾರ್ಗವನೆಂದು ಕರೆಯಲ್ಪಡುವವನೂ, ಕ್ರಮಪಾಠದಲ್ಲಿ ಪಂಡಿತನೂ ಆದ ಶುಕ್ರದೇವನೇ! ಗ್ರಹಾರಾಧನ ಅನಾದರಾದಿ ದೋಷಗಳೆಲ್ಲವನ್ನು ಪರಿಹರಿಸಿ ನನಗೆ ಆಯುರಾರೋಗ್ಯವುಂಟಾಗುವಂತೆ ಕರುಣಿಸು" ಎಂಬ ಅರ್ಥವುಳ್ಳ ಮಂತ್ರಪೂರ್ವಕವಾಗಿ ಸತ್ಪಾತ್ರನಾದ ವಿಪ್ರನಿಗೆ ಶುಕ್ರನ ಪ್ರತಿಮೆಯನ್ನು ದಾನಮಾಡಬೇಕು.

೩೦–೩೭. ಅಯ್ಯಾ ಭರತಕುಲಶ್ರೇಷ್ಠನೇ! ಮೂಲಾ ನಕ್ಷತ್ರಯುಕ್ತವಾದ ಶನಿವಾರದ ದಿವಸ ಶನೈಶ್ಚರನನ್ನೂ ಕೇತುಗಳನ್ನೂ ಕ್ರಮವಾಗಿ ಆದರದಿಂದ ಪೂಜಿಸಬೇಕು. ಮಂತ್ರಜ್ಞನಾದ ಯಜಮಾನನು ಆಯಾ ಗ್ರಹಗಳ ಹೆಸರುಗಳನ್ನುಚ್ಚರಿಸುತ್ತಾ ಎಳ್ಳು ತುಪ್ಪ ಇವುಗಳ ಮಿಶ್ರಣದ ಆಹುತಿಯನ್ನು ಹೋಮಮಾಡಬೇಕು.

ಸೂರ್ಯಗ್ರಹಕ್ಕೆ ಎಕ್ಕದ ಸಮಿತ್ತು, ಚಂದ್ರಗ್ರಹಕ್ಕೆ ಮುತ್ತುಗದ ಸಮಿತ್ತು, ಅಂಗಾರಕಗ್ರಹಕ್ಕೆ ಕಗ್ಗಲಿಯ ಸಮಿತ್ತು, ಬುಧಗ್ರಹಕ್ಕೆ ಅಪಾಮಾರ್ಗ (ಉತ್ತರಣೇ) ಸಮಿತ್ತು, ಬೃಹಸ್ಪತಿಗ್ರಹಕ್ಕೆ (ಪಿಪ್ಪಲ) ಅರಳಿಯ ಸಮಿತ್ತು, ಶುಕ್ರಗ್ರಹಕ್ಕೆ ಅತ್ತಿಯ

ಹೋತವ್ಯಂ ಮಧುಸರ್ಪಿರ್ಭ್ಯಾಂ ದಧ್ನಾ ವಾ ಪಾಯಸೇನ ವಾ ।
ಸಪ್ತಮೇ ತ್ವಥ ಸಂಪ್ರಾಪ್ತೇ ನಕ್ತಂ ಸೂರ್ಯಸುತಸ್ಯ ತು || ೩೩ ||

ಗ್ರಹಾಸ್ತ್ರಯೋಽಪಿ ಕರ್ತವ್ಯಾ ರಾಜಲ್ಲೋಹಮಯಾಃ ಶುಭಾಃ ।
ವ್ರತಾಂತೇ ಸರ್ವತಶ್ಚೈತಾನ್ಸೌವರ್ಣಾನ್ವಾಥ ಕಾರಯೇತ್ || ೩೪ ||

ಕೃಷ್ಣವಸ್ತ್ರಯುಗಂ ದದ್ಯಾದೇಕೈಕಸ್ಯ ಕ್ರಮಾನ್ನೃಪ ।
ಮೃಗನಾಭ್ಯಾ ಸಮಾಲಭ್ಯ ಕೃಶರಾನ್ನಿನಿವೇದ್ಯ ಚ || ೩೫ ||

ಹೋಮಾವಸಾನೇ ಸರ್ವಂ ತದ್ಬ್ರಾಹ್ಮಣಾಯೋಪಪಾದಯೇತ್ ।
ಶನೈಶ್ಚರ ನಮಸ್ತೇಽಸ್ತು ನಮೋಽಸ್ತು ರಾಹವೇ ತಥಾ || ೩೬ ||

ಕೇತವೇ ಚ ನಮಸ್ತುಭ್ಯಂ ಸರ್ವಶಾಂತಿಪ್ರದೋ ಭವ ।
ಏವಂ ಕೃತೇ ಭವೇದ್ಯಸ್ತು ತನ್ನಿಬೋಧ ನರೇಶ್ವರ || ೩೭ ||

---

ಸಮಿತ್ತು, ಶನಿಗ್ರಹಕ್ಕೆ ಬನ್ನಿಯ ಸಮಿತ್ತು, ರಾಹುವಿಗೆ ಗರಿಕೆ, ಕೇತುವಿಗೆ ದರ್ಭೆ ಇವುಗಳನ್ನು ಒಂದೊಂದು ಗ್ರಹಕ್ಕೆ ಎಂಟುನೂರರಂತೆ ಹೋಮಮಾಡಬೇಕು. ಅಷ್ಟು ಸಾಧ್ಯವಿಲ್ಲದಿದ್ದರೆ ಇಪ್ಪತ್ತೆಂಟು ಸಮಿತ್ತುಗಳನ್ನಾದರೂ ಹೋಮಮಾಡಬಹುದು. ಜೇನುತುಪ್ಪ, ಮೊಸರು, ತುಪ್ಪ, ಪಾಯಸ, ಇವುಗಳಲ್ಲಿ ಒಂದನ್ನು ಸಮಿತ್ತಿನೊಡನೆ ಹೋಮಮಾಡಬಹುದು. ಹಿಂದೆ ಹೇಳಿದಂತೆ ಶನಿ, ರಾಹು, ಕೇತು, ಈ ಮೂರು ಗ್ರಹಗಳಿಗೂ ಏಳುದಿವಸ ನಕ್ತವಿಧಿಯನ್ನನುಸರಿಸಿ ಪೂಜೆ ಮಾಡಿ, ಏಳನೆಯದಿನ ರಾತ್ರಿ ಶುಭಕರವಾದ ಕಬ್ಬಿಣದ ಪ್ರತಿಮೆಗಳನ್ನು ಮಾಡಿಸಿ, ಪೂಜೆಮಾಡಬೇಕು. ಏಳು ನಕ್ತವ್ರತವೂ ಸಾಂಗವಾಗಿ ನೆರವೇರಿದ ಮೇಲೆ ಚಿನ್ನದಿಂದ ಶನಿ, ರಾಹು, ಕೇತು, ಈ ಗ್ರಹಗಳ ಪ್ರತಿಮೆಯನ್ನು ಮಾಡಿಸಿ, ಕಪ್ಪುಬಟ್ಟೆಗಳನ್ನು ಹೊದ್ದಿಸಿ, ಕಸ್ತೂರಿಯನ್ನು ಲೇಪನಮಾಡಿ, ಚಿಗಳಿಯನ್ನು ನಿವೇದನಮಾಡಬೇಕು. ಹಿಂದೆ ಹೇಳಿದಂತೆ ಹೋಮ ಮಾಡಿದನಂತರ ಎಲೈ ಶನೈಶ್ಚರನೇ! ರಾಹುಕೇತುಗ್ರಹಗಳೇ! ನಿಮಗೆ ನಮಸ್ಕಾರ. ನನಗೆ ಸಕಲ ಶಾಂತಿಗಳೂ ಉಂಟಾಗುವಂತೆ ಕರುಣಿಸಿ'' ಎಂಬ ಅರ್ಥವುಳ್ಳ ಮಂತ್ರಪೂರ್ವಕವಾಗಿ ಆ ಶನಿ ಮುಂತಾದ ಗ್ರಹಗಳ ಸ್ವರ್ಣಪ್ರತಿಮೆಗಳನ್ನು ಕಲಶ ವಸ್ತ್ರಾದಿಗಳೊಡನೆ ಯೋಗ್ಯರಾದ ಬ್ರಾಹ್ಮಣರಿಗೆ ದಾನಮಾಡಬೇಕು.

ಯದಿ ಭೌಮೋ ರವಿಸುತೋ ಭಾಸ್ಕರೋ ರಾಹುಣಾ ಸಹ ।
ಕೇತುಶ್ಚ ಮೂರ್ಧ್ನಿ ತಿಷ್ಠಂತಿ ಸರ್ವೇ ಪೀಡಾಕರಾ ಗ್ರಹಾಃ ॥ ೩೮ ॥

ಅನೇನ ಕೃತಮಾತ್ರೇಣ ಸರ್ವೇ ಶಾಮ್ಯಂತ್ಯುಪದ್ರವಾಃ ॥ ೩೯ ॥

ಏವಂ ಯಃ ಕುರುತೇ ರಾಜನ್ಸದಾಭಕ್ತಿಸಮನ್ವಿತಃ ।
ತಸ್ಯ ಸಾನುಗ್ರಹಾಃ ಸರ್ವೇ ಯಚ್ಛಂತಿ ವಿಜಯಂ ಸುಖಂ ॥ ೪೦ ॥

ಯಶ್ಚೈತಚ್ಛೃಣುಯಾತ್ಕಲ್ಪಂ ಗ್ರಹಾಣಾಂ ಪಠತೇಽಪಿ ವಾ ।
ತಸ್ಯ ಸಾನುಗ್ರಹಾಃ ಸರ್ವೇ ಶಾಂತಿಂ ಯಚ್ಛಂತಿ ನಾನ್ಯಥಾ ॥ ೪೧ ॥

ಶನೈಶ್ಚರಂ ರಾಹುಕೇತೂ ಲೋಹಪಾತ್ರೇಷು ವಿನ್ಯಸೇತ್ ।
ಕೃಷ್ಣಾಗರುಃ ಸ್ಮೃತೋ ಧೂಪೋ ದಕ್ಷಿಣಾ ಚಾತ್ಮ ಶಕ್ತಿತಃ ॥ ೪೨ ॥

---

೩೮-೩೯. ಈರೀತಿ ಮಾಡಿದರೆ ಲಭಿಸುವ ಫಲಗಳನ್ನು ಹೇಳುವೆನು ಕೇಳು. ಅಂಗಾರಕ, ಶನಿ, ಸೂರ್ಯ, ಕೇತು ಇವರು ರಾಹುವಿನೊಡನೆ ಇದ್ದರೆ ಕ್ರೂರವಾದ ಫಲವನ್ನುಂಟುಮಾಡುತ್ತಾರೆ. ಹೀಗೆ ಪೀಡಾಕಾರಕಗ್ರಹವುಳ್ಳವರು ಈಗ ಹೇಳಿದಂತೆ ನಿಯಮದಿಂದ ವ್ರತವನ್ನಾಚರಿಸಿದರೆ ಅದರಿಂದುಂಟಾಗುವ ಪೀಡೆಗಳೆಲ್ಲವೂ ಪರಿಹಾರವಾಗುವುವು.

೪೦. ಅಯ್ಯಾ ರಾಜನೇ! ಈರೀತಿ ಭಕ್ತಿಯಿಂದ ಗ್ರಹಗಳ ವ್ರತಗಳನ್ನು ಮಾಡುವವನಿಗೆ, ಎಲ್ಲಾ ಗ್ರಹಗಳೂ ಅನುಗ್ರಹೋನ್ಮುಖರಾಗಿ ಸದಾ ವಿಜಯ ವನ್ನುಂಟುಮಾಡುವುವು.

೪೧. ಇಲ್ಲಿ ವಿವರಿಸಿರುವ ಗ್ರಹಪೂಜಾಕಲ್ಪವನ್ನು ಶ್ರವಣಮಾಡಿದವನೂ, ಪಠನಮಾಡುವವನೂ ಆದಿತ್ಯಾದಿ ನವಗ್ರಹಗಳ ಅನುಗ್ರಹವನ್ನು ಪಡೆದು, ಎಂದೂ ದುಃಖವನ್ನೇ ಕಾಣದೆ, ಸದಾ ಸುಖಶಾಂತಿಗಳನ್ನು ಅನುಭವಿಸುವನು.

೪೨. ಶನೈಶ್ಚರ, ರಾಹು, ಕೇತು ಗ್ರಹಗಳ ಪ್ರತಿಮೆಗಳನ್ನು ಕಬ್ಬಿಣದ ಪಾತ್ರೆಯಲ್ಲಿರಿಸಿ ಪೂಜಿಸಿ, ಕೃಷ್ಣಾಗರುಧೂಪವನ್ನು ಉಪಯೋಗಿಸಬೇಕು. ದಾನಕೊಡುವಾಗ ಎಲ್ಲಾ ಗ್ರಹಗಳಿಗೆ ಕೊಟ್ಟಂತೆಯೇ ಶಕ್ತ್ಯನುಸಾರ ದಕ್ಷಿಣೆ ಯನ್ನು ಕೊಡಬೇಕು.

ಸೂರ್ಯಂ ವಿಧುಂ ಕುಜಬುಧೌ ಗುರುಶುಕ್ರಸೌರೀನ್ ।
ಹಸ್ತಾದಿಕರ್ಕ್ಷಸಹಿತಾನುದಿತಕ್ರಮೇಣ ॥
ಸಂಪೂಜ್ಯ ಹೇಮಘಟಿತಾನ್ದ್ವಿಜಪುಂಗವಾಯ ।
ದತ್ವಾ ಪುಮಾನ್ಗ್ರಹಗಣೇನ ನ ಪೀಡ್ಯತೇಽತ್ರ ॥ ೪೩ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಗ್ರಹನಕ್ಷತ್ರ ವ್ರತವರ್ಣನಂ ನಾಮ ತ್ರಯೋದಶೋತ್ತರಶತತಮೋಽಧ್ಯಾಯಃ.



---

೪೩. ಸೂರ್ಯ, ಚಂದ್ರ, ಕುಜ, ಬುಧ, ಗುರು, ಶುಕ್ರ, ಶನೈಶ್ಚರ, ರಾಹು, ಕೇತು ಈ ಗ್ರಹಗಳನ್ನು ಕ್ರಮವಾಗಿ ಹಸ್ತ ಮುಂತಾದ ಉಕ್ತ ನಕ್ಷತ್ರಗಳ ದಿನದಲ್ಲಿ ಸ್ವರ್ಣ ಪ್ರತಿಮೆಮಾಡಿಸಿ ಭಕ್ತಿಯಿಂದ ಪೂಜೆಮಾಡಿದನಂತರ ಅವುಗಳನ್ನು ಬ್ರಾಹ್ಮಣೋತ್ತಮನಿಗೆ ಯಥಾಶಕ್ತಿ ದಕ್ಷಿಣಾಸಮೇತ ದಾನಮಾಡಿದರೆ ಆ ಮಾನವನಿಗೆ ಯಾವ ಗ್ರಹಗಳ ಪೀಡೆಯೂ ಉಂಟಾಗದೆ ಸುಖದಿಂದ ಜೀವಿಸುವನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಗ್ರಹನಕ್ಷತ್ರ ವ್ರತ ವರ್ಣನೆಯೆಂಬ ನೂರಹದಿಮೂರನೆಯ ಅಧ್ಯಾಯ ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣ
## ಉತ್ತರಪರ್ವಣಿ
## ಚತುರ್ದಶೋತ್ತರಶತತಮೋಽಧ್ಯಾಯಃ

॥ ಶ್ರೀಕೃಷ್ಣ ಉವಾಚ ॥

ಪುರಾ ತ್ರೇತಾಯುಗೇ ಪಾರ್ಥ ನಾವರ್ಷತ್ಪಾಕಶಾಸನಃ ।
ಕಥಂಚಿದನಯಾದ್ರಾಜ್ಞಸ್ತಸ್ಯ ರಾಷ್ಟ್ರೇ ಸಮಂತತಃ ॥ ೧ ॥

ತತೋ ರಾಷ್ಟ್ರಂ ಕ್ಷುಧಾವಿಷ್ಟಂ ಬಭೂವಾತೀವದಾರುಣಂ ।
ಪತಂಗಮೂಷಿಕಾಕೀರ್ಣಂ ಚೌರವ್ಯಾಲಭಯಾಕುಲಂ ॥ ೨ ॥

ತಸ್ಮಿನ್ಘೋರಾಕುಲೇ ಕಾಲೇ ಸಪತ್ನೀಕಃ ಸಬಾಲಕಃ ।
ಕೌಶಿಕಃ ಸ್ವಗೃಹಂ ತ್ಯಕ್ತ್ವಾ ಪರರಾಷ್ಟ್ರಮುಗಾಚ್ಛನೈಃ ॥ ೩ ॥

---

## ನೂರಹದಿನಾಲ್ಕನೆಯ ಅಧ್ಯಾಯ

೧–೨. ಶ್ರೀಕೃಷ್ಣನು ಹೇಳುತ್ತಾನೆ—ಎಲೈ ಕುಂತೀಪುತ್ರನೇ! ಹಿಂದೆ ತ್ರೇತಾಯುಗದಲ್ಲಿ ಒಬ್ಬ ರಾಜನಿದ್ದನು. ಅವನು ವಿಹಿತವಾಗಿ ರಾಜ್ಯಭಾರ ಮಾಡದೆ ಹೋದುದರಿಂದ ಅವನ ರಾಜ್ಯದಲ್ಲಿ ಮಳೆಯೇ ಆಗದೆ, ಜನಗಳಿಗೆ ಧಾನ್ಯಾದಿಗಳು ದೊರೆಯದೆ ಹಸಿವಿನಿಂದ ಸೊರಗಿದರು. ರಾಜ್ಯವು ತುಂಬಾ ಶೋಚನೀಯಸ್ಥಿತಿಗೆ ಬಂದಿತು. ಪಕ್ಷಿಗಳೂ ಇಲಿಗಳೂ ಹೆಚ್ಚಿದುವು. ಕಳ್ಳರ ಕಾಟ, ಕ್ರೂರಮೃಗಗಳ ಬಾಧೆ, ಮುಂತಾದುವು ಅಸಾಧ್ಯವಾಗಿ ಪರಿಣಮಿಸಿದುವು.

೩. ಇಂತಹ ಘೋರವಾದ ಕಾಲದಲ್ಲಿ ಕೌಶಿಕಮುನಿಯು ಪತ್ನೀಪುತ್ರ ಸಮೇತನಾಗಿ ನನ್ನ ನಿವಾಸವನ್ನು ಬಿಟ್ಟು ಬೇರೆ ದೇಶಕ್ಕೆ ಹೋಗಬೇಕೆಂದು ಮೆಲ್ಲನೆ ಸಾಗಿದನು.

ಮಾರ್ಗೇಽಥ ಗಚ್ಛತಾ ತೇನ ಕೌಶಿಕೇನ ಮಹರ್ಷಿಣಾ ।
ತ್ಯಕ್ತಃ ಸ ಬಾಲಕೋ ಹ್ಯೇಕೋ ದುರ್ಭರಂ ಚ ಕುಟುಂಬಕಂ ॥ ೪ ॥

ತಸ್ಮಿನ್ಕಾಲೇ ವಿಶೇಷೇಣ ಕ್ಷೀಣೇನ್ನೌಷಧಿಸಂಚಯೇ ।
ಕೃತ್ವಾತಿನಿರ್ಘೃಣಂ ಕರ್ಮ ಗತೋಽಸೌ ಕೌಶಿಕೋ ಮುನಿಃ ॥ ೫ ॥

ಸೋಽಪಿ ಬಾಲೋಽರುದನ್ದೀನಃ ದಿಶೋ ವೀಕ್ಷ್ಯ ಸ್ಥಿತಃ ಪಥಿ ।
ಉತ್ಥಾಯ ಪಿಪ್ಪಲಸ್ಯಾಧಃ ಫಲಾನ್ಯತ್ತುಂ ಪ್ರಚಕ್ರಮೇ ॥ ೬ ॥

ಕೂಪೇ ಜಲಂ ಪಪೌ ನಿತ್ಯಂ ತತ್ರೈವಾಶ್ರಮಮಂಡಲೇ ।
ಕೃತ್ವಾ ಸಮ್ಯಕ್ಸ್ಥಿತೋ ರೌದ್ರಂ ತೇಪೇ ಚ ವಿಪುಲಂ ತಪಃ ॥ ೭ ॥

---

೪. ಬರುತ್ತಾ ಇರುವಾಗ ಮಾರ್ಗದಲ್ಲಿ ಆ ಮಹರ್ಷಿಯು, ತನ್ನ ಮಗನನ್ನೂ, ಪತ್ನಿಯನ್ನೂ ಸಲಹಲು ಅಶಕ್ತನಾಗಿ, ಬಾಲಕನನ್ನು ಅಲ್ಲಿಯೇ ಬಿಟ್ಟು, ಇನ್ನು ಕೊಂಚ ಮುಂದೆ ಪತ್ನಿಯನ್ನೂ ಬಿಟ್ಟು ಹೊರಟನು.

೫. ಅನ್ನವಾಗಲಿ ಸಸ್ಯಗಳಾಗಲಿ ದೊರೆಯದೆ ಇರುವ ಘೋರವಾದ ಈ ಸನ್ನಿವೇಶದಲ್ಲಿ ಈ ಕೌಶಿಕಮುನಿಯು ಪತ್ನೀಪುತ್ರರನ್ನು ಕೈಬಿಡುವಂಥ ಕ್ರೂರಕರ್ಮಮಾಡಿ, ತಾನು ಮಾತ್ರ ಹೊರಟು ಹೋದನು.

೬. ತಂದೆಯು ಬಿಟ್ಟುಹೋದ ಮೇಲೆ ಆ ಕೌಶಿಕಮುನಿಪುತ್ರನು ದಿಕ್ಕು ದಿಕ್ಕುಗಳನ್ನು ನೋಡಿ ಅಳುತ್ತಾ, ಹಾಗೆಯೇ ದಾರಿಯಲ್ಲಿ ಸ್ವಲ್ಪದೂರ ಮುಂದೆ ಬಂದು, ಒಂದು ಅರಳಿಯ ಮರದ ಕೆಳಗೆ ಬಿದ್ದಿರುವ ಹಣ್ಣುಗಳನ್ನು ತಿನ್ನಲು ಪ್ರಾರಂಭಿಸಿದನು.

೭. ಅಲ್ಲಿಯೇ ಸಮೀಪದಲ್ಲಿದ್ದ ಭಾವಿಯಲ್ಲಿ ನೀರು ಕುಡಿಯುವುದು, ಆ ಹಣ್ಣು ತಿನ್ನುವುದು, ಈರೀತಿ ಮಾಡಿಕೊಂಡು ಆ ಆಶ್ರಮಗಳ ಬಳಿ ವಾಸವಾಗಿರುತ್ತಾ, ಚಿರಕಾಲ ಘೋರವಾದ ತಪಸ್ಸನ್ನು ಆಚರಿಸಿದನು.

ಅಥಾಜಗಾಮ ಭಗವಾನ್ನಾರದೋ ವೇದಪಾರಗಃ ।
ತಂ ದೃಷ್ಟ್ವಾ ದೀನವದನಂ ಕ್ಷುಧಾರ್ತಂ ದ್ವಿಜಪೋತಕಂ ॥ ೮ ॥

ದಯಯಾ ತಸ್ಯ ಸಂಸ್ಕಾರಂ ಚಕ್ರೇ ಮೌಂಜ್ಯಾದಿಬಂಧನಂ ।
ವೇದಾನಧ್ಯಾಪಯಾಮಾಸ ಸರಹಸ್ಯಪದಕ್ರಮಾನ್ ।
ದದೌ ಚ ವೈಷ್ಣವಂ ಮಂತ್ರಂ ದ್ವಾದಶಾಕ್ಷರಮಿತ್ಯುತ ॥ ೯ ॥

ವೇದಾಭ್ಯಾಸರತಸ್ಯಾಸ್ಯ ವಿಷ್ಣುಧ್ಯಾನಪರಸ್ಯ ಚ ।
ಪ್ರತ್ಯಹಂ ಪಿಪ್ಪಲಾದಸ್ಯ ವಿಷ್ಣುಃ ಪ್ರತ್ಯಕ್ಷತಾಂ ಯಯೌ ॥ ೧೦ ॥

ವೈನತೇಯಸಮಾರೂಢೋ ನೀಲೋತ್ಪಲದಲಚ್ಛವಿಃ ।
ಚತುರ್ಭುಜಃ ಪೀತವಾಸಾಃ ಶಂಖಚಕ್ರಗದಾಧರಃ ॥ ೧೧ ॥

---

೮. ಈ ಬಾಲಕನು ಹೀಗೆ ತಪಸ್ಸುಮಾಡುತ್ತಿರಲು ಒಂದುದಿನ ದೇವರ್ಷಿಯೆನಿಸಿದ ನಾರದಮಹಾಮುನಿಯು ಅಲ್ಲಿಗೆ ಬಂದು, ಖಿನ್ನವಾದ ಮುಖವುಳ್ಳವನಾಗಿ, ಹಸಿವಿನಿಂದ ಬಳಲಿದ್ದ ಆ ಬಾಲಕನನ್ನು ನೋಡಿದನು.

೯. ಕೂಡಲೆ ನಾರದನಿಗೆ ಆ ಬಾಲಕನಲ್ಲಿ ದಯೆಯುಂಟಾಯಿತು. ಅನಂತರ ಆ ಬಾಲಕನಿಗೆ ಉಪವೀತಧಾರಣ, ಮೌಂಜಿಬಂಧನಾದಿ ಉಪನಯನ ಸಂಸ್ಕಾರವನ್ನು ನಡೆಯಿಸಿ, ರಹಸ್ಯವಾದ ಪದ ಕ್ರಮ ಪಾಠಗಳೊಡನೆ ಕ್ರಮವಾಗಿ ವೇಧಾಧ್ಯಯನ ಮಾಡಿಸಿದನು. ಅಲ್ಲದೆ ಹನ್ನೆರಡು ಅಕ್ಷರಗಳುಳ್ಳ ' ಓಂ ನಮೋ ಭಗವತೇ ವಾಸುದೇವಾಯ ' ಎಂಬ ವೈಷ್ಣವ ಮಂತ್ರವನ್ನು ಉಪದೇಶ ಮಾಡಿದನು.

೧೦. ಪ್ರತಿದಿನವೂ ಅರಳಿಯ ಹಣ್ಣನ್ನು ಸೇವಿಸುತ್ತಾ, ವೇದಾಧ್ಯಯನವನ್ನೂ, ದ್ವಾದಶಾಕ್ಷರೀ ವಿಷ್ಣುಮಂತ್ರ ಜಪವನ್ನೂ ಮಾಡುತ್ತಿರುವಲ್ಲಿ, ಕೆಲವು ಕಾಲದಲ್ಲಿ ಮಹಾವಿಷ್ಣುವು ಆ ಬಾಲಕನಿಗೆ ತಾನು ಪ್ರತ್ಯಕ್ಷನಾಗಬೇಕೆಂದು ಎಣಿಸಿ.

೧೧. ಗರುಡವಾಹನನೂ, ನೈದಿಲೆಯಂತೆ ದೇಹಕಾಂತಿಯುಳ್ಳವನೂ, ಚತುರ್ಭುಜನೂ, ಶಂಖಚಕ್ರಗದಾದಿ ಆಯುಧಗಳನ್ನು ಧರಿಸಿದವನೂ, ಪೀತಾಂಬರಧಾರಿಯೂ, ಆಗಿ ಆ ಬಾಲಕನಿಗೆ ದರ್ಶನಕೊಟ್ಟನು.

ಸ ಉವಾಚ ತದಾ ತುಷ್ಟೋ ವರಂ ಬ್ರೂಹಿ ಯಮಿಚ್ಛಸಿ ।
ತಚ್ಛ್ರುತ್ವಾ ನಾರದಮುಖಂ ಸಮಾಲೋಕ್ಯ ಶಿಶುಸ್ತದಾ ॥
ನಾರದೇನಾಪ್ಯನುಜ್ಞಾತೋ ಜ್ಞಾನವಿದ್ಯಾಮಯಾಚತ ॥ ೧೨ ॥

ದತ್ವಾ ಜ್ಞಾನಂ ಸೋಪದೇಶಂ ಯೋಗಾಭ್ಯಾಸಂ ಚ ನಿರ್ಮಲಂ ।
ನಾಗಾರಿಗಮನೋ ವಿಷ್ಣುಸ್ತತ್ರೈವಾಂತರ್ಹಿತೋಽಭವತ್ ॥ ೧೩ ॥

ತತೋ ರಾಜನ್ಮಹಾಜ್ಞಾನೀ ಮಹರ್ಷಿಸ್ಸಶಿಶುಸ್ತದಾ ।
ನಾರದಂ ಪರಿಪಪ್ರಚ್ಛ ಕೇನಾಹಂ ಪೀಡಿತೋ ಮುನೇ ॥ ೧೪ ॥

ಗ್ರಹೇಣಾಗ್ರಹಭೂತೇನ ಬಾಲರೂಪೋಽಪಿ ದುಃಖಿತಃ ।
ನ ಮೇ ಪಿತಾ ನ ಮೇ ಮಾತಾ ಜೀವಿತೋಽಸ್ಮ್ಯತಿಪೀಡಯಾ ॥ ೧೫ ॥

---

೧೨. ತಪಸ್ಸಿನಲ್ಲಿ ನಿರತನಾಗಿದ್ದ ಆ ಬಾಲಕನನ್ನು ನೋಡಿ, ಮಹಾವಿಷ್ಣುವು ಸಂತೋಷಹೊಂದಿ, ಆ ಬಾಲಕನನ್ನು ಕುರಿತು "ಅಯ್ಯಾ ಬಾಲಕನೇ! ನಿನಗೆ ಏನುಬೇಕು? ಕೇಳು, ಕೊಡುವೆನು." ಎಂದು ಹೇಳಲು ಬಾಲಕನು ನಾರದ ಮುನಿಯ ಮುಖವನ್ನು ನೋಡಿ ಅವನ ಅನುಜ್ಞೆ ಪಡೆದು "ಹೇ ಪರಮಾತ್ಮ! ನನಗೆ ಜ್ಞಾನವನ್ನು ಕರುಣಿಸು" ಎಂದು ಪ್ರಾರ್ಥಿಸಿದನು.

೧೩. ಆಗ ಗರುಡಗಮನನಾದ ಆ ಮಹಾವಿಷ್ಣುವು ದಿವ್ಯಜ್ಞಾನವನ್ನೂ ಪರಿಶುದ್ಧವಾದ ಯೋಗಾಭ್ಯಾಸವನ್ನೂ ಸಹ ಉಪದೇಶಿಸಿ, ಕೂಡಲೆ ಅಲ್ಲಿಯೇ ಅಂತರ್ಧಾನನಾದನು.

೧೪. ಅನಂತರ ಆ ಬಾಲಕನು ಮಹಾಜ್ಞಾನಿಯಾಗಿ ಮಹರ್ಷಿಯೆನಿಸಿದನು. ಬಳಿಕ ಆ ಬಾಲನು ನಾರದರನ್ನು ಕುರಿತು "ಋಷಿವರ್ಯರೆ! ಇಲ್ಲಿಯವರೆಗೆ ನಾನು ಯಾರ ಪೀಡೆಗೆ ಒಳಗಾಗಿದ್ದೆನು?"

೧೫. "ಯಾವ ಗ್ರಹವೋ ಆಗ್ರಹದಿಂದ ಯುಕ್ತವಾಗಿ, ನಾನು ಬಾಲಕನಾಗಿದ್ದರೂ ನನ್ನನ್ನು ದುಃಖಕ್ಕೆ ಒಳಗುಮಾಡಿತು. ತಂದೆ, ತಾಯಿ ಇವರ್‍ಯಾರ ಅವಲಂಬನವೂ ಇಲ್ಲದೆ, ಅತಿ ಕ್ಲೇಶದಿಂದ ಪಾರಾಗಿ ಬದುಕಿದೆನು."

ಬ್ರಾಹ್ಮಣ್ಯಂ ಭವತಾ ದತ್ತಂ ದೈವಾನ್ಮಮ ದ್ವಿಜೋತ್ತಮ ।
ಏತಚ್ಛ್ರುತ್ವಾ ಶಿಶೋರ್ವಾಕ್ಯಂ ಕಥಯಾಮಾಸ ನಾರದಃ ॥ ೧೬ ॥

ಶನೈಶ್ಚರೇಣ ಕ್ರೂರೇಣ ಗ್ರಹೇಣ ತ್ವಂ ಹಿ ಪೀಡಿತಃ ।
ಪೀಡಿತಶ್ಚ ಸಮಸ್ತೋಽಪಿ ದೇಶೋಽಯಂ ಮಂದಚಾರಿಣಾ ॥ ೧೭ ॥

ತೇನೈತತ್ತೇ ಫಲಂ ಪ್ರಾಪ್ತಂ ಸ್ವೈಷಃ ಸೌರಿಃ ಶನೈಶ್ಚರಃ ।
ಪ್ರಜ್ವಲನ್ನತಿದರ್ಪೇಣ ಸ್ಫುರತೀವ ನಭಸ್ಥಲೇ ॥ ೧೮ ॥

ಏವಮುಕ್ತಃ ಶಿಶುಃ ಕ್ರೋಧಾತ್ಪ್ರಜಜ್ವಾಲೇವ ಪಾವಕಃ ।
ಆಲೋಕ್ಯ ಗಗನಾದ್ಭೂಮೌ ಪಾತಯಾಮಾಸ ವೈ ಶನಿಂ ।
ಪತಮಾನೋ ಗಿರೇಃ ಶೃಂಗಾದ್ಭಗ್ನಃ ಖಂಜೋ ಬಭೂವ ಹ ॥ ೧೯ ॥

---

೧೬. "ಇಂತಹ ಸನ್ನಿವೇಶದಲ್ಲಿ ಭಗವಂತನಾದ ನೀನು ನನ್ನ ಭಾಗದ ದೈವವಾಗಿ ಉಪನಯನಾದಿ ಸಂಸ್ಕಾರಗಳನ್ನು ನಡೆಯಿಸಿ, ನನ್ನನ್ನು ಬ್ರಾಹ್ಮಣನನ್ನಾಗಿ ಮಾಡಿರುವೆ. ಎಲೈ ಋಷಿವರ್ಯರೇ! ನಾನು ಈ ಬಾಲ್ಯದಲ್ಲಿ ಅನುಭವಿಸಿದ ಕಷ್ಟಗಳಿಗೆ ಕಾರಣರು ಯಾರು? ದಯವಿಟ್ಟು ತಿಳಿಸಬೇಕು" ಎಂದು ಕೇಳಲು ಆ ಮಗುವಿನ ಮಾತನ್ನು ಕೇಳಿ ನಾರದರು ಹೇಳುತ್ತಾರೆ.

೧೭. "ಅಪ್ಪಾ ಮಗು! ಕ್ರೂರವಾದ ಶನೈಶ್ಚರಗ್ರಹವು ನಿನ್ನನ್ನು ಈರೀತಿ ಪೀಡಿಸಿತು. ಗರ್ವಿಷ್ಠನಾದ ಈ ಗ್ರಹದಿಂದಲೇ ಈ ದೇಶವೆಲ್ಲವೂ ಈಗ ಈರೀತಿಯಾಗಿ ಪೀಡೆಗೆ ಒಳಗಾಗಿದೆ."

೧೮. "ಈ ಮಹಾನುಭಾವನಿಂದಲೇ ನಿನಗೆ ಇಂತಹ ದುಷ್ಫಲವುಂಟಾಯಿತು. ಸೂರ್ಯಪುತ್ರನಾದ ಈತನು ಅತಿ ಗರ್ವದಿಂದ ಅಂತರಿಕ್ಷದಲ್ಲಿ ವಿಶೇಷವಾಗಿ ಪ್ರಕಾಶಿಸುತ್ತಿರುವನು" ಎಂದು ಹೇಳಿದನು.

೧೯. ಹೀಗೆ ನಾರದರು ಹೇಳಿದುದನ್ನು ಕೇಳಿ, ಆ ಬಾಲಕನು ಬಹಳ ಕೋಪದಿಂದ ಪ್ರಜ್ವಲಿಸುವ ಅಗ್ನಿಯೋ ಎಂಬಂತೆ ಒಂದುಸಾರಿ ಅಂತರಿಕ್ಷದ ಕಡೆ ನೋಡಿ, ಆ ಶನೈಶ್ಚರನನ್ನು ಆಕಾಶದಿಂದ ಭೂಮಿಗೆ ಬೀಳುವಂತೆ ಕೆಡವಿಬಿಟ್ಟನು. ಹೀಗೆ ಅಂತರಿಕ್ಷದಿಂದ ಬೀಳುವಾಗ ಶನಿಯು ಒಂದು ಪರ್ವತ ಶಿಖರದ ಮೇಲೆ ಬೀಳಲು, ಆಗ ಅವನ ಕಾಲು ಮುರಿದುಹೋಗಿ ಕುಂಟನಾದನು.

ಧರಣ್ಯಾಂ ಪತಿತಂ ದೃಷ್ಟ್ವಾ ಭಾಸ್ಕರಾತ್ಮಜಮಾತುರಂ ।
ನನರ್ತಿ ಭುಜಕ್ಷೇಪೈರ್ನಾರದೋ ಹೃಷ್ಟಮಾನಸಃ ॥ ೨೦ ॥

ಹರ್ಷಾದ್ದೇವಾನಥಾಹೂಯ ದರ್ಶಯಾಮಾಸ ತಂ ಶನಿಂ ॥ ೨೧ ॥

ಅಥ ದೇವಾಸ್ತಥಾ ಪ್ರಾಪ್ತಾ ಬ್ರಹ್ಮರುದ್ರೇಂದ್ರಪಾವಕಾಃ ।
ಶನೈಃ ಸಂಶಮಯಾಮಾಸುರೂಚುಶ್ಚೇದಮೃಷಿಂ ಚ ತಮ್ ॥ ೨೨ ॥

ಸ್ವಸ್ತಿ ತೇಽಸ್ತು ಮಹಾಭಾಗ ಪಿಪ್ಪಲಾದ ಮಹಾಮುನೇ ।
ಭದ್ರಂ ತೇಽತ್ರ ಕೃತಂ ನಾಮ ನಾರದೇನ ಮಹರ್ಷಿಣಾ ॥
ಅನ್ವರ್ಥಯುಕ್ತಂ ವಿಪ್ರೇಂದ್ರ ಜೀವಿತಂ ಪಿಪ್ಪಲಾದನಾತ್ ॥ ೨೩ ॥

ಭಗವನ್ಪಿಪ್ಪಲಾನ್ಯತ್ತ್ವಾ ಜೀವಿತೋಽಸಿ ಯತೋ ಮುನೇ ।
ತತಶ್ಚ ಪಿಪ್ಪಲಾದೇತಿ ಖ್ಯಾತಿಂ ಲೋಕೇ ಗಮಿಷ್ಯಸಿ ॥ ೨೪ ॥

---

೨೦. ಹೀಗೆ ಭೂಮಿಯ ಮೇಲೆ ಬಿದ್ದ ಸೂರ್ಯಕುಮಾರನಾದ ಶನಿಯನ್ನು ನೋಡಿ, ನಾರದನು ಸಂತೋಷಹೊಂದಿ, ತನ್ನ ಭುಜಗಳನ್ನು ಕುಣಿಸುತ್ತಾ ನರ್ತನಮಾಡಿದನು.

೨೧. ಅಷ್ಟೇ ಅಲ್ಲದೆ ಸಂತೋಷದಿಂದ ಕೂಡಲೆ ದೇವತೆಗಳನ್ನೆಲ್ಲಾ ಅಲ್ಲಿಗೆ ಕರೆಯಿಸಿ, ಅವರಿಗೆ ಈ ಶನೈಶ್ಚರನಿಗಾದ ಅವಸ್ಥೆಯನ್ನು ತೋರಿಸಿದನು.

೨೨. ಆಗ ಅಲ್ಲಿಗೆ ಬಂದಿದ್ದ ಬ್ರಹ್ಮ, ರುದ್ರ, ಇಂದ್ರ, ಅಗ್ನಿ ಮೊದಲಾದ ದೇವತೆಗಳು ಕುಪಿತನಾಗಿರುವ ಆ ಋಷಿಕುಮಾರನನ್ನು ಮೆಲ್ಲಗೆ ಸಮಾಧಾನ ಪಡಿಸುತ್ತಾ ಈರೀತಿ ಹೇಳಿದರು.

೨೩. "ಮಹಾಭಾಗನಾದ ಪಿಪ್ಪಲಾದ ಮುನಿಯೇ! ನಿನಗೆ ಮಂಗಳ ವಾಗಲಿ. ಎಲೈ ಬ್ರಾಹ್ಮಣೋತ್ತಮಾ! ನೀನು ಯಾವಾಗಲೂ ಪಿಪ್ಪಲ ಫಲ ಗಳನ್ನು ತಿಂದು ಜೀವಿಸುತ್ತಿದ್ದುದರಿಂದ ನಾರದರು ನಿನಗೆ ಅನ್ವರ್ಥವಾದ ಹೆಸರನ್ನಿಟ್ಟರು."

೨೪. "ಎಲೈ ಪೂಜ್ಯನೆ! ಪಿಪ್ಪಲ ಫಲಗಳನ್ನೇ ತಿಂದು ಜೀವಿಸಿದುದರಿಂದ ನಿನಗೆ ಲೋಕದಲ್ಲಿ ಪಿಪ್ಪಲಾದನೆಂದು ಹೆಸರೇ ಪ್ರಸಿದ್ಧವಾಗಲಿ."

ಯೋ ಚ ತ್ವಾಂ ಪೂಜಯಿಷ್ಯಂತಿ ಸ್ನಾತ್ವಾ ಪುಷ್ಪೈರ್ಮಹಾಋಷಿಂ ||

ಇಹಾಶ್ರಮೇ ಸಮಭ್ಯೇತ್ಯ ರೂಪೇಽಸ್ಮಿನ್ಭಕ್ತಿಭಾವಿತಾಃ |
ಸಪ್ತಜನ್ಮಾಂತರಂ ಯಾವತ್ಪುತ್ರಪೌತ್ರಾನುಗಾಮಿನಃ || ೨೬ ||

ನ ತೇಷಾಂ ಬಾಧಿಕಾ ಸತ್ಯಂ ಗ್ರಹಪೀಡಾ ಭವಿಷ್ಯತಿ |
ಸ್ಮರಿಷ್ಯಂತೀಹ ಯೋ ಚ ತ್ವಾಂ ಪಿಪ್ಪಲಾದೇತಿ ನಾಮತಃ || ೨೭ ||

ತೇಷಾಂ ಶನೈಶ್ಚರಕೃತಾ ಪೀಡಾ ನ ಪ್ರಭವಿಷ್ಯತಿ |
ಕ್ಷಮಸ್ವಾಸ್ಯ ಮಹಾಭಾಗ ನಿರ್ದೋಷೋಽಯಂ ಗ್ರಹಾಗ್ರಣೀಃ || ೨೮ ||

ಚರರ್ಕ್ಷ ಋಕ್ಷಂ ಶನೈರೇಷ ಶುಭಾಶುಭಫಲಪ್ರದಃ |
ಹತಸಾಧ್ಯಾ ಗ್ರಹಾಶ್ಚೈತೇ ನ ಭವಂತಿ ಕದಾಚನ || ೨೯ ||

ಬಲಿಹೋಮನಮಸ್ಕಾರೈಃ ಶಾಂತಿಂ ಯಚ್ಛಂತಿ ಪೂಜಿತಾಃ |
ಅತೋಽರ್ಥಮಸ್ಯ ದಿವಸೇ ಸ್ನಾನಮಭ್ಯಂಗಪೂರ್ವಕಂ || ೩೦ ||

---

೨೫–೨೭. "ಯಾರು ಸ್ನಾನಾದಿಗಳನ್ನು ಮಾಡಿ ಈ ಆಶ್ರಮದಲ್ಲಿ ಮಹರ್ಷಿಯಾದ ನಿನ್ನನ್ನು ಅತಿ ಭಕ್ತಿಪೂರ್ವಕವಾಗಿ ಪುಷ್ಪಾದಿಗಳಿಂದ ಅರ್ಚಿಸುವರೋ, ಅವರು ಏಳು ಜನ್ಮಗಳವರೆಗೂ ಪುತ್ರಪೌತ್ರಪಾರಂಪರ್ಯವಾಗಿ ಗ್ರಹಗಳ ಪೀಡೆಗೆ ಗುರಿಯಾಗದೆ ಸುಖವಾಗಿರುವರು. ಅಲ್ಲದೆ ಪಿಪ್ಪಲಾದನೆಂದು ನಿನ್ನ ಹೆಸರನ್ನು, ಯಾರು ಸ್ಮರಿಸುವರೋ ಅವರಿಗೆ ಶನೈಶ್ಚರನಿಂದ ಸಂಭವಿಸಬಹುದಾದ ಪೀಡೆಯು ಉಂಟಾಗುವುದಿಲ್ಲ.

೨೮. "ಎಲೈ ಮಹಾಭಾಗನೇ! ಗ್ರಹಶ್ರೇಷ್ಠನಾದ ಶನಿಯು ದೋಷರಹಿತನು. ಆದ್ದರಿಂದ ನೀನು ದಯೆಯಿಟ್ಟು ಅವನನ್ನು ಕ್ಷಮಿಸು" ಎಂದರು.

೨೯. ಈ ಶನಿಯು ನಿಧಾನವಾಗಿ ಚಲಿಸುತ್ತಾ ನಕ್ಷತ್ರಗಳನ್ನೂ, ರಾಶಿಗಳನ್ನೂ ಪ್ರವೇಶಿಸುತ್ತಾ ಸಮಯೋಚಿತವಾದ ಶುಭ ಅಶುಭ ಫಲಗಳೆರಡನ್ನೂ ಕೊಡುವನು. ಆದಿತ್ಯಾದಿ ಗ್ರಹಗಳೆಲ್ಲರೂ ಹೀಗೆಯೇ ಸಂದರ್ಭವಿದ್ದಂತೆ ಕೆಡುಕು ಮಾಡುವುದರಿಂದ ಎಂದಿಗೂ ನಮ್ಮ ಅಧೀನರಾಗಲಾರರು.

೩೦–೩೧. ಬಲಿ, ಹೋಮ, ನಮಸ್ಕಾರ ಇವುಗಳಿಂದ ಗ್ರಹಗಳನ್ನು ಪೂಜಿಸಿದರೆ ಇವರು ಶಾಂತಿಯನ್ನುಂಟುಮಾಡುವರು. ಆದುದರಿಂದ ಈ

ಕಾರ್ಯಂ ದೇಯಂ ಚ ವಿಪ್ರಾಣಾಂ ತೈಲಮಭ್ಯಂಗಹೇತವೇ ।
ಯಸ್ತು ಸಂವತ್ಸರಂ ಯಾವತ್ಪ್ರಾಪ್ತೇ ಶನಿದಿನೇ ನರಃ　　॥ ೩೦ ॥

ತೈಲಂ ದದಾತಿ ವಿಪ್ರಾಣಾಂ ಸ್ವಶಕ್ತ್ಯಾನ್ಯಜನೇಪಿ ಚ ।
ತತಸ್ಸಂವತ್ಸರಸ್ಯಾಂತೇ ಪ್ರಾಪ್ತೇ ತಸ್ಯ ದಿನೇ ಪುನಃ　　॥ ೩೨ ॥

ಲೋಹೈಸ್ಸಂಘಟಿತಂ ಸೌರಿಂ ತೈಲಮಧ್ಯೇ ವಿನಿಕ್ಷಿಪೇತ್ ।
ಲೋಹಭಾಂಡಕಮಧ್ಯಸ್ಥಂ ಕೃಷ್ಣವಸ್ತ್ರಯುಗಚ್ಛದಂ　　॥ ೩೩ ॥

ಕೃಷ್ಣಗೋದಕ್ಷಿಣಾಯುಕ್ತಂ ಕೃಷ್ಣಕಂಬಲಶಾಯಿನಂ ।
ತಿಲತೈಲೇನ ಚ ಸ್ನಾನಂ ಕೃಷ್ಣಪುಷ್ಪೈಃ ಸುಪೂಜಿತಂ　　॥ ೩೪ ॥

ಕೃಷ್ಣಗಂಧೈಃ ಕೃಷ್ಣಧೂಪೈಃ ಕೃಶರಾನ್ನೈಸ್ತಿಲೋದನೈಃ ।
ಪೂಜಯಿತ್ವಾ ಸೂರ್ಯಪುತ್ರಂ ಬ್ರಾಹ್ಮಣಾಯ ನಿವೇದಯೇತ್ ॥೩೫॥

---

ಶನೈಶ್ಚರನ ಸಂಬಂಧವಾದ ಶನಿವಾರದಲ್ಲಿ, ತಾನು ಎಳ್ಳೆಣ್ಣೆಯಿಂದ ಅಭ್ಯಂಜನ ಮಾಡಬೇಕು. ವಿಪ್ರರಿಗೂ ಅಭ್ಯಂಜನಕ್ಕೋಸ್ಕರ ತೈಲವನ್ನು ಕೊಡಬೇಕು.

೩೨. ಒಂದು ವರ್ಷದವರೆಗೆ ಪ್ರತಿ ಶನಿವಾರದಲ್ಲೂ ಶಕ್ತ್ಯಾನುಸಾರ ತೈಲವನ್ನು ಕೊಡಬೇಕು. ವರ್ಷ ತುಂಬಿದ ಮೇಲೆ ಆಚರಿಸಬೇಕಾದ ವಿಧಾನವನ್ನು ಕೇಳು.

೩೩. ಕಬ್ಬಿಣದಿಂದ ಮಾಡಿಸಿದ ಶನೈಶ್ಚರನ ವಿಗ್ರಹವನ್ನು ತಂದು, ಶನಿವಾರದ ದಿವಸ ಕಬ್ಬಿಣದ ಬಾಣಲೆಯೊಳಗೆ ಎಣ್ಣೆಯನ್ನು ಹಾಕಿ, ಅದರ ಮಧ್ಯದಲ್ಲಿಡಬೇಕು. ಅನಂತರ ಕಪ್ಪುಬಣ್ಣದ ಒಂದುಜತೆ ವಸ್ತ್ರವನ್ನು ಹೊದ್ದಿಸಬೇಕು.

೩೪. ದಕ್ಷಿಣೆಯೊಡನೆ ಸಮರ್ಪಿಸುವ ಕಪಿಲವರ್ಣದ ಹಸುವನ್ನು ಕರಿಯ ಕಂಬಳಿಯ ಮೇಲೆ ಮಲಗಿಸಿದ್ದು, ಅನಂತರ ಎಣ್ಣೆಯಿಂದ ಸ್ನಾನಮಾಡಿಸಿ ನೀಲಪುಷ್ಪಗಳಿಂದ ಪೂಜಿಸಬೇಕು.

೩೫. ಚಂದನಗಂಧ, ಕೃಷ್ಣಾಗುರುಧೂಪ, ಕೃಶರ (ಚಿಗುಳಿ) ಎಳ್ಳು, ಹುಡಿಅನ್ನ, ಇವುಗಳ ನೈವೇದ್ಯ, ಸಮರ್ಪಣದಿಂದ ಪೂಜಿಸಿ, ಉಪಚರಿಸಿ ದೇವನಿಗೆ ಸಮರ್ಪಿಸಿದ ಪರಿಕರಗಳೊಡನೆ ಆ ವಿಗ್ರಹವನ್ನು ಅಯಃಪಾತ್ರಸಮೇತ ಬ್ರಾಹ್ಮಣೋತ್ತಮನಿಗೆ ದಾನಮಾಡಬೇಕು.

ಮಂತ್ರೇಣಾನೇನ ಬ್ರಹ್ಮರ್ಷೇ ಶನ್ನೋದೇವೀತಿ ಭಕ್ತಿಮಾನ್ ।
ಇತರೇಷಾಂ ತು ವರ್ಣಾನಾಂ ಶೃಣು ಮಂತ್ರಂ ದ್ವಿಜೋತ್ತಮ ॥ ೩೬ ॥

ಕ್ರೂರಾವಲೋಕನವಶಾದ್ಭುವನಂ ನಾಶಯಿಷ್ಯತಿ ಯೋ ಗ್ರಹೋರುಷ್ಟಃ
ತುಷ್ಟೋ ಧನಕನಕಸುಖಂ ದದಾತಿ ಸೌರಿಃ ಶನೈಶ್ಚರಃ ಪಾತು ॥ ೩೭ ॥

ಯತ್ಪುರಾ ನಷ್ಟರಾಜ್ಯಾಯ ನಲಾಯ ಪ್ರದದೌ ಕಿಲ ।
ಸ್ವಪ್ನೇ ಸೌರಿರ್ನಿಜಂ ಮಂತ್ರಂ ಶೃಣು ಕಾಮಫಲ ಪ್ರದಂ ॥ ೩೮ ॥

ಕ್ರೋಡಂ ನೀಲಾಂಜನಪ್ರಖ್ಯಂ ನೀಲವರ್ಣ ಸಮಸ್ರಜಮ್ ।
ಛಾಯಾಮಾರ್ತಂಡಸಂಭೂತಂ ನಮಸ್ಯಾಮಿ ಶನೈಶ್ಚರಂ ॥ ೩೯ ॥

---

೩೬. ವೇದಾಧಿಕಾರವುಳ್ಳವನು ಭಕ್ತಿಯಿಂದ "ಶಂನೋದೇವೀ" ಎಂಬ ಮಂತ್ರಪೂರ್ವಕವಾಗಿ ದಾನಮಾಡಬೇಕು. ವೇದಾಧಿಕಾರಿಗಳಲ್ಲದವರು ಹೇಳಬೇಕಾದ ಮಂತ್ರವನ್ನು ಹೇಳುವೆನು ಕೇಳು.

೩೭. ಕುಪಿತನಾದಾಗ ಕ್ರೂರದೃಷ್ಟಿಯಿಂದ ನೋಡುತ್ತಾ, ಸಕಲ ಪ್ರಪಂಚವನ್ನು ನಾಶಪಡಿಸುವವನೂ, ಸಂತೋಷದಿಂದಿರುವಾಗ ಧನಕನಕ ಮೊದಲಾದುವನ್ನು ಕೊಟ್ಟು ಸಂತೋಷಪಡಿಸುವವನೂ, ಸೂರ್ಯಪುತ್ರನೂ ಆದ ಶನೈಶ್ಚರನು ನನ್ನನ್ನು ಕಾಪಾಡಲಿ" ಎಂಬ ಅರ್ಥವುಳ್ಳ ಈ ಮಂತ್ರವನ್ನು ಹೇಳಬೇಕು.

೩೮. ರಾಜ್ಯಭ್ರಷ್ಟನಾದ ನಳಮಹಾರಾಜನಿಗೆ ಕೊನೆಯಲ್ಲಿ ಪ್ರಸನ್ನನಾದ ಶನೈಶ್ಚರನು ಸಕಲ ಇಷ್ಟಾರ್ಥಗಳನ್ನು ಕೊಡುವಂಥ ಮಹಿಮೆಯುಳ್ಳ ನಿಜ ಮಂತ್ರವನ್ನು ಸ್ವಪ್ನದಲ್ಲಿ ಉಪದೇಶಮಾಡಿದನು. ಅದನ್ನು ಈಗ ನಿನಗೆ ತಿಳಿಸುವೆನು.

೩೯. "ಕಾಡಿಗೆಯ ವರ್ಣದ ವಕ್ಷಸ್ಥಲವುಳ್ಳವನೂ, ನೀಲಪುಷ್ಪಮಾಲಿಕೆಯನ್ನು ಧರಿಸಿರುವವನೂ, ಛಾಯಾದೇವಿ ಸೂರ್ಯ ಇವರಿಂದ ಜನಿಸಿದವನೂ, ಆದ ಶನೈಶ್ಚರನನ್ನು ನಮಸ್ಕರಿಸುವೆನು."

ನಮೋಽರ್ಕಪುತ್ರಾಯ ಶನೈಶ್ಚರಾಯ ।
ನೀಹಾರವರ್ಣಾಂಚಿತ ಮೇಚಕಾಯ ॥
ಶ್ರುತ್ವಾ ರಹಸ್ಯಂ ಭವ ಕಾಮದಶ್ಚ ।
ಫಲಪ್ರದೋ ಮೇ ಭವ ಸೂರ್ಯಪುತ್ರ ॥ ೪೦ ॥

ನಮೋಽಸ್ತು ಪ್ರೇತರಾಜಾಯ ಕೃಷ್ಣದೇಹಾಯ ವೈ ನಮಃ ।
ಶನೈಶ್ಚರಾಯ ಕ್ರೂರಾಯ ಶುದ್ಧಬುದ್ಧಿಪ್ರದಾಯಿನೇ ॥ ೪೧ ॥

ಯ ಏಭಿರ್ನಾಮಭಿಃ ಸ್ತೌತಿ ತಸ್ಯ ತುಷ್ಟೋ ಭವಾಮ್ಯಹಂ ।
ಮದೀಯಂ ತು ಭಯಂ ತಸ್ಯ ಸ್ವಪ್ನೇಽಪಿ ನ ಭವಿಷ್ಯತಿ ॥ ೪೨ ॥

ಏವಮೂಚೇ ಶನಿಃ ಪೂರ್ವಮತಸ್ತ್ವಂ ಬ್ರಾಹ್ಮಣೇ ದದೇತ್ ।
ಏವಮೇದ್ವ್ರತಂ ವಿಪ್ರ ಯೇ ಚರಿಷ್ಯಂತಿ ಮಾನವಾಃ ॥ ೪೩ ॥

ಸ್ಥಾವರೇಽಸ್ಥಾವರೇ ಪ್ರಾಪ್ತೇ ವತ್ಸರಂ ಯಾವದೇವ ತು ।
ತೇಷಾಂ ಶಾನೈಶ್ಚರೀ ಪೀಡಾ ದೇಶೇಽಪಿ ನ ಭವಿಷ್ಯತಿ ॥ ೪೪ ॥

---

೪೦. "ಸೂರ್ಯಪುತ್ರನೂ, ಮಂಜಿನ ಬಣ್ಣದಂತೆ ಹೊಳೆಯುತ್ತಿರುವ ಕಾಂತಿಯುಳ್ಳವನೂ ಆದ ಶನೈಶ್ಚರದೇವನೇ! ರಹಸ್ಯವಾದ ಈ ಸ್ತೋತ್ರವನ್ನು ಆಲಿಸಿ ನನಗೆ ಸಕಲ ಇಷ್ಟಾರ್ಥಗಳನ್ನು ಕೊಡು.''

೪೧. ಪ್ರೇತಗಳಿಗೆ ಅಧಿಪತಿಯೂ, ಕಪ್ಪಾದ ಶರೀರವುಳ್ಳವನೂ, ಆದ ದೇವನೇ! ನಿನಗೆ ನಮಸ್ಕಾರ. ಕ್ರೂರಸ್ವರೂಪನೂ ಪರಿಶುದ್ಧವಾದ ಜ್ಞಾನವನ್ನುಂಟುಮಾಡುವವನೂ ಆದ ಶನೈಶ್ಚರದೇವನೇ! ನಿನಗೆ ನಮಸ್ಕಾರ ಎಂಬುದು ಈ ಮಂತ್ರಗಳ ಅರ್ಥ.

೪೨. ಈರೀತಿ ನನ್ನ ನಾಮಪೂರ್ವಕವಾಗಿ ನನ್ನನ್ನು ಸ್ತೋತ್ರಮಾಡಿದರೆ ಅಂಥವರಿಗೆ ಸ್ವಪ್ನದಲ್ಲಿ ಕೂಡ ನನ್ನ ವಿಚಾರವಾದ ಭಯವುಂಟಾಗುವುದಿಲ್ಲ.

೪೩–೪೪. ಪೂರ್ವದಲ್ಲಿ ಶನೈಶ್ಚರನು ಈರೀತಿ ನಳಮಹಾರಾಜನಿಗೆ ಹೇಳಿದನು. ಆದುದರಿಂದ ನೀನು ಈ ವ್ರತವನ್ನು ಕ್ರಮವಾಗಿ ಮಾಡಿ, ಕೊನೆಯಲ್ಲಿ ಬ್ರಾಹ್ಮಣೋತ್ತಮನಿಗೆ ಶನೈಶ್ಚರ ವಿಗ್ರಹವನ್ನು ಭಕ್ತಿದಿಂದ ದಾನಮಾಡಬೇಕು. ಅಯ್ಯಾ ವಿಪ್ರನೇ! ಪ್ರತಿ ಶನಿವಾರವೂ ಒಂದುವರ್ಷಕಾಲ ಶನೈಶ್ಚರ ವ್ರತವನ್ನು ಆಚರಿಸಿದರೆ, ಆ ದೇಶದಲ್ಲೇ ಶನಿಗ್ರಹ ಪೀಡೆಯುಂಟಾಗುವುದಿಲ್ಲ.

ಏವಮುಕ್ತ್ವಾ ಸುರಾಸ್ಸರ್ವೇ ಪ್ರತಿಜಗ್ಮುರ್ಯಥಾಗತಂ ।
ಶನೈಶ್ಚರೋಽಪಿ ಸ್ವಸ್ಥಾನೇ ಗ್ರಹಾಂತೇ ಖೇ ಪ್ರತಿಷ್ಠಿತಃ ॥ ೪೫ ॥

ಪಿಪ್ಪಲಾದೋಽಪಿ ಬ್ರಹ್ಮಜ್ಞೋ ಬ್ರಹ್ಮಾಜ್ಞಾಂ ಪ್ರತಿಪಾಲಯನ್ ।
ಶನೈಶ್ಚರಂ ತು ಸಂಪೂಜ್ಯ ತುಷ್ಟಾವ ರಚಿತಾಂಜಲಿಃ ॥ ೪೬ ॥

ಕೋಣಸ್ಥಃ ಪಿಂಗಲೋ ಬಭ್ರುಃ ಕೃಷ್ಣೋ ರೌದ್ರೋಽಂತಕೋ ಯಮಃ
ಸೌರಿಃ ಶನೈಶ್ಚರೋ ಮಂದಃ ಪ್ರೀಯತಾಂ ಮೇ ಗ್ರಹೋತ್ತಮಃ ॥ ೪೭ ॥

ಶನೈಶ್ಚರಮಿತಿ ಸ್ತುತ್ವಾ ಪಿಪ್ಪಲಾದೋ ಮಹಾಮುನಿಃ ।
ಖೇ ಪ್ರಜ್ವಲನ್ವಿಮಾನಸ್ಥೋ ದೃಶ್ಯತೇಽದ್ಯಾಪಿ ಮಾನವೈಃ ॥ ೪೮ ॥

---

೪೫. ಈ ಪ್ರಕಾರ ಬ್ರಹ್ಮಾದಿದೇವತೆಗಳು ಪಿಪ್ಪಲಾದ ಮುನಿಯನ್ನು ಕುರಿತು ಶನೈಶ್ಚರ ವ್ರತವನ್ನು ಹೇಳಿ ಸ್ವಸ್ಥಾನಗಳಿಗೆ ತೆರಳಿದರು. ಶನೈಶ್ಚರನೂ ಸಹ ಅಂತರಿಕ್ಷದಲ್ಲಿ ಪುನಃ ಗ್ರಹಮಂಡಲದಲ್ಲಿ ಸ್ಥಾಪಿತನಾದನು.

೪೬. ಬ್ರಹ್ಮಜ್ಞಾನಿಯಾದ ಪಿಪ್ಪಲಾದ ಮಹರ್ಷಿಯು ಕೂಡ, ಬ್ರಹ್ಮನ ಆಜ್ಞೆಯನ್ನು ಪರಿಪಾಲಿಸುತ್ತಾ, ಭಕ್ತಿಯಿಂದ ಶನೈಶ್ಚರನನ್ನು ಪೂಜಿಸಿ, ಈರೀತಿ ಸ್ತುತಿಸಿದನು.

೪೭. ತ್ರಿಕೋಣದಲ್ಲಿರುವವನೂ, ಬಭ್ರುವೂ, ವಿಶಾಲವಾದ ದೇಹವುಳ್ಳವನೂ, ಕೃಷ್ಣವರ್ಣನೂ, ಭಯಂಕರನೂ, ಅಂತಕನೂ, ಯಮಸ್ವರೂಪನೂ, ಸೂರ್ಯಪುತ್ರನೂ, ಮಂದಸಂಜ್ಞಕನೂ, ಸಾವಕಾಶವಾಗಿ ಸಂಚರಿಸುವವನೂ ಆದ ಗ್ರಹರಾಜನೇ ! ನನ್ನಲ್ಲಿ ಪ್ರಸನ್ನನಾಗಿರು (ಎಂಬುದು ಮಂತ್ರಾರ್ಥ.)

೪೮. ಈರೀತಿ ಪಿಪ್ಪಲಾದ ಮುನಿಯು ಶನೈಶ್ಚರನನ್ನು ಸ್ತೋತ್ರಮಾಡಿ ತಾನು ಅಂತರಿಕ್ಷದಲ್ಲಿ ಪ್ರಜ್ವಲಿಸುತ್ತಿರುವ ವಿಮಾನವನ್ನು ಏರಿ ಈಗಲೂ ಸಕಲ ಮಾನವರಿಗೂ ಗೋಚರವಾಗುತ್ತಲಿರುವನು.

ಇದಂ ಶನೈಶ್ಚರಾಖ್ಯಾನಂ ಯೇ ಶ್ರೋಷ್ಯಂತಿ ಸಮಾಹಿತಾಃ ।
ತೇಷಾಂ ಕುರುವರಶ್ರೇಷ್ಠ ಶನಿಃ ಪೀಡಾಂ ನ ದಾಸ್ಯತಿ ॥ ೪೯ ॥

ಕೃಷ್ಣಾಯಸೇನ ಘಟಿತಾಂ ಗ್ರಹರಾಜಮೂರ್ತಿಂ ।
ಲೋಹೇ ನಿಧಾಯ ಕಲಶೇ ತಿಲತೈಲಪೂರ್ಣೇ ॥
ಯೋ ಬ್ರಾಹ್ಮಣಾಯ ರವಿಜಂ ಪ್ರದದಾತಿ ಭಕ್ತ್ಯಾ ।
ಪೀಡಾ ಶನೈಶ್ಚರಕೃತಾ ನ ಹಿ ಬಾಧತೇ ತಂ ॥ ೫೦ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರಸಂವಾದೇ ಶನೈಶ್ಚರ ವ್ರತವರ್ಣನಂ ನಾಮ ಚತುರ್ದಶೋತ್ತರಶತತಮೋಽಧ್ಯಾಯಃ.



---

೪೯. ಅಯ್ಯಾ ಕುರುವಂಶಶ್ರೇಷ್ಠನಾದ ಯುಧಿಷ್ಠಿರನೇ ! ಈ ಶನೈಶ್ಚರಾಖ್ಯಾನವನ್ನು ಸಾವಧಾನ ಮನಸ್ಸಿನಿಂದ ಭಕ್ತಿಯುಕ್ತರಾಗಿ ಕೇಳುವವರನ್ನು ಶನಿಮಹಾರಾಜನು ಎಂದೂ ಪೀಡಿಸುವುದಿಲ್ಲ.

೫೦. ಉಕ್ಕಿನಿಂದ ಶನೈಶ್ಚರವಿಗ್ರಹವನ್ನು ಮಾಡಿಸಿ, ಅದನ್ನು ಎಳ್ಳೆಣ್ಣೆಯನ್ನು ತುಂಬಿದ ಕಬ್ಬಿಣದ ಕುಂಭದಲ್ಲಿಟ್ಟು, ಷೋಡಶೋಪಚಾರ ಪೂಜೆಮಾಡಿ ಭಕ್ತಿಯಿಂದ ಬ್ರಾಹ್ಮಣೋತ್ತಮನಿಗೆ ಆ ಕಲಶಸಮೇತವಾಗಿ ವಿಗ್ರಹವನ್ನು ದಾನ ಮಾಡಿದವನಿಗೆ ಎಂದಿಗೂ ಶನೈಶ್ಚರ ಪೀಡೆಯಿಲ್ಲ. ಅಲ್ಲದೆ ಯಾವ ರೀತಿಯಲ್ಲೂ ಅವರು ತೊಂದರೆಗೊಳಗಾಗುವುದಿಲ್ಲ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಶನೈಶ್ಚರ ವ್ರತವರ್ಣನೆಯೆಂಬ ನೂರಹದಿನಾಲ್ಕನೆಯ ಅಧ್ಯಾಯ ಮುಗಿದುದು.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣ
## ಉತ್ತರಪರ್ವಣಿ
## ಪಂಚದಶೋತ್ತರಶತತಮೋಽಧ್ಯಾಯಃ

|| ಯುಧಿಷ್ಠಿರ ಉವಾಚ ||

ಯದಾರೋಗ್ಯಕರಂ ಪುಂಸಾಂ ಯದನಂತಫಲಪ್ರದಂ ।
ವ್ರತಂ ತದ್ಬ್ರೂಹಿ ಗೋವಿಂದ ಸರ್ವಪಾಪಪ್ರಣಾಶನಂ || ೧ ||

|| ಶ್ರೀ ಕೃಷ್ಣ ಉವಾಚ ||

ಯತ್ತದ್ದಿವ್ಯಾತ್ಮನೋ ಧಾಮ ಪರಂ ಬ್ರಹ್ಮ ಸನಾತನಂ ।
ಸೂರ್ಯಾಗ್ನಿಚಂದ್ರರೂಪೇಣ ತತ್ತ್ರಿಧಾ ಜಗತಿ ಸ್ಥಿತಂ || ೨ ||

ತಮಾರಾಧ್ಯ ಪುಮಾನ್ ಕಿಂ ನ ಪ್ರಾಪ್ನೋತಿ ಕುರುನಂದನ ।
ತಸ್ಮಾದಾದಿತ್ಯವಾರೇಣ ಸದಾ ನಕ್ತಾಶನೋ ಭವೇತ್ || ೩ ||

---

## ನೂರಹದಿನೈದನೆಯ ಅಧ್ಯಾಯ

೧. ಯುಧಿಷ್ಠಿರನು ಪ್ರಶ್ನೆಮಾಡುತ್ತಾನೆ—ಎಲೈ ಗೋವಿಂದನೇ! ಪುರುಷರ ಸಕಲಪಾಪಗಳನ್ನೂ ನಾಶಪಡಿಸಿ, ಅಪರಿಮಿತವಾದ ಫಲಗಳನ್ನೂ ಉಂಟುಮಾಡುವ ವ್ರತವು ಯಾವುದು? ಅದನ್ನು ನನಗೆ ಹೇಳು ಎಂದನು.

೨. ಶ್ರೀ ಕೃಷ್ಣನು ಹೇಳುತ್ತಾನೆ—ಪ್ರಪಂಚಸ್ವರೂಪನೂ ಸನಾತನನೂ ಆದ ಪರಬ್ರಹ್ಮನ ದಿವ್ಯವಾದ ತೇಜಸ್ಸು ಈ ಪ್ರಪಂಚದಲ್ಲಿ ಸೂರ್ಯ, ಚಂದ್ರ, ಅಗ್ನಿ, ಈ ಮೂರು ರೂಪಗಳಿಂದ ನೆಲಸಿರುವುದು.

೩. ಎಲೈ ಕುರುವಂಶಶ್ರೇಷ್ಠನೇ! ಪರಬ್ರಹ್ಮನ ತೇಜೋರೂಪವಾದ ಸೂರ್ಯನನ್ನು ಪೂಜಿಸುವ ಮಾನವನು ಸಕಲ ಇಷ್ಟಾರ್ಥಗಳನ್ನೂ ಪಡೆಯುವನು. ಆದುದರಿಂದ ಪ್ರತಿ ಭಾನುವಾರದದಿನ ಯಾವಾಗಲೂ ನಕ್ತಭೋಜನವ್ರತವನ್ನು ಆಚರಿಸಬೇಕು.

ಉತ್ಪದ್ಯತೇ ಯದಾ ಭಕ್ತಿರ್ಭಾನೋರುಪರಿ ಶಾಶ್ವತೀ ।
ತದಾರಭ್ಯ ಸದಾ ಕಾರ್ಯಂ ನಕ್ತಮಾದಿತ್ಯವಾಸರೇ ॥ ೪ ॥

ಪೂರ್ವೋಕ್ತವಿಧಿದಾ ಚೈವ ಪೂಜಯಿತ್ವಾ ದ್ವಿಜೋತ್ತಮಾನ್ ।
ತತೋಽಸ್ತಸಮಯೇ ಭಾನೋರಕ್ತಚಂದನಪಂಕಜಂ ॥ ೫ ॥

ವಿಲಿಖ್ಯ ದ್ವಾದಶದಲಂ ಪೂಜ್ಯ ಸೂರ್ಯೇತಿ ಪೂರ್ವತಃ ।
ದಿವಾಕರಂ ತಥಾಽಗ್ನೇಯೇ ವಿವಸ್ವಂತಮತಃ ಪರಂ ॥ ೬ ॥

ಭಗಂ ತು ನೈರ್ಋತೇ ದೇವಂ ವರುಣಂ ಪಶ್ಚಿಮೇ ದಲೇ ।
ಮಹೇಂದ್ರಂ ಮಾರುತದಲೇ ಆದಿತ್ಯಂ ತು ತಥೋತ್ತರೇ ॥ ೭ ॥

---

೪. ಶಾಶ್ವತವಾದ ಸೂರ್ಯಭಕ್ತಿಯು ಉತ್ಪನ್ನವಾದ ಮಾನವನು ಸದಾ ಕಾಲದಲ್ಲೂ ಭಾನುವಾರದ ದಿವಸ ನಕ್ತವ್ರತವನ್ನು ಮಾಡಬೇಕು.

೫. ಹಿಂದೆ ಹೇಳಿದ ವಿಧಿಯಂತೆ ಬ್ರಾಹ್ಮಣೋತ್ತಮರನ್ನು ಭಕ್ತಿಯಿಂದ ಸೂರ್ಯಾಸ್ತಮಯ ಸಮಯದಲ್ಲಿ ಪೂಜಿಸಬೇಕು.

೬. ರಕ್ತಚಂದನದಿಂದ ಹನ್ನೆರಡು ದಳಗಳುಳ್ಳ ಕಮಲವನ್ನು ಬರೆದು, ಅದರ ಪೂರ್ವದಿಕ್ಕಿನ ಎಸಳಿನಲ್ಲಿ ಸೂರ್ಯನಾಮವನ್ನಾವಾಹಿಸಬೇಕು. ಆಗ್ನೇಯ ದಿಕ್ಕಿನ ಎಸಳಿನಲ್ಲಿ ದಿವಾಕರ ಎಂಬ ನಾಮ ವಿನ್ಯಾಸಮಾಡಬೇಕು. ದಕ್ಷಿಣ ದಿಕ್ಕಿನ ಎಸಳಿನಲ್ಲಿ ವಿವಸ್ವಂತ ಎಂಬ ನಾಮದಿಂದ ನ್ಯಾಸಮಾಡಬೇಕು.

೭. ನೈಋತ್ಯದಿಕ್ಕಿನ ಎಸಳಿನಲ್ಲಿ ಭಗನೆಂಬ ನಾಮವನ್ನು ವಿನ್ಯಾಸ ಮಾಡಬೇಕು. ಪಶ್ಚಿಮದಿಕ್ಕಿನ ಎಸಳಿನಲ್ಲಿ ವರುಣ ಎಂಬ ನಾಮದಿಂದ ನ್ಯಾಸ ಮಾಡಬೇಕು. ವಾಯವ್ಯದಿಕ್ಕಿನ ಎಸಳಿನಲ್ಲಿ ಮಹೇಂದ್ರ ಎಂಬ ನಾಮ ದಿಂದಲೂ ಉತ್ತರದಿಕ್ಕಿನ ಎಸಳಿನಲ್ಲಿ ಆದಿತ್ಯ ಎಂಬ ನಾಮದಿಂದಲೂ ನ್ಯಾಸ ಮಾಡಬೇಕು.

ಶಾಂತಮೀಶಾನಭಾಗೇ ತು ನಮಸ್ಕಾರೇಣ ವಿನ್ಯಸೇತ್ ।
ಕರ್ಣಿಕಾಪೂರ್ವಪತ್ರೇ ತು ಸೂರ್ಯಸ್ಯ ತುರಗಾನ್ನ್ಯಸೇತ್ ॥ ೮ ॥

ದಕ್ಷಿಣೇ ಯಮನಾಮಾನಂ ಮಾರ್ತಂಡಂ ಪಶ್ಚಿಮೇ ದಲೇ ।
ಉತ್ತರೇಣ ರವಿಂ ದೇವಂ ಕರ್ಣಿಕಾಯಾಂ ತು ಭಾಸ್ಕರಂ ॥ ೯ ॥

ಅರ್ಘ್ಯಂ ದದ್ಯಾತ್ತತಃ ಪಾರ್ಥ ಸತಿಲಾರುಣಚಂದನಂ ।
ಫಲಾಕ್ಷತಯುತಂ ತದ್ವದಿಮಂ ಮಂತ್ರಮುದೀರಯೇತ್ ॥ ೧೦ ॥

ಕಾಲಾತ್ಮಾ ಸರ್ವಭೂತಾತ್ಮಾ ವೇದಾತ್ಮಾ ವಿಶ್ವತೋಮುಖಃ ।
ಯಸ್ಮಾದಗ್ನೀಂದುರೂಪಸ್ತ್ವಮತಃ ಪಾಹಿ ಪ್ರಭಾಕರ ॥ ೧೧ ॥

---

೮. ಈಶಾನ್ಯ ಭಾಗದಲ್ಲಿ ಶಾಂತನೆಂಬ ನಾಮದಿಂದ ನ್ಯಾಸಮಾಡಬೇಕು. ಈ ನ್ಯಾಸಕಾಲದಲ್ಲಿ ನಮಸ್ಕಾರಪೂರ್ವಕಕ್ಕಾಗಿ ಆ ನಾಮಗಳ ಮುಂದೆ ನಮಃ ಎಂಬ ಶಬ್ದ ಸೇರಿಸಿ ನ್ಯಾಸಮಾಡಬೇಕು. ಕರ್ಣಿಕೆಯ ಪೂರ್ವದಿಕ್ಕಿನ ಪತ್ರದಲ್ಲಿ ಸೂರ್ಯನ ಸಪ್ತಾಶ್ವಗಳನ್ನು ನ್ಯಾಸಮಾಡಬೇಕು.

೯. ಕರ್ಣಿಕೆಯ ದಕ್ಷಿಣ ಪತ್ರದಲ್ಲಿ ಯಮಸಂಜ್ಞಕನನ್ನೂ, ಪಶ್ಚಿಮ ದಳದಲ್ಲಿ ಮಾರ್ತಂಡನಾಮಕನನ್ನೂ, ಉತ್ತರದಳದಲ್ಲಿ ರವಿಸಂಜ್ಞಕನನ್ನೂ, ಮಧ್ಯದ ಕರ್ಣಿಕೆಯಲ್ಲಿ ಭಾಸ್ಕರಸಂಜ್ಞಕನಾದ ದೇವನನ್ನೂ ನ್ಯಾಸಮಾಡಬೇಕು.

೧೦. ಎಲೈ ಕುಂತೀಪುತ್ರನೇ! ಬಳಿಕ ಈ ಮುಂದೆ ಹೇಳುವ ಮಂತ್ರಪೂರ್ವಕವಾಗಿ ಎಳ್ಳು, ರಕ್ತಚಂದನ, ಫಲ, ಅಕ್ಷತೆ ಇವುಗಳ ಸಮೇತ ಅರ್ಘ್ಯ ಪ್ರದಾನಮಾಡಬೇಕು.

೧೧. ಕಾಲಸ್ವರೂಪನೂ ಸಕಲ ಭೂತಾತ್ಮನೂ ವೇದಮಯನೂ ಸರ್ವತೋಮುಖನೂ ಆಗಿರುವ ಪ್ರಭಾಕರನೇ ನಮ್ಮನ್ನು ರಕ್ಷಿಸು ಎಂಬ ಅರ್ಥವುಳ್ಳ ಮಂತ್ರವನ್ನು ಅರ್ಘ್ಯಪ್ರದಾನ ಕಾಲದಲ್ಲಿ ಉಚ್ಚರಿಸಬೇಕು.

ಅಗ್ನಿಮೀಳೇ ನಮಸ್ತುಭ್ಯಮಿಷೇತ್ವೋರ್ಜೇ ಚ ಭಾಸ್ಕರೇ ।
ಅಗ್ನ ಆಯಾಹಿ ವರದ ನಮಸ್ತೇ ಜ್ಯೋತಿಷಾಂ ಪತೇ ॥ ೧೨ ॥

ಅರ್ಘ್ಯಂ ದತ್ವಾ ವಿಸೃಜ್ಯಾಽಥ ನಿಶಿ ತೈಲವಿವರ್ಜಿತಂ ।
ಭುಂಜೀತ ಭಾವಿಂಮನಾ ಭಾಸ್ಕರಂ ಸಂಸ್ಮರನ್ಮುಹುಃ ॥ ೧೩ ॥

ಪ್ರಾಕ್ತನೇಽಹ್ನಿ ಶನೌ ಚೈವ ತೈಲಾಭ್ಯಂಗಂ ವಿವರ್ಜಯೇತ್ ।
ವತ್ಸರಾಂತೇ ಕಾರಯಿತ್ವಾ ಕಾಂಚನಂ ಕಮಲೋತ್ತಮಂ ॥ ೧೪ ॥

ಪುರುಷಂ ಚ ಯಥಾಶಕ್ತ್ಯಾ ಕಾರಯೇದ್ದ್ವಿಭುಜಂ ತಥಾ ॥ ೧೫ ॥

ಸುವರ್ಣಶೃಂಗೀಂ ಕಪಿಲಾಂ ಮಹಾರ್ಘ್ಯಾಂ ।
ರೌಪ್ಯಖುರಾಂ ಕಾಂಸ್ಯದೋಹಾಂ ಸವತ್ಸಾಂ ॥

---

೧೨. ಅಗ್ನಿ ಮೀಳೆ ಮಂತ್ರದಿಂದ ಧ್ಯಾನಿಸಲು ಯೋಗ್ಯನೂ, ಇಷೇತ್ವೋರ್ಜೇತ್ವಾ ಎಂಬ ಮಂತ್ರಕ್ಕೆ ಆಶ್ರಯನೂ, ತೇಜೋರೂಪನೂ ಮತ್ತು ಅಗ್ನ ಆಯಾಹಿ ಎಂಬ ಮಂತ್ರದಿಂದ ಪೂಜಿಸಲ್ಪಡುವವನೂ ಆಗಿ, ಕಿರಣಾಧಿಪನೆನಿಸಿರುವ ನಿನಗೆ ನಮಸ್ಕಾರ ಎಂಬ ಅರ್ಥವುಳ್ಳ ಈ ಮಂತ್ರಪೂರ್ವಕವಾಗಿ ಅರ್ಘ್ಯ ಕೊಡಬೇಕು.

೧೩. ಹೀಗೆ ಸೂರ್ಯದೇವನಿಗೆ ಅರ್ಘ್ಯವನ್ನು ಕೊಟ್ಟು, ರಾತ್ರಿ ಶುದ್ಧ ಚಿತ್ತದಿಂದ ಸೂರ್ಯದೇವನನ್ನು ಸ್ಮರಿಸುತ್ತಾ ತೈಲವರ್ಜ್ಯಮಾಡಿದ ಆಹಾರವನ್ನು ಭೋಜನಮಾಡಬೇಕು.

೧೪–೧೫. ಆ ಹಿಂದಿನ ದಿನ ಎಂದರೆ ಶನಿವಾರ ತೈಲಾಭ್ಯಂಗವನ್ನು ಮಾಡಬಾರದು. ಈ ಪ್ರಕಾರ ಒಂದುವರ್ಷ ವ್ರತವನ್ನು ಆಚರಿಸಿದನಂತರ ಒಂದು ಶ್ರೇಷ್ಠವಾದ ಭಂಗಾರದ ಕಮಲವನ್ನೂ, ದ್ವಿಭುಜಗಳಿಂದ ಶೋಭಿಸುವ ಸೂರ್ಯದೇವನ ಪ್ರತಿಮೆಯನ್ನು ತನ್ನ ಶಕ್ತಿಯಿದ್ದಷ್ಟು ಮಟ್ಟಿನ ಚಿನ್ನದಲ್ಲೇ ಮಾಡಿಸಬೇಕು.

೧೬. ಕೊಂಬಿಗೆ ಚಿನ್ನದ ಗೊಣಸನ್ನು ಹಾಕಿ, ಪಾದಕ್ಕೆ ಬೆಳ್ಳಿಯ ಗೊರಸನ್ನು ತೊಡಿಸಿ, ಅಲಂಕರಿಸಿರುವುದೂ, ಶ್ರೇಷ್ಠವಾದ ಬೆಲೆಯುಳ್ಳುದೂ,

ಪೂರ್ಣೇ ಗುಡಸ್ಯೋಪರಿ ತಾಮ್ರಪಾತ್ರೇ ।
ನಿಧಾಯ ಪದ್ಮಂ ಚ ತತೋ ನಿದಧ್ಯಾತ್ ॥ ೧೬ ॥

ಗಾಂ ಕಲ್ಪಯಿತ್ವಾ ಪುರುಷಂ ಸಪದ್ಮಂ ।
ದದ್ಯಾದನೇಕವ್ರತನಾಯಕಾಯ ॥
ಅವ್ಯಂಗರೂಪಾಯ ಜಿತೇಂದ್ರಿಯಾಯ ।
ಕುಟುಂಬಿನೇ ಶುದ್ಧಮನುದ್ಧತಾಯ ॥ ೧೭ ॥

ನಮೋಽಸ್ತು ಋಕ್ಸಾಮಯಜುರ್ವಿಧಾತ್ರೇ ।
ಪದ್ಮಪ್ರಬೋಧಾಯ ಜಗತ್ಸವಿತ್ರೇ ॥
ತ್ರಯೀಮಯಾಯ ತ್ರಿಗುಣಾತ್ಮನೇ ಚ ।
ತ್ರಿಲೋಕನಾಥಾಯ ನಮೋ ನಮಸ್ತೇ ॥ ೧೮ ॥

---

ಹಾಲು ಕರೆಯುತ್ತಿರುವುದೂ, ಕರುಸಹಿತವಾಗಿರುವುದೂ ಆದ, ಕಪಿಲವರ್ಣದ ಹಸು ಮತ್ತು ಹಾಲು ಕರೆಯುವ ಕಂಚಿನ ಪಾತ್ರೆ ಇವನ್ನು ದಾನಕ್ಕೆ ಸಿದ್ಧಮಾಡಿ ಕೊಳ್ಳಬೇಕು.

೧೭. ಗುಡಪೂರ್ಣವಾದ ತಾಮ್ರದ ಪಾತ್ರೆಯ ಮೇಲೆ, ಭಂಗಾರದ ಕಮಲ ಸಮೇತವಾದ ದೇವನ ಸ್ವರ್ಣಪ್ರತಿಮೆಯನ್ನಿರಿಸಿ, ಆ ಪ್ರತಿಮಾಸಮೇತ ವಾದ ಪಾತ್ರೆಯನ್ನೂ, ಸವತ್ಸವಾದ ಆ ಗೋವನ್ನೂ, ಬ್ರಾಹ್ಮಣೋತ್ತಮನಿಗೆ ಮಂತ್ರವತ್ತಾಗಿ ದಾನಮಾಡಬೇಕು. ದಾನಪ್ರತಿಗ್ರಹಮಾಡುವುದಕ್ಕೆ ಅನೇಕ ವ್ರತಗಳನ್ನು ತಿಳಿದವನೂ, ಅಂಗಹೀನವಿಲ್ಲದೆ ದೃಢಾಂಗನೂ, ಜಿತೇಂದ್ರಿಯನೂ, ಪರಿಶುದ್ಧನೂ, ಔದ್ಧತ್ಯರಹಿತನೂ, ಕುಟುಂಬಿಯೂ ಆಗಿರುವಂಥವನನ್ನು ನೋಡಿ ದಾನಕೊಡಬೇಕು.

೧೮. ದಾನ ಕೊಡುವಾಗ ಋಗ್ಯಜುಸ್ಸಾಮವೇದಗಳನ್ನು ಧರಿಸಿದವನೂ, ಕಮಲವನ್ನು ವಿಕಾಸಗೊಳಿಸತಕ್ಕವನೂ, ಜಗನ್ನಿರ್ಮಾಣಕನೂ, ಸತ್ವ ರಜಸ್ ತಮೋಗುಣಸ್ವರೂಪನೂ, ವೇದಮಯನೂ, ಮೂರುಲೋಕಗಳಿಗೆ ಒಡೆಯನೂ, ಆದ ಸ್ವಾಮಿಯೇ! ನಿನಗೆ ನಮಸ್ಕಾರ ಎಂಬ ಅರ್ಥವುಳ್ಳ ಈ ಮಂತ್ರವನ್ನು ಹೇಳಬೇಕು.

ಇತ್ಯನೇನ ವಿಧಾನೇನ ವರ್ಷಮೇಕಂ ತು ಯೋ ನರಃ ।
ನಕ್ತಮಾದಿತ್ಯವಾರೇಣ ಕುರ್ಯಾತ್ಸ ನೀರುಜೋ ಭವೇತ್ ॥ ೧೯ ॥

ಧನಧಾನ್ಯಸಮಾಯುಕ್ತಃ ಪುತ್ರಪೌತ್ರಸಮನ್ವಿತಃ ।
ಮರ್ತ್ಯೇ ಸ್ಥಿತ್ವಾ ಚಿರಂ ಕಾಲಂ ಸೂರ್ಯಲೋಕಮವಾಪ್ನುಯಾತ್ ॥೨೦॥

ಕರ್ಮಸಂಕ್ಷಯಮವಾಪ್ಯ ಪಾರ್ಥಿವಃ ।
ಶೋಕದುಃಖಭಯರೋಗವರ್ಜಿತಃ ॥
ಸ್ಯಾದಮಿತ್ರಕುಲಕಾಲಸನ್ನಿಭೋ ।
ಧರ್ಮಮೂರ್ತಿರಮಿರೌಜಸಾ ಯುತಃ ॥ ೨೧ ॥

ಯಾ ಚ ಭರ್ತೃಗುರುದೇವತತ್ಪರಾ ।
ವೇದಮೂರ್ತಿದಿನನಕ್ತಮಾಚರೇತ್ ॥
ಸಾಽಪಿ ಲೋಕಮಮರೇಶಪೂಜಿತಂ ।
ಯಾತಿ ಕೌರವ ರವೇರ್ನ್ನ ಸಂಶಯಃ ॥ ೨೨ ॥

---

೧೯. ಈ ಪ್ರಕಾರ ಒಂದುವರ್ಷಕಾಲ ಆದಿತ್ಯವಾರ ನಕ್ತಭೋಜನ ಮಾಡುತ್ತಾ ಆದಿತ್ಯವ್ರತವನ್ನಾಚರಿಸಿದವನು ರೋಗರಹಿತನಾಗಿ ಸುಖಿಯಾಗುವನು.

೨೦. ಅಲ್ಲದೆ ಧನಧಾನ್ಯಸಮೃದ್ಧಿಯನ್ನು ಪಡೆದು, ಭೂಲೋಕದಲ್ಲಿ ಪುತ್ರಪೌತ್ರರೊಡನೆ ಬಹುಕಾಲ ಬದುಕಿ, ದೇಹತ್ಯಾಗಾನಂತರ ಸೂರ್ಯಲೋಕವನ್ನು ಪಡೆಯುವನು.

೨೧. ಕ್ಷತ್ರಿಯನು ಈ ವ್ರತವನ್ನಾಚರಿಸಿದರೆ ಸಕಲ ಪಾಪಗಳಿಂದ ಮುಕ್ತನಾಗಿ ಭಯ, ಶೋಕ, ರೋಗಾದಿಗಳಿಗೆ ತುತ್ತಾಗದೆ; ಶತ್ರುಗಳಿಗೆ ಯಮಸ್ವರೂಪನೂ, ಧರ್ಮಮೂರ್ತಿಯೂ, ದಿವ್ಯತೇಜೋಯುಕ್ತನೂ ಆಗುವನು.

೨೨. ದೇವಸೇವೆ, ಗುರುಶುಶ್ರೂಷೆ ಇವುಗಳಲ್ಲಿ ತತ್ಪರಳಾದ ಸ್ತ್ರೀಯು ವೇದಸ್ವರೂಪನಾದ ಸೂರ್ಯನ ವ್ರತವನ್ನು ಭಾನುವಾರದ ದಿನ ನಕ್ತಭೋಜನಯುಕ್ತವಾಗಿ ಮಾಡಿದರೆ ಆಕೆಯು ದೇವಶ್ರೇಷ್ಠರ ಮನ್ನಣೆಗೆ ಪಾತ್ರಳಾಗಿ, ಕೊನೆಗೆ ಸೂರ್ಯಲೋಕವನ್ನು ಪಡೆಯುವಳು.

ಯಃ ಪಠೇದಥ ಶೃಣೋತಿ ವಾ ನರಃ ।
ಪಶ್ಯತೀತ್ಥಮಥ ವಾನುಮೋದಯೇತ್ ॥
ಸೋಽಪಿ ಶಕ್ರಭವನೇ ದಿವೌಕಸೈಃ ।
ಕಲ್ಪಕೋಟಿಶತಮೋಕಮಿಾಡ್ಯತೇ ॥ ೨೩ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ಆದಿತ್ಯದಿನ ನಕ್ತವಿಧಿ ವರ್ಣನಂ
ನಾಮ ಪಂಚ ದಶೋತ್ತರ ಶತತಮೋಽಧ್ಯಾಯಃ.



---

೨೩. ಈ ವ್ರತಮಹಿಮೆಯನ್ನು ಯಾರು ಪಠನಮಾಡುವರೋ, ಯಾರು ಶ್ರವಣಮಾಡುವರೋ ಅಥವಾ ಈ ವ್ರತಮಾಡುತ್ತಿರುವುದನ್ನು ಭಕ್ತಿಯಿಂದ ನೋಡುವರೋ, ಇಲ್ಲವೇ ಪ್ರೇರಿಸುವರೋ ಅಂತಹ ಮಾನವರು ಸ್ವರ್ಗಲೋಕ ದಲ್ಲಿ ಮೂರುಕೋಟಿ ಕಲ್ಪಗಳವರೆಗೆ ದೇವತೆಗಳ ಸ್ತುತಿಗೆ ಪಾತ್ರರಾಗಿ ಸೇವಿಸ ಲ್ಪಡುವರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಭಾನುವಾರ
ನಕ್ತವಿಧಿವರ್ಣನೆಯೆಂಬ ನೂರಹದಿನೈದನೆಯ
ಅಧ್ಯಾಯ ಮುಗಿದುದು.



|| ಶ್ರೀ ||

---

# ಅಥ ಶ್ರೀ ಭವಿಷ್ಯೇ ಮಹಾಪುರಾಣ
## ಉತ್ತರಪರ್ವಣಿ
## ಷೋಡಶೋತ್ತರಶತತಮೋಽಧ್ಯಾಯಃ

---

|| ಶ್ರೀ ಕೃಷ್ಣ ಉವಾಚ ||

ಅಥಾನ್ಯದಪಿ ತೇ ವಚ್ಮಿ ಸಂಕ್ರಾಂತ್ಯುತ್ಪಾದನೇ ಫಲಂ |
ಯದಕ್ಷಯಂ ಪರಂ ಲೋಕೇ ಪುರಾಣಕವಯೋ ವಿದುಃ || ೧ ||

ವಿಷುವೇ ಅಯನೇ ವಾಪಿ ಸಂಕ್ರಾಂತಿವ್ರತಮಾರಭೇತ್ |
ಪೂರ್ವೇದ್ಯುರೇಕಭುಕ್ತೇನ ದಂತಧಾವನಪೂರ್ವಕಂ || ೨ ||

---

### ನೂರಹದಿನಾರನೆಯ ಅಧ್ಯಾಯ

೧. ಶ್ರೀಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರನೇ! ಪ್ರಾಚೀನರೂ, ಪುರಾಣ ಕವಿಗಳೂ, ಅಕ್ಷಯ ಫಲಪ್ರದವೆಂದು ಪ್ರತಿಪಾದಿಸಿರುವ ಅತ್ಯಂತ ಶ್ರೇಷ್ಠವಾದ ಸಂಕ್ರಾಂತಿ ವ್ರತವಿಧಿಯನ್ನೂ ಅದರ ಫಲವನ್ನೂ ಈಗ ನಿನಗೆ ಹೇಳುತ್ತೇನೆ ಕೇಳು.

೨. ವಿಷುವತ್ಪುಣ್ಯಕಾಲ ದಕ್ಷಿಣಾಯನಪುಣ್ಯಕಾಲ, ಉತ್ತರಾಯಣಪುಣ್ಯ ಕಾಲಗಳಲ್ಲಿ ಅದರ ಹಿಂದಿನದಿನ ಏಕಭುಕ್ತದಿಂದಿದ್ದು ಸಂಕ್ರಮಣದ ದಿನ, ಸಂಕ್ರಾಂತಿ ವ್ರತವನ್ನು ಆರಂಭಮಾಡುವವನಾಗಿ ವಿಧಿಪ್ರಕಾರ ದಂತಧಾವನ ಮಾಡಬೇಕು.

ಸಂಕ್ರಾಂತಿವಾಸರೇ ಪ್ರಾಪ್ತೇ ತಿಲೈಸ್ಸ್ನಾನಂ ವಿಧೀಯತೇ ।
ಅಭಿಸಂಕ್ರಮಣಂ ಭೂಮೌ ಚಂದನೇನಾಷ್ಟಪತ್ರಕಂ ॥ ೩ ॥

ಪದ್ಮಂ ಸಕರ್ಣಿಕಂ ಕುರ್ಯಾತ್ತಸ್ಮಿನ್ನಾವಾಹಯೇದ್ರವಿಂ ।
ಕರ್ಣಿಕಾಯಾಂ ನ್ಯಸೇತ್ಸೂರ್ಯಂ ಆದಿತ್ಯಂಪೂರ್ವತಸ್ತತಃ ॥ ೪ ॥

ನಮಸ್ಸಪ್ತಾರ್ಚಿಷೇಽಗ್ನೇಯೋ ಯಾಮ್ಯೇಋಜ್ಮಂಡಲಾಯ ಚ ।
ನಮಸ್ಸವಿತ್ರೇ ನೈರುರ್ತ್ಯೇ ವರುಣಂ ವಾರುಣೇ ಯಜೇತ್ ॥ ೫ ॥

ಸಪ್ತಸಪ್ತಿಂ ಚ ವಾಯವ್ಯೇ ಪೂಜಯೇದ್ಭಾಸ್ವತಾಂ ಪತಿಂ ।
ಮಾರ್ತಂಡಮುತ್ತರೇ ವಿಷ್ಣುಮೀಶಾನೇ ವಿನ್ಯಸೇದ್ದಲೇ ॥ ೬ ॥

---

೩. ಬಳಿಕ ಆ ದಿನ ಎಳ್ಳನ್ನು ಅರೆದು ಹಚ್ಚಿಕೊಂಡು ಸ್ನಾನಮಾಡಬೇಕು. ಆದಿನ ಸಂಕ್ರಮಣ ಹುಟ್ಟುವ ಕಾಲದಲ್ಲಿ ಭೂಮಿಯಲ್ಲಿ ಚಂದನದಿಂದ ಅಷ್ಟದಳ ಪದ್ಮವನ್ನು ಕರ್ಣಿಕಾಸಮೇತ ರಚಿಸಬೇಕು.

೪. ಹೀಗೆ ರಚಿಸಿದ ಪದ್ಮದಲ್ಲಿ ಸೂರ್ಯಾವಾಹನೆ ಮಾಡುವನಾಗಿ ಕರ್ಣಿಕೆಯಲ್ಲಿ ಸೂರ್ಯಾಯನಮಃ ಎಂದೂ, ಪೂರ್ವದಿಕ್ಕಿನ ಎಸಳಿನಲ್ಲಿ ಆದಿತ್ಯಾಯನಮಃ ಎಂದೂ, ಆಗ್ನೇಯದಿಕ್ಕಿನ ದಳದಲ್ಲಿ ಸಪ್ತಾರ್ಚಿಷೇನಮಃ ಎಂದೂ ನ್ಯಾಸ ಮಾಡಬೇಕು.

೫. ದಕ್ಷಿಣ ದಳದಲ್ಲಿ ಋಜ್ಮಂಡಲಾಯನಮಃ ಎಂಬದಾಗಿಯೂ, ನೈಋತ್ಯದಿಕ್ಕಿನ ದಳದಲ್ಲಿ ಓಂ ಸವಿತ್ರೇನಮಃ ಎಂದೂ, ಪಶ್ಚಿಮದಿಕ್ಕಿನ ದಳದಲ್ಲಿ ಓಂ ವರುಣಾಯನಮಃ ಎಂದೂ, ವಾಯುವ್ಯದಿಕ್ಕಿನಲ್ಲಿ ಓಂ ಸಪ್ತಸಪ್ತಯೇನಮಃ ಎಂದೂ ಕಿರಣಾಧಿಪನಾದ ಸೂರ್ಯನನ್ನು ಪೂಜಿಸಬೇಕು.

೬. ಉತ್ತರದಿಕ್ಕಿನ ದಳದಲ್ಲಿ ಓಂ ಮಾರ್ತಂಡಾಯನಮಃ ಎಂದೂ, ಈಶಾನ್ಯದ ದಳದಲ್ಲಿ ಓಂ ವಿಷ್ಣವೇನಮಃ ಎಂದೂ, ಈ ಪ್ರಕಾರ ಕಮಲದ ಎಂಟು ಎಸಳುಗಳಲ್ಲಿಯೂ ಕ್ರಮವಾಗಿ ಈ ಎಂಟು ನಾಮಗಳನ್ನು ವಿನ್ಯಾಸಮಾಡಿ ಆವಾಹಿಸಬೇಕು.

ಗಂಧಮಾಲ್ಯಫಲೈರ್ಭಕ್ಷ್ಯೈಃ ಸ್ಥಂಡಿಲೇ ಪೂಜಯೇತ್ತತಃ ।
ಚಂದನೋದಕಪುಷ್ಪೈಸ್ತು ದತ್ವಾರ್ಘಂ ವಿನ್ಯಸೇದ್ಭುವಿ　　॥ ೭ ॥

ನಮಸ್ತೇ ವಿಶ್ವರೂಪಾಯ ವಿಶ್ವಧಾಮ್ನೇ ಸ್ವಯಂಭುವೇ ।
ನಮೋ ನಮಸ್ತೇ ವರದ ಋಕ್ಸಾಮಯಜುಷಾಂ ಪತೇ　　॥ ೮ ॥

ಅನೇನ ವಿಧಿನಾ ದತ್ವಾ ಭಾನವೇಽರ್ಘ್ಯಂ ನರೋತ್ತಮ ।
ದ್ವಿಜಾಯ ಸೋದಕಂ ಕುಂಭಂ ಘೃತಪಾತ್ರಂ ಹಿರಣ್ಮಯಂ　　॥ ೯ ॥

ಕಮಲಂ ಚ ಯಥಾಶಕ್ತ್ಯಾ ಕಾರಯಿತ್ವಾ ನಿವೇದಯೇತ್ ।
ವಿಧಿನಾನೇನ ಕರ್ತವ್ಯಂ ಮಾಸಿಮಾಸಿ ನರೋತ್ತಮ　　॥ ೧೦ ॥

---

೭. ಅನಂತರ ಆವಾಹಿತನಾದ ದೇವನಿಗೆ ಗಂಧಪುಷ್ಪಾದಿಗಳನ್ನು ಸಮರ್ಪಿಸಿ, ಫಲಗಳು ಭಕ್ಷ್ಯಗಳು ಇವನ್ನು ನಿವೇದನಮಾಡಬೇಕು. ಪೂಜಾನಂತರ ಚಂದನ ಮಿಶ್ರವಾದ ಉದಕದಿಂದ ಪುಷ್ಪಾಕ್ಷತೆ ಸಮೇತ ಅರ್ಘ್ಯ ಕೊಡಬೇಕು.

೮. ವಿಶ್ವರೂಪಾಯನಮಃ ಎಂದು ಹೇಳಿ ಒಂದುಸಾರಿ ಅರ್ಘ್ಯ ಕೊಡಬೇಕು. ಹೀಗೆಯೇ ವಿಶ್ವಧಾಮ್ನೇನಮಃ, ಸ್ವಯಂಭುವೇನಮಃ, ವರದಾಯ ನಮಃ, ಋಕ್ಸಾಮಯಜುಷಾಂಪತಯೇನಮಃ ಎಂದು ಹೇಳಿ ಅರ್ಘ್ಯಪ್ರದಾನ ಮಾಡಬೇಕು.

೯. ಎಲೈ ರಾಜಶ್ರೇಷ್ಠನೇ! ಈ ಪ್ರಕಾರ ಸೂರ್ಯನಿಗೆ ಅರ್ಘ್ಯಕೊಟ್ಟು ಅನಂತರ ನೀರಿನಿಂದ ತುಂಬಿದ ಬಿಂದಿಗೆಯನ್ನೂ, ಚಿನ್ನದಿಂದ ಮಾಡಿದ ತುಪ್ಪದ ಪಾತ್ರೆಯನ್ನೂ, ಯಥಾಶಕ್ತಿ ಸುವರ್ಣದಿಂದ ನಿರ್ಮಿಸಿದ ಕಮಲವನ್ನೂ, ಬ್ರಾಹ್ಮಣೋತ್ತಮನಿಗೆ ಕೊಡಬೇಕು.

೧೦. ಪ್ರತಿಯೊಂದು ಸಂಕ್ರಮಣದ ದಿನದಲ್ಲಿಯೂ (ಪ್ರತಿ ತಿಂಗಳಲ್ಲೂ) ಇದೇ ಪ್ರಕಾರ ಪೂಜಾ ದಾನಾದಿಗಳನ್ನು ಮಾಡಬೇಕು.

ಏಕಭಕ್ತಾಶನೈಃ ಪುಂಭಿಃ ಸರ್ವಮೇತದ್ಯಥಾವಿಧಿ ।
ಏಕಸ್ಮಿನ್ನಹ್ನಿ ಕರ್ತವ್ಯಂ ವತ್ಸರಾಂತೇಽಥ ವಾ ಪುನಃ ॥ ೧೧ ॥

ಕೌಂತೇಯ ತಸ್ಮಿನ್ ಘೃತಪಾಯಸೇನ ।
ಸಂಪೂಜ್ಯ ವಹ್ನಿಂ ದ್ವಿಜಪುಂಗವಾಯ ॥
ಕುಂಭಾನ್ಪುನದ್ವಾದಶಧೇನುಯುಕ್ತಾನ್
ದೌರ್ಗತ್ಯಯುಕ್ತಃ ಕುಶಲಾಮಥೈಕಾಂ ॥ ೧೨ ॥

ನಿವೇದಯೇದ್ಬ್ರಾಹ್ಮಣಪುಂಗವಾಯ ।
ಹೈಮೀಂ ಚ ದದ್ಯಾತ್ಪೃಥಿವೀಂ ಸಸಸ್ಯಾಂ ॥
ಶಕ್ತ್ಯಾಥ ರೌಪ್ಯಾಮಥ ವಾ ಪಿ ತಾಮ್ರೀಂ ।
ಪೈಷ್ಟೀಮಶಕ್ತೋ ವಸುಧಾಂ ವಿಧಾಯ ॥ ೧೩ ॥

---

೧೧. ಆ ದಿವಸ ಪ್ರತಿಯು ಒಂದೇಹೊತ್ತು ಆಹಾರವನ್ನು ಸೇವಿಸಬೇಕು. ಸಂಕ್ರಮಣದ ದಿನದಲ್ಲೇ ವಿಧಿಪೂರ್ವಕವಾಗಿ ಎಲ್ಲವನ್ನೂ ಮಾಡಬೇಕು. ಹೀಗೆ ಒಂದುವರ್ಷ ಆಚರಿಸಿದನಂತರ ಮಾಡಬೇಕಾದ ವಿಧಿಯನ್ನು ಈಗ ಹೇಳುವೆನು ಕೇಳು.

೧೨. ಎಲೈ ಕೌಂತೇಯನೇ! ಒಂದುವರ್ಷವಾದ ಮೇಲೆ ಉದ್ಯಾಪನೆ ಮಾಡುವಾಗ ಕ್ರಮವಾಗಿ ಅಗ್ನಿಪ್ರತಿಷ್ಠಾಪನಮಾಡಿ, ಘೃತಪಾಯಸಾದಿ ಹವಿರ್ದ್ರವ್ಯಗಳಿಂದ ಹೋಮವನ್ನು ಮಾಡಬೇಕು. ಬಳಿಕ ಹನ್ನೆರಡು ಕಲಶಗಳನ್ನೂ ಹನ್ನೆರಡು ಗೋವುಗಳನ್ನೂ ದ್ವಿಜಶ್ರೇಷ್ಠರಿಗೆ ದಾನಮಾಡಬೇಕು. ಅಷ್ಟು ದಾನ ಮಾಡಲು ಅನುಕೂಲವಿಲ್ಲದವನು ಚಿನ್ನಾದ ಒಂದು ಕುಂಭ, ಒಳ್ಳೆಯದಾದ ಒಂದು ಹಸು, ಇಷ್ಟನ್ನಾದರೂ ದಾನಕೊಡಬೇಕು.

೧೩. ಇದರ ಜೊತೆಗೆ ಚಿನ್ನದಿಂದ ರಚಿಸಿದ, ಪೈರುಸಮೇತವಾದ ಭೂಮಿಯ ಪ್ರತಿಮೆಯನ್ನು ಕೊಡಬೇಕು. ಅಷ್ಟಕ್ಕೆ ಅನುಕೂಲವಿಲ್ಲದವರು ಬೆಳ್ಳಿಯಿಂದಲೋ, ತಾಮ್ರದಿಂದಲೋ ಅಥವಾ ಹಿಟ್ಟಿನಿಂದಲೋ ಆರೀತಿ ಕ್ಷೇತ್ರವನ್ನು ರಚಿಸಿ ದಾನಮಾಡಬೇಕು.

ಸೌವರ್ಣಸೂರ್ಯೇಣ ಸಮಂ ಪ್ರದದ್ಯಾ- ।
ನ್ನ ವಿತ್ತಶಾಠ್ಯಂ ಪುರುಷೋsತ್ರ ಕುರ್ಯಾತ್ ॥
ಕುರ್ವನ್ನಧೋ ಯಾತಿ ನರೇಂದ್ರಚಂದ್ರ ।
ಯಾವನ್ಮಹೇಂದ್ರಪ್ರಮುಖಾಃ ಸುರೇಶಾಃ ॥ ೧೪ ॥

ಪೃಥ್ವೀ ಚ ಯಾವತ್‌ಸಕುಲಾಚಲಾ ಚ ।
ಯಾವಚ್ಚ ಸೂರ್ಯಾನಿಲವಹ್ನಿಚಂದ್ರಾಃ ॥
ತಾವತ್ಸ ಗಂಧರ್ವಕುಲೈರಶೇಷೈಃ ।
ಸಂಪೂಜ್ಯತೇ ಭಾರತ ನಾಕಪೃಷ್ಠೇ ॥ ೧೫ ॥

ತತಸ್ತು ಕರ್ಮಕ್ಷಯಮಾಪ್ಯ ಸಪ್ತ ।
ದ್ವೀಪಾಧಿಪಃ ಸ್ಯಾತ್ಸುಕುಲಪ್ರಸೂತಃ ॥
ದಿವ್ಯೈಸ್ಸುಖೈರ್ಯುಕ್ತವಪುಃ ಸಭಾರ್ಯಃ ।
ಪ್ರಸೂತಪುತ್ರಾಸ್ವಯಬಂಧುವರ್ಗಃ ॥ ೧೬ ॥

---

೧೪. ಚಿನ್ನದಿಂದ ಮಾಡಿದ ಸೂರ್ಯಪ್ರತಿಮೆಯನ್ನು ಇದರ ಜೊತೆಯಲ್ಲಿ ದಾನಕೊಡಬೇಕು. ದ್ರವ್ಯಾನುಕೂಲವಿದ್ದರೂ ಜಿಪುಣತನಮಾಡಬಾರದು. ಅಯ್ಯಾ ನರೇಂದ್ರನೇ! ಹಾಗೆ ಮಾಡಿದವನು ಇಂದ್ರಾದಿ ದೇವತೆಗಳಿರುವವರೆಗೂ ಅಧೋಲೋಕವಾಸವನ್ನು ಅನುಭವಿಸುತ್ತಾನೆ.

೧೫. ಜಿಪುಣತನಮಾಡದೆ ತನ್ನ ದ್ರವ್ಯಸಂಪತ್ತಿಯ ಶಕ್ತ್ಯನುಸಾರವಾಗಿ ಚಿನ್ನದಿಂದ ಸೂರ್ಯಪ್ರತಿಮೆಯನ್ನು ಮಾಡಿಸಿ, ದಾನಮಾಡಿದವನಿಗೆ ಕುಲಪರ್ವತ ಸಮೇತ ಈ ಭೂಲೋಕವಿರುವವರೆಗೂ ಸೂರ್ಯ, ಅಗ್ನಿ, ಚಂದ್ರ ಇವರಿರುವರೆಗೂ ಸ್ವರ್ಗಲೋಕವಾಸ ಲಭಿಸಿ ಸಕಲ ಗಂಧರ್ವರಿಂದಲೂ ಪೂಜಿತನಾಗುವನು.

೧೬. ಬಳಿಕ ತನ್ನ ಕರ್ಮವು ಕ್ಷಯವಾದ ಮೇಲೆ ಸ್ವರ್ಗಲೋಕವನ್ನು ಬಿಟ್ಟು ಭೂಲೋಕದಲ್ಲಿ ಸತ್ಕುಲದಲ್ಲಿ ಜನಿಸಿ, ಸಪ್ತದ್ವೀಪಸಹಿತವಾದ ಭೂಮಂಡಲಕ್ಕೆ ಅಧಿಪತಿಯಾಗುವನು. ಆಗ ಸುಂದರವಾದ ದೇಹವುಳ್ಳವನಾಗಿ, ಅನುಕೂಲೆಯಾದ ಭಾರ್ಯಾಸಮೇತ ಸಕಲ ಸುಖಗಳನ್ನೂ ಅನುಭವಿಸುತ್ತಾ, ಪುತ್ರಪೌತ್ರರೂಪವಾದ ವಂಶಾಭಿವೃದ್ಧಿಯನ್ನೂ, ಬಂಧುವರ್ಗಸಮೃದ್ಧಿಯನ್ನೂ ಪಡೆಯುವನು.

ಇತಿ ಪಠತಿ ಶೃಣೋತಿ ಯೋಽತಿಭಕ್ತ್ಯಾ ।
ವಿಧಿಮಖಿಲಂ ರವಿಸಂಕ್ರಮೇಷು ಪುಣ್ಯಂ ॥
ಮತಿಮಪಿ ಚ ದದಾತಿ ಸೋಽಪಿ ದೇವೈಃ ।
ಅಮರಪತಿಪ್ರಮುಖೈರ್ನೃತಸ್ತು ಪೂಜ್ಯಃ ॥ ೧೭ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಸಂಕ್ರಾಂತ್ಯುದ್ಯಾಪನವರ್ಣನಂ ನಾಮ ಷೋಡಶೋತ್ತರಶತತಮೋಽಧ್ಯಾಯಃ.



೧೭. ಈರೀತಿಯಾಗಿ ಸೂರ್ಯಸಂಕ್ರಮಣ ಕಾಲಗಳಲ್ಲಿ ಮಾಡತಕ್ಕ ಪುಣ್ಯಕರವಾದ ವ್ರತದ ವಿಧಿಯನ್ನು ಅತಿಭಕ್ತಿಯಿಂದ ಪಠನಮಾಡಿದರೂ, ಶ್ರವಣ ಮಾಡಿದರೂ ಅಥವಾ ಇತರರಿಗೆ ಈ ವ್ರತಮಾಡಬೇಕೆಂಬ ಬುದ್ಧಿ ಹುಟ್ಟುವಂತೆ ಪ್ರೋತ್ಸಾಹಿಸಿದರೂ ಅಂಥವನು ಈ ಶರೀರತ್ಯಾಗಾನಂತರ ದೇವಲೋಕವನ್ನು ಸೇರಿ, ಅಲ್ಲಿ ಇಂದ್ರಾದಿ ದೇವತೆಗಳಿಂದ ಪೂಜಿತನಾಗುವನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಸಂಕ್ರಾಂತ್ಯುದ್ಯಾಪನ ವರ್ಣನೆಯೆಂಬ ನೂರಹದಿನಾರನೆಯ ಅಧ್ಯಾಯ ಮುಗಿದುದು.

॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣ
## ಉತ್ತರಪರ್ವಣಿ
## ಸಪ್ತದಶೋತ್ತರಶತತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಕೃಷ್ಣಕೇಯಂ ಜನ್ಯೈಸ್ಸರ್ವೈಃ ವಿಷ್ಟಿರ್ಭದ್ರೇತಿ ಚೋಚ್ಯತೇ ।
ಕಸ್ಯಾತ್ಮಜೇಯಂ ಕಿಂ ರೂಪಾ ಪೂಜ್ಯತೇ ಚ ಕಥಂ ಜನ್ಯೈಃ ॥ ೧ ॥

॥ ಶ್ರೀ ಕೃಷ್ಣ ಉವಾಚ ॥

ಸುತಾ ಮಾರ್ತಂಡದೇವಸ್ಯ ಛಾಯಯಾ ಜನಿತಾ ಪುರಾ ।
ಶನೈಶ್ಚರಸ್ಯ ಸೋದರ್ಯಾ ಭಗಿನ್ಯತಿಭಯಂಕರೀ ॥ ೨ ॥

---

## ನೂರಹದಿನೇಳನೆಯ ಅಧ್ಯಾಯ

೧. ಯುಧಿಷ್ಠಿರನು ಪ್ರಶ್ನೆಮಾಡುತ್ತಾನೆ—ಎಲೈ ಕೃಷ್ಣಪರಮಾತ್ಮನೇ! ಜನಗಳೆಲ್ಲರೂ ವಿಷ್ಟಿ, ಭದ್ರಾ ಎಂಬವರ ವಿಚಾರವನ್ನು ಪದೇ ಪದೇ ಹೇಳುತ್ತಾರೆ. ಆ ವಿಷ್ಟಿಭದ್ರೆಯು ಯಾರು? ಯಾರ ಮಗಳು? ಅವಳ ಸ್ವರೂಪವೇನು? ಆಕೆಯನ್ನು ಪೂಜಿಸುವ ವಿಧಾನವೇನು? ಇವೆಲ್ಲವನ್ನೂ ದಯೆಯಿಟ್ಟು ತಿಳಿಸು ಎಂದನು.

೨. ಕೃಷ್ಣನು ಹೇಳುತ್ತಾನೆ—ಅಯ್ಯಾ ಕೌಂತೇಯನೇ! ನೀನು ಪ್ರಶ್ನೆ ಮಾಡಿದ ಆ ವಿಷ್ಟಿಯೆಂಬವಳು ಛಾಯಾದೇವಿಯಲ್ಲಿ ಸೂರ್ಯನಿಂದ ಜನಿಸಿದವಳು. ಶನೈಶ್ಚರನ ಸಹೋದರಿ, ಇವಳು ತುಂಬಾ ಭಯಂಕರಸ್ವರೂಪಿಣಿ.

ಸಾ ಜಾತಮಾತ್ರಾ ಭುವನಂ ಗ್ರಸ್ತುಂ ಸಮುಪಚಕ್ರಮೇ ।
ಕೃಷ್ಣಾ ಕರಾಲವದನಾ ಸಿತದಂಷ್ಟ್ರೋರ್ಧ್ವಮೂರ್ಧಜಾ ॥ ೩ ॥

ನಿರ್ಯಾತಿ ಯದಿ ಕಾರ್ಯೇಣ ಕಶ್ಚಿತ್ತಸ್ಯ ಪುರಃ ಸ್ಥಿತಾ ।
ವಿಘ್ನಂ ಕರೋತಿ ಸ್ವಪತೋ ಭುಂಜಾನಸ್ಯ ಸ್ಥಿತಸ್ಯ ವಾ ॥ ೪ ॥

ಯಜ್ಞವಿಘ್ನಕರೀ ರೌದ್ರಾ ಸಮಾಜೋತ್ಸವನಾಶಿನೀ ।
ನಿತ್ಯೋದ್ವೇಗಕರೀ ರೌದ್ರಾ ವಿನಾಶಯತಿ ಸಾ ಜಗತ್ ॥ ೫ ॥

ತಾಂ ತು ದುರ್ವಿನಯಾಸಕ್ತಾಂ ದೃಷ್ಟ್ವಾ ದೇವೋ ದಿವಾಕರಃ ।
ಚಿಂತಯಾಮಾಸ ಕಸ್ಯಾಪಿ ಯಚ್ಛಾಮ್ಯೇನಾಂ ಸುಮಧ್ಯಮಾಂ ॥ ೬ ॥

---

೩. ಇವಳು ಹುಟ್ಟಿದ ಕೂಡಲೆ ಪ್ರಪಂಚವನ್ನೇ ನುಂಗಲು ಉಪಕ್ರಮಿಸಿದಳು. ಇವಳ ಬಣ್ಣ ಕಪ್ಪು. ಮುಖವು ವಿಕಾರರೂಪವುಳ್ಳದ್ದು. ಬಿಳಿಯ ಕೋರೆದಾಡೆಗಳನ್ನುಳ್ಳವಳು. ಛತ್ರಿಯಂತೆ ಊರ್ಧ್ವಮುಖಕ್ಕೆ ಕೆದರಿದ ಕೇಶರಾಶಿಯುಳ್ಳವಳು.

೪. ಕಾರ್ಯಸಾಧನೆಗಾಗಿ ಯಾವನಾದರೂ ಹೊರಟಾಗ ಇವಳು ಎದುರಿಗೆ ಸಿಕ್ಕಿದರೆ ಸಾಕು, ಅವನ ಕಾರ್ಯಸಾಧನೆಯ ವಿಚಾರ ಹಾಳು. ಅಷ್ಟೇ ಅಲ್ಲ. ಊಟಕ್ಕೂ ನಿದ್ದೆಗೂ ಕೊನೆಗೆ ಸುಮ್ಮನೆ ಇರುವುದಕ್ಕೂ ವಿಘ್ನವನ್ನು ತಂದೊಡ್ಡುವಳು.

೫. ಭಯಂಕರರೂಪಿಯಾದ ಇವಳು ಯಾಗಗಳಲ್ಲಿಯೂ, ಸಮಾಜಗಳ ಮತ್ತು ಉತ್ಸವಗಳ ಏರ್ಪಾಡಿನಲ್ಲಿಯೂ ಹಾನಿಯನ್ನೊಡ್ಡಿ ನಡೆಯದಂತೆ ಮಾಡುವಳು. ಯಾವಾಗಲೂ ಜಗತ್ತಿಗೆ ದುಃಖವನ್ನೇ ಉಂಟುಮಾಡುತ್ತಾ, ಭಯೋತ್ಪಾದಕಳಾಗಿ ಲೋಕವನ್ನೆಲ್ಲಾ ಹಾಳುಮಾಡುವಳು.

೬. ಈರೀತಿ ದುರ್ವಿನಯಾಸಕ್ತೆಯಾದ ಈ ವಿಷ್ಟಿಯನ್ನು ನೋಡಿ ಅವಳ ತಂದೆಯಾದ ಸೂರ್ಯನು ಕೃಶವಾದ ಸೊಂಟವುಳ್ಳ ಈ ಕುಮಾರಿಯನ್ನು ಯಾವ ಪುರುಷನಿಗಾದರೂ ಕೊಟ್ಟು ಮದುವೆಮಾಡಬೇಕೆಂದೂ.

**ಕನ್ಯಾದುರ್ವಿನಯಾಚ್ಚೇಹ ಪಿತಾ ದೋಷೇಣ ಗೃಹ್ಯತೇ ।**
**ಯುವತ್ಯಾಸ್ತು ತತೋ ಭರ್ತಾ ತಸ್ಮಾದ್ಭರ್ತೃಗೃಹಂ ನಯೇತ್ ॥ ೭ ॥**

**ವಿಚಿಂತ್ಯೈವಂ ಸುತಾಂ ಭದ್ರಾಂ ಯಸ್ಯಯಸ್ಯ ಪ್ರಯಚ್ಛತಿ ।**
**ತೇ ನಮಂತಿ ಕ್ಷಣೇನೈವ ಸುರರಾಕ್ಷಸಕಿನ್ನರಾಃ ॥ ೮ ॥**

**ಮಂಡಪಂ ಮಂಡಪಾರಂಭೇ ಭಂಕ್ತ್ವಾ ಭೀಷಯತೇ ಜನಂ ।**
**ವಿವಸ್ವಾಂಶ್ಚಿಂತಯಾವಿಷ್ಟಃ ಕಸ್ಯೇಯಂ ಪ್ರತಿಪಾದ್ಯತಾಂ ॥ ೯ ॥**

**ವಿರೂಪಾ ದುಷ್ಟಹೃದಯಾ ಸ್ವೇಚ್ಛಾಚಾರವಿಹಾರಿಣೀ ।**
**ದತ್ತಾಪ್ಯೇಷಾ ನ ದೋಷಾಯ ಭವತೀಹ ಕಥಂಚನ ॥ ೧೦ ॥**

---

೭. ಕನ್ಯೆಯು ದುರ್ವಿನಯವತಿಯಾದರೆ ತಂದೆಯು ದೋಷಭಾಗಿಯಾಗುವನು. ವಿವಾಹಿತೆಯಾದ ಯುವತಿಯ ದುರ್ವಿನಯಗಳಿಂದ ಗಂಡನು ದೋಷಾರೋಪಣೆಹೊಂದುವನು. ಆದ್ದರಿಂದ ಇವಳನ್ನು ಮದುವೆಮಾಡಿ ಗಂಡನ ಮನೆಗೆ ಕಳುಹಿಸಿದರೆ ನನ್ನ ಭಾರವು ಕಳೆಯುವುದು ಎಂದೂ ಆಲೋಚಿಸಿದನು.

೮. ಈ ವಿಷ್ಟಿಗೆ ಭದ್ರಾ ಎಂಬ ಸಂಜ್ಞಾನಾಮವೂ ರೂಢಿಯಲ್ಲಿದ್ದು ವಿಷ್ಟಿಭದ್ರಾ ಎಂಬ ವ್ಯವಹಾರವಿತ್ತು. ಸೂರ್ಯನು ಹೀಗೆ ತನ್ನ ಕುಮಾರಿ ವಿಷ್ಟಿಭದ್ರೆಯನ್ನು ದೇವತೆಗಳು, ರಾಕ್ಷಸರು, ಕಿನ್ನರರು ಇವರಲ್ಲಿ ಯಾರಿಗೆ ಕೊಟ್ಟು ಮದುವೆಮಾಡುತ್ತೇನೆಂದರೂ ಅವರೆಲ್ಲ 'ನನಗೆ ಬೇಡ' 'ತನಗೆ ಬೇಡ' ಎಂದು ಉತ್ತರ ಹೇಳುವರು.

೯. ಹಾಗೇನಾದರೂ ಒಪ್ಪಿಕೊಂಡರೂ ವಿವಾಹಮಹೋತ್ಸವದ ಪ್ರಥಮ ಸೋಪಾನವೆನಿಸಿದ ಮಂಟಪನಿರ್ಮಾಣ ಕಾಲದಲ್ಲಿಯೇ ಆ ಮಂಟಪವನ್ನು ಇವಳೇ ನಾಶಪಡಿಸಿ ಅವರಿಗೆ ಅಪಶಕುನವನ್ನುಂಟುಮಾಡುತ್ತಾ ಜನಗಳನ್ನು ಭಯಪಡಿಸುತ್ತಿದ್ದಳು. ಹೀಗಾಗಲಾಗಿ ಸೂರ್ಯನು ಇವಳನ್ನು ಯಾರಿಗೆ ಕೊಡುವುದು? ಎಂಬ ಚಿಂತೆಯಲ್ಲೇ ಮಗ್ನನಾದನು.

೧೦. ವಿಕಾರವಾದ ರೂಪ, ದುಷ್ಟವೂ ಕಠೋರವೂ ಆದ ಮನಸ್ಸು, ಮನಬಂದಂತೆ ಆಚರಿಸಿ ವಿಹರಿಸುವ ಸ್ವಭಾವ. ಇವನ್ನುಳ್ಳ ಯಾವನಿಗಾದರೂ ವಿವಾಹಮಾಡಿಬಿಟ್ಟರೆ ಸರಿ. ನನಗೆ ಪ್ರಾಪ್ತವಾಗುವ ದೋಷವು ಹೇಗೋ ನಿವೃತ್ತಿಯಾದರೆ ಸಾಕು. ಮುಂದೆ ಹೇಗಾದರೂ ಆಗಲಿ.''

ವಿತರ್ಕಯನ್ಯಾವದೇವಮಾಸ್ತೇ ದೇವೋ ದಿವಸ್ಪತಿಃ ।
ತಾವತ್ತಯಾ ಜಗತ್ಸರ್ವಂ ದುಷ್ಟಯಾ ಸಮುಭಿದ್ರುತಂ ॥ ೧೧ ॥

ಅಥಾಜಗಾಮ ಸವಿತುಃ ಪಾರ್ಶ್ವೇ ಬ್ರಹ್ಮಾಂಡಸಂಭವಃ ।
ಕಾರ್ಯಂ ನಿವೇದಯಾಮಾಸ ವಿಷ್ಟೇರ್ದೌಷ್ಟ್ಯಮಶೇಷತಃ ॥ ೧೨ ॥

ಭಾಸ್ಕರಸ್ತಮುವಾಚಾಥ ಬ್ರಹ್ಮಾಣಂ ಭುವನೇಶ್ವರಂ ।
ಭವಾನ್ ಕರ್ತಾ ಚ ಹರ್ತಾ ಚ ಕಸ್ಮಾದೇವಂ ಪ್ರಭಾಷಸೇ ॥ ೧೩ ॥

ಏವಮುಕ್ತಸ್ತದಾ ಬ್ರಹ್ಮಾ ಭಾಸ್ಕರೇಣಾಮಿತದ್ಯುತಿಃ ।
ಉವಾಚ ವಿಷ್ಟಿಮಾನಾಯ್ಯ ಶೃಣು ಭದ್ರೇ ಮಯೋದಿತಮ್ ॥ ೧೪ ॥

ಕರಣೈಸ್ಸಹ ವರ್ತಸ್ವ ಬವಬಾಲವಕೌಲವೈಃ ।
ಸ್ತೋಮೇಽರ್ಧದಿನೇ ಪ್ರಾಪ್ತೇ ಯದಭೀಷ್ಟಂ ಕುರುಷ್ವ ತತ್ ॥ ೧೫ ॥

---

೧೧. ಹೀಗೆಂದು ಸೂರ್ಯನು ಆಲೋಚನೆಮಾಡುತ್ತಿರುವಷ್ಟರಲ್ಲಿಯೇ ದುಷ್ಟಳಾದ ವಿಷ್ಟಿಭದ್ರೆಯು ಲೋಕವನ್ನೆಲ್ಲಾ ತುಂಬಾ ಘಾಸಿಪಡಿಸಿದಳು.

೧೨. ಬ್ರಹ್ಮಾಂಡದಲ್ಲಿ ಜನಿಸಿದ ಬ್ರಹ್ಮನು ಇವಳ ವಿಘಾತಿಯಿಂದ ಗಾಬರಿಗೊಂಡು ಸೂರ್ಯನ ಸಮೀಪಕ್ಕೆ ಬಂದು, ಅವನ ಕುಮಾರಿಯಾದ ವಿಷ್ಟಿಯ ದುಷ್ಟವರ್ತನೆಗಳನ್ನೆಲ್ಲಾ ಆಮೂಲಾಗ್ರವಾಗಿ ಸೂರ್ಯನಿಗೆ ತಿಳಿಸಿದನು.

೧೩. ಭಾಸ್ಕರನು ಇದನ್ನು ಕೇಳಿ ಲೋಕೇಶನಾದ ಬ್ರಹ್ಮನನ್ನು ಕುರಿತು " ಸೃಷ್ಟಿಕರ್ತನೂ ಸಂಹಾರಕರ್ತನೂ ಎಲ್ಲವೂ ನೀನೇ ಎನಿಸಿ, ಸರ್ವಸಮರ್ಥನಾಗಿರುವಾಗ ಈ ವಿಷಯವನ್ನು ನನಗೇಕೆ ಹೇಳುತ್ತಿರುವೆ ? ಇದಕ್ಕೆ ಸರಿಯಾದ ವ್ಯವಸ್ಥೆಯನ್ನು ಮಾಡಲು ನೀನೇ ಸಮರ್ಥನು " ಎಂದು ಹೇಳಿದನು.

೧೪. ಭಾಸ್ಕರನು ಹೀಗೆ ಹೇಳಲಾಗಿ, ಮಹಾತೇಜಸ್ವಿಯಾದ ಬ್ರಹ್ಮನು ಆಗ ವಿಷ್ಟಿಯನ್ನು ಕರೆಯಿಸಿ, " ಭದ್ರೇ ನಾನು ಹೇಳುವುದನ್ನು ಕೇಳು " ಎಂದು ಹೇಳತೊಡಗಿದನು.

೧೫. " ಅಮ್ಮಾ ನೀನು ಬವ, ಬಾಲವ, ಕೌಲವಗಳೆಂಬ ಕರಣಗಳೊಡನೆ ಸುಖವಾಗಿರು. ಈ ಮೂರು ಕರಣಗಳೂ ಕಳೆದ ಮೇಲೆ ಏಳನೆಯ ಅರ್ಧದಿನ (ಮೂರು ದಿನಗಳು ಕಳೆದ ಮೇಲೆ ನಾಲ್ಕನೆಯ ದಿನ ಹಗಲು) ನಿನಗೆ ಇಷ್ಟಬಂದಂತೆ ವಿಹರಿಸು.

ಯಾತ್ರಾಪ್ರವೇಶ ಮಾಂಗಲ್ಯಕೃಷಿವಾಣಿಜ್ಯಕಾರಣಾತ್ ।
ಭಕ್ಷಯಸ್ವಾಭಿಮುಖಗಾನ್ ನರಾನುನ್ಮಾರ್ಗಗಾಮಿನಃ ॥ ೧೬ ॥

ಉದ್ವೇಜನೀಯೋ ನೋ ಹಿ ಜನೋ ಭವತ್ಯಾ ದಿವಸತ್ರಯಂ ।
ಪೂಜ್ಯಾ ಸುರಾಸುರಾಣಾಂ ತ್ವಂ ದಿವಸಾರ್ಧೇ ಭವಿಷ್ಯತಿ ॥ ೧೭ ॥

ಉಲ್ಲಂಘ್ಯ ಯೇ ಪ್ರವರ್ತಂತೇ ಭದ್ರೇ ತ್ವಾಂ ನಿರ್ಭಯಾ ನರಾಃ ।
ತೇಷಾಂ ವಿನಾಶಯಾಶು ತ್ವಂ ಕಾರ್ಯಮಾರ್ಯೇ ಸುಖೀ ಭವ ॥ ೧೮ ॥

ಏವಮುಕ್ತ್ವಾ ಗತೋ ಬ್ರಹ್ಮಾ ಭದ್ರಾಪಿ ಭುವನತ್ರಯಂ ।
ಬಭ್ರಾಮೋದ್ಭ್ರಾಂತಹೃದಯಾ ಭೀಷಯಂತೀ ಸುರಾಸುರಾನ್ ॥
ಏವಮೇಷಾ ಸಮುತ್ಪನ್ನಾ ವಿಷ್ಟಿರಿಷ್ಟವಿನಾಶಿನೀ । ॥ ೧೯ ॥

ನಿವೇದಿತಾ ತೇ ಕೌಂತೇಯ ತಸ್ಮಾತ್ತಾಂ ಪರಿವರ್ಜಯೇತ್ ॥ ೨೦ ॥

---

೧೬. ಮತ್ತು ಪ್ರಯಾಣ, ಗೃಹಾದಿ ಪ್ರವೇಶಗಳು, ವಿವಾಹ, ಕೃಷಿ, ವ್ಯಾಪಾರ ಮುಂತಾದುವುಗಳಲ್ಲಿ ಆದಿನ ನಿನಗಭಿಮುಖವಾಗಿ ಪ್ರವರ್ತಿಸುವವರನ್ನೂ ಭಕ್ಷಿಸು.

೧೭. ಬವ, ಬಾಲವ, ಕೌಲವ ಈ ಮೂರು ಕರಣಗಳಿರುವ ಮೂರು ದಿವಸಗಳಲ್ಲಿ ನೀನು ಯಾವ ಜನಗಳನ್ನೂ ಉದ್ವೇಗಪಡಿಸಬೇಡ, ಆ ದಿವಸಾರ್ಧ ಭಾಗದಲ್ಲಿ ದೇವತೆಗಳೂ ರಾಕ್ಷಸರೂ ಸಹ ನಿನ್ನನ್ನು ಪೂಜಿಸುವರು.

೧೮. ಎಲೌ ಪೂಜ್ಯಳೇ! ಈರೀತಿ ನಡೆಯದೆ ನಿರ್ಭಯದಿಂದ ನಿಯಮೋಲ್ಲಂಘನಮಾಡುವವರನ್ನು ನೀನು ಕೂಡಲೆ ನಾಶಪಡಿಸು. ಸುಖವಾಗಿರು ಹೋಗು ಎಂದು ಹೇಳಿದನು.

೧೯. ಬ್ರಹ್ಮನು ಹೀಗೆ ಹೇಳಿ ಹೊರಟುಹೋದನು. ಅನಂತರ ವಿಷ್ಟಿ ಭದ್ರೆಯು ಮೂರು ಲೋಕಗಳನ್ನೂ ಸುತ್ತುತ್ತಾ ಅಲ್ಲಿರುವ ದೇವತೆಗಳು ದಾನವರು ಎಲ್ಲರನ್ನೂ ಭಯಪಡಿಸತೊಡಗಿದಳು.

೨೦. ಅಯ್ಯಾ ಕೌಂತೇಯನೇ! ಆ ವಿಷ್ಟಿಯ ಜನನವನ್ನೂ ಅವಳ ಚರಿತ್ರೆಯನ್ನೂ ನಿನಗೆ ತಿಳಿಸಿದೆನು. ಆದುದರಿಂದ ಶುಭಕಾರ್ಯಗಳನ್ನು ಮಾಡುವುದರಲ್ಲಿ ಈ ವಿಷ್ಟಿಯು ಇರುವ ಸಮಯವನ್ನು ವರ್ಜ್ಯಮಾಡಬೇಕು.

ಅಸಿತಜಲದವರ್ಣಾ ದೀರ್ಘನಾಸೋಗ್ರದಂಷ್ಟ್ರಾ ।
ವಿಪುಲಹನುಕಪಾಲಾ ಪಿಂಡಿಕೋದ್ವೃದ್ಧಜಂಘಾ ॥
ಅನಲಶತಸಹಸ್ರಂ ಚೋದ್ಗಿರಂತೀ ಸಮಂತಾತ್ ।
ಪತತಿ ಭುವನಮಧ್ಯೇ ಕಾರ್ಯನಾಶಾಯ ವಿಷ್ಟಿಃ ॥ ೨೦ ॥

ಭಾನೋಸ್ಸುತಾ ಕೇತುಶತಾಗ್ರಜಾತಾ ।
ಕೃಷ್ಣಾ ಕುಮಾರೀಃ ಸತತಂ ಕುಚೇಲಾ ॥
ದೇವೈರ್ನಿಯುಕ್ತಾ ಕರಣಾರ್ಥಸಂಸ್ಥಾ ।
ವಿಷ್ಟಿಸ್ತು ಸರ್ವತ್ರ ವಿವರ್ಜನೀಯಾ ॥ ೨೧ ॥

ಮುಖೇ ತು ಘಟಿಕಾಃ ಪಂಚ ದ್ವೇ ಕಂಠೇ ತು ಸದಾ ಸ್ಥಿತೇ ।
ಹೃದಿ ಚೈಕಾದಶ ಪ್ರೋಕ್ತಾಶ್ಚತಸ್ರೋ ನಾಭಿಮಂಡಲೇ ॥ ೨೨ ॥

---

೨೦. ನೀಲಮೇಘದಂತೆ ಬಣ್ಣವುಳ್ಳವಳೂ, ಉದ್ದವಾದ ಮೂಗು, ಭಯಂಕರವಾದ ದಾಡೆ, ವಿಸ್ತಾರವಾದ ದವಡೆ ಮತ್ತು ಕಪೋಲಪ್ರದೇಶ, ಪಿಂಡಿಕಾಕಾರವಾದ ಜಂಘೆ ಇವುಗಳನ್ನುಳ್ಳವಳಾಗಿ, ಸುತ್ತಲೂ ಸಾವಿರಾರು ಅಗ್ನಿ ಜ್ವಾಲೆಯನ್ನುಗುಳುತ್ತಿರುವ ಈ ವಿಷ್ಟಿಯು ಜನಗಳ ಕಾರ್ಯಗಳನ್ನು ನಾಶಮಾಡುವುದಕ್ಕಾಗಿಯೇ ಪ್ರಪಂಚದೊಳಗೆ ಆವಿರ್ಭವಿಸಿದಳು.

೨೧. ಸೂರ್ಯಕುಮಾರಿಯೂ ಶತಕೇತುಗಳ ಅಗ್ರದಲ್ಲಿ ಜನಿಸಿದವಳೂ, ಕೃಷ್ಣವರ್ಣವುಳ್ಳವಳೂ, ಛಿದ್ರವೂ, ಮಲಿನವೂ ಆದ ವಸ್ತ್ರಗಳನ್ನು ಧರಿಸಿರುವವಳೂ ಕರಣಗಳಿಗೋಸ್ಕರವೇ ಬ್ರಹ್ಮಾದಿ ದೇವತೆಗಳಿಂದ ನಿಯಮಿಸಲ್ಪಟ್ಟಿರುವವಳೂ, ಆದ ಈ ವಿಷ್ಟಿಯನ್ನು (ವಿಷ್ಟಿಭದ್ರಾಕರಣವಿರುವ ವೇಳೆಯನ್ನು) ಬಿಟ್ಟು ಬೇರೆ ಕಾಲದಲ್ಲಿ ಯಾವ ಕಾರ್ಯಗಳನ್ನಾದರೂ ಮಾಡಬಹುದು.

೨೨. ಈ ವಿಷ್ಟಿಯ ಒಟ್ಟು ಪ್ರಮಾಣದ ಘಳಿಗೆಗಳೊಳಗೆ ಮುಖದಲ್ಲಿ ಐದು ಘಳಿಗೆ, ಕುತ್ತಿಗೆಯಲ್ಲಿ ಎರಡು ಘಳಿಗೆ, ಸದಾ ಇರುವುವು. ಮತ್ತು ಹೃದಯದಲ್ಲಿ ಹನ್ನೊಂದು ಘಳಿಗೆ, ನಾಭಿಮಂಡಲದಲ್ಲಿ ನಾಲ್ಕು ಘಳಿಗೆಗಳು.

ಕಟ್ಯಾಂ ಪಂಚೈವ ವಿಜ್ಞೇಯಾಃ ತಿಸ್ರಃ ಪುಚ್ಛೇ ಜಯಾವಹಾಃ ।
ಮುಖೇ ಕಾರ್ಯವಿನಾಶಾಯ ಗ್ರೀವಾಯಾಂ ಧನನಾಶಿನೀ　॥ ೨೪ ॥

ಹೃದಿ ಪ್ರಾಣಹರಾ ಜ್ಞೇಯಾ ನಾಭ್ಯಾಂ ತು ಕಲಹಾವಹಾ ।
ಕಟ್ಯಾಮರ್ಥಪರಿಭ್ರಂಶೋ ವಿಷ್ಟಿಪುಚ್ಛೇ ಧ್ರುವೋ ಜಯಃ　॥ ೨೫ ॥

ಪೃಥಿವ್ಯಾಂ ಯಾನಿ ಕಾರ್ಯಾಣಿ ಸುಶುಭಾನ್ಯಶುಭಾನಿ ಚ ।
ತಾನಿ ಸರ್ವಾಣಿ ಸಿದ್ಧ್ಯಂತಿ ವಿಷ್ಟಿಪುಚ್ಛೇ ನ ಸಂಶಯಃ　॥ ೨೬ ॥

ಧನ್ಯಾ ದಧಿಮುಖೀ ಭದ್ರಾ ಮಹಾಮಾರೀ ಖರಾನನಾ ।
ಕಾಲರಾತ್ರಿರ್ಮಹಾರುದ್ರಾ ವಿಷ್ಟಿಶ್ಚ ಕುಲಪುತ್ರಿಕಾ　॥ ೨೭ ॥

---

೨೪. ಕಟಿಯಲ್ಲಿ ಐದು ಘಳಿಗೆ, ಬಾಲದಲ್ಲಿ ಮೂರು ಘಳಿಗೆ ಈರೀತಿ ವಿಷ್ಟಿಯು ಒಟ್ಟು ಶರೀರದಲ್ಲಿ ಮೂವತ್ತು ಘಳಿಗೆಗಳಿರುವುವು. ಇವಳ ಮುಖದಲ್ಲಿನ ಐದು ಘಳಿಗೆಯ ಕಾಲ ಯಾವ ಕಾರ್ಯಮಾಡಿದರೂ ಅದು ನಾಶವಾಗುವುದು.

೨೫. ಕುತ್ತಿಗೆಯಲ್ಲಿರುವ ಎರಡು ಘಳಿಗೆ ಕಾಲವು ಧನನಾಶಕವಾದುದು. ಹೃದಯದಲ್ಲಿನ ಹನ್ನೊಂದು ಘಳಿಗೆ ಕಾಲವು ಪ್ರಾಣಾಪಹಾರಕವಾದುದು. ನಾಭಿಯಲ್ಲಿನ ನಾಲ್ಕು ಘಳಿಗೆಗಳು ಜಗಳವನ್ನುಂಟುಮಾಡುವುದು. ಕಟಿಯಲ್ಲಿಯ ಐದು ಘಳಿಗೆಗಳ ಕಾಲವು ದ್ರವ್ಯಹಾನಿಯನ್ನುಂಟುಮಾಡುವುದು. ಆದರೆ ವಿಷ್ಟಿಪುಚ್ಛದಲ್ಲಿನ ಮೂರು ಘಳಿಗೆಗಳು ಮಾತ್ರ ಜಯವನ್ನುಂಟುಮಾಡುವುವು.

೨೬. ಭೂಮಂಡಲದಲ್ಲಿ ಶುಭಕರ್ಮ, ಅಶುಭಕರ್ಮಗಳನ್ನು ಯಾವುದನ್ನು ಮಾಡಬೇಕಾದರೂ ಅವೆಲ್ಲವನ್ನೂ ವಿಷ್ಟಿಪುಚ್ಛದಲ್ಲಿನ ಮೂರು ಘಳಿಗೆಯ ಕಾಲದಲ್ಲಿ ಆಚರಿಸಿದರೆ ನಿಜವಾಗಿಯೂ ಸಿದ್ಧಿಸುವುವು.

೨೭-೨೮. ಧನ್ಯಾ, ದಧಿಮುಖೀ, ಭದ್ರಾ, ಮಹಾಮಾರೀ, ಖರಾನನಾ, ಕಾಲರಾತ್ರಿ, ಮಹಾರುದ್ರಾ, ವಿಷ್ಟಿ, ಕುಲಪುತ್ರಿಕಾ, ಭೈರವೀ, ಮಹಾಕಾಲೀ,

ಭೈರವೀ ಚ ಮಹಾಕಾಲೀ ಅಸುರಾಣಾಂ ಕ್ಷಯಂಕರೀ ।
ದ್ವಾದಶೈವ ತು ನಾಮಾನಿ ಪ್ರಾತರುತ್ಥಾಯ ಯಃ ಪಠೇತ್ ॥ ೨೮ ॥

ನ ಚ ವ್ಯಾಧಿರ್ಭವೇತ್ತಸ್ಯ ರೋಗೀ ರೋಗಾತ್ಪ್ರಮುಚ್ಯತೇ ।
ಗ್ರಹಾಸ್ಸರ್ವೇಽನುಕೂಲಾಸ್ಸ್ಯುರ್ನ ಚ ವಿಘ್ನಾದಿ ಜಾಯತೇ ॥ ೨೯ ॥

ರಣೇ ರಾಜಕುಲೇ ದ್ಯೂತೇ ಸರ್ವತ್ರ ವಿಜಯೀ ಭವೇತ್ ॥ ೩೦ ॥

ಯಶ್ಚ ಪೂಜಯತೇ ನಿತ್ಯಂ ಶಾಸ್ತ್ರೋಕ್ತವಿಧಿನಾ ನರಃ ।
ತಸ್ಯ ಸರ್ವಾರ್ಥಸಿದ್ಧಿಸ್ತು ಭವತೀಹ ನ ಸಂಶಯಃ ॥ ೩೧ ॥

ಯೇನೋಪವಾಸವಿಧಿನಾ ವ್ರತೇನ ಚ ಯಶಸ್ವಿನೀ ।
ಪೂಜಿತಾ ತುಷ್ಟಿಮಭ್ಯೇತಿ ತದೇವ ಕಥಯಾಮಿ ತೇ ॥ ೩೨ ॥

---

ಅಸುರಕ್ಷಯಕರೀ ಎಂಬ ಈ ಹನ್ನೆರಡು ನಾಮಗಳನ್ನು ಬೆಳಗ್ಗೆ ಎದ್ದು ಪಠಿಸಿದ ವರಿಗೆ ಯಾವ ವ್ಯಾಧಿಗಳೂ ಬರುವುದಿಲ್ಲ.

೨೯. ರೋಗಿಗೆ ರೋಗಭಾಧೆ ತೋರುವುದಿಲ್ಲ. ಆದಿತ್ಯಾದಿ ಗ್ರಹಗಳೆಲ್ಲ ಅನುಕೂಲವಾಗುವರು. ಅಲ್ಲದೆ ಕಾರ್ಯಕ್ಕೆ ಯಾವ ವಿಘ್ನವೂ ಬರುವುದಿಲ್ಲ.

೩೦. ಈ ವಿಷ್ಟಿ ಸ್ತೋತ್ರಮಾಡುವವನು ಯುದ್ಧ, ರಾಜರ ಸಮ್ಮುಖ, ಜೂಜು, ಇವೇ ಮೊದಲಾದ ಎಲ್ಲ ಕಾರ್ಯಗಳಲ್ಲಿಯೂ ಜಯಶಾಲಿಯಾಗು ವನು.

೩೧. ಶಾಸ್ತ್ರೋಕ್ತರೀತಿಯಿಂದ ಭಕ್ತಿಪೂರ್ವಕವಾಗಿ ಈ ವಿಷ್ಟಿಯನ್ನು ನಿತ್ಯವೂ ಪೂಜಿಸುವ ಮಾನವನು ನಿಸ್ಸಂದೇಹವಾಗಿ ಸಕಲ ಇಷ್ಟಾರ್ಥಗಳನ್ನೂ ಹೊಂದುವನು.

೩೨. ಯಾವ ಪ್ರಕಾರದ ಉಪವಾಸವಿಧಿಯನ್ನು ನಡೆಸಿ ಯಾವ ವ್ರತ ಮಾಡಿದರೆ ಯಶಸ್ವಿನಿಯಾದ ಈ ವಿಷ್ಟಿಯು ತೃಪ್ತಳಾಗುವಳೋ ಅದನ್ನು ನಿನಗೆ ಸಮಗ್ರವಾಗಿ ಹೇಳುವೆನು ಕೇಳು.

ಯಸ್ಮಿನ್ದಿನೇ ಭವೇದ್ಭದ್ರಾ ತಸ್ಮಿನ್ನಹನಿ ಭಾರತ ।
ಉಪವಾಸಸ್ಯ ನಿಯಮಂ ಕುರ್ಯಾನ್ನಾರೀ ನರೋಽಥವಾ　　॥ ೩೩ ॥

ಯದಿ ರಾತ್ರೌ ಭವೇದ್ವಿಷ್ಟಿರೇಕಭಕ್ತಂ ದಿನದ್ವಯಂ ।
ಕಾರ್ಯಂ ತೇನೋಪವಾಸಸ್ಸ್ಯಾದಿತಿ ಪೌರಾಣಿಕೀ ಶ್ರುತಿಃ　　॥ ೩೪ ॥

ಪ್ರಹರಸ್ಯೋಪರಿ ಯದಾ ಸ್ಯಾದ್ವಿಷ್ಟಿಃ ಪ್ರಹರತ್ರಯಂ ।
ತತ್ರೋಪವಾಸಃ ಕರ್ತವ್ಯ ಏಕಭುಕ್ತಮತೋಽನ್ಯಥಾ　　॥ ೩೫ ॥

ಸರ್ವೌಷಧ್ಯುದಕಸ್ನಾನಂ ಸುಗಂಧಾಮಲಕೈರಥ ।
ನದ್ಯಾಂ ತಡಾಗೇಽಥ ಗೃಹೇ ಸ್ನಾನಂ ಸರ್ವತ್ರ ಶಸ್ಯತೇ　　॥ ೩೬ ॥

---

೩೩. ಅಯ್ಯಾ ಕೌಂತೇಯನೇ! ಈ ಭದ್ರಾ ಅಥವಾ ವಿಷ್ಟಿಯಿರುವಾಗ ಸ್ತ್ರೀಯಾಗಲಿ, ಪುರುಷನಾಗಲಿ ಆದಿನ ಹಗಲು ಉಪವಾಸನಿಯಮವನ್ನು ಆಚರಿಸಬೇಕು.

೩೪. ಈ ವಿಷ್ಟಿಯು ಹಗಲಲ್ಲೂ ಹಿಂದಿನ ರಾತ್ರಿಯಲ್ಲೂ ಇದ್ದರೆ ಎರಡು ದಿನದಲ್ಲೂ ಒಂದೇಹೊತ್ತು ಆಹಾರ ಸೇವನೆಮಾಡಬೇಕು. ಹೀಗೆ ಮಾಡಿದ ಪಕ್ಷದಲ್ಲಿ ಉಪವಾಸ ಮಾಡಿದಂತೆಯೇ ಆಗುವುದೆಂದು ಪುರಾಣಶ್ರುತಿಯಿರುವುದು.

೩೫. ವಿಷ್ಟಿಯು ಒಂದು ಪ್ರಹರದ ಮೇಲೆ ಮೂರು ಪ್ರಹರಗಳ ಕಾಲವಿದ್ದರೆ ಆದಿನ ಉಪವಾಸವನ್ನೇ ಮಾಡಬೇಕು. ಹಾಗಿಲ್ಲದೆ ಕಡಮೆಯಾಗಿದ್ದರೆ ಒಂದುಹೊತ್ತು ಮಾತ್ರ ಭೋಜನಮಾಡಬಹುದು.

೩೬. ಈ ವ್ರತಮಾಡುವಾಗ ಸಕಲ ಓಷಧಿಗಳಿಂದ ಕೂಡಿದ ನೀರಿನಿಂದ ಸ್ನಾನಮಾಡಬೇಕು. ಅಥವಾ ಸುಗಂಧವಾದ ಆಮಲಕ (ನೆಲ್ಲಿ) ಚೂರ್ಣದಿಂದ ಸ್ನಾನಮಾಡಬೇಕು. ಬೇಕಾದರೆ ನದಿಯ ನೀರಿನಲ್ಲಿಯೋ ಕೆರೆಯ ನೀರಿನಲ್ಲೋ ಸ್ನಾನಮಾಡಬಹುದು. ನದಿ, ಕೆರೆ, ಮನೆಯಲ್ಲಿ ಕಾಯಿಸಿದ ನೀರು ಯಾವುದಾದರೂ ಸರಿ ಎಲ್ಲವೂ ಪ್ರಶಸ್ತವೆನಿಸುವುದು.

ದೇವಾನ್ಪಿತೄನ್ ಪ್ರೀಣಯಿತ್ವಾ ತತೋ ದರ್ಭಮಯೀಂ ಶುಭಾಂ ।
ವಿಷ್ಟಿಂ ಕೃತ್ವಾ ಪುಷ್ಪಧೂಪೈರ್ನೈವೇದ್ಯೇನ ಚ ಪೂಜಯೇತ್ ॥ ೩೭ ॥

ಹೋಮಂ ಕೃತ್ವಾ ವಿಷ್ಟಿನಾಮ್ನೈರಷ್ಟೋತ್ತರಶತಂ ತತಃ ।
ಭುಂಜೀತ ದತ್ವಾ ವಿಪ್ರಾಯ ತಿಲಾನ್ಪಾಯಸಮೇವ ಚ ॥
ಸತಿಲಾಂ ಕೃಶರಾಂ ಭುಕ್ತ್ವಾ ಪಶ್ಚಾದ್ಭುಂಜೀತ ಕಾಮತಃ ॥ ೩೮ ॥

ಛಾಯಾಸೂರ್ಯಸುತೇ ದೇವಿ ವಿಷ್ಟಿರಿಷ್ಟಾರ್ಥದಾಯಿನಿ ।
ಪೂಜಿತಾಸಿ ಯಥಾ ಶಕ್ತ್ಯಾ ಭದ್ರೇ ಭದ್ರಪ್ರದಾ ಭವ ॥ ೩೯ ॥

ಉಪೋಷ್ಯ ವಿಧಿನಾನೇನ ದಶ ಸಪ್ತ ಯಥಾಕ್ರಮಂ ।
ಉದ್ಯಾಪನಂ ತತಃ ಕುರ್ಯಾತ್ಪೂರ್ವವತ್ಪೂಜ್ಯ ಭಾಮಿನೀಂ ॥ ೪೦ ॥

---

೩೭. ಸ್ನಾನಮಾಡಿ ದೇವಯಜ್ಞ ಪಿತೃಯಜ್ಞಾದಿಗಳಿಂದ ದೇವಪಿತ್ರಾದಿಗಳನ್ನು ಸಂತೋಷಗೊಳಿಸಿ ಅನಂತರ ದರ್ಭೆಯಲ್ಲಿ ಶುಭಕರವಾದ ವಿಷ್ಟಿಯನ್ನು ಮಾಡಿ, ಅದನ್ನು ಪುಷ್ಪ, ಧೂಪ, ನೈವೇದ್ಯಾದಿಗಳಿಂದ ಆರಾಧಿಸಬೇಕು.

೩೮. ಅನಂತರ ಅಗ್ನಿಯನ್ನು ಪ್ರತಿಷ್ಠಿಸಿ ಎಳ್ಳು, ಪಾಯಸ, ಈ ಹವಿರ್ದ್ರವ್ಯಗಳನ್ನಿಟ್ಟುಕೊಂಡು ವಿಷ್ಟಿಯ ನಾಮಗಳನ್ನು ಉಚ್ಚರಿಸುತ್ತಾ ನೂರೆಂಟು ಹೋಮಮಾಡಿ, ಬಳಿಕ ಎಳ್ಳು, ಪಾಯಸ ಇವನ್ನು ಬ್ರಾಹ್ಮಣನಿಗೆ ದಾನಕೊಟ್ಟು ತಾನೂ ಅದನ್ನೇ ತಿನ್ನಬೇಕು. ಎಳ್ಳಿನ ಚಿಗಳಿಯನ್ನು ಪ್ರಥಮತಃ ಸೇವಿಸಿ ಅನಂತರ ಉಳಿದುವನ್ನು ತಿನ್ನಬೇಕು.

೩೯. ತರುವಾಯ ಇಷ್ಟಾರ್ಥಸಿದ್ಧಿಗಾಗಿ ಛಾಯಾದೇವಿ, ಸೂರ್ಯ ಇವರ ಪುತ್ರಿಯೂ, ಇಷ್ಟಾರ್ಥದಾತ್ರಿಯೂ, ವಿಷ್ಟಿನಾಮಕಳೂ ಆದ ಭದ್ರೆಯೇ! ನನ್ನ ಶಕ್ತ್ಯನುಸಾರ ನಿನ್ನನ್ನು ಪೂಜಿಸಿರುವೆನು. ಮಹಾದೇವಿಯೇ! ನನಗೆ ಮಂಗಳವನ್ನುಂಟುಮಾಡು ಎಂದು ಪ್ರಾರ್ಥಿಸಬೇಕು.

೪೦. ಈರೀತಿಯಲ್ಲಿ ವಿಧಿಪ್ರಕಾರ ಏಳುದಿನ ಅಥವಾ ಹತ್ತುದಿನ ಕ್ರಮವಾಗಿ ಉಪವಾಸಮಾಡಿ, ಅನಂತರ ಉದ್ಯಾಪನೆಯಲ್ಲಿ ಹಿಂದಿನಂತೆಯೇ ಈ ವಿಷ್ಟಿಯನ್ನು ಪೂಜಿಸಬೇಕು.

ಸ್ಥಾಪಯಿತ್ವಾಯಸೇ ಪೀಠೇ ಕೃಶರಾನ್ನಂ ನಿವೇದ್ಯ ಚ ।
ಪರಿಧಾಪ್ಯ ಕೃಷ್ಣಯುಗಂ ಸ್ತುತ್ವಾ ಮಂತ್ರೇಣ ತಾಂ ಪುನಃ ॥ ೪೧ ॥

ಬ್ರಾಹ್ಮಣಾಯ ಪುನರ್ದದ್ಯಾಲ್ಲೋಹಂ ತೈಲಂ ತಿಲಾಂಸ್ತಥಾ ।
ಕೃಷ್ಣಾಂ ಸವತ್ಸಾಂ ಗಾಮೇಕಾಂ ತಥೈಕಂ ಕಾಲಕಂಬಲಂ ॥
ದಕ್ಷಿಣಾಂ ಚ ಯಥಾ ಶಕ್ತ್ಯಾ ದತ್ವಾ ಭದ್ರಾಂ ವಿಸರ್ಜಯೇತ್ ॥ ೪೨ ॥

ಯ ಏವಂ ಕುರುತೇ ಪಾರ್ಥ ಸಮ್ಯಗ್ಭದ್ರಾವ್ರತಂ ನರಃ ।
ವಿಘ್ನೋ ನ ಜಾಯತೇ ತಸ್ಯ ಕಾರ್ಯಾರಂಭೇ ಕದಾಚನ ॥ ೪೩ ॥

ರಾಕ್ಷಸಾಶ್ಚ ಪಿಶಾಚಾ ವಾ ಪೂತನಾಶಾಕಿನೀಗ್ರಹಾಃ ।
ನ ಪೀಡಯಂತಿ ತಂ ಮರ್ತ್ಯಂ ಯೋ ಭದ್ರಾವ್ರತಮಾಚರೇತ್ ॥೪೪॥

---

೪೧. ಕಬ್ಬಿಣದ ಪೀಠದಲ್ಲಿ ಈ ವಿಷ್ಟಿಯನ್ನು ಸ್ಥಾಪಿಸಿ ಪೂಜಿಸಿ, ಎಳ್ಳುಪುಡಿ, ಅನ್ನವನ್ನು ನಿವೇದನಮಾಡಿ, ಎರಡು ಕಪ್ಪು ವಸ್ತ್ರಗಳನ್ನು ಹೊದ್ದಿಸಿ ಬಳಿಕ ಭಕ್ತಿಪೂರ್ವಕವಾಗಿ ಈ ವಿಷ್ಟಿಯನ್ನು ಸ್ತೋತ್ರಮಾಡಬೇಕು.

೪೨. ಹೀಗೆ ಪೂಜಿಸಿದ ಮೇಲೆ ಉತ್ತಮ ಬ್ರಾಹ್ಮಣರನ್ನು ಕರೆಯಿಸಿ ಅವರಿಗೆ ಕಬ್ಬಿಣ, ಎಣ್ಣೆ, ಎಳ್ಳು, ಕರುಸಹಿತವಾಗಿರುವ ಒಂದು ಕರಿಯ ಹಸು, ಕರಿಯ ಕಂಬಳಿ ಇವುಗಳನ್ನು ತನ್ನ ಯೋಗ್ಯತಾನುಸಾರ ಶಕ್ತಿಮೀರಿ ದಕ್ಷಿಣೆಯನ್ನೂ ಕೊಟ್ಟು ಅನಂತರ ಈ ಭದ್ರೆಯನ್ನು ವಿಸರ್ಜನಮಾಡಬೇಕು.

೪೩. ಅಯ್ಯಾ ಕುಂತೀಪುತ್ರನೇ! ಹೀಗೆ ಭದ್ರಾದೇವಿಯ ವ್ರತವನ್ನು ಸರಿಯಾಗಿ ಮಾಡುವ ಮಾನವನಿಗೆ ಅವನು ಮಾಡುವ ಕಾರ್ಯಗಳಲ್ಲಿ ಎಂದಿಗೂ ವಿಘ್ನವುಂಟಾಗುವುದಿಲ್ಲ.

೪೪. ಈ ಭದ್ರಾವ್ರತವನ್ನು ಮಾಡುವ ಮನುಷ್ಯನನ್ನು ರಾಕ್ಷಸರು, ಪಿಶಾಚಗಳು, ಪೂತನೀ ಶಾಕಿನೀ ಗ್ರಹಗಳು ಇವು ಯಾವುವೂ ಪೀಡಿಸಲಾರವು.

**ನ ಚೈವೇಷ್ಟವಿಯೋಗಸ್ಸ್ಯಾತ್ಕಸ್ಯ ಹಾನಿಸ್ತಸ್ಯ ಜಾಯತೇ ।**
**ದೇಹಾಂತೇ ಯಾತಿ ಸದನಂ ಭಾಸ್ಕರಸ್ಯ ನ ಸಂಶಯಃ ॥ ೪೫ ॥**

**ಸೂರ್ಯಾತ್ಮಜಾತಿದಯಿತಾ ಭಗಿನೀ ಶನೇರ್ಯಾ ।**
**ಮರ್ತ್ಯೇ ಭ್ರಮತ್ಯತಿರಥಾ ಕರಣಕ್ರಮೇಣ ॥**
**ತಾಂ ಕೃಷ್ಣಭಾಸುರಮುಖೀಂ ಸಮುಪೋಷ್ಯವಿಷ್ಟಿಂ ।**
**ಇಷ್ಟಾರ್ಥಸಿದ್ಧಿಮಬುಧೋಽಪಿ ಪುಮಾನುಪೈತಿ ॥ ೪೬ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ವಿಷ್ಟಿವ್ರತ ವರ್ಣನಂ ನಾಮ ಸಪ್ತದಶೋತ್ತರ ಶತತಮೋಽಧ್ಯಾಯಃ.**



---

೪೫. ಈ ವ್ರತಾನುಷ್ಠಾನಮಾಡುವವನಿಗೆ ಇಷ್ಟಮಿತ್ರರ ಅಗಲುವಿಕೆಯು ಎಂದಿಗೂ ಉಂಟಾಗಲಾರದು. ಮತ್ತು ಯಾವ ತೊಂದರೆಯೂ ಸಂಭವಿಸುವುದಿಲ್ಲ. ಹೀಗೆ ಇಹಲೋಕದಲ್ಲಿ ಸುಖಿಯಾಗಿದ್ದು ಮರಣಾನಂತರ ಸೂರ್ಯಲೋಕವನ್ನು ಹೊಂದುವನು. ಇದರಲ್ಲಿ ಸಂಶಯವಿಲ್ಲ.

೪೬. ಸೂರ್ಯನಿಗೆ ಅತ್ಯಂತ ಪ್ರೀತಿಪಾತ್ರಳಾದ ಕುಮಾರಿಯೂ, ಶನೈಶ್ಚರನ ಸಹೋದರಿಯೂ ಆದ, ಈ ವಿಷ್ಟಿಯು ಭೂಲೋಕದಲ್ಲಿ ರಥದ ವೇಗಕ್ಕಿಂತಲೂ ವೇಗವಾಗಿ ಕರಣಗಳನ್ನು ಕ್ರಮದಿಂದ ಹೊಂದುತ್ತಾ ಸಂಚರಿಸುವಳು. ಕಪ್ಪು ಬಣ್ಣವಾದರೂ ಇಂಥ ಪ್ರಕಾಶವಾದ ಮುಖವುಳ್ಳ ವಿಷ್ಟಿಯನ್ನು ಉಪವಾಸಾದಿ ವ್ರತಗಳಿಂದ ಪೂಜಿಸುವ ಮನುಷ್ಯನು ಅಜ್ಞಾನಿಯಾಗಿದ್ದರೂ ಸಕಲ ಮನೋರಥಗಳನ್ನೂ ಹೊಂದುವನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ವಿಷ್ಟೀವ್ರತವರ್ಣನೆ ಯೆಂಬ ನೂರಹದಿನೇಳನೆಯ ಅಧ್ಯಾಯವು ಮುಗಿದುದು.



|| ಶ್ರೀ ||

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಅಷ್ಟಾದಶೋತ್ತರಶತತಮೋಽಧ್ಯಾಯಃ

---

|| ಶ್ರೀ ಕೃಷ್ಣ ಉವಾಚ ||

ಅಗಸ್ತ್ಯವ್ರತಮಸ್ತ್ಯನ್ಯತ್ಸರ್ವಪಾಪಪ್ರಣಾಶನಂ ।
ತಚ್ಛೃಣುಷ್ವ ಮಹೀಪಾಲ ಕಥ್ಯಮಾನಂ ಮಯಾನಘ || ೧ ||

|| ಯುಧಿಷ್ಠಿರ ಉವಾಚ ||

ಶೃಣೋಮಿ ಬ್ರೂಹಿ ಮೇ ಕೃಷ್ಣ ದೇವರ್ಷೇಸ್ತಸ್ಯ ಚೇಷ್ಟಿತಂ ।
ಜನ್ಮ ಚೈವಾರ್ಘ್ಯದಾನಂ ಚ ಕಾಲಮುದ್ಗಮನಸ್ಯ ಚ || ೨ ||

---

## ನೂರಹದಿನೆಂಟನೆಯ ಅಧ್ಯಾಯ

೧. ಶ್ರೀಕೃಷ್ಣನು ಹೇಳುತ್ತಾನೆ—ಎಲೈ ಮಹೀಪಾಲನೇ! ಸಕಲ ಪಾಪಗಳನ್ನೂ ನಾಶಮಾಡಬಲ್ಲ ಅಗಸ್ತ್ಯವ್ರತವೊಂದಿರುವುದು. ಅದನ್ನು ನಿನಗೆ ಹೇಳುವೆನು ಕೇಳು.

೨. ಯುಧಿಷ್ಠಿರನು ಹೇಳುತ್ತಾನೆ—ಎಲೈ ಕೃಷ್ಣನೇ! ದೇವರ್ಷಿಯಾದ ಅಗಸ್ತ್ಯನ ಚರಿತ್ರೆಯನ್ನು ಕೃಪೆಯಿಟ್ಟು ಹೇಳು. ಅಗಸ್ತ್ಯಮಹರ್ಷಿಯು ಹುಟ್ಟಿದುದು ಹೇಗೆ? ಆ ವ್ರತವನ್ನು ಯಾವಾಗ ಆಚರಿಸಬೇಕು? ವ್ರತಾಂಗವಾಗಿ ಅವನಿಗೆ ಅರ್ಘ್ಯಪ್ರದಾನಮಾಡುವುದು ಹೇಗೆ? ಇವೆಲ್ಲವನ್ನೂ ವಿಶದವಾಗಿ ತಿಳಿಸಬೇಕು.

॥ ಶ್ರೀ ಕೃಷ್ಣ ಉವಾಚ ॥

ಮಿತ್ರಶ್ಚ ವರುಣಶ್ಚೈವ ಪೂರ್ವಮೇತೌ ಸುರೋತ್ತಮೌ ।
ಮಂದರಸ್ಯ ಸಮೀಪೇ ತು ಚೇರತುರ್ವಿಪುಲಂ ತಪಃ ॥ ೩ ॥

ತಯೋಸ್ಸಂಕ್ಷೋಭಣಾರ್ಥಾಯ ವಾಸವೇನ ವರಾಪ್ಸರಾಃ ।
ಊರ್ವಶೀ ಪ್ರೇಷಿತಾ ತತ್ರ ರೂಪೌದಾರ್ಯಗುಣಾನ್ವಿತಾ ॥ ೪ ॥

ತಸ್ಯಾಸ್ಸಂದರ್ಶನಾದೇವ ಕ್ಷುಭಿತೌ ತೌ ಸುರೋತ್ತಮೌ ।
ವಿಕಾರಂ ಮನಸೋ ಬುದ್ಧ್ವಾ ಕುಂಭೇ ವೀರ್ಯಂ ಸಸರ್ಜತುಃ ॥ ೫ ॥

ನಿಮೇಃ ಶಾಪಾತ್ತತ್ರ ಜಾತೋ ವಶಿಷ್ಠೋ ಭಗವಾನೃಷಿಃ ।
ಅನಂತರಮಗಸ್ತ್ಯಸ್ತು ಜಾತೋ ದಿವ್ಯಸ್ತಪೋಧನಃ ॥ ೬ ॥

---

೩. ಶ್ರೀಕೃಷ್ಣನು ಹೇಳುತ್ತಾನೆ—ಬಹು ಹಿಂದಿನಕಾಲದಲ್ಲಿ ಮಿತ್ರ ವರುಣ ಎಂಬ ಇಬ್ಬರು ದೇವಶ್ರೇಷ್ಠರು ಒಟ್ಟಿಗೆ ಮಂದರಪರ್ವತದ ತಪ್ಪಲಿನಲ್ಲಿ ಉಗ್ರವಾದ ತಪಸ್ಸನ್ನು ಆಚರಿಸಿದರು.

೪. ಇವರ ಘೋರತಪಸ್ಸನ್ನು ಭಂಗಪಡಿಸುವುದಕ್ಕಾಗಿ ಇಂದ್ರನು ರೂಪ ಔದಾರ್ಯ ಮುಂತಾದ ಗುಣಗಳಿಂದ ಕೂಡಿದ ಊರ್ವಶೀ ಎಂಬ ಉತ್ತಮಳಾದ ಅಪ್ಸರಸ್ತ್ರೀಯನ್ನು ಕಳುಹಿಸಿದನು.

೫. ಆ ಊರ್ವಶಿಯ ದರ್ಶನಮಾತ್ರದಿಂದಲೇ ಈ ಮಿತ್ರ ವರುಣ ಇಬ್ಬರೂ ಮನಶ್ಚಾಂಚಲ್ಯಹೊಂದಿದರು. ಮಹಾತ್ಮರಾದ ಇವರು ತಮ್ಮ ಮನಸ್ಸು ವಿಕಾರ ಹೊಂದಿಮದನ್ನು ತಿಳಿದು, ಮುಂದುಗಡೆ ಇದ್ದ ಕುಂಭದಲ್ಲಿ ತಮ್ಮ ವೀರ್ಯವನ್ನು ವಿಸರ್ಜನಮಾಡಿದರು.

೬. ನಿಮಿಯಶಾಪದಿಂದ ಆ ವೀರ್ಯಯುಕ್ತವಾದ ಕುಂಭದಲ್ಲಿ ಮೊದಲು ಪೂಜ್ಯನಾದ ವಸಿಷ್ಠಮಹರ್ಷಿ ಹುಟ್ಟಿದನು. ಅನಂತರ ಆ ಕುಂಭದಲ್ಲಿಯೇ ದಿವ್ಯ ತಪೋನಿಷ್ಠನಾದ ಅಗಸ್ತ್ಯಮಹರ್ಷಿಯೂ ಜನಿಸಿದನು.

ಮಲಯಸ್ಯೈಕದೇಶೇ ತು ವೈಖಾನಸವಿಧಾನತಃ ।
ಸಭಾರ್ಯಸ್ಸಂವೃತೋ ವಿಪ್ರೈಸ್ತಪಸ್ತೇಪೇ ಸುದುಶ್ಚರಂ　　॥ ೭ ॥

ಆಸ್ತಾಂ ದೈತ್ಯೌ ಪುರಾ ದುಷ್ಟೌ ಆದೌ ಕೃತಯುಗಸ್ಯ ತು ।
ನಾಮ್ನಾ ಇಲ್ವಲವಾತಾಪೀ ದೇವಬ್ರಾಹ್ಮಣಕಂಟಕೌ　　॥ ೮ ॥

ತಯೋರೇಕೋಽಭವನ್ಮೇಷೋ ದ್ವಿತೀಯೋ ಭೋಜ್ಯದಾಯಕಃ ।
ಶ್ರಾದ್ಧಕ್ರಮೇಣ ತೇನೈವಂ ಬಹವೋ ನಾಶಿತಾ ದ್ವಿಜಾಃ　　॥ ೯ ॥

ಅಥಾನ್ಯಸ್ಮಿನ್ದಿನೇ ದೈತ್ಯೋಽಹ್ಯಗಸ್ತ್ಯಂ ಸಂನ್ಯಮಂತ್ರಯತ್ ।
ಭೋಜ್ಯಾರ್ಥ್ಯಂ ಬ್ರಾಹ್ಮಣೈಸ್ಸಾರ್ಧಂ ಭೃಗುಗರ್ಗ ಕುಲೋದ್ಭವೈಃ ॥

---

೭. ಆ ಬಳಿಕ ಕಾಲಕ್ರಮದಲ್ಲಿ ಈ ಅಗಸ್ತ್ಯಮಹರ್ಷಿಯು ಪತ್ನೀಸಮೇತನಾಗಿ ಮಲಯಪರ್ವತದ ಒಂದು ಪಾರ್ಶ್ವದಲ್ಲಿ ಅನೇಕ ಬ್ರಾಹ್ಮಣವೃಂದಪರಿವೃತನಾಗಿ ಘೋರವಾದ ತಪಸ್ಸನ್ನಾಚರಿಸಿದನು.

೮. ಕೃತಯುಗದ ಆದಿಯಲ್ಲಿ (ಹಿಂದೆ) ತುಂಬಾ ದುಷ್ಟರಾದ ಇಲ್ವಲ, ವಾತಾಪಿ, ಎಂಬ ಇಬ್ಬರು ರಾಕ್ಷಸರು ಬ್ರಾಹ್ಮಣರಿಗೆ ಕಂಟಕರಾಗಿ ಆ ವನದಲ್ಲಿ ವಾಸಮಾಡುತ್ತಿದ್ದರು. ಅವರು ಕಾಮರೂಪಿಗಳಾಗಿದ್ದರು.

೯–೧೦. ಅವರಲ್ಲಿ ಒಬ್ಬನು ಆಡಿನ ರೂಪವನ್ನು ಧರಿಸುವುದು ; ಇನ್ನೊಬ್ಬನು ದ್ವಿಜರೂಪಧರಿಸಿ ಅಡಿಗೆಮಾಡಿ ಭೋಜನಕ್ಕೆ ಬಡಿಸುವುದು. ಈರೀತಿ ಮಾಡುತ್ತಾ ತಮ್ಮ ಮನೆಯಲ್ಲಿ ಶ್ರಾದ್ಧವೆಂದು ಹೇಳಿ ಯಾರಾದರೂ ಬ್ರಾಹ್ಮಣರನ್ನು ಪ್ರತಿದಿನವೂ ಆಮಂತ್ರಣಮಾಡುವರು ; ಅದನ್ನು ಅಂಗೀಕರಿಸಿ ಬಂದವರಿಗೆ ಮೊದಲು ಮೇಷರೂಪಿಯಾದ ತನ್ನ ಪನನ್ನು ಇನ್ನೊಬ್ಬನು ಕೊಂದು ಅವನ ಮಾಂಸವನ್ನು ಬೇಯಿಸಿ ಭೋಜನಕ್ಕೆ ಬಡಿಸುತ್ತಿದ್ದನು. ಆ ಬ್ರಾಹ್ಮಣನು ಊಟಮಾಡಿದ ಮೇಲೆ ಬಡಿಸಿದವನು ತನ್ನ ಸಂಗಡಿಗನ ಹೆಸರಿಟ್ಟು ಕರೆಯುತ್ತಿದ್ದನು. ಆಡಿನ ಮಾಂಸದ ಪಾಕರೂಪವಾಗಿ ಆ ಬ್ರಾಹ್ಮಣನ ಹೊಟ್ಟೆಯಲ್ಲಿದ್ದ ರಾಕ್ಷಸನು ಈ ಕೂಗನ್ನು ಕೇಳಿದ ಕೂಡಲೆ ಬ್ರಾಹ್ಮಣನ ಉದರವನ್ನು ಭೇದಿಸಿಕೊಂಡು ಹೊರಗೆ ಬರುತ್ತಿದ್ದನು. ಅನಂತರ ಇವರಿಬ್ಬರೂ ಆ ಬ್ರಾಹ್ಮಣನ ಮಾಂಸವನ್ನು ಪಾಕಮಾಡಿ ತಾವು ತಿನ್ನುವರು. ಹೀಗೆ ಇವರಿಬ್ಬರೂ ಮೋಸಮಾಡುತ್ತಾ ಅನೇಕ ಬ್ರಾಹ್ಮಣರನ್ನು ನಾಶಮಾಡಿದರು.

ಅಗಸ್ತ್ಯೋಽಪ್ಯಭವಚ್ಛ್ರಾದ್ಧೇ ಧೌರೇಯೋ ರೋಷದರ್ಪಿತಃ ।
ಸೋಽಪಿ ಹತ್ವಾಪಚದ್ವಹ್ನೌ ವಾತಾಪಿಂ ಮೇಷರೂಪಿಣಂ ॥ ೧೧ ॥

ಪರಿವಿಷ್ಯಮಾಣೇಷು ತೇಷು ಸ್ಮಿತಂ ಪ್ರಾಹ ದಾನವಂ ।
ಅಗಸ್ತ್ಯೋ ಭಗವಾನ್‌ಕ್ರುದ್ಧಃ ಸರ್ವಂ ಮೇ ದೀಯತಾಮಿತಿ ॥ ೧೨ ॥

ನ್ಯೈಷಂ ಮಾಸಂ ತತಃ ಪ್ರಾದಾದಿಲ್ವಲಃ ಕುಪಿತಸ್ತದಾ ।
ಭಕ್ಷಯಿತ್ವಾಽಭವತ್ಸ್ವಸ್ಥೋ ನಿರ್ವಿಕಾರೋ ಮಹಾಮುನಿಃ ॥ ೧೩ ॥

ಶುಚಿರ್ಬಭೌ ತತಃ ಪ್ರಾಹ ವಾತಾಪಿಮಿಲ್ವಲಃ ಶನೈಃ ।
ನಿಷ್ಕ್ರಮಸ್ವ ಮುನೇರ್ದೇಹಂ ಭಿತ್ವಾ ಕಸ್ಮಾದ್ವಿಲಂಬಸೇ ॥ ೧೪ ॥

---

೧೧. ಒಂದುದಿನ ಆ ರಾಕ್ಷಸರು ಅಗಸ್ತ್ಯಮುನಿಯನ್ನು ಶ್ರಾದ್ಧಭೋಜನಕ್ಕೆ ಕರೆದರು. ಈ ಅಗಸ್ತ್ಯಮುನಿಯು ಬರುವಾಗ ಭೃಗು ಮತ್ತು ಗರ್ಗ ಈ ಋಷಿಗಳ ಕುಲದಲ್ಲಿ ಜನಿಸಿದ ಬ್ರಾಹ್ಮಣರೊಡನೆ ಬಂದಿದ್ದನು. ಆ ದಿನದ ಶ್ರಾದ್ಧಕ್ಕೆ ಕೋಪ ಶೀಲನಾದ ಅಗಸ್ತ್ಯಮುನಿಯೇ ಮುಖ್ಯನಾಗಿದ್ದನು. ಇಲ್ವಲನು ಆಡಿನ ರೂಪ ವನ್ನು ಧರಿಸಿದ್ದ ವಾತಾಪಿ ದಾನವನನ್ನು ಕೊಂದು ಅವನ ಮಾಂಸದಿಂದ ಪಾಕ ಮಾಡಿದನು.

೧೨ ಇಲ್ವಲನು ಅಗಸ್ತ್ಯಮಹರ್ಷಿಗೆ ಊಟಕ್ಕೆ ಬಡಿಸುತ್ತಿದ್ದನು. ಅವನು ಬಡಿಸಿದ ಪದಾರ್ಥವನ್ನೆಲ್ಲಾ ಈ ಮುನಿಯು ಊಟಮಾಡಿದನು. ಆಗ ಇಲ್ವಲನು ಸುಮ್ಮನೆ ನಿಂತುಕೊಂಡಿರಲು, ಅಗಸ್ತ್ಯನು ಕುಪಿತನಾಗಿ " ನೀನು ಮಾಡಿದ ಅಡಿಗೆ ಯನ್ನೆಲ್ಲಾ ಬಡಿಸು '' ಎಂದನು.

೧೩. ಆಗ ಇಲ್ವಲನು ಕೋಪದಿಂದ ತಾನು ಪಾಕಮಾಡಿದ್ದ ಆ ಮೇಷ ರೂಪಿ ವಾತಾಪಿಯ ಮಾಂಸದ ಪಾಕವನ್ನೆಲ್ಲಾ ಆ ಅಗಸ್ತ್ಯಮುನಿಯ ಎಲೆಗೆ ಸುರಿದನು. ಆ ಮುನಿಯು ಅದೆಲ್ಲವನ್ನೂ ತಿಂದು ಯಾವ ವಿಕಾರವನ್ನೂ ಹೊಂದದೆ ಸುಮ್ಮನೆ ಕುಳಿತುಬಿಟ್ಟನು.

೧೪. ಆಗ ಇಲ್ವಲನು ಶುಚಿಯಾಗಿ ಬಂದು ನಿಂತುಕೊಂಡು ಮೆಲ್ಲಗೆ ವಾತಾಪಿಯನ್ನು ಕುರಿತು "ಸಖನೇ! ಮುನಿಯ ದೇಹವನ್ನು ಬಗೆದುಕೊಂಡು ಜಾಗ್ರತೆ ಹೊರಟುಬಾ ಏಕೆ ಇನ್ನೂ ತಡಮಾಡುತ್ತಿರುವೆ '' ಎಂದನು.

ತಚ್ಛ್ರುತ್ವಾಽಗಸ್ತ್ಯವಿಪ್ರೋಽಪಿ ಉದ್ಗಾರಂ ಕೃತವಾನ್ ಗುರುಂ ।
ಕುತೋ ನಿಷ್ಕ್ರಮಣಂಪ್ರಾಹ ಭಕ್ಷಿತಸ್ಸ ಮಯಾ ಪುನಃ ॥ ೧೫ ॥

ಜೀರ್ಣೋಽಯಂ ಭಸ್ಮ ಭೂತೋಽಯಂ ವಾತಾಪಿರ್ಬ್ರಹ್ಮಕಂಟಕಃ ।
ಇಲ್ವಲೋಽಪಿ ಸ್ಫುರತ್ಕ್ರೋಧಃ ಸೋಽಗಸ್ತ್ಯೇನ ನಿರೀಕ್ಷಿತಃ ॥ ೧೬ ॥

ಭಸ್ಮೀಭೂತಃ ಕ್ಷಣೇನೈವ ತತಃ ಶಾಂತಂ ಜಗದ್ಬಭೌ ।
ತೇನ ವೈರೇಣ ತೇ ದುಷ್ಟಾಃ ನಷ್ಟ ಶೇಷಾಸ್ತು ದಾನವಾಃ ॥ ೧೭ ॥

ಸಂಮಂತ್ರ್ಯ ನಿಶ್ಚಯಂ ಮೇರೌ ತತೋಽಗಸ್ತ್ಯಮುಪಾಗತಾಃ ।
ವಿವರ್ಧಯಿಷವಸ್ತೇಜೋ ಮುನೇರಸ್ಯ ದಿವೌಕಸಃ ॥ ೧೮ ॥

---

೧೫. ಇಲ್ವಲನು ಹೀಗೆ ಹೇಳಿದುದನ್ನು ಕೇಳಿ ಆ ಅಗಸ್ತ್ಯಮುನಿಯು ರಭಸದಿಂದ ಉಸಿರುಬಿಡುತ್ತಾ "ಏಕೆ ಸುಮ್ಮನೆ ವಾತಾಪಿಯನ್ನು ಬಾ ಎಂದು ಕರೆಯುತ್ತಿರುವೆ." ಅವನನ್ನು ನಾನು ತಿಂದುಬಿಟ್ಟಿದ್ದೇನೆ. ಈ ವೇಳೆಗೆ ಅವನು ನನ್ನ ಹೊಟ್ಟೆಯಲ್ಲಿ ಜೀರ್ಣವಾಗಿ ಹೋಗಿದ್ದಾನೆ.

೧೬. ಆ ಬ್ರಹ್ಮಘಾತುಕನ ಗತಿ ಇಲ್ಲಿಗೆ ತೀರಿತು ಎಂದು ತಿಳಿ'' ಎಂದು ಹೇಳಿದನು. ಈ ಮಾತನ್ನು ಕೇಳಿ ಇಲ್ವಲನು ಕೋಪಾವಿಷ್ಟನಾಗಲು ಆ ಮಹರ್ಷಿಯು ಇವನನ್ನು ಒಂದುಸಾರಿ ಕೋಪದಿಂದ ನೋಡಿದನು.

೧೭. ಆ ಋಷಿಯು ನೋಡಿದ ಮಾತ್ರದಿಂದಲೇ ಕ್ಷಣದೊಳಗಾಗಿ ಇಲ್ವಲನೂ ಭಸ್ಮವಾಗಿ ಹೋದನು. ಇವರಿಬ್ಬರೂ ಹೀಗೆ ಅಗಸ್ತ್ಯಮಹರ್ಷಿಯಿಂದ ಮೃತರಾಗಲು ಪ್ರಪಂಚಕ್ಕೇ ಶಾಂತಿಯುಂಟಾಯಿತು.

೧೮. ಕಳಿದುಳಿದ ದುಷ್ಟರಾಕ್ಷಸರೆಲ್ಲರೂ ಒಟ್ಟಿಗೆ ಸೇರಿ, ಅಗಸ್ತ್ಯನಿಗೆ ತಕ್ಕ ಪ್ರತೀಕಾರಮಾಡಿಯೇ ತೀರಬೇಕೆಂದು ತೀರ್ಮಾನಮಾಡಿಕೊಂಡರು. ಈ ದ್ವೇಷ ಸಾಧಿಸಲು ಮೇರುಪರ್ವತದ ತಪ್ಪಲಿನಲ್ಲಿ ತಪಸ್ಸುಮಾಡುತ್ತಿದ್ದ ಅಗಸ್ತ್ಯನ ಬಳಿಗೆ ಬಂದು, ಸ್ವರ್ಗವಾಸಿಯಾದ ಆ ಮುನಿಯ ತೇಜಸ್ಸನ್ನು ಅಭಿವೃದ್ಧಿಗೊಳಿಸುವ ನೆಪದಿಂದ.

ಹೇಽಗಸ್ತ್ಯ ಮಹಾಬ್ರಹ್ಮರ್ಷೇ ಸಮುದ್ರಂ ಶೋಷಯಸ್ವ ವೈ ।
ತಚ್ಛ್ರುತ್ವಾಗಸ್ತ್ಯವಿಪ್ರೋಽಪಿ ಆಗ್ನೇಯೀಂ ಧಾರಣಾಂ ದಧತ್ ॥ ೧೯ ॥

ತಯಾ ಪೀತಸ್ಸಮುದ್ರೋಽಪಿ ಭ್ರಾಂತಮೀನೋರ್ಮಿಕಚ್ಛಪಃ ।
ಪೀತೇ ಸಮುದ್ರತೋಯೇಽಪಿ ದೇವೈಃ ಕ್ರುದ್ಧೈಸ್ತು ದಾನವಾಃ ॥೨೦॥

ಕ್ಷಯಂ ನೀತಾಃ ಕ್ಷಣಾತ್ಸರ್ವೇ ಕ್ರಂದಮಾನಾಃ ಪುನಃಪುನಃ ।
ಕ್ಷೇಮಂ ಜಗತ್ಯಭೂತ್ಸರ್ವಮಗಸ್ತ್ಯರ್ಷೇಃ ಪ್ರಸಾದತಃ ॥ ೨೧ ॥

ಅಥ ಗಂಗಾನದೀತೋಯೈಃ ಸಂಪೂರ್ಣೇ ಸಾಗರೇ ಪುನಃ ।
ಮಂಥಾನಂ ಮಂದರಂ ಕೃತ್ವಾ ನೇತ್ರಂ ಕೃತ್ವಾ ತು ವಾಸುಕಿಂ ॥ ೨೨ ॥

---

೧೯. "ಎಲೈ ಬ್ರಹ್ಮರ್ಷಿಯೇ! ಮಹಾನುಭಾವನೂ ಅಂಥ ಸಮರ್ಥನೂ ನೀನಾಗಿದ್ದರೆ ಸಮುದ್ರವನ್ನು ಶೋಷಿಸು" ಎಂದು ಹೇಳಿದರು. ಇವರ ಮಾತನ್ನು ಕೇಳಿ ಬ್ರಾಹ್ಮಣೋತ್ತಮನಾದ ಅಗಸ್ತ್ಯಮಹಾಮುನಿಯು ಆಗ್ನೇಯೀ ಶಕ್ತಿಯನ್ನು ಧಾರಣಮಾಡಿದನು.

೨೦. ಆ ಶಕ್ತಿಯ ಪ್ರಭಾವದಿಂದ ಮಹರ್ಷಿಯು ಕೂರ್ಮಾದಿ ಜಲಚರ ಪ್ರಾಣಿಭರಿತವಾದ ಆ ಸಮುದ್ರವೆಲ್ಲವನ್ನೂ ಪಾನಮಾಡಿಬಿಟ್ಟನು. ಹೀಗೆ ಸಮುದ್ರದ ನೀರೆಲ್ಲಾ ಪಾನಮಾಡಲ್ಪಡಲು ದೇವತೆಗಳು ಕುಪಿತರಾಗಿ ಕ್ಲೇಶಕ್ಕೆ ಕಾರಣರಾದ ರಾಕ್ಷಸರನ್ನು ಕ್ಷಣದೊಳಗಾಗಿ ನಾಶಪಡಿಸಿದರು.

೨೧. ಹೀಗೆ ರಾಕ್ಷಸರೆಲ್ಲ ಆರ್ತನಾದಮಾಡುತ್ತಾ ನಾಶಹೊಂದಲಾಗಿ ಆ ಅಗಸ್ತ್ಯಋಷಿಗಳ ಪ್ರಭಾವದಿಂದ ಪ್ರಪಂಚವೆಲ್ಲವೂ ಕ್ಷೇಮದಿಂದ ಇರ ತೊಡಗಿತು.

೨೨. ಸಮುದ್ರದಲ್ಲಿದ್ದ ನೀರನ್ನೆಲ್ಲಾ ಅಗಸ್ತ್ಯರು ಪಾನಮಾಡಿದ ಮೇಲೆ ಗಂಗಾದಿ ನದೀಜಲದಿಂದ ಸಾಗರವು ಪುನಃ ತುಂಬಿತು. ಹೀಗೆ ತುಂಬಿದ ಸಾಗರವನ್ನು ದೇವತೆಗಳೂ ರಾಕ್ಷಸರೂ ಸೇರಿ, ಮಂದರಪರ್ವತವನ್ನು ಕಡೆಗೋಲಾಗಿಯೂ.

ಮಮಂಥುಃ ಸಹಿತಾಸ್ಸರ್ವೇ ಸಮುದ್ರಂ ದೈತ್ಯದಾನವಾಃ ।
ಅಥೋತ್ಥಿತೇ ರತ್ನಸಂಘೇ ಸೋಮೇ ಶ್ರೀಕೌಸ್ತುಭೇ ಗಜೇ ॥ ೨೩ ॥

ಅತಿಲೋಭಾನ್ಮಥ್ಯಮಾನೇ ಸಾಗರೇ ಪಯಸಾಂ ನಿಧೌ ।
ಅಥೋತ್ಥಿತಂ ಜ್ವಲದ್ರೌದ್ರಂ ಕಾಲಕೂಟಂ ಮಹಾವಿಷಂ ॥ ೨೪ ॥

ಯೇನಾಸೌ ಸುರಸಂಘಾತಃ ಆಘೂರ್ಣಿತ ಇವಾಭವತ್ ।
ಸಾಗರಂ ಸಂಪ್ರವಿಷ್ಟಾಸ್ತೇ ರಾತ್ರೌರಾತ್ರೌ ವಿನಿರ್ಯಯುಃ ॥ ೨೫ ॥

ನಿರ್ಗಮ್ಯ ಚ ವಧಂ ಚಕ್ರುರ್ಮುನೀನಾಮೂರ್ಧ್ವರೇತಸಾಂ ।
ಬಭಂಜುರ್ಯಜ್ಞಪಾತ್ರಾಣಿ ದಿವಾ ತೋಯೇ ನಿಲಿಲ್ಯಿರೇ ॥ ೨೬ ॥

---

೨೩. (ಆದಿಶೇಷ) ವಾಸುಕಿಯನ್ನೇ ಕಡೆಯುವ ಹಗ್ಗವನ್ನಾಗಿಯೂ ಮಾಡಿಕೊಂಡು ಕಡೆದರು. ಹೀಗೆ ಕಡೆದಾಗ ಅನೇಕ ರತ್ನಗಳು, ಚಂದ್ರ, ಲಕ್ಷ್ಮಿ, ಕೌಸ್ತುಭಮಣಿ, ಐರಾವತಗಜ ಇವು ದೊರೆತವು.

೨೪. ಹೀಗೆ ಉತ್ತಮವಾದ ಪದಾರ್ಥಗಳೆಲ್ಲಾ ದೊರೆಯುತ್ತಿರಲು ಇನ್ನೂ ಬೇರೆ ಉತ್ತಮಪದಾರ್ಥಗಳು ದೊರೆಯುವುವೆಂಬ ಅತ್ಯಾಶೆಯಿಂದ ದೇವಾಸುರರು ಮಂಥನವನ್ನು ಮುಂದುವರಿಸಿದರು. ಆಗ ಕಾಲಕೂಟವೆಂಬ ಮಹಾವಿಷವು ಜ್ವಾಲಾಮಯವಾಗಿ ಉತ್ಪನ್ನವಾಯಿತು.

೨೫. ಈ ವಿಷಜ್ವಾಲೆಯಿಂದ ಪೀಡಿತವಾದ ದೇವಾಸುರಸಮೂಹವು ತುಂಬ ಗಾಬರಿಗೊಂಡು ಅಲ್ಲೋಲಕಲ್ಲೋಲವಾಗಿ ಚದರಿ, ಬಳಿಕ ಸಾಗರವನ್ನೇ ಪ್ರವೇಶಿಸಿ, ಅಹೋರಾತ್ರಿಗಳನ್ನು ಅಲ್ಲಿಯೇ ಕಳೆಯತೊಡಗಿದರು.

೨೬. ರಾತ್ರಿಯಾಗುವತನಕ ದಾನವರು ನೀರಿನಲ್ಲಿ ಅಡಗಿದ್ದು, ರಾತ್ರಿಯಾಗುತ್ತಲೇ ಹೊರಹೊರಟು, ವಿಷಜ್ವಾಲೆಯಿಂದ ಮುಕ್ತರಾಗಿದ್ದ ಊರ್ಧ್ವರೇತಸ್ಕರಾದ (ಜಿತೇಂದ್ರಿಯರಾದ) ಮುನಿಗಳನ್ನು ವಧೆಮಾಡತೊಡಗಿದುದಲ್ಲದೆ, ಅವರ ಯಜ್ಞಪಾತ್ರೆಗಳನ್ನೆಲ್ಲಾ ನಾಶಮಾಡಿ ಬೆಳಗಾಗುವ ವೇಳೆಗೆ ನೀರಿನಲ್ಲಿ ಅಡಗಿಕೊಳ್ಳುತ್ತಿದ್ದರು.

ಸಮುದ್ರಮಧ್ಯೇ ನ ಜ್ಞಾತ್ವಾ ಬ್ರಹ್ಮಾ ನಾರಾಯಣೋ ಹರಃ ।
ವಾಯುಃ ಕುಬೇರೋ ವಸವಃ ಸರ್ವೇ ದೇವಾಸ್ಸವಾಸವಾಃ ॥ ೨೭ ॥

ತತೋ ಮಂತ್ರೈಃ ಶಂಕರೇಣ ಕಿಂಚಿತ್ತತ್ರೈವ ಭಕ್ಷಿತಂ ।
ಕ್ಷಣಾದ್ದಗ್ಧಸ್ಸ ಮಂತ್ರೋಽಪಿ ನೀಲಕಂಠೀಕೃತೋ ಹರಃ ॥ ೨೮ ॥

ಬ್ರಹ್ಮಾಪಿ ಚೇತನಾಂ ಪ್ರಾಪ್ಯ ಅಬ್ರಹ್ಮಣ್ಯಮುವಾಚ ಹ ।
ನಾಸ್ತಿ ಕಶ್ಚಿಜ್ಜಗತ್ಯಸ್ಮಿನ್ವಿಷಮಾಪಾತುಮೀಶ್ವರ ॥ ೨೯ ॥

ಅಗಸ್ತ್ಯೋ ದಕ್ಷಿಣಾಶಾಯಾಂ ಲಂಕಾಮೂಲೇ ಮಹಾಮುನಿಃ ।
ತದ್ಗಚ್ಛಧ್ವಂ ಮಹಾಭಾಗಾಃ ಶರಣಂ ಸರ್ವದಾ ಹ್ಯಸೌ ॥ ೩೦ ॥

---

೨೭. ಬ್ರಹ್ಮ, ವಿಷ್ಣು, ಮಹೇಶ್ವರ, ವಾಯು, ಕುಬೇರ, ಅಷ್ಟವಸುಗಳು, ಇಂದ್ರಾದಿದೇವತೆಗಳು ಇವರು ವಿಷಜ್ವಾಲೆಯನ್ನು ತಾಳಲಾರದೆ ಸಮುದ್ರಮಧ್ಯದಲ್ಲಿ ಗುಟ್ಟಾಗಿ ವಾಸಮಾಡಿದರು.

೨೮. ಅನಂತರ ಪರಮೇಶ್ವರನು ಆ ವಿಷಜ್ವಾಲೆಯ ಕೆಲವು ಭಾಗವನ್ನು ಮಂತ್ರಪೂರ್ವಕವಾಗಿ ನುಂಗಿದನು. ಇದರಿಂದ ಅವನ ಕಂಠವು ಕಪ್ಪಾಗಿ ಆತನು ನೀಲಕಂಠನೆನಿಸಿದನು. ಈ ವಿಷಜ್ವಾಲೆಯಿಂದ ಆ ಮಂತ್ರವು ಭಸ್ಮವಾಗಿ ಹೋಯಿತು.

೨೯. ವಿಷಜ್ವಾಲೆಯು ಸ್ವಲ್ಪ ಶಮನವಾಗುತ್ತಲೆ ಬ್ರಹ್ಮನು ಎಚ್ಚೆತ್ತು ಅಯ್ಯೋ! ಎಂದು ಕೂಗುತ್ತಾ ಆ ಶಿವನನ್ನು ಕುರಿತು "ಎಲೈ ಈಶ್ವರನೇ! ಈ ಪ್ರಪಂಚದಲ್ಲಿ ಇಂತಹ ದಾರುಣವಾದ ವಿಷವನ್ನು ಪಾನಮಾಡಲು ಸಮರ್ಥನಾದವನು ಯಾರೂ ಇಲ್ಲ."

೩೦. "ದಕ್ಷಿಣದಿಕ್ಕಿನಲ್ಲಿರುವ ಲಂಕಾಪಟ್ಟಣದ ಸಮೀಪದಲ್ಲಿ ಅಗಸ್ತ್ಯ ಮುನಿಯಿರುವನು. ಅವನು ಸಮರ್ಥನು. ಆದುದರಿಂದ ನೀವೆಲ್ಲರೂ ಹೋಗಿ ಮಹಾಭಾಗನಾದ ಅವನನ್ನು ಶರಣು ಹೊಗಿರಿ" ಎಂದನು.

ಏವಮುಕ್ತ್ವಾ ಗತಾ ದೇವಾ ಅಗಸ್ತ್ಯಾಶ್ರಮದಕ್ಷಿಣಾಂ ।
ದೇವಾನ್ವೀಕ್ಷ್ಯ ಚ ತಾನ್ ಹರ್ಷಾದಗಸ್ತ್ಯೋ ಮುನಿಸತ್ತಮಃ ॥ ೩೧ ॥

ಧ್ಯಾನಂ ಚಕ್ರೇ ವಿಷಂ ಯೇನ ಹಿಮಾದ್ರೌ ಸಂಪ್ರವೇಶಿತಂ ।
ಕಂಠೀಸೂತ್ರಂ ನಿಕುಂಜೇಷು ಹಿಮಪರ್ವತಸಾನುಷು ॥ ೩೨ ॥

ತಸ್ಮಿನ್ಕಾಲೇ ವಿಷಂ ಲಗ್ನಂ ಕಿಂಚಿಚ್ಛೇಷಂ ದ್ರುಮಾದಿಷು ।
ಉನ್ಮತ್ತಕರವೀರಾರ್ಕ್ಕಸ್ಥಲಭೂಮಿಜಲಾನಿಲೇ ॥ ೩೩ ॥

ತದ್ವಿಷಂ ಚೂರ್ಣಿತಂ ತೇನ ಕ್ಷಣಾತ್ಸಂಕೋಚಿತಂ ತಥಾ ।
ಹಿಮವಾತೇನ ದುಷ್ಟೇನ ವಹಮಾನೇನ ಪಾಂಡವ ॥ ೩೪ ॥

---

೩೧. ಬ್ರಹ್ಮನು ಹೀಗೆ ಹೇಳಲಾಗಿ ದೇವತೆಗಳೆಲ್ಲರೂ ದಕ್ಷಿಣದಿಕ್ಕಿನಲ್ಲಿರುವ ಅಗಸ್ತ್ಯಾಶ್ರಮಕ್ಕೆ ಹೋದರು. ಅನಿರೀಕ್ಷಿತವಾಗಿ ತಮ್ಮ ಆಶ್ರಮಕ್ಕೆ ಸಮೂಹವಾಗಿ ಬಂದ ದೇವತೆಗಳನ್ನು ನೋಡಿ, ಮುನಿವರ್ಯನಾದ ಅಗಸ್ತ್ಯನು ಸಂತೋಷದಿಂದ ಅವರನ್ನೆಲ್ಲಾ ಸತ್ಕರಿಸಿ, ಅವರು ಬಂದಿರುವ ಕಾರಣವನ್ನು ಧ್ಯಾನಯೋಗಬಲದಿಂದ ತಿಳಿದನು.

೩೨. ಮಹಾಮಹಿಮನಾದ ಆತನು ಕೂಡಲೆ ಆ ವಿಷಜ್ವಾಲೆಯನ್ನು ಧ್ಯಾನಮಾಡಿದನು. ಆಗ ವಿಷವೆಲ್ಲವೂ ಹಿಮಾಲಯಪರ್ವತಕ್ಕೆ ಬಂದು ಅದರ ತಪ್ಪಲಪ್ರದೇಶದಲ್ಲಿರುವ ವೃಕ್ಷಸಮೂಹಗಳಲ್ಲಿ ಕಂಠಸೂತ್ರದಂತೆ ಸೇರಿಕೊಂಡವು.

೩೩. ಹಾಗೆ ವ್ಯಾಪಿಸುವಾಗ ಮರಗಳಿಗೆ ಸಂಬಂಧಿಸಿ ಉಳಿದ ಶೇಷವು ಉಮ್ಮತ್ತದಗಿಡ, ಕಣಗಿಲಗಿಡ, ಎಕ್ಕದಗಿಡ ಇವುಗಳಿಗೂ; ಭೂಮಿ, ನೀರು, ವಾಯು ಇವುಗಳಲ್ಲಿಯೂ ಬಂದು ಬೆರೆಯಿತು.

೩೪. ಅಯ್ಯಾ ಪಾಂಡುಪುತ್ರನೇ! ಆ ಪರ್ವತದ ತಪ್ಪಲಿನಲ್ಲಿ ಬೀಸುವ ಹಿಮದ ಗಾಳಿಯು ಆ ವಿಷಪುಂಜದ ಮೇಲೆ ಬಿದ್ದು, ಒಂದುಕ್ಷಣದಲ್ಲಿ ಚೂರು ಚೂರಾಯಿತು. ಅನಂತರ ಹಿಮವಾತದಲ್ಲಿ ವಿಷಜ್ವಾಲೆಯು ಮಿಶ್ರವಾಯಿತು.

ಮನುಷ್ಯಾಣಾಂ ತು ಜಾಯಂತೇ ರೋಗಾ ನಾನಾವಿಧಾ ಭುವಿ ।
ತೇ ಚ ಮಾಸತ್ರಯಂ ಸಾರ್ಧಂ ಪ್ರವಹಂತಿ ವಿಷೋಲ್ಬಣಾಃ ॥ ೩೫ ॥

ವೃಷಸಂಕ್ರಾಂತಿಮಾರಭ್ಯ ಸಿಂಹಾಂತೇ ಶಾಮ್ಯತೇ ವಿಷಂ ।
ರೋಗದೋಷಾಪನೋದಶ್ಚ ಭವೇತ್ಪಾರ್ಥ ಪ್ರಭಾವತಃ ॥ ೩೬ ॥

ಏವಂ ಕಾಲೇನ ಮಹತಾ ನೀರುಜೇ ವ್ಯಾಧಿವರ್ಜಿತೇ ।
ಜಗತ್ಯಸ್ಮಿನ್ಪುರಾ ಪಾರ್ಥ ಘನೀಭೂತೇ ಪ್ರಜಾಗಣೇ ॥ ೩೭ ॥

ನಿರಂತರೇ ಮರ್ತ್ಯಲೋಕೇ ಊರ್ಧ್ವಬಾಹುಪ್ರಸಾರಿಣಿ ।
ಬಲವಾನ್ಧಾಮನಿರ್ದೇಶಾನ್ಮೃತ್ಯುರ್ಭ್ರಾಮ್ಯತಿ ಮೂರ್ತಿಮಾನ್ ॥೩೮॥

---

೩೫. ಆ ವಾಯುವು ಎಲ್ಲೆಲ್ಲಿ ಬೀಸುವುದೋ, ಅಲ್ಲಿ ವಾಸಿಸುವ ಮನುಜರಿಗೆ ನಾನಾವಿಧವಾದ ರೋಗಗಳುಂಟಾಗುವುವು. ಆ ವಾಯುವು ಮೂರುತಿಂಗಳ ಕಾಲ ಬೀಸುವುದರಿಂದ ಆ ಸಮಯದಲ್ಲಿ ಮಾತ್ರ ಜನರಿಗೆ ಉಲ್ಬಣವಾದ ವ್ಯಾಧಿಯುಂಟಾಗುವುದು.

೩೬. ಈ ವಿಷವು ವೃಷಭಸಂಕ್ರಮಣದಿಂದ ಸಿಂಹಸಂಕ್ರಮಣದವರೆಗೆ ಪ್ರಬಲವಾಗಿದ್ದು ಸಿಂಹಸಂಕ್ರಮಣದ ಕೊನೆಯಭಾಗದಲ್ಲಿ ಶಾಂತವಾಗುವುದು. ಎಲೈ ಕುಂತಿಪುತ್ರನೇ ! ಆಗ ರೋಗದೋಷಗಳು ಪರಿಹಾರವಾಗುವುವು.

೩೭. ಹೀಗೆ ದೋಷಗಳೆಲ್ಲ ಪರಿಹಾರವಾಗಿ ಈ ಪ್ರಪಂಚವು ರೋಗಬಾಧೆಗಳಿಲ್ಲದೆ ಇರಲು, ಪ್ರಜಾವರ್ಗವೆಲ್ಲಾ ಹಿಂದೆ ಇದ್ದಂತೆ ವೃಥಕಾಯರಾಗಿ ಇದ್ದರು.

೩೮. ಈ ಪ್ರಕಾರ ಭೂಲೋಕವು ಯಾವ ವಿಘ್ನವೂ ಇಲ್ಲದೆ ತನ್ನ ಬಾಹುಗಳನ್ನು ಮೇಲ್ಭಾಗದವರೆಗೂ ಚಾಚುತ್ತಿರಲು (ಅಭಿವೃದ್ಧಿಹೊಂದುತ್ತಿರಲು) ಆಗ ಬಲಶಾಲಿಯಾದ ಮೃತ್ಯುವು ಮೂರ್ತಿವೆತ್ತು ಪ್ರಪಂಚವನ್ನೆಲ್ಲಾ ಹೊಗೆಯಂತೆ ವ್ಯಾಪಿಸಿ, ಎಲ್ಲಾ ಕಡೆಯಲ್ಲೂ ಸಂಚರಿಸುತ್ತಾ, ಪ್ರಜೆಗಳನ್ನೆಲ್ಲಾ ನಾಶಪಡಿಸಿದನು.

ಪ್ರಜಾ ವ್ಯಾಪಾದಯನ್ಕಾಲಾದಾಜಗಾಮ ಮಹಾಮುನೇಃ ।
ಸಮೀಪಂ ಮೂರ್ತಿಮಾನ್ ಕ್ರುದ್ಧೋ ಮೃತ್ಯುಸ್ತೇನ ನಿರೀಕ್ಷಿತಃ ॥೩೯॥

ಭಸ್ಮೀಬಭೂವ ಪಶ್ಚಾಚ್ಚ ಬ್ರಹ್ಮಣಸ್ಸುಖಕಾರಣಾತ್ ।
ವ್ಯಾಧಿವೃಂದಸಮೋಪೇತೋ ಮೃತ್ಯುರನ್ಯೋ ವಿನಿರ್ಮಿತಃ ॥ ೪೦ ॥

ತಥಾನ್ಯೋ ದಂಡಕಾರಣ್ಯೇ ಶ್ವೇತೋ ನಾಮ ನೃಪೋತ್ತಮಃ ।
ಸ್ವ ಮಾಂಸಮಶ್ನತಾ ತೇನ ನಿರ್ವೇದಾತ್ಪ್ರಾರ್ಥಿತೋ ಮುನಿಃ ॥ ೪೧ ॥

ಭಗವನ್ಸರ್ವಮೇವಾನ್ಯದ್ದತ್ತಂ ರಾಜ್ಯಮದಾನ್ಮಯಾ ।
ಅನ್ನಂ ಜಲಂ ವಾ ಶ್ರಾದ್ಧಂ ವಾ ನ ದತ್ತಂ ಪಾಪಬುದ್ಧಿನಾ ॥ ೪೨ ॥

---

೩೯. ಅನಂತರ ಈ ಮೃತ್ಯುದೇವತೆಯು ಕೊನೆಗೆ ಮಹಾಮುನಿಯಾದ ಅಗಸ್ತ್ಯನ ಬಳಿಗೂ ಬಂದಿತು. ಆಗ ಆ ಮುನಿವರ್ಯನು ಕುಪಿತನಾಗಿ ಈ ಮೃತ್ಯುವನ್ನು ತನ್ನ ಉಗ್ರದೃಷ್ಟಿಯಿಂದ ನೋಡಿದನು.

೪೦. ಇಷ್ಟಕ್ಕೇ ಮೃತ್ಯುವು ಭಸ್ಮವಾಗಿ ಹೋದನು. ಮೃತ್ಯುವೇ ಇಲ್ಲದೆ ಹೋಗಲು, ಬ್ರಹ್ಮನ ಪುನಃ ಸೃಷ್ಟಿಕಾರ್ಯವೇ ನಿಂತುಹೋಗುವಂತಾಯಿತು. ಅನಂತರ ರೋಗಸಮೂಹಗಳಿಂದೊಡಗೂಡಿದ ಬೇರೆ ಒಬ್ಬ ಮೃತ್ಯುವನ್ನು ಬ್ರಹ್ಮನು ಪುನಃ ನಿರ್ಮಿಸಬೇಕಾಯಿತು.

೪೧. ಆ ಅಗಸ್ತ್ಯನ ಮಹಿಮೆಗೆ ಇನ್ನೂ ಕೆಲವು ನಿದರ್ಶನಗಳಿವೆ. ದಂಡಕಾರಣ್ಯದಲ್ಲಿ ಶ್ವೇತರಾಜನೆಂಬ ಕ್ಷತ್ರಿಯಶ್ರೇಷ್ಠನಿದ್ದನು. ಅವನು ತನ್ನ ಪಾಪಕರ್ಮದ ಫಲವಾಗಿ ತನ್ನ ಮಾಂಸವನ್ನೇ ತಾನು ಭಕ್ಷಣೆಮಾಡುತ್ತಾ ಅತಿ ದುಃಖಿತನಾಗಿದ್ದನು. ಒಂದುದಿನ ಆ ರಾಜನು ಮಹಾತ್ಮನಾದ ಅಗಸ್ತ್ಯಮುನಿಯನ್ನು ಕಂಡು.

೪೨. "ಪೂಜ್ಯರೇ! ರಾಜ್ಯಮದದಿಂದ ಪಾಪಬುದ್ಧಿಗೊಳಗಾದ ನಾನು ಅನ್ನದಾನ ಜಲದಾನಾದಿಗಳನ್ನೂ ಶ್ರಾದ್ಧಕರ್ಮವನ್ನೂ ಬಿಟ್ಟು ಉಳಿದ ದಾನಗಳನ್ನೆಲ್ಲಾ ಮಾಡಿದೆನು. ಇದರಿಂದ ನನಗೆ ಈ ದುರವಸ್ಥೆಯುಂಟಾಗಿದೆ. ನನ್ನನ್ನು ಉದ್ಧರಿಸಬೇಕು" ಎಂದು ಪ್ರಾರ್ಥಿಸಿದನು.

ತತೋಽಗಸ್ತ್ಯಸ್ಸ ಕಾರುಣ್ಯಾದ್ರತ್ನೈಃ ಶ್ರಾದ್ಧಮಕಲ್ಪಯತ್ ।
ಶ್ರಾದ್ಧೇ ನಿವೃತ್ತೇ ಸಹಸಾ ದಿವ್ಯದೇಹಃ ಶ್ರಿಯಾ ವೃತಃ ॥ ೪೩ ॥

ಪ್ರಾಪ್ತಶ್ಚ ಪರಮಂ ಸ್ಥಾನಮಗಸ್ತ್ಯರ್ಷೇಃ ಪ್ರಸಾದತಃ ।
ಅಥ ವಿಂಧ್ಯೋ ಮಹಾಶೈಲಃ ಸೂರ್ಯರೋಷಾದ್ವ್ಯವರ್ಧತ ॥ ೪೪ ॥

ಕಸ್ಮಾನ್ಮೇರುಮಿವಾಸೌ ಮಾಂ ನ ಕರೋತಿ ಪ್ರದಕ್ಷಿಣಂ ।
ವರ್ಧಮಾನಂ ತು ತಂ ದೃಷ್ಟ್ವಾ ತತೋ ದೇವಾಸ್ಸವಾಸ್ಸವಾಸವಾಃ ॥
ಏಕೀಭೂಯಾಶ್ರಮಂ ಗತ್ವಾ ಸ್ತುತ್ವಾ ದೇವರ್ಷಿಪುಂಗವಂ ॥ ೪೫ ॥

ಅಗಸ್ತ್ಯಮೂಚುರ್ಭಗವನ್ ಸೂರ್ಯಮಾರ್ಗನಿರೋಧಿನಂ ॥ ೪೬ ॥

ವಿಂಧ್ಯಂ ನಿವಾರಯಸ್ವೈನಂ ಸ್ಥಿತೌ ಸ್ಥಾಪಯ ಪರ್ವತಂ ।
ಅಗಸ್ತ್ಯೋಽಪಿ ದ್ರುತಂ ಗತ್ವಾ ಪ್ರಾಹೇದಂ ವಿಂಧ್ಯಪರ್ವತಂ ॥ ೪೭ ॥

---

೪೩. ಆಗ ಅಗಸ್ತ್ಯಮುನಿಯು ಕೇವಲ ರತ್ನಗಳಿಂದಲೇ ಅವನ ಕೈಯಿಂದ ಶ್ರಾದ್ಧಮಾಡಿಸಿದನು. ಶ್ರಾದ್ಧ ಮುಗಿದಕೂಡಲೆ ಈ ರಾಜನು ದಿವ್ಯಶರೀರವನ್ನು ಹೊಂದಿ ಕಾಂತಿಯುಕ್ತನಾದನು.

೪೪–೪೫. ಮತ್ತು ಅಗಸ್ತ್ಯರ ಅನುಗ್ರಹದಿಂದ ಉತ್ತಮವಾದ ಸ್ಥಾನವನ್ನು ಪಡೆದನು. ಒಂದಾನೊಂದು ಕಾಲದಲ್ಲಿ ವಿಂಧ್ಯಪರ್ವತವು ತನ್ನ ಮನಸ್ಸಿನಲ್ಲಿ ಈ ಸೂರ್ಯನು ಮೇರುಪರ್ವತವನ್ನು ಪ್ರದಕ್ಷಿಣೆಮಾಡುತ್ತಾನೆ. ನನ್ನನ್ನು ಮಾತ್ರ ಪ್ರದಕ್ಷಿಣೆಮಾಡುವುದಿಲ್ಲ ಎಂದು ಯೋಚಿಸಿ, ಆಗ್ರಹಗೊಂಡು ಈ ಸೂರ್ಯನು ಸಂಚಾರಮಾಡುವುದಕ್ಕೇ ವಿಘ್ನಮಾಡುವೆನೆಂದು ಉನ್ನತವಾಗಿ ಬೆಳೆಯತೊಡಗಿತು.

೪೬. ಹೀಗೆ ದಿನದಿನಕ್ಕೆ ಬೆಳೆಯುತ್ತಿರುವ ವಿಂಧ್ಯಪರ್ವತವನ್ನು ನೋಡಿ ಇಂದ್ರಾದಿ ದೇವತೆಗಳೆಲ್ಲರೂ ಒಟ್ಟಾಗಿ ಈ ಅಗಸ್ತ್ಯಮಹರ್ಷಿಗಳ ಆಶ್ರಮಕ್ಕೆ ಬಂದು, ಆ ಮುನಿವರ್ಯನನ್ನು ಸ್ತುತಿಸಿದರು. ಅನಂತರ ಈ ದೇವತೆಗಳು ಮುನಿಯನ್ನು ಕುರಿತು.

೪೭. ಪೂಜ್ಯನೇ! ಸೂರ್ಯನ ಗತಿಯನ್ನೇ ತಡೆಯಲು ಪ್ರಯತ್ನಿಸಿರುವ ವಿಂಧ್ಯನನ್ನು ತಡೆದು ಹತೋಟಿಮಾಡಿ ನಿಲ್ಲಿಸು. ಈ ಕಾರ್ಯವನ್ನು ಮಾಡಲು ನಿನ್ನ ಹೊರತು ಸಮರ್ಥರಾರೂ ಇಲ್ಲ'' ಎಂದು ಪ್ರಾರ್ಥಿಸಿದರು.

ಪ್ರಸ್ಥಿತಂ ತೀರ್ಥಯಾತ್ರಾಯಾಂ ವಿದ್ಧಿ ಮಾಮಚಲೋತ್ತಮ ।
ಸ್ಥಿತೌ ಚ ಸ್ಥೀಯತಾಂ ತಾವದ್ಯಾವದಾಗಮನಂ ಮಮ　　|| ೪೮ ||

ಏವಮುಕ್ತ್ವಾ ಸಂಪ್ರಯಾತೋ ನಾದ್ಯಾಪಿ ವಿನಿವರ್ತತೇ ।
ದೃಶ್ಯತೇ ಭ್ರಾಜಯನ್ನಾಶಾಂ ದಕ್ಷಿಣಾಂ ಗಗನೇ ಜ್ವಲನ್　　|| ೪೯ ||

ತ್ರೈಲೋಕ್ಯವಂದ್ಯಚರಣೋ ಲೋಪಾಮುದ್ರಾಸಹಾಯವಾನ್ ।
ಲೋಪಾಮುದ್ರಾಪಿ ತಂ ಪ್ರಾಹ ದೇವರ್ಷಿಂ ದೇವಪೂಜಿತಂ　　|| ೫೦ ||

---

೪೮. ದೇವತೆಗಳ ಈ ಪ್ರಾರ್ಥನೆಯನ್ನು ಕೇಳಿ ಅಗಸ್ತ್ಯಮುನಿಯು ಜಾಗ್ರತೆಯಾಗಿ ವಿಂಧ್ಯನ ಸಮೀಪಕ್ಕೆ ಹೋಗಿ ಆ ಪರ್ವತವನ್ನು "ಎಲೈ ಪರ್ವತ ಶ್ರೇಷ್ಠನೇ! ನಾನು ತೀರ್ಥಯಾತ್ರೆಗೆ ಹೊರಟಿರುವೆನು. ಆದುದರಿಂದ ನಾನು ಪ್ರಯಾಣಮಾಡಲು ಸಾಧ್ಯವಾಗುವಂತೆ ಮಟ್ಟವನ್ನು ಇಳಿಸು. ಮತ್ತು ಹಿಂದಿರುಗಿ ಬರುವವರೆಗೂ ಅದೇ ರೀತಿಯಲ್ಲಿ ಇರು" ಎಂದು ಹೇಳಿದನು. ಆಗ ವಿಂಧ್ಯ ಪರ್ವತವು ಮಹರ್ಷಿಯ ಮಾತಿಗೆ ಬೆಲೆಕೊಟ್ಟು, ತಾನು ಬಾಗಿನಿಂತು ಸಂಚರಿಸಲು ಅನುಕೂಲಮಾಡಿಕೊಟ್ಟಿತು.

೪೯. ಹೀಗೆ ಹೇಳಿ ಹೊರಟುಹೋದ ಅಗಸ್ತ್ಯಮುನಿಯು ಅದ್ಯಾಪಿ ಹಿಂದಿರುಗಲಿಲ್ಲ. ಪರ್ವತವೂ ಪುನಃ ತಲೆಯೆತ್ತಿ ಬೆಳೆಯಲಿಲ್ಲ. ಹಾಗೆಯೇ ಅಡ್ಡಡ್ಡಲಾಗಿ ಬೆಳೆಯುತ್ತಿದೆ. ಈ ಮಹಾಮುನಿಯಾದ ಅಗಸ್ತ್ಯನು ನಕ್ಷತ್ರರೂಪಿನಿಂದ ದಕ್ಷಿಣದಿಕ್ಕಿನ ಕಡೆ ಅಂತರಿಕ್ಷದಲ್ಲಿ ಆ ದಿಕ್ಕನ್ನೆಲ್ಲಾ ಪ್ರಕಾಶಪಡಿಸುತ್ತ ಬೆಳಗುತ್ತಿರುವನು.

೫೦. ಲೋಪಾಮುದ್ರೆಯ ಪತಿಯಾದ ಅಗಸ್ತ್ಯಮುನಿಯು ಹೀಗೆ ಮೂರು ಲೋಕದ ಪ್ರಜೆಗಳಿಂದಲೂ ನಮಸ್ಕರಿಸಿಕೊಳ್ಳಲು ಅರ್ಹನಾದ ಮಹಿಮಾವಿಶಿಷ್ಟನೆನಿಸಿದನು. ಒಂದುಸಲ ಪತಿವ್ರತಾಶಿರೋಮಣಿಯಾದ ಲೋಪಾಮುದ್ರೆಯು ದೇವಶ್ರೇಷ್ಠನಾದ ತನ್ನ ಪತಿಯನ್ನು ಕುರಿತು ಇಂತೆಂದಳು.

ತತ್ರಾಶ್ರಮಸ್ಥಲಿಕಾಯಾಮೃತುಕಾಲೇಹ್ಯುಪಸ್ಥಿತೇ ।
ಭೋಕ್ತುಮಿಚ್ಛಾಮಿ ವಿಷಯಾಂಸ್ತ್ವಯಾ ಸಹ ಸುಖೈಷಿಣೀ ॥ ೫೧ ॥

ಭವೇದ್ಯದಿ ಗೃಹಂ ರಮ್ಯಂ ಸರ್ವರತ್ನವಿಭೂಷಿತಂ ।
ಗಜೈರಶ್ವೈಶ್ಚ ಸಂಪೂರ್ಣಂ ಶಯನೈಃ ಪ್ರವರಾಸನೈಃ ॥ ೫೨ ॥

ದುಕೂಲಪಟ್ಟನೇತ್ರೈಶ್ಚ ವಿಲಾಸೈರ್ಲಲಿತೈರ್ಮುನೇ ।
ತ್ವಯಾ ಸಹ ಸಮಾಯೋಗಂ ಯಾಸ್ಯೇಽಹಂ ಕುರು ಚಿಂತಿತಂ ॥೫೩॥

ಏತಚ್ಛ್ರುತ್ವಾ ಮುನಿರ್ಹೃಷ್ಟಃ ಪ್ರಾಹ್ವಯದ್ಧನದಂ ಕ್ಷಣಾತ್ ।
ಕಾರಯಾಮಾಸ ಭವನಂ ಸಂಪೂರ್ಣೈರ್ರತ್ನರಾಶಿಭಿಃ ॥ ೫೪ ॥

ತತ್ರ ರೇಮೇ ಸ ಭಗವಾನಗಸ್ತ್ಯಃ ಸ್ವಾಶ್ರಮೇ ಸುಖಂ ।
ತಸ್ಯೈವಂ ಚೇಷ್ಟಿತಸ್ಯರ್ಷೇಃ ಪ್ರಯಚ್ಛಾರ್ಘ್ಯಂ ಯುಧಿಷ್ಠಿರ ॥ ೫೫ ॥

---

೫೧–೫೩. "ದೇವಪೂಜ್ಯನಾದ ಸ್ವಾಮಿಯೆ ! ಮುಂದೆ ಬರುವ ವಸಂತಾದಿ ಋತುಗಳಲ್ಲಿ ಈ ಆಶ್ರಮಭೂಮಿಯಲ್ಲಿ ನಿನ್ನೊಡನೆ ರತಿಸುಖಪಡಬೇಕೆಂದು ಆಶೆ. ಆದರೆ ಆ ಸುಖಕ್ಕೆ ಸಾಧನವಾದ ನಾನಾವಿಧ ರತ್ನ, ಚಿನ್ನ ಮೊದಲಾದ ಬೆಲೆ ಬಾಳುವ ಆಭರಣಾದಿಗಳು, ಸರ್ವೋಪಕರಣಸಜ್ಜಿತವಾದ ಮನೆ, ಶಯ್ಯಾ, ಆಸನಗಳು, ರೇಶ್ಮೆಯ ವಸ್ತ್ರಾದಿಗಳು, ಗಜರಥಾದಿವಾಹನ ಮೊದಲಾದ ಸಾಮಗ್ರಿಗಳು ಒದಗಬೇಕಾಗಿವೆ. ಇವೆಲ್ಲ ಸಿದ್ಧವಾದರೆ ನಾನು ನಿಮ್ಮೊಡನೆ ವಿಹರಿಸುವೆನು. ನನ್ನ ಈ ಅಪೇಕ್ಷೆಯನ್ನು ತಾವು ಕೃಪೆಮಾಡಿ ನೆರವೇರಿಸಿಕೊಡಬೇಕು'' ಎಂದು ಪ್ರಾರ್ಥಿಸಿದಳು.

೫೪. ತನ್ನ ಧರ್ಮಪತ್ನಿಯು ಹೀಗೆ ಹೇಳಲಾಗಿ ಅಗಸ್ತ್ಯಮಹರ್ಷಿಯು ತುಂಬಾ ಸಂತೋಷಗೊಂಡು, ಕೂಡಲೆ ಕುಬೇರನನ್ನು ಕರೆಯಿಸಿ, ರತ್ನಾಭರಣವೇ ಮೊದಲಾದ ಉಪಭೋಗಸಾಮಗ್ರಿಪೂರ್ಣವೆನಿಸಿ ದಿವ್ಯವಾದ ಗೃಹವನ್ನು ನಿರ್ಮಿಸಿದನು.

೫೫. ಅನಂತರ ಮಹರ್ಷಿವರ್ಯನಾದ ಈ ಅಗಸ್ತ್ಯನು ಆ ದಿವ್ಯಭವನದಲ್ಲಿ ತನ್ನ ಪತ್ನಿಯೊಡನೆ ಚಿರಕಾಲ ಸಂತೋಷದಿಂದ ಕ್ರೀಡಿಸಿದನು. ಅಯ್ಯಾ ಯುಧಿಷ್ಠಿರನೇ! ಇಂತಹ ಅಸಾಧಾರಣ ಮಹಿಮೆಯುಳ್ಳ ಈ ಅಗಸ್ತ್ಯಮುನಿವರ್ಯರಿಗೆ ನೀನು ಅರ್ಘ್ಯವನ್ನು ಕೊಡು.

ಆಸ್ತಿಕ್ಯಬುದ್ಧ್ಯಾ ಭಕ್ತ್ಯಾ ಚ ಧರ್ಮಂ ಪ್ರಾಪ್ಸ್ಯಸಿ ಪಾಂಡವ ।
ಕನ್ಯಾಯಾಮಾಗತೇ ಸೂರ್ಯೇ ಅರ್ವಾಗ್ಘ್ಯೆ ಸಪ್ತಮೇ ದಿನೇ ॥ ೫೬ ॥

ಕನ್ಯಾಯಾಂ ಸಮನುಪ್ರಾಪ್ತೇ ಸೂರ್ಯೇ ಯಸ್ಸನ್ನಿವರ್ತತೇ ।
ಪ್ರತ್ಯೂಷಸಮಯೇ ವಿದ್ವಾನ್ನುರ್ಯಾದಸ್ಯೋದಯೇ ನಿಶಿ ॥ ೫೭ ॥

ಸ್ನಾನಂ ಶುಕ್ಲತಿಲೈಸ್ತದ್ವಚ್ಛುಕ್ಲಮಾಲ್ಯಾಂಬರೋ ಗೃಹೀ ।
ಸ್ಥಾಪಯೇದವ್ರಣಂ ಕುಂಭಂ ಮಾಲ್ಯವಸ್ತ್ರವಿಭೂಷಿತಂ ॥ ೫೮ ॥

ಪಂಚರತ್ನಸಮಾಯುಕ್ತಂ ಘೃತಪಾತ್ರೇಣ ಸಂಯುತಂ ।
ನಾನಾಭಕ್ಷ್ಯಸಮೋಪೇತಂ ಸಪ್ತಧಾನ್ಯಸಮನ್ವಿತಂ ॥ ೫೯ ॥

ಕಾಂಚನಂ ಕಾರಯಿತ್ವಾ ತು ಯಥಾ ಶಕ್ತ್ಯಾ ಸುಶೋಭನಂ ।
ಪುರುಷಾಕೃತಿಂ ಪ್ರಶಾಂತಂ ಚ ಜಪಮಂಜಲಧಾರಿಣಂ ॥ ೬೦ ॥

---

೫೬–೫೭. ಆಸ್ತಿಕ್ಯಬುದ್ಧಿಯುಕ್ತನಾದ ನೀನು ಭಕ್ತಿಯಿಂದ ಅರ್ಘ್ಯ ಪ್ರದಾನಮಾಡಿದರೆ ನಿನಗೆ ಧರ್ಮವು ಲಭಿಸುವುದು. ಸೂರ್ಯನು ಕನ್ಯಾರಾಶಿಗೆ ಬಂದಾಗ (ಕನ್ಯಾಸಂಕ್ರಮಣವಾದ) ಏಳುದಿನ ಕಳೆದನಂತರ ಪ್ರತ್ಯೂಷಕಾಲದಲ್ಲಿ ಅಗಸ್ತ್ಯನಕ್ಷತ್ರ ಉದಯವಾಗುವುದು.

೫೮–೫೯. ಆ ಕಾಲದಲ್ಲಿ ಪ್ರಾಜ್ಞನು ಶುಕ್ಲತಿಲವನ್ನರೆದು ಲೇಪಿಸಿಕೊಂಡು ಸ್ನಾನಮಾಡಿ, ಬಿಳಿಯ ವಸ್ತ್ರವನ್ನು ಧರಿಸಿ, ಅವ್ರಣವಾದ (ಒಡಕಿಲ್ಲದ) ಕಲಶವನ್ನು ಸ್ಥಾಪಿಸಿ ಅದನ್ನು ವಸ್ತ್ರಮಾಲ್ಯಾದಿಗಳಿಂದ ಅಲಂಕರಿಸಬೇಕು. ಬಳಿಕ ಪಂಚರತ್ನ, ತುಪ್ಪದ ಪಾತ್ರೆ, ನಾನಾವಿಧವಾದ ಭಕ್ಷ್ಯಗಳು, ಸಪ್ತಧಾನ್ಯಗಳು ಇವೆಲ್ಲವನ್ನೂ ತುಂಬಿ ಕುಂಭವನ್ನು ಸಿದ್ಧಮಾಡಬೇಕು.

೬೦–೬೧. ಅನಂತರ ತನ್ನ ಶಕ್ತ್ಯನುಸಾರ ಚಿನ್ನದಲ್ಲಿ ಅಗಸ್ತ್ಯಮುನಿಯ ಪ್ರತಿಮೆಯನ್ನು ಮಾಡಿಸಬೇಕು. ಆ ಪ್ರತಿಮೆಯು ಶಾಂತಮುದ್ರೆಯುಳ್ಳುದೂ, ಕೈಯಲ್ಲಿ ಕಮಂಡಲವನ್ನು ಧರಿಸಿರುವುದೂ, ಶಿಷ್ಯರಿಂದ ಪರಿವೃತವೂ, ಜಿಂಕೆ

ಕಮಂಡಲುಕರಂ ಶಿಷ್ಟೈರ್ವರ್ಗೈಶ್ಚ ಪರಿಧಾರಿತಂ ।
ಮೃತ್ಯುಘ್ನಂ ವಿಷಹಂತಾರಂ ದರ್ಭಾಕ್ಷೇಷ್ಟಕರಂ ಮುನಿಂ ॥ ೬೧ ॥

ತಸ್ಮಿನ್ಕುಂಭೇ ಸಮಾಲಗ್ನಂ ಚಂದನೇನ ತತೋ ನ್ಯಸೇತ್ ।
ಸ್ನಾಪಿತಂ ಚಾನುಲಿಪ್ತಂ ಚ ಚಂದನೇನ ಸುಗಂಧಿನಾ ॥ ೬೨ ॥

ಪೂಜಿತಂ ಚಾಪಿ ಕುಸುಮೈರ್ಹ್ಯದ್ಯೈರ್ಧೂಪೈಸ್ತು ಧೂಪಿತಂ ।
ತತಶ್ಚಾರ್ಘಃ ಪ್ರದಾತವ್ಯೋ ಯೈರ್ದ್ರವ್ಯೈಸ್ತಾನಿ ಮೇ ಶೃಣು ॥ ೬೩ ॥

ಖರ್ಜೂರೈರ್ನಾರಿಕೇಲೈಶ್ಚ ಕೂಷ್ಮಾಂಡೈಸ್ತ್ರಪುಷೈರಪಿ ।
ಕರ್ಕೋಟಿಕಾರವೇಲ್ಲೈಶ್ಚ ಕರ್ಚೂರೈರ್ಬೀಜಪೂರಕೈಃ ॥ ೬೪ ॥

ವೃಂತಾಕೈರ್ದಾಡಿಮೈಶ್ಚೈವ ನಾರಂಗೈಃ ಕದಲೀಫಲೈಃ ।
ದೂರ್ವಾಂಕುರೈಃ ಕುಶೈಃ ಕಾಶೈಃ ಪದ್ಮೈರ್ನೀಲೋತ್ಪಲೈಸ್ತಥಾ ॥೬೫॥

---

ಗಳಿಂದ ಸುತ್ತುವರಿಯಲ್ಪಟ್ಟದ್ದೂ, ದರ್ಭೆಯ ಕಂತೆಯನ್ನೂ ಅಕ್ಷಮಾಲೆಯನ್ನೂ ಕೈಯ್ಯಲ್ಲಿ ಹಿಡಿದಿರುವುದೂ, ಮೃತ್ಯುವನ್ನು ಜಯಿಸಿ ವಿಷಜ್ವಾಲೆಯನ್ನು ನಾಶ ಮಾಡಿದುದೂ ಆಗಿ ಇರುವಂತೆ ನಿರ್ಮಿಸಬೇಕು.

೬೨–೬೩. ಅನಂತರ ಈ ಅಗಸ್ತ್ಯಪ್ರತಿಮೆಯನ್ನು ಮೇಲೆ ಹೇಳಿದ ಕುಂಭದಲ್ಲಿರಿಸಿ, ಗಂಧೋದಕಸ್ನಾನ, ಅನುಲೇಪನಾದಿಗಳಿಂದಲೂ, ಸುವಾಸನಾ ಪುಷ್ಪಗಳಿಂದಲೂ ಪೂಜಿಸಿ, ಧೂಪದೀಪ ನೈವೇದ್ಯಾದಿಗಳನ್ನು ಸಮರ್ಪಿಸಬೇಕು. ಅನಂತರ ಅನೇಕ ದ್ರವ್ಯಗಳಿಂದ ಅಗಸ್ತ್ಯಮುನಿಗೆ ಅರ್ಘ್ಯವನ್ನು ಕೊಡಬೇಕು.

೬೪–೬೫. ಅರ್ಘ್ಯಕೊಡುವಾಗ ಉಪಯೋಗಿಸುವ ದ್ರವ್ಯಗಳನ್ನು ಹೇಳು ತ್ತೇನೆ ಕೇಳು. ಖರ್ಜೂರ, ತೆಂಗಿನಕಾಯಿ, ಕುಂಬಳಕಾಯಿ, ತ್ರಪುಸಫಲ, ಕರ್ಕೋಟಕ ಫಲ (ಸೌತೆಕಾಯಿ), ಹಾಗಲಕಾಯಿ, ಕಚೋರ (ಘಂಟೇ ಕಚೋರ ಫಲ), ಮಾದಲದಹಣ್ಣು, ಬದನೆಯಕಾಯಿ, ದಾಳಿಂಬೆಹಣ್ಣು, ಕಿತ್ತಳೆ ಹಣ್ಣು, ಬಾಳೇಹಣ್ಣು, ಎಳೆಯಗರಿಕೆ, ದರ್ಭೆ, ಕಾಶಪುಷ್ಪ, ತಾವರೆಹೂ, ಕನ್ನೈದಿಲೆ ಮುಂತಾದುವು ಅರ್ಘ್ಯಾರ್ಹವಸ್ತುಗಳು.

ನಾನಾಪ್ರಕಾರೈರ್ಭಕ್ಷ್ಯೈಶ್ಚ ಗೋಭಿರ್ವಸ್ತ್ರೈರಸೈಃ ಶುಭೈಃ ।
ವಿರೂಢೈಃ ಸಪ್ತಧಾನ್ಯೈಶ್ಚ ವಂಶಪಾತ್ರೇ ನಿಧಾಪಿತೈಃ ॥ ೬೬ ॥

ಸೌವರ್ಣರೌಪ್ಯಮಾತ್ರೇಣ ತಾಮ್ರವಂಶಮಯೇನ ಚ ।
ಮೂರ್ಧ್ನಿ ಸ್ಥಿತೇನ ನಮ್ರೇಣ ಜಾನುಭ್ಯಾಂ ಪೃಥಿವೀತಲೇ ॥ ೬೭ ॥

ದಕ್ಷಿಣಾಭಿಮುಖೋ ಭೂತ್ವಾ ಹ್ಯರ್ಘ್ಯಪಾದ್ಯಾದಿಕಂ ಚ ಯತ್ ।
ಶೀಲೇನ ಚೇತಸಾ ಭಕ್ತ್ಯಾ ದದ್ಯಾತ್ಕೌರವನಂದನ ॥ ೬೮ ॥

ಕಾಶಪುಷ್ಪಪ್ರತೀಕಾಶ ಅಗ್ನಿಮಾರುತಸಂಭವ ।
ಮಿತ್ರಾವರುಣಯೋಃ ಪುತ್ರ ಕುಂಭಯೋನೇ ನಮೋಽಸ್ತುತೇ ॥ ೬೯ ॥

---

೬೬. ನಾನಾ ವಿಧವಾದ ಭಕ್ಷ್ಯಗಳು, ಗೋವುಗಳು, ವಸ್ತ್ರಗಳು, ಶುಭಕರವಾದ ರಸಗಳು, ಹುಲುಸಾಗಿ ಬೆಳೆದ ಸಪ್ತಧಾನ್ಯಗಳು ಇವೆಲ್ಲವನ್ನೂ ಸಿದ್ಧಪಡಿಸಿ, ಬಿದಿರಿನ ಕುಕ್ಕೆಗಳಲ್ಲಿಡಬೇಕು.

೬೭. ೬೭. ಚಿನ್ನ, ಬೆಳ್ಳಿ, ತಾಮ್ರ ಮತ್ತು ಬಿದಿರು ಇವುಗಳಲ್ಲಿ ತನ್ನ ದ್ರವ್ಯಾನುಕೂಲಕ್ಕೆ ತಕ್ಕಹಾಗೆ ಅರ್ಘ್ಯಪಾತ್ರೆಯನ್ನು ನಿರ್ಮಿಸಿಕೊಂಡು, ಅಗಸ್ತ್ಯ ಪ್ರತಿಮೆಯನ್ನು ಸ್ಥಾಪಿಸಿರುವ ಕಲಶದ ಸಮ್ಮುಖದಲ್ಲಿ ಮೊಳಕಾಲನ್ನು ಭೂಮಿಗೆ ಊರಿ ಕುರಿತುಕೊಳ್ಳಬೇಕು.

೬೮. ಹೀಗೆ ದಕ್ಷಿಣಾಭಿಮುಖನಾಗಿ ಕುಳಿತು ಶುದ್ಧಾಂತಃಕರಣದಿಂದ ಭಕ್ತಿಪೂರ್ವಕವಾಗಿ ಅಗಸ್ತ್ಯಮಹರ್ಷಿಗೆ ಅರ್ಘ್ಯಪಾದ್ಯಾದಿಗಳನ್ನು ಸಮರ್ಪಿಸಬೇಕು.

೬೯. ಅಯ್ಯಾ ಕುರುನಂದನನೇ! ಅರ್ಘ್ಯವನ್ನು ಕೊಡುವಾಗ "ಕಾಶಪುಷ್ಪಕ್ಕೆ ಸಮಾನವಾದ ಕಾಂತಿಯುಳ್ಳವನೇ! ಅಗ್ನಿ ಮತ್ತು ವಾಯು ಇವರ ಅಂಶಪುರುಷನೇ! ಮಿತ್ರಾವರುಣಸುತನೇ ನಿನಗೆ ನಮಸ್ಕಾರ.''

ವಿಂಧ್ಯವೃದ್ಧಿಕ್ಷಯಕರ ಮೇಘತೋಯವಿಷಾಪಹ ।
ರತ್ನೋ ವಲ್ಲಭದೇವರ್ಷೇ ಲಂಕಾವಾಸ ನಮೋಽಸ್ತು ತೇ ॥ ೭೦ ॥

ವಾತಾಪಿರ್ಭಕ್ಷಿತೋ ಯೇನ ಸಮುದ್ರಾಃ ಶೋಷಿತಾಃ ಪುರಾ ।
ಲೋಪಾಮುದ್ರಾಪತಿಃ ಶ್ರೀಮಾನ್ಯೋಽಸೌ ತಸ್ಮೈ ನಮೋಽಸ್ತು ತೇ ॥
ಯೇನೋದಿತೇನ ಪಾಪಾನಿ ಪ್ರಲಯಂ ಯಾಂತಿ ವ್ಯಾಧಯಃ ॥ ೭೧ ॥

ತಸ್ಮೈ ನಮೋಽಸ್ತ್ವಗಸ್ತ್ಯಾಯ ಸಶಿಷ್ಯಾಯ ಸುಪುತ್ರಿಣೇ ।
ಬ್ರಾಹ್ಮಣೋ ವೇದಮುಚಯಾ ದದ್ಯಾದರ್ಘ್ಯಂ ನಮೋಽಸ್ತು ತೇ ॥

---

೭೦. ಸೂರ್ಯಗತಿಯನ್ನು ನಿರೋಧಿಸುವುದಕ್ಕಾಗಿ ಬೆಳೆಯುತ್ತಿದ್ದ ವಿಂಧ್ಯ ಪರ್ವತವನ್ನು ಕುಗ್ಗಿಸಿದವನೂ, ಆಡಿನ ಪಾಕರೂಪದಿಂದ ತನ್ನನ್ನು ನಾಶಪಡಿಸಲು ಯತ್ನಿಸಿದ ವಾತಾಪಿಯನ್ನು ಭಸ್ಮಮಾಡಿದವನೂ, ಸಮುದ್ರ ಜಲವನ್ನೆಲ್ಲಾ ಕುಡಿದವನೂ, ಸಮುದ್ರಮಥನಕಾಲದಲ್ಲಿ ಉಂಟಾದ ವಿಷಜ್ವಾಲೆಯನ್ನು ಪರಿಹರಿಸಿದವನೂ, ಅನುರಾಗಶೀಲನೂ, ಶರಣಾಗತರಕ್ಷಕನೂ, ದೇವರ್ಷಿಶ್ರೇಷ್ಠನೂ, ಲಂಕಾಪಟ್ಟಣದ ದಿಕ್ಕಿನಲ್ಲಿ ವಾಸಿಸುವವನೂ ಆದ ಅಗಸ್ತ್ಯಮಹರ್ಷಿಯೇ! ನಿನಗೆ ನಮಸ್ಕರಿಸುವೆನು.

೭೧. ಹಿಂದೆ ಬ್ರಾಹ್ಮಣಕಂಟಕನಾಗಿದ್ದ ವಾತಾಪಿ ದಾನವನನ್ನು ಭಕ್ಷಿಸಿ, ತನ್ನ ಯೋಗಬಲದಿಂದ ಸಮುದ್ರದ ಜಲವನ್ನೆಲ್ಲಾ ಶೋಷಿಸಿ, ಲೋಕಕಲ್ಯಾಣವನ್ನುಂಟುಮಾಡಿದವನೂ, ಲೋಪಾಮುದ್ರಾಪತಿಯೂ, ಆದ ಶ್ರೀ ಅಗಸ್ತ್ಯ ಮಹರ್ಷಿಯನ್ನು ನಮಸ್ಕರಿಸುವೆನು.

೭೨. ಯಾವನ ಹೆಸರನ್ನು ಉಚ್ಚರಿಸಿದ ಮಾತ್ರದಿಂದಲೇ ಸಕಲ ಪಾಪಗಳೂ, ಸಮಸ್ತ ರೋಗಗಳೂ ನಾಶವಾಗುವವೋ ಅಂತಹ ಮಹಾಮಹಿಮನೂ, ಶಿಷ್ಯಸಮೇತನೂ, ಶ್ರೇಷ್ಠನಾದ ಪುತ್ರನನ್ನುಳ್ಳವನೂ ಆದ, ಅಗಸ್ತ್ಯಮಹರ್ಷಿಗೆ ನಮಸ್ಕಾರ. ಎಂಬ ಅರ್ಥಗಳುಳ್ಳ ಈ ಮಂತ್ರಗಳನ್ನು ಉಚ್ಚರಿಸಬೇಕು. ವೇದಾಧಿಕಾರವುಳ್ಳವನು ಮುಂದೆ ಹೇಳುವ ವೇದಋಕ್ಕುಗಳನ್ನು ಹೇಳಿಕೊಂಡು ಕೊನೆಯಲ್ಲಿ ನಿನಗೆ ನಮಸ್ಕಾರ ಎಂಬುದನ್ನು ಹೇಳಿ ಅರ್ಘ್ಯಕೊಡಬೇಕು. ಅನಧಿಕಾರಿಗಳು ಮೇಲೆ ಸೂಚಿಸಿದ ಅರ್ಥವುಳ್ಳ ಮಂತ್ರಗಳನ್ನು (ಶ್ಲೋಕಗಳನ್ನು) ಹೇಳಿ ಅಗಸ್ತ್ಯರಿಗೆ ಅರ್ಘ್ಯಪ್ರದಾನಮಾಡಬೇಕು.

" ಅಗಸ್ತ್ಯಃ ಖನಮಾನಶ್ಚ ನಿತ್ಯಂ ಪ್ರಾಜಾಪತ್ಯಂಬಲಿಮಿಚ್ಛಮಾನಃ
ಉಭೌ ವರ್ಣೌ ವೃಷ್ಟ್ಯನುಗ್ರಹಾರ್ಥಮುಪೋಷ
ಸತ್ಯಾದೇಷ್ವಶಿಖೋ ಜಗಾಮ "
ದತ್ತ್ವೈವಮರ್ಘ್ಯಂ ಕೌಂತೇಯ ಪ್ರತಿಪೂಜ್ಯ ಚ ಪುಷ್ಪಕೈಃ ।
ವಿಸರ್ಜಯಿತ್ವಾಗಸ್ತ್ಯಂ ತಂ ವಿಪ್ರಾಯ ಪ್ರತಿಪಾದಯೇತ್ ॥ ೭೩ ॥

ದೈವಜ್ಞವ್ಯಾಸರೂಪಾಯ ವೇದವೇದಾಂಗವಾದಿನೇ ।
ಏವಂ ಯಃ ಕುರುತೇ ಭಕ್ತ್ಯಾ ಹ್ಯಗಸ್ತ್ಯಪ್ರತಿಪೂಜನಂ ॥
ಫಲಮೇಕಂ ತಥಾ ಧಾನ್ಯಂ ಕೋಪಂ ವಾಸಂ ಪರಿತ್ಯಜೇತ್ ॥ ೭೪ ॥

ಸಂಪೂರ್ಣೇ ಚ ತತೋ ವರ್ಷೇ ಪುನರನ್ಯದುಪಕ್ರಮೇತ್ ।
ದತ್ತ್ವಾರ್ಘ್ಯಂ ಸಪ್ತವರ್ಷಾಣಿ ಕ್ರಮೇಣಾನೇನ ಪಾಂಡವ ॥
ಪುಮಾನ್ಫಲಮವಾಪ್ನೋತಿ ತದೇಕಾಗ್ರಮನಾಃ ಶೃಣು ॥ ೭೫ ॥

---

೭೩. " ಅಗಸ್ತ್ಯಃ ಖನಮಾನಶ್ಚ ನಿತ್ಯಂ ಪ್ರಾಜಾಪತ್ಯಂ ಬಲಿಮಿಚ್ಛಮಾನಃ ಉಭೌ ವರ್ಣೌ ವೃಷ್ಟ್ಯನುಗ್ರಹಾರ್ಥಮುಪೋಷ ಸತ್ಯಾದೇಷ್ವಶಿಖೋ ಜಗಾಮ '' ಇದು ಅರ್ಘ್ಯಕೊಡುವಾಗ ವೇದಜ್ಞನು ಹೇಳಬೇಕಾದ ಮಂತ್ರ. ಅಯ್ಯಾ ಕುಂತೀಪುತ್ರನೇ ! ಈ ಮಂತ್ರವನ್ನು ಹೇಳಿಕೊಂಡು ವಿಪ್ರನು ಮುನಿಗೆ ಅರ್ಘ್ಯವನ್ನು ಕೊಟ್ಟು ನಾನಾ ಪುಷ್ಪಗಳಿಂದ ಅರ್ಚಿಸಿ, ಅನಂತರ ಕಲಶವನ್ನು ವಿಸರ್ಜಿಸಿ ಆ ಪ್ರತಿಮಾಸಮೇತ ಅದನ್ನು ಬ್ರಾಹ್ಮಣೋತ್ತಮನಿಗೆ ದಾನಮಾಡಬೇಕು.

೭೪. ದಾನವನ್ನು ಪ್ರತಿಗ್ರಹಮಾಡುವ ಬ್ರಾಹ್ಮಣನು ವೇದವೇದಾಂಗ ಪಾರಂಗತನೂ, ಜ್ಯೋತಿಷವನ್ನು ತಿಳಿದವನೂ, ವ್ಯಾಸರಂತೆ ಸಕಲಶಾಸ್ತ್ರಾರ್ಥಗಳನ್ನು ಬಲ್ಲವನೂ, ಆಗಿರಬೇಕು. ಹೀಗೆ ಭಕ್ತಿಯಿಂದ ಅಗಸ್ತ್ಯಪೂಜೆಯನ್ನು ಮಾಡಿ, ಈ ಮುನಿಯ ಉದ್ದಿಶ್ಯವಾಗಿ ಒಂದುಹಣ್ಣು, ಒಂದು ಧಾನ್ಯ ಇವುಗಳ ಸೇವನೆಯನ್ನು ಬಿಟ್ಟುಬಿಡಬೇಕು. ಮತ್ತು ಕೋಪವನ್ನು ವರ್ಜ್ಯವಾಡಬೇಕು. ಅನಂತರ ಉಟ್ಟಬಟ್ಟೆಯನ್ನು ಪರಿತ್ಯಾಗಮಾಡಬೇಕು.

೭೫. ಒಂದುವರ್ಷವಾದ ಮೇಲೆ ಪುನಃ ಇದೇರೀತಿ ಅಗಸ್ತ್ಯವ್ರತವನ್ನು ಮಾಡಬೇಕು. ಎಲೈ ಯುಧಿಷ್ಠಿರನೇ ! ಏಳುವರ್ಷಗಳಕಾಲ ಈ ಪ್ರಕಾರ ಭಕ್ತಿಪೂರ್ವಕವಾಗಿ ಅಗಸ್ತ್ಯರಿಗೆ ಅರ್ಘ್ಯಪ್ರದಾನಮಾಡಿ ಪೂಜಿಸಿದರೆ ಅಂತಹ ಪುರುಷನಿಗೆ ಲಭಿಸುವ ಫಲಗಳನ್ನು ಹೇಳುವೆನು ಕೇಳು.

ಬ್ರಾಹ್ಮಣಶ್ಚತುರೋ ವೇದಾನ್ಸರ್ವಶಾಸ್ತ್ರವಿಶಾರದಃ ।
ಕ್ಷತ್ರಿಯಃ ಪೃಥಿವೀಂ ಸರ್ವಾಂ ಪ್ರಾಪ್ನೋತ್ಯರ್ಣವಮೇಖಲಾಂ ॥೭೬॥

ವೈಶ್ಯೋಽಪ್ಯಾಯುಷ್ಯಮಾಯಾತಿ ಗೋಧನಂ ಚಾಪಿ ನಂದತಿ ।
ಶೂದ್ರಾಣಾಂ ಧನಮಾರೋಗ್ಯಂ ಸನ್ಮಾನಶ್ಚಾಧಿಕೋ ಭವೇತ್ ॥ ೭೭ ॥

ಸ್ತ್ರೀಣಾಂ ಪುತ್ರಾಃ ಪ್ರಜಾಯಂತೇ ಸೌಭಾಗ್ಯಂ ವೃದ್ಧಿಬುದ್ಧಿಮತ್ ।
ವಿಧವಾನಾಂ ಮಹಾಪುಣ್ಯಂ ವರ್ಧತೇ ಪಾಂಡುನಂದನ ॥ ೭೮ ॥

ಕನ್ಯಾ ಭರ್ತಾರಮಾಪ್ನೋತಿ ವ್ಯಾಧೇರ್ಮುಚ್ಯೇತ ದುಃಖಿತಃ ॥ ೭೯ ॥

---

೭೬. ಬ್ರಾಹ್ಮಣನು ಈ ವ್ರತಮಾಡಿದರೆ ನಾಲ್ಕುವೇದಗಳನ್ನೂ ಸಕಲ ಶಾಸ್ತ್ರಗಳನ್ನೂ ತಿಳಿದ ಪ್ರಾಜ್ಞನೆನಿಸುವನು. ಕ್ಷತ್ರಿಯನು ಈ ವ್ರತವನ್ನಾಚರಿಸಿದರೆ ಸಮುದ್ರಪರ್ಯಂತವಾದ ಭೂಮಿಯನ್ನೆಲ್ಲಾ ಜಯಿಸಿ ಚಕ್ರಾಧಿಪತಿಯಾಗುವನು.

೭೭. ವೈಶ್ಯನು ಈ ವ್ರತವನ್ನಾಚರಿಸಿದರೆ ತುಂಬಾ ಗೋಧನವನ್ನು ಪಡೆದು ವೃದ್ಧಿಹೊಂದುವನು. ಮತ್ತು ಸದಾ ಸಂತೋಷಚಿತ್ತನಾಗಿ ಜೀವಿಸುವನು. ಶೂದ್ರನು ಈ ವ್ರತವನ್ನು ಆಚರಿಸಿದರೆ ದ್ರವ್ಯಸಂಪತ್ತನ್ನೂ ಆರೋಗ್ಯವನ್ನೂ ಒಳ್ಳೆಯ ಗೌರವವನ್ನೂ ಪಡೆದು ಯೋಗ್ಯನೆನಿಸುವನು.

೭೮. ಸ್ತ್ರೀಯರು ಈ ವ್ರತವನ್ನು ಮಾಡಿದರೆ ಪುತ್ರಸಂತಾನವನ್ನು ಪಡೆಯುವರು. ಅಲ್ಲದೆ ಆಕೆಗೆ ಸೌಮಂಗಲ್ಯಾಭಿವೃದ್ಧಿಯೂ ಧನಕನಕಾದಿ ಸಂಪತ್ತೂ ಉಂಟಾಗುವುದು. ವಿಧವೆಯರು ಈ ವ್ರತವನ್ನಾಚರಿಸುವುದರಿಂದ ತುಂಬಾ ಪುಣ್ಯವುಂಟು.

೭೯. ಅಯ್ಯಾ ಪಾಂಡುನಂದನನೇ! ವಿವಾಹವಾಗಿಲ್ಲದ ಕನ್ಯೆಯು ಈ ವ್ರತ ಮಾಡಿದರೆ ಉತ್ತಮನಾದ ಪತಿಯನ್ನು ಪಡೆಯುವಳು. ವ್ಯಾಧಿಪೀಡೆಯಿಂದ ದುಃಖಿತನಾದವನಿಗೆ ಈ ವ್ರತಾಚರಣದಿಂದ ಸಕಲ ವ್ಯಾಧಿಗಳೂ ಪರಿಹರವಾಗಿ ಸುಖಿಯಾಗುವನು.

ಯೇಷು ದೇಶೇಷ್ವಗಸ್ತ್ಯರ್ಷೇಃ ಪೂಜನಂ ಕ್ರಿಯತೇ ಜನೈಃ ।
ತೇಷು ದೇಶೇಷು ಪರ್ಜನ್ಯಃ ಕಾಮವರ್ಷೀ ಪ್ರಜಾಯತೇ ॥ ೮೦ ॥

ಈತಯಃ ಪ್ರಶಮಂ ಯಾಂತಿ ನಶ್ಯಂತಿ ವ್ಯಾಧಯಸ್ತಥಾ ।
ಪಠಂತಿ ಯೇತ್ವಗಸ್ತ್ಯರ್ಷೇಃ ಖ್ಯಾನಂ ಶೃಣ್ವಂತಿ ಚಾಪರೇಃ ॥ ೮೧ ॥

ತೇ ಸರ್ವೇ ಪಾಪನಿರ್ಮುಕ್ತಾಶ್ಚಿರಂ ಸ್ಥಿತ್ವಾ ಮಹೀತಲೇ ।
ಹಂಸಯುಕ್ತವಿಮಾನೇನ ಸ್ವರ್ಗಂ ಯಾಂತಿ ನರೋತ್ತಮ ॥ ೮೨ ॥

ಮರ್ತ್ಯೋ ಯದೀಚ್ಛತಿ ಗೃಹಂ ಪರಮರ್ದ್ಧಿಯುಕ್ತಂ ।
ಭೋಗಂ ಶರೀರಮರುಜಂ ಪಶುಪುತ್ರಪುಷ್ಟಿಂ ॥

---

೮೦. ಅಗಸ್ತ್ಯಮಹಾಮುನಿಯ ಆರಾಧನೆಯು ನಡೆಯುವ ದೇಶಗಳಲ್ಲಿ ಕಾಲಕಾಲಕ್ಕೆ ಸಮೃದ್ಧಿಯಾದ ಮಳೆಹೊಯ್ದು, ಆ ಪ್ರಾಂತದವರಿಗೆ ಧನಧಾನ್ಯಸಮೃದ್ಧಿಯೂ ಇಷ್ಟಾರ್ಥಪ್ರಾಪ್ತಿಯೂ ಉಂಟಾಗುವುದು. ಅಲ್ಲದೆ ಸಮಸ್ತ ಈತಿಬಾಧೆಗಳೂ ನಿವಾರಣೆಯಾಗಿ ರೋಗಾದ್ಯುಪದ್ರವರಹಿತವಾಗುವುದು.

೮೧-೮೨. ಅಯ್ಯಾ ರಾಜಶ್ರೇಷ್ಠನೇ! ಅಗಸ್ತ್ಯವ್ರತೋಪಾಖ್ಯಾನವನ್ನು ಶ್ರವಣಮಾಡಿದ ಮಾನವನು ಇಹದಲ್ಲಿ ಪಾಪರಹಿತನೂ, ಚಿರಾಯುಷ್ಯವುಳ್ಳವನೂ ಆಗಿದ್ದು, ದೇಹಾವಸಾನದಲ್ಲಿ ಹಂಸಪಕ್ಷಿಗಳಿಂದ ಕೂಡಿದ ವಿಮಾನವನ್ನೇರಿ ಸ್ವರ್ಗಲೋಕವನ್ನೈದುವನು.

೮೩. ಎಲೈ ಯುಧಿಷ್ಠಿರನೇ! ಸಕಲಸಂಪತ್ತಿನಿಂದ ಕೂಡಿದ ಮನೆ, ದಿವ್ಯವಾದ ಭೋಗ ಶರೀರಾರೋಗ್ಯ, ಪಶುಪುತ್ರಾದಿಗಳ ಅಭಿವೃದ್ಧಿ, ಇವುಗಳನ್ನಪೇಕ್ಷಿಸುವ ಪುರುಷನು ಮಹರ್ಷಿವರ್ಯನಾದ ಅಗಸ್ತ್ಯನಕ್ಷತ್ರ ಉದಯವಾಗುವ ಕಾಲದಲ್ಲಿ

ತತ್ಸರ್ವವಲ್ಲಭಮುನೇರುದಯೇ ಮಹಾರ್ಘ್ಯಂ ।
ಯಚ್ಛೇನ್ಮಹಾರ್ಘಫಲವಸ್ತ್ರ ಧನೈಸ್ಸಹಾನ್ಯೈಃ ॥ ೮೩ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇಽಗಸ್ತ್ಯಾರ್ಘ್ಯವಿಧಿವ್ರತವರ್ಣನಂ ನಾಮ ಅಷ್ಟಾದಶೋತ್ತರ ಶತತಮೋಽಧ್ಯಾಯಃ.



---

ಉತ್ತಮವಾದ ಫಲಗಳು, ವಸ್ತ್ರಗಳು, ದ್ರವ್ಯ ಇವೇ ಮೊದಲಾದ ಶ್ರೇಷ್ಠವಸ್ತುಗಳಿಂದ ಮುನಿವರ್ಯರಿಗೆ ಅರ್ಘ್ಯವನ್ನು ಕೊಡಬೇಕು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಅಗಸ್ತ್ಯಾರ್ಘ್ಯವಿಧಿ ವರ್ಣನೆಯೆಂಬ ನೂರಹದಿನೆಂಟನೆಯ ಅಧ್ಯಾಯ ಮುಗಿದುದು.



॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣ
## ಉತ್ತರಪರ್ವಣಿ
## ಏಕೋನವಿಂಶೋತ್ತರಶತತಮೋಽಧ್ಯಾಯಃ

---

॥ ಶ್ರೀ ಕೃಷ್ಣ ಉವಾಚ ॥

ಪಾರ್ಥ ಪಾರ್ಥಿವದಿವ್ಯಸ್ತ್ರೀಮುಖಪಂಕಜಸೇಂದವೇ ।
ಶೃಣುಷ್ವಾಭಿನವಸ್ಯೇಂದೋರುದಯೇಽರ್ಘ್ಯವಿಧಿಂ ಪರಂ ॥ ೧ ॥

ರವಿದ್ವಾರ್ದಶಭಿರ್ಭಾಗೈರ್ವಾರುಣ್ಯಾಂ ದೃಶ್ಯತೇ ಯದಿ ।
ಪ್ರದೋಷಸಮಯೇ ಪಾರ್ಥ ಅರ್ಘ್ಯಂ ದದ್ಯಾತ್ತದಾ ವಿಭೋಃ ॥ ೨ ॥

ದ್ವಿತೀಯಾಯಾಂ ಸಿತೇ ಪಕ್ಷೇ ಸಂಧ್ಯಾಕಾಲೇ ಹ್ಯುಪಸ್ಥಿತೇ ।
ಸಂಸ್ಥಾಪ್ಯಾಭಿನವಂ ಚಂದ್ರಂ ಸ ಭೂಮ್ಯಾಂ ದೃಶ್ಯತೇ ಯದಿ ॥ ೩ ॥

---

## ನೂರಹತ್ತೊಂಭತ್ತನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಶತ್ರುರಾಜರಪತ್ನಿಯರ ಮುಖಕಮಲಕ್ಕೆ ಚಂದ್ರ ಸದೃಶನಾದ ಧರ್ಮರಾಜನೇ ! (ಶತ್ರುಧ್ವಂಸಮಾಡಿ ಆ ರಾಜಪತ್ನಿಯರಿಗೆ ದುಃಖವುಂಟುಮಾಡಿದ ಧೀರನೇ ಎಂಬದಾಗಿ ಭಾವ) ಶುಕ್ಲಪಕ್ಷವಲ್ಲಿ ಅಭಿನವವಾಗಿ ಉದಯಿಸುತ್ತಿರುವ ಬಾಲಚಂದ್ರನಿಗೆ ಅರ್ಘ್ಯಪ್ರದಾನ ಮಾಡುವ ವಿಧಾನವನ್ನು ಹೇಳುವೆನು ಕೇಳು.

೨. ಸೂರ್ಯನು ವರುಣದಿಕ್ಕಿನಲ್ಲಿ ಹನ್ನೆರಡುಭಾಗಗಳಿಂದ ಕಾಣುತ್ತಿರುವಾಗ ಅಂತಹ ಪ್ರದೋಷಸಮಯದಲ್ಲಿ ವಿಭುವಾದ ಚಂದ್ರನಿಗೆ ಅರ್ಘ್ಯವನ್ನು ಕೊಡಬೇಕು.

೩. ಶುಕ್ಲಪಕ್ಷದ ಬಿದಿಗೆಯದಿನ ಸಂಧ್ಯಾಕಾಲದಲ್ಲಿ ಚಂದ್ರನು ಉದಯಿಸಿ ಕಾಣುತ್ತಿರುವಾಗ ಭೂಮಿಯ ಮೇಲೆ ಬಾಲಚಂದ್ರನನ್ನು ಪ್ರತಿಷ್ಠಾಪಿಸಬೇಕು. (ಸ್ಥಾಪಿಸುವ ವಿಧಾನವು ಈ ಮುಂದೆ ವಿವರವಾಗಿ ಉಕ್ತವಾಗಿದೆ.)

ಗೋಮಯಂ ಮಂಡಲಂ ಕೃತ್ವಾ ಚಂದನೇನ ಸುಶೋಭಿತಂ ।
ರೋಹಿಣ್ಯಾ ಸಹಿತಂ ದೇವಂ ಕುಮುದಾಮೋದದಾಯಿನಂ ॥ ೪ ॥

ಪುಷ್ಪಚಂದನಧೂಪೈಶ್ಚ ದೀಪಾಕ್ಷತಜಲೈಃ ಶುಭೈಃ ।
ದೂರ್ವಾಂಕುರೈ ರತ್ನವರೈರ್ದಧ್ನಾ ವಸ್ತ್ರೈಶ್ಚ ಪಾಂಡುರೈಃ ॥ ೫ ॥

ಮಂತ್ರೇಣಾನೇನ ರಾಜೇಂದ್ರ ಕ್ಷತ್ರಿಯಃ ಸಪುರೋಹಿತಃ ।
ನವೋ ನವೋಽಸಿ ಮಾಸಾಂತೇ ಜಾಯಮಾನಃ ಪುನಃ ಪುನಃ ॥
ಆಪ್ಯಾಯಸ್ವ ಸಮೇತ್ತ್ವೇವಂ ಸೋಮರಾಜ ನಮೋನಮಃ ॥ ೬ ॥

ಅನೇನ ವಿಧಿನಾಚಾರ್ಯಂ ಸರ್ವಕಾಮಫಲಪ್ರದಂ ।
ಯಃ ಪ್ರಯಚ್ಛತಿ ಕೌಂತೇಯ ಮಾಸಿಮಾಸಿ ಸಮಾಹಿತಃ ॥ ೭ ॥

---

೪. ನೆಲದ ಮೇಲೆ ಗೋಮಯದಿಂದ ಮಂಡಲವನ್ನು ರಚಿಸಿ, ಅದನ್ನು ಚಂದನದಿಂದ ಅಲಂಕರಿಸಿ, ಆ ಮಂಡಲದಲ್ಲಿ ಕುಮುದಗಳಿಗೆ ಆನಂದಕರನಾದ ಚಂದ್ರನನ್ನು ರೋಹಿಣೀ ಸಮೇತವಾಗಿ ಆವಾಹಿಸಬೇಕು.

೫. ಬಳಿಕ ಗಂಧ, ಅಕ್ಷತೆ, ಪುಷ್ಪ, ಧೂಪ, ದೀಪಾದಿಗಳು ಶುಭ್ರವಾದ ವಸ್ತ್ರಗಳು, ಶ್ರೇಷ್ಠವಾದ ರತ್ನಗಳು, ಗರಿಕೆಯ ಚಿಗುರುಗಳು, ಮೊಸರು, ಬಗೆ ಬಗೆಯ ಪಾನೀಯಗಳು ಇವುಗಳನ್ನು ಸಮರ್ಪಿಸಿ.

೬. ಪ್ರತಿ ತಿಂಗಳ ಅಂತ್ಯದಲ್ಲಿಯೂ ಮತ್ತೆ ಮತ್ತೆ ಹೊಸದಾಗಿ ಹುಟ್ಟಿ ಲೋಕವನ್ನು ಆನಂದಗೊಳಿಸುವ ಸೋಮರಾಜನೇ! ನಮಸ್ಕಾರ ಎಂಬ ಅರ್ಥವುಳ್ಳ, ಈ ಮಂತ್ರದಿಂದ.

೭. ವಿಧಿವತ್ತಾಗಿ ಪೂಜೆಮಾಡಬೇಕು. ಸಕಲ ಇಷ್ಟಾರ್ಥಗಳನ್ನು ಕೊಡ ತಕ್ಕ ಈ ಬಾಲಚಂದ್ರನನ್ನು ಏಕಾಗ್ರಚಿತ್ತನಾಗಿ ಪ್ರತಿ ತಿಂಗಳಲ್ಲಿಯೂ ಇದೇರೀತಿ ಪೂಜಿಸಿ ಬ್ರಾಹ್ಮಣನಿಗೆ ಯಥೋಕ್ತವಾದ ದಾನಮಾಡಬೇಕು.

ಸ ಕೀರ್ತ್ಯಾ ಯಶಸಾ ಕಾಂತ್ಯಾ ಧನ್ಯಶ್ಚ ಭುವಿ ಮಾನವಃ ।
ಪುತ್ರಪೌತ್ರೈಃ ಪರಿವೃತೋ ಗೋಧಾನ್ಯಧನಸಂಕುಲಃ ॥ ೮ ॥

ಸ್ಥಿತ್ವಾ ವರ್ಷಶತಂ ಮರ್ತ್ಯೇ ತತಸ್ಸೋಮಪುರಂ ವ್ರಜೇತ್ ।
ತತ್ರಾಸ್ತೇ ದಿವ್ಯವಪುಷಾ ಭೋಗಾನ್ ಭುಂಜನ್ನೃಪೋತ್ತಮ ॥
ವರಸ್ತ್ರೀಭಿಸ್ಸಹಾತ್ಯರ್ಥಂ ಯಾವದಾಭೂತಸಂಪ್ಲವಂ ॥ ೯ ॥

ಧರ್ಮಂ ಸಮೃದ್ಧಿಮತುಲಾಂ ಯದಿ ವಾಂಛಸಿ ತ್ವಂ ।
ಮಾಸಾನುಮಾಸಮಿಹ ಮದ್ವಚನಂ ಕುರುಷ್ವ ॥
ಸೋಮಸ್ಯ ಸೋಮಕುಲನಂದನ ಧೂಪಪುಷ್ಪೈಃ ।
ಅರ್ಘಂ ಪ್ರಯಚ್ಛ ನತಜಾನು ನವೋದಿತಸ್ಯ ॥ ೧೦ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣಯುಧಿಷ್ಠಿರ ಸಂವಾದೇಽಭಿನವಚಂದ್ರಾರ್ಘ್ಯ ವ್ರತವರ್ಣನಂ ನಾಮೈಕೋನವಿಂಶತ್ಯುತ್ತರಶತತಮೋಽಧ್ಯಾಯಃ.

---

೮. ಹೀಗೆ ಮಾಡಿದವನಿಗೆ ಕೀರ್ತಿ, ತೇಜಸ್ಸು, ಯಶಸ್ಸು ಇವು ಲಭಿಸಿ, ಕೃತಕೃತ್ಯನೆನಿಸುವನು. ಆತನು ಪುತ್ರಪೌತ್ರಪರಿವೃತನಾಗಿ ಗೋವೃಂದ ಧನ ಧಾನ್ಯಾದಿಗಳು ಇವನ್ನು ಸಮೃದ್ಧಿಯಾಗಿ ಪಡೆದು, ನೂರುವರ್ಷಗಳಕಾಲ ಮರ್ತ್ಯ ಲೋಕದಲ್ಲಿ ಸುಖವಾಗಿ ಬಾಳಿ, ಅನಂತರ ಚಂದ್ರಲೋಕವನ್ನು ಸೇರುವನು.

೯. ಅಲ್ಲಿ ದಿವ್ಯಶರೀರವನ್ನು ಪಡೆದು ಶ್ರೇಷ್ಠರಾದ ಸ್ತ್ರೀಯರೊಡನೆ ವಿಹರಿಸುತ್ತಾ ಪ್ರಪಂಚಪ್ರಳಯವಾಗುವವರೆಗೂ ಸುಖವಾಗಿ ಇರುವನು.

೧೦. ಎಲೈ ಅಜಾನುಬಾಹುವಾದ ಯುಧಿಷ್ಠಿರನೇ! ನೀನು ಧರ್ಮವನ್ನೂ ಅತುಲೈಶ್ವರ್ಯವನ್ನೂ ಅಪೇಕ್ಷಿಸುವೆಯಾದರೆ, ನಾನು ಹೇಳಿದಂತೆ ಪ್ರತಿ ತಿಂಗಳಲ್ಲಿಯೂ ನವೋದಿತ-ಚಂದ್ರನನ್ನು ವಿಧಿಪೂರ್ವಕವಾಗಿ ಪೂಜಿಸಿದನಂತರ ಅರ್ಘ್ಯಪ್ರದಾನಮಾಡು. ನಿನಗೆ ಸಕಲಇಷ್ಟಾರ್ಥಗಳೂ ಲಭಿಸುವುವು ಎಂದನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಅಭಿನವ ಚಂದ್ರಾರ್ಘ್ಯ ವ್ರತವರ್ಣನೆಯೆಂಬ ನೂರಹತ್ತೊಂಭತ್ತನೆಯ ಅಧ್ಯಾಯ ಮುಗಿದುದು.

॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣ

## ಉತ್ತರಪರ್ವಣಿ

## ವಿಂಶತ್ಯುತ್ತರಶತತಮೋಽಧ್ಯಾಯಃ

---

॥ ಶ್ರೀ ಕೃಷ್ಣ ಉವಾಚ ॥

ಅಥಾತಃ ಶೃಣು ಭೂಪಾಲ ಪ್ರತಿಶುಕ್ರಪ್ರಶಾಂತಯೇ ।
ಯಾತ್ರಾರಂಭೇ ಪ್ರಯಾಣೇ ಚ ತಥಾ ಶುಕ್ರೋದಯೇಽಪ್ಯಿಹ ॥ ೧ ॥

ಶುಕ್ರಪೂಜಾ ಪ್ರಕರ್ತವ್ಯಾ ತಾಂ ನಿಶಾಮಯ ಸಾರತಃ ।
ರಾಜತೇ ವಾಽಥ ಸೌವರ್ಣೇ ಕಾಂಸ್ಯಪಾತ್ರೇಽಥ ವಾ ಪುನಃ ॥ ೨ ॥

ಶುಕ್ಲ ಪುಷ್ಪಾಂಬರಯುತೇ ಸಿತತಂಡುಲಪೂರಿತೇ ।
ನಿಧಾಯ ರಾಜತಂ ಶುಕ್ರಂ ಶುಚಿ ಮುಕ್ತಾಫಲಾನ್ವಿತಂ ॥ ೩ ॥

---

### ನೂರಇಪ್ಪತ್ತನೆಯ ಅಧ್ಯಾಯ

೧. ಶ್ರೀ ಕೃಷ್ಣನು ಯುಧಿಷ್ಠಿರನನ್ನು ಕುರಿತು ಹೇಳುತ್ತಾನೆ—ಎಲೈ ರಾಜನೇ! ಸಾಮಾನ್ಯವಾಗಿ ಪ್ರಯಾಣಹೊರಟಾಗಲೂ ವಿಶೇಷತಃ ಯಾತ್ರಾ ರಂಭದಲ್ಲಿಯೂ, ಶುಕ್ರೋದಯಕಾಲದಲ್ಲಿಯೂ, ಶುಕ್ರಪ್ರೀತಿಯನ್ನು ಸಂಪಾದಿಸು ವುದಕ್ಕೋಸ್ಕರ ಶುಕ್ರಪೂಜೆಯನ್ನು ಮಾಡಬೇಕು.

೨-೩. ಪೂಜಾವಿಧಾನವನ್ನು ಸಾರಾಂಶವಾಗಿ ಹೇಳುವೆನು ಕೇಳು. ಬೆಳ್ಳಿ ಯಲ್ಲಿ ಶುಕ್ರಪ್ರತಿಮೆಯನ್ನು ಮಾಡಿಸಿ ಅದನ್ನು ಶುಭ್ರವಾದ ಮುತ್ತುಗಳಿಂದ ಅಲಂಕರಿಸಿ, ಚಿನ್ನದ್ದೋ ಬೆಳ್ಳಿಯದೋ ಅಥವಾ ಕಂಚಿನದೋ ತನ್ನ ದ್ರವ್ಯಾನು ಕೂಲಕ್ಕನುಗುಣವಾದ ಪಾತ್ರೆಯಲ್ಲಿ ಶುಭ್ರವಾದ ಅಕ್ಕಿಯ ಮೇಲೆ ಅದನ್ನು ಇರಿಸ ಬೇಕು. ಬಿಳಿಯಹೂವುಗಳು ಬಿಳಿಯವಸ್ತ್ರಗಳು ಇವುಗಳನ್ನು ಸಮರ್ಪಿಸಿ ಕ್ರಮ ವಾಗಿ ಷೋಡಶೋಪಚಾರ ಪೂಜೆಯನ್ನು ಭಕ್ತಿಯಿಂದ ಮಾಡಬೇಕು.

ಸಹ ತೇನ ಸವತ್ಸಾಂ ಗಾಂ ಬ್ರಾಹ್ಮಣಾಯ ನಿವೇದಯೇತ್ ।
ನಮಸ್ತೇ ಸರ್ವದೇವೇಶ ನಮಸ್ತೇ ಭೃಗುನಂದನೆ ॥
ಕವೇ ಸರ್ವಾರ್ಥಸಿದ್ಧ್ಯರ್ಥಂ ಗೃಹಾಣಾರ್ಘ್ಯಂ ನಮೋಽಸ್ತು ತೇ ॥೪॥

ದತ್ತ್ವೈವಮರ್ಘ್ಯಂ ಕೌಂತೇಯ ಪ್ರಣಿಪತ್ಯ ವಿಸರ್ಜಯೇತ್ ॥ ೫ ॥

ಯಾವಚ್ಛುಕ್ರಸ್ಯ ನ ಕೃತಾ ಪೂಜಾ ಸೋಹಾಲಕೈಃ ಶುಭೈಃ ।
ವಟಕೈಃ ಪೂರಿಕಾಭಿಶ್ಚ ಗೋಧೂಮೈಶ್ಚಣಕೈರಪಿ ॥
ತಾವನ್ನ ದಾನಂ ದಾತವ್ಯ ಸ್ತ್ರೀಭಿಃ ಕಾಮಾರ್ಥಸಿದ್ಧಯೇ ॥ ೬ ॥

ಏವಂ ತಸ್ಯೋದಯೇ ಕುರ್ವನ್ ಯಾತ್ರಾದಿಷು ಚ ಭಾರತ ।
ಸರ್ವಸಸ್ಯಾಗಮಂ ಚೈವ ಸರ್ವಾನ್ಕಾಮಾನವಾಪ್ನುಯಾತ್ ॥ ೭ ॥

---

೪. ಬಳಿಕ ಆ ಪ್ರತಿಮೆಯನ್ನೂ, ಹಾಲುಕರೆಯುವ ಒಂದು ಹಸುವನ್ನೂ ಬ್ರಾಹ್ಮಣನಿಗೆ ದಾನಕೊಡಬೇಕು. ಅನಂತರ ಸರ್ವದೇವತೆಗಳಿಗೂ ಸ್ವಾಮಿಯಾದವನೇ ಇದೋ ನಿನಗೆ ನಮಸ್ಕಾರ. ಭೃಗುಪುತ್ರನೇ! ನಿನಗೆ ನಮಸ್ಕಾರ. ಕವಿಯೇ! ನನಗೆ ಸಕಲ ಇಷ್ಟಾರ್ಥಗಳೂ ಸಿದ್ಧಿಸುವುದಕ್ಕಾಗಿ ನಿನಗೆ ಅರ್ಘ್ಯಪ್ರದಾನಮಾಡುವೆನು ಸ್ವೀಕರಿಸು. ಎಂಬ ಅರ್ಥವುಳ್ಳ ಮಂತ್ರಹೇಳಿ ಅರ್ಘ್ಯವನ್ನು ಕೊಡಬೇಕು.

೫. ಎಲೈ ಕುಂತೀಪುತ್ರನೇ! ಈ ಮಂತ್ರ ಪೂರ್ವಕವಾಗಿ ಅರ್ಘ್ಯಪ್ರದಾನಮಾಡಿದ ಮೇಲೆ ಶುಕ್ರನಿಗೆ ನಮಸ್ಕರಿಸಿ ವಿಸರ್ಜನೆಮಾಡಬೇಕು.

೬. ಸ್ತ್ರೀಯರು ಪೂಜಿಸುವ ಸಂದರ್ಭದಲ್ಲಿ ಶುಭಕರವಾದ ಸೋಹಾಲಕ ಭಕ್ಷ್ಯ, ವಟಕ(ವಡೆ), ಪೂರಿ, ಗೋಧಿಯಸಂಬಂಧವಾದ ಇತರ ಭಕ್ಷ್ಯ, ಕಡಲೆಯ ಹಿಟ್ಟಿನ ಸಂಬಂಧವಾದ ಭಕ್ಷ್ಯ, ಇವುಗಳನ್ನು ಮಾಡಿ ಶುಕ್ರನಿಗೆ ನಿವೇದನಮಾಡಬೇಕು. ಹೀಗೆ ನಿವೇದಿಸಿ ದಾನಮಾಡಿದರೆ ಅವರಿಗೆ ಇಷ್ಟಾರ್ಥಗಳು ಸಿದ್ಧಿಸುವುವು.

೭. ಎಲೈ ಭರತಶ್ರೇಷ್ಠನೇ! ಹೀಗೆ ಶುಕ್ರೋದಯ ಕಾಲಗಳಲ್ಲಿಯೂ ಯಾತ್ರಾ ಪ್ರಯಾಣವೇ ಮುಂತಾದ ಕಾಲಗಳಲ್ಲಿಯೂ ಶುಕ್ರನನ್ನು ಪೂಜೆಮಾಡಿ ಅರ್ಘ್ಯಪ್ರದಾನಮಾಡಿದರೆ ಸರ್ವ ಸಸ್ಯಾಭಿವೃದ್ಧಿಯುಂಟಾಗಿ ಸಕಲ ಇಷ್ಟಾರ್ಥಸಿದ್ಧಿಯೂ ತಪ್ಪದೆ ಆಗುವುವು.

ತದ್ವದ್ವಾಚಸ್ಪತೇಃ ಪೂಜಾಂ ಪ್ರವಕ್ಷ್ಯಾಮಿ ಯುಧಿಷ್ಠಿರ ।
ಸೌವರ್ಣಪಾತ್ರೇ ಸೌವರ್ಣ ಮಮರೇಶಪುರೋಹಿತಂ ॥
ಪೀತಪುಷ್ಪಾಂಬರಯುತಂ ಕೃತ್ವಾ ಸ್ನಾತ್ವಾಥಸರ್ಷಪೈಃ ॥ ೮ ॥

ಪಾಲಾಶಾಶ್ವತ್ಥ ಭಂಗೇನ ಪಂಚಗವ್ಯಜಲೇನ ಚ ।
ಪೀತಾಂಬರಾಂಗವಸನಂ ಘೃತಹೋಮಂ ತು ಕಾರಯೇತ್ ॥ ೯ ॥

ಪ್ರಣಮ್ಯ ಚ ಗವಾ ಸಾರ್ಧಂ ಬ್ರಾಹ್ಮಣಾಯ ನಿವೇದಯೇತ್ ॥೧೦॥

ನಮಸ್ತೇಽಙ್ಗಿರಸಾಂನಾಥ ವಾಕ್ಪತೇಥ ಬೃಹಸ್ಪತೇ ।
ಕ್ರೂರಗ್ರಹೈಃ ಪೀಡಿತಾನಾಮಮೃತಾಯ ಭವಸ್ವ ನಃ ॥ ೧೧ ॥

---

೮. ಇದರಂತೆಯೇ ಬೃಹಸ್ಪತಿಯ ಪೂಜೆಯ ವಿಧಿಯನ್ನು ಹೇಳುವೆನು ಕೇಳು. ದೇವಗುರುವಾದ ಬೃಹಸ್ಪತಿಯ ಪ್ರತಿಮೆಯನ್ನು ಭಂಗಾರದಿಂದ ಮಾಡಿಸಿ, ಸ್ವರ್ಣಮಯ ಪಾತ್ರೆಯಲ್ಲಿಟ್ಟು ಹಳದಿಯ ಹೂವು, ಹಳದಿಯ ವಸ್ತ್ರ, ಇವುಗಳಿಂದ ಅಲಂಕರಿಸಬೇಕು. ಆ ಪ್ರತಿಮೆಗೆ ಸಾಸುವೆಯ ಪುಡಿಯನ್ನು ಸವರಿ.

೯. ಮುತ್ತುಗದ ಹಾಲು, ಅರಳಿಯ ಹಾಲು, ಪಂಚಗವ್ಯ ಇವುಗಳನ್ನು ಅಭಿಷೇಕಮಾಡಿ ಅನಂತರ ಉಷ್ಣೋದಕ ಸ್ನಾನಮಾಡಿಸಬೇಕು. ಬಳಿಕ ಹೊಂಬಣ್ಣದ ಅಂಗರಾಗವನ್ನು ಲೇಪಿಸಬೇಕು. ಬಳಿಕ ಪ್ರತಿಷ್ಠಿಸಿದ ಅಗ್ನಿಯಲ್ಲಿ ಹೋಮಮಾಡಬೇಕು.

೧೦. ಅನಂತರ ಗೋವನ್ನು ದಾನಕೊಡಲು ಸಿದ್ಧಪಡಿಸಿ, ಅದನ್ನೂ ಪ್ರತಿಮೆಯನ್ನೂ ಸಹ ಪೂಜಿಸಿ, ಬ್ರಾಹ್ಮಣೋತ್ತಮನನ್ನು ಕರೆದು, ಆತನಿಗೆ ಆ ಪ್ರತಿಮೆಯನ್ನೂ ಹಸುವನ್ನೂ ಸಹ ದಾನಮಾಡಬೇಕು.

೧೧. ಆ ಸಂದರ್ಭದಲ್ಲಿ "ಅಂಗಿರಸ್ಸುಗಳ ಅಧಿಪತಿಯೂ, ವಾಕ್ಕಿಗೆ ಅಧಿನಾಥನೂ ಆದ ಬೃಹಸ್ಪತಿಯೇ! ಕ್ರೂರಗ್ರಹಗಳಿಂದ ಪೀಡಿತರಾಗಿರುವ ನಮ್ಮನ್ನು ಬದುಕಿಸಿ ಕಾಪಾಡು" ಎಂಬ ಅರ್ಥವುಳ್ಳ ಮಂತ್ರ ಹೇಳಬೇಕು.

ಏವಂ ಸುರಗುರುಂ ಪೂಜ್ಯ ಪ್ರಣಿಪತ್ಯ ಕ್ಷಮಾಪಯೇತ್ ।
ಸಂಕ್ರಾಂತಾವುದಯೇ ಚಾಸ್ತೇ ಸರ್ವಾನ್ ಕಾಮಾನವಾಪ್ನುಯಾತ್ ॥
ಅಥವಾ ಮೌಕ್ತಿಕಾನ್ಯೇವ ಸುವೃತ್ತಾನಿ ಬೃಹಂತಿ ಚ ॥ ೧೨ ॥

ಭಾರ್ಗವಾಂಗಿರಸೌ ಚಿಂತ್ಯಂ ತಾನ್ಯೇವ ಪ್ರತಿಪಾದಯೇತ್ ॥ ೧೩ ॥

ಭಕ್ತ್ಯಾ ಮೌಕ್ತಿಕದಾನೇನ ದತ್ತೇನ ಕುರುನಂದನ ।
ವಿರೂಪತಾ ದೃಶೋಃ ಪುಂಸಾಂ ಯಾತ್ರಾಸ್ವಭ್ಯುದಯೇಷು ಚ ॥
ಕುರ್ವನ್ ಬೃಹಸ್ಪತೇಃ ಪೂಜಾಂ ನ ಕದಾಚಿತ್ಪ್ರಜಾಯತೇ ॥ ೧೪ ॥

ಯೋ ಭಾರ್ಗವೋದಯಮವಾಪ್ಯಸುವಸ್ತ್ರಪುಷ್ಪಾಂ ।
ಕುರ್ವಂತ್ಯನನ್ಯಮನಸೋಽಙ್ಗಿರಸೇ ಚ ಪೂಜಾಂ ॥

---

೧೨. ಹೀಗೆ ದೇವಗುರುವಾದ ಬೃಹಸ್ಪತಿಯನ್ನು ಸಂಕ್ರಮಣ, ಗುರೂದಯ, ಗುರ್ವಸ್ತ ಈ ಕಾಲಗಳಲ್ಲಿ ಭಕ್ತಿಯಿಂದ ಪೂಜಿಸಿ, ನಮಸ್ಕಾರಮಾಡಿ ಕ್ಷಮಾಪಣೆ ಬೇಡುವವನಿಗೆ ಸಕಲ ಇಷ್ಟಾರ್ಥಗಳೂ ಸಿದ್ಧಿಸುವುವು.

೧೩. ಪ್ರತಿಮೆಯನ್ನು ಮಾಡಿಸಲು ಸಾಧ್ಯವಾಗದಿದ್ದ ಪಕ್ಷದಲ್ಲಿ ಸುಂದರವಾದ ದಪ್ಪದಪ್ಪ ಮುತ್ತುಗಳನ್ನೇ ತೆಗೆದುಕೊಂಡು ಶುಕ್ರ, ಬೃಹಸ್ಪತಿ, ಇವರನ್ನು ಧ್ಯಾನಿಸುತ್ತಾ ಅದನ್ನೇ ಬ್ರಾಹ್ಮಣನಿಗೆ ದಾನಮಾಡಬಹುದು.

೧೪. ಅಯ್ಯಾ ಕುರುನಂದನನೇ! ಈ ಪ್ರಕಾರ ಭಕ್ತಿಯಿಂದ ಮೌಕ್ತಿಕ ದಾನಮಾಡಿದರೆ ಯಾತ್ರೆ, ಮಂಗಳಕಾರ್ಯಗಳು ಇವುಗಳಲ್ಲಿ ಮಾನವರಿಗೆ ಯಾವ ವಿಧವಾದ ದೃಷ್ಟಿಮಾಂದ್ಯ (ಜ್ಞಾನರಾಹಿತ್ಯ) ಮೊದಲಾದ ವಿಕಾರಗಳೂ, ಇತರ ವಿಘ್ನಗಳೂ ಉಂಟಾಗುವುದಿಲ್ಲ. ಈ ಬೃಹಸ್ಪತಿಯ ಆರಾಧನೆಯನ್ನು ಈ ವಿಧಾನದಲ್ಲಿ ತಪ್ಪದೆ ಮಾಡಿದರೆ ಅವನಿಗೆ ಯಾವ ವಿಧವಾದ ಮನೋವೈಕಲ್ಯವೂ ಉಂಟಾಗಲಾರದು.

೧೫. ಎಲೈ ಭರತಕುಲೋತ್ಪನ್ನನೇ! ಶುಕ್ರೋದಯ, ಗುರೂದಯ ಕಾಲಗಳಲ್ಲಿ ಏಕಾಗ್ರಚಿತ್ತದಿಂದ ಶುಭಕರವಾದ ವಸ್ತ್ರಗಳು, ಸುವಾಸನಾ ಪುಷ್ಪಗಳು, ಮುಂತಾದುವುಗಳಿಂದ ಶುಕ್ರ, ಬೃಹಸ್ಪತಿ, ಇವರನ್ನು ಭಕ್ತಿಪೂರ್ವಕವಾಗಿ

ತೇಷಾಂ ಗೃಹೇ ಪ್ರವಿಶತಾಂ ಪ್ರತಿಶುಕ್ರಜಾತಂ ।
ವಿಘ್ನಂ ನ ಸಂಭವತಿ ಭಾರತ ಪುಣ್ಯಭಾಜಾಂ ॥ ೧೫ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಶುಕ್ರಬೃಹಸ್ಪತ್ಯರ್ಘ್ಯ ಪೂಜಾ ವಿಧಾನಂ ನಾಮ ವಿಂಶತ್ಯುತ್ತರ ಶತತಮೋಽಧ್ಯಾಯಃ.



ಪೂಜೆಮಾಡಿದರೆ, ಅಂತಹ ಮಾಡಿವರ ಕುಟುಂಬದಲ್ಲಿ ಗುರು, ಶುಕ್ರ ಇವರಿಂದ ಸಂಭವಿಸಬಹುದಾದ ವಿಘ್ನಗಳೆಲ್ಲಾ ನಿವಾರಣೆಯಾಗಿ, ಯಜಮಾನನು ಪುಣ್ಯಭಾಗಿಯಾಗುವನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಉತ್ತರಪರ್ವದಲ್ಲಿ ಶುಕ್ರ, ಬೃಹಸ್ಪತಿಪೂಜೆ ಮತ್ತು ಅರ್ಘ್ಯವರ್ಣನೆಯೆಂಬ ನೂರಇಪ್ಪತ್ತನೆಯ ಅಧ್ಯಾಯ ಮುಗಿದುದು.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣ

## ಉತ್ತರಪರ್ವಣಿ

## ಏಕವಿಂಶತ್ಯುತ್ತರಶತತಮೋಽಧ್ಯಾಯಃ

|| ಶ್ರೀ ಕೃಷ್ಣ ಉವಾಚ ||

**ಶೃಣು ಭಾರತ ವಕ್ಷ್ಯಾಮಿ ಪಂಚಾಶೀತಿವ್ರತಾನಿ ಚ ।**
**ನೋಕ್ತಾನಿ ಯಾನಿ ಕಸ್ಯಾಪಿ ಮುನಿಭಿರ್ಧರ್ಮದರ್ಶಿಭಿಃ || ೧ ||**

**ಭವಿಷ್ಯಮತ್ಸ್ಯಮಾರ್ಕಂಡಪುರಾಣೇಷು ಚ ವರ್ಣಿತಂ ।**
**ವಾರಾಹಂ ಚೈವ ಸಂಗೃಹ್ಯ ಕಥ್ಯಂತೇ ತಾನಿ ಪಾಂಡವ || ೨ ||**

**ಯದಭೀಷ್ಟಂ ಸುಮಿತ್ರಾಯ ಶಿಷ್ಯಾಯ ಚ ಸುತಾಯ ಚ ।**
**ನ ಕಥ್ಯತೇ ಧರ್ಮಜಾತಂ ಕಿಂ ತೇನೋದರವರ್ತಿನಾ || ೩ ||**

---

### ನೂರಇಪ್ಪತ್ತೊಂದನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಎಲೈ ಭರತಕುಲಸಂಭೂತನೇ! ಧರ್ಮ ಸೂಕ್ಷ್ಮಜ್ಞರಾದ ಮುನಿಗಳು ಈ ಪರ್ಯಂತ ಯಾರಿಗೂ ಉಪದೇಶಮಾಡದೆ ಇರುವ ಎಂಭತ್ತೈದು ವ್ರತಗಳನ್ನು ನಿನಗೆ ಹೇಳುವೆನು.

೨. ಈ ವ್ರತಗಳು ಭವಿಷ್ಯ, ಮತ್ಸ್ಯ, ಮಾರ್ಕಂಡೇಯ, ವರಾಹ ಎಂಬ ಪುರಾಣಗಳಲ್ಲಿ ಉಕ್ತವಾಗಿವೆ. ಅವುಗಳನ್ನು ನಿನಗೋಸ್ಕರ ಸಂಗ್ರಹಿಸಿ ಹೇಳು ತ್ತಿರುವೆನು.

೩–೪. ಇಷ್ಟವಾದ ವಿಚಾರವನ್ನು ಅಪ್ತಸ್ನೇಹಿತ, ಯೋಗ್ಯನಾದ ಶಿಷ್ಯ, ಉತ್ತಮನಾದ ಮಗ ಇವರುಗಳಿಗೆ ತಿಳಿಸದೆ ಮತ್ತಾರಿಗೆ ತಿಳಿಸಬೇಕು? ಹಾಗೆ ಹೇಳದೆ ರಹಸ್ಯವಾಗಿ ಬಚ್ಚಿಟ್ಟುಕೊಂಡರೆ ಆ ಧರ್ಮಸೂಕ್ಷ್ಮಗಳಿಂದ ಏನು

ಶ್ರುತಿಸ್ಮೃತಿಪುರಾಣೇಭ್ಯೋ ಯನ್ಮಯಾ ಹ್ಯವಧಾರಿತಂ ।
ತತ್ತೇವಚ್ಮಿ ಕುರುಶ್ರೇಷ್ಠ ಕಸ್ಯಾನ್ಯಸ್ಯೋಪದಿಶ್ಯತೇ ॥ ೪ ॥

ಸ್ನಾತ್ವಾ ಪ್ರಭಾತಸಂಧ್ಯಾಯಾಮುಪಗೃಹ್ಯ ಚ ಪಿಪ್ಪಲಂ ।
ತಿಲಪಾತ್ರಾಣಿ ಯೋ ದದ್ಯಾನ್ನ ಸ ಶೋಚೇತ ತತ್ಕೃತೇ ॥ ೫ ॥

ವ್ರತಾನಾಮುತ್ತಮಂ ಹ್ಯೇತತ್ಸರ್ವಪಾಪಪ್ರಣಾಶನಂ ।
ಪಾತ್ರವ್ರತಮಿತಿ ಖ್ಯಾತಂ ನಾಖ್ಯಾತಂ ಕಸ್ಯಚಿನ್ಮಯಾ ॥ ೬ ॥

ಸುಶುದ್ಧಸ್ಯ ಸುವರ್ಣಸ್ಯ ಸುವರ್ಣಂ ಯಃ ಪ್ರಯಚ್ಛತಿ ।
ಪುಣ್ಯೇಽಹ್ನಿ ವಿಪ್ರಕಥಿತೇ ಪ್ರೀತ್ಯಾ ಪೀತಾಂಬರಾನ್ವಿತಂ ॥ ೭ ॥

---

ಪ್ರಯೋಜನವಾದಂತಾಗುವುದು? ಆದುದರಿಂದ ಶ್ರುತಿ, ಸ್ಮೃತಿ ಪುರಾಣಗಳಲ್ಲೆಲ್ಲಾ ಹುಡುಕಿ ನಾನು ಸಂಗ್ರಹಿಸಿರುವ ಈ ವ್ರತಗಳನ್ನು ನಿನಗೆ ಉಪದೇಶಿಸುವೆನು. ಇಂತಹ ಉಪದೇಶಕ್ಕೆ ನೀನಲ್ಲದೆ ಮತ್ತೆಯಾರು ಪಾತ್ರರು? ಎಂಬದಾಗಿ ಹೇಳತೊಡಗಿದನು.

೫. ಬೆಳಗ್ಗೆ ಸ್ನಾನಮಾಡಿ ಪ್ರಾತಸ್ಸಂಧ್ಯಾದಿಗಳನ್ನು ನೆರವೇರಿಸಿ, ಅಗ್ನಿಗೆ ಅಶ್ವತ್ಥಸಮಿಧಾಧಾನಮಾಡಿ ಅನಂತರ ತಿಲಪಾತ್ರವನ್ನು ದಾನಮಾಡಬೇಕು. ಸತ್ಪಾತ್ರನಾದವನಿಗೆ ದಾನಕೊಡಬೇಕಾದುದನ್ನು ಮುಖ್ಯವಾಗಿಟ್ಟುಕೊಳ್ಳಬೇಕು. ದಾನಕೊಟ್ಟಮೇಲೆ ಅದಕ್ಕೆ ವೆಚ್ಚವಾದುದಕ್ಕಾಗಿ ದುಃಖಿಸಬಾರದು.

೬. ಈ ಪ್ರಕಾರಮಾಡಿದರೆ ಉತ್ತಮೋತ್ತಮವಾದ ಈ ವ್ರತವು ಸಮಸ್ತ ಪಾಪಗಳನ್ನೂ ನಾಶಪಡಿಸುವುದು. ಈ ವ್ರತವು "ಪಾತ್ರವ್ರತ" ಎಂಬ ಹೆಸರಿನಿಂದಪ್ರಸಿದ್ಧವಾಗಿದೆ. ಅಯ್ಯಾ ಯುಧಿಷ್ಠಿರನೇ! ಈ ವ್ರತವನ್ನು ನಾನು ನಿನಗಲ್ಲದೆ ಮತ್ತೆಯಾರಿಗೂ ಹೇಳಿಲ್ಲ.

೭. ದೈವಜ್ಞರು ಗೊತ್ತುಮಾಡಿದ ಶುಭದಿವಸದಲ್ಲಿ ಒಂದು ಅಪರಂಜಿ ಚಿನ್ನದ ಪಾತ್ರೆಯನ್ನೂ, ಹಳದಿಬಣ್ಣದ ಒಂದುಜತೆ ವಸ್ತ್ರವನ್ನೂ ಚಿನ್ನದ ನಾಣ್ಯದ ದಕ್ಷಿಣೆಸಮೇತ ಬ್ರಾಹ್ಮಣನಿಗೆ ದಾನಮಾಡಬೇಕು. ಹೀಗೆ ಮಾಡಿದರೆ ದಾತೃವಿಗೆ ಬುದ್ಧಿಶಕ್ತಿಯೂ, ದೇಹಶಕ್ತಿಯೂ ಅಭಿವೃದ್ಧಿಯಾಗುವುವು ಇವಕ್ಕೆ "**ವಾಚಸ್ಪತಿವ್ರತ**" ಎಂದು ಹೆಸರು.

ವ್ರತಂ ವಾಚಸ್ಪತೇರೇತಚ್ಛಲಬುದ್ಧಿಪ್ರದಾಯಕಂ ।
ವೃತ್ರಘ್ನಸ್ಯ ಪುರಾಖ್ಯಾತಂ ಗುರುಣಾ ಸರ್ವಕಾಮದಂ　　|| ೮ ||

ಲವಣಂ ಕಟು ತಿಕ್ತಂ ಚ ಜೀರಕಂ ಮರಿಚಾನಿ ಚ ।
ಹಿಂಗುಶುಂಠಿಸಮಾಯುಕ್ತಂ ಸರ್ವಂ ಪರಿಚಯಂ ತಥಾ　　|| ೯ ||

ಚತುರ್ಥ್ಯಾಮೇಕಭಕ್ತಾಶೀ ಸಕೃದ್ದತ್ವಾ ಕುಟುಂಬಿನೇ ।
ಗೃಹೇಷು ಸಪ್ತಸು ಸದಾ ಶಿಲಾಯುಕ್ತಾನಿ ಭಾರತ　　|| ೧೦ ||

ಏತಚ್ಛಿಲಾವ್ರತಂ ನಾಮ ಲಕ್ಷ್ಮೀಲೋಕಪ್ರದಾಯಕಂ ।
ಕರ್ತವ್ಯಮಿಹ ಯತ್ನೇನ ಮುಖಪಾಟವಕಾರಕಂ　　|| ೧೧ ||

ನಕ್ತಮನ್ನಂ ಚರಿತ್ವಾ ತು ಗವಾ ಸಾರ್ಧಂ ಕುಟುಂಬಿನೇ ।
ಹೈಮಂ ಚಕ್ರಂ ತ್ರಿಶೂಲಂ ಚ ದದ್ಯಾದ್ವಿಪ್ರಾಯ ವಾಸಸೀ　　|| ೧೨ ||

---

೮. ಈ ವ್ರತವು ಸಕಲ ಇಷ್ಟಾರ್ಥಗಳನ್ನೂ ಕೊಡುವುದು. ಇದನ್ನು ಹಿಂದೆ ಬೃಹಸ್ಪತ್ಯಾಚಾರ್ಯನೇ ವೃತ್ರಾಸುರಧ್ವಂಸಿಯಾದ ಇಂದ್ರನಿಗೆ ಹೇಳಿದ್ದನು.

೯. ಉಪ್ಪು, ಕಹಿ, ಒಗಚು ಈ ರುಚಿಯ ವಸ್ತುಗಳನ್ನೂ, ಜೀರಿಗೆ, ಮೆಣಸು, ಹಿಂಗು, ಶುಂಠಿ ಮುಂತಾದ ಹಲವು ಸಂಬಾರವಸ್ತುಗಳನ್ನೂ ಮಣಿಶಿಲೆ ಮುಂತಾದ ಪರಿಚಿತ ವಸ್ತುಗಳನ್ನೂ ಸೇರಿಸಿ ಪಾಕವನ್ನು ಮಾಡಬೇಕು.

೧೦. ಚತುರ್ಥಿಯದಿನ ಏಕಭುಕ್ತವನ್ನಾಚರಿಸಿ, ಕುಟುಂಬಿಯಾದ ಬ್ರಾಹ್ಮಣನಿಗೆ ಆ ಪಾಕರಸವನ್ನು ದಾನಕೊಡಬೇಕು. ಹೀಗೆ ಮಾಡಿದರೆ ಏಳು ಅಂತಸ್ತಿನ ಮನೆಗಳಲ್ಲಿ ವಾಸಮಾಡುವ ಯೋಗವನ್ನು ಪಡೆಯುವನು.

೧೧. ಈ ವ್ರತಕ್ಕೆ "ಶಿಲಾವ್ರತ" ಎಂದು ಹೆಸರು. ಇದನ್ನಾಚರಿಸಿದವರಿಗೆ ಲಕ್ಷ್ಮೀಲೋಕಪ್ರಾಪ್ತಿಯಾಗುವುದು. ಅಲ್ಲದೆ ಅವರಿಗೆ ವಾಕ್ಪಟುತ್ವವು ವೃದ್ಧಿಯಾಗುವುದು.

೧೨. ನಕ್ತಭೋಜನ ವ್ರತವನ್ನಾಚರಿಸುತ್ತಾ ಸಂಸಾರಿಯಾದ ವಿಪ್ರನಿಗೆ ಗೋವು, ಒಂದುಜತೆ ವಸ್ತ್ರ, ಚಿನ್ನದಿಂದ ಮಾಡಿದ ಚಕ್ರ, ತ್ರಿಶೂಲ ಇವುಗಳನ್ನು ಬ್ರಾಹ್ಮಣೋತ್ತಮನಿಗೆ ದಾನಮಾಡಿ ಭಕ್ತಿಪುರಸ್ಸರವಾಗಿ ನಮಸ್ಕರಿಸಬೇಕು.

ಪ್ರಣಮ್ಯ ಭಕ್ತ್ಯಾ ದೇವೇಶೌ ಪ್ರೀಯೇತಾಂ ಶಿವಕೇಶವೌ ।
ಏತದ್ದೇವವ್ರತಂ ನಾಮ ಮಹಾಪಾತಕನಾಶನಂ ॥ ೧೩ ॥

ಕೃತ್ವೈಕಭುಕ್ತಂ ವರ್ಷಾಂತೇ ಶಕ್ತ್ಯಾ ಹೈಮವೃಷಾನ್ವಿತಾಂ ।
ಧೇನುಂ ತಿಲಮಯೀಂ ದದ್ಯಾತ್ಸರ್ವೋಪಸ್ಕರಣೈರ್ಯುತಾಂ ॥ ೧೪ ॥

ಏತದ್ರುದ್ರವ್ರತಂ ನಾಮ ಪಾಪಶೋಕಪ್ರಣಾಶನಂ ।
ಯಃ ಕರೋತಿ ಪುಮಾನ್ರಾಜನ್ಸಪದಂ ಯಾತಿಶಾಂಕರಂ ॥ ೧೫ ॥

ಸರ್ವೌಷಧ್ಯುದಕಸ್ನಾತಃ ಪಂಚಮ್ಯಾಂ ಪೂಜ್ಯ ಪಂಚಕಂ ।
ಸಪ್ತೋಪಸ್ಕರದಾನಂ ಚ ಯಃ ಕರೋತಿ ಗೃಹಾಶ್ರಮೀ ॥ ೧೬ ॥

ಗೃಹಾದ್ಯುಲೂಖಲಂ ಶೂರ್ಪಃ ಶಿಲಾ ಸ್ಥಾಲೀ ಚ ಪಂಚಮೀ ।
ಉದಕುಂಭಶ್ಚ ಚುಲ್ಲೀ ಚ ಏತೇಷಾಮನುಕಿಂಚನ ॥ ೧೭ ॥

---

೧೩. ಮತ್ತು ಈ ದಾನದಿಂದ ಶಿವ ಕೇಶವ ಇಬ್ಬರೂ ಸುಪ್ರೀತರಾಗಲಿ ಎಂದು ಹೇಳಬೇಕು. ಈ ವ್ರತಕ್ಕೆ "**ದೇವವ್ರತ**" ಎಂದು ಹೆಸರು. ಇದು ಮಹಾಪಾಪಗಳನ್ನು ನಾಶಮಾಡಬಲ್ಲುದು.

೧೪. ಒಂದುವರ್ಷ ಪರ್ಯಂತ ಒಪ್ಪೊತ್ತು ಮಾತ್ರ ಊಟಮಾಡುತ್ತಾ, ವರ್ಷಾಂತ್ಯದಲ್ಲಿ ತನ್ನಶಕ್ತ್ಯನುಸಾರ ಚಿನ್ನದಿಂದ ವೃಷಭವನ್ನು ಮಾಡಿಸಿ, ತಿಲ ಮಯವಾದ ಗೋವನ್ನೂ, ಈ ಚಿನ್ನದ ವೃಷಭವನ್ನೂ ಸಕಲ ಪರಿಕರಗಳೊಂದಿಗೆ ಬ್ರಾಹ್ಮಣನಿಗೆ ದಾನಮಾಡಬೇಕು.

೧೫. ಅಯ್ಯಾ ರಾಜನೇ! ಈ ವ್ರತಕ್ಕೆ "**ರುದ್ರವ್ರತ**" ಎಂದು ಹೆಸರು. ಇದು ಸಮಸ್ತ ಪಾಪಗಳನ್ನೂ ದುಃಖಗಳನ್ನೂ ನಿವಾರಣೆಮಾಡುವುದು. ಈ ವ್ರತ ವನ್ನು ಭಕ್ತಿಯಿಂದ ಆಚರಿಸುವ ನರನು ಶಂಕರನ ಲೋಕವನ್ನು ಸೇರುವನು.

೧೬–೧೭. ಗೃಹಸ್ಥನಾದವನು ಪಂಚಮಿಯದಿನ ಸರ್ವೌಷಧಿಯುಕ್ತವಾದ ಜಲದಲ್ಲಿ ಸ್ನಾನಮಾಡಿ; ಗೃಹ, ಉಲೂಖಲ (ಒರಳು), ಶೂರ್ಪ (ಮೊರ) ಸ್ಥಾಲೀ (ತಪ್ಪಲೆ), ಮತ್ತು ಶಿಲಾ (ಗುಂಡುಕಲ್ಲು) ಎಂಬ ಈ ಪಂಚಕವನ್ನೂ ಪೂಜಿಸಿ ಏಳು ಉಪಸ್ಕರಗಳನ್ನು ಎಂದರೆ ಈ ಐದರ ಜತೆಗೆ ಉದಕುಂಭ, ಒಲೆ ಇವುಗಳನ್ನು ಸೇರಿಸಿ ದಾನಕೊಡಬೇಕು.

ಏತಾನಿ ಗೃಹಿಣಾಂ ಗೇಹೇ ಪ್ರಸ್ಥಾಪ್ಯ ಪುರುಷೋತ್ತಮಂ ।
ಉಪಸ್ಕರೋತಿ ಯಾ ನಾರೀ ನ ಸೀದತಿ ಕದಾಚನ || ೧೮ ||

ಏತದ್ಗೃಹವ್ರತಂ ನಾಮ ಸರ್ವಸೌಖ್ಯಪ್ರದಾಯಕಂ ।
ಅತ್ರಿಣಾಹ್ಯನಸೂಯಾಯಾಃ ಕಥಿತಂ ಪಾಂಡುನಂದನ || ೧೯ ||

ಯಸ್ತು ನೀಲೋತ್ಪಲಂ ಹೈಮಂ ಶರ್ಕರಾಪಾತ್ರಸಂಯುತಂ ।
ದದಾತಿ ಶ್ರದ್ಧಯೋಪೇತೋ ಬ್ರಾಹ್ಮಣಾಯ ಕುಟುಂಬಿನೇ || ೨೦ ||

ಸ ವೈಷ್ಣವಂ ಪದಂ ಯಾತಿ ಲೀಲಾವ್ರತಮಿದಂ ಸ್ಮೃತಂ ।
ಆಷಾಢಾದಿಚತುರ್ಮಾಸಮಭ್ಯಂಗಂ ವರ್ಜಯೇನ್ನರಃ || ೨೧ ||

---

೧೮. ಸ್ತ್ರೀಯು ಈ ವ್ರತಮಾಡುವುದಾದರೆ ಹಿಂದೆಹೇಳಿದ ಪದಾರ್ಥಗಳನ್ನು ಸತ್ಪಾತ್ರರಾದ ಗೃಹಸ್ಥರಮನೆಗೆ ಒಯ್ದು ಪುರುಷೋತ್ತಮ ಪ್ರೀತಿಯಾಗಲಿ ಎಂದು ಸಮರ್ಪಿಸಿದರೆ ಆ ನಾರಿಯು ಎಂದೂ ದುಃಖಭಾಗಿನಿಯಾಗುವುದಿಲ್ಲ.

೧೯. ಇದಕ್ಕೆ " **ಗೃಹವ್ರತ** " ಎಂದು ಹೆಸರು ಪ್ರಸಿದ್ಧವಾಗಿದೆ. ಅಯ್ಯಾ ಪಾಂಡುಪುತ್ರನೇ ! ಇದು ಸಕಲಸೌಖ್ಯಗಳನ್ನೂ ಕೊಡತಕ್ಕದ್ದಾಗಿದೆ. ಈ ವ್ರತವನ್ನು ಪೂರ್ವದಲ್ಲಿ ಅತ್ರಿಮಹರ್ಷಿಯು ತನ್ನ ಪತ್ನಿಯಾದ ಅನಸೂಯಾದೇವಿಗೆ ತಿಳಿಸಿದನು.

೨೦. ಚಿನ್ನದಿಂದ ಕನ್ನೈದಿಲೆಯಹೂವನ್ನು ಮಾಡಿಸಿ, ಸಕ್ಕರೆಯನ್ನು ತುಂಬಿದ ಪಾತ್ರೆಸಮೇತ ಈ ಪುಷ್ಪವನ್ನು ಸಂಸಾರಿಯಾದ ಬ್ರಾಹ್ಮಣನಿಗೆ ಶ್ರದ್ಧೆಯಿಂದ ದಾನಮಾಡಬೇಕು. ಇದಕ್ಕೆ " **ಲೀಲಾವ್ರತ** " ಎಂದು ಹೆಸರು. ಈ ವ್ರತಾನುಷ್ಠಾನಮಾಡುವನು ವಿಷ್ಣುಲೋಕವನ್ನು ಹೊಂದುವನೆಂದು ಹೇಳಿದೆ.

೨೧. ಆಷಾಢ, ಶ್ರಾವಣ, ಭಾದ್ರಪದ, ಆಶ್ವಯುಜ, ಈ ನಾಲ್ಕು ತಿಂಗಳುಗಳಲ್ಲಿ ಅಭ್ಯಂಗವನ್ನು ವರ್ಜ್ಯಮಾಡಬೇಕು. ಈ ನಿಯಮ ಮುಗಿದ ಮೇಲೆ ಅಚ್ಚೆಳ್ಳೆಣ್ಣೆಯನ್ನು ಒಂದು ಹೊಸ ಗಡಿಗೆಯಲ್ಲಿ ತುಂಬಿ, ಸತ್ಪಾತ್ರನಿಗೆ ದಾನಮಾಡಬೇಕು.

ಪಾರಿತೇ ಚ ಪುನರ್ದದ್ಯಾತ್ತಿಲತೈಲಘಟಂ ನವಂ ।
ಭೋಜನಂ ಪಾಯಸಾಜ್ಯಂ ಚ ಸ ಯಾತಿ ಭವನಂ ಹರೇಃ ॥ ೨೨ ॥

ಲೋಕಪ್ರೀತಿಕರಂ ಚೈತತ್ಪ್ರೀತಿವ್ರತಮಿಹೋಚ್ಯತೇ ।
ವರ್ಜಯಿತ್ವಾ ಮಧೌ ಯಸ್ತು ದಧಿಕ್ಷೀರಘೃತೈಕ್ಷವಂ ॥ ೨೩ ॥

ದದ್ಯಾದ್ವಸ್ತ್ರಯುಗಂ ಸೂಕ್ಷ್ಮಂ ರಸಪಾತ್ರೈಶ್ಚ ಸಂಯುತಂ ।
ಸಂಪೂಜ್ಯ ವಿಪ್ರಮಿಥುನಂ ಗೌರೀ ಮೇ ಪ್ರೀಯತಾಮಿತಿ ॥ ೨೪ ॥

ಏತದ್ಗೌರೀವ್ರತಂ ನಾಮ ಭವಾನೀಲೋಕದಾಯಕಂ ।
ಪುರುಷೋ ಯಸ್ತ್ರಯೋದಶ್ಯಾಂ ಕೃತ್ವಾ ನಕ್ತಮಥೋ ಪುನಃ ॥ ೨೫ ॥

---

೨೨. ಮತ್ತು ತದಂಗವಾಗಿ ಬ್ರಾಹ್ಮಣ ಭೋಜನಮಾಡಿಸಿ, ಘೃತ, ಪಾಯಸ, ಇವುಗಳನ್ನು ದಾನಮಾಡಬೇಕು. ಹೀಗೆ ಅನುಷ್ಠಾನಮಾಡಿದವನಿಗೆ ವಿಷ್ಣುಲೋಕ ಪ್ರಾಪ್ತಿಯಾಗುವುದು. ಪ್ರಸಿದ್ಧವಾದ ಈ ವ್ರತಕ್ಕೆ "ಪ್ರೀತಿವ್ರತ" ಎಂದು ಹೆಸರು.

೨೩. ವಸಂತಋತುವಿನಲ್ಲಿ ಹಾಲು, ಮೊಸರು, ತುಪ್ಪ, ಜೇನು ಇವುಗಳನ್ನು ತಿನ್ನದೆ ವರ್ಜ್ಯಮಾಡಿದ್ದು, ಆ ನಿಯಮ ಮುಗಿದನಂತರ ಮೇಲೆ ಹೇಳಿದ ರಸದ್ರವ್ಯವೊಂದೊಂದನ್ನೂ ಒಂದೊಂದು ಪಾತ್ರೆಯಲ್ಲಿ ತುಂಬಿ, ಒಂದು ಜತೆ ವಸ್ತ್ರಸಮೇತ ದಾನಮಾಡಬೇಕು.

೨೪. ಈ ದಾನಕೊಡುವುದಕ್ಕೆ ಬ್ರಾಹ್ಮಣದಂಪತಿಗಳನ್ನು ಆಹ್ವಾನಿಸಿ, ಅವರನ್ನು ಭಕ್ತಿಯಿಂದ ಪೂಜಿಸಿ, "ನನಗೆ ಗೌರಿಯು ಪ್ರಸನ್ನೆಯಾಗಲಿ" ಎಂದು ಹೇಳಿ ದಾನಕೊಡಬೇಕು. "**ಗೌರೀವ್ರತ**" ಎಂಬ ಹೆಸರಿನಿಂದ ಪ್ರಸಿದ್ಧವಾದ ಇದು, ವ್ರತಾನುಷ್ಠಾತೃಗಳಿಗೆ ಭವಾನೀಲೋಕಪ್ರಾಪ್ತಿಯನ್ನುಂಟುಮಾಡುವುದು.

೨೫. ಮಾನವನು ಒಂದುವರ್ಷಕಾಲ ತ್ರಯೋದಶಿಯದಿನ ನಕ್ತಭೋಜನ ಮಾಡಿ ವರ್ಷಮುಗಿದ ಮೇಲೆ ಚಿನ್ನದಿಂದ ಅಶೋಕಪುಷ್ಪವನ್ನು ಮಾಡಿಸಬೇಕು. ಆ ತ್ರಯೋದಶೀದಿನದಲ್ಲಿಯೋ.

ಸಂವತ್ಸರಾಂತೇ ತಸ್ಮಿನ್ವಾ ದಿವಸೇ ವಿಘ್ನವರ್ಜಿತಂ ।
ಅಶೋಕಂ ಕಾಂಚನಂ ದದ್ಯಾತ್ಸದ್ವಸ್ತ್ರಯುಗಸಂಶ್ರಿತಂ ॥ ೨೬ ॥

ವಿಪ್ರಾಯ ವಸುಸಂಯುಕ್ತಂ ಪ್ರದ್ಯುಮ್ನಃ ಪ್ರೀಯತಾಮಿತಿ ।
ಕಲ್ಪಂ ವಿಷ್ಣುಪದೇ ಸ್ಥಿತ್ವಾ ವಿಶೋಕಃ ಸ್ಯಾತ್ಪುನರ್ನೃಪ ॥ ೨೭ ॥

ಏತತ್ಕಾಮವ್ರತಂ ನಾಮ ಸರ್ವಶೋಕವಿನಾಶನಂ ।
ಆಷಾಢಾದಿಚತುರ್ಮಾಸಂ ವರ್ಜಯೇನ್ನಖಕರ್ತನಂ ॥ ೨೮ ॥

ವೃಂತಾಕಭಕ್ಷಣಂ ಚೈವ ಮಧುಸರ್ಪಿರ್ಘಟಾನ್ವಿತಂ ।
ಕಾರ್ತಿಕ್ಯಾಂ ತು ಪುನರ್ಹೈಮಂ ಬ್ರಾಹ್ಮಣಾಯ ನಿವೇದಯೇತ್ ॥೨೯॥

---

೨೬. ಅಥವಾ ವ್ಯತೀಪಾತಾದಿದೋಷಗಳು ಇನ್ನು ಯಾವ ವಿಘ್ನಗಳೂ ಇಲ್ಲದಿರುವ ದಿನದಲ್ಲೋ, ಒಂದುಜತೆ ಒಳ್ಳೆಯ ವಸ್ತ್ರ, ಅಶೋಕಪುಷ್ಪ ಇವನ್ನು ಯಥಾಶಕ್ತಿ ದಕ್ಷಿಣೆಯೊಡನೆ ಈ ದಾನದಿಂದ ಪ್ರದ್ಯುಮ್ನನಿಗೆ ಪ್ರೀತಿಯಾಗಲಿ ಎಂದು ಹೇಳಿ ದಾನಕೊಡಬೇಕು.

೨೭. ಹೀಗೆ ಮಾಡಿದರೆ ಒಂದುಕಲ್ಪಕಾಲ ವೈಕುಂಠದಲ್ಲಿ ವಾಸಿಸುವನು. ಅವನು ಸರ್ವದಾ ಶೋಕರಹಿತನಾಗುವನು. ಅಯ್ಯಾ ರಾಜನೇ! ಇದಕ್ಕೆ "**ಕಾಂಚನವ್ರತ**" ವೆಂದು ಹೆಸರು. ಇದು ಸಕಲ ದುಃಖಗಳನ್ನೂ ನಾಶಮಾಡ ತಕ್ಕ ಮಹಿಮೆಯುಳ್ಳದ್ದಾಗಿದೆ.

೨೮. ಆಷಾಢ, ಶ್ರಾವಣ, ಭಾದ್ರಪದ, ಆಶ್ವಯುಜ ಈ ನಾಲ್ಕು ತಿಂಗಳು ಗಳಲ್ಲಿ ಉಗುರುಗಳನ್ನು ಕತ್ತರಿಸಬಾರದು, ಬದನೆಯಕಾಯಿ ತಿನ್ನಬಾರದು, ಈ ನಿಯಮ ಮುಗಿದ ಮೇಲೆ ಆಚರಿಸುವ ವಿಧಾನವನ್ನು ಕೇಳು.

೨೯. ಕಾರ್ತಿಕಮಾಸದಲ್ಲಿ ಚಿನ್ನದ ಬಟ್ಟಲಿನಲ್ಲಿ ತುಪ್ಪ, ಜೇನುತುಪ್ಪ ಇದನ್ನು ತುಂಬಿ ಬ್ರಾಹ್ಮಣನಿಗೆ ದಾನಮಾಡಬೇಕು. ಈ ವ್ರತವನ್ನು "**ಶ್ರೀವ್ರತ**" ವೆಂದು ಹೇಳುವರು. ಈ ವ್ರತವನ್ನು ಆಚರಿಸಿದವರಿಗೆ ರುದ್ರಲೋಕ ಪ್ರಾಪ್ತಿಯಾಗುವುದು.

ರುದ್ರಲೋಕಮವಾಪ್ನೋತಿ ಶಿವವ್ರತಮಿದಂ ಸ್ಮೃತಂ ।
ಏವಂ ಪಂಚದಶೀಂ ಸ್ಮೃತ್ವಾ ಏಕಭಕ್ತೇನ ಮಾನವಃ ॥ ೩೦ ॥

ಸಂಪೂಜ್ಯ ಪೂರ್ಣಿಮಾಂ ದೇವೀಂ ಲಿಖಿತ್ವಾ ಚಂದನಾದಿನಾ ।
ತತಃ ಪಂಚಘಟಾನ್ಪೂರ್ಣಾನ್ಪಯೋದಧಿಘೃತೇನ-ಚ ॥
ಮಧುನಾ ಸಿತಖಂಡೇನ ಬ್ರಾಹ್ಮಣಾಯೋಪಪಾದಯೇತ್ ॥ ೩೧ ॥

ಮನೋರಥಾನ್ಪೂರಯಸ್ವ ಸಂಪೂರ್ಣಾನ್ಪೂರ್ಣಿಮಾಹ್ಯಸಿ ।
ಪಂಚಕುಂಭಪ್ರದಾನೇನ ಭೂತಾನಾಂ ತುಷ್ಟಿರಸ್ತು ಮೇ ॥
ದ್ವಿಜಾನೇವಂ ನಮಸ್ಕೃತ್ಯ ಸರ್ವಾನ್ಕಾಮಾನವಾಪ್ನುಯಾತ್ ॥ ೩೨ ॥

ಏತತ್ಪಂಚಘಟಂ ನಾಮ ವ್ರತಂ ಪುಷ್ಟಿಪ್ರದಾಯಕಮ್ ।
ವರ್ಜಯೇದ್ಯಸ್ತು ಪುಷ್ಪಾಣಿ ಹೇಮಂತಶಿಶಿರವ್ರತಂ ॥ ೩೩ ॥

---

೩೦. ಪೂರ್ಣಿಮೆಯದಿನ ಒಪ್ಪೊತ್ತು ಭೋಜನ ಮಾಡುತ್ತ ಯಾವಾಗಲೂ ಪೂರ್ಣಿಮಾದೇವಿಯನ್ನು ಧ್ಯಾನಮಾಡಬೇಕು. ಮತ್ತು ಪೂರ್ಣಿಮಾದೇವಿಯ ಪೂಜೆಯನ್ನು ಮಾಡುವವನಾಗಿ ಚಂದನ ಮುಂತಾದುವುಗಳಿಂದ ದೇವಿಯ ಆಕೃತಿಯನ್ನು ಬರೆಯಬೇಕು.

೩೧. ಬಳಿಕ ಐದು ಕಲಶಗಳನ್ನು ತಂದು ಅವುಗಳಲ್ಲಿ ಕ್ರಮವಾಗಿ ಹಾಲು, ಮೊಸರು, ತುಪ್ಪ, ಜೇನು, ಕಲ್ಲುಸಕ್ಕರೆ ಇವುಗಳನ್ನು ತುಂಬಿ, ದಕ್ಷಿಣೆ ಸಹಿತ ಬ್ರಾಹ್ಮಣನಿಗೆ ದಾನಮಾಡಬೇಕು.

೩೨. ಹೀಗೆ ದಾನಮಾಡುವಾಗ " ಎಲೌ ಪೂರ್ಣಿಮಾದೇವಿಯೇ ! ನನ್ನ ಮನೋರಥಗಳೆಲ್ಲವೂ ಸಂಪೂರ್ಣವಾಗಿ ನೆರವೇರುವಂತೆ ಮಾಡು. ಈ ಐದು ಕಲಶಗಳ ದಾನದಿಂದ ಪಂಚಭೂತಗಳಿಗೂ ತೃಪ್ತಿಯಾಗಲಿ" ಎಂದು ಹೇಳಿ ದಾನಕೊಟ್ಟು ಬ್ರಾಹ್ಮಣರಿಗೆ ನಮಸ್ಕರಿಸಿದರೆ ಸಕಲ ಇಷ್ಟಾರ್ಥಗಳೂ ಲಭಿಸುವುವು. ಪುಷ್ಟಿಯನ್ನುಂಟುಮಾಡುವ ಇದಕ್ಕೆ " **ಪಂಚಘಟೀವ್ರತ** " ವೆಂದು ಹೆಸರು.

೩೩-೩೪. ಮಾರ್ಗಶಿರ, ಪುಷ್ಯ, ಮಾಘ, ಫಾಲ್ಗುಣ ಈ ನಾಲ್ಕು ತಿಂಗಳುಗಳಲ್ಲಿ ಹೂವನ್ನು ಧರಿಸುವುದನ್ನು ಬಿಡುವೆನೆಂದು ನಿಯಮಮಾಡಬೇಕು. ಈ

**ಪುಷ್ಪತ್ರಯಂ ಚ ಫಾಲ್ಗುನ್ಯಾಂ ಕೃತ್ವಾ ಶಕ್ತ್ಯಾಥ ಕಾಂಚನಂ ।**
**ದದ್ಯಾದ್ದ್ವಿಕಾಲವೇಲಾಯಾಂ ಪ್ರೀಯೇತಾಂ ಶಿವಕೇಶವೌ　॥ ೩೪ ॥**

**ಶಿರಸ್ಸೌಗಂಧ್ಯಜನನಂ ಸದಾನಂದಕರಂ ನೃಣಾಂ ।**
**ಕೃತ್ವಾ ಪರಪದಂ ಯಾತಿ ಸೌಗಂಧ್ಯವ್ರತಮುತ್ತಮಂ　॥ ೩೫ ॥**

**ಫಾಲ್ಗುನಾದಿ ತೃತೀಯಾಯಾಂ ಲವಣಂ ಯಸ್ತು ವರ್ಜಯೇತ್ ।**
**ಸಮಾಪ್ತೇ ಶಯನಂ ದದ್ಯಾದ್ಗೃಹೇ ಸೋಪಸ್ಕರಾನ್ವಿತಂ　॥ ೩೬ ॥**

**ಸಂಪೂಜ್ಯ ವಿಪ್ರಮಿಥುನಂ ಭವಾನೀ ಪ್ರೀಯತಾಮಿತಿ ।**
**ಗೌರೀಲೋಕೇ ವಸೇತ್ಕಲ್ಪಂ ಸೌಭಾಗ್ಯವ್ರತಮುತ್ತಮಂ　॥ ೩೭ ॥**

---

ನಿಯಮ ಮುಗಿದ ಮೇಲೆ ಫಾಲ್ಗುಣಮಾಸದ ಕೊನೆಯಲ್ಲಿ, ತನಗೆ ಅನುಕೂಲವಿದ್ದಷ್ಟು ದ್ರವ್ಯದಲ್ಲಿ ತನಗೆ ಇಷ್ಟವಾದ ಮೂರುಬಗೆಯ ಹೂಗಳ ಆಕೃತಿಯನ್ನು ಚಿನ್ನದಲ್ಲಿ ಮಾಡಿಸಿ, ಒಂದು ಶುಭದಿವಸದಲ್ಲಿ ಬ್ರಾಹ್ಮಣನನ್ನು ಕರೆದು, ಭಕ್ತಿಯಿಂದ ಪೂಜಿಸಿ "ಈ ದಾನದಿಂದ ಶಿವ, ಕೇಶವ ಇವರಿಬ್ಬರೂ ಸುಪ್ರೀತರಾಗಲಿ" ಎಂದು ಹೇಳಿ ಬ್ರಾಹ್ಮಣನಿಗೆ ದಾನಮಾಡಬೇಕು.

೩೫. ಈ ವ್ರತಕ್ಕೆ "**ಸೌಗಂಧ್ಯವ್ರತ**" ವೆಂದು ಹೆಸರಾಗಿದೆ. ಇದನ್ನು ಆಚರಿಸಿದವರಿಗೆ ತಲೆಯಲ್ಲಿ ಸದಾ ಸುಗಂಧವುಂಟಾಗಿ ಆನಂದವುಂಟಾಗುವುದು. ಅಲ್ಲದೆ ಕೊನೆಗೆ ಉತ್ತಮವಾದ ಗತಿಯು ಲಭಿಸುವುದು.

೩೬. ಫಾಲ್ಗುಣಮಾಸದ ತದಿಗೆಯ ತಿಥಿ ಮೊದಲ್ಗೊಂಡು, ತನ್ನಿಂದ ಸಾಧ್ಯವಾಗುವಷ್ಟು ತದಿಗೆಯ ದಿನಗಳಲ್ಲಿ, ಉಪ್ಪನ್ನು ಉಪಯೋಗಿಸದೆ ಆಹಾರವನ್ನು ಸೇವಿಸುತ್ತಾ, ತಾನು ಸಂಕಲ್ಪಿಸಿದ್ದಷ್ಟು ದಿನದ ನಿಯಮ ತೀರಿದನಂತರ. ಬ್ರಾಹ್ಮಣದಂಪತಿಗಳನ್ನು ಆಹ್ವಾನಿಸಿ, ಭಕ್ತಿಯಿಂದ ಸತ್ಕರಿಸಿ, ಸಕಲ ಪರಿಕರಗಳೊಡನೆ ಶಯ್ಯಾದಾನಮಾಡಬೇಕು.

೩೭. "ಈ ದಾನದಿಂದ ಭವಾನಿಯು ಸುಪ್ರೀತಳಾಗಲಿ" ಎಂದು ಹೇಳಿ ದಾನಕೊಡಬೇಕು. ಹೀಗೆ ಮಾಡಿದರೆ ಆ ವ್ರತಮಹಿಮೆಯಿಂದ ಗೌರೀಲೋಕದಲ್ಲಿ ಒಂದು ಕಲ್ಪದವರೆಗೆ ವಾಸಮಾಡುವನು. ಉತ್ತಮವಾದ ಈ ವ್ರತಕ್ಕೆ "**ಸೌಭಾಗ್ಯವ್ರತ**" ವೆಂದು ಹೆಸರಾಗಿದೆ.

ಸಂಧ್ಯಾಮೌನಂ ನರಃ ಕೃತ್ವಾ ಸಮಾಪ್ತೇ ಘೃತಕುಂಭದಃ ।
ವಸ್ತ್ರಯುಗ್ಮಂ ಚ ಘಂಟಾಂ ಚ ಬ್ರಾಹ್ಮಣಾಯ ನಿವೇದಯೇತ್ ॥ ೩೮ ॥

ಸಾರಸ್ವತಂ ಪದಂ ಯಾತಿ ಪುನರಾವೃತ್ತಿದುರ್ಲಭಂ ।
ಏತತ್ಸಾರಸ್ವತಂ ನಾಮ ರೂಪವಿದ್ಯಾಪ್ರದಾಯಕಂ ॥ ೩೯ ॥

ಲಕ್ಷ್ಮೀಮಭ್ಯರ್ಚ್ಯ ಪಂಚಮ್ಯಾಮುಪವಾಸೀ ಭವೇನ್ನರಃ ।
ಸಮಾಪ್ತೇ ಹೇಮಕಮಲಂ ದದ್ಯಾದ್ಧೇನುಸಮನ್ವಿತಂ ॥ ೪೦ ॥

ಸ ವೈಷ್ಣವಂ ಪದಂ ಯಾತಿ ಲಕ್ಷ್ಮೀಃ ಸ್ಯಾಜ್ಜನ್ಮಜನ್ಮನಿ ।
ಏತಲ್ಲಕ್ಷ್ಮೀವ್ರತಂ ನಾಮ ದುಃಖಶೋಕವಿನಾಶನಂ ॥ ೪೧ ॥

---

೩೮. ಸಂಧ್ಯಾಕಾಲಗಳಲ್ಲಿ ಮೌನದಿಂದಿದ್ದು ಸಂಕಲ್ಪಿಸಿದಷ್ಟು ದಿನದ ನಿಯಮ ಮುಗಿದನಂತರ ಘೃತಕುಂಭ, ಒಂದುಜತೆ ವಸ್ತ್ರ, ಒಂದು ಘಂಟೆ ಇವನ್ನು ಬ್ರಾಹ್ಮಣನಿಗೆ ದಾನಕೊಡಬೇಕು. ಹೀಗೆ ಮಾಡಿದರೆ ಪುನರಾವೃತ್ತಿ ರಹಿತವಾದ ಸರಸ್ವತೀಲೋಕವನ್ನು ಪಡೆಯುತ್ತಾನೆ.

೩೯. ಶ್ರೇಷ್ಠವಾದ ಈ ವ್ರತಕ್ಕೆ " **ಸಾರಸ್ವತವ್ರತ** " ವೆಂದು ಹೆಸರಾಗಿದೆ. ಈ ವ್ರತಾನುಷ್ಠಾನಮಾಡುವವರಿಗೆ ವಿದ್ಯಾಭಿವೃದ್ಧಿ, ರೂಪಸಂಪತ್ತಿ ಇವು ಲಭಿಸುವುವು.

೪೦. ಪ್ರತಿ ಪಂಚಮಿಯ ದಿನವೂ ಮಾನವನು ಲಕ್ಷ್ಮಿಯ ಧ್ಯಾನ ಮಾಡುತ್ತಾ ಉಪವಾಸದಿಂದಿರಬೇಕು. ತಾನು ಸಂಕಲ್ಪಿಸಿದಷ್ಟು ಕಾಲ ಈ ನಿಯಮ ಮುಗಿದ ಮೇಲೆ ಒಂದು ಗೋವನ್ನೂ ಒಂದು ಚಿನ್ನದ ಕಮಲವನ್ನೂ ಬ್ರಾಹ್ಮಣನಿಗೆ ದಾನಕೊಡಬೇಕು.

೪೧. ಹೀಗೆ ವ್ರತಾನುಷ್ಠಾನಮಾಡಿದವನಿಗೆ ವಿಷ್ಣುಲೋಕ ಪ್ರಾಪ್ತಿಯಾಗುವುದು. ಅಲ್ಲದೆ ಪ್ರತಿ ಜನ್ಮದಲ್ಲಿಯೂ ಐಶ್ವರ್ಯಯುಕ್ತನಾಗುವನು. ಈ ವ್ರತಕ್ಕೆ " **ಲಕ್ಷ್ಮೀವ್ರತ** " ವೆಂದು ಹೆಸರು. ಇದು ಸಕಲ ದುಃಖಗಳನ್ನೂ ನಿವಾರಣ ಮಾಡುವ ಮಹಿಮೆಯುಳ್ಳದ್ದಾಗಿದೆ.

ಯಾ ತು ನಾರೀ ಪಿಬೇತ್ತೋಯಂ ಜಲಧಾರಾಂ ಪ್ರಪೂಜಯೇತ್ ।
ಸಮಾಪ್ತೇ ಘೃತಸಂಪೂರ್ಣಾಂ ದದ್ಯಾದ್ವರ್ದ್ಧಂತಿಕಾಂ ನವಾಂ ॥ ೪೨ ॥

ಏತದ್ಧಾರಾವ್ರತಂ ನಾಮ ಕಾಂತಿಸೌಭಾಗ್ಯಜನನಂ ।
ಸಪತ್ನೀದರ್ಪನಾಶನಂ ಸರ್ವರೋಗಹರಂ ಪರಂ ॥ ೪೩ ॥

ಗೌರೀಸಮನ್ವಿತಂ ರುದ್ರಂ ಲಕ್ಷ್ಮ್ಯಾ ಸಹ ಜನಾರ್ದನಂ ।
ರಾಜ್ಞೀಸಮನ್ವಿತಂ ಸೂರ್ಯಂ ಪ್ರತಿಷ್ಠಾಪ್ಯ ಯಥಾವಿಧಿ ॥ ೪೪ ॥

ಧೂಪಾಕ್ಷೇಪೇಣ ಸಹಿತಾಂ ಸುಘಂಟಾಂ ಪಾತ್ರಸಂಯುತಾಂ ।
ಯೋ ದದಾತಿ ದ್ವಿಜೇಂದ್ರಾಣಾಂ ಪುಷ್ಪೈರಭ್ಯರ್ಚ್ಯ ಪಾಂಡುರೈಃ ॥
ದಕ್ಷಿಣಾಸಹಿತಾಂ ಕೃತ್ವಾ ಪ್ರಣಮ್ಯ ಚ ವಿಸರ್ಜಯೇತ್ ॥ ೪೫ ॥

ಏತದ್ದೇಹವ್ರತಂ ನಾಮ ದಿವ್ಯದೇಹಪ್ರದಾಯಕಂ ॥ ೪೬ ॥

---

೪೨. ನಾರಿಯು ಮೇಲೆ ಉಕ್ತವಾದ ದಿನ, ಕೇವಲ ಜಲಪಾನಮಾಡುತ್ತಾ ಜಲಧಾರೆಯನ್ನು ಪೂಜೆಮಾಡಬೇಕು. ಉದ್ದಿಷ್ಟದಿವಸಪರ್ಯಂತ ಹೀಗೆ ನಡೆಯಿಸಿ, ನಿಯಮ ಪೂರೈಸಿದ ಮೇಲೆ ಘೃತಪೂರ್ಣವಾದ ಹೊಸಸ್ಥಾಲಿಯನ್ನು ವಿಪ್ರನಿಗೆ ದಾನಮಾಡಬೇಕು.

೪೩. ಇದಕ್ಕೆ "ಧಾರಾವ್ರತ" ವೆಂದು ಹೆಸರು. ಇದನ್ನು ಆಚರಿಸುವುದರಿಂದ ವ್ರತಾನುಷ್ಠಾತೃವಿಗೆ ಸರ್ವರೋಗಗಳೂ ನಿವಾರಣೆಯಾಗಿ ಕಾಂತಿ, ಸೌಭಾಗ್ಯ ಇವು ಲಭಿಸುವುವು. ಸವತಿಯಿದ್ದವರಿಗೆ ಆ ಸಂಬಂಧವಾದ ತೊಂದರೆಗಳು ಸ್ವಲ್ಪವೂ ಉಂಟಾಗುವುದಿಲ್ಲ.

೪೪. ಗೌರೀಸಮೇತನಾದ ರುದ್ರನನ್ನೂ, ಲಕ್ಷ್ಮೀಸಮೇತನಾದ ನಾರಾಯಣನನ್ನೂ, ರಾಜ್ಞೀಸಮೇತನಾದ ಸೂರ್ಯನನ್ನೂ ವಿಧಿಪ್ರಕಾರ ಪ್ರತಿಷ್ಠೆಮಾಡಿ, ಭಕ್ತಿಯುಕ್ತನಾಗಿ ಬಿಳಿಯ ಹೂವುಗಳಿಂದ ಪೂಜಿಸಬೇಕು.

೪೫. ಈ ವ್ರತಾಂಗವಾಗಿ ಒಂದು ಕಲಶ, ಒಂದು ಘಂಟೆ, ಒಂದು ಧೂಪಾರತಿ ಇವನ್ನು ದಕ್ಷಿಣಾ ಸಮೇತವಾಗಿ ಬ್ರಾಹ್ಮಣರಿಗೆ ದಾನಕೊಟ್ಟು ನಮಸ್ಕರಿಸಬೇಕು.

೪೬. ಬಳಿಕ ಆವಾಹನೆಮಾಡಿದ್ದ ದೇವರನ್ನು ವಿಸರ್ಜನೆ ಮಾಡಬೇಕು. ಈ ವ್ರತವು ದಿವ್ಯಶರೀರಪ್ರದವಾದ "ದೇಹವ್ರತ" ವೆಂದು ಪ್ರಸಿದ್ಧವಾಗಿರುವುದು.

ಕೃತ್ವೋಪಲೇಪನಂ ಶಂಭೋರಗ್ರತಃ ಕೇಶವಸ್ಯ ಚ ।
ಯಾವದ್ವ್ರತಂ ಸಮಾಪ್ಯೈತದ್ಧೇನುಂ ಚ ಸಜಲಾನ್ವಿತಾಂ ॥ ೪೭ ॥

ಜನ್ಮಾಯುತಂ ಸ ರಾಜಾ ಸ್ಯಾತ್ತತಃ ಶಿವಪುರೇ ವಸೇತ್ ।
ಏತಚ್ಛುಭವ್ರತಂ ನಾಮ ಬಹು ಕಲ್ಯಾಣಕಾರಕಮ್ ॥ ೪೮ ॥

ಅಶ್ವತ್ಥಂ ಭಾಸ್ಕರಂ ಗಂಗಾಂ ಪ್ರಣಮ್ಯೈವ ಚ ವಾಗ್ಯತಃ ।
ಏಕಭುಕ್ತಂ ನರಃ ಕುರ್ಯಾದಷ್ಟಚೈಕಂ ವಿಮತ್ಸರಃ ॥ ೪೯ ॥

ವ್ರತಾಂತೇ ವಿಪ್ರಮಿಥುನಂ ಪೂಜ್ಯ ಧೇನುತ್ರಯಾನ್ವಿತಂ ।
ವೃಕ್ಷಂ ಹಿರಣ್ಮಯಂ ದದ್ಯಾತ್ಸೋಽಶ್ವಮೇಧಫಲಂ ಲಭೇತ್ ॥ ೫೦ ॥

---

೪೭. ಶಿವನ ಸಮ್ಮುಖದಲ್ಲಿಯೂ, ಕೇಶವನ ಸಮ್ಮುಖದಲ್ಲಿಯೂ ನಿತ್ಯವೂ ನಿಯಮದಿಂದ ಸಾರಿಸುತ್ತಾ, ಸಂಕಲ್ಪಮಾಡಿಕೊಂಡಿದ್ದಷ್ಟು ದಿನ ನಿಯಮವನ್ನು ನಡೆಯಿಸಿ, ಬಳಿಕ ಜಲಪೂರ್ಣವಾದ ಕುಂಭವನ್ನೂ, ಒಂದು ಗೋವನ್ನೂ ದಾನ ಮಾಡಬೇಕು.

೪೮. ಹೀಗೆ ನಿಯಮದಿಂದ ವ್ರತಮಾಡಿದರೆ ಹತ್ತು ಸಾವಿರ ಜನ್ಮಗಳಲ್ಲಿ ಸಹ ರಾಜನಾಗಿಯೇ ಇರುತ್ತಾ ಬಳಿಕ ಶಿವಲೋಕವನ್ನು ಹೊಂದಿ ಅಲ್ಲಿಯೇ ಸ್ಥಿರವಾಗಿ ವಾಸಿಸುವನು. ಈ ವ್ರತವು ಸರ್ವಕಲ್ಯಾಣಪ್ರದವಾದ್ದು. ಈ ವ್ರತಕ್ಕೆ " **ಶುಭವ್ರತ** " ವೆಂದು ಹೆಸರಾಗಿದೆ.

೪೯. ಮಾನವನು ನಿರ್ಮತ್ಸರತೆಯಿಂದ ಕೂಡಿ ವಾಙ್ನಿಯಮವುಳ್ಳವನಾಗಿ ಒಂಭತ್ತುದಿನಗಳು ನಿತ್ಯವೂ ಸೂರ್ಯನಿಗೂ, ಗಂಗೆಗೂ, ಅಶ್ವತ್ಥವೃಕ್ಷಕ್ಕೂ ನಮಸ್ಕಾರ ಮಾಡಬೇಕು. ಮತ್ತು ಆ ಎಲ್ಲ ದಿನವೂ ನಕ್ತಭೋಜನವನ್ನೇ ಮಾಡಬೇಕು. ಹೀಗೆ ನಿಯಮ ಮುಗಿದ ಮೇಲೆ ಬ್ರಾಹ್ಮಣ ದಂಪತಿಗಳನ್ನು ಪೂಜಿಸಿ ಮೂರು ಹಸುಗಳನ್ನೂ, ಸುವರ್ಣದ ಅಶ್ವತ್ಥವೃಕ್ಷಪ್ರತಿಮೆಯನ್ನೂ ಆ ಬ್ರಾಹ್ಮಣ ದಂಪತಿಗಳಿಗೆ ದಾನಮಾಡಿ ನಮಸ್ಕಾರ ಮಾಡಬೇಕು.

೫೦. ಹೀಗೆ ಮಾಡಿದರೆ ಅಶ್ವಮೇಧಯಾಗ ಮಾಡಿದಷ್ಟು ಫಲ ಲಭಿಸುವುದು ಅಲ್ಲದೆ ದೇಹಾವಸಾನದಲ್ಲಿ ಸ್ವರ್ಗವನ್ನು ಸೇರಿ ಅಲ್ಲಿ ದಿವ್ಯವಿಮಾನದಲ್ಲಿ ಸಂಚರಿಸುತ್ತಾ ಅಪ್ಸರಸ್ತ್ರೀ ಸಮೂಹದಿಂದ ಸೇವಿಸಲ್ಪಡುತ್ತಾನೆ.

ದಿವಿ ದಿವ್ಯವಿಮಾನಸ್ಥಃ ಸೇವ್ಯತೇಽಪ್ಸರಸಾಂ ಗಣೈಃ ।
ಏತತ್ಕೀರ್ತಿವ್ರತಂ ನಾಮ ಭೂತಿಕೀರ್ತಿಫಲಪ್ರದಂ ॥ ೫೧ ॥

ಘೃತೇನ ಸ್ನಪನಂ ಕೃತ್ವಾ ಶಂಭೋರ್ವಾ ಕೇಶವಸ್ಯ ಚ ।
ಬ್ರಾಹ್ಮಣೋ ಭಾಸ್ಕರಸ್ಯಾಪಿ ಗೌರ್ಯಾ ಲಂಬೋದರಸ್ಯ ವಾ ॥ ೫೨ ॥

ಅಕ್ಷತೈಸ್ತು ಸಮಂ ಕುರ್ಯಾತ್ಪದ್ಮಂ ಗೋಮಯಮಂಡಲೇ ।
ಸಮಾಪ್ಯ ಹೇಮಕಮಲಂ ತಿಲಧೇನುಸಮನ್ವಿತಂ ॥ ೫೩ ॥

ಶುದ್ಧಮಷ್ಟಾಂಗುಲಂ ದದ್ಯಾಚ್ಛಿವಲೋಕೇ ಮಹೀಯತೇ ।
ಸಾಮಗಾಯನತಶ್ಚೈತತ್ಸಾಮವ್ರತ ಮಿಹೋಚ್ಯತೇ ॥ ೫೪ ॥

ನವಮ್ಯಾಮೇಕಭಕ್ತಂ ತು ಕೃತ್ವಾ ಕನ್ಯಾಶ್ಚ ಶಕ್ತಿತಃ ।
ಭೋಜಯಿತ್ವಾ ಸಮಾದದ್ಯಾದ್ಧೈಮಕಂಚುಕವಾಸಸೀ ॥ ೫೫ ॥

---

೫೧. ಈ ವ್ರತಕ್ಕೆ "**ಕೀರ್ತಿವ್ರತ**" ವೆಂದು ಹೆಸರು. ಇದನ್ನು ಅನುಷ್ಠಾನ ಮಾಡಿದವರಿಗೆ ಕೀರ್ತಿ, ಐಶ್ವರ್ಯ ಇವುಗಳು ಯಥೇಚ್ಛವಾಗಿ ಲಭ್ಯವಾಗುವುವೆಂದು ಪ್ರಸಿದ್ಧವಾಗಿದೆ.

೫೨–೫೩. ಬ್ರಾಹ್ಮಣನು ಶಿವ, ಕೇಶವ, ಸೂರ್ಯ, ಗೌರಿ, ಲಂಬೋದರ ಇವರಲ್ಲಿ ಯಾರಿಗೇ ಆಗಲಿ ಘೃತಾಭಿಷೇಕ ಮಾಡಿಸಿ, ತತ್ಪೂರ್ವವಾಗಿ ಗೋಮಯದಿಂದ ಸಾರಿಸಿರುವ ಸ್ಥಳದಲ್ಲಿ ಸಮವಾದ ಎಸಳುಗಳುಳ್ಳಂತೆ ಒಂದು ಪದ್ಮಮಂಡಲವನ್ನು ಅಕ್ಷತೆಗಳಿಂದ ರಚಿಸಬೇಕು. ಈ ಮಂಡಲದಲ್ಲಿ ಉದ್ದಿಷ್ಟವಾದ ದೇವರನ್ನು ಆವಾಹಿಸಿ ಪೂಜಿಸಬೇಕು.

೫೪. ಸಂಕಲ್ಪಮಾಡಿದಷ್ಟು ದಿನದ ವ್ರತನಿಯಮವು ಮುಗಿದನಂತರ ಒಂದು ಗೋವು, ಒಂದು ತಿಲಪಾತ್ರ, ಎಂಟು ಅಂಗುಲಪ್ರಮಾಣವುಳ್ಳಂತೆ ಮಾಡಿಸಿದ ಒಂದು ಸುವರ್ಣಕಮಲ, ಇವನ್ನು ಬ್ರಾಹ್ಮಣೋತ್ತಮನಿಗೆ ದಾನ ಮಾಡಬೇಕು. ಸಾಮವೇದಗಾನಪೂರ್ವಕವಾಗಿ ಇದನ್ನು ಆಚರಿಸಬೇಕಾದುದರಿಂದ ಇದಕ್ಕೆ "**ಸಾಮವ್ರತ**" ವೆಂದು ಹೆಸರಾಗಿದೆ.

೫೫. ನವಮಿಯ ದಿನ ಒಪ್ಪೊತ್ತು ಭೋಜನ ಮಾಡುವವನಾಗಿ, ತತ್ಪೂರ್ವವಾಗಿ ತನ್ನ ಅನುಕೂಲವಿದ್ದಷ್ಟು ಮಂದಿ ಕನ್ಯೆಯರಿಗೆ ಭೋಜನ ಮಾಡಿಸಿ, ಅವರಿಗೆ ಜರತಾರಿ ಕುಪ್ಪಸ, ಸೀರೆ ಇವುಗಳನ್ನು ದಾನಮಾಡಬೇಕು.

ಹೈಮಂ ಚ ಸಿಂಹಂ ವಿಪ್ರಾಯ ದತ್ವಾ ಶಿವಪುರಂ ವ್ರಜೇತ್ ।
ಭವಾರ್ಬುದಂ ಸುರೂಪಶ್ಚ ಶತ್ರುಭಿಶ್ಚಾಪರಾಜಿತಃ ॥ ೫೬ ॥

ಏತದ್ವೀರವ್ರತಂ ನಾಮ ನಾರೀಣಾಂ ಚ ಸುಖಪ್ರದಂ ।
ಯಾವತ್ಸಮಾರಭೇದ್ಯಸ್ತು ಪಂಚದಶ್ಯಾಂ ಪಯೋವ್ರತಃ ॥ ೫೭ ॥

ಸಮಾಪ್ತೇ ಶ್ರದ್ಧಯಾ ದದ್ಯಾದ್ಗಾಶ್ಚ ಪಂಚ ಪಯಸ್ವಿನೀಃ ।
ವಾಸಾಂಸಿ ಚ ಪಿಶಂಗಾನಿ ಜಲಕುಂಭಯುತಾನಿ ಚ ॥ ೫೮ ॥

ಸ ಯಾತಿ ವೈಷ್ಣವಂ ಲೋಕಂ ಪಿತ್ರ್ಯಾಣಾಂ ತಾರಯೇಚ್ಛತಂ ।
ಕಲ್ಪಾಂತೇ ರಾಜರಾಜಃ ಸ್ಯಾತ್ಪಿತೃವ್ರತಮಿದಂ ಸ್ಮೃತಂ ॥ ೫೯ ॥

---

೫೬. ಅಲ್ಲದೆ ಚಿನ್ನದಲ್ಲಿ ಸಿಂಹದ ಪ್ರತಿಮೆಯನ್ನು ಮಾಡಿಸಿ, ಬ್ರಾಹ್ಮಣನಿಗೆ ದಾನಮಾಡಬೇಕು. ಇದರಿಂದ ವ್ರತಾನುಷ್ಠಾತೃವಿಗೆ ಶಿವಲೋಕ ಪ್ರಾಪ್ತಿಯಾಗುವುದು. ಅಲ್ಲದೆ ಸುಂದರ ರೂಪವುಳ್ಳವನಾಗಿ ಯಾರಿಂದಲೂ ಪರಾಜಯಹೊಂದದೆ ಒಂದು ಅರ್ಬುದ ವರ್ಷಕಾಲ ಬಾಳುವನು.

೫೭. ಈ ವ್ರತಕ್ಕೆ "ವೀರವ್ರತ" ವೆಂದು ಹೆಸರು. ಇದು ಸ್ತ್ರೀಯರಿಗೆ ಸುಖಪ್ರದವಾದ ವ್ರತವಾಗಿದೆ. ಹುಣ್ಣಿಮೆಯ ದಿನ ಕೇವಲ ಕ್ಷೀರವನ್ನು ಪಾನ ಮಾಡತಕ್ಕ "ಪಯೋವ್ರತ" ವನ್ನು ಆರಂಭಿಸಬೇಕು.

೫೮. ಮನಸ್ಸಿನಲ್ಲಿ ಸಂಕಲ್ಪಮಾಡಿದಷ್ಟು ದಿನಗಳು ಈ ನಿಯಮವನ್ನು ನಡೆಯಿಸಿ, ನಿಯಮ ಮುಗಿದನಂತರ ಶ್ರದ್ಧೆಯಿಂದ ಹಾಲು ಕರೆಯುವ ಐದು ಹಸುಗಳು, ಜಲಪೂರ್ಣವಾದ ಒಂದು ಕಲಶ, ಹೊಂಬಣ್ಣದ ವಸ್ತ್ರಗಳು ಇವನ್ನು ಬ್ರಾಹ್ಮಣರಿಗೆ ದಾನಮಾಡಬೇಕು.

೫೯. ಹೀಗೆ ಆಚರಿಸುವುದರಿಂದ ವ್ರತಾನುಷ್ಠಾತೃವಿಗೆ ವಿಷ್ಣುಲೋಕ ಪ್ರಾಪ್ತಿಯಾಗುವುದು. ಅಲ್ಲದೆ ಆತನ ನೂರಾರು ಪಿತೃಗಳೂ ಉದ್ಧಾರವಾಗುವರು. ಮತ್ತು ಆತನು ಕಲ್ಪಾಂತ ಪರ್ಯಂತ ರಾಜಾಧಿರಾಜನಾಗಿ ಶೋಭಿಸುವನು. ಈ ವ್ರತಕ್ಕೆ "ಪಿತೃವ್ರತ" ವೆಂಬ ಹೆಸರು ಪ್ರಸಿದ್ಧವಾಗಿದೆ.

ತಾಂಬೂಲಂ ಸಮಯೇ ನಿತ್ಯಂ ಗೌರೀಪುತ್ರಂ ದದಾತಿ ಯಾ ।
ಪೂಗಚೂರ್ಣಸಮಾಯುಕ್ತಂ ನಾರೀವಾ ಪುರುಷೋಽಪಿ ವಾ ॥ ೬೦ ॥

ವರ್ಷಸ್ಯಾಂತೇ ತು ಸೌವರ್ಣಂ ಕಾರಯಿತ್ವಾ ಫಲಾನ್ವಿತಂ ।
ಮುಕ್ತಾಫಲಮಯಂ ಚೂರ್ಣತ್ರಿತಯಂ ಯಾ ಪ್ರಯಚ್ಛತಿ ॥ ೬೧ ॥

ನ ಸಾ ಪ್ರಾಪ್ನೋತಿ ದೌರ್ಭಾಗ್ಯಂ ನ ದೌರ್ಗಂಧ್ಯಂ ಮುಖಸ್ಯ ಚ ।
ಏತತ್ಪತ್ರವ್ರತಂ ನಾಮ ಸೌಗಂಧ್ಯಜನನಂ ಪರಂ ॥ ೬೨ ॥

ಚೈತ್ರಾದಿ ಚತುರೋ ಮಾಸಾಞ್ಜಲಂ ಕುರ್ಯಾದಯಾಚಿತಂ ।
ಜ್ಯೇಷ್ಠಾಷಾಢೇ ಚ ವಾ ಮಾಸಂ ಪಕ್ಷಂ ವಾ ಪಾಂಡುನಂದನ ॥ ೬೩ ॥

---

೬೦. ವೀಳೆಯದೆಲೆ, ಅಡಕೆಯಪುಡಿ, ಸುಣ್ಣ ಇವು ಸೇರಿಸಿದ ತಾಂಬೂಲವು ಗೌರೀಪುತ್ರ ಸದೃಶವಾದುದು. ಪುರುಷನಾಗಲಿ, ಸ್ತ್ರೀಯಾಗಲಿ, ಒಂದು ವರ್ಷ ಕಾಲ ನಿತ್ಯವೂ ಸಕಾಲದಲ್ಲಿ ತಾಂಬೂಲ ದಾನಮಾಡಬೇಕು.

೬೧. ಈ ಪ್ರಕಾರ ಒಂದು ವರ್ಷ ಮುಗಿದನಂತರ ಕೊನೆಯಲ್ಲಿ ಚಿನ್ನ ದಿಂದ ಮಾಡಿದ ಪೂರ್ಣಫಲ ಸಮೇತವಾದ ವೀಳೆಯವೆಲೆಯನ್ನು, ಮುಕ್ತಾಫಲ ಮಯವಾದ ಮೂರು ಚೂರು ಸುಣ್ಣವನ್ನು ದಾನಮಾಡಬೇಕು.

೬೨. ಈ ರೀತಿ ದಾನಮಾಡಿದ ಸ್ತ್ರೀಯು ಎಂದಿಗೂ ಅಮಂಗಳವನ್ನು ಪಡೆಯದೆ ಸೌಭಾಗ್ಯವತಿಯಾಗಿಯೇ ಇರುವಳಲ್ಲದೆ, ಮುಖದಲ್ಲಿ ದುರ್ಗಂಧಾದಿಗಳು ಎಂದೂ ಉಂಟಾಗುವುದಿಲ್ಲ. ಈ ವ್ರತಕ್ಕೆ "ಪತ್ರವ್ರತ" ವೆಂದು ಹೆಸರು. ಇದು ಸುಗಂಧಜನಕವೆಂದು ಪ್ರಸಿದ್ಧವಾಗಿದೆ.

೬೩. ಚೈತ್ರ, ವೈಶಾಖ, ಜ್ಯೇಷ್ಠ, ಆಷಾಢ, ಈ ನಾಲ್ಕು ತಿಂಗಳುಗಳಲ್ಲಿ ಅಯಾಚಿತವಾದ ಜಲವನ್ನು ದಾನಮಾಡಬೇಕು. ಎಲೈ ಪಾಂಡವನೇ! ಅಷ್ಟು ತಿಂಗಳೂ ಮಾಡಲು ಅನುಕೂಲವಾಗದಿದ್ದರೆ ಜ್ಯೇಷ್ಠ, ಆಷಾಢ ಎರಡು ತಿಂಗಳಾಗಲಿ, ಅದೂ ಸಾಧ್ಯವಾಗದಿದ್ದರೆ ಒಂದು ಪಕ್ಷ (೧೫ ದಿನ) ವಾಗಲಿ ಜಲದಾನ ಮಾಡಬೇಕು.

ವ್ರತಾಂತೇ ಮಾಣಿಕಂ ದದ್ಯಾದನ್ನವಸ್ತ್ರಸಮನ್ವಿತಂ |
ಘೃತೇನ ಸಹಿತಂ ತದ್ವತ್ಸಪ್ತಧಾನ್ಯಸಮನ್ವಿತಂ || ೬೪ ||

ತಿಲಪಾತ್ರಂ ಹಿರಣ್ಯಂ ಚ ಬ್ರಹ್ಮಲೋಕೇ ಮಹೀಯತೇ |
ಕಲ್ಪಾಂತೇ ರಾಜರಾಜಃ ಸ್ಯಾದ್ವಾರಿವ್ರತ ಮಿಹೋಚ್ಯತೇ || ೬೫ ||

ಪಂಚಾಮೃತೇನ ಸ್ನಪನಂ ಕೃತ್ವಾ ವಿಷ್ಣೋಃ ಶಿವಸ್ಯ ಚ |
ವತ್ಸರಾಂತೇ ಪುನರ್ದದ್ಯಾದ್ಧೇನುಂ ಪಂಚಾಮೃತೈರ್ಯುತಾಂ || ೬೬ ||

ವಿಪ್ರಾಯ ಕನಕಂ ಶಂಖಂ ಸ ಪದಂ ಯಾತಿ ಶಾಂಕರಂ |
ರಾಜಾ ಭವತಿ ಕಲ್ಪಾಂತೇ ವೃತ್ತಿವ್ರತಮಿಹೋಚ್ಯತೇ || ೬೭ ||

---

೬೪. ಈ ವ್ರತ ಮುಗಿದ ಮೇಲೆ, ಅನ್ನ ಮತ್ತು ವಸ್ತ್ರದಾನಗಳನ್ನೂ, ಮತ್ತು (ಮಾಣಿಕ್ಯ) ರತ್ನವನ್ನೂ ಬ್ರಾಹ್ಮಣನಿಗೆ ಕೊಡಬೇಕು. ಅಲ್ಲದೆ ತುಪ್ಪ ಮತ್ತು ಸಪ್ತಧಾನ್ಯ ಇವುಗಳೊಡನೆ ತಿಲಪಾತ್ರೆಯನ್ನೂ ಚಿನ್ನವನ್ನೂ ದಾನಮಾಡಬೇಕು.

೬೫. ಹೀಗೆ ಮಾಡಿದರೆ ವ್ರತಕರ್ತೃವು ಒಂದು ಕಲ್ಪ ಮುಗಿಯುವವರೆಗೂ ಬ್ರಹ್ಮಲೋಕದಲ್ಲಿದ್ದು, ಕಲ್ಪಾಂತದಲ್ಲಿ ರಾಜಾಧಿರಾಜನಾಗುವನು. ಈ ವ್ರತಕ್ಕೆ " **ವಾರಿವ್ರತ** " ವೆಂದು ಹೆಸರು.

೬೬. ವಿಷ್ಣುವಿಗೂ, ಶಿವನಿಗೂ, ಒಂದು ವರ್ಷ ಪರ್ಯಂತ ಪಂಚಾಮೃತಾಭಿಷೇಕ ಮಾಡುತ್ತಾ, ವರ್ಷದ ಕೊನೆಯಲ್ಲಿ ಪಂಚಾಮೃತ ದ್ರವ್ಯಗಳೆನಿಸಿದ ಹಾಲು, ಮೊಸರು, ತುಪ್ಪ, ಜೇನು, ಸಕ್ಕರೆ ಇವುಗಳನ್ನೂ.

೬೭. ಮತ್ತು ಚಿನ್ನದಿಂದ ಮಾಡಿದ ಶಂಖವನ್ನೂ, ಮತ್ತು ಒಂದು ಕರೆಯುವ ಹಸುವನ್ನೂ ಬ್ರಾಹ್ಮಣನಿಗೆ ದಾನಮಾಡಬೇಕು. ಹೀಗೆ ಮಾಡಿದರೆ ಅವನಿಗೆ ಶಿವಲೋಕ ಪ್ರಾಪ್ತಿಯಾಗುವುದು. ಅಲ್ಲದೆ ಒಂದು ಕಲ್ಪಕಾಲ ಅಲ್ಲಿಯೇ ಇದ್ದು ಬಳಿಕ ಭೂಲೋಕದಲ್ಲಿ ಜನಿಸಿ ರಾಜನಾಗುವನು. ಇದಕ್ಕೆ "**ವೃತ್ತಿವ್ರತ**" ವೆಂದು ಹೆಸರು.

ಯೋ ಹಿಂಸಾಂ ವರ್ಜಯಿತ್ವಾ ತು ಮಾಸಂ ಸಂವತ್ಸರಂ ತಥಾ ।
ವ್ರತಾಂತೇ ಹೇಮಹರಿಣಂ ಕೃತ್ವಾ ಶಕ್ತ್ಯಾ ವಿಚಕ್ಷಣಃ ॥ ೬೮ ॥

ತದ್ವತ್ಸವತ್ಸಾಂ ಗಾಂ ದದ್ಯಾತೋಽಶ್ವಮೇಧಫಲಂ ಲಭೇತ್ ।
ಅಹಿಂಸಾವ್ರತಮಿತ್ಯೇತತ್ಸರ್ವಶಾಂತಿಪ್ರದಂ ನೃಣಾಂ ॥ ೬೯ ॥

ಮಾಘಮಾಸ್ಯುಷಸಿ ಸ್ನಾನಂ ಕೃತ್ವಾ ದಾಂಪತ್ಯಮರ್ಚಯೇತ್ ।
ಭೋಜಯಿತ್ವಾ ಯಥಾಶಕ್ತ್ಯಾ ಮಾಲ್ಯವಸ್ತ್ರವಿಭೂಷಣೈಃ ॥ ೭೦ ॥

ಸೌಭಾಗ್ಯಂ ಮಹದಾಪ್ನೋತಿ ಶರೀರಾರೋಗ್ಯಮುತ್ತಮಂ ।
ಸೂರ್ಯಲೋಕೇ ವಸೇತ್ಕಲ್ಪಂ ಸೂರ್ಯವ್ರತಮಿದಂ ಸ್ಮೃತಂ ॥ ೭೧ ॥

---

೬೮. ಒಂದು ತಿಂಗಳೋ ಅಥವಾ ಒಂದು ವರ್ಷವೋ ತನಗೆ ಸಾಧ್ಯವಾದಷ್ಟು ಕಾಲ ಹಿಂಸಾಕಾರ್ಯ ಮಾಡುವುದಿಲ್ಲವೆಂದು ಸಂಕಲ್ಪಿಸಿ, ಅದರಂತೆ ಆಚರಿಸುತ್ತಾ, ನಿಯಮದ ಅವಧಿ ಮುಗಿದನಂತರ ತನ್ನ ದ್ರವ್ಯಸಂಪತ್ತಿಗನುಸಾರ ಚಿನ್ನದಿಂದ ಜಿಂಕೆಯನ್ನು ಮಾಡಿಸಬೇಕು.

೬೯. ಆದನ್ನೂ ಹಾಲು ಕರೆಯುವ ಹಸುವನ್ನೂ ದಾನಮಾಡಬೇಕು. ಇದರಿಂದ ಅಶ್ವಮೇಧಯಾಗ ಮಾಡಿದಷ್ಟು ಫಲ ಬರುತ್ತದೆ. ಇದಕ್ಕೆ "ಅಹಿಂಸಾ ವ್ರತ" ವೆಂದು ಹೆಸರು. ಈ ವ್ರತವು ಮಾನವರಿಗೆ ಸಕಲ ಶಾಂತಿಯನ್ನೂ ಉಂಟುಮಾಡುವುದು.

೭೦. ಮಾಘಮಾಸದಲ್ಲಿ ಉಷಃಕಾಲದಲ್ಲಿ ಎದ್ದು ಸ್ನಾನಮಾಡಿ, ನಿತ್ಯವೂ ಬ್ರಾಹ್ಮಣ ದಂಪತಿಗಳಿಗೆ ಭೋಜನ ಮಾಡಿಸಬೇಕು. ಅನಂತರ ಅವರಿಗೆ ತನ್ನ ಶಕ್ತ್ಯನುಸಾರ ಹೂವು, ವಸ್ತ್ರ ಮತ್ತು ಅಲಂಕಾರ ಇವುಗಳನ್ನು ಸಮರ್ಪಿಸಿ ಪೂಜಿಸಬೇಕು.

೭೧. ಹೀಗೆ ಮಾಡಿದರೆ ವ್ರತಮಾಡಿದವರಿಗೆ ಮಹಾ ಸೌಭಾಗ್ಯವೂ ಉತ್ತಮವಾದ ಆರೋಗ್ಯ ಸಂಪತ್ತೂ ಲಭಿಸುವುವು. ಅಲ್ಲದೆ ದೇಹಾವಸಾನದಲ್ಲಿ ಸೂರ್ಯಲೋಕವನ್ನು ಸೇರಿ ಅಲ್ಲಿ ಒಂದು ಕಲ್ಪಾಂತದವರೆಗೆ ವಾಸಮಾಡುವರು. ಈ ವ್ರತವನ್ನು "ಸೂರ್ಯವ್ರತ" ವೆಂದು ಹೇಳುವರು.

**ಆಷಾಢಾದಿಚತುರ್ಮಾಸಂ ಪ್ರಾತಃಸ್ನಾಯೀ ಭವೇನ್ನರಃ ।**
**ವಿಪ್ರಾಯ ಭೋಜನಂ ದತ್ವಾತ್ಕಾರ್ತಿಕ್ಯಾಂ ಗೋಪ್ರದೋ ಭವೇತ್ ॥**

**ಘೃತಕುಂಭಂ ತತೋ ದತ್ವಾ ಸರ್ವಾನ್ಕಾಮಾನವಾಪ್ನುಯಾತ್ ॥ ೭೨ ॥**

**ವೈಷ್ಣವವ್ರತಮಿತ್ಯುಕ್ತಂ ವಿಷ್ಣುಲೋಕಮವಾಪ್ನುಯಾತ್ ॥ ೭೩ ॥**

**ಅಯನಾದಯನಂ ಯಾವದ್ವರ್ಜಯೇನ್ಮಧುಸರ್ಪಿಷೀ ।**
**ತದಂತೇ ಪುಣ್ಯದಾನಾನಿ ಘೃತಧೇನ್ವಾ ಸಹೈವ ತು ॥ ೭೪ ॥**

**ದತ್ವಾ ಶಿವಪದಂ ಯಾತಿ ದತ್ವಾ ತು ಘೃತಪಾಯಸಂ ।**
**ಏತಚ್ಛೀಲವ್ರತಂ ನಾಮ ಶೀಲಾರೋಗ್ಯಫಲಪ್ರದಂ ॥ ೭೫ ॥**

---

೭೨. ಆಷಾಢ, ಶ್ರಾವಣ, ಭಾದ್ರಪದ, ಆಶ್ವಯುಜ, ಈ ನಾಲ್ಕು ತಿಂಗಳಲ್ಲೂ ತಪ್ಪದೆ ಪ್ರಾತಃಕಾಲದಲ್ಲಿ ಸ್ನಾನಮಾಡುತ್ತಾ, ನಿತ್ಯವೂ ಬ್ರಾಹ್ಮಣನಿಗೆ ಭೋಜನಮಾಡಿಸಬೇಕು. ಅನಂತರ ಕಾರ್ತಿಕ ಮಾಸದಲ್ಲಿ ಬ್ರಾಹ್ಮಣನಿಗೆ ಒಂದು ಘೃತಪಾತ್ರೆಯನ್ನೂ, ಒಂದು ಗೋವನ್ನೂ ದಾನಕೊಡಬೇಕು.

೭೩. ಇದರಿಂದ ಸಕಲ ಇಷ್ಟಾರ್ಥಗಳೂ ಲಭಿಸುವುವು. ಈ ವ್ರತವು " **ವೈಷ್ಣವವ್ರತ** " ವೆಂಬದಾಗಿ ಪ್ರಸಿದ್ಧವಾಗಿದೆ. ಇದನ್ನು ಅನುಷ್ಠಾನಮಾಡಿದವರಿಗೆ ವಿಷ್ಣುಲೋಕವು ಪ್ರಾಪ್ತಿಯಾಗುವುದು.

೭೪. ಒಂದು ಅಯನ ಹುಟ್ಟುವ ಸಂಕ್ರಮಣದಿಂದ ಆರಂಭಿಸಿ ಆ ಅಯನ ಪೂರ್ತಿ ಎಂದರೆ ಇನ್ನೊಂದು ಅಯನ ಹುಟ್ಟುವ ಸಂಕ್ರಮಣ ಪರ್ಯಂತ ತುಪ್ಪ, ಜೇನುತುಪ್ಪ ಇವನ್ನು ಸೇವಿಸುವುದನ್ನು ವರ್ಜ್ಯಮಾಡಬೇಕು. ಈ ನಿಯಮ ಮುಗಿದ ಮೇಲೆ ಘೃತವನ್ನೂ ಒಂದು ಗೋವನ್ನೂ ಪುಣ್ಯಕರವಾದ ಇತರ ವಸ್ತುಗಳನ್ನೂ ದಾನಮಾಡಬೇಕು.

೭೫. ಅಲ್ಲದೆ ತುಪ್ಪದಿಂದ ಕರಿದ ಸೇವಿಗೆ ಪಾಯಸವನ್ನೂ ದಾನಮಾಡಬೇಕು. ಈ ವ್ರತವನ್ನಾಚರಿಸಿದವರಿಗೆ ಶಿವಲೋಕ ಪ್ರಾಪ್ತಿಯಾಗುವುದು. ಈ ವ್ರತಕ್ಕೆ " **ಶೀಲವ್ರತ** " ವೆಂದು ಹೆಸರಾಗಿದೆ. ಇದು ಇಹದಲ್ಲಿ ಒಳ್ಳೆಯ ನಡತೆಯನ್ನೂ, ಶರೀರಾರೋಗ್ಯವನ್ನೂ ಕೊಡುವುದೆಂದು ಪ್ರಸಿದ್ಧವಾಗಿದೆ.

ಸಂಧ್ಯಾದೀಪಪ್ರದೋ ಯಸ್ತು ಮಾಂಸಂ ತೈಲಂ ವಿವರ್ಜಯೇತ್ ।
ಸಮಾಪ್ತೇ ದೀಪಕಂ ದದ್ಯಾಚ್ಚಕ್ರಶೂಲೇ ಚ ಕಾಂಚನೇ ॥ ೭೬ ॥

ವಸ್ತ್ರಯುಗ್ಮಂ ಚ ವಿಪ್ರಾಯ ಸ ತೇಜಸ್ವೀ ಭವೇದ್ದೃಢಂ ।
ಏತದ್ದೀಪವ್ರತಂ ನಾಮ ಸದಾ ಕಾಂತಿಪ್ರದಾಯಕಂ ॥ ೭೭ ॥

ಏಕಭಕ್ತೇನ ಸಪ್ತಾಹಂ ಗೌರೀಂ ವಾ ಯಸ್ತು ಪೂಜಯೇತ್ ।
ಸಂಪೂಜ್ಯ ಪಾರ್ವತೀಂ ಭಕ್ತ್ಯಾ ಗಂಧಪುಷ್ಪವಿಲೇಪನೈಃ ॥ ೭೮ ॥

ತತಃ ಸುವಾಸಿನೀಭ್ಯಾಂ ತು ಕುಂಕುಮೇನ ವಿಲೇಪಯೇತ್ ।
ಪುಷ್ಪೈರ್ವಿಲೇಪಯೇಚ್ಛೈನಾಂ ಕರ್ಪೂರಾಗರುಚಂದನೈಃ ॥ ೭೯ ॥

---

೭೬. ಮಾನವನು ತನ್ನ ಸಾಧ್ಯತೆಯನ್ನು ನೋಡಿಕೊಂಡು ಇಷ್ಟುದಿನ ವೆಂಬದಾಗಿ ಮನಸ್ಸಂಕಲ್ಪ ಮಾಡಿ, ಅಷ್ಟು ದಿನಗಳವರೆಗೆ ಮಾಂಸ, ಎಣ್ಣೆ, ಇವುಗಳನ್ನು ಪಯೋಗಿಸುವುದನ್ನು ಬಿಡಬೇಕಲ್ಲದೆ, ಸಂಧ್ಯಾಕಾಲದಲ್ಲಿ ದೀಪ ದಾನ ಮಾಡಬೇಕು.

೭೭. ಸಂಕಲ್ಪಿಸಿದಷ್ಟುದಿನ ದಾನಮಾಡಿ ಆ ಬಳಿಕ, ಚಿನ್ನದ ಸೊಡಲನ್ನು ಮಾಡಿಸಿ, ದೀಪಸಮೇತ ಅದನ್ನೂ ಚಕ್ರ, ತ್ರಿಶೂಲ, ಒಂದು ಜತೆ ವಸ್ತ್ರ, ಇವುಗಳನ್ನೂ ಬ್ರಾಹ್ಮಣನಿಗೆ ದಾನಮಾಡಬೇಕು. ಇದನ್ನು ಅನುಷ್ಠಾನಮಾಡಿದವನು ತೇಜಸ್ವಿಯೂ, ದೃಢಕಾಯನೂ ಆಗುವನು. ಸರ್ವದಾ ಕಾಂತಿದಾಯಕವಾದ ಇದನ್ನು "**ದೀಪವ್ರತ**" ವೆಂದು ಹೇಳುವರು.

೭೮. ಒಂದು ವಾರದ ಪೂರ್ತ ಒಪ್ಪೊತ್ತೇ ಊಟಮಾಡುತ್ತಾ ಗೌರೀ, ಪಾರ್ವತಿ ಇವರಲ್ಲಿ ಯಾರನ್ನಾದರೂ (ತನ್ನ ಮನಸ್ಸಿಗೆ ಇಷ್ಟಪಾಗುವ ಹೆಸರಿನಲ್ಲಿ) ಗಂಧಲೇಪನ, ಪುಷ್ಪ ಇವುಗಳಿಂದ ಪೂಜಿಸಬೇಕು.

೭೯-೮೦. ಅನಂತರ ಇಬ್ಬರು ಸುವಾಸಿನಿಯರಿಂದ ಈ ದೇವಿಗೆ ಕುಂಕುಮ ಲೇಪನ ಮಾಡಿಬೇಕು. ಬಳಿಕ ಕರ್ಪೂರ, ಅಗಿಲು, ಚಂದನ, ಇವುಗಳಿಂದ ಪುನಃ ಲೇಪನ ಮಾಡಿ, ಹೂವನ್ನೂ ಅರ್ಪಿಸಿ, ಬಳಿಕ ತಾಂಬೂಲ, ತೆಂಗಿನ

ತಾಂಬೂಲಂ ಶೋಭನಂ ದತ್ವಾ ನಾರಿಕೇಲಫಲಂ ತಥಾ ।
ಪ್ರೀಯತಾಂ ಕುಮುದಾದೇವೀಂ ಪ್ರಣಿಪತ್ಯ ವಿಸರ್ಜಯೇತ್ ॥ ೮೦ ॥

ಏಕೈಕಾಂ ಪೂಜಯೇದ್ದೇವೀಂ ಸಪ್ತಾಹಂ ಯಾವದೇವ ತು ।
ಪುನಸ್ತು ಸಪ್ತಮೇ ಪೂರ್ಣೇ ತಾಃ ಸಪ್ತೈವ ನಿಮಂತ್ರಯೇತ್ ॥ ೮೧ ॥

ಷಡ್ರಸಂ ಭೋಜಯಿತ್ವಾ ತು ಯಥಾ ಶಕ್ತ್ಯಾ ವಿಭೂಷಣೈಃ ।
ಭೂಷಯಿತ್ವಾ ಮಾಲ್ಯವಸ್ತ್ರೈಃ ಕರ್ಣವೇಷ್ಟಾಂಗುಲೀಯಕೈಃ ॥ ೮೨ ॥

ಕುಮುದಾ ಮಾಧವೀ ಗೌರೀ ಭವಾನೀ ಪಾರ್ವತೀ ಉಮಾ ।
ಕಾಲೀ ಚ ದರ್ಪಣಂ ಹಸ್ತೇ ಪ್ರತ್ಯೇಕಂ ವಿನಿವೇದಯೇತ್ ॥ ೮೩ ॥

ಬ್ರಾಹ್ಮಣಂ ಪೂಜಯಿತ್ವೈಕಂ ವಾಚ್ಯಸ್ಸಂಪನ್ನಮಸ್ತು ತೇ ।
ಸಪ್ತ ಸುಂದರಕಂ ನಾಮ ವ್ರತಂ ಚೈತದ್ಯುಧಿಷ್ಠಿರ ॥ ೮೪ ॥

---

ಕಾಯಿ, ಇವನ್ನು "ಕುಮುದಾ ದೇವಿಗೆ ಪ್ರೀತಿಯಾಗಲಿ" ಎಂದು ನಮಸ್ಕರಿಸಿ ಸಮರ್ಪಿಸಬೇಕು.

೮೧. ಏಳು ದಿವಸಗಳಲ್ಲೂ ದಿನಕ್ಕೆ ಒಬ್ಬೊಬ್ಬ ದೇವಿಯಂತೆ ಆವಾಹನೆ ಮಾಡಿ ಪೂಜಿಸಬೇಕು. ಈ ಪ್ರಕಾರ ಕುಮುದಾ, ಮಾಧವೀ, ಗೌರೀ, ಭವಾನೀ, ಪಾರ್ವತೀ, ಉಮಾ, ಕಾಲೀ ಎಂಬ ಏಳು ದೇವಿಯರನ್ನೂ ಪೂಜಿಸಿದ ಮೇಲೆ.

೮೨. ದೇವೀಸ್ವರೂಪಿಣಿಯರಾದ ಏಳು ಮಂದಿ ಮುತ್ತೈದೆಯರನ್ನು ಆಹ್ವಾನಿಸಿ, ಷಡ್ರಸಭರಿತವಾದ ಭೋಜನ ಮಾಡಿಸಿ, ತಾಟಂಕ, ಕಾಲುಂಗುರ, ಬಳೆ ಮುಂತಾದ ಆಭರಣ, ಪುಷ್ಪ, ಇವುಗಳಿಂದ ಅಲಂಕರಿಸಬೇಕು.

೮೩. ಬಳಿಕ ಅವರ ಕೈಯಲ್ಲಿ ಒಂದೊಂದು ಕನ್ನಡಿಯನ್ನು ಕೊಡಬೇಕು. ಅನಂತರ ಒಬ್ಬ ಬ್ರಾಹ್ಮಣನನ್ನು ಪೂಜಿಸಿ, ಅವನಿಗೆ ಶಕ್ತ್ಯನುಸಾರ ದಕ್ಷಿಣಾದಿಗಳನ್ನು ಕೊಟ್ಟು, 'ಸಂಪನ್ನಮಸ್ತು ತೇ' (ಇದರ ಫಲವು ನಿನಗೆ ಉಂಟಾಗಲಿ) ಎಂದು ಅವನಿಂದ ಹೇಳಿಸಬೇಕು.

೮೪. ಅಯ್ಯಾ ಯುಧಿಷ್ಠಿರ ! ಈ ವ್ರತಕ್ಕೆ "**ಸಪ್ತಸುಂದರಕವ್ರತ**" ವೆಂದು ಹೆಸರು. ಈ ವ್ರತಾನುಷ್ಠಾನ ಮಾಡಿದವರಿಗೆ ಶರೀರ ಸೌಂದರ್ಯವೂ ಸೌಭಾಗ್ಯವೂ ಹೆಚ್ಚಾಗುವುವು.

ಕರೋತಿ ಸುಂದರಂ ದೇಹಂ ಸೌಭಾಗ್ಯಂ ಯಚ್ಛತೇ ಪರಂ ।
ವರ್ಜಯೇಚ್ಚೈತ್ರಮಾಸೇ ತು ಯಸ್ತು ಗಂಧಾನುಲೇಪನಂ ॥ ೮೫ ॥

ಶುಕ್ತಿಂ ಗಂಧಭೃತಾಂ ದತ್ವಾ ವಿಪ್ರಾಯ ಸಿತವಾಸಸೀ ।
ಶಕ್ತ್ಯಾ ಚ ದಕ್ಷಿಣಾಂ ದದ್ಯಾತ್ಸರ್ವಾನ್ಕಾಮಾನ್ಸಮಶ್ನುತೇ ॥ ೮೬ ॥

ವಾರುಣಂ ಚ ಪದಂ ಯಾತಿ ತದೇತದ್ವರುಣವ್ರತಂ ।
ವೈಶಾಖಮಾಸೇ ಲವಣಂ ವರ್ಜಯಿತ್ವಾ ಯತವ್ರತಃ ॥ ೮೭ ॥

ಮಾಸಾಂತೇಽಥ ತತೋ ದದ್ಯಾತ್ಸವತ್ಸಾಂ ಗಾಂ ದ್ವಿಜಾತಯೇ ।
ಸ್ಥಿತ್ವಾ ವಿಷ್ಣುಪದೇ ಕಲ್ಪಂ ತತೋ ರಾಜಾ ಭವೇದಿಹ ॥ ೮೮ ॥

---

೮೫. ಚೈತ್ರ ಮಾಸದಲ್ಲಿ ಗಂಧ ಹಚ್ಚಿಕೊಳ್ಳುವುದನ್ನು ವರ್ಜ್ಯಮಾಡಬೇಕು. ಈ ಪ್ರಕಾರ ಆ ತಿಂಗಳೆಲ್ಲಾ ನಡೆಯಿಸಿದ ಮೇಲೆ, ಹಸೀಗಂಧ ತುಂಬಿದ ಭರಣಿಯನ್ನೂ, ಒಂದು ಜತೆ ಪಂಚೆಯನ್ನೂ, ಯಥಾಶಕ್ತಿ ದಕ್ಷಿಣಾಸಮೇತ ಬ್ರಾಹ್ಮಣನಿಗೆ ದಾನಮಾಡಬೇಕು.

೮೬. ಈ ವ್ರತಕ್ಕೆ "**ವರುಣವ್ರತ**" ವೆಂದು ಹೆಸರು. ಈ ವ್ರತಾನುಷ್ಠಾನ ಮಾಡಿದವರಿಗೆ, ಸಕಲ ಇಷ್ಟಾರ್ಥಗಳೂ ಸಿದ್ಧಿಯಾಗುವುವು. ಅಲ್ಲದೆ ದೇಹಾವಸಾನದಲ್ಲಿ ವರುಣಲೋಕ ಪ್ರಾಪ್ತಿಯಾಗುವುದು.

೮೭. ವೈಶಾಖ ಮಾಸದಲ್ಲಿ ಉಪ್ಪನ್ನು ಉಪಯೋಗಿಸುವುದನ್ನು ವರ್ಜ್ಯ ಮಾಡಬೇಕು. ಆ ಒಂದು ತಿಂಗಳು ಪೂರ್ತ ಈ ನಿಯಮವನ್ನು ತಪ್ಪದೆ ಅನುಸರಿಸಿ, ನಿಯಮ ಪೂರ್ತಿಯಾದ ಮೇಲೆ ಎಳಗರು ಸಮೇತವಾದ ಹಸುವನ್ನು ಬ್ರಾಹ್ಮಣನಿಗೆ ದಾನಮಾಡಬೇಕು.

೮೮. ಈ ವ್ರತವನ್ನು ಕ್ರಮವಾಗಿ ಅನುಷ್ಠಾನ ಮಾಡಿದವರಿಗೆ ವಿಷ್ಣುಲೋಕ ಪ್ರಾಪ್ತಿಯಾಗುವುದು. ಅಲ್ಲಿ ಒಂದು ಕಲ್ಪ ಪರ್ಯಂತ ವಾಸಿಸಿ, ಪುನ್ಹ ಭೂಲೋಕದಲ್ಲಿ ವಿಪ್ರಕುಲದಲ್ಲಿ ಜನಿಸುವನು. ಈ ವ್ರತಕ್ಕೆ "**ಕಾಂತಿವ್ರತ**" ವೆಂದು ಹೆಸರು. ಈ ವ್ರತವು ಕಾಂತಿಯನ್ನೂ ಕೀರ್ತಿಯನ್ನೂ ಹೆಚ್ಚಿಸುವುದು.

ಏತತ್ಕಾಂತಿವ್ರತಂ ನಾಮ ಕಾಂತಿಕೀರ್ತಿಪ್ರದಾಯಕಂ ।
ಬ್ರಹ್ಮಾಂಡಂ ಕಾಂಚನಂ ಕೃತ್ವಾ ತಿಲದ್ರೋಣೋಪರಿ ಸ್ಥಿತಂ ॥ ೮೯ ॥

ತ್ರ್ಯಹಂ ತಿಲವ್ರತೀ ಭೂತ್ವಾ ವಹ್ನಿಂ ಸಂತರ್ಪಯೇದ್ದ್ವಿಜಂ ।
ಸಂಪೂಜ್ಯ ವಿಪ್ರದಾಂಪತ್ಯಂ ಮಾಲ್ಯವಸ್ತ್ರವಿಭೂಷಣೈಃ ॥ ೯೦ ॥

ಶಕ್ತಿತಸ್ತ್ರಿಪಲಾದೂರ್ಧ್ವಂ ವಿಶ್ವಾತ್ಮಾ ಪ್ರೀಯತಾಮಿತಿ ।
ಪುಣ್ಯೇಽಹ್ನಿ ದದ್ಯಾತ್ಸ ಪರಂ ಬ್ರಹ್ಮಯಾತ್ಯಪುನರ್ಭವಂ ॥ ೯೧ ॥

ಏತದ್ಬ್ರಹ್ಮವ್ರತಂ ನಾಮ ನಿರ್ವಾಣಫಲದಂ ನೃಣಾಂ ॥ ೯೨ ॥

ಯಶ್ಚೋಭಯಮುಖೀಂ ದದ್ಯಾತ್ಪ್ರಭೂತಕನಕಾನ್ವಿತಾಂ ।
ದಿನಂ ಪಯೋವ್ರತಂ ತಿಷ್ಠೇತ್ಸ ಯಾತಿ ಪರಮಂ ಪದಂ ॥ ೯೩ ॥

---

೮೯. ಮೂರುಪಲ ತೂಕಕ್ಕೆ ಹೆಚ್ಚಾಗಿಯೋ ಅಥವಾ ತನ್ನ ಶಕ್ತ್ಯನುಸಾರವಾಗಿಯೋ, ಚಿನ್ನದಿಂದ ಬ್ರಹ್ಮಾಂಡಾಕೃತಿಯನ್ನು ರಚಿಸಿ, ಅದನ್ನು ತಿಲಪೂರ್ಣವಾದ ಕುಂಭದ ಮೇಲಿರಿಸಿ ಪೂಜಿಸಿ, ಮೂರು ದಿವಸ ತಿಲವ್ರತವನ್ನು (ತಿಲಾಹಾರ ಸೇವನೆ) ಆಚರಿಸಬೇಕು.

೯೦. ಅನಂತರ ತಿಲಹೋಮದಿಂದ ಅಗ್ನಿಯನ್ನೂ, ಭೋಜನಾದಿಗಳಿಂದ ವಿಪ್ರರನ್ನೂ ಸಂತೋಷಪಡಿಸಬೇಕು. ಅನಂತರ ಶುಭದಿನದಲ್ಲಿ ಬ್ರಾಹ್ಮಣ ದಂಪತಿಗಳನ್ನು ವಸ್ತ್ರ, ಮಾಲ್ಯ, ಆಭರಣಾದಿಗಳಿಂದ ಅರ್ಚಿಸಿ.

೯೧. ಆ ದಿನ ಸುವರ್ಣದ ಬ್ರಹ್ಮಾಂಡವನ್ನು ಕುಂಭಸಮೇತ, 'ವಿಶ್ವಾತ್ಮಾ ಪ್ರೀಯತಾಂ' (ಪ್ರಪಂಚ ಸ್ವರೂಪನಾದ ದೇವರು ಸುಪ್ರೀತನಾಗಲಿ) ಎಂದು ಹೇಳಿ ದಾನಮಾಡಬೇಕು.

೯೨. ಇದನ್ನು ಆಚರಿಸಿದವನು ಪುನರ್ಜನ್ಮವಿಲ್ಲದ ಬ್ರಹ್ಮಸ್ವರೂಪವನ್ನು ಹೊಂದುವನು. ಇದಕ್ಕೆ "ಬ್ರಹ್ಮವ್ರತ" ವೆಂದು ಹೆಸರು. ಈ ವ್ರತವು ಮಾನವರಿಗೆ ಮೋಕ್ಷದಾಯಕವಾದುದು.

೯೩. ಸಮೃದ್ಧಿಯಾಗಿ ಸ್ವರ್ಣದಕ್ಷಿಣೆಯ ಸಮೇತ ಉಭಯ ಮುಖೀ ಗೋದಾನವನ್ನು ಮಾಡಿ ಮೂರು ದಿವಸ ಕೇವಲ ಹಾಲನ್ನೇ ಆಹಾರವಾಗಿ

**ತ್ರ್ಯಹಂ ಪಯೋವ್ರತಃ ಸ್ಥಿತ್ವಾ ಕಾಂಚನಂ ಕಲ್ಪಪಾದಪಂ ।**
**ಪಲಾದೂರ್ಧ್ವಂ ಯಥಾ ಶಕ್ತ್ಯಾ ತಂಡುಲಂ ರೂಪಸಂಯುತಂ ॥ ೯೪ ॥**

**ಛಾದಿತಂ ವರವಾಸೋಭಿಃ ಪುಷ್ಪಮಾಲಾವಿಭೂಷಿತಂ ।**
**ದತ್ವಾ ಸ್ವರ್ಗೇ ವಸೇತ್ಕಲ್ಪಂ ಕಲ್ಪವ್ರತಮಿದಂ ಸ್ಮೃತಂ ॥ ೯೫ ॥**

**ಯಸ್ತು ವತ್ಸತರೀಂ ಭವ್ಯಾಂ ಕಂಠಾಭರಣಭೂಷಿತಾಂ ।**
**ಸುಪರ್ಯಾಣಾಂ ಸುಖಸ್ಪೃಷ್ಟಾಂ ಖಲೀನಾಲಂಕೃತಾನನಾಂ ॥ ೯೬ ॥**

---

ಸೇವಿಸಬೇಕು. ಅದಕ್ಕೆ ಶಕ್ತಿಯಿಲ್ಲದಿದ್ದರೆ ದಾನಮಾಡಿದ ಒಂದು ದಿನವಾದರೂ ಹಾಲನ್ನು ಮಾತ್ರ ಸೇವಿಸಬೇಕು. ಇದಕ್ಕೆ "ಪಯೋವ್ರತ" ವೆಂದು ಹೆಸರು. ಈ ವ್ರತಾನುಷ್ಠಾನಮಾಡಿದವನು ಪರಮಪದವನ್ನು ಹೊಂದುವನು. (ವಿ.ಸೂ.) ಪೂರ್ಣವಾಗಿ ಗರ್ಭವಾದ ಹಸು ಕರು ಹಾಕುತ್ತಿರುವ ಸಮಯವನ್ನು ನಿರೀಕ್ಷಿಸುತ್ತಿದ್ದು, ಕರುವಿನ ಮುಸುಡಿಯು ಅರ್ಧ ಪ್ರಸವವಾಗಿರುವ ವೇಳೆಯಲ್ಲಿ ಆ ಗೋವನ್ನು ದಾನಮಾಡುವುದಕ್ಕೆ ಉಭಯಮುಖೀ ಗೋದಾನವೆನಿಸುವುದು. ಇದಕ್ಕೆ ಮಾಸ, ತಿಥಿ, ಇವುಗಳು ನಿರ್ದಿಷ್ಟವಿಲ್ಲ. ಗೋವು ಕರು ಹಾಕುವ ಸಮಯ ದೊರೆತಾಗ ಇದನ್ನು ಪೂಜಿಸಿ ನಿಯಮದಿಂದ ಆಚರಿಸಬೇಕು.

೯೪. ಒಂದು ಪಲಕ್ಕಿಂತ ಹೆಚ್ಚಿನ ತೂಕವಿರುವಂತೆ ತನ್ನ ಶಕ್ತ್ಯನುಸಾರ ಚಿನ್ನದಿಂದ ಕಲ್ಪವೃಕ್ಷಾಕೃತಿಯನ್ನು ಮಾಡಿಸಿ, ಅದನ್ನು ಅಕ್ಕಿಯ ಮೇಲೆ ಇರಿಸಬೇಕು.

೯೫. ಅದಕ್ಕೆ ಉತ್ತಮವಾದ ವಸ್ತ್ರಗಳನ್ನು ಹೊದ್ದಿಸಿ, ಪುಷ್ಪಮಾಲೆಗಳಿಂದ ಅಲಂಕರಿಸಬೇಕು. ಅದನ್ನು ಪೂಜಿಸಿ, ಬಳಿಕ ದಕ್ಷಿಣಾಸಮೇತ ವಿಪ್ರೋತ್ತಮನಿಗೆ ದಾನಮಾಡಬೇಕು. ಇದಕ್ಕೆ "ಕಲ್ಪವ್ರತ" ವೆಂದು ಹೆಸರು. ಈ ವ್ರತವನ್ನು ಅನುಷ್ಠಾನ ಮಾಡಿದವನು ಒಂದು ಕಲ್ಪಕಾಲ ಪರ್ಯಂತ ಸ್ವರ್ಗಲೋಕದಲ್ಲಿ ವಾಸ ಮಾಡುವನು.

೯೬. ಕರು ಹಾಕುವ ವಯಸ್ಸು ಒದಗಿದ ಶ್ರೇಷ್ಠವಾದ ಪ್ರಾಯದ (ಕಡಸಿಗೆ) ಹಸುವಿನ ಕೊರಳಿಗೆ ಗಂಟೆ, ಕುತ್ತಿಗೆಯಲ್ಲಿ ಸರಪಳಿ, ಬೆನ್ನಿಗೆ ಒಳ್ಳೆಯ ಮೃದುವಾದ ಗೌಸು, ಮುಖಕ್ಕೆ ಶೋಭವಾದ ಮುತ್ತು ಹಗ್ಗ ಇವನ್ನು ಧರಿಸಿ.

ಮೋದಕೋದಕಪಾತ್ರೇಣ ತಾಂಬೂಲೇನ ಸಮನ್ವಿತಾಂ ।
ಸ್ಥಗಿತಾಂ ಸ್ಥಾಪಯೇತ್ಪೃಷ್ಠೇ ಶೃಂಗಾಗ್ರೇಷು ಹಿಮಾನ್ವಿತಾಂ ॥ ೯೭ ॥

ಈ ದೃಗ್ವಿಧಾಂ ವ್ಯತೀಪಾತೇ ಗ್ರಹಣೇ ಚಾಯನದ್ವಯೋ ।
ಅಯಾಚಿತೇನ ಚ ಸ್ಥಿತ್ವಾ ತತೋ ದದ್ಯಾದ್ದ್ವಿಜಾತಯೇ ॥ ೯೮ ॥

ಏತದ್ದ್ವಾರವ್ರತಂ ನಾಮ ಮಾರ್ಗಖೇದವಿನಾಶನಂ ।
ಪರಲೋಕಾರ್ಥಗಮನೇ ಕ್ಲಾಂತಿಶ್ರಮಹರಂ ಪರಂ ॥ ೯೯ ॥

ನಕ್ತಾಶೀತ್ವಷ್ಟಮೀಷು ಸ್ಯಾದ್ವತ್ಸರಾಂತೇಽಷ್ಟ ಗೋಪ್ರದಃ ।
ಪೌರಂದರಂ ಪದಂ ಯಾತಿ ಸುಗತಿವ್ರತಮುಚ್ಯತೇ ॥ ೧೦೦ ॥

---

೯೭. ಕೊಂಬುಗಳಿಗೆ ಚಿನ್ನದ ಅಣಸನ್ನು ತೊಡಿಸಿ ಶೃಂಗರಿಸಿ, ಅದರ ಬೆನ್ನಿನ ಮೇಲೆ ಮೋದಕ (ಕಡುಬು) ತುಂಬಿದ ಪಾತ್ರೆಯನ್ನೂ, ನೀರಿನ ಕಲಶ, ತಾಂಬೂಲ, ಇವುಗಳನ್ನೂ ಇರಿಸಿ ಸರಿಯಾದ ದಕ್ಷಿಣಾ ಸಮೇತವಾಗಿ.

೯೮. ಇಂಥ ಹಸುವನ್ನು ಗ್ರಹಣದ ದಿನಗಳು, ವ್ಯತೀಪಾತ, ದಕ್ಷಿಣಾಯನ, ಉತ್ತರಾಯಣಪುಣ್ಯಕಾಲ ಇಂತಹ ದಿನಗಳನ್ನು ಸಿರೀಕ್ಷಿಸಿಕೊಂಡಿದ್ದು ಯಾರನ್ನೂ ಯಾಚನೆ ಮಾಡದೆ ಯದೃಚ್ಛಾಲಾಭದಿಂದ ಸಂತುಷ್ಟನಾಗುವ ಸ್ವಭಾವದ ಬ್ರಾಹ್ಮಣೋತ್ತಮನಿಗೆ ದಾನ ಕೊಡಬೇಕು.

೯೯. ಈ ವ್ರತಕ್ಕೆ "**ದ್ವಾರವ್ರತ**" ವೆಂದು ಹೆಸರು. ಇದನ್ನು ಅನುಷ್ಠಾನ ಮಾಡಿದವನಿಗೆ, ಪರಲೋಕಕ್ಕೆ ಪ್ರಯಾಣ ಮಾಡುವಾಗ ಮಾರ್ಗದಲ್ಲಿ ಹಸಿವು, ಬಾಯಾರಿಕೆ, ಆಯಾಸ ಇವು ಯಾವುವೂ ಉಂಟಾಗುವುದಿಲ್ಲ.

೧೦೦. ಒಂದು ವರ್ಷಕಾಲ ಪ್ರತಿ ಅಷ್ಟಮಿಯಲ್ಲಿಯೂ ನಕ್ತಭೋಜನವನ್ನು ಆಚರಿಸುತ್ತಾ ವರ್ಷಾಂತ್ಯದಲ್ಲಿ ಎಂಟು ಗೋವುಗಳನ್ನು ದಾನ ಕೊಡಬೇಕು. ಈ ವ್ರತಕ್ಕೆ "**ಸುಗತಿವ್ರತ**" ವೆಂದು ಹೆಸರು. ಇದನ್ನು ಅನುಷ್ಠಾನ ಮಾಡಿದವರಿಗೆ ಇಂದ್ರಲೋಕ ಪ್ರಾಪ್ತಿಯಾಗುವುದು.

ಯಶ್ಚೇಂಧನಪ್ರದೋ ರಾಜನ್ ಹೇಮಂತಶಿಶಿರವ್ರತಂ ।
ಘೃತಧೇನುಂ ಪ್ರಯಚ್ಛೇತ ಪರಂ ಬ್ರಹ್ಮ ಸ ಗಚ್ಛತಿ ॥ ೧೦೧ ॥

ಶರೀರಾರೋಗ್ಯಜನನಂ ದ್ಯುತಿಕಾಂತಿಪ್ರದಾಯಕಂ ।
ವೈಶ್ವಾನರವ್ರತಂ ನಾಮ ಸರ್ವಪಾಪಪ್ರಣಾಶನಂ ॥ ೧೦೨ ॥

ಏಕಾದಶ್ಯಾಂ ತು ನಕ್ತಾಶೀ ಯಶ್ಚಕ್ರಂ ವಿನಿವೇದಯೇತ್ ।
ತದ್ವಚ್ಛಂಖಂ ತು ಸೌವರ್ಣಂ ಚೈತ್ರೇ ಚಿತ್ರಾಸು ಪಾಂಡವ ॥ ೧೦೩ ॥

ಯ ಏತತ್ಕುರುತೇ ಭಕ್ತ್ಯಾ ಸ ವಿಷ್ಣೋಃ ಪದಮಾಪ್ನುಯಾತ್ ।
ಏಕದ್ವಿಷ್ಣುವ್ರತಂ ನಾಮ ಕಲ್ಪಾದೌ ರಾಜ್ಯಲಾಭಕೃತ್ ॥ ೧೦೪ ॥

---

೧೦೧. ಎಲೈ ರಾಜನೆ! ಹೇಮಂತಋತು ಮತ್ತು ಶಿಶಿರಋತುವಿನಲ್ಲಿ ನಿತ್ಯವೂ ನಿಯಮದಿಂದ ಇಂಧನವ (ಸೌದೆ) ನ್ನು ದಾನಮಾಡಬೇಕು. ಈ ಪ್ರಕಾರ ಎರಡು ಋತುಗಳಲ್ಲಿ ಆಚರಿಸಿ ಕೊನೆಯಲ್ಲಿ ಘೃತಧೇನುವನ್ನು ದಾನ ಮಾಡಬೇಕು. ಹೀಗೆ ಮಾಡಿದರೆ ಪರಬ್ರಹ್ಮ ಪ್ರಾಪ್ತಿಯಾಗುವುದು.

೧೦೨. ಈ ವ್ರತಕ್ಕೆ "ವೈಶ್ವಾನರವ್ರತ" ವೆಂದು ಹೆಸರು. ಈ ವ್ರತಿಗೆ ಇಹದಲ್ಲಿ ಶರೀರಾರೋಗ್ಯ, ತೇಜಸ್ಸು, ಕಾಂತಿ ಇವು ಉಂಟಾಗುವುವು. ಅಲ್ಲದೆ ಅವನ ಸಕಲ ಪಾಪಗಳೂ ನಿವೃತ್ತಿಯಾಗುವುವು.

೧೦೩. ಚೈತ್ರ ಮಾಸದ ಏಕಾದಶೀ ದಿವಸ ನಕ್ತವ್ರತ ಮಾಡಿ, ಸುವರ್ಣ ದಿಂದ ಚಕ್ರವನ್ನು ಮಾಡಿಸಿ, ದಾನಮಾಡಬೇಕು. ಅಯ್ಯಾ ಪಾಂಡುಪುತ್ರನೇ! ಹೀಗೆಯೇ ಚಿನ್ನದ ಶಂಖವನ್ನೂ ಮಾಡಿಸಿ ಅದನ್ನು ಚೈತ್ರಮಾಸದ ಚಿತ್ತಾ ನಕ್ಷತ್ರವಿರುವ ದಿನ (ಪೂರ್ಣಿಮೆಯ ದಿನ) ದಾನಮಾಡಬೇಕು.

೧೦೪. ಇದಕ್ಕೆ "ವಿಷ್ಣುವ್ರತ" ವೆಂಬ ಹೆಸರು ಪ್ರಸಿದ್ಧವಾಗಿದೆ. ಈ ವ್ರತಾನುಷ್ಠಾನ ಮಾಡಿ, ಭಕ್ತಿಪುರಸ್ಸರವಾಗಿ ದಾನಮಾಡಿದವನಿಗೆ, ವಿಷ್ಣುಲೋಕ ಪ್ರಾಪ್ತಿಯಾಗುವುದು. ಆ ವಿಷ್ಣುಲೋಕದಲ್ಲಿ ಒಂದು ಕಲ್ಪಪರ್ಯಂತ ವಾಸಿಸು ತ್ತಿದ್ದು ಬಳಿಕ ಭೂಲೋಕದಲ್ಲಿ ಜನಿಸಿ ರಾಜನಾಗುವನು.

ಪಯೋವ್ರತಸ್ತು ಪಂಚಮ್ಯಾಂ ವ್ರತಾಂತೇ ಗೋಯುಗಪ್ರದಃ ।
ಲಕ್ಷ್ಮೀಲೋಕೇ ವಸೇತ್ಕಲ್ಪಂ ಏತದ್ದೇವೀವ್ರತಂ ಸ್ಮೃತಂ ॥ ೧೦೫ ॥

ಸಪ್ತಮ್ಯಾಂ ನಕ್ತಭುಗ್ದದ್ಯಾತ್ಸಮಾಪ್ತೇ ಗಾಂ ಪಯಸ್ವಿನೀಂ ।
ಸೋऽರ್ಕಲೋಕಮವಾಪ್ನೋತಿ ಭಾನುವ್ರತಮಿಹೋಚ್ಯತೇ ॥ ೧೦೬ ॥

ಚತುರ್ಥ್ಯಾಂ ನಕ್ತಭುಗ್ದದ್ಯಾದಷ್ಟಗಾ ಹೇಮಭೂಷಿತಾಃ ।
ವ್ರತಂ ವೈನಾಯಕಂ ನಾಮ ಸರ್ವವಿಘ್ನವಿನಾಶನಂ ॥ ೧೦೭ ॥

ಮಹಾಫಲಾನಿ ಯಸ್ತ್ಯಕ್ತ್ವಾ ಚಾತುರ್ಮಾಸಂ ದ್ವಿಜಾತಯೇ ।
ಹೈಮಾನಿ ಕಾರ್ತಿಕೇ ದದ್ಯಾದ್ಗೋಯುಗೇನ ಸಮಂ ನರಃ ॥ ೧೦೮ ॥

---

೧೦೫. ಒಂದು ವರ್ಷಕಾಲ ಪ್ರತಿ ಪಂಚಮಿಯ ದಿನವೂ ಹಾಲನ್ನೇ ಸೇವಿಸುತ್ತಾ ವ್ರತಮಾಡಿ, ವರ್ಷ ಪೂರ್ತಿಯಾದ ಮೇಲೆ ಎರಡು ಗೋವುಗಳನ್ನು ದಾನಮಾಡಬೇಕು. ಈ ವ್ರತಕ್ಕೆ "**ದೇವೀವ್ರತ**" ವೆಂದು ಹೆಸರಾಗಿದೆ. ಇದನ್ನು ಅನುಷ್ಠಾನಮಾಡಿದವರು ಒಂದು ಕಲ್ಪಪರ್ಯಂತ ಲಕ್ಷ್ಮೀ ಲೋಕದಲ್ಲಿ ವಾಸಿಸುತ್ತಾರೆ.

೧೦೬. ಒಂದು ವರ್ಷಕಾಲ ಪ್ರತಿಯೊಂದು ಸಪ್ತಮಿಯ ದಿನವೂ ನಕ್ತ ಭೋಜನ ವ್ರತವನ್ನು ಆಚರಿಸಿ, ವರ್ಷಾಂತ್ಯದಲ್ಲಿ ಹಾಲು ಕರೆಯುವ ಹಸುವನ್ನು ದಾನಮಾಡಬೇಕು. ಈ ವ್ರತಕ್ಕೆ "**ಭಾನುವ್ರತ**" ವೆಂದು ಹೆಸರು. ಈ ವ್ರತಾನುಷ್ಠಾನ ಮಾಡಿದವನಿಗೆ ಸೂರ್ಯಲೋಕ ಪ್ರಾಪ್ತಿಯಾಗುವುದು.

೧೦೭. ಪ್ರತಿ ಚತುರ್ಥೀ ತಿಥಿಗಳಲ್ಲಿಯೂ ನಕ್ತಭೋಜನ ವ್ರತಮಾಡುತ್ತಾ ವರ್ಷ ಮುಗಿದ ಮೇಲೆ, ಚಿನ್ನದ ಅಣಸುಗಳನ್ನು ಕೊಂಬುಗಳಿಗೆ ಹಾಕಿ ಅಲಂಕರಿಸಿರುವ ಎಂಟು ಗೋವುಗಳನ್ನು ಬ್ರಾಹ್ಮಣರಿಗೆ ದಾನಮಾಡಬೇಕು. ಈ ವ್ರತಕ್ಕೆ "**ವಿನಾಯಕವ್ರತ**" ವೆಂದು ಹೆಸರು. ಇದನ್ನು ಅನುಷ್ಠಾನಮಾಡಿದರೆ ಸರ್ವ ವಿಘ್ನಗಳನ್ನೂ ನಾಶಪಡಿಸುವುದು.

೧೦೮. ಶ್ರಾವಣ, ಭಾದ್ರಪದ, ಆಶ್ವಯುಜ, ಕಾರ್ತಿಕ ಈ ನಾಲ್ಕು ತಿಂಗಳಲ್ಲಿ ಉತ್ಕೃಷ್ಟವಾದ ಜಾತಿಯ ಹಣ್ಣುಗಳನ್ನು ತಿನ್ನದೆ ವರ್ಜ್ಯ ಮಾಡಿದ್ದು, ನಿಯಮ ಮುಗಿದ ಮೇಲೆ ಕಾರ್ತಿಕ ಮಾಸದ ಕೊನೆಯಲ್ಲಿ ತಾನು ವರ್ಜ್ಯ ಮಾಡಿದ ಜಾತಿಯ ಹಣ್ಣುಗಳ ಮಾದರಿಯನ್ನು ಚಿನ್ನದಲ್ಲಿ ಮಾಡಿಸಿ, ಆ ಸುವರ್ಣ ಫಲಗಳನ್ನೂ.

**ಸಿತಂ ವಸ್ತ್ರಯುಗಂ ನಾಮ ಸಂಪೂರ್ಣಾಜ್ಯಘಟಾನಿ ಚ |**
**ಏತತ್ಫಲವ್ರತಂ ನಾಮ ಫಲಾವಾಪ್ತಿಕರಂ ಸದಾ || ೧೦೯ ||**

**ಯಶ್ಚೋಪವಾಸೀ ಸಪ್ತಮ್ಯಾಂ ಸಮಾಪ್ತೇ ಹೇಮಪಂಕಜಂ |**
**ಧೇನೂಶ್ಚ ಶಕ್ತಿತೋ ದದ್ಯಾತ್ಸವತ್ಸಾಃ ಕಾಂಸ್ಯದೋಹನಾಃ || ೧೧೦ ||**

**ಭಕ್ತ್ಯಾ ರಾಜೇಂದ್ರ ವಿಪ್ರಾಯ ವಾಚಕಾಯ ನಿವೇದಯೇತ್ |**
**ಏತತ್ಸೌರವ್ರತಂ ನಾಮ ಸೂರ್ಯಲೋಕಪ್ರದಾಯಕಂ || ೧೧೧ ||**

**ದ್ವಾದಶ ದ್ವಾದಶೀರ್ಯಸ್ತು ನಾಮ ಪ್ರಾಶನ ಸಂಯುತಃ |**
**ಸಮುಪೋಷ್ಯ ಸಮಾಂತೇ ತು ಸವಸ್ತ್ರಾಃ ಸೋದಕಾ ಘಟಾಃ || ೧೧೨ ||**

---

೧೦೯. ಅದರ ಜತೆಯಲ್ಲಿ ಒಂದುಜತೆ ಬಿಳಿಯವಸ್ತ್ರವನ್ನೂ ಘೃತ ಪೂರ್ಣವಾದ ಗಡಿಗೆಯನ್ನೂ ಬ್ರಾಹ್ಮಣನಿಗೆ ದಾನಮಾಡಬೇಕು. ಈ ವ್ರತಕ್ಕೆ "**ಫಲವ್ರತ**" ವೆಂದು ಹೆಸರು ಇದನ್ನು ಅನುಷ್ಠಾನಮಾಡಿದವರಿಗೆ ಸಕಲ ಫಲಗಳೂ ಸಿದ್ಧಿಸುವುವು.

೧೧೦. ವರ್ಷದ ಪ್ರತಿಯೊಂದು ಸಪ್ತಮಿಯ ದಿನವೂ ಉಪವಾಸ ಮಾಡುತ್ತಾ ನಿಯಮ ಮುಗಿದ ಮೇಲೆ ವರ್ಷಾಂತ್ಯದಲ್ಲಿ ಚಿನ್ನದ ಕಮಲವನ್ನು ಮಾಡಿಸಿ, ಅದನ್ನೂ ಎಳಗರು ಸಮೇತವಾದ ಹಸು ಮತ್ತು ಹಾಲು ಕರೆಯುವ ಕಂಚಿನ ಪಾತ್ರೆ.

೧೧೧. ಇವನ್ನೆಲ್ಲಾ ಪುರಾಣವಾಚಕನಾದ ಬ್ರಾಹ್ಮಣನಿಗೆ ಭಕ್ತಿಪೂರ್ವಕವಾಗಿ ದಾನಕೊಡಬೇಕು. ಈ ವ್ರತಕ್ಕೆ "**ಸೌರವ್ರತ**" ವೆಂದು ಹೆಸರು. ಈ ವ್ರತವನ್ನು ಅನುಷ್ಠಾನಮಾಡುವ ಮಾನವನಿಗೆ ಸೂರ್ಯಲೋಕದ ವಾಸವು ಲಭಿಸುವುದು.

೧೧೨. ವರ್ಷದಲ್ಲಿ ಶುಕ್ಲಪಕ್ಷದ ಹನ್ನೆರಡು ದ್ವಾದಶಿಗಳಲ್ಲಿ ಕೇಶವಾದಿ ನಾಮೋಚ್ಚಾರಣ ಪೂರ್ವಕವಾಗಿ ಕೇವಲ ಜಲಪಾನ ಮಾಡಿ, ನಿರಾಹಾರದಿಂದ ಇದ್ದು, ವರ್ಷಾಂತ್ಯದಲ್ಲಿ ಜಲಪೂರ್ಣವಾದ ಹನ್ನೆರಡು ಕಲಶಗಳು, ಒಂದು ಜತೆ ವಸ್ತ್ರ ಇವನ್ನು ಬ್ರಾಹ್ಮಣರಿಗೆ ದಾನಮಾಡಬೇಕು.

ದ್ವಾದಶಾತ್ರ ಪ್ರದೇಯಾಶ್ಚ ಸರ್ವಕಾಮುಪ್ರಸಿದ್ಧಯೇ ।
ಗೋವಿಂದವ್ರತಮಿತ್ಯೇತದ್ಗೋವಿಂದಪದದಾಯಕಂ ॥ ೧೧೩ ॥

ಕಾರ್ತಿಕ್ಯಾಂ ಯೋ ವೃಷೋತ್ಸರ್ಗಂ ಕೃತ್ವಾ ನಕ್ತಂ ಸಮಾರೇತ್ ।
ಸ ಗೋಲೋಕಮವಾಪ್ನೋತಿ ವೃಷವ್ರತಮಿದಂ ಸ್ಮೃತಂ ॥ ೧೧೪ ॥

ವ್ರತಾಂತೇ ಗೌಃ ಪ್ರದಾತವ್ಯಾ ಭೋಜನಂ ಶಕ್ತಿತಃ ಪರಂ ।
ವಿಪ್ರಾಣಾಮತ್ರ ಕಥಿತಂ ಪ್ರಾಜಾಪತ್ಯಮಿದಂ ವ್ರತಂ ॥ ೧೧೫ ॥

ಚತುರ್ದಶ್ಯಾಂ ತು ನಕ್ತಾಶೀ ಸಮಾಂತೇ ಗೋಯುಗಪ್ರದಃ ।
ಶೈವಂ ಪದಮವಾಪ್ನೋತಿ ಜ್ಞೇಯಂ ಚ ತ್ರ್ಯಂಬಕವ್ರತಂ ॥ ೧೧೬ ॥

---

೧೧೩. ಈ ವ್ರತಕ್ಕೆ " **ಗೋವಿಂದವ್ರತ** " ವೆಂದು ಹೆಸರು. ಇದನ್ನು ಅನುಷ್ಠಾನ ಮಾಡಿದ ಮಾನವನ ಸಮಸ್ತ ಅಭಿಲಾಷೆಗಳೂ ಸಿದ್ಧಿಸುವುವು. ಅಲ್ಲದೆ ದೇಹಾವಸಾನದಲ್ಲಿ ಗೋವಿಂದ ಸಾನ್ನಿಧ್ಯವನ್ನು (ವೈಕುಂಠವನ್ನು) ಉಂಟು ಮಾಡುತ್ತದೆ.

೧೧೪. ಕಾರ್ತಿಕ ಮಾಸದಲ್ಲಿ ವೃಷೋತ್ಸರ್ಗವೆಂಬ ಕರ್ಮವನ್ನು ಮಾಡಿ ನಕ್ತವ್ರತವನ್ನು ಆಚರಿಸಬೇಕು. ಈ ವ್ರತಕ್ಕೆ " **ವೃಷವ್ರತ** " ವೆಂದು ಹೆಸರು. ಈ ವ್ರತವನ್ನು ಅನುಷ್ಠಾನ ಮಾಡುವವನಿಗೆ ಗೋಲೋಕ ಪ್ರಾಪ್ತವಾಗುವುದು.

೧೧೫. ಪ್ರಜಾಪತಿಬ್ರಹ್ಮನನ್ನು ಉದ್ದೇಶಿಸಿ, ಪ್ರತಿ ದ್ವಿತೀಯೆಯಲ್ಲಿಯೂ ನಿಯಮದಿಂದ ವ್ರತಮಾಡಿ, ವ್ರತದ ಸಮಾಪ್ತಿಯ ದಿವಸ ಗೋವನ್ನು ದಾನ ಮಾಡಿ, ತನಗೆ ಶಕ್ತಿಯಿದ್ದಷ್ಟು ಮಂದಿ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಇದು ಸಕಲ ಮನೋರಥಗಳನ್ನೂ ಸಿದ್ಧಿಯಾಗುವಂತೆ ಮಾಡುವ " **ಪ್ರಾಜಾಪತ್ಯವ್ರತ** " ವೆಂದು ಪ್ರಸಿದ್ಧವಾಗಿದೆ.

೧೧೬. ಪಕ್ಷದ ಪ್ರತಿಯೊಂದು ಚತುರ್ದಶಿಯಲ್ಲೂ ನಕ್ತಭೋಜನ ವಿಧಿಯನ್ನು ಆಚರಿಸುತ್ತಾ, ಸಂವತ್ಸರಾಂತ್ಯದಲ್ಲಿ ಬ್ರಾಹ್ಮಣರಿಗೆ ಎರಡು ಗೋವುಗಳನ್ನು ದಾನಮಾಡಬೇಕು. ಇದನ್ನು " **ತ್ರ್ಯಂಬಕವ್ರತ** " ವೆಂದು ಹೇಳುತ್ತಾರೆ. ಈ ವ್ರತಾನುಷ್ಠಾನ ಮಾಡುವವರಿಗೆ ಶಿವಲೋಕ ಪ್ರಾಪ್ತಿಯಾಗುವುದು.

ಸಪ್ತರಾತ್ರೋಷಿತೋ ದದ್ಯಾದ್ಘೃತಕುಂಭಂ ದ್ವಿಜಾತಯೇ ।
ಬ್ರಹ್ಮವ್ರತಮಿದಂ ಪ್ರಾಹುರ್ಬ್ರಹ್ಮಲೋಕಪ್ರದಾಯಕಂ ॥ ೧೧೭ ॥

ಮಾಸಾಂತೇ ಚ ಸ ಗಾಂ ದದ್ಯಾದ್ಧೇನುಮಂತೇ ಪಯಸ್ವಿನೀಂ ।
ಶಕ್ರಲೋಕೇ ವಸೇತ್ಕಲ್ಪಂ ಶಕ್ರವ್ರತಮಿದಂ ಸ್ಮೃತಂ ॥ ೧೧೮ ॥

ಕಾರ್ತಿಕಸ್ಯ ಸಿತೇ ಪಕ್ಷೇ ಚತುರ್ದಶ್ಯಾಂ ನರಾಧಿಪ ।
ಸೋಪವಾಸಃ ಪಂಚಗವ್ಯಂ ಪಿಬೇದ್ರಾತ್ರೌ ವಿಚಕ್ಷಣಃ ॥ ೧೧೯ ॥

ಕಪಿಲಾಯಾಸ್ತು ಗೋಮೂತ್ರಂ ಕೃಷ್ಣಾಯಾ ಗೋಮಯಂ ತಥಾ ।
ಸಿತಧೇನ್ವಾಸ್ತಥಾ ಕ್ಷೀರಂ ರಕ್ತಾಯಾಸ್ತು ತಥಾ ದಧಿ ॥ ೧೨೦ ॥

ಗೃಹೀತ್ವಾ ಕರ್ಬುರಾಯಾಸ್ತು ಘೃತಮೇಕತ್ರ ಮೇಲಯೇತ್ ।
ವೇದೋಕ್ತಮಂತ್ರೇ ರಾಜೇಂದ್ರ ಕುಶೋದಕಸಮನ್ವಿತಂ ॥ ೧೨೧ ॥

---

೧೧೭. ಏಳು ರಾತ್ರಿಗಳು ಉಪವಾಸ ಮಾಡಿ, ದೇವಪೂಜಾದಿಗಳನ್ನು ನೆರವೇರಿಸಿ, ಮಾರನೆಯದಿನ ಘೃತಪೂರ್ಣವಾದ ಕುಂಭವನ್ನು ಬ್ರಾಹ್ಮಣನಿಗೆ ದಾನ ಕೊಡಬೇಕು. ಇದಕ್ಕೆ "ಬ್ರಹ್ಮವ್ರತ" ವೆಂದು ಹೆಸರು. ಈ ವ್ರತಾನುಷ್ಠಾನ ಮಾಡಿದವನಿಗೆ ಬ್ರಹ್ಮಲೋಕ ಪ್ರಾಪ್ತಿಯಾಗುವುದು.

೧೧೮. ಪ್ರತಿ ತಿಂಗಳ ಕೊನೆಯಲ್ಲಿ ಯಥಾಶಕ್ತಿ ಒಂದು ಗೋದಾನ ಮಾಡುತ್ತಾ ಇದ್ದು ವರ್ಷನ ಕೊನೆಯಲ್ಲಿ ಹಾಲು ಕರೆಯುವ ಹಸುವನ್ನು ದಾನ ಮಾಡಬೇಕು. ಇದಕ್ಕೆ "ಶಕ್ರವ್ರತ" ವೆಂದು ಹೆಸರು. ಈ ವ್ರತ ಮಾಡಿದವನು ಒಂದು ಕಲ್ಪಕಾಲ ಇಂದ್ರಲೋಕದಲ್ಲಿ ವಾಸಿಸುತ್ತಾನೆ.

೧೧೯. ಅಯ್ಯಾ ರಾಜೇಂದ್ರ! ಕಾರ್ತಿಕ ಶುಕ್ಲ ಚತುರ್ದಶಿಯ ಹಗಲು ಉಪವಾಸವಿದ್ದು ಆ ದಿನ ರಾತ್ರಿ ಪಂಚಗವ್ಯ ಪ್ರಾಶನಮಾಡಬೇಕು.

೧೨೦. ಆ ಪಂಚಗವ್ಯಕ್ಕೆ ಕಪಿಲಾ ಗೋವಿನ ಗಂಜಲ, ಕೃಷ್ಣವರ್ಣದ ಹಸುವಿನ ಗೋಮಯ, ಬಿಳಿಯ ಹಸುವಿನ ಹಾಲು, ಕೆಂಪು ಹಸುವಿನ ಮೊಸರು.

೧೨೧. ಇವನ್ನೂ ಮತ್ತು ಚಿತ್ರವರ್ಣದ ಹಸುವಿನ ತುಪ್ಪವನ್ನೂ, ಜತೆಗೆ ಕುಶೋದಕವನ್ನೂ ಮಿಶ್ರಮಾಡಬೇಕು. ಇವನ್ನು ವೇದೋಕ್ತಮಂತ್ರಪೂರ್ವಕವಾಗಿ ಮೇಳನ ಮಾಡಿ, ಪೂಜಿಸಿ ಸೇವಿಸಬೇಕು.

ತತಃ ಪ್ರಭಾತಸಮಯೇ ಸ್ನಾತ್ವಾ ಸಂತರ್ಪ್ಯ ದೇವತಾಃ ।
ಬ್ರಾಹ್ಮಣಾನ್ವಾಚಯಿತ್ವಾ ತು ಭುಂಜೀಯಾದ್ವಾಗ್ಯತಃ ಶುಚಿಃ ॥೧೨೨॥

ಬ್ರಹ್ಮಕೂರ್ಚವ್ರತಂ ಹ್ಯೇತತ್ಸರ್ವಪಾಪಪ್ರಣಾಶನಂ ।
ಯದ್ಬಾಲ್ಯೇ ಯಚ್ಚ ಕೌಮಾರೇ ವಾರ್ಧಕ್ಯೇ ವಾಪಿ ಯತ್ಕೃತಂ ॥
ಬ್ರಹ್ಮಕೂರ್ಚೋಪವಾಸೇನ ತತ್ಸರ್ವಂ ನಶ್ಯತಿ ಕ್ಷಣಾತ್ ॥ ೧೨೩ ॥

ಅನಗ್ನಿಪಕ್ವಮಶ್ನಾತಿ ತೃತೀಯಾಯಾಂ ತು ಯೋ ನರಃ ।
ಗಾಂ ದತ್ವಾ ಶಿವಮಭ್ಯೇತಿ ಪುನರಾವೃತ್ತಿವರ್ಜಿತಂ ॥ ೧೨೪ ॥

ಏತದೃಷಿವ್ರತಂ ನಾಮ ಸರ್ವಮಾಂಗಲ್ಯಕಾರಕಂ ।
ಹೈಮಂ ಪಲದ್ವಯಾದೂರ್ಧ್ವಂ ರಥಮಶ್ವಯುಗಾನ್ವಿತಂ ॥ ೧೨೫ ॥

---

೧೨೨. ಮಾರನೆಯ ಪ್ರಾತಃಕಾಲ ಸ್ನಾನ ಸಂಧ್ಯಾವಂದನ ದೇವತಾರ್ಚನಾದಿಗಳನ್ನು ನೆರವೇರಿಸಿ, ಬ್ರಾಹ್ಮಣರಿಂದ ಸ್ವಸ್ತಿವಾಚನ ಮಾಡಿಸಿ, ಸತ್ಕರಿಸಿ ಅನಂತರ ಶುಚಿರ್ಭೂತನಾಗಿ ಮೌನವಾಗಿ ಭೋಜನ ಮಾಡಬೇಕು.

೧೨೩. ಈ ವ್ರತಕ್ಕೆ "ಬ್ರಹ್ಮಕೂರ್ಚವ್ರತ" ವೆಂದು ಹೆಸರು. ಇದನ್ನು ಆಚರಿಸಿದವನ ಸಮಸ್ತ ಪಾಪಗಳೂ ನಾಶವಾಗುವುವು. ವ್ರತಿಯು ಬಾಲ್ಯಾವಸ್ಥೆಯಲ್ಲಿ, ಕೌಮಾರಾವಸ್ಥೆಯಲ್ಲಿ, ವಾರ್ಧಕ್ಯಾವಸ್ಥೆಯಲ್ಲಿ ಮಾಡಿದ ಪಾಪಗಳೆಲ್ಲವೂ ಈ ಬ್ರಹ್ಮಕೂರ್ಚ ವ್ರತಾಂಗವಾದ ಉಪವಾಸದಿಂದ ಒಂದು ಕ್ಷಣ ಮಾತ್ರದಲ್ಲಿ ನಾಶವಾಗುವುವು.

೧೨೪. ತೃತೀಯೆಯ ದಿವಸ ಬೇಯಿಸದೆ ಇರುವ ಆ ಹಾ ರ ವ ನ್ನು. (ಕೋಸುಂಬರಿ, ಹಣ್ಣು, ಸೌತೇಕಾಯಿ, ಗೆಣಸು ಮುಂತಾದುವು) ಒಂದು ವರ್ಷ ಇದು ಮುಗಿದ ಮೇಲೆ ಬ್ರಾಹ್ಮಣನಿಗೆ ಗೋವನ್ನು ದಾನಕೊಡಬೇಕು.

೧೨೫. ಈ ವ್ರತಕ್ಕೆ "ಋಷಿವ್ರತ" ವೆಂದು ಹೆಸರು. ಈ ವ್ರತಾಚರಣೆ ಮಾಡುವುದರಿಂದ ಪುನರ್ಜನ್ಮರಹಿತವೂ, ಶುಭಕರವೂ ಆದ ಪದವನ್ನು ಪಡೆಯುತ್ತಾನೆ. ಅಲ್ಲದೆ ಇದು ಸಕಲ ಕಲ್ಯಾಣಗಳನ್ನು ಉಂಟುಮಾಡುವುದು.

ತಿಲ ಪ್ರಸ್ಥೋಪರಿಗತಂ ಸಿತಮಾಲ್ಯಯುಗಾನ್ವಿತಂ ।
ದತ್ತ್ವಾ ಕೃತೋಪವಾಸಸ್ತು ದಿವಿ ಕಲ್ಪಶತಂ ವಸೇತ್ ॥
ತದಂತೇ ರಾಜರಾಜಃ ಸ್ಯಾದಗ್ನಿವ್ರತಮಿದಂ ಸ್ಮೃತಂ　　॥ ೧೨೬ ॥

ಕೃತ್ವಾ ಪಲದ್ವಯಾದೂರ್ಧ್ವಂ ಶಯ್ಯಾಭ್ಯಾಂ ಸಂಯುತಂ ನರಃ ।
ಹೈಮಂ ರಥವರಂ ಶ್ರೇಷ್ಠಂ ಸರ್ವೋಪಸ್ಕರಸಂಯುತಂ　　॥ ೧೨೭ ॥

ಸತ್ಯಲೋಕೇ ವಸೇತ್ಕಲ್ಪಂ ಸಹಸ್ರಮಥ ಭೂಪತಿಃ ।
ಭವೇದುಪೋಷಿತೋ ದತ್ತ್ವಾ ಕರಿವ್ರತಮಿದಂ ಶುಭಂ　　॥ ೧೨೮ ॥

ಮುಖವಾಸಂ ಪರಿತ್ಯಜ್ಯ ಸಮಾಂತೇ ಗೋಪ್ರದೋ ಭವೇತ್ ।
ಯಕ್ಷಾಧಿಪಂ ಸಮಾಪ್ನೋತಿ ಸುಮುಖವ್ರತಮುಚ್ಯತೇ　　॥ ೧೨೯ ॥

---

೧೨೬. ಎರಡು ಪಲಕ್ಕಿಂತ ಹೆಚ್ಚು ತೂಕ ಚಿನ್ನದಲ್ಲಿ ಎರಡು ಕುದುರೆ ಸಹಿತವಾದ ರಥವನ್ನು ಮಾಡಿಸಿ, ಅದನ್ನು ಒಂದು ಕೊಳಗ ಎಳ್ಳಿನಿಂದ ರಚಿಸಿದ ವೇದಿಕೆಯ ಮೇಲಿಟ್ಟು, ಅದಕ್ಕೆ ಬಿಳಿಯ ಹೂವಿನ ಎರಡು ಹಾರಗಳನ್ನು ಹಾಕಬೇಕು. ಅನಂತರ ಉಪವಾಸದಿಂದಿದ್ದು, ಈ ಅಶ್ವಸಮೇತದ ರಥವನ್ನು ದಾನ ಮಾಡಬೇಕು. ಹೀಗೆ ಮಾಡಿದವನು ನೂರು ಕಲ್ಪಗಳವರೆಗೆ ಸ್ವರ್ಗಲೋಕದಲ್ಲಿ ವಾಸಿಸಿ, ಅನಂತರ ಭೂಲೋಕದಲ್ಲಿ ಜನಿಸಿ, ರಾಜಾಧಿರಾಜನಾಗುವನು. ಈ ವ್ರತಕ್ಕೆ "**ಅಗ್ನಿವ್ರತ**" ವೆಂದು ಹೆಸರು.

೧೨೭. ಎರಡು ಪಲಕ್ಕಿಂತ ಹೆಚ್ಚು ತೂಕ ಚಿನ್ನದಲ್ಲಿ ಎರಡು ಹಾಸಿಗೆ, ಆಸನಗಳಿಂದೊಡಗೂಡಿದ ಚಿನ್ನದ ರಥ ಇವನ್ನು ಮಾಡಿಸಿ, ಸಕಲ ಉಪಸ್ಕರಗಳೊಡನೆ ಆ ರಥವನ್ನು ಉಪವಾಸವಲ್ಲಿ ಬ್ರಾಹ್ಮಣನಿಗೆ ದಾನಮಾಡಬೇಕು.

೧೨೮. ಶುಭಕರವಾದ ಈ ವ್ರತಕ್ಕೆ "**ಕರಿವ್ರತ**" ವೆಂದು ಹೆಸರು. ಈ ವ್ರತಾನುಷ್ಠಾನ ಮಾಡಿದವನು ಸಾವಿರ ಕಲ್ಪಕಾಲ ಸತ್ಯಲೋಕದಲ್ಲಿ ಸುಖವಾಗಿದ್ದು, ಆ ಬಳಿಕ ಭೂಲೋಕದಲ್ಲಿ ಜನಿಸಿ ರಾಜನಾಗುವನು.

೧೨೯. ಒಂದು ಸಂವತ್ಸರ ಕಾಲ ಮುಖವಾಸ (?) ವನ್ನು ತ್ಯಾಗಮಾಡಿ ವರ್ಷದ ಕೊನೆಯಲ್ಲಿ ಬ್ರಾಹ್ಮಣನಿಗೆ ಗೋವನ್ನು ದಾನ ಕೊಡಬೇಕು. ಈ ವ್ರತಕ್ಕೆ "**ಸುಮುಖವ್ರತ**" ವೆಂದು ಹೆಸರು. ಇದನ್ನು ಅನುಷ್ಠಾನ ಮಾಡಿದವನು ಕುಬೇರನ ಲೋಕವನ್ನು ಹೊಂದುವನು.

**ನಿಶಿ ಕೃತ್ವಾ ಜಲೇ ವಾಸಂ ಪ್ರಭಾತೇ ಗೋಪ್ರದೋ ಭವೇತ್ ।**
**ವಾರುಣಂ ಲೋಕಮಾಪ್ನೋತಿ ವರುಣವ್ರತಮುಚ್ಯತೇ ॥ ೧೩೦ ॥**

**ಚಾಂದ್ರಾಯಣಂ ಚ ಯಃ ಕುರ್ಯಾದ್ಧೈಮಂ ಚಂದ್ರಂ ನಿವೇದಯೇತ್**
**ಚಂದ್ರವ್ರತಮಿದಂ ಪ್ರೋಕ್ತಂ ಚಂದ್ರಲೋಕಪ್ರದಾಯಕಂ ॥ ೧೩೧ ॥**

**ಜ್ಯೇಷ್ಠೇ ಪಂಚತಪಾಃ ಸಾಯಂ ಹೇಮಧೇನುಪ್ರದೋ ದಿವಂ ।**
**ಅಷ್ಟಮೀಚತುರ್ದಶ್ಯೋ ರುದ್ರವ್ರತಮಿದಂ ಸ್ಮೃತಂ ॥ ೧೩೨ ॥**

**ಅನುಲೇಪನಂ ಯಃ ಕುರ್ಯಾತ್ತೃತೀಯಾಯಾಂ ಶಿವಾಲಯೇ ।**
**ಸ ಸ್ವರ್ಗಂ ಧೇನುದೋ ಯಾತಿ ಭವಾನೀವ್ರತಮುಚ್ಯತೇ ॥ ೧೩೩ ॥**

---

೧೩೦. ರಾತ್ರಿಯೆಲ್ಲಾ ನೀರಿನಲ್ಲಿ ವಾಸ ಮಾಡಿ, ಬೆಳಗಾಗುತ್ತಲೇ ವರುಣನನ್ನು ವಿಧಿಪೂರ್ವಕ ಅರ್ಚಿಸಿ, ಬ್ರಾಹ್ಮಣನಿಗೆ ಗೋದಾನ ಮಾಡಬೇಕು. ಈ ವ್ರತಕ್ಕೆ "**ವರುಣವ್ರತ**" ವೆಂದು ಹೆಸರು. ಈ ವ್ರತಾನುಷ್ಠಾನ ಮಾಡಿದವನಿಗೆ ದೇಹಾವಸಾನದಲ್ಲಿ ವರುಣಲೋಕ ಪ್ರಾಪ್ತಿಯಾಗುವುದು.

೧೩೧. ಪ್ರತಿ ನಿತ್ಯವೂ ಚಾಂದ್ರಾಯಣ ವ್ರತವನ್ನು ಮಾಡುತ್ತಾ ಸಂಕಲ್ಪಿಸಿದ ಅವಧಿ ಮುಗಿದ ಅನಂತರ, ಚಿನ್ನದಿಂದ ಚಂದ್ರಪ್ರತಿಮೆಯನ್ನು ಮಾಡಿಸಿ ಅದನ್ನು ಬ್ರಾಹ್ಮಣನಿಗೆ ದಾನಮಾಡಬೇಕು. ಇದರಿಂದ ಚಂದ್ರಲೋಕ ಪ್ರಾಪ್ತಿಯಾಗುವುದು. ಈ ವ್ರತಕ್ಕೆ "**ಚಂದ್ರವ್ರತ**" ವೆಂದು ಹೆಸರು.

೧೩೨. ಜ್ಯೇಷ್ಠಮಾಸದ ಅಷ್ಟಮೀ ಚತುರ್ದಶೀ ಈ ತಿಥಿಗಳಲ್ಲಿ ಪಂಚಾಗ್ನಿ ಮಧ್ಯೆ ತಪಸ್ಸು ಮಾಡುತ್ತಾ, ಸಾಯಂಕಾಲ ಗೋದಾನಮಾಡುತ್ತಾ ಬರಬೇಕು. ಹೀಗೆ ಮಾಡಿದರೆ ಸಕಲ ಇಷ್ಟಾರ್ಥಗಳೂ ಸಿದ್ಧಿಸುವುವು, ಅಲ್ಲದೆ ರುದ್ರಲೋಕವೂ ಪ್ರಾಪ್ತಿಯಾಗುವುದು. ಈ ವ್ರತಕ್ಕೆ "**ರುದ್ರವ್ರತ**" ವೆಂದು ಹೆಸರು.

೧೩೩. ಪ್ರತಿ ಪಕ್ಷದ ತೃತೀಯೆಯ ದಿನ ದೇವಿಯ ದೇವಾಲಯಕ್ಕೆ ಹೋಗಿ, ಅಭಿಷೇಕಾದಿಗಳನ್ನು ಮಾಡಿಸಿ, ದಿವ್ಯಗಂಧಾದ್ಯನುಲೇಪನಗಳನ್ನು ಮಾಡಿಸಬೇಕು. ಅನಂತರ ಮನೆಗೆ ಬಂದು ಗೋವನ್ನು ದಾನಮಾಡಬೇಕು. ಹೀಗೆ ಮಾಡಿದರೆ ಸ್ವರ್ಗಲೋಕ ಪ್ರಾಪ್ತಿಯಾಗುವುದು. ಈ ವ್ರತಕ್ಕೆ "**ಭವಾನೀವ್ರತ**" ವೆಂದು ಹೆಸರು.

ಮಾಘೇ ನಿಶ್ಯಾರ್ದ್ರವಾ ಸಾಃ ಸ್ಯಾತ್ಸಪ್ತಮ್ಯಾಂ ಗೋಪ್ರದೋ ಭವೇತ್।
ದಿವಿ ಕಲ್ಪಂ ವಸಿತ್ವೇಹ ರಾಜಾ ಸ್ಯಾತ್ತಾಪನಂ ವ್ರತಂ ॥ ೧೩೪ ॥

ದತ್ವಾಶ್ವ ಕೃತೋಪವಾಸಸ್ತು ದಿವಿ ಕಲ್ಪಶತಂ ವಸೇತ್ ।
ತದಂತೇ ರಾಜರಾಜಃ ಸ್ಯಾದಶ್ವವ್ರತಮಿದಂ ಸ್ಮೃತಂ ॥ ೧೩೫ ॥

ತದ್ವತ್ಫಲದ್ವಯಾದೂರ್ಧ್ವಂ ಕರಿಭ್ಯಾಂ ಸಂಯುತಂ ನರಃ ।
ಹೈಮಂ ರಥಂ ನರಶ್ರೇಷ್ಠ ಸರ್ವೋಪಸ್ಕರಣಾನ್ವಿತಂ ॥ ೧೩೬ ॥

ತ್ರಿರಾತ್ರೋಪೋಷಿತೋ ದದ್ಯಾತ್ಫಾಲ್ಗುನ್ಯಾಂ ಭವನಂ ಶುಭಂ ।
ಆದಿತ್ಯಲೋಕಮಾಪ್ನೋತಿ ಪೂಜಿತಸ್ಸ ಸುರಾಸುರೈಃ ॥ ೧೩೭ ॥

ಸುರಲೋಕಮವಾಪ್ನೋತಿ ಧಾಮವ್ರತಸಮನ್ವಿತಂ ।
ತ್ರಿಸಂಧ್ಯಂ ಪೂಜ್ಯ ದಾಂಪತ್ಯಮುಪವಾಸೀ ವಿಭೂಷಣೈಃ ॥ ೧೩೮ ॥

---

೧೩೪. ಮಾಘ ಮಾಸದಲ್ಲಿ ರಾತ್ರಿಯ ಹೊತ್ತಿನಲ್ಲಿ ಒದ್ದೆಯ ಬಟ್ಟೆಗಳನ್ನೇ ಧರಿಸಿ ಇರುತ್ತಾ, ರಥಸಪ್ತಮಿಯ ದಿನ ಗೋದಾನವನ್ನು ಮಾಡಬೇಕು. ಇದನ್ನು (ತಪನಸಂಬಂಧಿ) "ತಾಪನವ್ರತ" ವೆನ್ನುವರು. ಇದನ್ನು ಆಚರಿಸುವುದರಿಂದ ಸ್ವರ್ಗಲೋಕದಲ್ಲಿ ಕಲ್ಪಾಂತ ಪರ್ಯಂತ ವಾಸಿಸಿ ಅಲ್ಲಿ ಸುಖಾನುಭವಮಾಡಿ ಬಳಿಕ ಭೂಲೋಕದಲ್ಲಿ ಜನಿಸಿ ರಾಜನಾಗುವನು.

೧೩೫. ಅಶ್ವಿನೀ ನಕ್ಷತ್ರದ ದಿನ ಉಪವಾಸವಿದ್ದು, ಬ್ರಾಹ್ಮಣನಿಗೆ ಅಶ್ವ ದಾನ ಮಾಡಿದವನು ಸ್ವರ್ಗ ಲೋಕದಲ್ಲಿ ನೂರು ಕಲ್ಪಗಳವರೆಗೆ ವಾಸ ಮಾಡಿ, ಅನಂತರ ಭೂಲೋಕದಲ್ಲಿ ಜನಿಸಿ, ಚಕ್ರವರ್ತಿಯಾಗುವನು. ಈ ವ್ರತಕ್ಕೆ "ಅಶ್ವವ್ರತ" ವೆಂದು ತಿಳಿಯಬೇಕು.

೧೩೬-೧೩೮. ಎರಡು ಪಲಕ್ಕಿಂತ ಹೆಚ್ಚು ತೂಕವಲ್ಲಿ, ಎರಡು ಆನೆಸಹಿತ ಚಿನ್ನದ ರಥವನ್ನು ಮಾಡಿಸಿ ಜತೆಗೆ, ಸರ್ವೋಪಸ್ಕರ ಸಹಿತವಾದ ಒಂದು ಮನೆಯನ್ನೂ ಸಿದ್ಧಪಡಿಸಿ, ಫಾಲ್ಗುಣ ಮಾಸದಲ್ಲಿ ಮೂರು ರಾತ್ರಿ ಉಪವಾಸ ಮಾಡಿ ಆ ರಥವನ್ನೂ ಗೃಹವನ್ನೂ ಬ್ರಾಹ್ಮಣನಿಗೆ ದಾನ ಮಾಡಬೇಕು. ಇದಕ್ಕೆ "ಧಾಮವ್ರತ" ವೆಂದು ಹೆಸರು. ಈ ವ್ರತಾನುಷ್ಠಾನಮಾಡಿದವನು ಆದಿತ್ಯ ಲೋಕವನ್ನು ಹೊಂದಿ, ಅಲ್ಲಿ ದೇವದಾನವರೆಲ್ಲರಿಂದಲೂ ಪೂಜಿತನಾಗುವನು.

ಪೌರ್ಣಮಾಸ್ಯಾಮವಾಪ್ನೋತಿ ಮೋಕ್ಷಮಿಂದುವ್ರತಾದಿಹ ॥ ೧೩೯ ॥

ದತ್ವಾ ಸಿತದ್ವಿತೀಯಾಯಾಮಿಂದೋರ್ಲವಣ ಭೋಜನಂ ।
ಕಾಂಸ್ಯಂ ಸವಸ್ತ್ರಂ ರಾಜೇಂದ್ರ ದಕ್ಷಿಣಾಸಹಿತಂ ತಥಾ ॥ ೧೪೦ ॥

ಸಮಾಂತೇ ಗೋಪ್ರದೋ ಯಾತಿ ವಿಪ್ರಾಯ ಶಿವಮಂದಿರಂ ।
ಕಲ್ಪಾಂತೇ ರಾಜರಾಜಃ ಸ್ಯಾತ್ಸೋಮವ್ರತಮಿದಂ ಸ್ಮೃತಂ ॥ ೧೪೧ ॥

ಪ್ರತಿಪದ್ಯೇಕಭಕ್ತಾಶೀ ಸಮಾಂತೇ ಕಪಿಲಾಪ್ರದಃ ।
ವೈಶ್ವಾನರಪುರಂ ಯಾತಿ ಆಗ್ನೇಯವ್ರತ ಮುಚ್ಯತೇ ॥ ೧೪೨ ॥

---

೧೩೯. ಪೂರ್ಣಿಮಾ ದಿವಸ ಉಪವಾಸವಿದ್ದು, ಮೂರು ಸಂಧ್ಯಾ ಕಾಲಗಳಲ್ಲಿಯೂ ದಂಪತಿಗಳನ್ನು ವಸ್ತ್ರಾಭರಣಗಳಿಂದ ಪೂಜಿಸಬೇಕು. ಇದನ್ನು "**ಚಂದ್ರವ್ರತ**"ವೆನ್ನುವರು. ಈ ವ್ರತಾಚರಣದಿಂದ ಮೋಕ್ಷ ಲಭಿಸುವುದು.

೧೪೦. ಪ್ರತಿ ತಿಂಗಳ ಶುಕ್ಲ ಪಕ್ಷದ ಬಿದಿಗೆಯ ದಿನ, ಲವಣಯುಕ್ತವಾದ ವಸ್ತುಗಳಿಂದ ವಿಪ್ರರಿಗೆ ಭೋಜನಮಾಡಿಸಬೇಕು. ಬಳಿಕ ಕಂಚಿನ ಪಾತ್ರೆ, ವಸ್ತ್ರ, ದಕ್ಷಿಣೆ ಇವನ್ನು ಬ್ರಾಹ್ಮಣರಿಗೆ ಕೊಡಬೇಕು.

೧೪೧. ಹೀಗೆ ಒಂದು ವರ್ಷ ಆಚರಿಸಿದ ಮೇಲೆ ಕೊನೆಯಲ್ಲಿ ಒಂದು ಗೋವನ್ನು ದಾನಕೊಡಬೇಕು. ಹೀಗೆ ಮಾಡಿದವರು ಒಂದು ಕಲ್ಪಕಾಲ ಶಿವಲೋಕದಲ್ಲಿದ್ದು, ಬಳಿಕ ಭೂಲೋಕದಲ್ಲಿ ಜನಿಸಿ, ರಾಜಾಧಿರಾಜನಾಗುವನು. ಈ ವ್ರತಕ್ಕೆ "**ಸೋಮವ್ರತ**"ವೆಂದು ಹೆಸರು.

೧೪೨. ಪ್ರತಿ ಪಾಡ್ಯಮಿಯ ದಿನ ಒಂದುಹೊತ್ತು ಭೋಜನಮಾಡುತ್ತಾ, ಹೀಗೆ ಒಂದು ವರ್ಷ ಆಚರಿಸಿ, ವರ್ಷಾಂತ್ಯದಲ್ಲಿ ಕಪಿಲ ವರ್ಣದ ಗೋವನ್ನು ಬ್ರಾಹ್ಮಣನಿಗೆ ದಾನ ಕೊಡಬೇಕು. ಈ ವ್ರತಕ್ಕೆ "**ಆಗ್ನೇಯವ್ರತ**"ವೆಂದು ಹೆಸರು. ಇದನ್ನು ಅನುಷ್ಠಾನ ಮಾಡಿದವರಿಗೆ ಅಗ್ನಿಲೋಕ ವಾಸವು ಲಭಿಸುವುದು.

ಏಕಾದಶ್ಯಾಂ ಮಾಘಮಾಸೇ ಚತುರ್ದಶ್ಯಷ್ಟಮಿಷು ಚ ।
ಏಕ ಭಕ್ತೇನ ಯೋ ದದ್ಯಾದ್ಬಾಲತಾನ್ಯಜಿನಾನಿ(?) ಚ ॥ ೧೪೩ ॥

ಉಪಾನಹೌ ಕಂಬಲಾಶ್ಚ ಚೈತ್ರೇ ಛತ್ರಾದಿಕಂ ತತಃ ।
ಕರಪತ್ರಾದಿಕಂ ಚಾಪಿ ಯಥಾಶಕ್ತ್ಯಾ ವಿಚಕ್ಷಣಃ ॥ ೧೪೪ ॥

ಬ್ರಾಹ್ಮಣಾನಾಂ ಮಹಾರಾಜ ಸೋಽಶ್ವಮೇಧ ಫಲಂ ಲಭೇತ್ ।
ಏತತ್ಸೌಖ್ಯವ್ರತಂ ನಾಮ ಸರ್ವಸೌಖ್ಯಪ್ರದಾಯಕಂ ॥ ೧೪೫ ॥

ದಶಮ್ಯಾಮೇಕಭಕ್ತಾಶೀ ಸಮಾಂತೇ ದಶಧೇನುದಃ ।
ದಿಶಶ್ಚ ಕಾಂಚನೀರ್ದದ್ಯಾನ್ನಾರೀರೂಪಾ ಯುಧಿಷ್ಠಿರ ॥ ೧೪೬ ॥

---

೧೪೩. ಮಾಘ ಮಾಸದ ಅಷ್ಟಮೀ, ಏಕಾದಶೀ, ಚತುರ್ದಶೀ ಈ ತಿಥಿಗಳಲ್ಲಿ ನಕ್ತಭೋಜನ ಮಾಡುತ್ತಾ ಬೀಸಣಿಗೆ, ಕೃಷ್ಣಾಜಿನ.

೧೪೪. ಮತ್ತು ಪಾದುಕೆ, ಕಂಬಳಿ, ಇವುಗಳನ್ನೂ, ಇದರಂತೆಯೇ ಚೈತ್ರ ಮಾಸದಲ್ಲಿ ಅದೇ ತಿಥಿಗಳಲ್ಲಿ ಛತ್ರಿ ಮುಂತಾದುವನ್ನೂ ಕರಪತ್ರವನ್ನೂ.

೧೪೫. ತನ್ನ ಶಕ್ತ್ಯನುಸಾರ ಬ್ರಾಹ್ಮಣರಿಗೆ ದಾನಕೊಡಬೇಕು. ಅಯ್ಯಾ ರಾಜನೇ! ಇದರಿಂದ ಅಶ್ವಮೇಧಯಾಗ ಮಾಡಿದಷ್ಟು ಫಲ ಪ್ರಾಪ್ತಿಯಾಗುವುದು. ಇದಕ್ಕೆ "**ಸೌಖ್ಯವ್ರತ**" ವೆಂದು ಹೆಸರು. ಇದು ಸಕಲ ಸೌಖ್ಯಪ್ರದವಾದ ವ್ರತವೆನಿಸಿದೆ.

೧೪೬. ಅಯ್ಯಾ ಯುಧಿಷ್ಠಿರ! ಒಂದು ವರ್ಷಪರ್ಯಂತ ನಿತ್ಯವೂ ಏಕಭುಕ್ತ ವ್ರತಮಾಡಿ, ವರ್ಷಾಂತ್ಯದಲ್ಲಿ ಹತ್ತು ಗೋವುಗಳನ್ನು ಸತ್ಪಾತ್ರದಲ್ಲಿ ದಾನ ಮಾಡಬೇಕು. ದಿಕ್ಕುಗಳನ್ನು ಸ್ತ್ರೀರೂಪದಲ್ಲಿ ಚಿನ್ನದಿಂದ ಮಾಡಿಸಿ, ಅದನ್ನು ತಿಲ ಪೂರ್ಣವಾದ ಕುಂಭದ ಮೇಲಿಟ್ಟು ಪೂಜಿಸಿ, ಅದನ್ನೂ ಗೋವಿನ ಜತೆಯಲ್ಲೇ ದಾನಮಾಡಬೇಕು.

ತಿಲದ್ರೋಣೋಪರಿಗತೋ ಬ್ರಹ್ಮಾಂಡಾಧಿಪತಿರ್ಭವೇತ್ ।
ಏತದ್ವಿಶ್ವವ್ರತಂ ನಾಮ ಮಹಾಪಾತಕನಾಶನಂ ॥ ೧೪೭ ॥

ಸಂಪೂಜ್ಯ ಸಿತಸಪ್ತಮ್ಯಾಂ ಭಾನುಂ ಧಾನ್ಯಾನಿ ಸಪ್ತ ಯಃ ।
ದದಾತಿ ನಕ್ತಭುಗ್ರಾಜನ್ ಲವಣೇನ ಸಮಂ ದ್ವಿಜೇ ॥ ೧೪೮ ॥

ಸ ತಾರಯಪಿ ಸಪ್ತಾಷ್ಟೌ ಕುಲಾನ್ಯಾತ್ಮಾನಮೇವ ಚ ।
ಏತದ್ಧಾನ್ಯವ್ರತಂ ನಾಮ ಧನಧಾನ್ಯಪ್ರದಾಯಕಂ ॥ ೧೪೯ ॥

ಮಾಸೋಪವಾಸೀ ಯೋ ದದ್ಯಾದ್ಧೇನುಂ ವಿಪ್ರಾಯ ಶೋಭನಂ ।
ಸ ವೈಷ್ಣವಂ ಪದಂ ಯಾತಿ ಭೀಮವ್ರತಮಿದಂ ಸ್ಮೃತಂ ॥ ೧೫೦ ॥

---

೧೪೭. ಈ ವ್ರತಕ್ಕೆ "ವಿಶ್ವವ್ರತ" ವೆಂದು ಹೆಸರು. ಇದು ಪಂಚ ಮಹಾಪಾತಕಗಳನ್ನೂ ಹೋಗಲಾಡಿಸುವುದು. ಈ ವ್ರತಾನುಷ್ಠಾನ ಮಾಡಿದವನು ಪಾಪರಹಿತನಾಗುವುದಲ್ಲದೆ ಬ್ರಹ್ಮಾಂಡಕ್ಕೇ ಅಧಿಪತಿಯಾಗುವನು.

೧೪೮. ಪ್ರತಿ ಶುಕ್ಲಪಕ್ಷದ ಸಪ್ತಮಿಯಲ್ಲೂ ಸೂರ್ಯನನ್ನು ಪೂಜಿಸಿ, ಆ ದಿನ ನಕ್ತಭೋಜನ ಮಾಡುತ್ತಾ ವರ್ಷಾಂತ್ಯದಲ್ಲಿ ಸಪ್ತಧಾನ್ಯ, ಲವಣ ಇವನ್ನು ಬ್ರಾಹ್ಮಣನಿಗೆ ದಾನ ಕೊಡಬೇಕು.

೧೪೯. ಈ ವ್ರತಕ್ಕೆ "ಧಾನ್ಯ ವ್ರತ" ವೆಂದು ಹೆಸರು. ಇದು ಧನ ಧಾನ್ಯ ಸಂಪತ್ತಿಯನ್ನು ಕೊಡುವುದು, ಈ ವ್ರತಾನುಷ್ಠಾನ ಮಾಡಿದವನಿಗೆ ಈ ಫಲವಲ್ಲದೆ, ತನ್ನ ಕುಲದ ಏಳು ತಲೆಮಾರಿನವರನ್ನು ಉದ್ಧರಿಸಿ ತಾನೂ ಉದ್ಧೃತನಾಗುವನು.

೧೫೦. ಒಂದು ತಿಂಗಳಕಾಲ ಉಪವಾಸ ಮಾಡಿ, ಅನಂತರದಲ್ಲಿ ಶುಭ ಕರವಾದ ಗೋವನ್ನು ಬ್ರಾಹ್ಮಣರಿಗೆ ದಾನಕೊಡಬೇಕು. ಹೀಗೆ ಮಾಡುವುದ ರಿಂದ ವ್ರತಿಗೆ ವೈಕುಂಠಲೋಕ ಪ್ರಾಪ್ತಿಯಾಗುವುದು. ಈ ವ್ರತಕ್ಕೆ "ಭೀಮ ವ್ರತ" ವೆಂದು ಹೆಸರು.

ಪಕ್ಷೋಪವಾಸೀ ಯೋ ದದ್ಯಾದ್ವಿಪ್ರಾಯ ಕಪಿಲಾದ್ವಯಂ ।
ಸ ಬ್ರಹ್ಮಲೋಕಮಾಪ್ನೋತಿ ಪೂಜಿತಸ್ಸುರಸತ್ತಮೈಃ ॥ ೧೫೧ ॥

ದದ್ಯಾತ್ರಿಂಶತ್ಪಲಾದೂರ್ಧ್ವಂ ಮಹೀಂ ಕೃತ್ವಾ ತು ಕಾಂಚನೀಂ ।
ಕುಲಾಚಲಾದ್ರಿಸಹಿತಾಂ ತಿಲವಸ್ತ್ರಸಮನ್ವಿತಾಂ ॥ ೧೫೨ ॥

ತಿಲದ್ರೋಣೋಪರಿಗತಾಂ ಬ್ರಾಹ್ಮಣಾಯ ಕುಟುಂಬಿನೇ ।
ದಿನಂ ಪಯೋವ್ರತಸ್ತಿಷ್ಠೇದ್ರುದ್ರಲೋಕೇ ಮಹೀಯತೇ ॥ ೧೫೩ ॥

ಏತನ್ಮಹೀವ್ರತಂ ಪ್ರೋಕ್ತಂ ಸಪ್ತಕಲ್ಪಾನುವರ್ತಕಂ ।
ಮಾಘಮಾಸೇಽಥ ಚೈತ್ರೇ ವಾ ಗುಡಧೇನುಪ್ರದೋ ಭವೇತ್ ॥ ೧೫೪ ॥

---

೧೫೧. ಹದಿನೈದು ದಿವಸಗಳು (ಒಂದು ಪಕ್ಷಕಾಲ) ಉಪವಾಸ ವ್ರತವನ್ನು ಆಚರಿಸಿ, ನಿಯಮವು ಮುಗಿದ ಮೇಲೆ, ಎರಡು ಕಪಿಲ ವರ್ಣದ ಗೋವುಗಳನ್ನು ತಂದು, ಸತ್ಪಾತ್ರರಿಗೆ ದಾನಮಾಡಬೇಕು. ಈ ವ್ರತಾನುಷ್ಠಾನ ಮಾಡುವುದರಿಂದ ದೇವೋತ್ತಮರಿಂದ ಪೂಜಿತನಾಗಿ ಬ್ರಹ್ಮಲೋಕವನ್ನು ಹೊಂದುತ್ತಾನೆ.

೧೫೨. ಮೂವತ್ತು ಪಲಕ್ಕಿಂತ ಹೆಚ್ಚಿನ ತೂಕವುಳ್ಳ ಚಿನ್ನದಿಂದ, ಸಪ್ತಕುಲ ಪರ್ವತ ಸಮೇತವಾದ ಭೂಮಿಯ ಪ್ರತಿಮೆಯನ್ನು ಮಾಡಿಸಿ, ವಸ್ತ್ರ, ತಿಲಪೂರ್ಣವಾದ ಕುಂಭ, ಇವುಗಳ ಮೇಲೆ ಆ ಪ್ರತಿಮೆಯನ್ನಿಟ್ಟು ಪೂಜಿಸಿ, ಸಂಕಲ್ಪಿಸಿದ ನಿಯಮ ಪೂರ್ತಿಯಾಗುವವರೆಗೂ ಕ್ಷೀರಾಹಾರವನ್ನು ಮಾತ್ರ ಸೇವಿಸುತ್ತಿದ್ದು, ನಿಯಮ ಮುಗಿದ ದಿನ ಅದನ್ನು ಸಂಸಾರಿಯಾದ ವಿಪ್ರೋತ್ತಮನಿಗೆ ದಾನ ಮಾಡಬೇಕು.

೧೫೩. ಈ ವ್ರತಕ್ಕೆ "ಮಹೀವ್ರತ" ವೆಂಬ ಹೆಸರು ಪ್ರಸಿದ್ಧವಾಗಿದೆ. ಈ ವ್ರತವನ್ನು ಅನುಷ್ಠಾನ ಮಾಡಿದವನಿಗೆ ಇಂದ್ರಲೋಕ ಪ್ರಾಪ್ತಿಯಾಗಿ ಅಲ್ಲಿ ಏಳು ಕಲ್ಪಗಳವರೆಗೂ ವಾಸಿಸುವ ಪುಣ್ಯ ಬರುವುದು.

೧೫೪. ಮಾಘ ಶುದ್ಧ ತದಿಗೆ, ಚೈತ್ರ ಶುದ್ಧ ತದಿಗೆ, ಈ ದಿನಗಳಲ್ಲಿ ಬೆಲ್ಲ ಹಾಕಿದ ಆಹಾರವನ್ನೇ ಸೇವಿಸಿ, ಅನಂತರ ಸಕಲ ಪರಿಕರಗಳೊಡನೆ ಗುಡಧೇನುವನ್ನು ದಾನಮಾಡಬೇಕು.

ಗುಡವ್ರತಸ್ತೃತೀಯಾಯಾಂ ಸರ್ವೋಪಸ್ಕರಣೈರ್ಯುತಃ ।
ಗೌರೀಲೋಕಮವಾಪ್ನೋತಿ ಪೂಜ್ಯತೇಽಪ್ಸರಸಾಂ ಗಣೈಃ ॥ ೧೫೫ ॥

ಉಮಾವ್ರತಮಿದಂ ಪ್ರೋಕ್ತಂ ಸತತಾನಂದದಾಯಕಂ ।
ವತ್ಸರಂ ತ್ವೇಕಭಕ್ತಾಶೀ ಸಭಕ್ಷ್ಯಜಲಕುಂಭದಃ ॥ ೧೫೬ ॥

ಶಿವಲೋಕೇ ವಸೇತ್ಕಲ್ಪಂ ಪ್ರಾಪ್ತಿವ್ರತಮಿದಂ ಸ್ಮೃತಂ ।
ಕಾರ್ತಿಕಾದಿತೃತೀಯಾಯಾಂ ಪ್ರಾಶ್ಯ ಗೋಮೂತ್ರಯಾವಕಂ ॥

ಗೌರೀಲೋಕೇ ವಸೇತ್ಕಲ್ಪಂ ತತೋ ರಾಜಾ ಭವೇದಿಹ ।
ಏತದ್ರುದ್ರವ್ರತಂ ನಾಮ ಮಹಾ ಕಲ್ಯಾಣಕಾರಕಂ ॥ ೧೫೮ ॥

---

೧೫೫. ಈ ವ್ರತಕ್ಕೆ "**ಉಮಾವ್ರತ**" ವೆಂದು ಹೆಸರು. ಇದನ್ನು ಆಚರಿಸಿದವರು ಇಹದಲ್ಲಿ ಆನಂದವನ್ನು ಪಡೆಯುವರಲ್ಲದೆ ದೇಹಾಂತ್ಯದಲ್ಲಿ ಗೌರೀ ಲೋಕವನ್ನು ಸೇರಿ, ಅಲ್ಲಿ ಅಪ್ಸರ ಸ್ತ್ರೀಸಮೂಹದಿಂದ ಪೂಜಿಸಲ್ಪಡುವರು.

೧೫೬. ಒಂದು ವರ್ಷಕಾಲ ಪ್ರತಿದಿನವೂ ಏಕಭುಕ್ತವನ್ನು ಆಚರಿಸಿ ನಿಯಮ ಮುಗಿದನಂತರ ಕೊನೆಯಲ್ಲಿ ಭಕ್ಷ್ಯಸಮೇತವಾದ ಪಾತ್ರೆ, ಜಲಕುಂಭ ಇವನ್ನು ದಾನ ಮಾಡಬೇಕು. ಇದಕ್ಕೆ "**ಪ್ರಾಪ್ತಿವ್ರತ**" ವೆಂದು ಹೆಸರು. ಈ ವ್ರತ ಮಾಡಿದವರು ಒಂದು ಕಲ್ಪ ಕಾಲ ಶಿವಲೋಕದಲ್ಲಿ ವಾಸಮಾಡುವರು.

೧೫೭. ಕಾರ್ತಿಕ ಮಾಸದ ಶುಕ್ಲ ತದಿಗೆ ದಿನ ಮೊದಲು ಮಾಡಿ, ಕ್ರಮ ವಾಗಿ ಆ ವರ್ಷ ಪೂರ್ತ ಮುಂದಿನ ತದಿಗೆಗಳಲ್ಲೆಲ್ಲಾ, ಗೋಮೂತ್ರ, ಅಲಸಂದೆ ಇವೆರಡನ್ನೂ ಪ್ರಾಶನ ಮಾಡುತ್ತಾ ಬರಬೇಕು.

೧೫೮. ಒಂದು ವರ್ಷಪರ್ಯಂತ ಈ ರೀತಿ ಅನುಷ್ಠಾನ ಮಾಡುತ್ತಾ ಬಂದರೆ, ಅವರಿಗೆ ಗೌರೀಲೋಕ ಪ್ರಾಪ್ತಿಯಾಗಿ, ಅಲ್ಲಿ ಒಂದು ಕಲ್ಪ ಕಾಲದ ವರೆಗೆ ವಾಸ ಮಾಡುವರು. ಅನಂತರ ಭೂಲೋಕದಲ್ಲಿ ಜನ್ಮವೆತ್ತಿ ರಾಜರಾಗು ವರು. ತುಂಬ ಶುಭಕರವಾದ ಈ ವ್ರತವನ್ನು "**ರುದ್ರವ್ರತ**" ವೆನ್ನುವರು.

ಚೈತ್ರೀ ತ್ರಿರಾತ್ರಿಂ ನಕ್ತಾಶೀ ನದ್ಯಾಂ ಸ್ನಾತ್ವಾ ದದಾತಿ ಯಃ ।
ಅಜಾಃ ಪಯಸ್ವಿನೀಃ ಪಂಚ ಬ್ರಾಹ್ಮಣಾಯ ಕುಟುಂಬಿನೇ ॥ ೧೫೯ ॥

ನ ಜಾಯತೇ ಪುನರಸೌ ಜೀವಲೋಕೇ ಕದಾಚನ ।
ಏತದ್ಬಸ್ತವ್ರತಂ ಪ್ರೋಕ್ತಂ ಸರ್ವವ್ಯಾಧಿವಿನಾಶನಂ ॥ ೧೬೦ ॥

ಕನ್ಯಾದಾನಂ ತು ಯಃಕುರ್ಯಾದುದ್ವಾಹಂ ಕಾರಯೇಚ್ಚ ಯಃ ।
ಏಕವಿಂಶಕುಲೋಪೇತೋ ಬ್ರಹ್ಮಲೋಕಂ ಸ ಗಚ್ಛತಿ ॥ ೧೬೧ ॥

ಕನ್ಯಾದಾನವ್ರತಾದನ್ಯಂ ನಚಾಸ್ತ್ಯಭ್ಯಧಿಕಂ ಕ್ವಚಿತ್ ॥ ೧೬೨ ॥

---

೧೫೯. ಹಾಲು ಕರೆಯುವ ಐದು ಆಡುಗಳನ್ನು ಹುಡುಕಿ ತಂದು ಸಿದ್ಧಪಡಿಸಿದ್ದು, ಚೈತ್ರ ಮಾಸದಲ್ಲಿ ಎರಡು ದಿವಸ ನಕ್ತವ್ರತವನ್ನು ಮಾಡಿ, ಮೂರನೆ ದಿನ ಪ್ರಾತಃಕಾಲ ನದಿಗೆ ಹೋಗಿ ಸ್ನಾನಮಾಡಬೇಕು. ಆಹ್ನಿಕಾದಿಗಳಿಂದ ಪರಿಶುದ್ಧನಾಗಿ.

೧೬೦. ಆ ಆಡುಗಳನ್ನು ಸಕುಟುಂಬರಾದ ವಿಪ್ರರಿಗೆ ದಾನಮಾಡಬೇಕು. ಈ ರೀತಿ ಆಚರಿಸುವುದರಿಂದ ಆ ವ್ರತಕರ್ತೃವಿಗೆ ಪುನರ್ಜನ್ಮರಹಿತವೂ, ಶಾಶ್ವತವೂ ಆದ ಸದ್ಗತಿಯುಂಟಾಗುವುದು. ಸರ್ವರೋಗ ಪರಿಹಾರಕವಾದ ಈ ವ್ರತಕ್ಕೆ “ ಬಸ್ತವ್ರತ ” ವೆಂದು ಹೆಸರು.

೧೬೧. ಕನ್ಯಾಶುಲ್ಕವನ್ನು ತೆಗೆದುಕೊಳ್ಳದೆ ಕನ್ಯಾದಾನಮಾಡಿ ಮದುವೆ ಮಾಡಿದವನು, ತನ್ನ ಕುಲದಲ್ಲಿ ಇಪ್ಪತ್ತು ತಲೆಮಾರಿನವರನ್ನು ಉದ್ಧಾರಮಾಡಿ, ತಾನೂ ಬ್ರಹ್ಮಲೋಕವನ್ನು ಸೇರುತ್ತಾನೆ.

೧೬೨. ಅಯ್ಯಾ ರಾಜನೆ! ಈ “ **ಕನ್ಯಾದಾನವ್ರತ** ” ಕ್ಕಿಂತ ಉತ್ಕೃಷ್ಟವಾದ್ದು ಯಾವುದೂ ಇಲ್ಲ. ಈ ಕನ್ಯಾದಾನ ಮಾಡುವವರಿಗೆ, ಅಕ್ಷಯವಾದ ಸ್ವರ್ಗಲೋಕವೇರ್ಪಟ್ಟಿರುವುದು.

ತಿಲಾಪಿಷ್ಟಮಯಂ ಕೃತ್ವಾ ಗಜಂ ಹೇಮವಿಭೂಷಿತಂ ।
ಕುರ್ಯಾತ್ಕುಶಮಯಂ ತದ್ವದಾರೋಹಕಸಮನ್ವಿತಂ ॥ ೧೬೩ ॥

ನಕ್ಷತ್ರಮಾಲಾಸಹಿತಂ ಚಾಮರಾಪೀಡಧಾರಿಣಂ ।
ದಶನಾಗ್ರಬದ್ಧನೇತ್ರರಕ್ತವಸ್ತ್ರಯುಗಾನ್ವಿತಂ ॥ ೧೬೪ ॥

ತಾಮ್ರಪಾತ್ರ್ಯಂ ಕುಂಡಕಂ ವಾ ಕೃತಂ ದತ್ವಾಗ್ರಮೋದಕಂ ।
ಪ್ರದದ್ಯಾದ್ದ್ವಿಜದಾಂಪತ್ಯಂ ಪೂಜ್ಯ ಮಾಲ್ಯವಿಭೂಷಣೈಃ ॥ ೧೬೫ ॥

ಕಂಠಪ್ರಮಾಣಮಾವಿಶ್ಯ ಜಲಂ ಮಲವಿವರ್ಜಿತಃ ।
ಕಾಂತಾರಕರಣೀಹ್ಯೇತತ್ಕಥಿತಂ ತು ಯುಧಿಷ್ಠಿರಃ ॥ ೧೬೬ ॥

---

೧೬೩. ಎಳ್ಳು ಹುಡಿಯಿಂದ ಆನೆಯ ಆಕೃತಿಯನ್ನು ರಚಿಸಿ, ಅದಕ್ಕೆ ಚಿನ್ನದ ಆಭರಣಗಳನ್ನಿಟ್ಟು ಅಲಂಕರಿಸಬೇಕು. ಅನಂತರ ದರ್ಭೆಗಳಿಂದ ಆನೆಯ ಮೇಲಕ್ಕೆ ಹತ್ತುವ ಏಣಿಯನ್ನು ರಚಿಸಿ, ಅದಕ್ಕೆ ಜೋಡಿಸಬೇಕು.

೧೬೪. ಇಪ್ಪತ್ತೇಳು ಹೂವುಗಳಿಂದಲೋ, ಮಣಿಗಳಿಂದಲೋ ರಚಿತವಾದ ಮಾಲಿಕೆಯನ್ನೂ ಚಾಮರ, ಶಿರೋಮಾಲೆಗಳನ್ನೂ ಅದಕ್ಕೆ ಅಲಂಕರಿಸಬೇಕು. ಅಲ್ಲದೆ ದಂತ, ಕಣ್ಣು ಇವನ್ನು ಸ್ಪಷ್ಟವಾಗಿ ರಚಿಸಿ, ಅದಕ್ಕೆ ಒಂದು ಜತೆ ಕೆಂಪು ವಸ್ತ್ರವನ್ನು ಹೊದ್ದಿಸಿ ಅದನ್ನು ಪೂಜಿಸಬೇಕು.

೧೬೫. ಅನಂತರ ತಾಮ್ರ ಪಾತ್ರೆಯಲ್ಲಿಯೋ, ಕುಂಡದಲ್ಲಿಯೋ ಕಡಿ ಗಡುಬುಗಳನ್ನು ತುಂಬಿ ನಿವೇದನಮಾಡಬೇಕು. ಅನಂತರ ಬ್ರಾಹ್ಮಣ ದಂಪತಿಗಳನ್ನು ಕರೆಯಿಸಿ, ಅವರನ್ನು ಪುಷ್ಪಾಭರಣಾದಿಗಳಿಂದ ಅಲಂಕರಿಸಬೇಕು.

೧೬೬. ಬಳಿಕ ತಾನು ಕುತ್ತಿಗೆ ಉದ್ದದ ನೀರಿನಲ್ಲಿ ನಿಂತುಕೊಂಡು, ಆ ನೀರಿನಲ್ಲಿ ಉಗುಳದೆ ಪರಿಶುದ್ಧಿಯಿಂದ ಇರುತ್ತಾ, ಬ್ರಾಹ್ಮಣ ದಂಪತಿಗಳಿಗೆ ಆ ತಿಲದ ಆನೆಯನ್ನು ದಾನಮಾಡಬೇಕು. ಅಯ್ಯಾ ಯುಧಿಷ್ಠಿರನೇ! ಈ ವ್ರತಕ್ಕೆ **"ಕಾಂತಾರಕರಣೀವ್ರತ"** ವೆಂದು ಹೆಸರು.

ಕಾಂತಾರಕಾರಿದುರ್ಗೇಷು ವಾರಯತ್ಯಪಿ ದುಷ್ಕೃತೀನ್ ।
ಇಹಲೋಕೇ ಪರೇ ಚೈವ ನಾತ್ರ ಕಾರ್ಯಾ ವಿಚಾರಣಾ ॥ ೧೬೭ ॥

ಯೇ ಕುರ್ವಂತಿ ದಿನೇ ಪುಣ್ಯೇ ವ್ರತಂ ಪೌರಂದರಂ ನರಾಃ ।
ತೇಷಾಂ ಪೌರಂದರೋ ಲೋಕೋ ಭವೇದಾಭೂತಸಂಪ್ಲವಂ ॥ ೧೬೮ ॥

ಪಯೋವ್ರತಸ್ತು ಪಂಚಮ್ಯಾಂ ದತ್ವಾ ನಾಗಂ ದ್ವಿಜಾತಯೇ ।
ಸೌವರ್ಣಂ ಸರ್ಪಜನಿತಂ ಭಯಂ ತೇಭ್ಯೋ ನ ಜಾಯತೇ ॥ ೧೬೯ ॥

ಸಿತಾಷ್ಟಮ್ಯಾಂ ಸೋಪವಾಸೋ ವೃಷಭಂ ಯಃ ಪ್ರಯಚ್ಛತಿ ।
ಸಿತವಸ್ತ್ರಸಮಾಚ್ಛನಂ ಘಂಟಾಭರಣಭೂಷಿತಂ ॥ ೧೭೦ ॥

ಶಿವಲೋಕೇ ವಸೇತ್ಕಲ್ಪಂ ತತೋ ರಾಜಾ ಭವೇದಿಹ ।
ವೃಷವ್ರತಮಿದಂ ಪ್ರೋಕ್ತಂ ಸರ್ವಧರ್ಮಪ್ರದಾಯಕಂ ॥ ೧೭೧ ॥

---

೧೬೭. ಮಾನವರು "ಪೌರಂದರವ್ರತ" ವೆಂಬುದನ್ನು ಪುಣ್ಯದಿನದಲ್ಲಿ ಚೆನ್ನಾಗಿ ಆಚರಿಸಿದರೆ ದುಷ್ಟಾರಿಷ್ಟಗಳೆಲ್ಲವೂ ನಿವಾರಣೆಯಾಗುವುದಲ್ಲದೆ ಯಾವ ಭೀತ್ಯಾದಿಗಳೂ ಉಂಟಾಗಲಾರವು.

೧೬೮ ಈ ವ್ರತಾನುಷ್ಠಾತೃವಿಗೆ ಕಲ್ಪಾಂತವಾಗುವವರೆಗೂ ಇಂದ್ರ ಲೋಕ ಪ್ರಾಪ್ತಿಯಾಗುವುದು. ಈ ವಿಷಯದಲ್ಲಿ ಸಂಶಯವೇ ಇಲ್ಲ.

೧೬೯. ಪ್ರತಿಮಾಸದ ಶುಕ್ಲ ಪಂಚಮಿಯದಿನ ನಾಗರನ್ನು ಪೂಜಿಸಿ, ಕೇವಲ ಕ್ಷೀರವನ್ನು ಮಾತ್ರ ಸೇವಿಸಬೇಕು. ಈ ಪ್ರಕಾರ ಒಂದು ವರ್ಷ ಮುಗಿದ ಮೇಲೆ ಚಿನ್ನದಿಂದ ಸರ್ಪಪ್ರತಿಮೆ ಮಾಡಿಸಿ, ಸತ್ಪಾತ್ರನಿಗೆ ದಾನಮಾಡಿದರೆ ಅವನಿಗೆ ಸರ್ಪಭಯವುಂಟಾಗುವುದಿಲ್ಲ. ಈ ವ್ರತಕ್ಕೆ "**ನಾಗವ್ರತ**" ವೆಂದು ಹೆಸರು.

೧೭೦. ಶುಕ್ಲಪಕ್ಷದ ಅಷ್ಟಮಿಯ ದಿನ ಉಪವಾಸದಿಂದಿದ್ದು, ಬಿಳಿಯ ವಸ್ತ್ರದಿಂದಲೂ ಘಂಟೆಯಿಂದಲೂ ಅಲಂಕೃತವಾದ ವೃಷಭವನ್ನು ಸತ್ಪಾತ್ರನಿಗೆ ದಾನಮಾಡಿದರೆ ಶಿವಲೋಕ ಪ್ರಾಪ್ತಿಯಾಗುವುದು.

೧೭೧. ಅಲ್ಲಿ ಒಂದುಕಲ್ಪ ಪರ್ಯಂತ ವಾಸಮಾಡಿದ ಒಳಿಕ ಭೂಲೋಕ ದಲ್ಲಿ ಜನ್ಮವೆತ್ತಿ ರಾಜನಾಗುವನು. ಈ ವ್ರತಕ್ಕೆ "ವೃಷವ್ರತ" ವೆಂದು ಹೆಸರು. ಈ ವ್ರತಾನುಷ್ಠಾನಮಾಡಿದವರಿಗೆ ಸರ್ವಧರ್ಮಗಳೂ ಲಭಿಸುವುವು.

ಉತ್ತರೇತ್ವಯನೇ ಪ್ರಾಪ್ತೇ ಘೃತಪ್ರಸ್ಥೇನ ಯೋ ಹರಿಂ ।
ಸ್ನಾಪಯಿತ್ವಾ ಬ್ರಾಹ್ಮಣಾಯ ವಡವಾಂ ಯಃ ಪ್ರಯಚ್ಛತಿ ॥ ೧೭೨ ॥

ಸ ಸರ್ವಕಾಮಸಂಯುಕ್ತಃ ಪುತ್ರಭ್ರಾತೃಸಮನ್ವಿತಃ ।
ಸೂರ್ಯಲೋಕೇ ವಸೇದ್ರಾಜನ್ ರಾಜ್ಞೀವ್ರತಮಿಹೋಚ್ಯತೇ ॥

ಸಕೃನ್ನವಮ್ಯಾಂ ಭಕ್ತೇನ ಪೂಜಯೇದ್ವಿಂಧ್ಯವಾಸಿನೀಂ ।
ಪುಷ್ಪಧೂಪೈಸ್ತತೋ ದದ್ಯಾತ್ಪಂಜರಂ ಶುಕಶೋಭಿತಂ ॥ ೧೭೪ ॥

ಹೈಮಂ ವಿಪ್ರಾಯ ಶಾಂತಾಯ ಸ ವಾಗ್ಮೀಜಾಯತೇ ನರಃ ।
ಏತದಾಗ್ನೇಯಮಿತ್ಯುಕ್ತಂ ವ್ರತಮಗ್ನಿಪದಪ್ರದಂ ॥ ೧೭೫ ॥

---

೧೭೨. ಉತ್ತರಾಯಣದ ದಿನ ಒಂದುಪ್ರಸ್ಥ (ಸೇರು) ತುಪ್ಪದಿಂದ ವಿಷ್ಣುವಿಗೆ ಅಭಿಷೇಕಮಾಡಬೇಕು. ಅನಂತರ ತದಂಗವಾಗಿ ಒಂದು ಕುದುರೆಯನ್ನು ಬ್ರಾಹ್ಮಣನಿಗೆ ದಾನಮಾಡಬೇಕು.

೧೭೩. ಹೀಗೆ ಮಾಡಿದರೆ ಯಜಮಾನನು ಸಕಲ ಇಷ್ಟಾರ್ಥಗಳನ್ನೂ ಹೊಂದಿ, ಸುತಸಹೋದರರಿಂದೊಡಗೂಡಿ ಸೂರ್ಯಲೋಕಕ್ಕೆ ಹೋಗಿ, ಅಲ್ಲಿ ಒಂದು ಕಲ್ಪಕಾಲ ಸುಖವಾಗಿ ವಾಸಿಸುವನು. ಈ ವ್ರತಕ್ಕೆ **"ರಾಜ್ಞೀವ್ರತ"**ವೆಂದು ಹೆಸರು.

೧೭೪-೧೭೫. ಎಲ್ಲ ನವಮಿಯಲ್ಲೂ ಒಂದೇಹೊತ್ತು ಭೋಜನಮಾಡಿ, ವಿಂಧ್ಯವಾಸಿನಿಯಾದ ದುರ್ಗೆಯನ್ನು ಪುಷ್ಪ, ಧೂಪ, ಮುಂತಾದ ಪೂಜಾದ್ರವ್ಯಗಳಿಂದ ಪೂಜಿಸಬೇಕು. ಒಂದುವರ್ಷ ಕಳೆದ ಬಳಿಕ ಚಿನ್ನದ ಪಂಜರವನ್ನು ಮಾಡಿ ಅದರಲ್ಲಿ ಗಿಣಿಯನ್ನಿರಿಸಿ ಶಾಂತಸ್ವಭಾವವುಳ್ಳ ವಿಪ್ರನಿಗೆ ದಾನಕೊಡಬೇಕು. ಈ ವ್ರತಾನುಷ್ಠಾನಮಾಡಿದವನು ವಾಚಾಳಿಯಾಗುವನು. ದೇಹತ್ಯಾಗಾನಂತರ ಅವನು ಅಗ್ನಿಲೋಕವನ್ನು ಸೇರುವನು. ಈ ವ್ರತಕ್ಕೆ **"ಆಗ್ನೇಯವ್ರತ"**ವೆಂದು ಹೆಸರು.

**ದ್ವಾದಶ್ಯಾಂ ಗುಹ್ಯಕಾನಾಂ ಚ ಪಲಲೈಕ್ಷವಸಂಯುತಂ ।**
**ವಿಪ್ರಾಯ ಭೋಜನಂ ದತ್ವಾಮುಕ್ತಿಂ ಯಾತಿಹರಿವ್ರತು ॥ ೧೨೬ ॥**

**ವಿಷ್ಕಂಭಾದಿಷು ಯೋಗೇಷು ಏಕಭುಕ್ತರತೋ ನರಃ ॥ ೧೨೭ ॥**

**ಯೋ ದದಾತಿ ಕ್ರಮಾದೇಷು ಘೃತತೈಲಫಲೈಕ್ಷವಂ ।**
**ಯವಗೋಧೂಮಚಣಕಾನ್ನಿಷ್ಪಾವಾಞ್ಶಾಲಿತಂಡುಲಾನ್ ॥ ೧೨೮ ॥**

**ಲವಣಂ ದಧಿ ದುಗ್ಧಂ ಚ ವಸ್ತ್ರಂ ಕನಕಮೇವಚ ।**
**ಕಂಬಲಂ ಗಾಂ ವೃಷಂ ಛತ್ರಮುಪಾನದ್ಯುಗಲಂ ತಥಾ ॥ ೧೨೯ ॥**

**ಕರ್ಪೂರಂ ಕುಂಕುಮಂ ಚೈವ ಚಂದನಂ ಕುಸುಮಾನಿ ಚ ।**
**ಲೋಹಂ ಕನಕ ತಾಮ್ರಂ ಚ ರೌಪ್ಯಂ ಚೇತಿ ಯುಧಿಷ್ಠಿರ ॥ ೧೩೦ ॥**

---

೧೨೬. ದ್ವಾದಶಿಯ ದಿನಗಳಲ್ಲಿ ಗುಹ್ಯಕರನ್ನು ಪೂಜಿಸಿ, ಕಬ್ಬಿನ ಹಾಲು, ಮಾಂಸ ಇವುಗಳ ಬಲಿಯನ್ನು ಸಮರ್ಪಿಸಬೇಕು. ಬಳಿಕ ಬ್ರಾಹ್ಮಣರಿಗೆ ಮೃಷ್ಟಾನ್ನಭೋಜನವನ್ನು ಮಾಡಿಸಬೇಕು. ಈ ವ್ರತ ಮಾಡಿದವರಿಗೆ ವಿಷ್ಣು ಲೋಕ ಪ್ರಾಪ್ತಿಯಾಗುವುದು. ಇದನ್ನು "**ಹರಿವ್ರತ**" ವೆಂದು ಕರೆಯುವರು.

೧೨೭-೧೩೦. ವಿಷ್ಕಂಭವೇ ಮುಂತಾದ ಇಪ್ಪತ್ತೇಳು ಯೋಗಗಳಲ್ಲಿ ಮಾನವನು ಸ್ನಾನಾದಿಗಳನ್ನು ನೆರವೇರಿಸಿ, ಏಕಭುಕ್ತವನ್ನು ಸಂಕಲ್ಪಿಸಿ ಒಂದೊಂದು ಯೋಗದ ದಿನ ಒಂದೊಂದರಂತೆ ಕ್ರಮವಾಗಿ ತುಪ್ಪ, ಎಣ್ಣೆ, ಹಣ್ಣು, ಕಬ್ಬಿನ ಹಾಲು, ಯವ, ಗೋಧಿ, ಕಡಲೆ, ಅವರೆ, ಅಕ್ಕಿ, ಉಪ್ಪು, ಮೊಸರು, ಹಾಲು, ವಸ್ತ್ರ, ಕಂಚು, ಕಂಬಳಿ, ಹಸು. ಎತ್ತು, ಛತ್ರಿ, ಪಾದುಕಾದ್ವಯ, ಕರ್ಪೂರ, ಕುಂಕುಮ, ಚಂದನ, ಹೂವುಗಳು, ಲೋಹ (ಕಬ್ಬಿಣ), ಚಿನ್ನ, ತಾಮ್ರ, ಬೆಳ್ಳಿ ಇವುಗಳನ್ನು ತನ್ನ ಶಕ್ತಿಯಿದ್ದಷ್ಟುಮಟ್ಟಿಗೆ ವಿಧಿಪ್ರಕಾರ ಸತ್ಪಾತ್ರದಲ್ಲಿ ದಾನ ಮಾಡಬೇಕು.

೧೩೧. ಈ ಪ್ರಕಾರ ಅನುಷ್ಠಾನಮಾಡಿದವನು ಸಮಸ್ತ ಪಾಪಗಳಿಂದ ವಿಮುಕ್ತನಾಗುತ್ತಾನೆಯಲ್ಲದೆ ಅವನಿಗೆ ಯಾವಾಗಲೂ ವಿಯೋಗ ಉಂಟಾಗುವುದಿಲ್ಲ. ಈ ವ್ರತಕ್ಕೆ "**ಯೋಗವ್ರತ**" ವೆಂದು ಹೆಸರು.

ಸ್ನಾತಃ ಸ್ವಶಕ್ತ್ಯಾ ವಿಧಿವತ್ಸರ್ವಪಾಪೈಃ ಪ್ರಮುಚ್ಯತೇ ।
ನವಿಯೋಗಮವಾಪ್ನೋತಿ ಯೋಗವ್ರತಮಿದಂ ಸ್ಮೃತಂ ॥ ೧೮೧ ॥

ಕಾರ್ತಿಕ್ಯಾಂ ನಕ್ತಭುಗ್ದದ್ಯಾನ್ಮೇಷಂ ಮಾರ್ಗಶಿರೇ ವೃಷಂ ।
ಪೌಷಮಾಘಾದಿಮಾಸೇಷು ಸೌವರ್ಣಾಃ ಸರ್ವಏವ ಹಿ ॥ ೧೮೨ ॥

ಕ್ರಮೇಣ ರಾಶಯಃ ಸರ್ವಾವಸ್ತ್ರಮಾಲ್ಯೈರ್ವಿಭೂಷಿತಾಃ ।
ಪೌರ್ಣಮಾಸ್ಯಾಂ ಪೌರ್ಣಮಾಸ್ಯಾಂ ಕೌಂತೇಯ ಬಹುದಕ್ಷಿಣಾಂ ॥

ಏತದ್ರಾಶಿವ್ರತಂ ನಾಮ ಸರ್ವೋಪದ್ರವ ನಾಶನಂ ।
ಸರ್ವಾಶಾಪೂರಕಂ ತದ್ವತ್ಸೋಮಲೋಕಪ್ರದಾಯಕಂ ॥ ೧೮೪ ॥

---

೧೮೨. ಕಾರ್ತಿಕ ಶುದ್ಧ ಪೂರ್ಣಿಮಾದಿಂದ ಆರಂಭಿಸಿ ಪ್ರತಿ ಪೂರ್ಣಿಮೆಯಲ್ಲಿಯೂ ನಕ್ತಭೋಜನ ಮಾಡಬೇಕು. ಕಾರ್ತಿಕ ಮಾಸದಲ್ಲಿ ಸುವರ್ಣದ ಆಡನ್ನೂ, ಮಾರ್ಗಶಿರ ಮಾಸದಲ್ಲಿ ನಕ್ತಭೋಜನ ಮಾಡಿ ಸುವರ್ಣ ವೃಷಭವನ್ನೂ, ಪುಷ್ಯ ಮಾಸದಲ್ಲಿ ಪುಂಸ್ತ್ರೀ ಮಿಥುನ ಪ್ರತಿಮೆಯನ್ನೂ, ಮಾಘ ಮಾಸದಲ್ಲಿ ಚಿನ್ನದ ಏಡಿ (ಕಟಕ) ಯನ್ನೂ, ಫಾಲ್ಗುಣದಲ್ಲಿ ಸ್ವರ್ಣ ಸಿಂಹವನ್ನೂ, ಚೈತ್ರ ಪೂರ್ಣಿಮೆಯಲ್ಲಿ ಸ್ವರ್ಣದ ಕನ್ಯಾಪ್ರತಿಮೆಯನ್ನೂ, ವೈಶಾಖದಲ್ಲಿ ತಕ್ಕಡಿಯ ಪ್ರತಿಮೆ, ಜ್ಯೇಷ್ಠದಲ್ಲಿ ವೃಶ್ಚಿಕ (ಚೇಳು) ಪ್ರತಿಮೆ, ಆಷಾಢದಲ್ಲಿ ಧನುಸ್ಸಿನ ಪ್ರತಿಮೆ, ಶ್ರಾವಣದಲ್ಲಿ ಮಕರ (ಮೊಸಳೆ) ಪ್ರತಿಮೆ, ಭಾದ್ರಪದದಲ್ಲಿ ಕುಂಭ (ಗಡಿಗೆ) ಪ್ರತಿಮೆ.

೧೮೩. ಆಶ್ವಯುಜದ ಪೂರ್ಣಿಮೆಯಲ್ಲಿ ಮೀನಿನ ಪ್ರತಿಮೆ. ಈ ರೀತಿ ಕಾರ್ತಿಕಾದಿ ದ್ವಾದಶ ಮಾಸಗಳಲ್ಲಿ ಮೇಷಾದಿ ದ್ವಾದಶ ಪ್ರಾಣಿ ಪ್ರತಿಮೆಗಳನ್ನು ಚಿನ್ನದಲ್ಲಿ ಮಾಡಿಸಿ, ಎಲ್ಲವನ್ನೂ ವಸ್ತ್ರ ಪುಷ್ಪಾದಿಗಳಿಂದ ಅಲಂಕರಿಸಿ, ಸಮೃದ್ಧಿಯಾದ ದಕ್ಷಿಣೆಸಹಿತ, ಸತ್ಪಾತ್ರರಾದ ವಿಪ್ರರಿಗೆ ದಾನಮಾಡಬೇಕು.

೧೮೪. ಈ ವ್ರತಕ್ಕೆ "ರಾಶಿವ್ರತ" ವೆಂದು ಹೆಸರು. ಇದನ್ನು ಅನುಷ್ಠಾನ ಮಾಡಿದವರ ಸಕಲ ಉಪದ್ರವಗಳೂ ನಾಶವಾಗುವುವು. ಅಯ್ಯಾ ಪಾಂಡವನೇ! ಇದರಿಂದ ಸಕಲ ಇಷ್ಟಾರ್ಥಗಳೂ ಲಭಿಸಿ, ಕೊನೆಯಲ್ಲಿ ಚಂದ್ರಲೋಕ ಪ್ರಾಪ್ತಿಯಾಗುವುದು.

೧೮೫-೧೮೬. ಎಲೈ ಪಾಂಡುನಂದನ! ಈ ಪ್ರಕಾರ ಎಂಭತ್ತೈದು ವ್ರತಗಳನ್ನೂ ನಿನಗೆ ಹೇಳಿದೆನು. ಈ ವ್ರತಗಳನ್ನು ಶ್ರವಣ ಮಾಡಿದ ಮಾತ್ರಕ್ಕೆ

ಪಂಚಾಶೀತಿವ್ರತಾನಾಂ ತೇ ಕಥಿತಾ ಪಾಂಡುನಂದನ ।
ಯಾಂ ಶ್ರುತ್ವಾ ಬ್ರಹ್ಮಹಾ ಗೋಘ್ನಃ ಪಿತೃಹಾ ಮಾತೃಹಾ ತಥಾ ॥
ಮುಚ್ಯತೇ ತತ್ಕ್ಷಣಾದೇವ ಪಾತಕೈಸ್ಸೋಪಪಾತಕೈಃ ॥ ೧೮೬ ॥

ಪಂಚಾಧಿಕಾ ತವ ಮಯಾ ಕಥಿತಾ ವ್ರತಾನಾಂ ।
ರಾಜನ್ನಶೀತಿರತಿಸೌಖ್ಯಧನಪ್ರದಾನಾಂ ॥
ಏತಾಂ ಸಮಾಚರತಿ ಯಃ ಶೃಣುಯಾತ್ಪಠೇದ್ವಾ ।
ಹಸ್ತಾಗ್ರಲಗ್ನ ಇವ ತಸ್ಯ ಸುರೇಶಲೋಕಃ ॥ ೧೮೭ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ
ಶ್ರೀ ಕೃಷ್ಣಯುಧಿಷ್ಠಿರ ಸಂವಾದೇ ವ್ರತಪಂಚಾಶೀತಿವರ್ಣನಂ
ನಾಮ್ನೈಕವಿಂಶತ್ಯುತ್ತರಶತತಮೋಽಧ್ಯಾಯಃ.



---

ಬ್ರಹ್ಮಹತ್ಯಾ, ಗೋಹತ್ಯ, ಪಿತೃಹತ್ಯ, ಮಾತೃಹತ್ಯ ಮುಂತಾದ ಮಹಾಪಾಪಗಳೂ, ಇತರ ಸಣ್ಣಸಣ್ಣ ಉಪಪಾಪಗಳೂ, ಕ್ಷಣಮಾತ್ರದಲ್ಲಿ ಧ್ವಂಸವಾಗುವುವು.

೧೮೭. ಅಯ್ಯಾ ರಾಜೇಂದ್ರ! ಈಗ ನಾನು ನಿನಗೆ ತಿಳಿಸಿದ ಎಂಭತ್ತೈದು ವ್ರತಗಳೂ ಸರ್ವಸಂಪತ್ಪ್ರದವಾದುವು. ಇವುಗಳನ್ನು ಯಾರು ಆಚರಿಸುವರೋ, ಯಾರು ವ್ರತ ವಿಚಾರವಾಗಿ ಹೇಳುತ್ತಿರುವುದನ್ನು ಶ್ರವಣಮಾಡುವರೋ, ಅಥವಾ ವ್ರತ ವಿಚಾರವನ್ನು ತಿಳಿಸುವ ಗ್ರಂಥವನ್ನು ತಾವೇ ಓದುವರೋ, ಅಂಥವರಿಗೆ ಸ್ವರ್ಗಲೋಕವು ಹಸ್ತಗತವಾದಂತೆಯೇ ಸರಿ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರ ಪರ್ವದಲ್ಲಿ ವ್ರತಪಂಚಾಶೀತಿ ವ್ರತವರ್ಣನೆಯೆಂಬ ನೂರಇಪ್ಪತ್ತೊಂದನೆಯ ಅಧ್ಯಾಯ ಮುಗಿದುದು.



॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣ

## ಉತ್ತರಪರ್ವಣಿ

## ದ್ವಾವಿಂಶತ್ಯುತ್ತರಶತತಮೋಽಧ್ಯಾಯಃ

---

॥ ಶ್ರೀಕೃಷ್ಣ ಉವಾಚ ॥

ಕೃತಂ ಬ್ರಹ್ಮಯುಗಂ ಪ್ರೋಕ್ತಂ ತ್ರೇತಾ ತು ಕ್ಷತ್ರಿಯಂ ಯುಗಂ ।
ವೈಶ್ಯಂ ದ್ವಾಪರಮಿತ್ಯಾಹುಃ ಶೂದ್ರಂ ಕಲಿಯುಗಂ ಸ್ಮೃತಂ ॥ ೧ ॥

ಕಲೌರಾಜನ್ಮನುಷ್ಯಾಣಾಂ ಶೈಥಿಲ್ಯಂ ಸ್ನಾನಕರ್ಮಣಿ ।
ತಥಾಪಿ ಮಾಘವ್ಯಾಜೇನ ಕಥಯಿಷ್ಯಾಮಿ ತೇ ಶೃಣು ॥ ೨ ॥

---

### ನೂರಇಪ್ಪತ್ತೆರಡನೆಯ ಅಧ್ಯಾಯ

೧. ಶ್ರೀಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರ ರಾಜನೇ! ಕೃತಯುಗವು ಬ್ರಹ್ಮಯುಗ, ತ್ರೇತೆಯು ಕ್ಷತ್ರಿಯರಯುಗ, ದ್ವಾಪರವು ವೈಶ್ಯ ಯುಗ, ಕಲಿಯುಗವು ಶೂದ್ರಯುಗ ಎಂಬದಾಗಿ ಹೇಳಿದೆ.

೨. ಎಲೈ ರಾಜನೇ! ಈ ಕಲಿಯುಗದಲ್ಲಿರುವ ಮಾನವರು ಶೂದ್ರ ಪ್ರಾಯರು. ಅವರಿಗೆ ಸ್ನಾನಕರ್ಮದಲ್ಲಿ ಶ್ರದ್ಧೆಯೇ ಇಲ್ಲವಾಗಿದೆ. ಆದರೂ ಮಾಘಸ್ನಾನದ ನೆಪದಿಂದ ಕಲಿಯುಗದಲ್ಲಿನ ಸ್ನಾನವಿಧಿಯನ್ನು ನಿನಗೆ ಹೇಳು ವೆನು ಕೇಳು ಎಂದನು.

ಯಸ್ಯ ಹಸ್ತೌ ಚ ಪಾದೌ ಚ ವಾಙ್ಮನಸ್ತು ಸುಸಂಯುತಂ ।
ವಿದ್ಯಾ ತಪಶ್ಚ ಕೀರ್ತಿಶ್ಚ ಸ ತೀರ್ಥಫಲಮಶ್ನುತೇ ॥ ३ ॥

ಅಶ್ರದ್ಧಧಾನಃ ಪಾಪಾತ್ಮಾ ನಾಸ್ತಿಕೋಽಚ್ಛಿನ್ನಸಂಶಯಃ ।
ಹೇತುನಿಷ್ಠಾಶ್ಚ ಪಂಚೈತೇ ನ ತೀರ್ಥಫಲಭಾಗಿನಃ ॥ ೪ ॥

ಪ್ರಯಾಗಂ ಪುಷ್ಕರಂ ಪ್ರಾಪ್ಯ ಕುರುಕ್ಷೇತ್ರಮಥಾಪಿ ವಾ ।
ಯತ್ರ ವಾ ತತ್ರ ವಾ ಸ್ನಾಯಾನ್ಮಾಘೇ ನಿತ್ಯಮಿತಿ ಶ್ರುತಿಃ ॥ ೫ ॥

ತ್ರಿರಾತ್ರಫಲದಾ ನದ್ಯೋ ಯಾಃ ಕಾಶ್ಚಿದಸಮುದ್ರಗಾಃ ।
ಸಮುದ್ರಗಾಸ್ತು ಪಕ್ಷಸ್ಯ ಮಾಸಸ್ಯ ಸರಿತಾಂ ಪತಿಃ ॥ ೬ ॥

---

೩. ಯುಧಿಷ್ಠಿರನು ಕೇಳುತ್ತಾನೆ—ಯಾವ ಮಾನವನ ಕೈ, ಕಾಲು, ವಾಕ್ಕು, ಮನಸ್ಸು, ವಿದ್ಯಾ, ತಪಸ್ಸು, ಕೀರ್ತಿ ಇವುಗಳೆಲ್ಲವೂ ನಿಯಮಬದ್ಧವಾಗಿ ವೆಯೋ, ಅಂಥವನಿಗೇ ತೀರ್ಥಯಾತ್ರೆಮಾಡುವ ಅಧಿಕಾರವಿದೆ. ಎಂದರೆ ಅವನೇ ಅಂತಹ ಫಲಾನುಭವ ಮಾಡುವನೇ ವಿನಾ ಇತರರಲ್ಲ.

೪. ತೀರ್ಥಕ್ಷೇತ್ರ ಮುಂತಾದುವುಗಳಲ್ಲಿ ಶ್ರದ್ಧೆಯಿಲ್ಲದವನು, ಪಾಪಕರ್ಮಾಸಕ್ತನು, ಕರ್ಮಶ್ರದ್ಧೆಯಿಲ್ಲದವ (ನಾಸ್ತಿಕ), ಯಾವಾಗಲೂ ಸಂಶಯಬುದ್ಧಿಯುಳ್ಳವ, ಸುಮ್ಮನೇ ವಿತಂಡಾವಾದ (ಹೇತುವಾದ) ಮಾಡುವವ, ಈ ಐದು ತರಹ ಜನರೂ ತೀರ್ಥಯಾತ್ರಾ ಫಲವನ್ನೂ ಹೊಂದಲಾರರು.

೫. ಪ್ರಯಾಗ, ಪುಷ್ಕರ, ಕುರುಕ್ಷೇತ್ರ, ಈ ಕ್ಷೇತ್ರಗಳಲ್ಲಿಯೋ ಮತ್ಯಾವದಾದರೂ ಪುಣ್ಯ ಕ್ಷೇತ್ರದಲ್ಲಿಯೋ ಮಾಘ ಮಾಸದಲ್ಲ ಪ್ರತಿನಿತ್ಯವೂ ಸ್ನಾನ ಮಾಡಬೇಕೆಂದು ಶ್ರುತಿಯಿರುವುದು.

೬. ಸಾಮಾನ್ಯ ತಟಾಕಾದಿ ಸ್ನಾನಗಳಿಂದ ಎಷ್ಟು ಫಲವುಂಟೋ, ಸಮುದ್ರಕ್ಕೆ ಸೇರದೆ ಇರುವ ಉಪನದೀ ಸ್ನಾನದಿಂದ ಅದರ ಮೂರರಷ್ಟು ಫಲವೂ, ಸಮುದ್ರಕ್ಕೆ ಸೇರುವ ದೊಡ್ಡ ನದಿಯಲ್ಲಿ ಒಂದು ದಿನದ ಸ್ನಾನದಿಂದ ಹದಿನೈದು ದಿನ ಸಾಮಾನ್ಯ ಜಲದಲ್ಲಿ ಸ್ನಾನ ಮಾಡಿದಷ್ಟು ಫಲವೂ, ಸಮುದ್ರದಲ್ಲೇ ಸ್ನಾನ ಮಾಡುವುದರಿಂದ ಒಂದು ತಿಂಗಳು ಸ್ನಾನ ಮಾಡಿದಷ್ಟು ಫಲವೂ ಲಭಿಸುವುದು

ಉಷಸ್ಯಮಾಘೇ ಯಃ ಸ್ನಾನಂ ಸಂಧ್ಯಾಸಮುದಿತೇ ರವೌ ।
ಪ್ರಾಜಾಪತ್ಯೇನ ತತ್ತುಲ್ಯಂ ಮಹಾಪಾತಕನಾಶನಂ ॥ ೭ ॥

ಪ್ರಾತರುತ್ಥಾಯ ಯೋ ವಿಪ್ರಃ ಪ್ರಾತಸ್ಸ್ನಾಯೀ ಸದಾ ಭವೇತ್ ।
ಸ ಸರ್ವಪಾಪನಿರ್ಮುಕ್ತಃ ಪರಂ ಬ್ರಹ್ಮಾಧಿಗಚ್ಛತಿ ॥ ೮ ॥

ವೃಥಾ ಚೋಷ್ಣೋದಕಸ್ನಾನಂ ವೃಥಾಜಾಪ್ಯಮವೈದಿಕಂ ।
ಅಶ್ರೋತ್ರಿಯೇ ವೃಥಾ ಶ್ರಾದ್ಧಂ ವೃಥಾಭುಕ್ತಮಸಾಕ್ಷಿಕಂ ॥ ೯ ॥

ಸ್ನಾನಂ ಚತುರ್ವಿಧಂ ಪ್ರೋಕ್ತಂ ಸ್ನಾನವಿದ್ಭಿರ್ಯುಧಿಷ್ಠಿರ ।
ವಾಯವ್ಯಂ ವಾರುಣಂ ಬ್ರಾಹ್ಮಂ ದಿವ್ಯಂ ಚೇತಿ ಪೃಥಕ್ಛೃಣು ॥ ೧೦ ॥

---

೭. ಮಾಘ ಮಾಸದ ಉಷಃಕಾಲದಲ್ಲಿ ಸ್ನಾನವನ್ನೂ, ಸೂರ್ಯೋದಯ ಕಾಲಕ್ಕೆ ಸಂಧ್ಯಾವಂದನೆಯನ್ನೂ ತಪ್ಪದೆ ಮಾಡಬೇಕು. (ಮಾಘ ಸ್ನಾನಕ್ಕೆ ಈ ವೇಳೆ ಮೀರಿದರೆ ಫಲವಿಲ್ಲ.) ಹೀಗೆ ಮಾಡಿದರೆ ಪಂಚಮಹಾಪಾಪಗಳನ್ನೂ ನಾಶಮಾಡುವ ಪ್ರಾಜಾಪತ್ಯಯಾಗಕ್ಕೆ ಸಮನಾದ ಫಲವನ್ನು ಹೊಂದುವನು.

೮. ಈ ಮಾಘ ಮಾಸದಲ್ಲಿ ಪ್ರತಿದಿನವೂ ಉಷಃಕಾಲಕ್ಕೆ ಸ್ನಾನಮಾಡುವ ಮಾನವನು ಸರ್ವ ಪಾಪಗಳಿಂದಲೂ ವಿಮುಕ್ತನಾಗಿ, ಶ್ರೇಷ್ಠವಾದ ಪರಬ್ರಹ್ಮ ವನ್ನು ಹೊಂದುವನು.

೯. ಬಿಸಿನೀರಿನಲ್ಲಿ ಮಾಡುವ ಸ್ನಾನ, ವೈದಿಕ ಕರ್ಮಶ್ರದ್ಧೆಯಿಲ್ಲದೆ ಮಾಡುವ ಜಪ, ಶ್ರೋತ್ರಿಯನನ್ನು ನಿಮಂತ್ರಿಸದೆ ಮಾಡುವ ಶ್ರಾದ್ಧ, ಅತಿಥಿ ಸತ್ಕಾರ ರಹಿತವಾಗಿ ತಾನೊಬ್ಬನೇ ಕುಳಿತು ಮಾಡುವ ಊಟ, ಇವೆಲ್ಲ ವ್ಯರ್ಥ ವೆಂದು ತಿಳಿಯಬೇಕು.

೧೦. ಅಯ್ಯಾ ಯುಧಿಷ್ಠಿರ! ವಾಯವ್ಯಸ್ನಾನ, ವಾರುಣಸ್ನಾನ, ಬ್ರಾಹ್ಮಸ್ನಾನ, ದಿವ್ಯಸ್ನಾನ ಎಂಬುದಾಗಿ ಸ್ನಾನವು ನಾಲ್ಕು ವಿಧವಾಗಿದೆಯೆಂದು ಸ್ನಾನ ವಿಚಾರವನ್ನು ತಿಳಿದ ಪ್ರಾಜ್ಞರು ಹೇಳಿರುವರು. ಇವುಗಳ ವಿವರವನ್ನು ಪ್ರತ್ಯೇಕವಾಗಿ ಹೇಳುವೆನು.

ವಾಯುವ್ಯಂ ಗೋರಜಸ್ನಾನಂ ವಾರುಣಂ ಸಾಗರಾದಿಷು ।
ಬ್ರಾಹ್ಮಂ ಬ್ರಾಹ್ಮಣಮಂತ್ರೋಕ್ತಂ ದಿವ್ಯಂ ಮೇಘಾಂಬು ಭಾಸ್ಕರಂ ॥
ಸರ್ವೇಷಾಮೇವ ಸ್ನಾನಾನಾಂ ವಿಶಿಷ್ಟಂ ತತ್ರ ವಾರುಣಂ ॥ ೧೧ ॥

ಬ್ರಹ್ಮಚಾರೀ ಗೃಹಸ್ಥಶ್ಚ ವಾನಪ್ರಸ್ಥೋಽಥ ಭಿಕ್ಷುಕಃ ।
ಏತೇ ಸರ್ವೇ ಪ್ರಶಂಸಂತಿ ಸರ್ವದಾ ಮಾಘಮಜ್ಜನಂ ॥ ೧೨ ॥

ಬಾಲಾಸ್ತರುಣಕಾ ವೃದ್ಧಾ ನರನಾರೀನಪುಂಸಕಾಃ ।
ಸ್ನಾತ್ವಾ ಮಾಘಂ ಶುಭೇ ತೀರ್ಥೇ ಪ್ರಾಪ್ನುವಂತೀಪ್ಸಿತಂಫಲಂ ॥ ೧೩ ॥

ಬ್ರಹ್ಮಕ್ಷತ್ರವಿಶಾಂ ಚೈವ ಮಂತ್ರವತ್ಸ್ನಾನಮಿಷ್ಯತೇ ।
ತೂಷ್ಣೀಮೇವ ಹಿ ಶೂದ್ರಸ್ಯ ಸ್ತ್ರೀಣಾಂ ಚ ಕುರುನಂದನ ॥ ೧೪ ॥

---

೧೧. ಗೋವುಗಳ ಮಂದೆಯು ಹೋಗುವಾಗ ಅವುಗಳ ಪಾದದಿಂದ ಎದ್ದ ಧೂಳಿಯು ಮಾನವರ ದೇಹದ ಮೇಲೆ ಆವರಿಸುವುದು ವಾಯುವ್ಯಸ್ನಾನವೆನಿಸುವುದು. ಸಾಗರ, ನದಿ ಮುಂತಾದುವುಗಳಲ್ಲಿ ಮಾಡುವ ಸ್ನಾನವು ವಾರುಣಸ್ನಾನವೆನಿಸುವುದು. ಬ್ರಾಹ್ಮಣರು ಸೂತ್ರಾದಿ ಮಂತ್ರಪೂರ್ವಕವಾಗಿ ಮಾರ್ಜನೆ ಮಾಡುವ ಸ್ನಾನವು ಬ್ರಾಹ್ಮಸ್ನಾನವೆನಿಸುವುದು. ಮೇಘದಿಂದ ಬೀಳುವ ನೀರು ಮತ್ತು ಸೂರ್ಯಕಿರಣ ವ್ಯಾಪನೆ ಇವುಗಳ ಸಂಬಂಧವಾದ ಸ್ನಾನವು ದಿವ್ಯಸ್ನಾನವೆನಿಸುವುದು. ಇವುಗಳಲ್ಲೆಲ್ಲಾ ವಾರುಣಸ್ನಾನವೇ ಶ್ರೇಷ್ಠವಾದುದು.

೧೨. ಬ್ರಹ್ಮಚಾರೀ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿ ಎಂಬ ಈ ನಾಲ್ಕು ಆಶ್ರಮಿಗಳಿಗೂ ಮಾಘಸ್ನಾನ ಶ್ರೇಷ್ಠವೆಂದು ಸದಾ ಹೊಗಳುತ್ತಾರೆ.

೧೩. ಹುಡುಗರು, ತರುಣರು, ಮುದುಕರು ಇವರಲ್ಲಿ ಸ್ತ್ರೀಯರು, ಪುರುಷರು, ನಪುಂಸಕರು ಎಲ್ಲರೂ ಮಾಘ ಮಾಸದಲ್ಲಿ ಶುಭಕರವಾದ ತೀರ್ಥಗಳಲ್ಲಿ ಸ್ನಾನ ಮಾಡುವುದರಿಂದ ತಮತಮಗೆ ಇಷ್ಟವಾದ ಫಲಗಳನ್ನು ಹೊಂದುವರು.

೧೪. ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಈ ಮೂರು ವರ್ಣದವರಿಗೂ ಮಂತ್ರಪೂರ್ವಕವಾಗಿ ಸ್ನಾನಾಧಿಕಾರವುಂಟೆಂದು ಹೇಳಿದೆ. ಅಯ್ಯಾ ಕುರುನಂದನ! ಶೂದ್ರರೂ, ಸ್ತ್ರೀಯರೂ ಮಂತ್ರವಿಲ್ಲದೆ ಸುಮ್ಮನೆ ಸ್ನಾನಮಾಡಬೇಕೆಂದು ಹೇಳಿದೆ.

ಮಾಘಮಾಸೇ ರಟಂತ್ಯಾಪಃ ಕಿಂಚಿದಭ್ಯುದಿತೇ ರವೌ ।
ಬಹ್ಮಘ್ನಂ ವಾ ಸುರಾಪಂ ವಾ ಕಂಪಂ ತಂತಂ ಪುನೀಮಹೇ ॥ ೧೫ ॥

ಪ್ರಾಸಾದಾ ಯತ್ರ ಸೌವರ್ಣಾಃ ಸ್ತ್ರಿಯಶ್ಚಾಪ್ಸರಸೋಪಮಾ ।
ದಧಿಕುಲ್ಯಾವಹಾ ಯತ್ರ ನದ್ಯಃ ಪಾಯಸಕರ್ದಮಾಃ ।
ತತ್ರ ತೇ ಯಾಂತಿ ಮಜ್ಜಂತಿ ಯೇ ಮಾಘೇ ಭಾಸ್ಕರೋದಯೇ ॥೧೬॥

ಯತಿವತ್ಪಥಿ ಗಚ್ಛೇತ ಮೌನೀ ಪೈಶುನ್ಯವರ್ಜಿತಃ ।
ಯದೀಚ್ಛೇದ್ವಿಪುಲಾನ್ ಭೋಗಾಶ್ಚಂದ್ರಸೂರ್ಯೋಪಮಾನ್ಗೃಹಾನ್ ॥೧೭॥

ಪೌಷಫಾಲ್ಗುನಯೋರ್ಮಧ್ಯೇ ಪ್ರಾತಃಸ್ನಾಯೀ ಭವೇನ್ನರಃ ।
ಪೌರ್ಣಮಾಸ್ಯಾಹ್ಯಮಾವಾಸ್ಯಾಃ ಪ್ರಾರಭ್ಯಸ್ನಾನಮಾಚರೇತ್ ॥೧೮॥

---

೧೫. ಪುಣ್ಯತೀರ್ಥದ ಜಲಗಳು ಮಾನವರನ್ನು ಕುರಿತು "ಮಾಘಮಾಸದಲ್ಲಿ ಸೂರ್ಯನು ಸ್ವಲ್ಪ ಉದಯಿಸುವಾಗಲೇ ನಮ್ಮ ತೀರ್ಥದಲ್ಲಿ ಸ್ನಾನ ಮಾಡಿದವರು ಬ್ರಹ್ಮಹತ್ಯಾ, ಸುರಾಪಾನ ಇವೇ ಮುಂತಾದ ಮಹಾಪಾತಕಗಳನ್ನು ಹಿಂದೆ ಮಾಡಿದ್ದರೂ ಅವರೆಲ್ಲರನ್ನೂ ನಾವು ಪವಿತ್ರರನ್ನಾಗಿ ಮಾಡುತ್ತೇವೆ" ಎಂಬದಾಗಿ ಹೇಳುತ್ತವೆ.

೧೬. ಮಾಘ ಮಾಸದಲ್ಲಿ ಸೂರ್ಯೋದಯ ಕಾಲಕ್ಕೆ ಸರಿಯಾಗಿ ಸ್ನಾನ ಮಾಡುವ ಮಾನವರು, ಮುಂದೆ ಸುವರ್ಣಮಯವಾದ ಪ್ರಾಸಾದಗಳಲ್ಲಿ, ಅಪ್ಸರ ಸ್ತ್ರೀಯರಿಗೆ ಸಮಾನವಾದ ರೂಪ ಸೌಂದರ್ಯಗಳುಳ್ಳ ಸ್ತ್ರೀಯರೊಡನೆ ವಿಹರಿಸುವರು. ಆ ಸಮಯದಲ್ಲಿ ಅವರ ಪ್ರಾಸಾದಗಳ ಹತ್ತಿರ ಮೊಸರಿನ ಸಣ್ಣ ನದಿಗಳು ಹರಿಯುತ್ತಿರುವುವು. ಪಾಯಸವೇ ಆ ನದಿಯ ಕೆಸರಾಗಿರುವುದು.

೧೭. ವಿಪುಲವಾದ ಭೋಗಗಳನ್ನೂ, ಚಂದ್ರ ಸೂರ್ಯರಿಗೆ ಸಮನಾದ ಕಾಂತಿಯುಕ್ತ ಪ್ರಾಸಾದಗಳನ್ನೂ ಹೊಂದಬೇಕೆಂಬ ಅಪೇಕ್ಷೆಯುಳ್ಳ ಮಾನವನು, ಮಾಘ ಮಾಸದಲ್ಲಿ ಉಷಃಕಾಲಕ್ಕೆ ಸ್ನಾನಮಾಡಿ, ದುರ್ವ್ಯವಹಾರ, ದುರ್ಭಾಷಾಸಕ್ತನಾಗದೆ ಸನ್ಯಾಸಿಯಂತೆ ಮೌನದಿಂದ ದಾರಿಯಲ್ಲಿ ಸಾಗಿ ಬರಬೇಕು.

೧೮. ಪುಷ್ಯ ಮತ್ತು ಫಾಲ್ಗುಣ ಮಾಸಗಳ ಮಧ್ಯೆ ಎಂದರೆ ಮಾಘ ಮಾಸದಲ್ಲಿ ಪ್ರಾತಃಸ್ನಾನ ಮಾಡುವ ಮಾನವನು ಪುಷ್ಯ ಪೂರ್ಣಿಮೆಯಿಂದ ಆರಂಭಿಸಿ (ಮಾಘ) ಅಮಾವಾಸ್ಯಾ ಪರ್ಯಂತ ಸ್ನಾನ ಮಾಡಬೇಕು.

ತ್ರಿಂಶದ್ದಿನಾನಿ ಪುಣ್ಯಾನಿ ಮಕರಸ್ಥೇ ದಿವಾಕರೇ ।
ತತ್ರ ಉತ್ಥಾಯ ನಿಯಮಂ ಗೃಹ್ಣೀಯಾದ್ವಿಧಿಪೂರ್ವಕಂ ॥ ೧೯ ॥

ಮಾಘಮಾಸಮಿಮಂ ಪುಣ್ಯಂ ಸ್ನಾಸ್ಯೇಹಂ ದೇವಮಾಧವಂ ।
ತಿರ್ಥಂ ಶೀತಜಲೇ ನಿತ್ಯಮಿತಿ ಸಂಕಲ್ಪ್ಯ ಚೇತಸಾ ॥ ೨೦ ॥

ಅಪ್ರಾವೃತಶರೀರಸ್ತು ಯಃ ಕಷ್ಟಂ ಸ್ನಾನಮಾಚರೇತ್ ।
ಪದೇಪದೇಽಶ್ವಮೇಧಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೨೧ ॥

ತತ್ರ ಸ್ನಾತ್ವಾಶುಭೇತೀರ್ಥೇ ದತ್ವಾಶಿರಸಿ ವೈ ಮೃದಂ ।
ವೇದೋಕ್ತವಿಧಿನಾ ರಾಜನ್ಸೂರ್ಯಸ್ಯಾರ್ಘ್ಯಂ ನಿವೇದಯೇತ್ ॥ ೨೨ ॥

---

೧೯. ಸೂರ್ಯನು ಮಕರರಾಶಿಯಲ್ಲಿರುವಾಗ ಆ ಮಕರಮಾಸದ ಮೂವತ್ತು ದಿನಗಳೂ ಪುಣ್ಯಕರವಾದುವುಗಳೆಂದು ತಿಳಿಯಬೇಕು. ಆ ಮಕರ ಮಾಸದಲ್ಲಿ ಬೆಳಗ್ಗೆ ಎದ್ದು ವಿಧಿಪೂರ್ವಕವಾಗಿ ಈ ರೀತಿ ನಿಯಮವನ್ನು ಅಂಗೀಕರಿಸಬೇಕು.

೨೦. "ಓ ದೇವ! ಈ ಮಾಘ ಮಾಸ ಪೂರ್ತಿ, ನಾನು ಈ ತೀರ್ಥದ ಶೀತ ಜಲದಲ್ಲಿ ಮಾಧವನಾದ ನಿನ್ನನ್ನು ನಿತ್ಯವೂ ಸ್ನಾಪಿಸುವೆನು" ಎಂದು ಮನಸ್ಸಿನಲ್ಲಿ ಸಂಕಲ್ಪ ಮಾಡಬೇಕು.

೨೧. ರೋಗಾದಿಗಳಿಂದ ಕೂಡಿದ ಶರೀರವುಳ್ಳ ಮಾನವನು, ಕಷ್ಟಪಟ್ಟು ಈ ಮಾಘ ಮಾಸದಲ್ಲಿ ಸೂರ್ಯೋದಯ ಕಾಲಕ್ಕೇ ಸ್ನಾನಮಾಡಿದರೆ ಅವನಿಗೆ ಅಶ್ವಮೇಧಯಾಗ ಮಾಡಿದಷ್ಟು ಫಲವು ತಪ್ಪದೆ ಲಭಿಸುವುದು. ಅಥವಾ ಈ ಮಾಘ ಮಾಸದಲ್ಲಿ ಶೀತಬಾಧಾ ನಿವೃತ್ತಿಗಾಗಿ ವಸ್ತ್ರಾದಿಗಳನ್ನು ಧರಿಸದೇ ಪದೇ ಪದೇ ಆ ಶೀತಜಲದಲ್ಲಿ ಕಷ್ಟಪಟ್ಟು ಸ್ನಾನಮಾಡುವ ಮಾನವನು ಅಶ್ವಮೇಧ ಫಲವನ್ನು ಹೊಂದುವನು.

೨೨. ಆ ಶುಭ ತೀರ್ಥಗಳಲ್ಲಿ ಮೊದಲು ಮಲಾಪಹಾರಕವಾಗಿ ಸ್ನಾನ ಮಾಡಿ, ಬಳಿಕ ಶಿರದಲ್ಲಿ ಮೃತ್ತಿಕಾಧಾರಣೆಯಿಂದ ಶುದ್ಧನಾದನಂತರ, ವೇದೋಕ್ತವಾದ ವಿಧಿಯಂತೆ ಸಂಕಲ್ಪ ಹೇಳಿ ಸ್ನಾನಮಾಡಿ ಸೂರ್ಯನಿಗೆ ಅರ್ಘ್ಯವನ್ನು ಸಮರ್ಪಿಸಬೇಕು.

ಪಿತೄನ್ ಸಂತರ್ಪ್ಯ ತತ್ರಸ್ಥೋಹ್ಯವತೀರ್ಯ ತತೋ ಜಲಾತ್ ।
ಇಷ್ಟದೇವಂ ಸಮಸ್ಕೃತ್ಯ ಪೂಜಯೇತ್ಪುರುಷೋತ್ತಮಂ ॥ ೨೩ ॥

ಶಂಕಚಕ್ರಧರಂ ದೇವಂ ಮಾಧವಂ ನಾಮಪೂಜಯೇತ್ ।
ವಹ್ನಿಂ ಹುತ್ವಾ ವಿಧಾನೇನ ತತಸ್ತ್ವೇಕಾಶನೋ ಭವೇತ್ ॥ ೨೪ ॥

ಭೂಶಯ್ಯಾಬ್ರಹ್ಮಚರ್ಯೇಣ ಶಕ್ತಃ ಸ್ನಾನಂ ಸಮಾಚರೇತ್ ।
ಅಶಕ್ತಸ್ಯ ಧನಾಢ್ಯಸ್ಯ ಸ್ವೇಚ್ಛಾ ಸಾ ತತ್ರ ಕಥ್ಯತೇ ॥ ೨೫ ॥

ಅವಶ್ಯಮಪಿ ಕರ್ತವ್ಯಂ ಮಾಘೇ ಸ್ನಾನಮಿತಿಶ್ರುತಿಃ ।
ಈಶ್ವರೇಣ ಯಥಾಕಾಮಂ ಬಲಂ ಧರ್ಮೋಽನುವರ್ತತೇ ॥ ೨೬ ॥

---

೨೩. ಹಾಗೆಯೇ ನೀರಿನಲ್ಲೇ ನಿಂತುಕೊಂಡು ತರ್ಪಣಾದಿಗಳನ್ನು ಕೊಟ್ಟು, ಪಿತೃಗಳಿಗೆ ತೃಪ್ತಿಪಡಿಸಿ ಅನಂತರ ನೀರಿನಿಂದ ಮೇಲಕ್ಕೆ ಬರಬೇಕು.

೨೪. ಆ ಮೇಲೆ ತನ್ನ ಇಷ್ಟದೇವರನ್ನು ನಮಸ್ಕರಿಸಿ, ಪುರುಷೋತ್ತಮನೂ ಶಂಖಚಕ್ರಗದಾಧಾರಿಯೂ ಆದ ಮಾಧವನನ್ನು ನಾಮಾವಳಿಗಳಿಂದ ಅರ್ಚಿಸಬೇಕು. ಬಳಿಕ ವಿಧಿಪೂರ್ವಕವಾಗಿ ಅಗ್ನಿಯಲ್ಲಿ ಹೋಮಮಾಡಿ, ಒಂದೇ ಹೊತ್ತು ಭೋಜನಮಾಡಬೇಕು.

೨೫. ಶಕ್ತನಾಗಿದ್ದರೆ ಆ ರಾತ್ರಿ ಬ್ರಹ್ಮಚರ್ಯ ನಿಯಮದಿಂದ ನೆಲದ ಮೇಲೆ ಮಲಗಿಕೊಂಡಿದ್ದು, ಮಾರನೆಯ ದಿನವೂ ವಿಧಿಪೂರ್ವಕವಾಗಿ ಸ್ನಾನವನ್ನು ಮಾಡಬೇಕು. ಅಷ್ಟುಮಟ್ಟಿನ ಶಕ್ತಿಯಿಲ್ಲದವ ಧನಾಢ್ಯ ಇವರುಗಳು ತಮ್ಮ ಇಚ್ಛೆಬಂದಂತೆ ಆಚರಿಸಬಹುದೆಂದು ಹೇಳಿದೆ.

೨೬. ಶಕ್ತನಾಗಲಿ, ಅಶಕ್ತನಾಗಲಿ ಮಾನವನು ಮಾಘ ಮಾಸದಲ್ಲಿ ಅವಶ್ಯವಾಗಿ ಪುಣ್ಯತೀರ್ಥಕ್ಷೇತ್ರ ಇವುಗಳಲ್ಲಿ ಸ್ನಾನಮಾಡಲೇಬೇಕೆಂದು ಶ್ರುತಿಯಿದೆ. ಈ ರೀತಿ ಸ್ನಾನಮಾಡಿದರೆ ಅವರಿಗೆ ಅಪೇಕ್ಷಿತವಾದ ಬಲ, ಧರ್ಮ ಇವು ಅವರಿಗೆ ಉಂಟಾಗುತ್ತವೆ.

ತಿಲಸ್ನಾಯೀ ತಿಲೋದ್ವರ್ತೀ ತಿಲಭೋಕ್ತಾ ತಿಲೋದಕೀ ।
ತಿಲಹೋತಾ ಚ ದಾತಾ ಚ ಷಟ್ತಿಲೋ ನಾವಸೀದತಿ ॥ ೨೭ ॥

ತೈಲಸ್ಯಾಮಲಾಕಾನಾಂ ಚ ತೀರ್ಥೇ ದೇಯಾನಿ ನಿತ್ಯಶಃ ।
ತಥಾ ಪ್ರಜ್ವಾಲಯೇದ್ವಹ್ನಿಂ ನಿವಾತಾರ್ಥಂ ದ್ವಿಜನ್ಮನಾಂ ॥ ೨೮ ॥

ಏವಂ ಸ್ನಾನಾವಸಾನೇ ತು ಭೋಜ್ಯಂ ದೇಯಮವಾರಿತಂ ।
ಭೋಜಯೇದ್ದ್ವಿಜದಾಂಪತ್ಯಂ ಭೂಷಯೇದ್ವಸ್ತ್ರಭೂಷಣೈಃ ॥ ೨೯ ॥

ಕಂಬಲಾಜಿನ ರತ್ನಾನಿ ವಾಸಾಂಸಿ ವಿವಿಧಾನಿ ಚ ।
ಚೋಲಕಾನಿ ಚ ದಿವ್ಯಾನಿ ಪ್ರಚ್ಛಾದನಪಟೀಸ್ತಥಾ ॥ ೩೦ ॥

---

೨೭. ಎಳ್ಳನ್ನು ಅರೆದು ಹಚ್ಚಿಕೊಂಡು ಸ್ನಾನ ಮಾಡುವವನು, ಎಳ್ಳು ಹುಡಿಯನ್ನು ಮೈಗೆ ಉಜ್ಜಿಕೊಳ್ಳುವವನು, ಎಳ್ಳನ್ನು ಆಹಾರದಲ್ಲಿ ಸೇವಿಸುವವನು, ತಿಲೋದಕಕೊಡುವವನು, ತಿಲಹೋಮ ಮಾಡುವವನು ಈ ಆರು ಜನಗಳೂ ಎಂದಿಗೂ ದುಃಖಭಾಜನರಾಗುವುದಿಲ್ಲ.

೨೮. ತೈಲ, ನೆಲ್ಲಿಯಕಾಯಿ ಇವುಗಳನ್ನು ಕ್ಷೇತ್ರ ತೀರ್ಥಗಳಲ್ಲಿ ಪ್ರತಿ ನಿತ್ಯವೂ ವಿಪ್ರರಿಗೆ ದಾನಕೊಡಬೇಕು. ಬ್ರಾಹ್ಮಣರಿಗೆ ಶೀತವೂ ವಾತರೋಗಾದಿಗಳೂ ಉಂಟಾಗದಿರುವಂತೆ ಸ್ನಾನಘಟ್ಟದ ಸಮೀಪದಲ್ಲಿ ಬೆಂಕಿಯನ್ನು ಪ್ರಜ್ವಲಿಸುವಂತೆ ಮಾಡಿ ಶಾಖ ಉಂಟುಮಾಡಬೇಕು.

೨೯. ಹೀಗೆ ಸ್ನಾನ, ಶರೀರಶಾಖ ಇವುಗಳನ್ನಾಚರಿಸಿದನಂತರ ಪರಿಶುದ್ಧವಾದ ಕಾಯಿಪಲ್ಯಾದಿಗಳಿಂದ ಬ್ರಾಹ್ಮಣದಂಪತಿಗಳಿಗೆ ಭೋಜನಮಾಡಿಸಬೇಕು. ಊಟವಾದ ಮೇಲೆ ಶಕ್ತ್ಯನುಸಾರ ಭೂಷಣ ದಕ್ಷಿಣಾದಿಗಳನ್ನು ಅವರಿಗೆ ಕೊಡಬೇಕು.

೩೦. ಕಂಬಳಿ, ಕೃಷ್ಣಾಜಿನ, ವ್ಯಾಘ್ರಾಜಿನ, ರತ್ನಗಳು, ನಾನಾವಿಧ ವಸ್ತ್ರಗಳು, ದಿವ್ಯವಾದ ಚೋಲಕ (ಕುಪ್ಪಸ) ಗಳು, ಮೇಲುಹೊದಿಕೆಗಳು, ಪಾದುಕೆ, ಛತ್ರಿ, ಮೋದಕಗಳು ಇವುಗಳನ್ನು ದಾನ ಮಾಡಬೇಕು.

ಉಪಾನಹೌ ತಥಾ ಛತ್ರಂ ನೋದಕೈಃ ಪಾಪಮೋಚಕೈಃ ।
ಅನೇನ ವಿಧಿನಾ ದದ್ಯಾನ್ಮಾಧವಃ ಪ್ರೀಯತಾಮಿತಿ ॥ ೩೦ ॥

ಅಗಮ್ಯಾಗಮನಸ್ತೇಯಪಾಪೇಭ್ಯಶ್ಚ ಪರಿಗ್ರಹಾತ್ ।
ರಹಸ್ಯಾಚರಿತಾದ್ವಾಪಿ ಮುಚ್ಯತೇ ಸ್ನಾನಮಾಚರೇತ್ ॥ ೩೨ ॥

ಪಿತೃಭಿಃ ಪಿತಾಮಹೈಃ ಸಾರ್ಧಂ ತಥೈವ ಪ್ರಪಿತಾಮಹೈಃ ।
ಮಾತಾಮಾತಾಮಹೈಸ್ಸಾರ್ಧಂ ವೃದ್ಧಮಾತಾಮಹೈಸ್ತಥಾ ॥ ೨೨ ॥

ಏಕವಿಂಶಕುಲೈಃ ಸಾರ್ಧಂ ಭೋಗಾನ್ಭುಕ್ತ್ವಾ ಯಥೇಪ್ಸಿತಾನ್ ।
ಮಾಘಮಾಸ್ಯುಷಸಿ ಸ್ನಾತ್ವಾ ವಿಷ್ಣುಲೋಕಂ ಸ ಗಚ್ಛತಿ ॥ ೩೪ ॥

ಯೋ ಮಾಘಮಾಸ್ಯುಷಸಿ ಸೂರ್ಯಕರಾಭಿತಾಮ್ರೇ ।
ಸ್ನಾನಂ ಸಮಾಚರತಿ ಚಾರುನದೀ ಪ್ರವಾಹೇ ।

---

೩೧. ಇದರಿಂದ ಸಕಲ ಪಾಪಗಳೂ ನಿವೃತ್ತಿಯಾಗುವುವು. ದಾನ ಕೊಡುವಾಗ " ಈ ನಾನು ಆಚರಿಸಿದ ವಿಧಿಯಿಂದ ಮಾಧವನು ಸುಪ್ರೀತನಾಗಲಿ " ಎಂದು ಹೇಳಬೇಕು.

೩೨. ಈ ಪ್ರಕಾರ ನಿಯಮದಿಂದ ಮಾಘಮಾಸದ ಉಷಃಕಾಲವಲ್ಲಿ ಸ್ನಾನವನ್ನು ಆಚರಿಸಿದರೆ ಆಗಮ್ಯಾಗಮನ, ಕಳ್ಳತನ ಇವುಗಳಿಂದುಂಟಾಗುವ ಪಾಪಗಳೂ, ರಹಸ್ಯವಾಗಿ ಆಚರಿಸಿದ ಅನೇಕ ಪಾಪಗಳೂ, ಎಲ್ಲವೂ ನಿವೃತ್ತಿ ಯಾಗುವುವು.

೩೩-೩೪. ಅಲ್ಲದೆ ಪಿತೃ ಪಿತಾಮಹ ಪ್ರಪಿತಾಮಹರು, ಮಾತೃ ಮಾತಾಮಹ, ವೃದ್ಧಮಾತಾಮಹರು ಈ ರೀತಿ ತನ್ನ ಸಂಬಂಧಿಗಳಾದ ಇಪ್ಪತ್ತೊಂದು ತಲೆಮಾರಿನವರೊಡನೆ ಇಷ್ಟಭೋಗಗಳನ್ನು ಅನುಭವಿಸಿ ವಿಷ್ಣುಲೋಕಕ್ಕೆ ಹೋಗುತ್ತಾನೆ.

೩೫. ಮಾಘಮಾಸದ ಉಷಃಕಾಲದಲ್ಲಿ ಆಗತಾನೆ ಉದಯಿಸಿದ ಸೂರ್ಯನ ಕಿರಣಗಳು ಕೆಂಪಗೆ ಕಾಣುತ್ತಿರುವ ಸಮಯದಲ್ಲಿ ಮನೋಹರವಾದ ನದಿಯ

ಉದ್ಧೃತ್ಯ ಸಪ್ತಪುರುಷಾನ್ಪಿತೃಮಾತೃತಶ್ಚ ।
ಸ್ವರ್ಗಂ ಪ್ರಯಾತ್ಯಮಲ ದೇಹಧರೋ ನರೋಽಸೌ　　॥ ೩೫ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ
ಶ್ರೀ ಕೃಷ್ಣಯುಧಿಷ್ಠಿರ ಸಂವಾದೇ ಮಾಘಸ್ನಾನವಿಧಿ
ವರ್ಣನಂ ನಾಮ ದ್ವಾವಿಂಶತ್ಯುತ್ತರ
ಶತತಮೋಽಧ್ಯಾಯಃ.



---

ಪ್ರವಾಹದಲ್ಲಿ ಸ್ನಾನಮಾಡುವವನು ಪಿತೃಕುಲ, ಮಾತೃಕುಲ ಈ ರೀತಿ ತನ್ನ ಏಳು ತಲೆಮಾರಿನವರನ್ನೂ ಉದ್ಧಾರಮಾಡಿ, ತಾನೂ ದೇಹಪಾರಿಶುದ್ಧ್ಯಹೊಂದಿ, ಸ್ವರ್ಗಲೋಕವನ್ನು ಪಡೆಯುವನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿಮಾಘಸ್ನಾನವಿಧಿವರ್ಣನೆ ಯೆಂಬ ನೂರಇಪ್ಪತ್ತೆರಡನೆಯ ಅಧ್ಯಾಯ ಮುಗಿದುದು.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣ

## ಉತ್ತರಪರ್ವಣಿ

## ತ್ರಯೋವಿಂಶತ್ಯುತ್ತರಶತತಮೋಽಧ್ಯಾಯಃ

|| ಶ್ರೀಕೃಷ್ಣ ಉವಾಚ ||

ನೈರ್ಮಲ್ಯಂ ಭಾವಶುದ್ಧಿಶ್ಚ ವಿನಾ ಸ್ನಾನಂ ನ ಯುಜ್ಯತೇ ।
ತಸ್ಮಾತ್ಕಾಯವಿಶುದ್ಧ್ಯರ್ಥಂ ಸ್ನಾನಮಾದೌ ವಿಧೀಯತೇ || ೧ ||

ಅನುದ್ಧೃತೈರುದ್ಧೃತೈರ್ವಾ ಜಲೈಃ ಸ್ನಾನಂ ಸಮಾಚರೇತ್ ।
ತೀರ್ಥಂ ಪ್ರಕಲ್ಪಯೇದ್ವಿದ್ವಾನ್ಮೂಲಮಂತ್ರೇಣ ಮಂತ್ರವಿತ್ || ೨ ||

ನಮೋ ನಾರಾಯಣಾಯೇತಿ ಮೂಲಮಂತ್ರ ಉದಾಹೃತಃ ।
ದರ್ಭಪಾಣಿಸ್ತು ವಿಧಿನಾ ಸ್ವಾಚಾಂತಃ ಪ್ರಯತಃ ಸುಧೀಃ || ೩ ||

---

### ನೂರಇಪ್ಪತ್ತಮೂರನೆಯ ಅಧ್ಯಾಯ

೧. ಶ್ರೀಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರ ! ಸ್ನಾನಮಾಡದೆ ಇದ್ದರೆ ನೈರ್ಮಲ್ಯವೂ, ಮನಶ್ಶುದ್ಧಿಯೂ ಉಂಟಾಗಲಾರದು. ಆದುದರಿಂದ ಈ ಶರೀರಶುದ್ಧಿಗೋಸ್ಕರ ಅವಶ್ಯವಾಗಿ ಸ್ನಾನಮಾಡಬೇಕೆಂದು ವಿಧಿಯಿದೆ.

೨. ಭಾವಿ ಮುಂತಾದುವುಗಳಲ್ಲಿ ನೀರಿದ್ದಾಗ ಅದನ್ನು ಮೇಲಕ್ಕೆ ಸೇದಿಕೊಂಡು ಸ್ನಾನಮಾಡಬೇಕು. ಇಳಿಯುವ ಕೊಳ, ನದಿ, ಕೆರೆ ಇವಾದರೆ ಇಳಿದು ಸ್ನಾನಮಾಡಬೇಕು. ಮಂತ್ರಜ್ಞನಾದವನು ಸ್ನಾನಮಾಡುವಾಗ ಮೂಲ ಮಂತ್ರೋಚ್ಚಾರಣದಿಂದ ಆ ನೀರನ್ನೇ ಪುಣ್ಯತೀರ್ಥವೆಂದು ಭಾವಿಸಿ ಸ್ನಾನ ಮಾಡಬೇಕು.

೩. ಓಂನಮೋ ನಾರಾಯಣಾಯ ಎಂಬುದೇ ಆ ಮೂಲಮಂತ್ರವಾಗಿದೆ. ಪ್ರಾಜ್ಞನಾದವನು ಕೈಬೆರಳಿನಲ್ಲಿ ಪವಿತ್ರವನ್ನಿಟ್ಟುಕೊಂಡು ವಿಧಿಪೂರ್ವಕವಾಗಿ ನಿಯಮದಿಂದ ಆಚಮನಮಾಡಬೇಕು.

**ಚತುರ್ಹಸ್ತಸಮಾಯುಕ್ತಂ ಚತುರಸ್ರಂ ಸಮಂತತಃ ।**
**ಪ್ರಕಲ್ಪ್ಯಾವಾಹಯೇದ್ಗಂಗಾಮೇಭಿರ್ಮಂತ್ರೈರ್ವಿಚಕ್ಷಣಃ ॥ ४ ॥**

**ಓಂ ವಿಷ್ಣುಪಾದಪ್ರಸೂತಾಸಿ ವೈಷ್ಣವೀ ವಿಷ್ಣುದೇವತಾ ।**
**ಪಾಹಿನಸ್ತ್ವೇನಸಸ್ತಸ್ಮಾದಾಜನ್ಮಮರಣಾಂತಿಕಾತ್ ॥ ೫ ॥**

**ತಿಸ್ರಃ ಕೋಟ್ಯೋಽರ್ಧಕೋಟೀ ಚ ತೀರ್ಥಾನಾಂ ವಾಯುರಬ್ರವೀತ್ ।**
**ದಿವಿ ಭುವ್ಯಂತರಿಕ್ಷೇ ಚ ತಾನಿ ತೇ ಸನ್ತಿಜಾಹ್ನವಿ ॥ ೬ ॥**

**ನಂದಿನೀತ್ಯೇವ ತೇ ನಾಮ ದೇವೇಷು ನಲಿನೀತಿ ಚ ।**
**ಕ್ಷಮಾ ಪೃಥ್ವೀಚ ವಿಹಗಾ ವಿಶ್ವಕಾಯಾ ಶಿವಾ ಸ್ಮೃತಾ ॥ ೭ ॥**

**ವಿದ್ಯಾಧರಾ ಸುಪ್ರಸನ್ನಾ ತಥಾ ಲೋಕಪ್ರಸಾದಿನೀ ।**
**ಕ್ಷೇಮ್ಯಾ ತಥಾ ಜಾಹ್ನವೀ ಚ ಶಾಂತಾ ಶಾಂತಿಪ್ರದಾಯಿನೀ ॥ ೮ ॥**

---

೪. ಅನಂತರ ವಿಚಕ್ಷಣನಾದವನು ಸುತ್ತಲೂ ನಾಲ್ಕುಹಸ್ತ ಪ್ರಮಾಣದ ಚತುರಸ್ರಮಂಡಲಮಾಡಿ ಅದರ ಮಧ್ಯದಲ್ಲಿ ಗಂಗಾತೀರ್ಥವನ್ನು ಆವಾಹಿಸ ಬೇಕು.

೫. "ಎಲೌ ಗಂಗೆ, ನೀನು ಮಹಾವಿಷ್ಣುವಿನ ಪಾದದಲ್ಲಿ ಹುಟ್ಟಿದವಳು, ವಿಷ್ಣುದೇವನೇ ನಿನಗೆ ಸ್ವಾಮಿಯಾಗಿರುವನು. ಆದುದರಿಂದ ನಿನ್ನನ್ನು ವೈಷ್ಣವಿ ಯೆಂದೂ ಕರೆಯುವರು. ಎಲೌ ಗಂಗಾದೇವಿಯೇ! ಹುಟ್ಟಿದಾರಭ್ಯ ಮರಣ ಪರ್ಯಂತ ನಾವು ಮಾಡಿರುವ ಪಾಪಗಳನ್ನೆಲ್ಲಾ ನಾಶಪಡಿಸಿ ನಮ್ಮನ್ನು ಕಾಪಾಡು" ಎಂಬ ಅರ್ಥವುಳ್ಳ ಮಂತ್ರವನ್ನು ಆ ಸಮಯದಲ್ಲಿ ಉಚ್ಚರಿಸಬೇಕು.

೬. ಓ ಜಾಹ್ನವಿ! ಸ್ವರ್ಗ, ಭೂಮಿ, ಅಂತರಿಕ್ಷ ಇವುಗಳಲ್ಲಿ ಒಟ್ಟು ಮೂರೂವರೆಕೋಟಿ ತೀರ್ಥಗಳಿವೆಯೆಂದು ವಾಯುವು ಹೇಳಿದ್ದಾನೆ. ಆ ಮೂರೂವರೆಕೋಟಿ ತೀರ್ಥಗಳೂ ನಿನ್ನಲ್ಲಿಯೇ ಅಡಕವಾಗಿರುವುವು.

೭-೯. ನಿನ್ನನ್ನು ನಂದಿನೀ ಎಂಬ ಹೆಸರಿನಿಂದ ಕರೆಯುವರು. ದೇವತೆ ಗಳೆಲ್ಲ ನಲಿನೀ ಎಂದೂ ವ್ಯವಹರಿಸುವರು. ಕ್ಷಮಾ, ಪೃಥ್ವೀ, ವಿಹಗಾ, ವಿಶ್ವ ಕಾಯಾ, ಶಿವಾ, ವಿದ್ಯಾಧರಾ, ಸುಪ್ರಸನ್ನಾ, ಲೋಕಪ್ರಸಾದಿನೀ, ಕ್ಷೇಮ್ಯಾ,

ಏತಾನಿ ಪುಣ್ಯನಾಮಾನಿ ಸ್ನಾನಕಾಲೇ ಪ್ರಕೀರ್ತಯೇತ್ ।
ಭವೇತ್ಸನ್ನಿಹಿತಾ ತತ್ರ ಗಂಗಾ ತ್ರಿಪಥಗಾಮಿನೀ ॥ ೯ ॥

ಸಪ್ತವಾರಾಜಭಿಪ್ತೇನ ಕರಸಂಪುಟಯೋಜಿತಂ ।
ಮೂರ್ಧ್ನಿ ಕುರ್ಯಾಜ್ಜಲಂ ಭೂಪ ತ್ರಿಚತುಃಪಂಚ ಸಪ್ತಧಾ ॥ ೧೦ ॥

ಸ್ನಾನಂ ಕುರ್ಯಾನ್ಮೃದಾ ತದ್ವದಾಮಂತ್ರ್ಯ ಚ ವಿಧಾನತಃ ॥ ೧೧ ॥

ಅಶ್ವಕ್ರಾಂತೇ ರಥಕ್ರಾಂತೇ ವಿಷ್ಣುಕ್ರಾಂತೇ ವಸುಂಧರೇ ।
ಮೃತ್ತಿಕೇ ಹರ ಮೇ ಸರ್ವಂ ಯನ್ಮಯಾ ದುಷ್ಕೃತಂ ಕೃತಂ ॥ ೧೨ ॥

ಉದ್ಧೃತಾಸಿ ವರಾಹೇಣ ಕೃಷ್ಣೇನ ಶತಬಾಹುನಾ ।
ನಮಸ್ತೇ ಸರ್ವಲೋಕಾನಾಮಸುಧಾರಿಣಿ ಸುವ್ರತೇ ॥ ೧೩ ॥

---

ಜಾಹ್ನವೀ, ಶಾಂತಾ, ಶಾಂತಿಪ್ರದಾಯಿನೀ ಎಂಬ ಪುಣ್ಯನಾಮಗಳನ್ನು ಸ್ಮರಣಮಾಡಿದರೆ ತ್ರಿಪಥಗಾಮಿನಿಯಾದ ಗಂಗೆಯು ಅಲ್ಲಿ ಸನ್ನಿಹಿತಳಾಗುವಳು.

೧೦-೧೧. ಕೈಯ ಬೊಗಸೆಯಲ್ಲಿ ನೀರನ್ನು ತೆಗೆದುಕೊಂಡು ಪುಣ್ಯಕರಗಳಾದ ಈ ನಾಮಗಳನ್ನು ಏಳುಸಲ ಜಪಿಸಿ ಅನಂತರ ಆ ನೀರನ್ನು ತನ್ನ ತಲೆಯ ಮೇಲೆ ಮೂರು, ನಾಲ್ಕು, ಐದು ಅಥವಾ ಏಳು ಭಾಗವಾಗುವಂತೆ ಎರಚಬೇಕು. ಅನಂತರ ವಿಧಿಪೂರ್ವಕವಾಗಿ ಮೃತ್ತಿಕಾಸ್ನಾನಮಾಡಬೇಕು.

೧೨. ಆ ಕಾಲದಲ್ಲಿ "ಅಶ್ವಕ್ರಾಂತೆ, ರಥಕ್ರಾಂತೆ, ವಿಷ್ಣುಕ್ರಾಂತೆ, ವಸುಂಧರೆ ಮುಂತಾದ ಹೆಸರುಳ್ಳ ಮೃತ್ತಿಕೆಯೇ! ನಾನು ಮಾಡಿದ ಪಾಪಗಳನ್ನೆಲ್ಲಾ ಪರಿಹರಿಸು.''

೧೩. "ವರಾಹರೂಪಿಯಾದ ಶ್ರೀವಿಷ್ಣುವು ತನ್ನ ನೂರುಬಾಹುಗಳಿಂದಲೂ ನಿನ್ನನ್ನು ಜಲದಿಂದ ಉದ್ಧಾರಮಾಡಿರುವನು. ಸರ್ವಪ್ರಾಣಿಗಳ ಪ್ರಾಣಧಾರಣೆಗೆ ನೀನೇ ಮೂಲಕಾರಣಳಾಗಿರುವೆ. ಎಲೌ ಸುವ್ರತೆಯಾದ ಮೇದಿನಿಯೇ! ನಿನ್ನನ್ನು ನಮಸ್ಕರಿಸುವೆನು" ಎಂಬ ಅರ್ಥವುಳ್ಳ ಮಂತ್ರವನ್ನು ಹೇಳಬೇಕು.

ಏವಂ ಸ್ನಾತ್ವಾ ತತಃ ಪಶ್ಚಾದಾಚಮ್ಯ ಚ ವಿಧಾನತಃ ।
ಉತ್ಥಾಯ ವಾಸಸೀ ಶುಕ್ಲೇ ಸೂಕ್ಷ್ಮೇ ತು ಪರಿಧಾಯ ವೈ　|| ೧೪ ||

ತತಸ್ತು ತರ್ಪಣಂ ಕುರ್ಯಾತ್ತ್ರೈಲೋಕ್ಯಾಪ್ಯಾಯನಾಯ ತು ।
ದೇವಾ ಯಕ್ಷಾಸ್ತಥಾ ನಾಗಾ ಗಂಧರ್ವಾಪ್ಸರಸಾಂ ಗಣಾಃ ॥
ಕ್ರೂರಾಸ್ಸರ್ಪಾಸ್ಸುಪರ್ಣಾಶ್ಚ ತರಕ್ಷಾ ವಿಹಗಾಃ ಖಗಾಃ　|| ೧೫ ||

ವಿದ್ಯಾಧರಾ ಜಲಧರಾಸ್ತಥೈವಾಕಾಶಗಾಮಿನಃ ।
ನಿರಾಧಾರಾಶ್ಚ ಯೇ ಜೀವಾಃ ಪಾಪಕರ್ಮರತಾಶ್ಚ ಯೇ　|| ೧೬ ||

ತೇಷಾಮಾಪ್ಯಾಯನಾಯೈತದ್ದೀಯತೇ ಸಲಿಲಂ ಮಯಾ ।
ಕೃತೋಪವೀತೋ ದೇವೇಭ್ಯೋ ನಿವೀತೀ ಚ ಭವೇತ್ತತಃ　|| ೧೭ ||

ಮನುಷ್ಯಾಂಸ್ತರ್ಪಯೇದ್ಭಕ್ತ್ಯಾ ಬ್ರಹ್ಮಪುತ್ರಾನೃಷೀಂಸ್ತಥಾ ।
ಸನಕಶ್ಚ ಸನಂದಶ್ಚ ತೃತೀಯಶ್ಚ ಸನಾತನಃ　|| ೧೮ ||

---

೧೪. ಈ ರೀತಿ ಮೃತ್ತಿಕಾಸ್ನಾನಮಾಡಿ ಅನಂತರ ವಿಧಿಪೂರ್ವಕವಾಗಿ ಆಚಮನಮಾಡಬೇಕು. ಆಮೇಲೆ ನೀರಿನಿಂದ ಮೇಲಕ್ಕೆದ್ದು ಸೂಕ್ಷ್ಮವಾದ ಬಿಳಿಯ ಬಟ್ಟೆಗಳನ್ನು ಧರಿಸಬೇಕು.

೧೫-೧೭. ಅನಂತರ ಮೂರುಲೋಕಕ್ಕೂ ಆನಂದವುಂಟುಮಾಡುವುದಕ್ಕೋಸ್ಕರ ದೇವತೆಗಳು, ಯಕ್ಷರು, ನಾಗರು, ಗಂಧರ್ವರು, ಅಪ್ಸರಸ್ತ್ರೀಸಮೂಹ, ಕ್ರೂರವಾದ ಸರ್ಪಗಳು, ಸುಪರ್ಣಗಳು, ತರಕ್ಷಗಳು, ವಿಹಗಗಳು, ಖಗಗಳು, ವಿದ್ಯಾಧರರು, ಅಂತರಿಕ್ಷಚಾರಿ ಮೇಘಗಳು, ಆಶ್ರಯಹೀನರಾದ ಜೀವರಾಶಿಗಳು, ಪಾಪಕರ್ಮನಿರತರು ಇವರೆಲ್ಲರಿಗೂ ನಾನು ಈ ಜಲವನ್ನು ಕೊಡುತ್ತಿರುವೆನು. ಎಂಬ ಅರ್ಥವುಳ್ಳ ಮಂತ್ರಹೇಳುತ್ತಾ ತರ್ಪಣಮಾಡಬೇಕು. ಈ ದೇವತರ್ಪಣವನ್ನು ಉಪವೀತಿಯಾಗಿಯೇ (ಜನಿವಾರವನ್ನು ಸರಿಯಾಗಿ ಹಾಕಿಕೊಂಡೇ) ಮಾಡಬೇಕು. ಅನಂತರ ಜನಿವಾರವನ್ನು ನಿವೀತಿಯಾಗಿ ಮಾಡಿಕೊಂಡು ಋಷಿ

ಕಪಿಲಶ್ಚಾಸುರಿಶ್ಚೈವ ವೋಢುಃ ಪಂಚಶಿಖಸ್ತಥಾ ।
ಸರ್ವೇ ತೇ ತೃಪ್ತಿಮಾಯಾಂತು ಮದ್ದತ್ತೇನಾಂಬುನಾ ಸದಾ ॥ ೧೯ ॥

ಮರೀಚಿಮತ್ರ್ಯಂಗಿರಸೌ ಪುಲಸ್ತ್ಯಂ ಪುಲಹಂ ಕ್ರತುಂ ।
ಪ್ರಚೇತಸಂ ವಶಿಷ್ಠಂ ಚ ಭೃಗುಂ ನಾರದಮೇವ ಚ ॥ ೨೦ ॥

ದೇವಬ್ರಹ್ಮಋಷೀನ್‌ಸರ್ವಾರ್ನ್ ತರ್ಪಯೇತಾಕ್ಷತೋದಕೈಃ ।
ಅಪಸವ್ಯಂ ತತಃ ಕೃತ್ವಾ ಸವ್ಯಂ ಜಾನು ಚ ಭೂತಲೇ ॥ ೨೧ ॥

ಅಗ್ನಿಷ್ವಾತ್ತಾ ಬರ್ಹಿಷದೋ ಹವಿಷ್ಮಂತಸ್ತಥೋಷ್ಮಪಾಃ ।
ಸುಕಲಿತಾಸ್ತಥಾ ಭೌಮಾ ಆಜ್ಯಪಾಸ್ಸೋಮಪಾಸ್ತಥಾ ॥ ೨೨ ॥

ತರ್ಪಯೇಚ್ಚ ಪಿತ್ರ್ನ್ ಭಕ್ತ್ಯಾ ಸ ತಿಲೋದಕಚಂದನೈಃ ।
ದರ್ಭಪಾಣಿಸ್ತು ವಿಧಿವತ್ತರ್ಪಯೇನ್ನಾಮಗೋತ್ರತಃ ॥ ೨೩ ॥

---

ಗಳಿಗೆ ತರ್ಪಣಕೊಡಬೇಕು. ಬ್ರಹ್ಮನ ಮಾನಸಪುತ್ರರಾದ ಸನಕ, ಸನಂದನ, ಸನಾತನ, ಕಪಿಲ, ಆಸುರಿ, ವೋಢು, ಪಂಚಶಿಖ ಮುಂತಾದ ಋಷಿಗಳೆಲ್ಲರೂ ನಾನು ಸಮರ್ಪಿಸುವ ತರ್ಪಣೋದಕದಿಂದ ಸದಾ ತೃಪ್ತಿಹೊಂದಲಿ, ಎಂದು ಹೇಳಬೇಕು.

೨೦. ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ, ಪುಲಹ, ಕ್ರತು, ಪ್ರಚೇತಸ, ವಸಿಷ್ಠ, ಭೃಗು, ನಾರದ ಈ ದೇವತೆಗಳಿಗೂ, ಬ್ರಹ್ಮರ್ಷಿಗಳಿಗೂ ಅಕ್ಷತೆ ಸಮೇತ ವಾದ ಜಲದಿಂದ ತರ್ಪಣಮಾಡಬೇಕು.

೨೧-೨೩. ಅನಂತರ ಎಡಮಂಡಿಯನ್ನು ನೆಲದ ಮೇಲೆ ಊರಿ, ದರ್ಭ ಪಾಣಿಯಾಗಿ ವಿಧಿಪೂರ್ವಕವಾಗಿ ನಾಮವನ್ನೂ ಗೋತ್ರವನ್ನೂ ಉಚ್ಚರಿಸುತ್ತಾ ಅಗ್ನಿಷ್ವಾತ್ತ, ಬರ್ಹಿಷದ, ಹವಿಷ್ಮಂತ, ಊಷ್ಮಪ, ಸುಕಲಿತ, ಭೌಮ, ಆಜ್ಯಪ, ಸೋಮಪ ಈ ಪಿತೃದೇವತೆಗಳನ್ನು ಭಕ್ತಿಪೂರ್ವಕವಾಗಿ ಚಂದನ, ತಿಲ ಇವುಗಳ ಸಮೇತ ಜಲದಿಂದ ತರ್ಪಣಮಾಡಬೇಕು.

ಪಿತ್ರಾದೀನ್ನಾಮಗೋತ್ರೇಣ ತಥಾ ಮಾತಾಮಹಾನಪಿ ।
ಸಂತರ್ಪ್ಯ ವಿಧಿವದ್ಭಕ್ತ್ಯಾ ಇಮಂ ಮಂತ್ರಮುದೀರಯೇತ್ ॥ ೨೪ ॥

ಯೇಽಬಾಂಧವಾಽಬಾಂಧವಾ ವಾ ಯೇಽನ್ಯಜನ್ಮನಿ ಬಾಂಧವಾಃ ।
ತೇ ತೃಪ್ತಿಮಖಿಲಾ ಯಾಂತು ಯಶ್ಚಾಸ್ಮತ್ತೋಽಭಿವಾಂಛತಿ ॥ ೨೫ ॥

ತತಶ್ಚಾಚಮ್ಯ ವಿಧಿವದಾಲಿಖೇತ್ಪದ್ಮಮಗ್ರತಃ ।
ಅಕ್ಷತೈಸ್ಸಹ ಪುಷ್ಪೈಶ್ಚ ಸ ತಿಲಾರುಣಚಂದನೈಃ ॥ ೨೬ ॥

ಅರ್ಘ್ಯಂ ದದ್ಯಾತ್ಪ್ರಯತ್ನೇನ ಸೂರ್ಯನಾಮಾನುಕೀರ್ತನೈಃ ।
ನಮಸ್ತೇ ವಿಶ್ವರೂಪಾಯ ನಮೋ ವಿಷ್ಣುಸಖಾಯ ವೈ ॥ ೨೭ ॥

ಸಹಸ್ರರಶ್ಮಯೇ ನಿತ್ಯಂ ನಮಸ್ತೇ ಸರ್ವತೇಜಸೇ ।
ನಮಸ್ತೇ ಸರ್ವವಪುಷೇ ನಮಸ್ತೇ ಸರ್ವಶಕ್ತಯೇ ॥ ೨೮ ॥

---

೨೪. ಇದೇರೀತಿ ಪಿತೃ, ಪಿತಾಮಹ, ಪ್ರಪಿತಾಮಹ ಇವರುಗಳ ಮತ್ತು ಮಾತಾಮಹ, ಮಾತುಃಪಿತಾಮಹ, ಮಾತುಃಪ್ರಪಿತಾಮಹ ಇವರೇ ಮುಂತಾದ ಪಿತೃಗಳ ನಾಮ ಗೋತ್ರ ಇವುಗಳನ್ನುಚ್ಚರಿಸಿ ತಿಲತರ್ಪಣಮಾಡಬೇಕು.

೨೫. ಬಳಿಕ "ನಮ್ಮ ಬಂಧುಗಳು, ಬಂಧುಗಳಲ್ಲದವರು, ಬೇರೆ ಜನ್ಮಗಳಲ್ಲಿ ನಮಗೆ ಬಾಂಧವರಾಗಿದ್ದವರು, ಇವರೆಲ್ಲರೂ ನಮ್ಮಿಂದ ಹೊಂದಬಹುದಾದ ತೃಪ್ತಿಯನ್ನು ಪಡೆಯಲಿ" ಎಂಬ ಅರ್ಥವುಳ್ಳ ಮಂತ್ರವನ್ನು ಉಚ್ಚರಿಸಿ ಪಾತ್ರೆಯ ಜಲವನ್ನೆಲ್ಲಾ ಸುರಿಯಬೇಕು

೨೬-೨೭. ಅನಂತರ ಶುದ್ಧೋದಕದಿಂದ ಆಚಮನಮಾಡಿ, ತನ್ನ ಎದುರಿಗೆ ಶಾಸ್ತ್ರೋಕ್ತರೀತಿಯಿಂದ ಪದ್ಮವನ್ನು ಬರೆಯಬೇಕು. ಅಕ್ಷತೆ, ಹೂವುಗಳು, ಎಳ್ಳು, ಕೆಂಪುಚಂದನ ಇವುಗಳನ್ನು ಹಿಡಿದುಕೊಂಡು ಸೂರ್ಯನ ನಾಮೋಚ್ಚಾರಣ ಮಾಡುತ್ತಾ ಯತ್ನದಿಂದ ಅರ್ಘ್ಯಪ್ರದಾನಮಾಡಬೇಕು. ಬಳಿಕ "ವಿಶ್ವರೂಪನಾದ ದೇವನೇ! ನಿನಗೆ ನಮಸ್ಕಾರ. ವಿಷ್ಣುವಿನ ಸ್ನೇಹಿತನಾದ ನಿನ್ನನ್ನು ನಮಸ್ಕರಿಸುವೆನು."

೨೮. "ಸಹಸ್ರಕಿರಣನೂ, ಸಕಲತೇಜಸ್ಸ್ವರೂಪನೂ ಆದ ನಿನಗೆ ನಿತ್ಯವೂ ನಮಸ್ಕಾರಮಾಡುವೆನು ದೇವ, ಸಕಲದೇವಸ್ವರೂಪನೂ, ಸಕಲಶಕ್ತಿಗಳಿಗೂ ಆಶ್ರಯನೂ ನೀನೇ ಆಗಿರುವೆ. ಇಗೋ ನಿನಗೆ ನಮಸ್ಕಾರ."

ಜಗತ್ಸ್ವಾಮಿನ್ನಮಸ್ತೇಽಸ್ತು ದಿವ್ಯಚಂದನಭೂಷಿತ ।
ಪದ್ಮನಾಭ ನಮಸ್ತೇಽಸ್ತು ಕುಂಡಲಾಂಗದಧಾರಿಣೇ ॥ ೨೯ ॥

ನಮಸ್ತೇ ಸರ್ವಲೋಕೇಶ ದೇವಾಸುರನಮಸ್ಕೃತ ।
ಸುಕೃತಂ ದುಷ್ಕೃತಂ ಚೈವ ಸಮ್ಯಗ್ಜಾನಾಸಿ ಸರ್ವದಾ ॥ ೩೦ ॥

ಸತ್ಯದೇವ ನಮಸ್ತೇಽಸ್ತು ಸರ್ವದೇವ ನಮೋಽಸ್ತುತೇ ।
ದಿವಾಕರ ನಮಸ್ತೇಽಸ್ತು ತ್ರಯೀಮಯ ನಮೋಽಸ್ತುತೇ ॥ ೩೧ ॥

ಏವಂ ಸೂರ್ಯಂ ನಮಸ್ಕೃತ್ಯ ತ್ರಿಃ ಕೃತ್ವಾ ಚ ಪ್ರದಕ್ಷಿಣಾಂ ।
ದ್ವಿಜಂ ಗಾಂ ಕಾಂಚನಂ ಸ್ಪೃಷ್ಟ್ವಾ ತತೋ ವಿಷ್ಣುಗೃಹಂ ವ್ರಜೇತ್ ॥

---

೨೯. ದಿವ್ಯಚಂದನದಿಂದ ಅಲಂಕೃತನೂ, ಜಗತ್ತಿಗೆ ಒಡೆಯನೂ ಆದ ದೇವನೇ! ನಿನಗೆ ನಮಸ್ಕಾರ. ಕುಂಡಲ, ಅಂಗದ ಈ ಆಭರಣಗಳನ್ನು ಧರಿಸಿರುವವನೇ ! ಪದ್ಮನಾಭನೆನಿಸಿದ ನಿನಗೆ ನಮಸ್ಕಾರಮಾಡುವೆನು.

೩೦. ಸರ್ವಲೋಕೇಶ್ವರ! ನಿನ್ನನ್ನು ದೇವದಾನವರೆಲ್ಲರೂ ನಮಸ್ಕರಿಸುವರು. ನೀನು ಯಾವಾಗಲೂ ಪುಣ್ಯಪಾಪಗಳ ವಿವೇಚನೆಯನ್ನು ಚೆನ್ನಾಗಿ ತಿಳಿದಿರುವೆ. ಪ್ರಭುವೇ ! ನಿನ್ನನ್ನು ನಮಸ್ಕರಿಸುವೆನು.

೩೧. ಓ ಸತ್ಯಸ್ವರೂಪ! ಸರ್ವರಿಗೂ ದೇವನಾದ ನಿನಗೆ ನಮಸ್ಕಾರ. ಋಗ್ಯಜುಸ್ಸಾಮವೆಂಬ ಮೂರುವೇದಗಳ ಸ್ವರೂಪನಾದ ದಿವಾಕರನೇ! ನಿನಗೆ ನಮಸ್ಕಾರ.''

೩೨. ಈ ಪ್ರಕಾರ ನಾಮೋಚ್ಚಾರಣಪೂರ್ವಕವಾಗಿ ಸೂರ್ಯನಿಗೆ ಮೂರು ಪ್ರದಕ್ಷಿಣೆಮಾಡಿ ನಮಸ್ಕರಿಸಬೇಕು. ಅನಂತರ ಬ್ರಾಹ್ಮಣರನ್ನೂ, ಗೋವನ್ನೂ, ಚಿನ್ನವನ್ನೂ ಸ್ಪರ್ಶಮಾಡಬೇಕು. ಹೀಗೆ ಮಾಡಿದರೆ ಕರ್ತೃವಿಗೆ ಕೊನೆಯಲ್ಲಿ ವಿಷ್ಣುಲೋಕವು ಪ್ರಾಪ್ತಿಯಾಗುವುದು.

ಸ್ನಾನಂ ಖಲು ಪ್ರತಿದಿನಂ ಕಥಿತಂ ಮುನೀಂದ್ರೈಃ ।
ಪಾಪಾಪಹಂ ಮಲಹರಂ ಸುಖದಂ ಸದೈವ ॥
ತಸ್ಮಾನ್ನದೀಷ್ವಥ ಗೃಹೇಷ್ವಥ ವಾ ತಡಾಗೇ ।
ಕರ್ತವ್ಯಮೇತದಿಹ ಧರ್ಮಧಿಯಾ ನರೇಣ ॥ ೩೩ ॥

ಇತಿ ಶ್ರೀ ಭವಿಷ್ಯೇಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ನಿತ್ಯಸ್ನಾನವಿಧಿವರ್ಣನಂ ನಾಮ ತ್ರಯೋವಿಂಶತ್ಯಧಿಕಶತತಮೋऽಧ್ಯಾಯಃ.



---

೩೩. ಪ್ರತಿದಿನವೂ ಸ್ನಾನಮಾಡುವುದರಿಂದ ಪಾಪವು ಪರಿಹಾರವಾಗುವುದು. ಕಶ್ಮಲವು ನಿವೃತ್ತಿಯಾಗಿ, ಸದಾ ಸುಖವುಂಟಾಗುವುದು ಎಂಬದಾಗಿ ಮುನಿವರ್ಯರು ಹೇಳಿರುವರು ಆದುದರಿಂದ ಮಾನವನು ತನ್ನ ಶಕ್ತ್ಯನುಸಾರ ನದಿಗಳು, ಕೊಳ, ಕೆರೆ ಮುಂತಾದುವುಗಳಲ್ಲಿಯೋ ಅಥವಾ ಮನೆಯಲ್ಲಿಯೋ ಧರ್ಮಬುದ್ಧಿಯುಳ್ಳವನಾಗಿ ಪ್ರತಿದಿನವೂ ತಪ್ಪದೆ ನಿಯಮಪೂರ್ವಕವಾಗಿ ಸ್ನಾನವನ್ನು ಮಾಡಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ನಿತ್ಯಸ್ನಾನವಿಧಿವರ್ಣನೆ ಯೆಂಬ ನೂರಇಪ್ಪತ್ತಮೂರನೆಯ ಅಧ್ಯಾಯ ಮುಗಿದುದು.



॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣ

## ಉತ್ತರಪರ್ವಣಿ

## ಚತುರ್ವಿಂಶತ್ಯುತ್ತರಶತತಮೋಽಧ್ಯಾಯಃ

---

॥ ಯುಧಿಷ್ಠಿರ ಉವಾಚ ॥

ರುದ್ರಸ್ನಾನವಿಧಾನಂ ಮೇ ಕಥಯಸ್ವ ಜನಾರ್ದನ ।
ಸರ್ವದುಷ್ಟೋಪಶಮನಂ ಸರ್ವಶಾಂತಿಪ್ರದಂ ನೃಣಾಂ ॥ ೧ ॥

॥ ಶ್ರೀಕೃಷ್ಣ ಉವಾಚ ॥

ದೇವಸೇನಾಪತಿಂ ಸ್ಕಂದಂ ರುದ್ರಪುತ್ರಂ ದುರಾಸದಂ ।
ಅಗಸ್ತ್ಯೋ ಮುನಿಶಾರ್ದೂಲಃ ಸುಖಾಸೀನಮುವಾಚ ಹ ॥ ೨ ॥

---

### ನೂರಇಪ್ಪತ್ತನಾಲ್ಕನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಅಯ್ಯಾ ಜನಾರ್ದನ, ಮಾನವರ ಸರ್ವದೋಷಗಳನ್ನೂ ನಿವಾರಣಮಾಡಿ, ಸಕಲಶಾಂತಿಸುಖಗಳನ್ನೂ ಉಂಟು ಮಾಡುವ ರುದ್ರಸ್ನಾನವಿಧಿಯನ್ನು ನನಗೆ ಹೇಳು ಎಂದನು

೨. ಶ್ರೀಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರ, ಶತ್ರುಭಯಂಕರನೂ, ಶಿವಕುಮಾರನೂ, ದೇವಸೇನಾಧಿಪತಿಯೂ ಆದ ಕುಮಾರಸ್ವಾಮಿಯು ಸುಖವಾಗಿ ಸಂತೋಷದಿಂದ ಕುಳಿತಿರುವ ಸಮಯದಲ್ಲಿ, ಮುನಿಪುಂಗವನಾದ ಅಗಸ್ತ್ಯಮುನಿಯು ಆ ಷಣ್ಮುಖನನ್ನು ಕುರಿತು ಇಂತೆಂದನು.

ಸರ್ವಜ್ಞೋಽಸಿ ಕುಮಾರ ತ್ವಂ ಪ್ರಸಾದಾಚ್ಛಂಕರಸ್ಯ ವೈ ।
ಸ್ನಾನಂ ರುದ್ರವಿಧಾನೇನ ಬ್ರೂಹಿ ಕಸ್ಯ ಕಥಂ ಭವೇತ್ ॥ ೩ ॥

॥ ಸ್ಕಂದ ಉವಾಚ ॥

ಮೃತಪ್ರಜಾ ತು ಯಾ ನಾರೀ ದುರ್ಭಗಾ ಸುತವರ್ಜಿತಾ ।
ಯಾ ಸೂತೇ ದುಹಿತಾಂ ವಂಧ್ಯಾ ಸ್ನಾನಮಾಸಾಂ ವಿಧೀಯತೇ ॥ ೪ ॥

ಅಷ್ಟಮ್ಯಾಂ ವಾ ಚತುರ್ದಶ್ಯಾಮುಪವಾಸಪರಾಯಣಾ ।
ಋತೌ ಶುದ್ಧೇ ಚತುರ್ಥೇಽಹ್ನಿ ಪ್ರಾಪ್ತೇ ಸೂರ್ಯದಿನೇಽಥವಾ ॥ ೫ ॥

ನದ್ಯೋಸ್ತು ಸಂಗಮೇ ಕುರ್ಯಾನ್ಮಹಾನದ್ಯೋರ್ವಿಶೇಷತಃ ।
ಶಿವಾಲಯೇಽಥವಾ ಗೋಷ್ಠೇ ವಿವಿಕ್ತೇ ವಾ ಗೃಹಾಂಗಣೇ ॥ ೬ ॥

---

೩. ಎಲೈ ಕುಮಾರಸ್ವಾಮಿಯೇ! ನೀನು ಶಂಕರನ ಪ್ರಸಾದದಿಂದ ಸರ್ವಜ್ಞನೆನಿಸಿರುವೆ. ಈಗ ನೀನು ರುದ್ರವಿಧಿಪೂರ್ವಕವಾಗಿ ಮಾಡುವ ಸ್ನಾನದ ವಿಧಾನವನ್ನು ನನಗೆ ತಿಳಿಸು ಎಂಬದಾಗಿ ಪ್ರಾರ್ಥಿಸಿದನು.

೪. ಸ್ಕಂದನು ಹೇಳುತ್ತಾನೆ—ಹುಟ್ಟಿದ ಮಕ್ಕಳೆಲ್ಲಾ ಸತ್ತುಹೋಗಿರುವ ದೌರ್ಭಾಗ್ಯಳು, ಮಕ್ಕಳನ್ನೇ ಪ್ರಸುವಿಸದೆ ಇರುವ ಬಂಜೆ, ಮತ್ತು ಬಂಜೆಯಾಗುವ ಮಗಳನ್ನು ಹಡೆದತಾಯಿ, ಇವರೆಲ್ಲರಿಗೂ ಈ ರುದ್ರಸ್ನಾನವು ಅವಶ್ಯವೆಂದು ವಿಧಿಸಲ್ಪಟ್ಟಿದೆ.

೫. ಅಷ್ಟಮೀ ಅಥವಾ ಚತುರ್ದಶಿ ಈ ತಿಥಿಗಳಲ್ಲಿ ಉಪವಾಸತತ್ಪರಳಾಗಿ ಋತುವಾಗಿದ್ದ ನಾಲ್ಕನೆಯದಿನ ಶುದ್ಧಿಸ್ನಾನಾನಂತರವೋ, ಅಥವಾ ಭಾನುವಾರದ ದಿನವೋ.

೬-೭. ಸಾಮಾನ್ಯನದಿಗಳ ಸಂಗಮಸ್ಥಳದಲ್ಲಿಯೋ, ಅಥವಾ ವಿಶೇಷ ಫಲದಾಯಕವಾದ ಪುಣ್ಯನದಿಗಳ ಸಂಗಮಪ್ರದೇಶದಲ್ಲಿಯೋ, ಇಲ್ಲವೇ ಶಿವದೇವಾಯತನ, ದನಗಳ ಕೊಟ್ಟಿಗೆ, ಅಥವಾ ಪ್ರತ್ಯೇಕವಾದ ಮನೆಯ ಅಂಗಳ, ಇವುಗಳಲ್ಲಿ ಎಲ್ಲಿಯಾದರೂ ಈ ಕಾರ್ಯಮಾಡಬೇಕು. ಆಹಿತಾಗ್ನಿಯೂ, ಧರ್ಮಸೂಕ್ಷ್ಮಜ್ಞನೂ, ಶಾಂತನೂ, ಸತ್ಯಶೀಲನೂ, ನಿಪುಣನೂ ಆದ ಬ್ರಾಹ್ಮಣನನ್ನೂ, ದೇವರನ್ನೂ ಸ್ನಾನಕ್ಕೋಸ್ಕರ ಪ್ರಾರ್ಥಿಸಿ, ಈ ರುದ್ರಸ್ನಾನಕರ್ಮಾಚರಣೆಗಾಗಿ ಅನುಜ್ಞೆಯನ್ನು ಪಡೆಯಬೇಕು.

ಆಹಿತಾಗ್ನಿಂ ದ್ವಿಜಂ ಶಾಂತಂ ಧರ್ಮಜ್ಞಂ ಸತ್ಯಶೀಲಿನಂ ।
ಸ್ನಾನಾರ್ಥಂಪ್ರಾರ್ಥಯೇದ್ದೇವಂ ನಿಪುಣಂ ರೌದ್ರಕರ್ಮಣಿ ॥ ೭ ॥

ತತಸ್ತು ಮಂಡಪಂ ಕುರ್ಯಾಚ್ಚತುರಸ್ರಮುದಗ್ಗತಂ ।
ಬದ್ಧಚಂದನಮಾಲಂ ತು ಗೋಮಯೇನೋಪಲೇಪಿತಂ ॥ ೮ ॥

ತನ್ಮಧ್ಯೇ ಶ್ವೇತರಜಸಾ ಸಂಪೂರ್ಣಂ ಪದ್ಮಮಾಲಿಖೇತ್ ।
ಮಧ್ಯೇ ತಸ್ಯ ಮಹಾದೇವಂ ಸ್ಥಾಪಯೇತ್ಕರ್ಣಿಕೋಪರಿ ॥ ೯ ॥

ದದ್ಯಾದ್ದಲೇಷು ಶಕ್ತ್ಯಾದೀಂಶ್ಚತುರ್ಥವಿಧಿಪೂರ್ವಕಂ ।
ಇಂದ್ರಾದಿಲೋಕಪಾಲಾಂಶ್ಚ ದಲೇಷ್ವನ್ಯೇಷು ವಿನ್ಯಸೇತ್ ॥ ೧೦ ॥

ದೇವೀಂ ವಿನಾಯಕಂ ಚೈವ ಸ್ಥಾಪಯೇತ್ತಸ್ಯ ಪಾರ್ಶ್ವತಃ ।
ದತ್ವಾರ್ಘ್ಯಂ ಗಂಧಪುಷ್ಪಂ ಚ ಧೂಪದೀಪೌ ಗುಡೌದನಂ ॥ ೧೧ ॥

---

೮. ಅನಂತರ ಉತ್ತರದಿಕ್ಕಿನಲ್ಲಿ ಚತುರಸ್ರವಾದ ಮಂಡಪವನ್ನು ನಿರ್ಮಿಸಬೇಕು. ಅದಕ್ಕೆ ಚಂದನಮಿಶ್ರವಾದ ಪುಷ್ಪಮಾಲೆಯನ್ನು ಕಟ್ಟಬೇಕು. ಅಲ್ಲಿ ನೆಲವನ್ನು ಗೋಮಯದಿಂದ ಸಾರಿಸಬೇಕು.

೯. ಆಮೇಲೆ ಮಂಟಪದ ಮಧ್ಯದಲ್ಲಿ, ರಂಗೋಲಿಯಿಂದ ಸ್ಪಷ್ಟವಾಗಿರುವಂತೆ ಪದ್ಮವನ್ನು ರಚಿಸಬೇಕು. ಪದ್ಮದ ಮಧ್ಯೆ ಕರ್ಣಿಕೆಯ ಸ್ಥಳದಲ್ಲಿ ಮಹಾದೇವನನ್ನು ನ್ಯಾಸಮಾಡಬೇಕು.

೧೦. ಪದ್ಮದ ಎಸಳುಗಳಲ್ಲಿ ಚತುರ್ಥವಿಧಿಪೂರ್ವಕವಾಗಿ ಶಕ್ತ್ಯಾದಿಗಳನ್ನೂ, ಎಂದರೆ ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿಗಳನ್ನು ಸ್ಥಾಪಿಸಬೇಕು. ಉಳಿದ ಎಸಳುಗಳಲ್ಲಿ ಇಂದ್ರಾದಿ ಅಷ್ಟದಿಕ್ಪಾಲಕರನ್ನು ವಿನ್ಯಾಸಮಾಡಬೇಕು.

೧೧. ಆ ಪದ್ಮದ ಪಾರ್ಶ್ವದಲ್ಲಿ ದೇವಿಯನ್ನೂ, ವಿನಾಯಕನನ್ನೂ, ಸ್ಥಾಪಿಸಬೇಕು. ಅನಂತರ ಹೀಗೆ ಸ್ಥಾಪನೆಮಾಡಿದ ದೇವತೆಗಳಿಗೆಲ್ಲಾ ಅರ್ಘ್ಯವನ್ನು ಕೊಡಬೇಕು.

೧೨. ಬಳಿಕ ಗಂಧ, ಪುಷ್ಪ, ಧೂಪ, ದೀಪ, ಗುಡಾನ್ನ, ಭಕ್ಷ್ಯ, ಫಲಾದಿಗಳ ನೈವೇದ್ಯ ಇವನ್ನು ಸಮರ್ಪಿಸಬೇಕು. ಬಳಿಕ ನಾಲ್ಕು ಕೋಣಗಳಲ್ಲಿಯೂ ಅಶ್ವತ್ಥದಳಸಮೇತವಾದ ಒಂದೊಂದು ಗಿಂಡಿಗಳನ್ನಿರಿಸಬೇಕು.

ಭಕ್ಷ್ಯೈರ್ನಾನಾವಿಧಾನ್ನದ್ಯೈಃಫಲಾನಿ ವಿವಿಧಾನಿ ಚ ।
ಚತುಷ್ಕೋಣೇಷು ಭೃಂಗಾರಮಶ್ವತ್ಥದಲಭೂಷಿತಂ ॥ ೧೨ ॥

ಏಕೈಕಂ ವಿನ್ಯಸೇದ್ಬ್ರಹ್ಮನ್ಸರ್ವೌಷಧಿಸಮನ್ವಿತಂ ।
ಚತುರ್ದಿಶಂ ಮಂಡಪಸ್ಯ ದದ್ಯಾದ್ಭೂತಬಲಿಂ ತತಃ ॥ ೧೩ ॥

ಆಗ್ನೇಯ್ಯಾಂ ದಿಶಿ ಕರ್ತವ್ಯಂ ಮಂಡಪಸ್ಯ ಸಮೀಪತಃ ।
ಅಗ್ನಿಕಾರ್ಯಂ ಶುಭೇ ಕುಂಡೇ ಪುಷ್ಪಪತ್ರೈರಲಂಕೃತೇ ॥ ೧೪ ॥

ಲವಣಂ ಸರ್ಷಪೈರ್ಯುಕ್ತಂ ಘೃತೇನ ಮಧುನಾ ಸಹ ।
ಮಾನಸ್ತೋಕೇನ ಜುಹುಯಾತ್ಕೃತಹೋಮೇ ನವಗ್ರಹೇ ॥ ೧೫ ॥

ದ್ವಿತೀಯಮಗ್ನಿಕಾರ್ಯಸ್ಯ ಕರ್ತಾರಂ ಬ್ರಾಹ್ಮಣಂ ಕುರು ।
ರುದ್ರಜಾಪಕಮಾಚಾರ್ಯಂ ಸಿತಚಂದನಚರ್ಚಿತಂ ॥ ೧೬ ॥

---

೧೩. ಆ ಗಿಂಡಿಗಳಲ್ಲಿ ಸಕಲ ಓಷಧಿಗಳನ್ನೂ ಸೇರಿಸಬೇಕು. ಎಲೈ ವಿಪ್ರ! ಆಮೇಲೆ ಮಂಡಪದ ನಾಲ್ಕು ಕೋಣಗಳಲ್ಲಿಯೂ ಭೂತಬಲಿಯನ್ನು ಸಮರ್ಪಿಸಬೇಕು.

೧೪. ಆಮೇಲೆ ಮಂಡಪದ ಆಗ್ನೇಯದಿಕ್ಕಿನಲ್ಲಿ ಶುಭಕರವಾದ ಕುಂಡವನ್ನು ರಚಿಸಿ, ಪತ್ರಪುಷ್ಪಾದಿಗಳಿಂದ ಅದನ್ನು ಅಲಂಕರಿಸಿ, ಅನಂತರ ಆ ಕುಂಡದಲ್ಲಿ ಅಗ್ನಿ ಪ್ರತಿಷ್ಠಾಕಾರ್ಯವನ್ನು ಮಾಡಬೇಕು.

೧೫. ಬಳಿಕ ನವಗ್ರಹಹೋಮವನ್ನು ಮಾಡಿ, ಬಳಿಕ "ಮಾನಸ್ತೋಕೇ" ಎಂಬ ಮಂತ್ರಪೂರ್ವಕವಾಗಿ ಸಾಸುವೆ. ಉಪ್ಪು, ಇವುಗಳನ್ನು ಬೆರಸಿ, ತುಪ್ಪ, ಜೇನು ಇವನ್ನು ಸೇರಿಸಿ, ಕಲಸಿ ಹೋಮಮಾಡಬೇಕು.

೧೬-೧೮. ಹೀಗೆ ಒಂದು ಅಗ್ನಿಕಾರ್ಯವಾದಬಳಿಕ ಎರಡನೇ ಅಗ್ನಿಕಾರ್ಯದಲ್ಲಿಯೂ ಬ್ರಾಹ್ಮಣನನ್ನೇ ಹೋಮಕರ್ತೃವನ್ನಾಗಿ ಮಾಡಬೇಕು. ಈ ಆಚಾರ್ಯನು ರುದ್ರಜಪತತ್ಪರನೂ, ಆಚಾರಶೀಲನೂ ಆಗಿರಬೇಕು. ಮತ್ತು ಶುಭ್ರವಾದ ಚಂದನವನ್ನು ಲೇಪಿಸಿಕೊಂಡು ಬಿಳಿಯ ವಸ್ತ್ರಗಳನ್ನೂ ಬಿಳಿಯ ಹೂವಿನಮಾಲಿಕೆಯನ್ನೂ ಧರಿಸಿರಬೇಕು. ಅಲ್ಲದೆ ಶುಭಕರವಾದ ಕಂಕಣ, ಕಂಠಸೂತ್ರ, ಕರ್ಣ

ಸಿತವಸ್ತ್ರಪರೀಧಾನಂ ಸಿತಮಾಲ್ಯಾಂಬರಂ ಶುಭಂ ।
ಶೋಭಿತಂ ಕಂಕಣೈಃ ಕಂಠೈಃ ಕರ್ಣವೇಷ್ಟಾಂಗುಲೀಯಕೈಃ ॥ ೧೭ ॥

ಮಂಡಲಸ್ಯ ಸಮೀಪಸ್ಥೋ ಜಪೇದ್ರುದ್ರಾನ್ ವಿಮತ್ಸರಃ ।
ಯಾವದೇಕಾದಶಗತಾಃ ಪುನರೇವ ಜಪೇತ್ತು ತಾನ್ ॥ ೧೮ ॥

ದೇವಮಂಡಲವತ್ಕಾರ್ಯಂ ದ್ವಿತೀಯಂ ಮಂಡಲಂ ಶುಭಂ ।
ತಸ್ಯ ಮಧ್ಯೇ ತು ಸಾ ನಾರೀ ಶ್ವೇತಪುಷ್ಪೈರಲಂಕೃತಾ ॥ ೧೯ ॥

ಶ್ವೇತವಸ್ತ್ರೈಶ್ಚ ಸಂಛನ್ನಾ ಶ್ವೇತಗಂಧಾನುಲೇಪಿತಾ ।
ಸುಖಾಸನೋಪವಿಷ್ಟಾಯಾಂ ಆಚಾರ್ಯೋ ರುದ್ರಚಿಂತಕಃ ॥ ೨೦ ॥

ಅಭಿಷಿಂಚೇತ್ತತಶ್ಚೈನಾಮರ್ಕಪತ್ರಪುಟಾಂಬುನಾ ।
ಚತುಃಷಷ್ಟಿವಿಧೇನೈವ ರುದ್ರೇಣೈಕಾದಶೇನ ತು ॥ ೨೧ ॥

ಶತಾನಿ ಸಪ್ತಪರ್ಣಾನಾಂ ಚತುರ್ಭಿರಧಿಕಾನಿ ಚ ।
ಅಚ್ಛಿದ್ರಾಣಾಂ ಮನೂನಾಂ ಚ ಸ್ನಾನಾರ್ಥಂ ವಿನಿಯೋಜಯೇತ್ ॥

---

ಕುಂಡಲ, ಉಂಗುರ ಇವನ್ನು ಧರಿಸಿರಬೇಕು. ಈ ರೀತಿ ಅಲಂಕೃತನಾದ ಆಚಾರ್ಯನು ಈ ಮಂಡಲದ ಸಮೀಪದಲ್ಲಿ ಕುಳಿತುಕೊಂಡು ಮಾತ್ಸರ್ಯರಹಿತನಾಗಿ ಏಕಾದಶವಾರ ರುದ್ರಾಧ್ಯಾಯವನ್ನು ಜಪಿಸಿ, ಪುನಃ ಆ ರುದ್ರಮಂತ್ರವನ್ನೇ ಪಾರಾಯಣಮಾಡುತ್ತಿರಬೇಕು.

೧೯-೨೨. ದೇವಮಂಡಲದಂತೆಯೇ ಶುಭಕರವಾದ ಮತ್ತೊಂದುಮಂಡಲ ರಚಿಸಿ, ಅದರ ಮಧ್ಯೆ ರುದ್ರಸ್ನಾನಮಾಡಬೇಕಾದ ಸ್ತ್ರೀಯು ಸುಖವಾಗಿ ಕುಳಿತುಕೊಳ್ಳಬೇಕು. ಆಗ ಆ ಸ್ತ್ರೀಯು ಬಿಳಿಯ ಪುಷ್ಪಗಳನ್ನು ಮುಡಿದು, ಬಿಳಿಯ ಗಂಧವನ್ನು ಲೇಪನಮಾಡಿಕೊಳ್ಳಬೇಕು. ಹೀಗೆ ಆ ನಾರಿಯು ಆ ಮಂಡಲದ ಮಧ್ಯದಲ್ಲಿರುವ ಆಸನದಲ್ಲಿ ಕುಳಿತುಕೊಂಡ ಮೇಲೆ, ರುದ್ರಜಪವನ್ನು ಮಾಡುವ ಆಚಾರ್ಯನು, ಅರವತ್ತನಾಲ್ಕು ಎಕ್ಕದೆಲೆಗಳ ದೊನ್ನೆಗಳಿಂದ, ಈ ಸ್ತ್ರೀಗೆ (ಏಕಾದಶ ವಾರ) ಹನ್ನೊಂದುಸಾರಿ ರುದ್ರಪಾರಾಯಣಪೂರ್ವಕವಾಗಿ ಸ್ನಾನಮಾಡಿಸಬೇಕು ಅಥವಾ ನೂರನಾಲ್ಕು ಸಪ್ತಪರ್ಣದೆಲೆಗಳನ್ನಾಗಲಿ, ಕೊನೆಗೆ ಹರಿಯದೆ ಇರುವ ಹದಿನಾಲ್ಕು ಎಲೆಗಳನ್ನಾಗಲಿ ಸ್ನಾನಕ್ಕೆ ಉಪಯೋಗಿಸಬಹುದು.

ಅಶ್ವಸ್ಥಾನಾದ್ಗಜಸ್ಥಾನಾದ್ವಲ್ಮೀಕಾತ್ಸಂಗಮಾದ್ಧ್ರದಾತ್ ।
ವೇಶ್ಯಾಂಗಣಾದ್ರಾಜಗೃಹಾದ್ಗೋಷ್ಠಾದಾನೀಯ ವೈ ಮೃದಃ ॥ ೨೩ ॥

ಸರ್ವೌಷಧಿಂ ರೋಚನಾಂ ಚ ನದೀತೀರ್ಥೋದಕಾನಿ ಚ ।
ಏತಾಃ ಸಂಕ್ಷಿಪ್ಯ ಕಲಶೇ ಶಿವಸಂಜ್ಞೇ ಸುಪೂಜಿತೇ ॥ ೨೪ ॥

ಆಪಾದತಲಕೇಶಂ ಚ ಕುಕ್ಷೌ ಚೈವ ವಿಶೇಷತಃ ।
ಸರ್ವಾಂಗಂ ಲೇಪಯೇನ್ನಾರ್ಯಃ ಸುಶೀಲಾ ಕಾಚಿದಂಗನಾ ॥ ೨೫ ॥

ರುದ್ರಾಭಿಜಪ್ತೇನ ತತಃ ಸ್ನಾಪಯೇತ್ಕಲಶೇನ ತಾಂ ।
ತೋಯಪೂರ್ಣಾಷ್ಟಕಲಶೈರಶ್ವತ್ಥದಲಪೂರಿತೈಃ ॥ ೨೬ ॥

---

೨೩. ಬಳಿಕ ಅಶ್ವಶಾಲೆ, ಗಜಶಾಲೆ, ಹುತ್ತ, ನದಿಯ ಸಂಗಮಸ್ಥಳ, ಮಡು, ವೇಶ್ಯೆಯರಮನೆಯ ಅಂಗಳ, ರಾಜಗೃಹದ ಅಂಗಳ, ದನದ ಕೊಟ್ಟಿಗೆ ಈ ಸ್ಥಳಗಳ ಮೃತ್ತಿಕೆಗಳನ್ನು ತೆಗೆದುಕೊಂಡುಬರಬೇಕು.

೨೪. ಅನಂತರ ಸಕಲ ಓಷಧಿಗಳು (ಜ್ಯೋತಿರ್ಲತೆಗಳು), ಗೋರೋಚನ ನದೀಜಲ, ಪುಣ್ಯಕ್ಷೇತ್ರಜಲ ಇವನ್ನು ಸಂಗ್ರಹಿಸಿ ಇವೆಲ್ಲವನ್ನೂ ಶಿವಸಂಜ್ಞಕವಾದ ಆ ಕಲಶವಲ್ಲಿ ಹಾಕಿ ಪೂಜಿಮಾಡಬೇಕು.

೨೫. ಒಳ್ಳೆಯ ನಡತೆಯುಳ್ಳ ಮತ್ತೊಬ್ಬ ಸುವಾಸಿನಿಯು ಈ ಕಲಶದ ಲ್ಲಿರುವ ಮೃತ್ತಿಕೆ ಮತ್ತು ಪುಣ್ಯತೀರ್ಥಗಳು ಇವುಗಳಿಂದ ರುದ್ರಸ್ನಾನಕ್ಕೆ ಸಿದ್ಧಳಾ ಗಿರುವ ಸ್ತ್ರೀಯ ಆಪಾದಮಸ್ತಕಪರ್ಯಂತವಾಗಿ, ವಿಶೇಷವಾಗಿ ತಲೆಗೂದಲು,ಹೊಟ್ಟೆ ಇವುಗಳಿಗೆ ಲೇಪಮಾಡಬೇಕು.

೨೬. ಅನಂತರ ಎಲ್ಲಾ ದಿಕ್ಕುಗಳಲ್ಲಿಯೂ ಸ್ಥಾಪಿಸಿರುವ ಅಶ್ವತ್ಥದಳ, ಜಲ ಇವು ಪೂರ್ಣವಾದ ಎಂಟು ಕಲಶೋದಕಗಳಿಂದ ರುದ್ರಾಧ್ಯಾಯಮಂತ್ರ ಪೂರ್ವಕವಾಗಿ ಸ್ನಾನಮಾಡಿಸಬೇಕು.

ಸರ್ವತೋದಿಕ್ಸ್ಥಿತೈಃ ಪಶ್ಚಾತ್ಸ್ನಾಪಯೇತ್ಸಫಲಾಕ್ಷತೈಃ ।
ಏವಂ ಸ್ನಾತಾ ಸ್ನಾಪಕಾಯ ದದ್ಯಾದ್ಗಾಂ ಕಾಂಚನಂ ತಥಾ ॥ ೨೭ ॥

ಹೇತುರಪ್ಯತ್ರ ನಿರ್ದಿಷ್ಟಾ ದಕ್ಷಿಣಾ ಗೌಃ ಪಯಸ್ವಿನೀ ।
ಬ್ರಾಹ್ಮಣಾನಾಮಥಾನ್ಯೇಷಾಂ ಸ್ವಶಕ್ತ್ಯಾ ಪಾಂಡುನಂದನ ॥ ೨೮ ॥

ಗೋವತ್ಸಕಾಂಚನಾದೀನಿ ದತ್ವಾ ಸರ್ವಂ ಕ್ಷಮಾಪಯೇತ್ ।
ಕೃತೇನಾನೇನ ರಾಜೇಂದ್ರ ರುದ್ರಸ್ನಾನೇನ ಭಾಗಿನೀ ॥ ೨೯ ॥

ಸುಭಗಾ ಸುಖಸಂಯುಕ್ತಾ ಬಹುಪುತ್ರಾ ಚ ಜಾಯತೇ ।
ಸರ್ವೇಷ್ವಪಿ ಹಿ ಮಾಸೇಷು ಬ್ರಾಹ್ಮಣಾಭಿಮತೇ ಶುಭಂ ॥ ೩೦ ॥

ತಸ್ಮಾದವಶ್ಯಂ ಕರ್ತವ್ಯಂ ಪುತ್ರಶ್ರೀ ಸುಖಮಿಚ್ಛತಾ ॥ ೩೧ ॥

---

೨೭. ಅನಂತರ ಅಕ್ಷತೋದಕಗಳಿಂದಲೂ ಸ್ನಾನಮಾಡಿಸಬೇಕು. ಹೀಗೆ ಸ್ನಾನಮಾಡಿಸಿದನಂತರ ಆ ನಾರಿಯು ತನಗೆ ಸ್ನಾನಮಾಡಿಸಿದ ಆಚಾರ್ಯನಿಗೆ ಒಂದು ಗೋವನ್ನೂ ಸುವರ್ಣವನ್ನೂ ದಾನಮಾಡಬೇಕು.

೨೮-೨೯. ತುಂಬಾ ಹಾಲುಕರೆಯುವ ಗೋವನ್ನೇ ಆಚಾರ್ಯನಿಗೆ ದಕ್ಷಿಣೆಯಾಗಿ ಕೊಡಬೇಕೆಂದು ಹೇಳಿದೆ. ಅಯ್ಯಾ ಪಾಂಡುಪುತ್ರ! ಇತರ ಬ್ರಾಹ್ಮಣರಿಗೆ ಎಳಗರುವಿನೊಡಗೂಡಿದ ಹಸು, ಸುವರ್ಣ ಇವುಗಳಲ್ಲಿ ತನ್ನ ಶಕ್ತಿಯಿದ್ದಷ್ಟನ್ನು ದಾನಮಾಡಿ ಅವರನ್ನು ಕ್ಷಮಾಪಣೆ ಬೇಡಬೇಕು.

೩೦. ಎಲೈ ರಾಜಶ್ರೇಷ್ಠನೇ! ಈ ಪ್ರಕಾರ ರುದ್ರಸ್ನಾನಮಾಡುವುದರಿಂದ ದೋಷಭಾಗಿನಿಯಾಗಿದ್ದ ಸ್ತ್ರೀಯು, ಸೌಭಾಗ್ಯವತಿಯಾಗಿ ಸರ್ವಸಂಪತ್ತುಗಳನ್ನೂ ಪುತ್ರರನ್ನೂ ಪಡೆಯುವಳು.

೩೧. ಬ್ರಾಹ್ಮಣರು ಶುಭಕರವೆಂದು ಹೇಳುವ ಎಲ್ಲಾ ತಿಂಗಳುಗಳಲ್ಲಿಯೂ ಪುತ್ರ, ಐಶ್ವರ್ಯ, ಸುಖ, ಸಂಪತ್ತುಗಳನ್ನು ಅಪೇಕ್ಷಿಸುವ ಸ್ತ್ರೀಯರು ಅವಶ್ಯವಾಗಿ ಈ ರುದ್ರಸ್ನಾನವನ್ನು ಮೇಲೆ ಹೇಳಿದ ವಿಧಿಪ್ರಕಾರ ಮಾಡಬೇಕು.

ಯಾ ಸ್ನಾನಮಾಚರತಿ ರುದ್ರಮಿತಿ ಪ್ರಸಿದ್ಧಂ ।
ಶ್ರದ್ಧಾನ್ವಿತಾ ದ್ವಿಜವರಾನುಮತಾಽಽನತಾಂಗೀ ।
ದೋಷಾನ್ನಿಹತ್ಯ ಸಕಲಾನ್ಸ್ವಶರೀರಭಾಗಾತ್ ।
ಭರ್ತುಃ ಪ್ರಿಯಾ ಭವತಿ ಭಾರತ ಜೀವವತ್ಸಾ　　　　॥ ೩೨ ॥

ಇತಿ ಶ್ರೀ ಭವಿಷ್ಯೆಮಹಾಪುರಾಣ ಉತ್ತರಪರ್ವಣಿ ರುದ್ರಸ್ನಾನವಿಧಿ ವರ್ಣನಂನಾಮ ಚತುರ್ವಿಂಶತ್ಯುತ್ತರಶತತಮೋಽಧ್ಯಾಯಃ.



೩೨. ಕೃಶಾಂಗಿಯಾದ ಯಾವ ನಾರಿಯು ಬ್ರಾಹ್ಮಣರ ಅನುಮತಿಯನ್ನು ಪಡೆದು, ಪ್ರಸಿದ್ಧವಾದ ರುದ್ರಸ್ನಾನವನ್ನು ಶ್ರದ್ಧೆಯಿಂದ ಆಚರಿಸುವಳೋ, ಅವಳು ಸಕಲದೋಷಗಳನ್ನೂ ಕಳೆದುಕೊಂಡು ತನ್ನ ಪತಿಗೆ ಪ್ರೀತಿಪಾತ್ರಳಾದ ಅರ್ಧಾಂಗಿ ಯೆನಿಸಿ ಬಾಳುವಳು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ರುದ್ರಸ್ನಾನವಿಧಿವರ್ಣನೆ ಯೆಂಬ ನೂರಇಪ್ಪತ್ತನಾಲ್ಕನೆಯ ಅಧ್ಯಾಯ ಮುಗಿದುದು.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣ
## ಉತ್ತರಪರ್ವಣಿ
## ಪಂಚವಿಂಶತ್ಯುತ್ತರಶತತಮೋಽಧ್ಯಾಯಃ

|| ಯುಧಿಷ್ಠಿರ ಉವಾಚ ||

ಚಂದ್ರಾದಿತ್ಯೋಪರಾಗೇಷು ಯತ್ಸ್ನಾನಮಭಿಧೀಯತೇ ।
ತದಹಂ ಶ್ರೋತುಮಿಚ್ಛಾಮಿ ದ್ರವ್ಯಮನ್ನಂ ಪ್ರಧಾನತಃ || ೧ ||

|| ಶ್ರೀಕೃಷ್ಣ ಉವಾಚ ||

ಯಸ್ಯ ರಾಶಿಂ ಸಮಾಸಾದ್ಯ ಭವೇದ್ಗ್ರಹಣಸಂಪ್ಲವಃ ।
ತಸ್ಯ ಸ್ನಾನಂ ಪ್ರವಕ್ಷ್ಯಾಮಿ ಮಂತ್ರೌಷಧಿಸಮನ್ವಿತಂ || ೨ ||

---

## ನೂರಇಪ್ಪತ್ತೈದನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—"ಓ ಕೃಷ್ಣಪರಮಾತ್ಮ! ಸೂರ್ಯಗ್ರಹಣ, ಚಂದ್ರಗ್ರಹಣ ಇವುಗಳಲ್ಲಿ ವಿಧಿಪೂರ್ವಕವಾಗಿ ಆಚರಿಸಬೇಕಾದ ಸ್ನಾನ ಪ್ರಕಾರವನ್ನೂ, ಆಗ ಕೊಡಬೇಕಾದ ದ್ರವ್ಯ, ಅನ್ನ ಮೊದಲಾದುವುಗಳನ್ನೂ ತಿಳಿಯಲು ಕುತೂಹಲವಿದೆ. ಕೃಪೆಮಾಡಿ ತಿಳಿಸು" ಎಂದನು.

೨. ಶ್ರೀಕೃಷ್ಣನು ಹೇಳುತ್ತಾನೆ—ಯಾವ ರಾಶಿಯಲ್ಲಿ ಸೂರ್ಯಗ್ರಹಣ ಅಥವಾ ಚಂದ್ರಗ್ರಹಣವುಂಟಾಗುತ್ತದೆಯೋ ಆ ರಾಶಿಯವರಿಗೆ ಆ ಗ್ರಹಣ ಸಂಬಂಧವಾದ ಮಂತ್ರ ಓಷಧಿಗಳಿಂದ ಕೂಡಿದ ಸ್ನಾನವಿಧಿಯನ್ನು ಹೇಳುತ್ತೇನೆ ಕೇಳು.

ಚಂದ್ರೋಪರಾಗಂ ಸಂಪ್ರಾಪ್ಯ ಕೃತ್ವಾ ಬ್ರಾಹ್ಮಣವಾಚನಂ ।
ಸಂಪೂಜ್ಯ ಚತುರೋ ವಿಪ್ರಾನ್ ಗಂಧಮಾಲ್ಯಾನುಲೇಪನೈಃ ॥ ೩ ॥

ಪೂರ್ವಮೇವೋಪರಾಗಸ್ಯ ಸಮಾನೀಯೌಷಧಾದಿಕಂ ।
ಸ್ಥಾಪಯೇಚ್ಚತುರಃ ಕುಂಭಾನಗ್ರತಃ ಸಾಗರಾನಿತಿ ॥ ೪ ॥

ಗಜಾಶ್ವರಥ್ಯಾವಲ್ಮೀಕಸಂಗಮಾದ್ಧ್ರದಗೋಕುಲಾತ್ ।
ರಾಜದ್ವಾರಪ್ರದೇಶಾತ್ತು ಮೃದಮಾನೀಯ ಪ್ರಕ್ಷಿಪೇತ್ ॥ ೫ ॥

ಪಂಚಗವ್ಯಂ ಚ ಕುಂಭೇಷು ಪಂಚರತ್ನಾನಿ ಚೈವ ಹಿ ।
ರೋಚನಾಂ ಪದ್ಮಶಂಖೌ ಚ ಪಂಚಭಂಗಸಮನ್ವಿತೌ ॥ ೬ ॥

ಸ್ಫಟಿಕಂ ಚಂದನಂ ಶ್ವೇತಂ ತೀರ್ಥವಾರಿ ಸಸರ್ಷಪಂ ।
ಗಜದಂತಂ ಕುಂಕುಮಂ ಚ ತಥೈವೋಶೀರಗುಗ್ಗುಲಂ ॥
ಏತತ್ಸರ್ವಂ ವಿನಿಕ್ಷಿಪ್ಯ ಕುಂಭೇಷ್ವಾವಾಹಯೇತ್ಸುರಾನ್ ॥ ೭ ॥

---

೩. ಚಂದ್ರಗ್ರಹಣ ಹಿಡಿದ ಸಮಯದಲ್ಲಿ, ಯೋಗ್ಯರಾದ ನಾಲ್ಕುಮಂದಿ ಬ್ರಾಹ್ಮಣರನ್ನು ಗಂಧಪುಷ್ಪಾದಿಗಳಿಂದ ಪೂಜಿಸಿ, ಅವರ ಆಶೀರ್ವಾದವನ್ನು ಪಡೆಯಬೇಕು.

೪. ಗ್ರಹಣಕಾಲಕ್ಕಿಂತ ಮುಂಚೆಯೇ ಓಷಧಾದಿಗಳನ್ನು (ಜ್ಯೋತಿರ್ಲತಾದಿಗಳನ್ನು) ಸಂಗ್ರಹಿಸಿಕೊಂಡಿದ್ದು ಗ್ರಹಣಕಾಲದಲ್ಲಿ ನಾಲ್ಕು ಕಲಶಗಳಲ್ಲಿ ಜಲವನ್ನು ತುಂಬಿ ತನ್ನ ಮುಂಭಾಗದಲ್ಲಿ ಸ್ಥಾಪಿಸಬೇಕು. ಅನಂತರ ನಾಲ್ಕು ಕಲಶಗಳಲ್ಲಿಯೂ ನಾಲ್ಕು ಸಮುದ್ರಗಳನ್ನು ಆವಾಹನಮಾಡಬೇಕು.

೫. ಆನೆಯ ಲಾಯ, ಕುದುರೆಯ ಲಾಯ, ಹುತ್ತ, ನದೀಸಂಗಮ, ಗೋಶಾಲೆ, ಚತುಷ್ಪಥ, ರಾಜಗೃಹದ್ವಾರ ಈ ಸ್ಥಾನಗಳ ಮೃತ್ತಿಕೆಗಳನ್ನು ಸಂಪಾದಿಸಿ ತಂದಿದ್ದು ಆ ಕಲಶದಲ್ಲಿ ಸ್ವಲ್ಪಸ್ವಲ್ಪ ಹಾಕಬೇಕು.

೬-೭. ಮತ್ತು ಆ ಕಲಶಗಳಿಗೆ ಪಂಚಗವ್ಯ, ಪಂಚರತ್ನ, ಗೋರೋಚನ, ಪಂಚವರ್ಣಸಮನ್ವಿತವಾದ ಶಂಖ, ಪದ್ಮ, ಬಿಳಿಯ ಚಂದನ, ತೀರ್ಥೋದಕ, ಗಜದಂತ, ಸಾಸುವೆ, ಕೇಸರಿ, ಲಾಮಂಚ, ಗುಗ್ಗುಲ ಇವನ್ನು ಹಾಕಿ, ಬಳಿಕ ಅವುಗಳಲ್ಲಿ ದೇವತೆಗಳನ್ನು ಆವಾಹನಮಾಡಬೇಕು.

ಸರ್ವೇ ಸಮುದ್ರಾಃ ಸರಿತಸ್ತೀರ್ಥಾನಿ ಜಲದಾ ಹ್ರದಾಃ ।
ಆಯಾಂತು ಯಜಮಾನಸ್ಯ ದುರಿತಕ್ಷಯಕಾರಕಾಃ ॥ ೮ ॥

ಯೋಽಸೌ ವಜ್ರಧರೋ ದೇವ ಆದಿತ್ಯಾನಾಂ ಪ್ರಭುರ್ಮತಃ ।
ಸಹಸ್ರನಯನಶ್ಚೇಂದ್ರಃ ಪೀಡಾಂ ನೋಽತ್ರ ವ್ಯಪೋಹತು ॥ ೯ ॥

ರಕ್ಷೋಗಣಾಧಿಪಃ ಸಾಕ್ಷಾತ್ಪ್ರಲಯಾನಿಲಸಪ್ರಭಃ ।
ಖಡ್ಗವ್ಯಗ್ರೋಽತಿಭೀಮಶ್ಚ ರಕ್ಷಃ ಪೀಡಾಂ ವ್ಯಪೋಹತು ॥ ೧೦ ॥

ಯೋಽಸೌ ಬಿಂದುಕರೋ ಬಿಂದುಃ ಪಿನಾಕೀ ವೃಷವಾಹನಃ ।
ಚಂದ್ರೋಪರಾಗಪಾಪಾನಿ ಸ ನಾಶಯತು ಶಂಕರಃ ॥ ೧೧ ॥

---

೮. ಅನಂತರ ಮುಂದೆ ಹೇಳುವ ಅರ್ಥವುಳ್ಳ ಮಂತ್ರಪೂರ್ವಕವಾಗಿ ದೇವತೆಗಳನ್ನು ಆವಾಹಿಸಬೇಕು. ಸಮಸ್ತ ಸಮುದ್ರಗಳೂ, ನದಿಗಳೂ, ಪುಣ್ಯತೀರ್ಥಗಳೂ, ಮಡುಗಳೂ ಎಲ್ಲವೂ ಈ ಕಲಶಗಳಲ್ಲಿಬಂದು ಸಾನ್ನಿಧ್ಯವನ್ನು ಕಲ್ಪಿಸಿ, ನನ್ನ ಪಾಪವನ್ನು ಹೋಗಲಾಡಿಸಲಿ.

೯. "ವಜ್ರಾಯುಧವನ್ನು ಧರಿಸಿದವನೂ, ಆದಿತ್ಯಾದಿ ದೇವತೆಗಳಿಗೆ ಪ್ರಭುವೆನಿಸಿದವನೂ, ಸಹಸ್ರಾಕ್ಷನೂ ಆದ ಇಂದ್ರನು ನನಗೆ ಪ್ರಾಪ್ತವಾಗುವ ಗ್ರಹಪೀಡೆಯನ್ನೆಲ್ಲಾ ನಿವಾರಿಸಲಿ.

೧೦. ಪ್ರಲಯಕಾಲದ ಅಗ್ನಿಗೆ ಸಮಾನವಾದ ಕಾಂತಿಯಿಂದ ಯುಕ್ತನೂ, ಖಡ್ಗಾಯುಧವನ್ನು ಧರಿಸಿ ರಕ್ಷೋಗಣಗಳಿಗೆ ಅಧಿಪತಿಯೂ ಆದ ಕುಬೇರನು, ರಾಕ್ಷಸರಿಂದುಂಟಾಗುವ ಬಾಧೆಗಳನ್ನೆಲ್ಲಾ ಪರಿಹಾರಮಾಡಲಿ."

೧೧. "ಚಂದ್ರನನ್ನು ತಲೆಯಲ್ಲಿ ಧರಿಸಿದವನೂ, ಚಂದ್ರನಂತೆ ಶುಭ್ರವರ್ಣನೂ, ವೃಷಭವಾಹನನೂ ಪಿನಾಕಧಾರಿಯೂ ಆದ ಪರಮೇಶ್ವರನು ಚಂದ್ರೋಪರಾಗದ (ಚಂದ್ರಗ್ರಹಣ) ಪಾಪವನ್ನು ಪರಿಹರಿಸಲಿ."

ತ್ರೈಲೋಕ್ಯೇ ಯಾನಿ ಭೂತಾನಿ ಸ್ಥಾವರಾಣಿ ಚರಾಣಿ ಚ ।
ಬ್ರಹ್ಮಾರ್ಕವಿಷ್ಣುಯುಕ್ತಾನಿ ತಾನಿ ಪಾಪಂ ದಹಂತು ವೈ　　॥ ೧೨ ॥

ಏವಮಾಮಂತ್ರಿತೈಃ ಕುಂಭೈ ರಂಭೋಯುಕ್ತೈರ್ಯಗಾನ್ವಿತೈಃ ।
ಋಗ್ಯಜುಸ್ಸಾಮಮಂತ್ರೈಶ್ಚ ಶುಕ್ಲಮಾಲ್ಯಾನುಲೇಪನೈಃ ॥
ಪೂಜಯೇದ್ವಸ್ತ್ರಗೋದಾನೈರ್ಬ್ರಾಹ್ಮಣಾನಿಷ್ಟದೇವತಾಃ　　॥ ೧೩ ॥

ಏತಾನೇವ ತತೋ ಮಂತ್ರಾನ್ಸಂಲಿಖ್ಯ ಕನಕಾನ್ವಿತಾನ್ ।
ಯಜಮಾನಸ್ಯ ಶಿರಸಿ ಉದ್ಧಾರ್ಯಾಸ್ತೇ ನರೋತ್ತಮ　　॥ ೧೪ ॥

ಕಲಶಾನ್ ದ್ರವ್ಯಸಂಯುಕ್ತಾನ್ಪ್ರಾಪ್ತೇ ಗ್ರಹಣಪರ್ವಣಿ ।
ಚಂದ್ರಗ್ರಹೇ ನಿವೃತ್ತೇ ತು ಕೃತಗೋದಾನಮಂಗಲಃ　　॥ ೧೫ ॥

---

೧೨. "ಬ್ರಹ್ಮ, ಸೂರ್ಯ, ವಿಷ್ಣು ಇವರುಗಳೊಡಗೂಡಿ ಮೂರುಲೋಕಗಳಲ್ಲಿಯೂ ವ್ಯಾಪಿಸಿರುವ ಸ್ಥಾವರಜಂಗಮಾತ್ಮಕವಾದ ಭೂತಗಳೆಲ್ಲವೂ ನನ್ನ ಪಾಪವನ್ನು ಸುಟ್ಟುಹಾಕಲಿ."

೧೩. ಈ ಅರ್ಥವುಳ್ಳ ಮಂತ್ರಗಳಿಂದ ಜಲಪರಿಪೂರ್ಣವಾದ ಆ ಕುಂಭಗಳಲ್ಲಿ ದೇವಾದಿಗಳನ್ನೆಲ್ಲಾ ಆವಾಹಿಸಿ, ಋಗ್ಯಜುಸ್ಸಾಮವೇದಗಳ ಮಂತ್ರೋಚ್ಚಾರಣಪೂರ್ವಕವಾಗಿ, ಶುಭ್ರವಾದ ಹೂಮಾಲೆ, ಬಿಳಿಯ ಗಂಧ ಇವುಗಳಿಂದ ಪೂಜಿಸಿ, ಇಷ್ಟದೇವತೆಯನ್ನೂ ಮತ್ತು ಬ್ರಾಹ್ಮಣರನ್ನೂ ಭಕ್ತಿಯಿಂದ ಅರ್ಚಿಸಿ, ಸತ್ಪಾತ್ರರಾದ ವಿಪ್ರರಿಗೆ ಗೋದಾನ, ವಸ್ತ್ರದಾನ ಮುಂತಾದ ದಾನಗಳನ್ನು ಕೊಡಬೇಕು.

೧೪. ಬಳಿಕ ಈ ಮಂತ್ರಗಳನ್ನೇ ಸುವರ್ಣದ ತಗಡಿನಲ್ಲಿ (ಅನುಕೂಲವಿಲ್ಲದವರು ಓಲೆಗರಿಯಲ್ಲಿ) ಬರೆದು ಗ್ರಹಣ ಹಿಡಿದ ನಕ್ಷತ್ರರಾಶಿಯಲ್ಲಿ ಜನನವಾದವರ ಶಿರಸ್ಸಿನಲ್ಲಿ (ಹಣೆಯ ಮೇಲೆ) ಗ್ರಹಣ ಬಿಡುವವರೆಗೂ ಕಟ್ಟಿಕೊಂಡಿರಬೇಕು.

೧೫-೧೬. ಎಲೈ ರಾಜಶ್ರೇಷ್ಠನೇ! ಗ್ರಹಣಕಾಲವೊದಗಿದಾಗ ಈ ರೀತಿಯಾಗಿ ದೇವತಾವಾಹನಮಾಡಿದ್ದ ಕಲಶಗಳನ್ನು, ಗ್ರಹಣಬಿಟ್ಟನಂತರ ವಿಸರ್ಜಿಸಿ, ಶುಭಕರವಾದ ಗೋದಾನಮಾಡಿ, ಆ ಕಲಶೋದಕದಿಂದ ಸ್ನಾನವನ್ನಾಚರಿಸಿ ಆ

ಕೃತಸ್ನಾನಃ ಶ್ವೇತಪಟ್ಟಂ ಬ್ರಾಹ್ಮಣಾಯ ನಿವೇದಯೇತ್ ।
ಅನೇನ ವಿಧಿನಾ ಯಸ್ತು ಸಗ್ರಹಂ ಸ್ನಾನಮಾಚರೇತ್ ॥ ೧೬ ॥

ನ ತಸ್ಯ ಗ್ರಹಪೀಡಾ ಸ್ಯಾನ್ನ ಚ ಬಂಧುಜನಕ್ಷಯಃ ।
ಪರಮಾಂ ಸಿದ್ಧಿಮಾಪ್ನೋತಿ ಪುನರಾವೃತ್ತಿದುರ್ಲಭಾಂ ॥ ೧೭ ॥

ಸೂರ್ಯಗ್ರಹೇ ಸೂರ್ಯನಾಮ ಸದಾ ಮಂತ್ರೇಷು ಕೀರ್ತಯೇತ್ ।
ದ್ರವ್ಯೈಸ್ತೈರೇವ ಕಥಿತಂ ಸ್ನಾನಂ ಕುರುಕುಲೋದ್ವಹ ॥ ೧೮ ॥

ಯ ಇದಂ ಶೃಣುಯಾನ್ನಿತ್ಯಂ ಶ್ರಾವಯೇದ್ವಾಪಿ ಮಾನವಃ ।
ಸರ್ವಪಾಪವಿನಿರ್ಮುಕ್ತಃ ಶಕ್ರಲೋಕೇ ಮಹೀಯತೆ ॥ ೧೯ ॥

---

ಮೇಲೆ ಹಣೆಗೆ ಕಟ್ಟಿಕೊಂಡಿದ್ದ ಶ್ವೇತಪಟ್ಟಗಳೊಡನೆ ಆ ಕಲಶವನ್ನು ಬ್ರಾಹ್ಮಣೋತ್ತಮರಿಗೆ ದಾನಮಾಡಬೇಕು. ಗ್ರಹೋಪರಾಗಕಾಲದಲ್ಲಿ ಹೀಗೆ ವಿಧಿಪೂರ್ವಕವಾಗಿ ಸ್ನಾನಮಾಡಬೇಕು.

೧೭. ಎಲೈ ಕುರುವಂಶಶ್ರೇಷ್ಠನೇ! ಈ ಸ್ನಾನವಿಧಿಯನ್ನು ಅನುಷ್ಠಾನ ಮಾಡಿದವರ ಗ್ರಹಪೀಡೆಯೆಲ್ಲವೂ ನಿವೃತ್ತಿಯಾಗಿ, ಅವರ ಬಾಂಧವರಿಗೂ ಯಾವ ರೀತಿಯಾದ ಉಪದ್ರವವೊದಗದೆ, ಕೊನೆಗೆ ಪುನರ್ಜನ್ಮವಿಲ್ಲದಂತಹ ಉತ್ಕೃಷ್ಟ ಪದವು ಲಭ್ಯವಾಗುವುದು.

೧೮. ಆಯ್ಯಾ ಧರ್ಮಜನೇ! ಈ ರೀತಿ ಸೂರ್ಯಗ್ರಹಣ ಒದಗಿದಾಗ, ಸೂರ್ಯನಾಮಗಳನ್ನೇ ಯಾವಾಗಲೂ ಮಂತ್ರಪೂರ್ವಕವಾಗಿ ಧ್ಯಾನಮಾಡುತ್ತಿರಬೇಕು. ಈ ಸ್ನಾನಕ್ಕೂ ಚಂದ್ರಗ್ರಹಣಸ್ನಾನಕ್ಕೆ ಹೇಳಿದ ದ್ರವ್ಯಗಳನ್ನೇ ಉಪಯೋಗಿಸಬೇಕು. ಅದರಂತೆ ಕಲಶಸ್ಥಾಪನೆ, ಮೃತ್ತಿಕಾಸಂಗ್ರಹ, ಪೂಜೆ, ದಾನ ಇವೆಲ್ಲಾ ಉಂಟೆಂದು ತಿಳಿಯಬೇಕು.

೧೯. ಎಲೈ ಪಾಂಡವನೇ! ಈ ಸ್ನಾನವಿಧಿಯನ್ನು ಅನವರತವೂ ಶ್ರವಣ ಮಾಡುವ ಮಾನವನೂ, ಮತ್ತೊಬ್ಬರಿಗೆ ಈ ವಿಧಿಯ ವಿಚಾರವನ್ನು ತಿಳಿಸುವವನೂ ಸಹ ತಮ್ಮ ಸಕಲ ಪಾಪಗಳನ್ನೂ ಕಳೆದುಕೊಂಡು, ದೇಹಾವಸಾನವಾದ ಮೇಲೆ ಇಂದ್ರಲೋಕವನ್ನು ಸೇರಿ, ಅಲ್ಲಿ ದಿವ್ಯಭೋಗಗಳನ್ನು ಅನುಭವಿಸುತ್ತಾ ಶೋಭಿಸುವನು.

ಚಂದ್ರಗ್ರಹೇ ನೃಪ ರವಿಗ್ರಹಣೇ ಜಪನ್ ಮಾಂ ।
ಮಂತ್ರೈರಿಮೈಸ್ಸಮಭಿಮಂತ್ರ್ಯ ಶುಭೋದಕುಂಭಾತ್ ॥
ಸ್ನಾನಂ ಕರೋತಿ ನಿಯಮೇನ ನರಶ್ಚ ಯಶ್ಚ ।
ಪೀಡಾ ನ ತಂ ಗೃಹಕೃತಾ ಚ ಪುನರ್ದುನೋತಿ　　　　॥ ೨೦ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ
ಯುಧಿಷ್ಠಿರಸಂವಾದೇ ಚಂದ್ರಾದಿತ್ಯಗ್ರಹಣಸ್ನಾನವಿಧಿ
ವರ್ಣನಂ ನಾಮ ಪಂಚವಿಂಶತ್ಯುತ್ತರಶತತಮೋಽಧ್ಯಾಯಃ.



---

೨೦. ಎಲೈ ರಾಜೇಂದ್ರನೇ! ಸೂರ್ಯಚಂದ್ರಗ್ರಹಣಗಳಲ್ಲಿ ನನ್ನನ್ನು (ಶ್ರೀಕೃಷ್ಣನನ್ನು) ಪೂರ್ವೋಕ್ತಮಂತ್ರಗಳಿಂದ ಜಪಿಸುತ್ತಾ, ಪುಣ್ಯಕರವಾದ ಜಲ ಪೂರ್ಣಕಲಶಗಳಿಂದ, ಮಂತ್ರವತ್ತಾಗಿ ನಿಯಮದಿಂದ ಸ್ನಾನಮಾಡುವವರಿಗೆ, ಎಂದಿಗೂ ಗ್ರಹಪೀಡೆಯುಂಟಾಗುವುದಿಲ್ಲ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಸೂರ್ಯಚಂದ್ರಗ್ರಹಣ ಸ್ನಾನವಿಧಿವರ್ಣನೆಯೆಂಬ ನೂರಇಪ್ಪತ್ತೈದನೆಯ ಅಧ್ಯಾಯ ಮುಗಿದುದು.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣ

## ಉತ್ತರಪರ್ವಣಿ

## ಷಡ್ವಿಂಶತ್ಯುತ್ತರಶತತಮೋಽಧ್ಯಾಯಃ

|| ಯುಧಿಷ್ಠಿರ ಉವಾಚ ||

ಗೃಹಸ್ಥೋ ಮರಣೇ ಪ್ರಾಪ್ತೇ ಕಥಂ ತ್ಯಜತಿ ಜೀವಿತಂ ।
ಏತನ್ಮೇ ಬ್ರೂಹಿ ಗೋವಿಂದ ಪರಂ ಕೌತೂಹಲಂ ಹಿ ಮೇ || ೧ ||

|| ಶ್ರೀಕೃಷ್ಣ ಉವಾಚ ||

ನಾನ್ಯದ್ದುಷ್ಕೃಷ್ಟಮುದಿಷ್ಟಂ ತಜ್ಞೈರನಶನಾತ್ಪರಂ ।
ತಸ್ಯಾಹಂ ಲಕ್ಷಣಂ ವಕ್ಷ್ಯೇ ಯಜ್ಜಪ್ಯಂ ಚ ಮುಮೂರ್ಷತಾ || ೨ ||

---

### ನೂರಇಪ್ಪತ್ತಾರನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಎಲೈ ಗೋವಿಂದ! ಗೃಹಸ್ಥನು ಮೃತಿ ಹೊಂದುವಾಗ ಅವನು ದೇಹತ್ಯಾಗಮಾಡುವ ರೀತಿ ಹೇಗೆ? ಇದನ್ನು ತಿಳಿದುಕೊಳ್ಳಬೇಕೆಂಬ ಕುತೂಹಲವು ನನ್ನನ್ನು ಬಾಧಿಸುತ್ತಿದೆ, ದಯೆಯಿಟ್ಟು ಹೇಳು ಎಂದನು.

೨. ಶ್ರೀಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರ! ಪ್ರಾಜ್ಞರು ಅನಶನವ್ರತಕ್ಕಿಂತಲೂ ಉತ್ಕೃಷ್ಟವಾದುದು ಬೇರೆ ಇಲ್ಲವೆಂದು ಹೇಳಿರುವರು. ಮರಣೋನ್ಮುಖನಾದ ಮಾನವನು ಜಪಿಸಬೇಕಾದ ಮಂತ್ರಾದಿಗಳನ್ನೂ ಅದರ ಲಕ್ಷಣವನ್ನೂ ಹೇಳುವೆನು ಕೇಳು ಎಂದನು.

ಯಾದೃಗ್ರೂಪಶ್ಚ ಭಗವಾಂಶ್ಚಿಂತನೀಯೋ ಜನಾರ್ದನಃ ।
ಆಸನ್ನಮಾತ್ಮನಃ ಕಾಲಂ ಜ್ಞಾತ್ವಾ ಪ್ರಾಜ್ಞೋ ಯುಧಿಷ್ಠಿರಃ ॥ ೩ ॥

ನಿರ್ಧೂತಮಲದೋಷಶ್ಚ ಸ್ನಾತೋ ನಿಯತಮಾನಸಃ ।
ಸಮಭ್ಯರ್ಚ್ಯ ಹೃಷೀಕೇಶಂ ಪುಷ್ಪಧೂಪಾದಿಭಿಸ್ತತಃ ॥ ೪ ॥

ಪ್ರಣಿಪಾತೈಃ ಸ್ತವೈಃ ಪುಣ್ಯೈರ್ಗಂಧೈರ್ಧೂಪೈಸ್ತು ಪೂಜಯೇತ್ ।
ದತ್ವಾ ದಾನಂ ಚ ವಿಪ್ರೇಭ್ಯೋ ವಿಕಲಾದಿಭ್ಯ ಏವ ಚ ॥
ಸಮರ್ಪ್ಯ ಬ್ರಾಹ್ಮಣೇಭ್ಯಶ್ಚ ದೇವಾರ್ಚಾದ್ಯುಪಯೋಗಿ ಚ ॥ ೫ ॥

ಬಂಧುಪುತ್ರಕಲತ್ರೇಷು ಕ್ಷೇತ್ರಧಾನ್ಯಧನಾದಿಷು ।
ಮಿತ್ರವರ್ಗೇ ಚ ರಾಜೇಂದ್ರ ಮಮತ್ವಂ ವಿನಿವರ್ತಯೇತ್ ॥ ೬ ॥

---

೩. ಇವನು ಯಾವ ರೀತಿಯಲ್ಲಿ ಭಗವಂತನಾದ ನಾರಾಯಣನನ್ನು ಧ್ಯಾನಿಸಬೇಕೆಂಬುದನ್ನು ನಿನಗೆ ಹೇಳುವೆನು ಕೇಳು. ಅಯ್ಯಾ ಯುಧಿಷ್ಠಿರ! ಪ್ರಾಜ್ಞನಾದ ಮಾನವನು ತನ್ನ ಮರಣಕಾಲವನ್ನು ಅರಿತುಕೊಂಡು, ಕೊಂಚ ಮುಂಚಿತವಾಗಿಯೇ ಶೌಚ (ಜಲ ಮಲ) ಕರ್ಮಗಳನ್ನು ತೀರಿಸಿಕೊಳ್ಳಬೇಕು.

೪. ಬಳಿಕ ಸ್ನಾನಮಾಡಿ ಪರಿಶುದ್ಧ ಚಿತ್ತದಿಂದ ಹೃಷೀಕೇಶನನ್ನು ಪುಷ್ಪ, ಧೂಪ ಮೊದಲಾದುವುಗಳಿಂದ ಭಕ್ತಿಪುರಸ್ಸರವಾಗಿ ಪೂಜಿಸಬೇಕು. ಅನಂತರ ನಮಸ್ಕಾರಮಾಡಿ, ಪುಣ್ಯಕರವಾದ ದಿವ್ಯಸ್ತೋತ್ರಗಳಿಂದ ಪರಮಪುರುಷನನ್ನು ಭಜಿಸಬೇಕು.

೫. ಸುಗಂಧಮಯವಾದ ಧೂಪವನ್ನು ಅರ್ಪಿಸಿ, ಪೂಜಿಸಿ, ಬಳಿಕ ಬ್ರಾಹ್ಮಣರಿಗೂ, ದೀನಾನಾಥವಿಕಲಾಂಗರಿಗೂ ನಾನಾವಿಧವಾದ ದಾನಗಳನ್ನು ಮಾಡಿ, ದೇವರ ಪೂಜೆಗೆ ಉಪಯೋಗಿಸುತ್ತಿದ್ದ ಪಾತ್ರೆಗಳನ್ನು ಬ್ರಾಹ್ಮಣರಿಗೆ ಸಮರ್ಪಣೆಮಾಡಬೇಕು.

೬. ಎಲೈ ರಾಜೇಂದ್ರ! ಅನಂತರ ಬಂಧುಗಳು, ಪುತ್ರರು, ಪತ್ನಿ ಮುಂತಾದ ತನ್ನ ಬಳಗದಲ್ಲಿಯೂ, ಹೊಲ. ಗದ್ದೆ, ಧನ, ಧಾನ್ಯ ಮುಂತಾದ ಆಸ್ತಿಯಲ್ಲಿಯೂ; ಸುಹೃದ್ವರ್ಗದಲ್ಲಿಯೂ, ಇವರು ನನ್ನವರು, ಇದು ನನ್ನದು ಎಂಬ ಭಾವನೆಯನ್ನು ದೂರಮಾಡಬೇಕು.

ಮಿತ್ರಾಣ್ಯಮಿತ್ರಾನ್ಮಧ್ಯಸ್ಥಾನ್ಪರಾನ್ ಸ್ವಾಂಶ್ಚ ಪುನಃ ಪುನಃ ।
ಅತ್ಯರ್ಥಮುಪಕಾರೇಣ ನೋಪಕಾರೇಣ ಚಿಂತಯೇತ್ ॥ ೭ ॥

ತತಶ್ಚ ಪ್ರಯತಃ ಕುರ್ಯಾದುತ್ಸರ್ಗಂ ಸರ್ವಕರ್ಮಣಾಂ ।
ಶುಭಾಶುಭಾನಾಂ ರಾಜೇಂದ್ರ ವಾಕ್ಯಂ ಚೇದಮುದೀರಯೇತ್ ॥ ೮ ॥

ಪರಿತ್ಯಜಾಮ್ಯಹಂ ಭೋಗಾಂಸ್ತ್ಯಜಾಮಿ ಸುಹೃದೋಽಖಿಲಾನ್ ।
ಭೋಜನಂ ಹಿ ಮಯೋತ್ಸೃಷ್ಟಮುತ್ಸೃಷ್ಟಮನುಲೇಪನಂ ॥ ೯ ॥

ಸ್ರಗ್ಭೂಷಣಾದಿಕಂ ಗೇಯಂ ದಾನಮಾಸನಮೇವ ಚ ।
ಹೋಮಾದಯಃ ಪರಾರ್ಥಾ ಯೇ ಯೇ ಚ ನಿತ್ಯಕ್ರಮಾಗತಾಃ ॥೧೦॥

---

೭. ಬಳಿಕ ಇವರು ನನ್ನ ಸ್ನೇಹಿತರು, ನನಗೆ ಉಪಕಾರಮಾಡಿದವರು, ಇವರು ನನಗೆ ದ್ರೋಹಮಾಡಿದವರು ಆದ್ದರಿಂದ ಶತ್ರುಗಳು, ಇವರು ಯಾವುದನ್ನೂ ಮಾಡದ ಉದಾಸೀನರು ಮಧ್ಯಮರು, ಇವರು ಆಜನ್ಮಶತ್ರುಗಳು, ಇವರು ನನ್ನ ಬಳಗ ಎಂಬ ಅಭಿಮಾನವನ್ನು ತೊಡೆದುಬಿಡಬೇಕು.

೮. ಎಲೈ ರಾಜನೇ! ಆಮೇಲೆ ನಿಯಮಬದ್ಧನಾಗಿ ಮುಂದೆ ಹೇಳುವ ವಾಕ್ಯಗಳನ್ನುಚ್ಚರಿಸುತ್ತಾ, ಶುಭಾಶುಭರೂಪವಾದ ಸಕಲಕರ್ಮಗಳನ್ನೂ ಉತ್ಸರ್ಗಮಾಡಬೇಕು. (ಇನ್ನುಮುಂದೆ ನನಗೆ ಕರ್ಮಬಂಧನ ಸಾಕೆಂದು ತ್ಯಾಗಮಾಡಬೇಕು.)

೯. ದೇವ! ನಾನು ಸಕಲ ಭೋಗಗಳನ್ನೂ, ಸಮಸ್ತ ಮಿತ್ರರನ್ನೂ ತ್ಯಾಗಮಾಡುವೆನು. ಅವರ ಮೇಲಿನ ಅಭಿಮಾನ ಇಂದಿಗೆ ನನಗೆ ನಿವೃತ್ತಿಯಾಯಿತು. ದಿವ್ಯವಾದ ಭೋಜನ, ಅನುಲೇಪನ ಇವುಗಳನ್ನೆಲ್ಲಾ ತೊರೆದಿರುವೆನು.

೧೦-೧೧. ಮಾಲಿಕಾದಿ ಅಲಂಕಾರಸಾಮಗ್ರಿಗಳು, ಆಸನ, ಗಾನಾದಿಭೋಗಗಳು, ದಾನ, ಪರೋಪಕಾರಕ್ಕಾಗಿ ಆಚರಿಸುತ್ತಿದ್ದ ಹೋಮ, ನಿತ್ಯನೈಮಿತ್ತಿಕ ಹೋಮ, ಕಾಮ್ಯಕರ್ಮಗಳು, ಶ್ರಾದ್ಧಕರ್ಮ ಮುಂತಾದುವು, ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸಂನ್ಯಾಸ ಈ ನಾಲ್ಕು ಆಶ್ರಮಗಳಲ್ಲೂ ಆಚರಿಸತಕ್ಕ

ನೈಮಿತ್ತಿಕಾಸ್ತಥಾ ಕಾಮ್ಯಾಃ ಶ್ರಾದ್ಧಧರ್ಮಾದಯೋಜ್ಝಿತಾಃ ।
ತ್ಯಕ್ತಾಶ್ಚಾಶ್ರಮಿಕಾ ಧರ್ಮಾ ವರ್ಣಧರ್ಮಾಸ್ತಥೋಜ್ಝಿತಾಃ ॥ ೧೧ ॥

ಪದ್ಭ್ಯಾಂ ಕರಾಭ್ಯಾಂ ವಿಹರನ್ ಕುರ್ವಾಣಃ ಕರ್ಮ ಚೋದ್ವಹನ್ ।
ನ ಪಾಪಂ ಕಸ್ಯಚಿನ್ನ್ಯಾಯ್ಯಾಃ ಪ್ರಾಣಿನಃ ಸಂತು ನಿರ್ಭಯಾಃ ॥ ೧೨ ॥

ನಭಸಿ ಪ್ರಾಣಿನೋ ಯೇ ಚ ಯೇ ಜಲೇ ಯೇ ಚ ಭೂತಲೇ ।
ಕ್ಷಿತೇರ್ವಿವರಗಾ ಯೇ ಚ ಯೇ ಚ ಪಾಷಾಣಸಂಪುಟೇ ॥ ೧೩ ॥

ಧಾನ್ಯಾದಿಷು ಚ ವಸ್ತ್ರೇಷು ಶಯನೇಷ್ವಾಸನೇಷು ಚ ।
ತೇ ಸ್ವಯಂ ತು ವಿಬುದ್ಧ್ಯಂತೇ ದತ್ತಂ ತೇಭ್ಯೋಽಭಯಂ ಮಯಾ ॥

ನಮೇಽಸ್ತಿ ಬಾಂಧವಃ ಕಶ್ಚಿದ್ವಿಷ್ಣುಂ ಮುಕ್ತ್ವಾ ಜಗದ್ಗುರುಂ ।
ಮಿತ್ರಪಕ್ಷೇ ಚ ಮೇ ವಿಷ್ಣುರಧಶ್ಚೋರ್ಧ್ವಂ ತಥಾ ಪುನಃ ॥ ೧೫ ॥

---

ದ್ದಿಂದು ವಿಹಿತವಾದ ಧರ್ಮಗಳು, ಬ್ರಹ್ಮ, ಕ್ಷತ್ರ, ವೈಶ್ಯ, ಶೂದ್ರಾದಿ ಚಾತುರ್ವರ್ಣ್ಯಧರ್ಮಗಳು, ಇವೆಲ್ಲವನ್ನೂ ನಾನು ಬಿಟ್ಟಿರುವೆನು.

೧೨. ದೇವ! ಕೆಲಸಮಾಡುವಾಗಲಾಗಲಿ, ನಡೆಯುವಾಗಾಗಲಿ, ವಿಹಾರಮಾಡುವಾಗಾಗಲಿ, ಶುಭಾಶುಭಕರ್ಮಮಾಡುವಾಗಾಗಲಿ,ನ್ಯಾಯವಾಗಿ ನನ್ನಿಂದ ಪ್ರಾಣಿಗಳಿಗೆ ತೊಂದರೆಯುಂಟಾಗಿದ್ದರೆ ಅದನ್ನು ಕ್ಷಮಿಸು. ಇನ್ನುಮುಂದೆ ನನ್ನಿಂದ ಪ್ರಾಣಿಗಳಿಗೆ ಯಾವ ಭಯವೂ ಉಂಟಾಗದಂತೆ ನನ್ನ ಐಹಿಕವ್ಯಾಪಾರವನ್ನೆಲ್ಲಾ ಬಿಟ್ಟಿದ್ದೇನೆ.

೧೩-೧೪. ಅಂತರಿಕ್ಷ, ಜಲ, ಭೂಮಿ, ಭೂಮಿಯ ರಂಧ್ರ (ಹುತ್ತ), ಕಲ್ಲಿನ ಸಂದುಗಳು, ಇವುಗಳಲ್ಲಿ ವಾಸಿಸುವ ಪ್ರಾಣಿಗಳು, ಧಾನ್ಯಗಳು, ವಸ್ತ್ರ, ಶಯನ, ಆಸನ, ಇವುಗಳಲ್ಲಿ ತಾನಾಗಿಯೇ ಉತ್ಪನ್ನವಾಗುವ ಪ್ರಾಣಿಗಳು, ಇವಕ್ಕೆಲ್ಲಾ ನಾನು ಅಭಯವನ್ನು ಕೊಟ್ಟಿರುವೆನು.

೧೫-೧೭. ಜಗದ್ಗುರುವಾದ ಮಹಾವಿಷ್ಣುವನ್ನು ಬಿಟ್ಟು, ನನಗೆ ಬೇರೆ ಯಾರೂ ಹಿತಚಿಂತಕರಿಲ್ಲ. ಅವನೇ ಬಂಧು, ಅವನೇ ಮಿತ್ರ, ಅವನೇ ಊರ್ಧ್ವ ಅಧೋಪಾರ್ಶ್ವಗಳು, ತಲೆ, ಹೃದಯ, ಬಾಹುಗಳು, ಕಣ್ಣು, ಕಿವಿ ಮುಂತಾದ

ಪಾರ್ಶ್ವತೋ ಮೂರ್ಧ್ನಿ ಹೃದಯೇ ಬಾಹುಭ್ಯಾಂ ಚೈವ ಚಕ್ಷುಷೋಃ ।
ಶ್ರೋತ್ರಾದಿಷು ಚ ಸರ್ವೇಷು ಮಮ ವಿಷ್ಣುಃ ಪ್ರತಿಷ್ಠಿತಃ ॥ ೧೬ ॥

ಇತಿ ಸರ್ವಂ ಸಮುತ್ಸೃಜ್ಯ ಧೃತ್ವಾ ಸರ್ವೇಶಮಚ್ಯುತಂ ।
ವಾಸುದೇವೇತ್ಯವಿರತಂ ನಾಮ ದೇವಸ್ಯ ಕೀರ್ತಯೇತ್ ॥ ೧೭ ॥

ದಕ್ಷಿಣಾಗ್ರೇಷು ದರ್ಭೇಷು ಶೇತೇ ವೈ ಪ್ರಾಕ್ಛಿರಾಸ್ತಥಾ ।
ಉದಕ್ಛಿರಾ ವಾ ರಾಜೇಂದ್ರ ಚಿಂತಯನ್ ಜಗತಃ ಪತಿಂ ॥ ೧೮ ॥

ವಿಷ್ಣುಂ ಜಿಷ್ಣುಂ ಹೃಷೀಕೇಶಂ ಕೇಶವಂ ಮಧುಸೂದನಂ ।
ನಾರಾಯಣಂ ನರಂ ಶೌರಿಂ ವಾಸುದೇವಂ ಜನಾರ್ದನಂ ॥ ೧೯ ॥

ವಾರಾಹಂ ಯಜ್ಞಪುರುಷಂ ಪುಂಡರೀಕಾಕ್ಷಮಚ್ಯುತಂ ।
ವಾಮನಂ ಶ್ರೀಧರಂ ಕೃಷ್ಣಂ ನೃಸಿಂಹಮಪರಾಜಿತಂ ॥ ೨೦ ॥

ಪದ್ಮನಾಭಮಜಂ ಶ್ರೀಶಂ ದಾಮೋದರಮಧೋಕ್ಷಜಂ ।
ಸರ್ವೇಶ್ವರೇಶ್ವರಂ ಶುದ್ಧಮನಂತಂ ವಿಶ್ವರೂಪಿಣಂ ॥ ೨೧ ॥

---

ಇತರ ಸಕಲ ಇಂದ್ರಿಯಗಳಲ್ಲೂ ವಿಷ್ಣುವೇ ಪ್ರತಿಷ್ಠಿತನಾಗಿರುವನು ಎಂದು ಎಲ್ಲವನ್ನೂ ತ್ಯಾಗಮಾಡಿ, ಸರ್ವೇಶ್ವರನೂ ನಾಶರಹಿತನೂ ಆದ ವಿಷ್ಣುವನ್ನೊಬ್ಬನನ್ನು ಮಾತ್ರ ಧರಿಸಬೇಕು. ಮತ್ತು ಅನವರತವೂ ವಾಸುದೇವ-ಎಂದು ಭಗವಂತನ ನಾಮವನ್ನೇ ಕೀರ್ತನಮಾಡಬೇಕು.

೧೮. ಅನಂತರ ದರ್ಭೆಗಳನ್ನು ದಕ್ಷಿಣಾಗ್ರವಾಗಿ ಹರಡಿ, ಅದರಮೇಲೆ ಪೂರ್ವಾಭಿಮುಖವಾಗಿಯೋ ಅಥವಾ ಉತ್ತರಾಭಿಮುಖವಾಗಿಯೋ ತಲೆಯನ್ನು ಹಾಕಿಕೊಂಡು ಮಲಗಿ, ಜಗತ್ಪತಿಯಾದ ಮಹಾವಿಷ್ಣುವನ್ನು ಸದಾ ಧ್ಯಾನಮಾಡಬೇಕು.

೧೯-೨೨. " ವಿಷ್ಣು, ಜಿಷ್ಣು, ಹೃಷೀಕೇಶ, ಮಧುಸೂದನ, ನಾರಾಯಣ, ನರ, ಶೌರಿ, ವಾಸುದೇವ, ಜನಾರ್ದನ, ವಾರಾಹ, ಯಜ್ಞಪುರುಷ, ಪುಂಡರೀಕಾಕ್ಷ, ಅಚ್ಯುತ, ವಾಮನ, ಶ್ರೀಧರ, ಕೃಷ್ಣ, ನರಸಿಂಹ, ಅಪರಾಜಿತ, ಪದ್ಮನಾಭ, ಅಜ, ಶ್ರೀಶ, ದಾಮೋದರ, ಅಧೋಕ್ಷಜ, ಸರ್ವೇಶ್ವರ, ಈಶ್ವರ, ಶುದ್ಧ, ಅನಂತ, ವಿಶ್ವರೂಪಿ, ಚಕ್ರೀ, ಗದೀ (ಗದಾಧಾರಿ), ಶಾಂತ, ಶಂಖೀ, ಗರುಡ

ಚಕ್ರಿಣಂ ಗದಿನಂ ಶಾಂತಂ ಶಂಖಿನಂ ಗರುಡಧ್ವಜಂ ।
ಕಿರೀಟಕೌಸ್ತುಭಧರಂ ಪ್ರಣಮಾಮ್ಯಹಮವ್ಯಯಂ ॥ ೨೨ ॥

ಅಹಮಸ್ಮಿ ಜಗನ್ನಾಥ ಮಯಿ ವಾಸಂ ಕುರು ದ್ರುತಂ ।
ಆವಯೋರಂತರಂ ಮಾಸ್ತು ಸಮೀರಾಕಾಶಯೋರಿವ ॥ ೨೩ ॥

ಅಯಂ ವಿಷ್ಣುರಯಂ ಶೌರಿರಯಂ ಕೃಷ್ಣಃ ಪುರೋ ಮಮ ।
ನೀಲೋತ್ಪಲದಲಶ್ಯಾಮಃ ಪದ್ಮಪತ್ರಾಯತೇಕ್ಷಣಃ ॥ ೨೪ ॥

ಏಷ ಪಶ್ಯತು ಮಾಮೀಶಃ ಪಶ್ಯಾಮ್ಯಹಮಧೋಕ್ಷಜಂ ।
ಇತ್ಥಂ ಜಪೇದೇಕಮನಾಃ ಸ್ಮರ್ರ ಸರ್ವೇಶ್ವರಂ ಹರಿಂ ॥ ೨೫ ॥

ಆಸೀತ ಸುಖದುಃಖೇಷು ಸಮೋ ಮಿತ್ರಾಹಿತೇಷು ಚ ।
" ಓಂನಮೋವಾಸುದೇವಾಯ " ಇತ್ಯೇತತ್ಸತತಂ ಜಪೇತ್ ॥ ೨೬ ॥

---

ಧ್ವಜ, ಕಿರೀಟಕೌಸ್ತುಭಧರ, ಅವ್ಯಯ ಈ ರೀತಿ ನಾನಾ ನಾಮಗಳಿಂದ ಸ್ತೋತ್ರ ಮಾಡಲ್ಪಡುವ ಪರಮಾತ್ಮನನ್ನು ನಮಸ್ಕರಿಸುವೆನು '' ಎಂದು ಹೇಳಬೇಕು.

೨೩. " ಓ ಜಗನ್ನಾಥ ! ಇಗೋ ನಾನಿಲ್ಲಿ ಸಿದ್ಧನಾಗಿರುವೆನು. ನನ್ನಲ್ಲಿ ನೀನು ಬಂದು ನೆಲಸು. ವಾಯುರಾಕಾಶಗಳಿಗೆ,ಹೇಗೆ ಭೇದವಿಲ್ಲವೋ ಅದರಂತೆ ನಮ್ಮಿಬ್ಬರಿಗೂ ಇನ್ನು ಯಾವ ಭೇದವೂ ಇಲ್ಲ. ''

೨೪-೨೫. ಇವನೇ ವಿಷ್ಣು, ಇವನೇ ಶೌರಿ, ಕನ್ನೈದಿಲೆಯಂತೆ ಕಪ್ಪಾದ ದೇಹಕಾಂತಿಯಿಂದ ಶೋಭಿಸುತ್ತಾ ಕಮಲದಳದಂತೆ ವಿಶಾಲವಾದ ಕಣ್ಣುಗಳುಳ್ಳ ಶ್ರೀಕೃಷ್ಣನು ಇಗೋ ನನ್ನ ಮುಂದೆ ನಿಂತಿರುವನು. ಈ ಕೃಷ್ಣನು ನನ್ನನ್ನೇ ನೋಡುತ್ತಿರುವನು. ಅಧೋಕ್ಷಜನೆನಿಸಿದ ಸರ್ವೇಶ್ವರನನ್ನೇ ನಾನೂ ದರ್ಶನ ಮಾಡುತ್ತಿರುವೆನು. ಎಂದು ಒಂದೇ ಮನಸ್ಸಿನಿಂದ ಸರ್ವೇಶ್ವರನೆನಿಸಿದ ಮಹಾ ವಿಷ್ಣುವನ್ನು ಸದಾ ಜಪಮಾಡಬೇಕು.

೨೬. ತನ್ನ ಸುಖದುಃಖಗಳಲ್ಲಿಯೂ ಮತ್ತು ಮಿತ್ರರ ದುಃಖದಲ್ಲಿಯೂ ಒಂದೇಸಮವಾಗಿರಬೇಕು. ಅಲ್ಲದೆ ' ಓಂ ನಮೋ ಭಗವತೇ ವಾಸುವೇವಾಯ ' ಎಂಬ ಮಂತ್ರವನ್ನು ಯಾವಾಗಲೂ ಜಪಮಾಡಬೇಕು.

ಯಥಾ ಯಥಾ ಭವೇತ್ಕಾಮಸ್ತಥಾ ತನ್ನಾಮ ಕೀರ್ತಯೇತ್ ।
ಧ್ಯಾಯೇಚ್ಚ ದೇವದೇವೇಶಂ ವಿಷ್ಣೋಃ ರೂಪಂ ಮನೋರಮಂ ॥೨೭॥

ಪ್ರಸನ್ನನೇತ್ರಭ್ರೂಚಕ್ರಶಂಖಚಕ್ರಗದಾಧರಂ ।
ಶ್ರೀವಕ್ಷಸಂ ಸುಮನಸಂ ಚತುರ್ವಕ್ತ್ರಂ ಕಿರೀಟಿನಂ ॥ ೨೮ ॥

ಪೀತಾಂಬರಧರಂ ಕೃಷ್ಣಂ ಚಾರುಕೇಯೂರಧಾರಿಣಂ ।
ಚಿಂತಯೇತ್ತು ಸದಾ ರೂಪಂ ಮನಃಕೃತ್ವೈಕನಿಶ್ಚಯಂ ॥ ೨೯ ॥

ಯಾದೃಶೇ ವಾ ಮನಃಸ್ಥೈರ್ಯಂ ರೂಪೇ ಬಧ್ನಾತಿ ಚಕ್ರಿಣಃ ।
ತದೇವ ಚಿಂತಯೇದ್ರೂಪಂ ವಾಸುದೇವೇತಿ ಕೀರ್ತಯೇತ್ ॥ ೩೦ ॥

ಇತ್ಥಂ ಜಪನ್ ಸ್ಮರನ್ ನಿತ್ಯಂ ಸ್ವರೂಪಂ ಪರಮಾತ್ಮನಃ ।
ಅಪ್ರಾಣಪರಮೋದಾರಸ್ತಚ್ಚಿಸ್ತತ್ಪರಾಯಣಃ ॥ ೩೧ ॥

---

೨೭. ಅಂತಿಮಾವಸ್ಥೆಯಲ್ಲಿ ತನ್ನ ಮನಸ್ಸಿಗೆ ತೋರಿದ ರೀತಿಯಲ್ಲಿ ಭಗವನ್ನಾಮಕೀರ್ತನೆಯನ್ನು ಮಾಡಬೇಕು. ಮತ್ತು ಮನೋಹರಸ್ವರೂಪನೂ, ದೇವಾದಿದೇವನೂ ಎನಿಸಿದ ಆ ವಿಷ್ಣುವಿನ ಸುಂದರರೂಪನ್ನೇ ಅನವರತವೂ ಧ್ಯಾನಿಸಬೇಕು.

೨೮-೨೯. ಪ್ರಸನ್ನವಾದ ಕಣ್ಣು ಮತ್ತು ಹುಬ್ಬುಗಳಿಂದ ಕೂಡಿ, ಶಂಖ, ಚಕ್ರ, ಗದಾಯುಧಗಳನ್ನು ಕೈಯಲ್ಲಿ ಹಿಡಿದು, ಲಕ್ಷ್ಮಿಯನ್ನೇ ತನ್ನ ವಕ್ಷಸ್ಥಳದಲ್ಲಿ ಧರಿಸಿರುವ ದಿವ್ಯವಾದ ಸ್ವರೂಪವನ್ನೂ, ಗಂಭೀರವಾದ ಮನಸ್ಸುಳ್ಳವನಾಗಿ ನಾಲ್ಕು ಮುಖಗಳಿಂದ ಶೋಭಿಸುತ್ತಾ, ಕಿರೀಟ, ಪೀತಾಂಬರ ಮನೋಹರವಾದ ಕೇಯೂರ ಇವುಗಳನ್ನು ಧರಿಸಿರುವ ಸುಂದರಸ್ವರೂಪವನ್ನೂ ಸದಾ ಏಕಾಗ್ರಚಿತ್ತವುಳ್ಳವನಾಗಿ ಧ್ಯಾನಮಾಡುತ್ತಿರಬೇಕು.

೩೦. ಚಕ್ರಧಾರಿಯಾದ ವಿಷ್ಣುವಿನ ಯಾವರೂಪವು ತನ್ನ ಮನಸ್ಸಿನಲ್ಲಿ ಸ್ಥಿರವಾಗಿ ನಿಲ್ಲುವುದೋ ಆ ರೂಪನ್ನೇ ವಾಸುದೇವನೆಂದು ಭಾವಿಸಿ, ಸದಾ ಧ್ಯಾನ ಮಾಡಬೇಕು.

೩೧-೩೨. ಈ ರೀತಿ ಪರಮಾತ್ಮನ ಸ್ವರೂಪವನ್ನು ಸದಾ ಜಪಿಸುತ್ತಲೂ, ಮತ್ತು ಸ್ಮರಣೆಮಾಡುತ್ತಲೂ, ತನ್ನ ಪ್ರಾಣವಿಯೋಗವಾಗುವವರೆಗೂ ಸಂತತ

ಸರ್ವಪಾತಕಯುಕ್ತೋಽಪಿ ಪುರುಷಃ ಪುರುಷರ್ಷಭ ।
ಪ್ರಯಾತಿ ದೇವದೇವೇಶೇ ಲಯಮೀಡ್ಯತಮೇಽಚ್ಯುತೇ ॥ ೩೨ ॥

ಯಥಾಗ್ನಿಸ್ತೃಣಜಾತಾನಿ ದಹತ್ಯನಿಲಸಂಗತಃ ।
ತಥಾನಶನಶಂಕಲ್ಪಃ ಪುಂಸಾಂ ಪಾಪಮಸಂಶಯಂ ॥ ೩೩ ॥

॥ ಯುಧಿಷ್ಠಿರ ಉವಾಚ ॥

ಉತ್ಕ್ರಾಂತಿ ಕಾಲೇ ಭೂತಾನಾಂ ಮುಹ್ಯಂತಿ ಚಿತ್ತವೃತ್ತಯಃ ।
ಜರಾವ್ಯಾಧಿವಿಹೀನಾನಾಂ ಕಿಮುತ ವ್ಯಾಧಿದೋಷಿಣಾಂ ॥ ೩೪ ॥

ಅತ್ಯಂತವಯಸಾ ದಗ್ಧೋ ವ್ಯಾಧಿನಾಚೋಪಪೀಡಿತಃ ।
ಯದಿ ಸ್ಥಾತುಂ ನ ಶಕ್ನೋತಿ ಕ್ಷಿತಿಸ್ಥೋ ದರ್ಭಸಂಸ್ತರೇ ॥ ೩೫ ॥

ಕಿಮಪ್ಯನ್ಯೋಪ್ಯುಪಾಯೋಽಸ್ತಿ ನ ವಾನಶನಕರ್ಮಣಿ ।
ವೈಕಲ್ಯಂ ಯೇನ ನಾಪ್ನೋತಿ ತನ್ಮೇ ಬ್ರೂಹಿ ಜನಾರ್ದನ ॥ ೩೬ ॥

---

ವಾಗಿ ಧ್ಯಾನಮಾಡುವವನು ಸಕಲಪಾಪಯುಕ್ತನಾದಾಗ್ಯೂ ದೇವೇಶನೂ, ಸ್ತೋತ್ರಾರ್ಹನೂ ಆದ ಅಚ್ಯುತನಲ್ಲಿ ಐಕ್ಯವಾಗುತ್ತಾನೆ.

೩೩. ವಾಯುವಿನೊಡಗೂಡಿದ ಅಗ್ನಿಯು ತೃಣಸಮೂಹವನ್ನು ಧ್ವಂಸ ಮಾಡುವಂತೆ, ಈ ಅನಶನವ್ರತಸಂಕಲ್ಪವು ಪುರುಷರ ಸರ್ವಪಾಪಗಳನ್ನೂ ಸಂದೇಹವೇ ಇಲ್ಲದೆ ನಾಶಪಡಿಸುವುದು.

೩೪-೩೬. ಯುಧಿಷ್ಠಿರನು ಶ್ರೀಕೃಷ್ಣನನ್ನು ಕೇಳುತ್ತಾನೆ—"ಅಯ್ಯಾ ಜನಾರ್ದನ! ಪ್ರಾಣಿಗಳಿಗೆ ಉತ್ಕ್ರಮಣಕಾಲವು ಒದಗಿದಾಗ ಮನೋಧರ್ಮಗಳೆಲ್ಲವೂ ಮೋಹಗೊಳ್ಳುವುವು. ಈ ಚಿತ್ತವೃತ್ತಿಗಳು ಜರಾವ್ಯಾಧಿರಹಿತರಾದ ಮಾನವರಿಗೂ ಸಹ ಮೋಹವನ್ನುಂಟುಮಾಡುವುವು. ಹೀಗಿರುವಾಗ ಜರಾವ್ಯಾಧಿಯುಕ್ತರಾದ ಮಾನವರಿಗೆ ಹೇಳತಕ್ಕದ್ದೇನು. ತುಂಬಾ ವಯಸ್ಸಾದವನೂ, ವ್ಯಾಧಿಪೀಡಿತನೂ ಆದ ಮಾನವನು ಭೂಮಿಯ ಮೇಲೆ ದರ್ಭೆಯನ್ನು ಹರಡಿ ಮಲಗಲು ಅಸಾಧ್ಯವಾದ ಪಕ್ಷದಲ್ಲಿ ಈ ಅನಶನವ್ರತಕರ್ಮದಲ್ಲಿ ಬೇರೆ ಏನಾದರೂ ಉಪಾಯವಿದೆಯೇ? ಹೇಗೆ ಮಾಡಿದರೆ ಈ ವ್ರತಭಂಗವಾಗುವುದಿಲ್ಲ? ಇವೆಲ್ಲವನ್ನೂ ತಿಳಿಸು."

ತ್ವಯೋಕ್ತಂ ಭಗವರ್ ಧ್ಯಾನಂ ತದ್ಬ್ರೂಹಿ ಮಮ ತತ್ವತಃ ।
ಧ್ಯಾನಸ್ವರೂಪಮಖಿಲಂ ಕಥಯಸ್ವ ಜನಾರ್ದನ ॥ ೩೭ ॥

॥ ಶ್ರೀಕೃಷ್ಣ ಉವಾಚ ॥

ನಾತ್ರ ಭೂಮಿರ್ನ ಚ ಕುಶಾಃ ಸ್ವಾಸ್ತರಾಶ್ಚ ನ ಕಾರಣಂ ।
ಚಿತ್ತಸ್ಯಾಲಂಬನೀಭೂತೋ ವಿಷ್ಣುರೇವಾತ್ರ ಕಾರಣಂ ॥ ೩೮ ॥

ತಿಷ್ಠರ್ ಭುಂಜನ್ಸ್ವಪರ್ ಗಚ್ಛಸ್ತಂಥಾ ಧಾವನ್ನಿತಸ್ತತಃ ।
ಉತ್ಕ್ರಾಂತಿಕಾಲೇ ಗೋವಿಂದಂ ಸಂಸ್ಮರಂಸ್ತನ್ಮಯೋ ಭವೇತ್ ॥

ಯಂ ಯಂ ಚಾಪಿ ಸ್ಮರರ್ ಭಾವಂ ತ್ಯಜತ್ಯಂತೇ ಕಲೇಬರಂ ।
ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ ॥ ೪೦ ॥

ತಸ್ಮಾತ್ಪ್ರಧಾನಮುತ್ಕ್ರೋಕ್ತಂ ವಾಸುದೇವಸ್ಯ ಚಿಂತನಂ ।
ಯದ್ಯತ್ಪೃಷ್ಟಂ ತ್ವಯಾ ಧ್ಯಾನಂ ತದೇವ ಕಥಯಾಮಿ ತೇ ॥ ೪೧ ॥

---

೩೭. "ಎಲೈ ಭಗವಂತನೇ! ನೀನು ಹೇಳಿದ ಧ್ಯಾನಸ್ವರೂಪವನ್ನು ಸಂಪೂರ್ಣವಾಗಿ ನನಗೆ ಚಾಚೂತಪ್ಪದಂತೆ ಅಪ್ಪಣೆಕೊಡಿಸು'' ಎಂದನು.

೩೮-೪೦. "ಎಲೈ ಕೌಂತೇಯನೇ! ಈ ಭೂಮಿ, ಈ ದರ್ಭಾಸ್ತರಣ, ಇವು ಯಾವುವೂ ಮನಸ್ಸಿನ ಆಲಂಬನಕ್ಕೆ ಕಾರಣವಲ್ಲ. ವಿಷ್ಣುವೊಬ್ಬನೇ ಎಲ್ಲಕ್ಕೂ ಕಾರಣ. ನಿಂತಿರುವಾಗ, ಸಂಚರಿಸುವಾಗ, ಊಟಮಾಡುವಾಗ, ನಿದ್ರಿಸುವಾಗ, ಮತ್ತು ಉತ್ಕ್ರಮಣ ಸಮಯದಲ್ಲಿ ಸಹ, ಗೋವಿಂದನ ಸ್ಮರಣೆಯನ್ನೇ ಮಾಡುವ ಮಾನವನು, ಗೋವಿಂದ ಸ್ವರೂಪನೇ ಆಗುವನು. ಅಂತ್ಯಕಾಲದಲ್ಲಿ ಯಾವ ಭಾವನೆಯಲ್ಲಿ ಶರೀರತ್ಯಾಗಮಾಡುವನೋ, ಆ ಭಾವನೆಯಿಂದಲೇ ಪರಿಣತನಾಗಿ, ಆ ಭಾವನಾರೂಪವನ್ನೇ ಸದಾ ಹೊಂದುವನು.

೪೧. ಎಲೈ ಪಾಂಡುಪುತ್ರನೇ! ಆದುದರಿಂದ ಮುಖ್ಯವಾಗಿ ಉತ್ಕ್ರಮಣ ಕಾಲವಲ್ಲಿ, ವಾಸುದೇವನ ನಾಮಕೀರ್ತನೆಯನ್ನೇ ಮಾಡುತ್ತಾ, ಅವನನ್ನೇ ಧ್ಯಾನಮಾಡಬೇಕು. ಆಗ ಅವನಿಂದಲೇ ಶಾಶ್ವತವಾದ ಮುಕ್ತಿ ಪ್ರಾಪ್ತಿಯಾಗುವುದು. ಅಯ್ಯಾ ಯುಧಿಷ್ಠಿರ! ಧ್ಯಾನವಿಚಾರದಲ್ಲಿ ನೀನು ಏನೇನು ಪ್ರಶ್ನಿಸಿದೆಯೋ ಅದಕ್ಕೆ ಉತ್ತರಹೇಳುತ್ತೇನೆ.

ಪುರಾ ಮೇ ಕಥಿತಂ ಪಾರ್ಥ ಮಾರ್ಕಂಡೇಯೇನ ಧೀಮತಾ ॥ ೪೨ ॥

ರಾಜ್ಯೋಪಭೋಗಶಯನಾಸನವಾಹನೇಷು ।
ಸ್ತ್ರೀಗಂಧಮಾಲ್ಯಮಣಿವಸ್ತ್ರವಿಭೂಷಣೇಷು ॥
ಇಚ್ಛಾಭಿಲಾಷಮತಿಮಾತ್ರಮುದೇತಿ ಮೋಹಾತ್ ।
ಧ್ಯಾನಂ ತದಾದ್ಯಮಿತಿ ಸಂಪ್ರವದಂತಿ ತಜ್ಜ್ಞಾಃ ॥ ೪೩ ॥

ಸಂಭೇದನೈರ್ದಹನತಾಡನಪೀಡನೈಶ್ಚ ।
ಗಾತ್ರಪ್ರಹಾರದಮನೈರ್ವಿನಿಕರ್ತನೈಶ್ಚ ॥
ಯಸ್ಯೇಹ ಚೇತಸಿ ಹಿ ಯಾತಿ ನ ಚಾನುಕಂಪಾ ।
ಧ್ಯಾನಂ ತು ರೌದ್ರಮಿತಿ ತತ್ಪ್ರವದಂತಿ ತಜ್ಜ್ಞಾಃ ॥ ೪೪ ॥

ಸೂತ್ರಾರ್ಥಮಾರ್ಗಣಮಹಾವ್ರತಭಾವನಾಭಿಃ ।
ಬಂಧಪ್ರಮೋಕ್ಷಗತಿರಾಗತಿಹೇತುಚಿಂತಾ ॥

---

೪೨—೪೩. ಅಯ್ಯಾ ಕುಂತೀಪುತ್ರನೇ ! ಮೇಧಾವಿಯಾದ ಮಾರ್ಕಂಡೇಯನು ಹಿಂದೆ ನನಗೆ ಹೇಳಿದ್ದನು. ರಾಜ್ಯೋಪಭೋಗ, ಶಯನ, ಆಸನ, ವಾಹನ, ಸ್ತ್ರೀ, ಗಂಧಮಾಲ್ಯ, ಮಣಿ, ವಸ್ತ್ರ, ಅಲಂಕಾರ ಇವುಗಳ ಉಪಭೋಗದಲ್ಲಿ ಅತ್ಯಂತಾಪೇಕ್ಷೆಯು, ಅಜ್ಞಾನವಶದಿಂದ ಉಂಟಾಗುವುದು. ಈ ಉಪಭೋಗಾಪೇಕ್ಷಾರೂಪವಾದ ಧ್ಯಾನವನ್ನು ಆದ್ಯಧ್ಯಾನವೆಂದು ಪ್ರಾಜ್ಞರು ಹೇಳುವರು.

೪೪. ತುಂಡುಮಾಡುವುದು, ಬೆಂಕಿಹೊತ್ತಿಸುವುದು, ಹೊಡೆಯುವುದು, ಪೀಡಿಸುವುದು, ಪರಸ್ಪರ ಮಲ್ಲಯುದ್ಧಮಾಡುವುದು, ಇಂದ್ರಿಯನಿಗ್ರಹಮಾಡದೆ ಇರುವುದು, ಕನ್ನಹಾಕಿ ಕಳವುಮಾಡುವುದು, ಈ ವಿಚಾರಗಳಲ್ಲಿ ನಿರ್ದಯವಾಗಿ ಯಾರ ಮನಸ್ಸು ಸಂಪೂರ್ಣ ಮಗ್ನವಾಗುವುದೋ, ಅದನ್ನು ಪ್ರಾಜ್ಞರು ರೌದ್ರ ಧ್ಯಾನವೆಂದು ಹೇಳುತ್ತಾರೆ.

೪೫. ಸೂತ್ರಾರ್ಥಾನ್ವೇಷಣರೂಪವಾದ ಮಹಾವ್ರತವನ್ನು ಕೈಗೊಂಡಿರುವ ಪುರುಷರು, ಬಂಧ, ಮೋಕ್ಷ, ಗತಿ, ಆಗತಿ, ಹೇತು, (ಎಂದರೆ ಪದಜೋಡಣೆ) ಅನ್ವಯ, ಪ್ರಯೋಜನ, ಯುಕ್ತಿ, ಕಾರಣ, ಇವುಗಳನ್ನು ಹುಡುಕುವುದ

ಪಂಚೇಂದ್ರಿಯಾದ್ಯುಪಶಮಶ್ಚ ಶಮಶ್ಚ ಭೂತೇ ।
ಧ್ಯಾನಂ ತು ಧರ್ಮಮಿತಿ ತತ್ಪ್ರವದಂತಿ ಸಂತಃ ॥ ೪೫ ॥

ಯಸ್ಯೇಂದ್ರಿಯಾಣಿ ವಿಷಯೈರ್ನ ವಿವರ್ಜಿತಾನಿ ।
ಸಂಕಲ್ಪನಾತ್ಮಜವಿಕಲ್ಪವಿಕಾರಯೋಗ್ಯೈಃ ॥
ತತ್ವೇಕನಿಷ್ಠಹೃದಯೋ ನಿಭೃತಾಂತರಾತ್ಮಾ ।
ಧ್ಯಾನಂ ತು ಶುಕ್ಲಮಿತಿ ತತ್ಪ್ರವದಂತಿ ಸಿದ್ಧಾಃ ॥ ೪೬ ॥

ಆದ್ಯೇ ತಿರ್ಯಗಧೋಗತಿಶ್ಚ ನಿಯತಂ ಧ್ಯಾನೇ ತು ರೌದ್ರೇ ಸದಾ ।
ಧರ್ಮೇ ದೇವಗತಿಃ ಶುಭಂ ಫಲಮಹೋ ಶುಕ್ಲೇ ಚ ಜನ್ಮಕ್ಷಯಃ
ತಸ್ಮಾಜ್ಜನ್ಮರುಜಾಪಹೇ ಹಿತತರೇ ಸಂಸಾರನಿರ್ವಾಹಕೇ ।
ಧ್ಯಾನೇ ಶುಕ್ಲತರೇ ರಜಃಪ್ರಮಥನೇ ಕುರ್ಯಾತ್ಪ್ರಯತ್ನಂ ಬುಧಃ॥

---

ರಲ್ಲಿಯೇ ಕಾಲಹರಣಮಾಡುವುದು, ಶ್ರೋತ್ರ (ಕಿವಿ) ತ್ವಕ್ (ಚರ್ಮ) ಜಿಹ್ವಾ (ನಾಲಿಗೆ) ಘ್ರಾಣ (ಮೂಗು) ನೇತ್ರ (ಕಣ್ಣು) ಈ ಐದು ಇಂದ್ರಿಯುಗಳನ್ನು ಶಾಂತಿಯಿಂದಿಡುವುದು, ಇಂದ್ರಿಯನಿಗ್ರಹ, ಭೂತದಯೆ, ಇವುಗಳ ವಿಚಾರವ ಧ್ಯಾನವು ಧರ್ಮ್ಯಧ್ಯಾನವೆಂದು ಸತ್ಪುರುಷರು ಹೇಳುವರು.

೪೬. ಯಾರ ಮನಸ್ಸು ಕಾಮಕ್ರೋಧಾದಿವಿಷಯಗಳಿಂದ ವಿಮುಖವಾಗದೆ, ಸದಾ ಅದರಲ್ಲೇ ನಿರತವಾಗಿ, ನಾನಾವಿಕಾರಹೊಂದಿ ಸದಾ ತದೇಕಮಗ್ನವಾಗಿರುವುದೋ, ಅಂತಹ ಧ್ಯಾನವನ್ನು ಸಿದ್ಧರು ಶುಕ್ಲಧ್ಯಾನವೆಂದು ಹೇಳುವರು.

೪೭. ಉತ್ಕ್ರಮಣಕಾಲದಲ್ಲಿ ರಾಜ್ಯಭೋಗಾದಿವಿಷಯಕವಾದ ಆದ್ಯ ಧ್ಯಾನವಶನಾದರೆ, ಆ ವ್ಯಕ್ತಿಗೆ ಮುಂದೆ ತಿರ್ಯಗ್ಜಂತುಜನ್ಮ ಪ್ರಾಪ್ತವಾಗುವುದು ಖಂಡಿತ. ಉತ್ಕ್ರಮಣಕಾಲವಲ್ಲಿ ರೌದ್ರಧ್ಯಾನವಶನಾದದರೆ ಅಧೋಗತಿ (ನರಕ) ಪ್ರಾಪ್ತಿಯಾಗುವುದು. ಧರ್ಮ್ಯಧ್ಯಾನವಶನಾದರೆ ದೇವಸ್ವರೂಪ ಪ್ರಾಪ್ತಿರೂಪವಾದ ಶುಭಫಲವುಂಟಾಗುವುದು. ಶುಕ್ಲಧ್ಯಾನವಶನಾದರೆ ಅವನ ವಂಶ ಕ್ಷಯವಾಗುವುದು. ಆದುದರಿಂದ ಮುಂದೆ ಪ್ರಾಪ್ತವಾಗುವ ಜನ್ಮವೆಂಬ ವ್ಯಾಧಿಯನ್ನು ತೊಲಗಿಸಿ, ಸಂಸಾರವೆಂಬ ಬಂಧನವನ್ನು ತೊಲಗಿಸುವುದೂ, ಶುಕ್ಲ, ರಜಸ್ಸು, ಇವನ್ನು ನಾಶಮಾಡುವುದೂ ಆದ ಉತ್ತಮವಾದ ಭಗವದ್ಧ್ಯಾನರೂಪವಾದ ಕಾರ್ಯದಲ್ಲಿ ಮನಸ್ಸನ್ನಿಡಲು ಮಾನವನು ಸದಾ ಯತ್ನಿಸಬೇಕು.

ಸಮಾಃ ಸಹಸ್ರಾಣಿ ತು ಸಪ್ತ ವೈ ಜಲೇ ।
ದಶೈಕಮಗ್ನೌ ಪವನೇ ಚ ಷೋಡಶ ॥
ಗವಾಂ ಗೃಹೇ ಷಷ್ಟಿರಶೀತಿರಾಹವೇ ।
ಅನಾಶನೇ ಭಾರತ ಚಾಕ್ಷಯಾ ಗತಿ　　॥ ೪೮ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣಯುಧಿಷ್ಠಿರ ಸಂವಾದೇ ಸಾಂಭರಾಯಣೀ ವ್ರತವರ್ಣನಂನಾಮ ಷಡ್ವಿಂಶತ್ಯುತ್ತರಶತತಮೋಧ್ಯಾಯಃ.



೪೮. ಎಲೈ ಭರತಕುಲತಿಲಕ! ಈ ಪ್ರಕಾರ ನಾನು ಹೇಳಿದ ಅನಶನ ವ್ರತಾಚರಣೆಮಾಡಿದರೆ ಆತನಿಗೆ ಜಲದಲ್ಲಿ ಏಳುಸಾವಿರ ವರ್ಷಗಳೂ, ಅಗ್ನಿಯಲ್ಲಿ ಹತ್ತುಸಾವಿರ ವರ್ಷಗಳೂ, ವಾಯುವಿನಲ್ಲಿ ಹದಿನಾರುಸಾವಿರ ವರ್ಷಗಳೂ ಗೋಗೃಹದಲ್ಲಿ ಅರವತ್ತುಸಾವಿರ ವರ್ಷಗಳೂ, ಯಜ್ಞಗಳಲ್ಲಿ ಎಂಬತ್ತುಸಾವಿರ ವರ್ಷಕಾಲವೂ, ಅಕ್ಷಯವಾದ ಗತಿಯು ಉಂಟಾಗುವುದು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ
ಸಾಂಭರಾಯಣೀ ವ್ರತವರ್ಣನೆಯೆಂಬ
ನೂರಇಪ್ಪತ್ತಾರನೆಯ ಅಧ್ಯಾಯ
ಮುಗಿದುದು.



|| ಶ್ರೀ ||

---

# ಅಥ ಶ್ರೀ ಭವಿಷ್ಯೇ ಮಹಾಪುರಾಣ
## ಉತ್ತರಪರ್ವಣಿ
## ಸಪ್ತವಿಂಶತ್ಯುತ್ತರಶತತಮೋಽಧ್ಯಾಯಃ

---

|| ಯುಧಿಷ್ಠಿರ ಉವಾಚ ||

ತಡಾಗೋತ್ಸರ್ಜನೇ ದೇವ ವಿಧಿಂ ವಿಧಿವಿದಾಂ ವರ ।
ಕಥಯಸ್ವ ಮಹಾಭಾಗ ಮಮ ದೇವಕಿನಂದನ || ೧ ||

ವಾಪೀಕೂಪೋದಕಾನಾಂ ಚ ಕೇ ಮಂತ್ರಾಃ ಪರಿಕೀರ್ತಿತಾಃ ।
ಕೇ ಋತ್ವಿಜೋತ್ರ ಕೇ ಯೂಪಾಃ ಕರ್ತವ್ಯಾಃ ಕುಂಡಮಂಡಪೇ ||೨||

ದಾನಂ ಕಿಮತ್ರ ನಿರ್ದಿಷ್ಟಂ ಬಲಯಃ ಕೇ ಪ್ರಕೀರ್ತಿತಾಃ ।
ಕಸ್ಮಿನ್ಕಾಲೇ ಕಥಂ ಕುರ್ಯಾದಿತ್ಯೇತತ್ಸಕಲಂ ವದ || ೩ ||

---

## ನೂರಇಪ್ಪತ್ತೇಳನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಎಲೈ ಮಹಾಭಾಗನಾದ ದೇವಕೀ ನಂದನನೆ! ತಟಾಕವನ್ನು ನಿರ್ಮಿಸಿ ಅದನ್ನು ಉತ್ಸರ್ಜನಮಾಡುವ ವಿಧಿಯನ್ನು ವಿಧಿಜ್ಞನಾದ ನೀನು ನಿರೂಪಣಮಾಡು.

೨-೩. ಅಲ್ಲದೆ ಸೇದುವಭಾವಿ, ಇಳಿಯುವ ಭಾವಿ, ಕೊಳ ಮುಂತಾದುವುಗಳ ನೀರನ್ನು ಉತ್ಸರ್ಜನಮಾಡಲು ಯಾವ ಮಂತ್ರವು ಉಕ್ತವಾಗಿದೆ? ಈ ಕರ್ಮಕ್ಕೆ ಎಂತಹ ಋತ್ವಿಕ್ಕುಗಳು ಬೇಕು? ಎಷ್ಟು ಜನರಿರಬೇಕು? ಯೂಪವನ್ನು ಹೇಗೆ ರಚಿಸಬೇಕು? ಈ ಕರ್ಮಕ್ಕೆ ಯಾವರೀತಿ ದಾನವಿಧಿ ಏರ್ಪಟ್ಟಿದೆ? ಬಲಿಪ್ರದಾನಕ್ರಮ ಹೇಗೆ? ಎಂತಹ ವಸ್ತುಗಳನ್ನು ಬಲಿಯಾಗಿ ಸಮರ್ಪಿಸಬೇಕು? ಇದನ್ನು ನಡೆಯಿಸಬೇಕಾದ ಕಾಲವು ಯಾವುದು? ಮಾಡುವಕ್ರಮ ಹೇಗೆ? ಇವನ್ನೆಲ್ಲಾ ಕೃಪೆಮಾಡಿ ತಿಳಿಸು ಎಂದನು.

॥ ಶ್ರೀಕೃಷ್ಣ ಉವಾಚ ॥

**ಸಾಧು ಸಾಧು ಮಹಾಬಾಹೋ ಯನ್ಮಾಂ ತ್ವಂ ಪರಿಪೃಚ್ಛಸಿ ।**
**ತಡಾಗವಾಪೀಕೂಪಾನಾಮುತ್ಸರ್ಗಂ ಕಥಯಾಮಿ ತೇ ॥ ೪ ॥**

**ನಿಷ್ಪನ್ನೇ ಬದ್ಧಪಾಲೀಕೇ ಸರ್ವೋದ್ಭೇದವಿವರ್ಜಿತೇ ।**
**ಸೋಪಾನಪಂಕ್ತಿಸಹಿತೇ ಪಾಷಾಣೈಸ್ಸರ್ವತಶ್ಚಿತೇ ॥ ೫ ॥**

**ತಸ್ಮಿನ್ಸಲಿಲಸಂಪೂರ್ಣೇ ಕಾರ್ತಿಕೇ ವಾ ವಿಶೇಷತಃ ।**
**ತಡಾಗಸ್ಯ ವಿಧಿಃ ಕಾರ್ಯಃ ಸ್ಥಿರನಕ್ಷತ್ರಯೋಗತಃ ॥ ೬ ॥**

**ಮುನಯಃ ಕೇಚಿದಿಚ್ಛಂತಿ ವ್ಯತೀತೇಚೋತ್ತರಾಯಣೇ ।**
**ನ ಕಾಲನಿಯಮೋಽಪ್ಯತ್ರ ಪ್ರಮಾಣಂ ಸಲಿಲಂ ಯತಃ ॥ ೭ ॥**

---

೪. ಶ್ರೀಕೃಷ್ಣನು ಹೇಳುತ್ತಾನೆ—ಅಯ್ಯಾ ಮಹಾಬಾಹುವಾದ ಯುಧಿಷ್ಠಿರ! ನೀನು ಪ್ರಶ್ನೆಮಾಡಿದುದು ಸಾಧುವಾಗಿದೆ. ನೀನು ಕೇಳಿದಂತೆ ಕೆರೆ, ವಾಪಿ, ಕೂಪ, ಇವುಗಳ ಉತ್ಸರ್ಗವಿಧಿಯನ್ನು ಹೇಳುವೆನು ಕೇಳು.

೫—೬. ಏರಿಯುಮಧ್ಯೆ ಪೊಳ್ಳು, ಡೊಗರು ಇಲ್ಲದಂತೆ ಬಿಗಿಯಾಗಿ ಏರಿಯನ್ನು ಹಾಕಿ ಉದ್ದಕ್ಕೂ ಅದಕ್ಕೆ ಕಲ್ಲುಗಳನ್ನು ಜೋಡಿಸಿ, ಸೋಪಾನಪಂಕ್ತಿಗಳನ್ನು ಸಿದ್ಧಪಡಿಸಿದನಂತರ ಮಳೆಯಿಂದ ಕೆರೆಗೆ ಹೇರಳವಾಗಿ ನೀರುಬಂದು ತುಂಬಿರುವಾಗ, ಬಹುತರವಾಗಿ ಕಾರ್ತಿಕಮಾಸದಲ್ಲೋ, ಅದಕ್ಕೆ ಮುಂಚೆ ನೀರು ತುಂಬಿದ್ದರೆ ಮಾಸದ ನಿಬಂಧನೆಯಿಲ್ಲದೆಯೋ ಸ್ಥಿರನಕ್ಷತ್ರದಿಂದಲೂ, ಶುಭಯೋಗಾದಿಗಳಿಂದಲೂ, ಯುಕ್ತವಾದ ಶುಭದಿನದಲ್ಲಿ, ತಟಾಕದ ಉತ್ಸರ್ಜನವನ್ನು ಮಾಡಬೇಕು.

೭. ಕೆಲವರು ಮಹರ್ಷಿಗಳು ಉತ್ತರಾಯಣ ಕಳೆದನಂತರ ಈ ಕಾರ್ಯ ಮಾಡಬೇಕೆಂದು ಹೇಳುವರು. ಆದರೆ ಈ ವಿಧಿಗೆ ನೀರು ತುಂಬುವುದೇ ಮುಖ್ಯವಾದುದರಿಂದ, ಕಾಲನಿಯಮ (ಮಾಸನಿರ್ದೇಶ) ವನ್ನೇನೂ ಹೆಚ್ಚಾಗಿ ಗಮನಿಸಬೇಕಾದ್ದಿಲ್ಲ.

ತಡಾಗಪಾಲಶೀರ್ಷೇ ತು ಮಂಡಲಂ ಕಾರಯೇಚ್ಛುಭಂ ।
ದಶದ್ವಾದಶಹಸ್ತಂ ಚ ಚತುರ್ದ್ವಾರಂ ಸುವಿಸ್ತೃತಂ ॥ ೮ ॥

ತೋರಣಾನಿ ಚ ಚತ್ವಾರಿ ಚತುರ್ದಿಕ್ಷು ವಿಚಕ್ಷಣೈಃ ।
ಅಶ್ವತ್ಥೋದುಂಬರಪ್ಲಕ್ಷವಟಶಾಖಾಮಯಾನಿ ಚ ॥ ೯ ॥

ನಾನಾವರ್ಣಾಸ್ತು ಪರಿತಃ ಪತಾಕಾಃ ಪರಿಕಲ್ಪಯೇತ್ ।
ಮಧ್ಯೇ ಮಹಾಧ್ವಜಃ ಕಾರ್ಯಃ ಪಂಚವರ್ಣಸ್ಸುಶೋಭನಃ ॥ ೧೦ ॥

ಚತುರ್ಹಸ್ತಾ ಭವೇದ್ವೇದೀ ಮಧ್ಯೇ ಪಂಚಕರಾಥ ವಾ ।
ಯಜಮಾನಪ್ರಮಾಣೇನ ಮಧ್ಯೇ ಯೂಪೇನ ಶೋಭಿತಾ ॥ ೧೧ ॥

---

೮. ಕೆರೆಯ ಏರಿಯ ಮೇಲೆ ಶುಭಕರವಾದ ಒಂದು ಮಂಡಲವನ್ನು ರಚಿಸಬೇಕು. ಅದು ಹತ್ತುಹಸ್ತ ಅಥವಾ ಹನ್ನೆರಡುಹಸ್ತ ಪ್ರಮಾಣವುಳ್ಳದ್ದಾಗಿರಬೇಕು. ಈ ಮಂಡಲಕ್ಕೆ ಆವರಣವಾಗಿ ವಿಸ್ತಾರವಾದ ನಾಲ್ಕು ಬಾಗಿಲುಗಳನ್ನುಳ್ಳ ಒಂದು ಮಂಟಪವನ್ನು ರಚಿಸಬೇಕು.

೯. ಈ ಮಂಡಲದ ಹೊರಭಾಗದಲ್ಲಿನ ನಾಲ್ಕು ದಿಕ್ಕಿನಲ್ಲಿಯೂ ಸುಂದರವಾಗಿರುವಂತೆ ತೋರಣಗಳನ್ನು ಕಟ್ಟಬೇಕು. ಪ್ರಾಜ್ಞನಾದವನು ನಾಲ್ಕು ದಿಕ್ಕುಗಳಲ್ಲಿಯೂ ಅರಳಿ, ಅತ್ತಿ, ಫಣಿಯಾಲ, ಆಲ ಈ ಮರಗಳ ಕುಡಿಗಳು, ಎಲೆಗಳು ಇವುಗಳಿಂದ ಅಲಂಕರಿಸಬೇಕು.

೧೦. ಸುತ್ತಲೂ ನಾನಾವರ್ಣದ ಪತಾಕೆಗಳನ್ನೂ, ಮಧ್ಯಭಾಗದಲ್ಲಿ ಐದು ಬಣ್ಣದಿಂದ ಕೂಡಿದ ಸುಂದರವಾದ ಮಹಾಧ್ವಜವನ್ನೂ ಸ್ಥಾಪಿಸಬೇಕು.

೧೧. ಯಜಮಾನನ ಹಸ್ತಪ್ರಮಾಣದಲ್ಲಿ ನಾಲ್ಕುಹಸ್ತ ಅಳತೆಯಿರುವಂತೆ ವೇದಿಕೆಯನ್ನು ರಚಿಸಬೇಕು. ಅಥವಾ ಐದುಹಸ್ತಪ್ರಮಾಣವಾದರೂ ಇರಬಹುದು. ಈ ವೇದಿಕೆಯ ಮಧ್ಯದಲ್ಲಿ ಶೋಭಿಸುವಂತೆ ರಚಿಸಿದ ಯೂಪಸ್ತಂಭವನ್ನು ನೆಡಬೇಕು.

ಕದಂಬಾಶ್ವತ್ಥಪಾಲಾಶವೈಕಂಕತಮಯಃ ಶುಭಃ |
ಬ್ರಾಹ್ಮಣಸ್ಯಾಸ್ಯ ನಿರ್ದಿಷ್ಟೋ ಯೂಪಃ ಶ್ರುತಿವಿಚಕ್ಷಣೈಃ ॥ ೧೨ ॥

ನ್ಯಗ್ರೋಧಬಿಲ್ವಜಃ ಪ್ರೋಕ್ತಃ ಕ್ಷತ್ರಿಯಾಣಾಂ ಚ ಖಾದಿರಃ |
ವೈಶ್ಯಸ್ಯೋದುಂಬರಮಯೋ ಮಧ್ವರ್ಜುನಸಮುದ್ಭವಃ ॥ ೧೩ ॥

ಬಿಭೀತಕೋದುಂಬರಜಃ ಶಾಕಶಾಲ್ಮಲಿಸಂಭವಃ |
ಶೂದ್ರಸ್ಯ ಯೂಪೋ ನಿರ್ದಿಷ್ಟಃ ಸಾರದಾರುಮಯೋಽಥ ವಾ ॥೧೪॥

ಲೋಕಪಾಲಾಷ್ಟಕಂ ತತ್ರ ರಜಸಾ ಚ ವಿಲೇಖಯೇತ್ |
ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಕಮಲಾ ಚಾಂಬಿಕಾ ತಥಾ ॥ ೧೫ ॥

ಸಾವಿತ್ರೀ ಸಹಿತಾ ಕಾರ್ಯಾ ಪುಷ್ಪಧೂಪೈರಥಾರ್ಚಯೇತ್ |
ಕುರ್ಯಾತ್ಕುಂಡಾನಿ ಚತ್ವಾರಿ ಚತುರ್ದಿಕ್ಷು ವಿಚಕ್ಷಣಃ ॥ ೧೬ ॥

---

೧೨. ಬ್ರಾಹ್ಮಣರು ಮಾಡುವ ಈ ಕಾರ್ಯಕ್ಕೆ ಕದಂಬ, ಅಶ್ವತ್ಥ, ಮುತ್ತುಗ, ವೈಕಂಕತ (ನಾಯಿಬೇಲ) ಈ ಮರಗಳಿಂದ ಮಾಡಿಸಿದ ಯೂಪಸ್ತಂಭವು ಶ್ರೇಷ್ಠವಾದುದೆಂದು ಶ್ರುತಿವಿಚಕ್ಷಣರು ನಿಷ್ಕರ್ಶಿಸಿದ್ದಾರೆ.

೧೩. ಆಲದಮರ, ಬಿಲ್ವಪತ್ರೆಯಮರ, ಕಗ್ಗಲಿಮರ ಇವುಗಳಿಂದ ಮಾಡಿಸಿದ ಯೂಪವು ಕ್ಷತ್ರಿಯರಿಗೆ ಶ್ರೇಷ್ಠ. ಅತ್ತಿಯಮರ, ಹಿಪ್ಪೆಯಮರ, ಮತ್ತಿಯಮರ (ಅರ್ಜುನವೃಕ್ಷ) ಇವುಗಳಿಂದ ಮಾಡಿದ ಯೂಪವು ವೈಶ್ಯರಿಗೆ ಶ್ರೇಷ್ಠವೆಂದು ನಿರ್ದಿಷ್ಟವಾಗಿದೆ.

೧೪. ತಾರೆಯಮರ, ಅತ್ತಿಯಮರ, ಶಾಕವೃಕ್ಷ, ಬೂರುಗ (ಶಾಲ್ಮಲಿ) ಮರ ಇವುಗಳಿಂದಾಗಲಿ, ಸಾರವತ್ತಾದ ಇತರ ಮರಗಳಿಂದಾಗಲಿ ಮಾಡಿದ ಯೂಪವು ಶೂದ್ರರಿಗೆ ಶ್ರೇಷ್ಠವೆಂದು ವಿಹಿತವಾಗಿದೆ.

೧೫-೧೬. ಆ ಮಂಡಲದ ಸಮೀಪದಲ್ಲಿ ಎಂಟು ದಿಕ್ಕುಗಳಲ್ಲಿಯೂ ಎಂಟು ಮಂದಿ ಲೋಕಪಾಲಕರನ್ನು ರಂಗವಲ್ಲಿಯಿಂದ ಬರೆದು ಆವಾಹಿಸಬೇಕು. ಅಲ್ಲದೆ ಬ್ರಹ್ಮ, ವಿಷ್ಣು, ಮಹೇಶ್ವರ, ಸಾವಿತ್ರಿ, ಕಮಲಾ, ಅಂಬಿಕೆ ಇವರುಗಳನ್ನೂ ರಂಗವಲ್ಲಿಯಿಂದ ಬರೆದು ಆವಾಹನೆಮಾಡಿ ಪುಷ್ಪಧೂಪಾದಿಗಳಿಂದ ಪೂಜಿಸಬೇಕು. ಮತ್ತು ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಕುಂಡಗಳನ್ನು ಯಥೋಕ್ತ ಲಕ್ಷಣಯುಕ್ತವಾಗಿರುವಂತೆ ವಿಧ್ಯುಕ್ತವಾಗಿ ರಚಿಸಬೇಕು.

ಮೇಖಲಾತ್ರಯಯುಕ್ತಾನಿ ಹಸ್ತಮಾತ್ರಾಣಿ ಸರ್ವತಃ ।
ಹೇಮಾಲಂಕಾರಿಣಃ ಕಾರ್ಯಾ ಹೋತಾರಃ ಷೋಡಶಾಷ್ಟ ವಾ ॥ ೧೭ ॥

ಅಹತಾಂಬರಸಂವೀತಾಃ ಸ್ರಕ್ಚಂದನವಿಭೂಷಿತಾಃ ।
ಸ್ಥಾಪಕಾಶ್ಚಾತ್ರ ವಿಹಿತಾ ವೇದವೇದಾಂಗಪಾರಗಾಃ ॥ ೧೮ ॥

ಇತಿಹಾಸಪುರಾಣಜ್ಞಾಃ ಪ್ರಿಯವಾಚೋಽನಸೂಯಕಾಃ ।
ಮೃನ್ಮಯಾನಿ ಚ ಪಾತ್ರಾಣಿ ತಾಮ್ರಾಣಿ ಸ್ರುಕ್ಸ್ರುವಂ ತಥಾ ॥ ೧೯ ॥

ವ್ಯಂಜನಾನಿ ಚ ಕಾರ್ಯಾಣಿ ಹೋಮಾರ್ಥಂ ಸಮಿಧಸ್ತಿಲಾಃ ।
ಗ್ರಹಯಜ್ಞವಿಧಾನೇನ ಹೋಮಃ ಕಾರ್ಯೋ ವಿಜಾನತಾ ॥ ೨೦ ॥

---

೧೭. ಆ ಕುಂಡಗಳ ಸುತ್ತಲೂ ಒಂದುಹಸ್ತ ಪ್ರಮಾಣದಲ್ಲಿ ಮೂರು ಮೇಖಲೆಗಳನ್ನು ರಚಿಸಬೇಕು. ಅದರಲ್ಲಿ ಹೋಮಕರ್ಮವನ್ನು ನಡೆಯಿಸಲು ಸುವರ್ಣಕುಂಡಲಾದ್ಯಲಂಕೃತರಾದ ಹದಿನಾರುಮಂದಿ ಅಥವಾ ಎಂಟುಮಂದಿ ಹೋತೃಗಳು ಇರಬೇಕು.

೧೮. ಇವರೆಲ್ಲರೂ ಹರಿದಿಲ್ಲದ ವಸ್ತ್ರವನ್ನು ಧರಿಸಿ, ಅಂಥದೇ ವಸ್ತ್ರವನ್ನು ಹೊದೆದು, ಪುಷ್ಪಮಾಲೆ, ಚಂದನ ಇವುಗಳಿಂದ ಅಲಂಕೃತರಾಗಿರಬೇಕು. ಮತ್ತು ಅವರು ವೇದವೇದಾಂಗಪಾರಂಗತರಾಗಿರಬೇಕು. ಅಂಥ ವೇದಜ್ಞರನ್ನೇ ಹೋತೃಗಳಾಗಿ ನಿಯಮಿಸಬೇಕು.

೧೯. ಅಲ್ಲದೆ ಅವರು ಇತಿಹಾಸ ಪುರಾಣಾದಿಗಳನ್ನು ಅರಿತವರಾಗಿರಬೇಕು. ಮತ್ತು ಅಸೂಯಾರಹಿತರೂ, ಹಿತವಚನವನ್ನೇ ಸದಾ ಆಡತಕ್ಕವರೂ ಆಗಿರಬೇಕು. ಈ ಕಾರ್ಯದಲ್ಲಿ ಉಪಯೋಗಕ್ಕೆ ಮಣ್ಣಿನ ಪಾತ್ರೆಗಳನ್ನೋ ಅಥವಾ ತಾಮ್ರದ ಪಾತ್ರೆಗಳನ್ನೋ ಸಿದ್ಧಮಾಡಿಕೊಳ್ಳಬೇಕು. ಅಲ್ಲದೆ ಉತ್ತಮವಾದ ಮರದಲ್ಲಿ ಸ್ರುಕ್, ಸ್ರುವ ಇವುಗಳನ್ನು ಮಾಡಿಸಬೇಕು.

೨೦. ಬುದ್ಧಿಶಾಲಿಯಾದವನು ಹೋಮಕ್ಕೋಸ್ಕರ ಸಮಿತ್ತು, ಎಳ್ಳು ಮುಂತಾದ ಸಾಮಗ್ರಿಗಳನ್ನು ಸಿದ್ಧಪಡಿಸಿ, ಗ್ರಹಯಜ್ಞವಿಧಿಯನ್ನು ಅನುಸರಿಸಿ ಹೋಮಮಾಡಬೇಕು.

**ವೇದ್ಯಾಧಿವಾಸಿತಾನಾಂ ಚ ಸುರಾಣಾಂ ಹೋಮ ಇಷ್ಯತೇ ।**
**ವಾರುಣೈಸ್ತು ತಥಾ ಮಂತ್ರೈರ್ಹೋತವ್ಯಂ ಪುಷ್ಟಿವರ್ಧನಂ ॥ ೨೧ ॥**

**ಇಂದ್ರಾದಿಲೋಕಪಾಲಾನಾಂ ಪೂರ್ವಾದಿಕ್ರಮಯೋಗತಃ ।**
**ಬಲಿಂ ದದ್ಯಾಚ್ಚ ತಲ್ಲಿಂಗೈರ್ಮಂತ್ರೈಸ್ಸರ್ವಾರ್ಥಸಿದ್ಧಯೇ ॥ ೨೨ ॥**

**ದ್ವಾರೇಷು ಕಲಶಾ ದದ್ಯಾತ್ಸಹಿರಣ್ಯಾನ್ಸಪಲ್ಲವಾನ್ ।**
**ಅಶ್ವತ್ಥಪಲ್ಲವೈಃ ಕಾರ್ಯಾಃ ಶುಭಾಶ್ಚಂದನ ಮಾಲಿಕಾಃ ॥ ೨೩ ॥**

**ಸೌವರ್ಣಂ ಕಾರಯೇತ್ಕೂರ್ಮಂ ತಾಮ್ರೇಣ ಮಕರಂ ತಥಾ ।**
**ರಜತೇನ ತಥಾ ಮತ್ಸ್ಯಂ ತ್ರಪುಣಾ ದರ್ದುರಂ ತಥಾ ॥ ೨೪ ॥**

**ಶಿಶುಮಾರಜಲೌಕಾಂಚ ರಜತೇನೈವ ಕಾರಯೇತ್ ।**
**ಸರ್ವಾನಪಿ ಯಥಾಸ್ಥಾನಂ ತಾಮ್ರಪಾತ್ರ್ಯಾಂ ನಿಧಾಪಯೇತ್ ॥ ೨೫ ॥**

---

೨೧. ವೇದಿಕೆಯಲ್ಲಿ ಅಧಿವಾಸ (ಆವಾಹನ) ಮಾಡಿರುವ ದೇವತೆಗಳಿಗೆಲ್ಲಾ ವರುಣಸಂಬಂಧವಾದ ಮಂತ್ರಗಳಿಂದ ಹೋಮದಲ್ಲಿ ಆಹುತಿಕೊಡಬೇಕು. ಇದರಿಂದ ದೇಹಪುಷ್ಟಿ ಹೆಚ್ಚುವುದು.

೨೨. ಇಂದ್ರಾದ್ಯಷ್ಟದಿಕ್ಪಾಲಕರಿಗೆ ಪೂರ್ವ, ಆಗ್ನೇಯ, ದಕ್ಷಿಣ ಈರೀತಿ ದಿಕ್ಕುಗಳ ಕ್ರಮವನ್ನು ಅನುಸರಿಸಿ, ಆಯಾ ದೇವತೆಗಳಿಗೆ ಉಕ್ತವಾದ ಮಂತ್ರಗಳಿಂದ ಬಲಿಸಮರ್ಪಣೆಮಾಡಬೇಕು. ಇದರಿಂದ ಸಮಸ್ತ ಅಭೀಷ್ಟಗಳೂ ಸಿದ್ಧಿಸುವುವು.

೨೩. ನಾಲ್ಕು ದ್ವಾರಗಳಲ್ಲಿಯೂ ಜಲಪೂರ್ಣವಾದ ಕಲಶಗಳನ್ನಿಟ್ಟು, ಅದರಲ್ಲಿ ಸುವರ್ಣವನ್ನೂ, ಜತೆಯಲ್ಲಿ ಚಿಗುರುಗಳನ್ನೂ ಹಾಕಬೇಕು. ಅನಂತರ ಅರಳಿಯ ಚಿಗುರುಗಳಿಂದಲೂ ಶುಭಕರವಾದ ಚಂದನದಿಂದಲೂ ಅಲಂಕರಿಸಿ ಮಾಲಿಕೆಗಳನ್ನು ಹಾಕಬೇಕು.

೨೪-೨೫. ಚಿನ್ನದಿಂದ ಆಮೆಯನ್ನೂ, ತಾಮ್ರದಿಂದ ಮೊಸಳೆಯನ್ನೂ, ಬೆಳ್ಳಿಯಿಂದ ಮೀನನ್ನೂ, ತವರದಿಂದ (ದರ್ದುರ) ಕಪ್ಪೆಯನ್ನೂ, ಬೆಳ್ಳಿಯಿಂದ ನೀರ್ನುದುರೆ, ನೀರಾನೆ, ಜಿಗಣೆ ಮುಂತಾದುವನ್ನೂ ಮಾಡಿಸಬೇಕು. ಹೀಗೆ ಮಾಡಿಸಿದ ಪ್ರಾಣಿಗಳನ್ನು ತಾಮ್ರದ ಪಾತ್ರೆಯೊಳಗೆ ಅವುಗಳಿಗೆ ಅನುಕೂಲವಾದ ಸ್ಥಾನದಲ್ಲಿಡಬೇಕು.

ಏಷಾ ಪ್ರತಿಷ್ಠಾ ನಾಮೇತಿ ಮಂತ್ರೇಣಾಮಂತ್ರಯೇಚ್ಚ ತಾಃ ।
ಯೂಪಪ್ರತಿಷ್ಠಾ ಕರ್ತವ್ಯಾ ವೇದೋಕ್ತವಿಧಿನಾ ತತಃ ॥ ೨೬ ॥

ಕುಂಕುಮೇನ ಸಮಾಲಭ್ಯ ಪುಷ್ಪೈರ್ಧೂಪೈಸ್ಸಮರ್ಚಯೇತ್ ।
ವಸ್ತ್ರಯುಗ್ಮೇನ ಸಂಪೂಜ್ಯ ನೈವೇದ್ಯಾದಿ ಯಥಾಕ್ರಮಂ ॥ ೨೭ ॥

ತತೋ ದ್ವಿಜಾತಿಪ್ರವರಃ ಶ್ರಪಯಿತ್ವಾ ಚರುಂ ನವಂ ।
ತತಶ್ಚಾಗ್ನ್ಯಾಹುತೀರ್ದದ್ಯಾದ್ಭೂರ್ಭುವಃಸ್ವರಿತಿ ಕ್ರಮಾತ್ ॥ ೨೮ ॥

ತತಶ್ಚಾವಾಹಯೇದ್ದೇವಂ ವರುಣಂ ಸರಿತಾಂ ಪತಿಂ ।
ವಾದಿತ್ರಘೋಷೈರ್ಗೀತೈಶ್ಚ ಗಂಧಮಾಲ್ಯಾನುಲೇಪನೈಃ ॥ ೨೯ ॥

ಶ್ವೇತೇನೈವ ತು ವಸ್ತ್ರೇಣ ಶಿರೋವೇಷ್ಟಂ ತು ಕಾರಯೇತ್ ।
ಆದಾಯ ತಾಮ್ರಪಾತ್ರೀಂ ತು ಬ್ರಹ್ಮಘೋಷಪುರಸ್ಸರಃ ॥ ೩೦ ॥

---

೨೬. ಅನಂತರ "ಏಷಾಪ್ರತಿಷ್ಠಾನಾಮ" ಎಂಬ ಮಂತ್ರದಿಂದ ಅವುಗಳೆಲ್ಲವನ್ನೂ ಆಮಂತ್ರಣಮಾಡಿ, ಅನಂತರ ವೇದೋಕ್ತವಿಧಿಯಂತೆ ಯೂಪವನ್ನು ಪ್ರತಿಷ್ಠೆಮಾಡಬೇಕು.

೨೭-೨೮. ಆ ಯೂಪವನ್ನು ಕುಂಕುಮ, ಪುಷ್ಪ, ಧೂಪ ಮುಂತಾದುವುಗಳಿಂದ ಪೂಜಿಸಬೇಕು. ಆಮೇಲೆ ವಸ್ತ್ರಯುಗ್ಮವನ್ನು ಸಮರ್ಪಿಸಿ, ಕ್ರಮವಾಗಿ ನೈವೇದ್ಯಾದಿಗಳನ್ನು ಮಾಡಬೇಕು. ಹೊಸದಾಗಿ ಚರುವನ್ನು ಬೇಯಿಸಿ, ಹೋಮಕ್ಕೆ ಸಿದ್ಧಮಾಡಿ ಆ ಚರುವಿನಿಂದ 'ಭೂರ್ಭುವಸ್ಸುವಃ' ಎಂಬ ಮಂತ್ರಗಳಿಂದ ಅಗ್ನಿಗೆ ಆಹುತಿಗಳನ್ನು ಕೊಡಬೇಕು. ಎಂದರೆ ಓಂ ಭೂಃಸ್ವಾಹಾ ಅಗ್ನಯಇದಂನಮಮ ಭುವಃ ಸ್ವಾಹಾ ವಾಯುವ ಇದಂನಮಮ. ಈ ರೀತಿಯಾಗಿ ಹೇಳಬೇಕು.

೨೯. ಅನಂತರ ಯಜಮಾನನು ತನ್ನ ತಲೆಗೆ ಬಿಳಿಯಬಣ್ಣದ ಬಟ್ಟೆಯನ್ನು ಸುತ್ತಿಕೊಂಡು, ನಾನಾವಿಧವಾದ ವಾದ್ಯಘೋಷಗಳು, ಸಂಗೀತ ಇವುಗಳು ಆಗುತ್ತಿರುವಾಗ ಗಂಧ ಮಾಲ್ಯ ಅನುಲೇಪನಗಳೊಡನೆ.

೩೦. ಲೋಹಜಲಚರಗಳನ್ನು ಸ್ಥಾಪಿಸಿದ್ದ ತಾಮ್ರಪಾತ್ರೆಯನ್ನು ತೆಗೆದುಕೊಂಡು ಬ್ರಾಹ್ಮಣರು ವೇದಘೋಷಮಾಡುತ್ತಿರುವಾಗ ಸರಿತ್ಪತಿಯಾದ ವರುಣನನ್ನು ಆವಾಹನೆಮಾಡಬೇಕು.

ಅಪ್ರಮಾಣಂ ಜಲಂ ಗತ್ವಾ ವರುಣಾಯ ನಿವೇದಯೇತ್ ।
ತ್ವಂ ವರುಣ ಇತಿಮಂತ್ರೇಣ ಜಲಮಧ್ಯೇ ಪ್ರವಾಹಯೇತ್ ॥ ೩೧ ॥

ಯಚ್ಚಾನ್ಯದ್ವಸ್ತ್ರಬೀಜಾನಿ ತತ್ಸರ್ವಂ ಮಜ್ಜಯೇಜ್ಜಲೇ ।
ತಾರಯೇಚ್ಚ ತತೋ ಧೇನುಂ ದಕ್ಷಿಣಾಯಾ ಉದಗ್ವ್ರಜೇತ್ ॥ ೩೨ ॥

ಗೋಶಿರೋ ವೇಷ್ಟನಂ ಕುರ್ಯಾತ್ ಸತಿ ವಸ್ತ್ರೇ ತು ಬುದ್ಧಿಮಾನ್ ।
ಲಾಂಗೂಲಸ್ಯಾಗ್ರಮಾದಾಯ ಅವತೀರ್ಯ ತತೋ ಜಲಂ ॥ ೩೩ ॥

ಜ್ಞಾತಿಭಿಸ್ಸಹಿತಃ ಕರ್ತಾ ಸಭಾರ್ಯಶ್ಚಾವಗಾಹಯೇತ್ ।
ತತೋಽವತೀರ್ಯ ಸಲಿಲಾದ್ದತ್ವಾ ತಾಂ ಬ್ರಾಹ್ಮಣಾಯ ಗಾಂ ॥
ಶಕ್ತ್ಯಾ ಚ ದಕ್ಷಿಣಾಂ ದದ್ಯಾದ್ದೇವಂ ವಿಪ್ರಾನ್ವಿಸರ್ಜಯೇತ್ ॥ ೩೪ ॥

---

೩೧. ಆಳದ ಪ್ರಮಾಣವನ್ನು ಸುಲಭವಾಗಿ ತಿಳಿಯಲು ಆಗದೆ ಇರುವಷ್ಟು (ತುಂಬಾ ಆಳವಾದ) ನೀರುಳ್ಳ ಸ್ಥಳಕ್ಕೆ ಹೋಗಿ, ಅಲ್ಲಿ ನೀರಿನ ಮಧ್ಯಭಾಗದಲ್ಲಿ 'ತ್ವಂ ವರುಣ' ಎಂಬ ಮಂತ್ರಪೂರ್ವಕವಾಗಿ ಆ ಪಾತ್ರೆಯಲ್ಲಿದ್ದ ನೀರು, ಪಲ್ಲವ ಮತ್ತು ಲೋಹಜಲಚರಗಳು ಇವನ್ನೆಲ್ಲಾ ಕೊಚ್ಚಿ ಬಿಡಬೇಕು.

೩೨. ಆ ಕಲಶದಲ್ಲಿದ್ದ ವಸ್ತ್ರ, ಧಾನ್ಯ, ಕಾಳುಗಳು ಇವೆಲ್ಲವನ್ನೂ ನೀರಿನಲ್ಲಿ ಮುಳುಗಿಸಬೇಕು. ಅನಂತರ ಆ ನೀರಿನಲ್ಲಿ ದಕ್ಷಿಣದಿಕ್ಕಿನಿಂದ ಉತ್ತರದಿಕ್ಕಿಗೆ ಹೋಗುವಂತೆ ಹಸುವನ್ನು ಈಜುಬಿಡಬೇಕು.

೩೩. ವಸ್ತ್ರದ ಉದ್ದ ಅಧಿಕವಾಗಿದ್ದರೆ ಅದನ್ನು ಹಸುವಿನ ತಲೆಗೆ ಕಟ್ಟಿ, ಬುದ್ಧಿವಂತನಾದವನು ಆ ಹಸುವಿನ ಬಾಲವನ್ನು ಹಿಡಿದುಕೊಂಡು ನೀರಿಗೆ ಇಳಿಯಬೇಕು.

೩೪. ಅನಂತರ ತನ್ನ ಜ್ಞಾತಿಗಳೊಡನೆ ಯಜಮಾನನು ಪತ್ನೀಸಮೇತನಾಗಿ ನೀರಿನಲ್ಲಿ ಮುಳುಗಿ ಅನಂತರ ನೀರಿನಿಂದ ಮೇಲಕ್ಕೆ ಬಂದು ಆ ಗೋವನ್ನು ಬ್ರಾಹ್ಮಣನಿಗೆ ದಾನಮಾಡಬೇಕು. ಜತೆಯಲ್ಲಿ ತನ್ನ ಶಕ್ತ್ಯನುಸಾರ ದಕ್ಷಿಣೆಯನ್ನು ಸಮರ್ಪಿಸಿ ಆವಾಹನೆಮಾಡಿದ್ದ ದೇವರುಗಳನ್ನು ವಿಸರ್ಜನೆಮಾಡಬೇಕು. ಮತ್ತು ಬ್ರಾಹ್ಮಣರನ್ನು ಸಂತೋಷಪಡಿಸಿ ಅವರ ಮನೆಗಳಿಗೆ ಕಳುಹಿಸಿಕೊಡಬೇಕು.

ಸಾಮಾನ್ಯಂ ಸರ್ವಭೂತೇಭ್ಯೋ ಮಯಾ ದತ್ತಮಿದಂ ಜಲಂ ।
ಏವಂ ಜಲಾಂಜಲಿಂ ಕ್ಷಿಪ್ತ್ವಾ ಪೂಜಯೇಜ್ಜಲಮಾತರಃ ॥ ೩೫ ॥

ತೋಷ್ಯಾಃ ಕರ್ಮಕರಾಸ್ಸರ್ವೇ ಕುದ್ದಾಲಾನಿ ಚ ಪೂಜಯೇತ್ ।
ಅವಾರಿತಂ ತು ದಾತವ್ಯಂ ಮಂತ್ರಪೂರ್ವಂ ದಿನತ್ರಯಂ ॥ ೩೬ ॥

ಏಕಾಹಂ ಚ ಯಥಾಶಕ್ತ್ಯಾ ವಿತ್ತಶಾಠ್ಯಂ ನ ಕಾರಯೇತ್ ।
ಗೋ ಸಹಸ್ರಂ ತದರ್ಧಂ ವಾ ತಸ್ಯಾರ್ಧಮಥ ವಾಪಿ ವಾ ॥ ೩೭ ॥

ಶತಮರ್ಧಶತಂ ವಾಪಿ ಪಂಚವಿಂಶತಿಮೇವ ವಾ ।
ತಾಸಾಮಭಾವೇ ಗಾಂ ದದ್ಯಾತ್ಸವತ್ಸಾಂ ಕಾಂಸ್ಯದೋಹನಾಂ ॥ ೩೮ ॥

---

೩೫. "ನಾನು ಕೊಡುವ ಜಲವು ಸಾಮಾನ್ಯವಾಗಿ ಸಕಲಭೂತಗಳಿಗೂ ಪ್ರೀತಿಯನ್ನುಂಟುಮಾಡಲಿ" ಎಂದು ಬೊಗಸೆಯಿಂದ ನೀರನ್ನು ಎತ್ತಿ ಎರಚಿ, ಜಲಾಭಿಮಾನಿಗಳಾದ ಮಾತೃಗಳನ್ನು ಭಕ್ತಿಯಿಂದ ವಿಧಿಪ್ರಕಾರ ಪೂಜೆಮಾಡಬೇಕು.

೩೬. ಅನಂತರ ತಟಾಕನಿರ್ಮಾಣಕ್ಕಾಗಿ ದುಡಿದ ಕೆಲಸಗಾರರನ್ನೆಲ್ಲಾ ಉಚಿತವಾದ ಸನ್ಮಾನಗಳಿಂದ ಸಂತೋಷಪಡಿಸಿ, ಬಳಿಕ ಕೆಂಪುಕಂಚುವಾಳದ ಹೂವಿನ ಗಿಡವನ್ನು ಪೂಜಿಸಬೇಕು. ಮತ್ತು ಆಯುಧಗಳನ್ನೆಲ್ಲಾ ಪೂಜೆಮಾಡಬೇಕು. ಈ ಕಾರ್ಯ ನಡೆಯಿಸಿದನಂತರ ಮೂರುದಿನಗಳವರೆಗೆ ತಡೆಯಿಲ್ಲದೆ ಮಂತ್ರಪೂರ್ವಕವಾಗಿ ದಾನಕೊಡುತ್ತಿರಬೇಕು.

೩೭-೩೮. ಅಷ್ಟಕ್ಕೆ ಶಕ್ತಿಯಿಲ್ಲದಿದ್ದರೆ ಒಂದುದಿನವಾದರೂ ತನ್ನ ಯೋಗ್ಯತಾನುಸಾರ ದಾನಮಾಡಬೇಕು. ಇಂಥ ಸಂದರ್ಭದಲ್ಲಿ ಎಂದಿಗೂ ಜಿಪುಣತನ ಮಾಡಬಾರದು. ದ್ರವ್ಯಾನುಕೂಲ ಚೆನ್ನಾಗಿದ್ದವರು ಸಾವಿರಗೋವುಗಳನ್ನು ದಾನಮಾಡಬಹುದು. ಇಲ್ಲದಿದ್ದರೆ ಇದರ ಅರ್ಧ ಎಂದರೆ ಐದುನೂರು ಗೋವನ್ನೋ, ಅಥವಾ ಅದರ ಅರ್ಧ ಎಂದರೆ ಇನ್ನೂರೈವತ್ತು, ಅಥವಾ ನೂರು ಗೋವು ಅಥವಾ ಐವತ್ತು ಗೋವು, ಅದೂ ಆಗದಿದ್ದರೆ ಇಪ್ಪತ್ತೈದು, ಇಷ್ಟಕ್ಕೂ ಶಕ್ತಿಯಿಲ್ಲದಿದ್ದರೆ ಎಳಗರುಸಮೇತವಾದ ಒಂದು ಕರೆಯುವ ಹಸುವನ್ನಾದರೂ ಹಾಲುಕರೆಯುವ ಕಂಚಿನ ಪಾತ್ರೆಸಹಿತ ದಾನಕೊಡಬೇಕು.

[illegible] ರಾಜಂಸ್ತಡಾಗಸ್ಯ ವಿಧಿಸ್ತೇ ಪರಿಕೀರ್ತಿತಃ ।
ವಾಪೀಕೂಪವಿಧಾನಂ ಚ ಕಥಯಾಮಿ ತಥಾ ಪರಂ ॥ ೩೯ ॥

ಕುಂಡಮಂಡಪಸಂಭಾರಭೂಷಣಾಚ್ಛಾದನಾದಿಕಂ ।
ತಡಾಗವಿಧಿವತ್ಕುರ್ಯಾದ್ಯೂಪಗೋತರಣಾದಿಕಂ ॥ ೪೦ ॥

ಅಕಾಲಮೂಲಾನ್(?)ಕಲಶಾನ್ ವಾಪೀಕೋಣೇಷು ದಾಪಯೇತ್ ।
ತೀರ್ಥೋದಕಸಮಾಯುಕ್ತಾನ್ ಸಿತಚಂದನಚರ್ಚಿತಾನ್ ॥ ೪೧ ॥

ಸಿತವಾಸೋಯುಗಚ್ಛನ್ನಾನ್ಸಮಾಲ್ಯಾನ್ರತ್ನಗರ್ಭಿಣಃ ।
ಶ್ರಪಯಿತ್ವಾ ಚರುಂ ತತ್ರ ಯಾವನ್ಮಾತ್ರೋ ಯಥಾವಿಧಿ ॥ ೪೨ ॥

---

೩೯. ಎಲೈ ರಾಜೇಂದ್ರನೇ! ಈರೀತಿ ತಟಾಕೋತ್ಸರ್ಗವಿಧಾನವನ್ನು ನಿನಗೆ ತಿಳಿಸಿದುದಾಯಿತು. ಇನ್ನು ಉತ್ಕೃಷ್ಟವಾದ ವಾಪಿ, ಕೂಪ ಇವುಗಳ ಉತ್ಸರ್ಜನವಿಧಿಯನ್ನು ಹೇಳುವೆನು ಕೇಳು.

೪೦. ಅಯ್ಯಾ ಯುಧಿಷ್ಠಿರ! ಕುಂಡ, ಮಂಡಪ, ಇತರ ಸಂಭಾರಗಳು, ಭೂಷಣಗಳು, ವಸ್ತ್ರಾದಿಗಳು, ಯೂಪಪ್ರತಿಷ್ಠೆ, ಗೋವಿನ ಹಿಂದೆ ಸಾಗಿ ನೀರನ್ನು ದಾಟಿ ಗೋವನ್ನು ದಾನಮಾಡುವುದು ಇವೆಲ್ಲವೂ ತಟಾಕವಿಧಿಯಂತೆಯೇ ಈ ವಾಪೀಕೂಪಗಳಿಗೂ ಸಂಬಂಧಿಸುವುವು.

೪೧. ವಾಪಿಯ ಈಶಾನ್ಯಾದಿ ನಾಲ್ಕುಕೋಣಗಳಲ್ಲಿಯೂ ಅಮೂಲ್ಯವಾದ ನಾಲ್ಕು ಕಲಶಗಳನ್ನು ಇರಿಸಿ, ಅವುಗಳಲ್ಲಿ ತೀರ್ಥೋದಕಗಳನ್ನು ತುಂಬಿ, ಬಿಳಿಯಚಂದನವನ್ನು ಹೊರಗೆ ಲೇಪಮಾಡಬೇಕು.

೪೨. ಆ ಕಲಶಗಳ ಪ್ರತಿಯೊಂದಕ್ಕೂ ಶುಭ್ರವಾದ ಎರಡು ವಸ್ತ್ರಗಳನ್ನು ಹೊದ್ದಿಸಿ ರತ್ನಯುಕ್ತವಾದ ಮಾಲೆಗಳಿಂದ ಆ ಕಲಶವನ್ನು ಅಲಂಕರಿಸಬೇಕು. ಅನಂತರ ಚರುವನ್ನು ಪಾಕಮಾಡಿ ಪ್ರಮಾಣಕ್ಕೆ ಸರಿಹೋಗುವಂತೆ ವಿಧಿಪ್ರಕಾರ ಸಿದ್ಧಮಾಡಬೇಕು.

ಚತಸ್ರ ಆಹುತೀರ್ದದ್ಯಾದ್ಭೂರ್ಭುರ್ವಸ್ಸ್ವರಿತಿ ಕ್ರಮಾತ್ ।
ಗ್ರಹಹೋಮಂ ಪ್ರಕುರ್ವೀತ ಶಾಂತಿಪುಷ್ಟಿವಿವರ್ಧನಂ ॥ ೪೩ ॥

ವರುಣಾಯ ಬಲಿಂ ದದ್ಯಾಲ್ಲೋಕಪಾಲೇಭ್ಯ ಏವ ಚ ।
ವಾರುಣಾನಿ ಚ ಸೂಕ್ತಾನಿ ಪಠೇಯುರ್ದ್ವಿಜಸತ್ತಮಾಃ ॥ ೪೪ ॥

ವೇದೀಮಧ್ಯೇ ಮಂಡಲಂ ಚ ಪದ್ಮಮತ್ರಪ್ರಶಸ್ಯತೇ ।
ತನ್ಮಧ್ಯೇ ಪೂಜಯೇಚ್ಛಂಭುಂ ಬ್ರಹ್ಮಾಣಂ ಕೇಶವಂ ತಥಾ ॥ ೪೫ ॥

ಮತ್ಸ್ಯಕಮಠಮಂಡೂಕಾನ್ವೇದ್ಯಾ ಮಧ್ಯೇಽಧಿವಾಸಯೇತ್ ।
ಮಿತ್ರಮಿತ್ರೋಽಸಿ ಭೂತಾನಾಂ ಧನದೋ ಧನಕಾಂಕ್ಷಿಣಾಂ ॥ ೪೬ ॥

---

೪೩. ಆ ಬಳಿಕ ಚರುವನ್ನು ತೆಗೆದುಕೊಂಡು ಓಂ ಭೂಃಸ್ವಾಹಾಃ ಓಂ ಭುವಃಸ್ವಾಹಾ ಓಂ ಸುವಸ್ವಾಹಾ ಓಂ ಭೂರ್ಭುವಸ್ಸುವಸ್ವಾಹಾ ಎಂದು ನಾಲ್ಕು ಆಹುತಿಗಳನ್ನು ಕ್ರಮವಾಗಿ ಕೊಟ್ಟು ಅನಂತರ ಶಾಂತಿ ಮತ್ತು ಪುಷ್ಟಿ ಇವುಗಳನ್ನು ಕೊಡುವ ನವಗ್ರಹಹೋಮವನ್ನು ಮಾಡಬೇಕು.

೪೪. ವರುಣನಿಗೂ, ಇಂದ್ರಾದಿ ಅಷ್ಟದಿಕ್ಪಾಲಕರಿಗೂ ಬಲಿಯನ್ನು ಸಮರ್ಪಿಸಬೇಕು. ಆ ಸಮಯದಲ್ಲಿ ಬ್ರಾಹ್ಮಣೋತ್ತಮರು ವರುಣಸೂಕ್ತಪಾರಾಯಣವನ್ನು ಮಾಡುತ್ತಿರಬೇಕು.

೪೫-೪೬. ಈ ಕಾರ್ಯದಲ್ಲಿ ವೇದಿಕೆಯ ಮಧ್ಯದಲ್ಲಿ ಪದ್ಮಾಕೃತಿಯಾದ ಮಂಡಲವನ್ನು ರಚಿಸುವುದು ಶ್ರೇಷ್ಠವೆಂದು ಹೇಳಿದೆ. ಈ ಪದ್ಮಮಂಡಲದ ಮಧ್ಯಭಾಗದಲ್ಲಿ ಶಂಭು, ಬ್ರಹ್ಮ, ಕೇಶವ ಇವರನ್ನು ಪೂಜಿಸಬೇಕು. ಅನಂತರ ಮತ್ಸ್ಯ (ಮೀನು), ಕಮಠ (ಆಮೆ), ಮಂಡೂಕ (ಕಪ್ಪೆ) ಮುಂತಾದುವುಗಳ ಪ್ರತಿಮೆಗಳನ್ನು ಚಿನ್ನ ಬೆಳ್ಳಿ ಮುಂತಾದುವುಗಳಿಂದ ಮಾಡಿಸಿ ಆ ವೇದಿಕೆಯ ಮಧ್ಯದಲ್ಲಿ ಅಧಿವಾಸಮಾಡಬೇಕು.

ವೈದ್ಯೋ ರೋಗಾಭಿಭೂತಾನಾಂ ಶರಣ್ಯಃ ಶರಣಾರ್ಥಿನಾಂ ।
ಅನೇನೈವ ಹಿ ಮಂತ್ರೇಣ ವರುಣಾಯ ವಿಸರ್ಜಯೇತ್ ॥ ೪೭ ॥

ಆದೌ ಚಾವಾಹಯೇದ್ದೇವಮನೇನೈವ ವಿಶೇಷತಃ ।
ನಮಸ್ತೇ ವಿಶ್ವಗುಪ್ತಾಯ ನಮೋ ವಿಷ್ಣೋ ಅಪಾಂಪತೇ ॥ ೪೮ ॥

ಸಾನ್ನಿಧ್ಯಂ ಕುರು ದೇವೇಶ ಸಮುದ್ರೇ ಯದ್ವದತ್ರ ವೈ ।
ತತಸ್ತು ದಕ್ಷಿಣಾ ದೇಯಾ ಬ್ರಾಹ್ಮಣಾನಾಂ ನರಾಧಿಪ ॥ ೪೯ ॥

ಗೌಃ ಸ್ಥಾಪಕಾಯ ದಾತವ್ಯಾ ಭೋಜನಂ ಚಾನಿವಾರಿತಂ ।
ಸರ್ವೇಷಾಮೇವ ದಾತವ್ಯಂ ಏಷ ಪೌರಾಣಿಕೋ ವಿಧಿಃ ॥ ೫೦ ॥

---

೪೭. ಎಲೈ ಮಿತ್ರನೇ ! ಸಕಲ ಪ್ರಾಣಿಗಳಿಗೂ ನೀನು ಮಿತ್ರನಾಗಿರುವೆ. ಧನಾಪೇಕ್ಷೆಯುಳ್ಳವರಿಗೆ ಧನಕೊಡುವವನೂ ನೀನೇ ಆಗಿದ್ದೀ. ರೋಗಪೀಡಿತ ನಿಗೆ ವೈದ್ಯಸದೃಶನಾಗಿ ರೋಗಪರಿಹಾರಮಾಡುತ್ತಿ. ಮರೆಹೊಕ್ಕವರಿಗೆ ಆಶ್ರಯ ಕೊಟ್ಟು ಶರಣಾಗತವತ್ಸಲನೆನಿಸುವನೂ ನೀನೆ; ಎಂಬ ಅರ್ಥವುಳ್ಳ ಮಂತ್ರವನ್ನು ಹೇಳಿ ಆ ಮತ್ಸ್ಯಾದಿ ಪ್ರತಿಮೆಗಳನ್ನೂ ಕಲಶೋದಕವನ್ನೂ ವರುಣ ಪ್ರೀತ್ಯರ್ಥ ವಾಗಿ ವಾಪಿಯ ಜಲದಲ್ಲಿ ಸಮರ್ಪಿಸಬೇಕು.

೪೮. ವರುಣನನ್ನು ಆವಾಹಿಸುವಾಗ ಜಗದ್ರಕ್ಷಕನಾದ ದೇವನೇ ! ನಿನಗೆ ನಮಸ್ಕಾರ. ಸರ್ವವ್ಯಾಪಕನೂ ಜಲಾಧಿಪನೂ ಆದ ನಿನ್ನನ್ನು ನಮಿಸುವೆನು. ಎಲೈ ದೇವೇಶನೇ ! ಸಮುದ್ರದಲ್ಲಿ ನೆಲಸಿರುವಂತೆಯೇ ಈ ಭಾವಿಯಲ್ಲಿಯೂ ಬಂದು ನೆಲಸು ಎಂಬ ಅರ್ಥವುಳ್ಳ ಮಂತ್ರವನ್ನು ಹೇಳಬೇಕು.

೪೯-೫೦. ಅನಂತರ ಬ್ರಾಹ್ಮಣರಿಗೆ ದಕ್ಷಿಣೆಯನ್ನೂ, ಕಲಶಸ್ಥಾಪನೆ, ಮಂಡಲಸ್ಥಾಪನೆ ಮುಂತಾದುವನ್ನು ಮಾಡಿದವನಿಗೆ ಗೋದಾನವನ್ನೂ ಕೊಡ ಬೇಕು. ಬಂದ ಬ್ರಾಹ್ಮಣೋತ್ತಮರಿಗೆಲ್ಲಾ ಮೃಷ್ಟಾನ್ನಭೋಜನ ಮಾಡಿಸ ಬೇಕು. ಹೀಗೆಂದು ಪುರಾಣಜ್ಞರಾದ ವಿದ್ವಾಂಸರು ವಿಧಿಸಿರುವರು.

ಶರಾಯಾ ಆಗತಂ ತೋಯಂ ಸಾಮುದ್ರಂ ಪ್ರಥಮಂ ಸ್ಮೃತಂ ।
ನಿಪಾನೇ ವಾ ತಡಾಗೇ ವಾ ಸಂಸ್ಥಿತಂ ತದ್ಭವೇಚ್ಛುಚಿ ॥ ೫೧ ॥

ವಾಪೀಕೂಪತಡಾಗೇ ವಾ ಸ್ಥಿತಂ ತು ಪ್ರಥಮಂ ಜಲಂ ।
ಅಪೇಯಂ ತು ಭವೇತ್ಸರ್ವಂ ತಜ್ಜಲಂ ಸೂತಿಕಾಸಮಂ ॥ ೫೨ ॥

ಸಮುದ್ರೋಽಪಿ ಹಿ ಕೌಂತೇಯ ದೇವಯೋನಿರಪಾಂಪತಿಃ ।
ಕುಶಾಗ್ರೇಣಾಪಿ ರಭಸಾ ನ ಸ್ಪೃಷ್ಟವ್ಯಸ್ತ್ವಸಂಸ್ಕೃತಃ ॥ ೫೩ ॥

ಅಗ್ನಿಶ್ಚ ತೇಜೋ ಮೃಡಯಾಥ ದೇಹೇ ।
ರೇತೋಧಾವಿಷ್ಣುರಮೃತಸ್ಯ ನಾಭಿಃ ॥
ಏವಂ ಬ್ರುವನ್ ಪಾಂಡವ ಸತ್ಯವಾಕ್ಯಂ ।
ತತೋಽವಗಾಹೇತ ಪತಿಂ ನದೀನಾಂ ॥ ೫೪ ॥

---

೫೧. ಶರಾ (ಜಲದಕಣ್ಣು) ಗಳಿಂದ ಬಂದ ನೀರು, ಸಮುದ್ರಸಂಬಂಧವಾದುದಾಗಿರುವುದು. ಬಾವಿ ಮುಂತಾದ ಜಲಾಶಯಗಳ ಸಮೀಪದ ಹಳ್ಳಕೊಳ್ಳಗಳಲ್ಲಿಯೂ ತಡಾಗದಲ್ಲಿಯೂ ಬಂದು ನಿಂತಿರುವ ನೀರು ಶುದ್ಧವೆನಿಸುವುದು.

೫೨. ವಾಪೀ ಕೂಪ ತಟಾಕಗಳಲ್ಲಿ ಬರುವ ನೀರು ಮೊದಮೊದಲು ಪಾನಾರ್ಹವಾಗಲಾರದು. ಆ ನೀರೆಲ್ಲವೂ ಸೂತಿಕಾಸ್ತ್ರೀಗೆ ಸಮಾನವಾದುದು. ಎಂದರೆ ಆ ನೀರನ್ನು ಪ್ರಾಜ್ಞರು ಉಪಯೋಗಿಸುವುದಿಲ್ಲ.

೫೩. ಎಲೈ ಕೌಂತೇಯನೆ! ದೇವಯೋನಿಯೆನಿಸಿ ಅಂಪಾಪತಿಯಾದ ಸಮುದ್ರದ ಜಲವನ್ನು ಸಂಸ್ಕಾರಮಾಡದೆ ಅಕಸ್ಮಾತ್ತಾಗಿ ದರ್ಭಾಗ್ರದಿಂದಕೂಡ ಮುಟ್ಟಬಾರದು. ಎಂದ ಮೇಲೆ ಅದರ ಸ್ನಾನಪಾನಾದಿ ವಿಷಯವನ್ನು ಹೇಳಬೇಕಾದ್ದೇ ಇಲ್ಲ.

೫೪. "ಅಗ್ನಿಶ್ಚ ತೇಜೋ ಮೃಡಯಾಥ ದೇಹೇ ರೇತೋಧಾ ವಿಷ್ಣುರಮೃತಸ್ಯ ನಾಭಿಃ" ಎಂಬ ಸತ್ಯವಾಕ್ಯರೂಪವಾದ ಈ ಮಂತ್ರವನ್ನು ಉಚ್ಚರಿಸುತ್ತಾ ನದೀಪತಿಯೆನಿಸಿದ ಸಮುದ್ರದಲ್ಲಿ ಸ್ನಾನಮಾಡಬೇಕು.

ವೈಷ್ಣವೇ ಮಾಸಿ ಸಂಪ್ರಾಪ್ತೇ ನಕ್ಷತ್ರೇ ವಾರುಣೇ ತಥಾ ।
ಅರ್ಘ್ಯಂ ಪ್ರದದ್ಯಾದ್ಭಕ್ತ್ಯಾ ತು ತಸ್ಮಿನ್ಕಾಲೇ ಮಹೋದಧೇಃ ॥ ೫೫ ॥

ಸ್ನಾತ್ವಾ ತು ವಿಧಿವನ್ಮಂತ್ರೈಸ್ಸಾಗರೇ ತು ಸಮಾಹಿತಃ ।
ಫಲಮೂಲಾಕ್ಷತೈರ್ಭಕ್ಷ್ಯೈಸ್ತಥಾರ್ಘ್ಯಂ ಸಂಪ್ರಕಲ್ಪಯೇತ್ ॥ ೫೬ ॥

ಅಪಿ ಜನ್ಮಸಹಸ್ರಂ ತು ಯತ್ಪಾಪಂ ಕುರುತೇ ನರಃ ।
ಮುಚ್ಯತೇ ಸರ್ವಪಾಪೇಭ್ಯಃ ಸ್ನಾತ್ವಾ ತು ಲವಣಾಂಭಸಿ ॥ ೫೭ ॥

ವಿಧಿಜ್ಞೇನ ತು ಕರ್ತವ್ಯಂ ಬ್ರಾಹ್ಮಣೇನ ಯಥಾವಿಧಿ ।
ಕರ್ತಾ ಕಾರಯಿತಾ ಚೈವ ಉಭೌ ತು ಸ್ವರ್ಗಗಾಮಿನೌ ॥ ೫೮ ॥

ವಿಧಿಂ ತ್ವೇನಮಜಾನಾನೋ ಯಃ ಕುರ್ಯಾದರ್ಥಮೋಹಿತಃ ।
ಕರ್ತಾ ಕಾರಯಿತಾ ಚೈವ ಉಭೌ ನರಕಗಾಮಿನೌ ॥ ೫೯ ॥

---

೫೫. (ವೈಷ್ಣವಮಾಸ) ಶ್ರಾವಣಮಾಸದಲ್ಲಿ ವರುಣಸಂಬಂಧವಾದ ಶತಭಿಷ ನಕ್ಷತ್ರದ ದಿನ ಭಕ್ತಿಯಿಂದ ಮಹಾಸಮುದ್ರನಿಗೆ ಅರ್ಘ್ಯವನ್ನು ಸಮರ್ಪಿಸಬೇಕು.

೫೬. ವಿಧಿನಿಯಮವನ್ನನುಸರಿಸಿ ಸಮುದ್ರದಲ್ಲಿ ಮಂತ್ರಪೂರ್ವಕವಾಗಿ ಸ್ನಾನಮಾಡಿ, ಗಂಧಾಕ್ಷತೆ, ಫಲ, ಭಕ್ಷ್ಯಾದಿಗಳು ಇವುಗಳ ಸಮೇತ ವರುಣನಿಗೆ ಭಕ್ತಿಪುರಸ್ಸರವಾಗಿ ಅರ್ಘ್ಯವನ್ನು ಕೊಡಬೇಕು.

೫೭. ಸಾವಿರ ಜನ್ಮಗಳಿಂದ ಸಂಚಿತವಾದ ಪಾಪಗಳಿದ್ದರೂ ಲವಣ ಸಮುದ್ರದಲ್ಲಿ ಒಂದುಸಾರಿ ಸ್ನಾನಮಾಡಿದ ಮಾತ್ರದಿಂದ ಅವುಗಳೆಲ್ಲವೂ ಧ್ವಂಸ ವಾಗಿ ಆ ಪುರುಷನು ಪರಿಶುದ್ಧನಾಗುವನು.

೫೮. ತನಗೆ ವಿಧಿ ವಿಧಾನವು ತಿಳಿಯದಿದ್ದರೆ, ವಿಧಿಯನ್ನು ತಿಳಿದ ವಿಪ್ರೋತ್ತಮನ ಸಹಾಯದಿಂದ ಲೋಪವಿಲ್ಲದಂತೆ ಇದನ್ನು ಆಚರಿಸಬೇಕು. ಹೀಗೆ ವಿಧಿಪ್ರಕಾರ ಆಚರಿಸಿದರೆ ಆಚರಿಸಿದ ಗೃಹಸ್ಥನೂ, ಉಪದೇಶಕನಾದ ವಿಪ್ರನೂ ಇಬ್ಬರೂ ಸಹ ಸ್ವರ್ಗವನ್ನು ಪಡೆಯುವರು.

೫೯. ಈ ವಿಧಿಯನ್ನು ಅರಿಯದವನು ಕೇವಲ ದ್ರವ್ಯಾಶೆಯಿಂದ ಮೋಹಿತ ನಾಗಿ, ಕ್ರಮಾನುಸರಣೆಯಿಲ್ಲದೆ ಸಮುದ್ರಸ್ನಾನಮಾಡಿಸಿದರೆ ಆ ಸ್ನಾನಕರ್ತೃವೂ, ಹಾಗೆ ಮಾಡಿಸಿದವನೂ ಇಬ್ಬರೂ ನರಕವನ್ನೈದುವರು.

ಯೋ ನ ಕಾರಯತೇ ಶಾಂತಿಂ ತಡಾಗಾದ್ಯೇಷು ಕರ್ಮಸು ।
ತಸ್ಯ ತನ್ನಿಷ್ಫಲಂ ಸರ್ವಮುಪ್ತಂ ಬೀಜಮಿವೋಷರೇ ॥ ೬೦ ॥

ಸರ್ವರತ್ನಮಯಂ ದಿವ್ಯಂ ಚಂದ್ರಾರ್ಕಸದೃಶಪ್ರಭಂ ।
ವಿಮಾನಂ ತೇಜಸಾ ಯುಕ್ತಂ ಆರೋಹೇತ್ಪುಣ್ಯಕರ್ಮಕೃತ್ ॥ ೬೧ ॥

ಕಶ್ಚಿತ್ಪಿಬತಿ ತತ್ತೋಯಂ ನಿಪಾನಸ್ಥಂ ತತೋಽಂಜಲಿಂ ।
ಬ್ರಾಹ್ಮಣೋ ವಾ ಯತಿರ್ಗೌರ್ವಾ ಯೇನ ಕರ್ತಾ ನ ಸೀದತಿ ॥ ೬೨ ॥

ಉತ್ಸೃಷ್ಟೇ ಕೃತಕೃತ್ಯಸ್ತು ಸುಹೃತ್ಕುರ್ಯಾನ್ಮಹೋತ್ಸವಂ ।
ಮಹಾಭೋಜ್ಯಂ ಮಹೋತ್ಸರ್ಗಂ ಯಜಮಾನೋ ದಿನಾಷ್ಟಕಂ ॥

---

೬೦. ತಟಾಕಾದಿಗಳಿಗೆ ಉತ್ಸರ್ಜನ ಕರ್ಮಮಾಡದೆ ಸುಮ್ಮನೆ ಕೆರೆ ಕಟ್ಟಿಸಿ ಬಿಟ್ಟುಬಿಡುವವನು, ಮರುಭೂಮಿಯಲ್ಲಿ ಬೀಜವನ್ನು ಬಿತ್ತಿದಂತೆ ಯಾವ ಫಲ ವನ್ನೂ ಹೊಂದದೆ ವ್ಯರ್ಥಪ್ರಯತ್ನನಾಗುವನು.

೬೧. ತಟಾಕ ಉತ್ಸರ್ಜನ ಪುಣ್ಯಕರ್ಮವನ್ನು ಸರಿಯಾಗಿ ಮಾಡುವ ಮನುಷ್ಯನು, ಸರ್ವರತ್ನಮಯವೂ, ದಿವ್ಯವೂ, ಚಂದ್ರಸೂರ್ಯರ ತೇಜಸ್ಸದೃಶವಾದ ಕಾಂತಿಯುಕ್ತವೂ, ಜಾಜ್ವಲ್ಯಮಾನವೂ ಆದ ವಿಮಾನವನ್ನೇರಿ ಉತ್ತಮಗತಿ ಯನ್ನು ಹೊಂದುವನು.

೬೨. ಆತನು ಮಾಡಿದ ಪ್ರತಿಷ್ಠಾ ಉತ್ಸರ್ಜನಾದಿ ಕರ್ಮಗಳಿಂದ ಯುಕ್ತ ವಾದ ಜಲಾಶಯದ ನೀರನ್ನು ಬ್ರಾಹ್ಮಣ, ಸಂನ್ಯಾಸಿ, ಗೋವುಗಳು, ಇತರರು ಯಾರೇ ಆದರೂ ಒಂದು ಬೊಗಸೆಯಷ್ಟು ನೀರನ್ನು ಪಾನಮಾಡಿದರೆ ಆ ಕರ್ತೃ ವಿಗೆ ದುಃಖಲೇಶವೂ ಉಂಟಾಗದೆ ಸುಖಪ್ರಾಪ್ತಿಯಾಗುವುದು.

೬೩. ಹೀಗೆ ತಟಾಕಾದಿಗಳ ಉತ್ಸರ್ಗವಿಧಿಯನ್ನು ಕ್ರಮಪ್ರಕಾರ ಮಾಡಿ, ಕೃತಕೃತ್ಯನಾದ ಮೇಲೆ ಪುನಃ ಒಳ್ಳೆಯ ಮನಸ್ಸಿನಿಂದ ಕೂಡಿ, ತದಾರಭ್ಯ ಎಂಟು ದಿನಪರ್ಯಂತ ಮಹೋತ್ಸರ್ಗವನ್ನೂ, ಮಹಾಸಂತರ್ಪಣೆಯನ್ನೂ ವೈಭವದಿಂದ ನಡೆಸುತ್ತಾ, ದೊಡ್ಡ ಉತ್ಸವಮಾಡಿ ಅನ್ನಶಾಂತಿಮಾಡುವುದು ಉತ್ತಮಪಕ್ಷ.

ಕಾರಕಾಃ ಕರ್ಮಣೋ ವಾಪಿ ಸೂತ್ರಧಾರಾದಯೋ ನರಾಃ ।
ಇಷ್ಟಾಪೂರ್ತೇನ ಧರ್ಮೇಣ ತೇಽಪಿ ಸ್ವರ್ಗಂ ಪ್ರಯಾಂತಿ ಹಿ ॥ ೬೪ ॥

ಖನ್ಯಮಾನೇ ಮಹೀಭಾಗೇ ಪ್ರಾಣಿನೋ ಯೇ ಕ್ಷಯಂ ಗತಾಃ ।
ಚಿತ್ರೇ ವಾ ದೇವಕೂಟಾರ್ಥೇ ತೇ ಸರ್ವೇ ತ್ರಿದಿವಂ ಗತಾಃ ॥ ೬೫ ॥

ಧೇನೋಸ್ತು ರೋಮಕೂಪಾಣಿ ಯಾವಂತೀಹ ನರೋತ್ತಮ ।
ತಾವದ್ವರ್ಷಸಹಸ್ರಾಣಿ ವರ್ಷಕೋಟಿಶತಾನಿ ಚ ॥ ೬೬ ॥

ಕೋಟಿರ್ಯುಗಸಹಸ್ರಾಣಾಂ ಸ್ವರ್ಗೇ ತಿಷ್ಠೇತ್ತಡಾಗಕೃತ್ ।
ಚೇತ್ತಸ್ಯ ಪಿತರಃ ಕೇಚಿನ್ನರಕಂ ಸಮುಪಾಗತಾಃ ॥ ೬೭ ॥

---

೬೪. ಈ ಉತ್ಸರ್ಗವಿಧಿಯಲ್ಲಿ ಭಾಗವಹಿಸಿರುವ ಜನಗಳು, ಮೇಲ್ವಿಚಾರಣೆ ನಡೆಸಿದ ಜನಗಳು, ಇವರೂ ಸಹ ಈ ಇಷ್ಟಾಪೂರ್ತ ಯಾಗಮಾಡಿದುದರಿಂದ ಲಭಿಸುವ ಧರ್ಮದಲ್ಲಿ ಭಾಗಿಗಳಾಗಿ, ಅದರಿಂದ ಸ್ವರ್ಗವನ್ನು ಪಡೆಯುವರು.

೬೫. ತಡಾಗಾದಿಗಳನ್ನು ನಿರ್ಮಿಸಲು ಭೂಪ್ರದೇಶವನ್ನು ಅಗೆಯುವಾಗ ನಾಶಹೊಂದಿದ ಪ್ರಾಣಿಗಳೂ, ಅನಂತರ ಉತ್ಸರ್ಗವಿಧಿಯನ್ನಾಚರಿಸುವಾಗ, ದೇವತಾಚಿತ್ರಾದಿಗಳನ್ನು ರಚಿಸುವಾಗ ಮೃತಿಹೊಂದಿದ ಪ್ರಾಣಿಗಳೂ ಸಹ ಸ್ವರ್ಗವನ್ನು ಹೊಂದುವುವು.

೬೬. ಅಯ್ಯಾ ರಾಜೇಂದ್ರ ! ಗೋವಿನ ದೇಹದಲ್ಲಿ ಎಷ್ಟು ರೋಮಗಳಿವೆಯೋ ಅಷ್ಟು ಲಕ್ಷವರ್ಷಗಳವರೆಗೂ, ಮತ್ತು ಸಹಸ್ರಕೋಟಿ ಯುಗಗಳವರೆಗೂ ಈ ಧರ್ಮಿಷ್ಠನು ಸ್ವರ್ಗದಲ್ಲಿ ವಾಸಿಸುವನು.

೬೭. ಇವನ ಪಿತೃಗಳು ಯಾರಾದರೂ ನರಕದಲ್ಲಿ ಬಿದ್ದಿದ್ದರೆ ಅವರೆಲ್ಲರನ್ನೂ ಉದ್ಧರಿಸುವುದಲ್ಲದೆ ಅವರಿಗೂ ಸ್ವರ್ಗಪ್ರಾಪ್ತಿಯಾಗುವಂತೆ ಮಾಡುವನು. ಎಲೈ ರಾಜೇಂದ್ರ ! ಹೀಗೆ ಪಿತೃಗಳು ಪಾಪವಿಮುಕ್ತರಾಗುವುದಲ್ಲದೆ ಪಿತಾಮಹರು, ಪ್ರಪಿತಾಮಹರೂ ಸಹ ನರಕದಲ್ಲಿ ಬಿದ್ದಿದ್ದರೆ, ಅಲ್ಲಿಂದ ಸ್ವರ್ಗವನ್ನು ಸೇರಿ ಸುಖಪಡುವರು.

**ತಾಂಸ್ತು ತಾರಯತೇ ಸರ್ವಾನಾತ್ಮಾನಂ ಚ ಮಹೀಪತೇ |**
**ಆಸ್ಫೋಟಯಂತಿ ಪಿತರೋ ವಲ್ಗಂತಿ ಪ್ರಪಿತಾಮಹಾಃ ॥ ೬೮ ॥**

**ಅಪಿ ನಃ ಸ ಕುಲೇ ಜಾತೋ ಯಸ್ತಡಾಗಂ ಕರಿಷ್ಯತಿ |**
**ಸರ್ವಸ್ವೇನಾಪಿ ಕೌಂತೇಯ ಭೂಮಿಷ್ಠಮುದಕಂ ಕುರು ॥ ೬೯ ॥**

**ಕುಲಾನಿ ತಾರಯೇತ್ಸಪ್ತ ಯತ್ರ ಗೌರ್ವಿತೃಷೀ ಭವೇತ್ |**
**ಏವಂ ವರ್ಷಶತೇನಾಪಿ ಕೃತ್ತಿಕಾ ವಿಹರೇದ್ವನೇ ॥ ೭೦ ॥**

**ಮಾಸಂ ಚೇತೋಗೃಹೇ ಕೋಟಿಕ್ಷಣಧ್ವಂಸಿಧನಸ್ಯ ಹಿ |**
**ತಡಾಗಂ ದೇವಭವನಂ ವಾಪೀವೃಕ್ಷೋಘನಚ್ಛದಃ ॥ ೭೧ ॥**

---

೬೮. ಎಲೈ ಕೌಂತೇಯನೇ! ನಮ್ಮ ವಂಶದಲ್ಲಿ ಜನಿಸಿದ ಯಾವನೊಬ್ಬನು ಎಂದಿಗಾದರೂ ತಟಾಕಾದಿಗಳನ್ನು ನಿರ್ಮಿಸಿಯಾನೇ? ಅದರಿಂದಲಾದರೂ ನಮಗೆ ಉತ್ತಮಗತಿ ಲಭಿಸೀತೇ! ಎಂದು ಪಿತೃಪಿತಾಮಹಪ್ರಪಿತಾಮಹರೆಲ್ಲರೂ ಸದಾ ತವಕಿಸುತ್ತಾರೆ.

೬೯. ಆದುದರಿಂದ ಎಲೈ ಯುಧಿಷ್ಠಿರ! ಸರ್ವಪ್ರಯತ್ನ ಮಾಡಿಯಾದರೂ ಭೂಮಿಯಲ್ಲಿ ನೀರು ಕಾಣುವಂತೆ ಜಲಾಶಯವನ್ನು ನಿರ್ಮಿಸು.

೭೦. ಈ ಜಲಾಶಯ ನಿರ್ಮಾಣಜನಿತವಾದ ಪುಣ್ಯದಿಂದ ಆ ಕರ್ತೃವಿನ ಪೂರ್ವಿಕರು ಏಳು ತಲೆಮಾರಿನವರೂ ಉದ್ಧಾರವಾಗುವರು. ಗೋವುಗಳು, ಪಶು ಪಕ್ಷ್ಯಾದಿಗಳು, ಮಾನವರು ಇದರ ಜಲಪಾನದಿಂದ ತೃಷೆಯನ್ನು ಪರಿಹರಿಸಿ ಕೊಂಡು ಸಂತೋಷಪಡುವುವು. ಹಾಗೆಯೇ ಕಾಲಾನುಕಾಲಕ್ಕೆ ಯಾವಾಗ ಲಾದರೂ ಒಂದುದಿನ ಕೃತ್ತಿಕಾದೇವಿಯರೂ ಈ ಜಲದಲ್ಲಿ ವಿಹರಿಸುವರು.

೭೧. ಕೋಟಿಕ್ಷಣಗಳನ್ನು ವ್ಯಯಮಾಡಿ ಧನಾರ್ಜನೆಮಾಡಿರುವ ಯಜಮಾನನ ಹೃದಯವೆಂಬ ಮನೆಯಲ್ಲಿ ಲಕ್ಷ್ಮಿಯು ಸದಾ ನೆಲಸಿರುವಳು. ಈ ಲಕ್ಷ್ಮಿಯೆಂಬ ವೃಕ್ಷಕ್ಕೆ ತಡಾಗನಿರ್ಮಾಣ, ದೇವಾಲಯನಿರ್ಮಾಣ, ವಾಪೀ ನಿರ್ಮಾಣ, ಛಾಯಾವೃಕ್ಷರೋಪಣ ಎಂಬ ಈ ನಾಲ್ಕು ಫಲಗಳಾಗಿವೆ.

ಚತುರ್ವರ್ಗಂ ಫಲಂ ಪ್ರಾಪ್ತಂ ಕಾರಿತೇऽಸ್ಮಿಂಶ್ಚತುಷ್ಟಯೇ ।
ಯಥಾ ಮಾತುಃ ಸಮಾಚಷ್ಟೇ ಪುತ್ರಃ ಶೀಲಂ ಸ್ವಕೈರ್ಗುಣೈಃ ॥ ೭೨ ॥

ತಥಾ ಸ್ವಾದೇನ ಚ ಜಲಂ ಕರ್ತುಃ ಸರ್ವಂ ಶುಭಾಶುಭಂ ।
ಅತಃ ಶುಭಾಗತಂ ದ್ರವ್ಯಂ ತಡಾಗಾದಿಷು ಲಾಪಯೇತ್ ॥ ೭೩ ॥

ಧನ್ಯಸ್ಯ ಪಾಂಥಾಃ ಸಂಪ್ರಾಪ್ಯ ತಡಾಗಂ ವೃಕ್ಷಮಂಡಿತಂ ।
ಪೀತ್ವಾಪಃ ಪಾದಪತಲೇ ವಿಶ್ರಮಂತಿ ರಮಂತಿ ಚ ॥ ೭೪ ॥

ಮಾರುತೋದ್ಧೂತವೀಚ್ಯಗ್ರೈಃ ಕರೈಃ ಕಮಲಮಂಡಿತಂ ।
ಅಭ್ಯಾಗತಾಯ ಸುಧಿಯಾ ತಡಾಗಾದ್ಯಂ ಪ್ರಕಲ್ಪಿತಂ ॥ ೭೫ ॥

---

೭೨-೭೩. ಈ ತಡಾಗಾದಿ ನಾಲ್ಕನ್ನೂ ಪ್ರತಿಷ್ಠೆಮಾಡಿಸಿದರೆ, ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳೂ ದೊರೆಯುವುವು. ಮಗನಲ್ಲಿ ಕಾಣಬರುವ ಗುಣಗಳಿಂದ ಅವನ ತಾಯಿಯ ಶೀಲಾದಿಗಳು ವ್ಯಕ್ತವಾಗುವಂತೆ, ತಟಾಕಾದಿಗಳಲ್ಲಿ ಒಸರುವ ಜಲದ ರುಚಿಯು ಅದರ ಕರ್ತೃವಿಗೆ ಒದಗುವ ಶುಭಾಶುಭಗಳನ್ನು ಸೂಚಿಸುವುದು. ಆದುದರಿಂದ ಸದ್ವ್ಯಾಪಾರದಿಂದ ಲಬ್ಧವಾದ ಧನವನ್ನು ತಡಾಗಾದಿಗಳ ರಚನೆಗೆ ಉಪಯೋಗಿಸಬೇಕು.

೭೪. ಧನ್ಯನೆನಿಸಿದ ಮಾನವನು ಕಟ್ಟಿಸಿದ ತಡಾಗದ ಜಲವನ್ನು, ಮಾರ್ಗಸ್ಥರಾದ ಪ್ರಯಾಣಿಕರು ಪಾನಮಾಡಿ, ದಡದಲ್ಲಿ ಸೊಂಪಾಗಿ ಬೆಳೆಸಿರುವ ವೃಕ್ಷಸಮೂಹದ ನೆರಳಿನಲ್ಲಿ ಕುಳಿತು ವಿಶ್ರಮಿಸಿಕೊಂಡು ಸಂತುಷ್ಟರಾಗುತ್ತಾರೆ.

೭೫. ಕಮಲಗಳಿಂದ ಶೋಭಾಯಮಾನವಾಗಿಯೂ, ಗಾಳಿಯಿಂದ ಹೊಡೆಯಲ್ಪಡುವ ಅಲೆಗಳ ಅಗ್ರಭಾಗವೆಂಬ ಕೈಗಳಿಂದ ಅಲಂಕೃತವಾಗಿಯೂ ಇರುವ, ತಟಾಕಾದಿಗಳನ್ನು ಪ್ರಾಜ್ಞನು ಅಭ್ಯಾಗತಜನರಿಗೋಸ್ಕರವಾಗಿಯೇ ನಿರ್ಮಿಸುವನು.

ಸಾಮಾನ್ಯಂ ಸರ್ವಭೂತೇಭ್ಯೋ ಯೇನ ಭೂಮಿಗತಂ ಜಲಂ ।
ತಾರಿತಂ ಕಾರಿತಂ ತೇನ ಸುಪುತ್ರೇಣ ಕುಲದ್ವಯಂ ॥ ೭೬ ॥

ಪೂರ್ತಂ ಸ್ವಭಾವತಸ್ಸಿದ್ಧಮಿಷ್ಟಂ ಮಂತ್ರಪ್ರದರ್ಶಿತಂ ।
ಇಷ್ಟಾಪೂರ್ತೇ ಕೃತೇ ರಾಜನ್ಕೃತಕೃತ್ಯಃ ಪುಮಾನ್ಭವೇತ್ ॥ ೭೭ ॥

ಉನ್ನತೌ ವಾಥ ನಿಮ್ನಾ ವಾ ಕೀರ್ತಿರ್ಯೇನ ಪ್ರಕಾಶಿತಾ ।
ತೇನ ತ್ರೈಲೋಕ್ಯಚಂದ್ರೇಣ ಜನನೀ ಪಾರ್ಥ ಪುತ್ರಿಣೀ ॥ ೭೮ ॥

ತ್ರಿತಯಂ ನಿಮ್ನತಾಂ ನೇಯಂ ತ್ರಿತಯಂ ಚೋನ್ನತಿಂ ಪರಾಂ ।
ತಡಾಗಮಥ ಯೋ ಭೂಮೌ ದೇವ-ದೇವಾಲಯಂಕೃತೀ ॥ ೭೯ ॥

---

೭೬. ಭೂಮಿಯ ಒಳಗಿರುವ ನೀರನ್ನು ವಾಪೀ, ಕೂಪ, ತಟಾಕಾದಿಗಳ ಮೂಲಕ ಹೊರಗೆಡವಿ, ಸಮಸ್ತ ಭೂತಗಳ ಉಪಯೋಗಕ್ಕೋಸ್ಕರ ಅನುಕೂಲ ಪಡಿಸುವವನು, ಸತ್ಪುತ್ರರನ್ನು ಪಡೆದು ಮಾತಾಪಿತೃ ಉಭಯವಂಶವನ್ನೂ ಸಹ ಉದ್ಧಾರಮಾಡುವನು.

೭೭. ಸ್ವಭಾವವಾಗಿಯೇ ಏರ್ಪಟ್ಟಿರುವುದಕ್ಕೆ ಪೂರ್ತವೆಂದೂ ಮಂತ್ರಾದಿಗಳಿಂದ ಸಂಸ್ಕರಿಸಲ್ಪಡುವುದಕ್ಕೆ ಇಷ್ಟವೆಂದೂ ಸಂಜ್ಞೆ. ಈ ಇಷ್ಟ ಮತ್ತು ಪೂರ್ತ ಎರಡನ್ನೂ ಮಾಡುವ ಪುರುಷನು ಕೃತಕೃತ್ಯನೆನಿಸುವನು. ಎಂದರೆ ಸ್ವಭಾವವಾಗಿ ಸಿದ್ಧವಾದ ಜಲವನ್ನು ಮಂತ್ರಾದಿಗಳನ್ನನುಸರಿಸಿ ಉಪಯೋಗಾರ್ಹಮಾಡುವವನು ಕೃತಕೃತ್ಯನೆನಿಸುವನು.

೭೮. ಅಯ್ಯಾ ಕುಂತೀಪುತ್ರ! ಉನ್ನತವಾಗಿಯಾಗಲಿ (ಎತ್ತರವಾದ ದೇವಾಲಯಾದಿಗಳನ್ನು ರಚಿಸುವ ಮೂಲಕವಾಗಲಿ), ನತವಾಗಿಯಾಗಲಿ (ಆಳವಾಗಿ ತೋಡುವ ವಾಪೀ, ತಟಾಕ ಮುಂತಾದ್ದನ್ನು ರಚಿಸುವ ಮೂಲಕವಾಗಲಿ) ತನ್ನ ಕೀರ್ತಿಯನ್ನು ಪ್ರಕಾಶಪಡಿಸುವವನೂ, ತ್ರಿಲೋಕಾಹ್ಲಾದಕನಾದ ಚಂದ್ರ ಸದೃಶನೂ, ಆದ ತನಯನನ್ನು ಪಡೆದ ತಾಯಿಯೇ ನಿಜವಾಗಿ ಪುತ್ರವತಿಯೆನಿಸುವಳು.

೭೯. ಎಲೈ ಕುಂತೀಪುತ್ರನೇ! ಈ ಭೂಮಿಯಲ್ಲಿ ತಟಾಕ, ದೇವಾಲಯ ಇವುಗಳನ್ನು ನಿರ್ಮಿಸುವವನಿಂದ ಸ್ವರ್ಗ, ಮರ್ತ್ಯ, ಪಾತಾಳ ಈ ಮೂರು ಲೋಕಗಳೂ ನಿಮ್ನತೆ ಪಡೆವುವು. ತ್ರಿವರ್ಗವು ಉತ್ಕೃಷ್ಟವಾದ ಶ್ರೇಷ್ಠತೆಯನ್ನು ಪಡೆಯುವುದು.

ಯಃ ಕಾರಯತಿ ಲೋಕೇಽಸ್ಮಿನ್ಕೀರ್ತಿಸ್ತಸ್ಯಾಮಲಾ ಭವೇತ್ ।
ಸ ಜೀವತಿ ಸ ಏವೈಕಃ ಸ ಭವೇದಜರಾಮರಃ ॥ ೮೦ ॥

ಉಪೇತಾನಾಮಪಿ ದಿವಂ ಸ ನಿಬಂಧವಿಧಾಯಿನಾಂ ।
ಆಸ್ತೆ ಏವ ನಿರಾತಂಕಂ ತಸ್ಯ ಕೀರ್ತಿಮಯಂ ವಪುಃ ॥ ೮೧ ॥

ತಾವತ್ಸ್ವರ್ಗೇ ಸ ರಮತೇ ಯಾವತ್ಕೀರ್ತಿರನಶ್ವರಾ ।
ತಾವತ್ತ್ರಿಲಾಯಾಮಧ್ಯಾಸ್ತೇ ಸುಕೃತೀ ವೈಬುಧಂ ಪದಂ ॥ ೮೨ ॥

ಹಂಸಸ್ಯಾಕ್ಷಿಪ್ತನೀಲ್ಯಗ್ರಂ ಪದ್ಮಿನೀಖಂಡಮಂಡಿತಂ ।
ಪೀಯಮಾನಂ ಮಹಾಗ್ರಾನ್ಯೈರ್ಧನ್ಯಾಃ ಪಶ್ಯಂತಿ ಸ್ವಂ ಸರಃ ॥ ೮೩ ॥

---

೮೦. ಈರೀತಿ ಈ ಲೋಕದಲ್ಲಿ ತಡಾಗ ಮತ್ತು ದೇವಾಲಯ ಇವನ್ನು ನಿರ್ಮಾಣಮಾಡುವವನಿಗೆ ಪರಿಶುದ್ಧವಾದ ಕೀರ್ತಿಯುಂಟಾಗುವುದಲ್ಲದೆ ಅವನು ಮುಂದೆ ಅಸಮಾನನೆನಿಸಿ ಮುಪ್ಪಿಲ್ಲದೆ ಅಮರತ್ವವನ್ನು ಹೊಂದುವನು.

೮೧. ತಟಾಕಾದಿ (ನಿಬಂಧಗಳನ್ನು) ನಿರ್ಮಾಣವನ್ನೆಸಗಿ, ಅದರ ಕರ್ತರು ಸ್ವರ್ಗಸ್ಥರಾಗಿ ಹೋಗಿದ್ದರೂ, ಆ ಮಾನವರ ಕೀರ್ತಿಶರೀರವು ಈ ಭೂಲೋಕದಲ್ಲಿ ನಿರಂತರವಾಗಿ ಇರುವುದು.

೮೨ ಈ ಮಾನವನು ದೇವಲೋಕ ಸೇರಿದ ಮೇಲೆ ತನ್ನ ಕೀರ್ತಿಯು ಈ ಭೂಮಂಡಲದಲ್ಲಿ ಎಲ್ಲಿಯವರೆಗೆ ನಾಶವಾಗದೆ ಶಾಶ್ವತವಾಗಿರುವುದೋ, ಅಲ್ಲಿಯವರೆಗೆ, ಸ್ವರ್ಗಲೋಕದಲ್ಲಿ ಸುಖಾನುಭವಮಾಡುತ್ತಾನೆ.

೮೩. ಈ ಪುಣ್ಯಕಾರ್ಯದಿಂದ ಸ್ವರ್ಗವನ್ನು ಪಡೆದಿರುವ ಮಹನೀಯರು ತಾವು ನಿರ್ಮಿಸಿದ ಈ ತಡಾಗಾದಿಗಳಲ್ಲಿ ಹಂಸಗಳು ಪದ್ಮದಂಡವನ್ನು ಕಚ್ಚಿತಿಂದು, ಮಿಕ್ಕುದೆಲ್ಲಾ ಅಲ್ಲೇ ಬಿದ್ದು ಅಲಂಕೃತವಾದಂತೆ ಕಾಣುತ್ತಿರುವ ಅದರ ಜಲವನ್ನು ಗ್ರಾಮೀಣರೂ ಪಥಿಕರೂ ಪಾನಮಾಡುವುದನ್ನು ತಾವಿರುವ ಸ್ಥಳದಿಂದಲೇ ನೋಡುತ್ತಾ, ತಾವೇ ನಿಜವಾಗಿ ಧನ್ಯರೆಂದು ಸಂತೋಷಪಡುವರು.

ಘಟ್ಯೈರಂಜಲಿಭಿರ್ವಕ್ತ್ರೈರ್ಯಸ್ಯ ವಾಟೀಪುಟ್ಯೈರ್ಜಲಂ ।
ಪಿಬಂತಿ ಜಂತವಸ್ಸರ್ವೇ ಕಿಮನ್ಯತ್ತಸ್ಯ ವರ್ಣ್ಯತೇ ॥ ೮೪ ॥

ತಡಾಗಂ ನಗರೋಪಾಂತೇ ಧನ್ಯಸ್ಯ ಕಿಲ ಜಾಯತೇ ।
ಉಭಯೋರರ್ಥಸಂಸಿದ್ಧಿರ್ದೃಷ್ಟಾ ಕರ್ತುರ್ಜನಸ್ಯ ಚ ॥ ೮೫ ॥

ಯೇಷಾಂ ದೇವಕುಲಂ ತತ್ತು ನಿಷ್ಪದ್ಯೇತ ಸರಸ್ತಟೇ ।
ಅಭೀಷ್ಟದೇವತಾಯುಕ್ತಂ ತೇಷಾಂ ಪಾರ್ಥ ಕಿಮುಚ್ಯತೇ ॥ ೮೬ ॥

ನ ಭವಂತೀಷ್ಟಿಕಾ ಯಾವದ್ದ್ರೋಣೀ ವಾ ಭೂಮಿಸನ್ನಿಭಾ ।
ಸ್ವರ್ಗೇ ಮಹೀಯತೇ ತಾವತ್ಕಾರಕೋ ದೇವವೇಶ್ಮನಃ ॥ ೮೭ ॥

---

೮೪. ಮಹಾನುಭಾವನಾದ ಪುಣ್ಯಾತ್ಮನು ನಿರ್ಮಿಸಿದ ತಟಾಕಾದಿಗಳ ನೀರನ್ನು, ಮನುಷ್ಯಾದಿ ಪ್ರಾಣಿಗಳು ಗಡಿಗೆಗಳಿಂದಲೂ, ಬೊಗಸೆಯಿಂದಲೂ, ಬಾಯಿಯಿಂದಲೂ, ಆಲದೆಲೆ ಮುಂತಾದ್ದರ ದೊನ್ನೆಗಳಿಂದಲೂ, ಪಾನಮಾಡಿ ಸಂತುಷ್ಟಿಹೊಂದಿದರೆ ಅವನಿಗುಂಟಾಗುವ ಪುಣ್ಯವನ್ನು ಇಷ್ಟೆಂದು ವರ್ಣಿಸುವುದು ಸಾಧ್ಯವಾದೀತೆ !

೮೫. ಧನ್ಯನಾದ ಮಾನವನು ಪಟ್ಟಣದ ಹತ್ತಿರ ತಡಾಗವನ್ನು ಕಟ್ಟಿಸಿದರೆ, ಕಟ್ಟಿಸಿದವನಿಗೂ ಮತ್ತು ಇತರ ಗ್ರಾಮದ ಜನಗಳಿಗೂ ಸಹ ಇಷ್ಟಾರ್ಥಸಿದ್ಧಿಯಾಗುವುದು.

೮೬. ತಡಾಗವನ್ನೂ, ಅದರ ತೀರದಲ್ಲಿ ದೇವಾಲಯವನ್ನೂ ನಿರ್ಮಿಸಿ, ಅದರಲ್ಲಿ ತನ್ನ ಅಭೀಷ್ಟದೇವರನ್ನೂ ಪ್ರತಿಷ್ಠೆ ಮಾಡಿದರೆ, ಆ ಮಾನವನ ಪುಣ್ಯವನ್ನು ಎಷ್ಟೆಂದು ತಾನೇ ಹೇಳಲು ಸಾಧ್ಯವಾದೀತು !

೮೭. ದೇವಾಲಯವನ್ನು ಕಟ್ಟಿಸಿದ ಯಜಮಾನನು, ತಾನು ಭೂಲೋಕದಲ್ಲಿ ಕಟ್ಟಿಸಿರುವ ದೇವಾಲಯಸಂಬಂಧವಾದ ಇಟ್ಟಿಗೆಗಳು ಅಥವಾ ಮಣ್ಣು ಇವು ಬಿದ್ದುಹೋಗಿ ನೆಲಸಮವಾಗುವವರೆಗೂ ಸ್ವರ್ಗಲೋಕದಲ್ಲಿ ದಿವ್ಯಭೋಗಗಳನ್ನನುಭವಿಸುತ್ತಾ ವಿಹರಿಸುವನು.

ಭೋಗ್ಯಸ್ಥಾನೇ ಕೃತಃ ಕೂಪಃ ಸುಸ್ವಾದುಸಲಿಲಸ್ತಥಾ ।
ದೃಢರಜ್ಜುಸಮಾಯುಕ್ತಃ ಪುನಾತ್ಯಾಸಪ್ತಮಂ ಕುಲಂ　　॥ ೮೮ ॥

ಯಸ್ಯ ಸ್ವಾದುಜಲಂ ಕೂಪೇ ಪಿಬಂತಿ ಸತತಂ ಜನಾಃ ।
ಕಿಂ ತೇನ ನ ಕೃತಂ ಪುಣ್ಯಂ ಸರ್ವಸತ್ವೋಪಕಾರಿಣಾ　　॥ ೮೯ ॥

ಯಃ ಪ್ರಾಸಾದಾನ್ಪ್ರಚಯತಿ ಶುಭಾನ್ದೇವತಾನಾಂ ತಡಾಗೇ ।
ಕೀರ್ತಿಸ್ತಸ್ಯ ಭ್ರಮತಿ ವಿಪುಲಾ ವಂಶಮಾರ್ಗಾನುಯಾತಾ ॥
ದಿವ್ಯಾನ್ಭೋಗಾನ್ಸೃಜತಿ ಚ ಸದಾ ಕಾರಕಶ್ಚಾಪ್ರಮೇಯಾರ್ ।
ಭುಕ್ತ್ವಾ ಸೌಖ್ಯಂ ಪುನರಪಿ ಚ ಭವೇಚ್ಚಕ್ರವರ್ತೀ ಪೃಥಿವ್ಯಾಂ ॥

ತೇಷಾಂ ತಡಾಗಾನಿ ಬಹೂದಕಾನಿ ।
ಕೂಪಾಶ್ಚ ಯೂಪಾಶ್ಚ ಪ್ರತಿಶ್ರಯಾಶ್ಚ ॥

---

೮೮. ಮಾನವಾದಿಗಳಿಗೆ ಉಪಯೋಗಕ್ಕೆ ಅರ್ಹವಾದ ಸ್ಥಳದಲ್ಲಿ, ಸಿಹಿ ನೀರಿನ ಭಾವಿಯನ್ನು ತೋಡಿಸಿ, ಅದಕ್ಕೆ ದೃಢವಾದ ಸೇದುವ ಹಗ್ಗವನ್ನು ಹಾಕಿಸುವ ಮಾನವನು, ತನ್ನ ಪೂರ್ವಿಕರಾದ ಏಳು ತಲೆಮಾರಿನವರನ್ನು ಪರಿಶುದ್ಧರನ್ನಾಗಿ ಮಾಡುವನು.

೮೯. ಯಾರು ಕಟ್ಟಿಸಿದ ಭಾವಿಯ ಸಿಹಿನೀರನ್ನು ಅನವರತವೂ ಜನಗಳೂ ಸಕಲ ಪ್ರಾಣಿಗಳೂ ಕುಡಿಯುತ್ತಾರೋ, ಅಂತಹ ಉಪಕಾರಿಯಾದ ಮಾನವನಿಗೆ ಉಂಟಾಗುವ ಪುಣ್ಯಕ್ಕಿಂತ ಅತಿಶಯವಾದುದು ಇನ್ನೇನುಬೇಕು ?

೯೦. ಶುಭಕರವಾದ ದೇವಗೃಹಗಳನ್ನೂ, ಮತ್ತು ಸಕಲ ಪ್ರಾಣಿಗಳಿಗೂ ಉಪಯೋಗವಾಗುವ ತಡಾಗಾದಿಗಳನ್ನೂ ನಿರ್ಮಿಸುವ ಮಾನವನಿಗೆ, ವಂಶ ಪಾರಂಪರ್ಯವಾಗಿ ಅಪಾರಕೀರ್ತಿಯುಂಟಾಗುವುದಲ್ಲದೆ, ಆ ಮಾನವನು ಸ್ವರ್ಗ ಲೋಕದಲ್ಲಿ ಅಪರಿಮಿತವಾದ ದಿವ್ಯಭೋಗಗಳನ್ನು ಅನುಭವಿಸಿ, ಪುನಃ ಭೂಲೋಕದಲ್ಲಿ ಜನಿಸಿ ಚಕ್ರವರ್ತಿಯಾಗುವನು.

೯೧. ಇವರು ನಿರ್ಮಿಸಿರುವ ಜಲಭರಿತವಾದ ತಟಾಕಾದಿಗಳು, ಸ್ವಾದು ಜಲಭರಿತವಾದ ಕೂಪಗಳು, ಉತ್ಸರ್ಗಕ್ರಮದಲ್ಲಿ ವೇದಿಕೆಯ ಮಧ್ಯೆ ಸ್ಥಾಪಿಸುವ ಯೂಪಸ್ತಂಭಗಳು, ಮತ್ತು ಇತರ ಸಂಭಾರಗಳು, ಅನ್ನದಾನ, ಮತ್ತು ಮೃದು

ಅನ್ನಪ್ರದಾನಂ ಮಧುರಾ ಚ ವಾಣೀ ।
ಯಮಸ್ಯ ತೇ ನಿರ್ವಚನೀಭವಂತಿ ॥ ೯೧ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀಕೃಷ್ಣಯುಧಿಷ್ಠಿರಸಂವಾದೇ ವಾಪೀಕೂಪತಡಾಗೋತ್ಸರ್ಗವಿಧಿವರ್ಣನಂ ನಾಮ ಸಪ್ತವಿಂಶತ್ಯುತ್ತರಶತತಮೋಽಧ್ಯಾಯಃ.



---

ನುಡಿ ಇವುಗಳೆಲ್ಲವೂ ಯಮನು ಇವರ ವಿಷಯದಲ್ಲಿ ಮಾತನಾಡುವುದಕ್ಕೂ ಅವಕಾಶವೇ ಇಲ್ಲದಂತೆ ಮಾಡುವುದು. ಎಂದರೆ ನರಕಾದಿಗಳ ಸಂಪರ್ಕವೇ ಇಲ್ಲದೆ ಸ್ವರ್ಗಾದಿ ಉತ್ತಮಗತಿಗಳನ್ನು ಉಂಟುಮಾಡುವುದು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ವಾಪೀಕೂಪತಟಾಕಗಳ ಉತ್ಸರ್ಗವಿಧಿವರ್ಣನೆಯೆಂಬ ನೂರಇಪ್ಪತ್ತೇಳನೆಯ ಅಧ್ಯಾಯ ಮುಗಿದುದು.

॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣ
## ಉತ್ತರಪರ್ವಣಿ
## ಅಷ್ಟಾವಿಂಶತ್ಯುತ್ತರಶತತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

**ವೃಕ್ಷಾರೋಪಣಮಾಹಾತ್ಮ್ಯಂ ವದ ದೇವಕಿನಂದನ ।**
**ಉದ್ಯಾಪನವಿಧಿಂ ಚೈವ ಸ ರಹಸ್ಯಂ ಸಮಾಸತಃ ॥ ೧ ॥**

॥ ಶ್ರೀಕೃಷ್ಣ ಉವಾಚ ॥

**ವರಂ ಭೂಮಿರುಹಾಃ ಪಂಚ ನಗಕಾಷ್ಠರುಹಾ ದಶ ।**
**ಪತ್ರೈಃ ಪುಷ್ಪೈಃ ಫಲೈರ್ಮೂಲೈಃ ಕುರ್ವಂತಿ ಪಿತೃತರ್ಪಣಂ ॥ ೨ ॥**

---

### ನೂರಇಪ್ಪತ್ತೆಂಟನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ದೇವಕೀನಂದನನಾದ ಎಲೈ ಮುಕುಂದ! ವೃಕ್ಷಾರೋಪಣ ಮಾಹಾತ್ಮ್ಯವನ್ನೂ, ರಹಸ್ಯಯುಕ್ತವಾದ ಅದರ ಉದ್ಯಾಪನ ವಿಧಿಯನ್ನೂ, ಕೃಪೆಯಿಟ್ಟು ಸಂಕ್ಷೇಪವಾಗಿಯಾದರೂ ತಿಳಿಸು ಎಂದನು.

೨. ಶ್ರೀಕೃಷ್ಣನು ಹೇಳುತ್ತಾನೆ—ಓ ಯುಧಿಷ್ಠಿರ! ಸಮಭೂಮಿಯಲ್ಲಿ ಬೆಳೆಯುವವುಗಳಲ್ಲಿ ಐದುಬಗೆಯ ವೃಕ್ಷಗಳೂ, ಬೆಟ್ಟಗುಡ್ಡಗಳಲ್ಲಿ ಬೆಳೆಯುವವುಗಳಲ್ಲಿ ಹತ್ತುಬಗೆಯ ಮರ, ಬಳ್ಳಿ ಇವುಗಳೂ ಶ್ರೇಷ್ಠವೆನಿಸಿರುವುವು. ಇವುಗಳ ಪತ್ರೆ, ಹೂವು, ಹಣ್ಣು, ಕಾಯಿ, ಬೇರು ಇವುಗಳಿಂದ ಮಾನವರು ಪಿತ್ರಾದಿಗಳಿಗೆ ತರ್ಪಣಕೊಡುವರು.

ಬಹುಭಿರ್ವ್ಯರ್ತಕಿಂಜಾತೈಃ ಪುತ್ರೈರ್ಧರ್ಮಾರ್ಥವರ್ಜಿತೈಃ ।
ವರಮೇಕಂ ಪಥಿ ತರುರ್ಯತ್ರ ವಿಶ್ರಮತೇ ಜನಃ ॥ ೩ ॥

ಪ್ರಾಣಿನಃ ಪ್ರೀಣಯಂತಿ ಸ್ಮ ಚ್ಛಾಯಾವಲ್ಕಲಪಲ್ಲವೈಃ ।
ಘನಚ್ಛದಾಃ ಸುತರವಃ ಪುಷ್ಪೈರ್ದೇವಾನ್ಫಲೈಃ ಪಿತೄನ್ ॥ ೪ ॥

ಪುಷ್ಪಪತ್ರಫಲಚ್ಛಾಯಾಮೂಲವಲ್ಕಲದಾರುಭಿಃ ।
ಧನ್ಯಾ ಮಹೀರುಹಾ ಯೇಷಾಂ ವಿಫಲಂ ಯಾಂತಿ ನಾರ್ಥಿನಃ ॥ ೫ ॥

ಪುತ್ರಾಃ ಸಂವತ್ಸರಸ್ಯಾಂತೇ ಶ್ರಾದ್ಧಂ ಕುರ್ವಂತಿ ವಾ ನ ವಾ ।
ಪ್ರತ್ಯಹಂ ಪಾದಪಾಃ ಪುಷ್ಟಿಂ ಶ್ರೇಯೋಽರ್ಥಂ ಜನಯಂತಿ ಹಿ ॥ ೬ ॥

---

೩. ಕೆಲಸಕ್ಕೆ ಬಾರದವರಾಗಿ ನಾಮಮಾತ್ರಕ್ಕೆ ಪುತ್ರರೆನ್ನಿಸಿಕೊಳ್ಳುವ ಅನೇಕ ಮಕ್ಕಳು ಮಾನವನಿಗೆ ಹುಟ್ಟಿ, ಕಡುಮೂರ್ಖರಾಗಿ ಪರನಿಂದೆಗೊಳಗಾಗಿ ಮೃತರಾಗುವುದಕ್ಕಿಂತ, ಜನರು ಸಂಚರಿಸುವ ಮಾರ್ಗದಲ್ಲಿ ಒಂದು ಮರವನ್ನಾದರೂ ಹಾಕಿದರೆ ಅದರ ನೆರಳಿನಲ್ಲಿ ಮಾರ್ಗಸ್ಥರು ವಿಶ್ರಮಿಸಿಕೊಳ್ಳುವುದರಿಂದ ಅದನ್ನು ನೆಟ್ಟವನಿಗೆ ಪುಣ್ಯಲಾಭವೂ ಸುಖಪ್ರಾಪ್ತಿಯೂ ಆಗುವುದು ಎಂದು ತಿಳಿಯಬೇಕು.

೪. ಆ ಮರಗಳ ನೆಳಲು ವಲ್ಕಲ (ನಾರು), ಚಿಗುರು, ತೊಗಟೆ ಮುಂತಾದುವುಗಳಿಂದ ಪ್ರಾಣಿಗಳು ಸಂತೋಷಹೊಂದುವುವು. ಸಾಂದ್ರವಾದ ಎಲೆಗಳುಳ್ಳ ಮರಗಳು, ತಮ್ಮ ಪುಷ್ಪಗಳಿಂದ ದೇವತೆಗಳನ್ನೂ, ಹಣ್ಣು ಮುಂತಾದುವುಗಳಿಂದ ಪಿತೃಗಳನ್ನೂ ತೃಪ್ತಿಪಡಿಸುವುವು.

೫. ಹೂವು, ಪತ್ರೆ, ಹಣ್ಣು, ಬೇರು, ನಾರು (ವಲ್ಕಲ), ಮರದ ದಪ್ಪ ದಿಮ್ಮಿ ಮುಂತಾದುವುಗಳಿಂದ ಈ ವೃಕ್ಷಗಳು ತಮ್ಮನ್ನು ಯಾಚಿಸಲುಬಂದ ಅತಿಥಿಗಳಿಗೆ, ತಮ್ಮಲ್ಲಿರುವವುಗಳಲ್ಲಿ ಅವರವರಿಗೆ ಬೇಕಾದ್ದನ್ನು ಕೊಟ್ಟು, ತಮ್ಮನ್ನು ಪ್ರಾರ್ಥಿಸಲು ಬರುವವರು ವಿಫಲಮನೋರಥರಾಗದಂತೆ ನೋಡಿಕೊಂಡು ತಾವೂ ಧನ್ಯವೆನಿಸಿರುವುವು.

೬. ಪುತ್ರರು ಪ್ರತಿಸಂವತ್ಸರದಲ್ಲೂ ಶ್ರಾದ್ಧಮಾಡುವರೋ ಇಲ್ಲವೋ ಎಂದು ಒಂದುಪಕ್ಷ ಸಂದೇಹಬಂದರೂ, ಅವನಿಂದ ರೋಪಿತವಾದ ವೃಕ್ಷಾದಿ

**ನ ತತ್ಕರೋತ್ಯಗ್ನಿಹೋತ್ರಂ ಸುಖಂ ಯದ್ಯೋಷಿತಃ ಸುತಃ ।**
**ಯತ್ಕರೋತಿ ಘನಚ್ಛಾಯಃ ಪಾದಪಃ ಪಥಿ ರೋಪಿತಃ　　॥ ೭ ॥**

**ಸಚ್ಛಾಯಾ ಚ ಸಪುಷ್ಪಾ ಚ ಸಫಲಾ ವೃಕ್ಷವಾಟಿಕಾ ।**
**ಕುಲಯೋಷೇವ ಭವತಿ ಭರ್ತೃರ್ಲೋಕದ್ವಯಾನುಗಾ　　॥ ೮ ॥**

**ಅಶೋಕಫಲಾವಕರಾ ತಿಲಕಾಲಂಕೃತಾನನಾ ।**
**ಸರ್ವೋಪಭೋಗವೇಶ್ಯೇವ ವಾಟಿಕಾ ರಸಿಕಾ ಸದಾ　　॥ ೯ ॥**

---

ಗಳು ಪುತ್ರರಂತೆ ಪ್ರತಿನಿತ್ಯವೂ ಪಿತೃಗಳಿಗೆ ತಮ್ಮ ಹಣ್ಣುಗಳಿಂದ ಪುಷ್ಟಿಯನ್ನೂ, ತನ್ನ-ನ್ನು ಬೆಳೆಯಿಸಿದವನಿಗೆ ಶ್ರೇಯಸ್ಸನ್ನೂ, ಅರ್ಥಿಗಳಿಗೆ ಬೇಕಾದ ಅರ್ಥವನ್ನೂ ತಪ್ಪದೆ ಕೊಡುತ್ತಿವೆ.

೭. ತನ್ನ ಔರಸಪುತ್ರನು ನಿತ್ಯವೂ ಅಗ್ನಿಹೋತ್ರಾದಿಗಳನ್ನಾಚರಿಸಿ, ಪಿತೃತೃಪ್ತಿಯನ್ನು ಮಾಡದಿರಬಹುದು. ತಾನು ನೆಟ್ಟ ಮರಗಳು ಮಾತ್ರ, ನಿಬಿಡವಾದ ಛಾಯೆಯಿಂದ ದಾರಿನಡೆದು ಬಳಲಿದ ಪಥಿಕರಿಗೆ ವಿಶ್ರಾಂತಿಸುಖವನ್ನುಂಟು ಮಾಡುವುವು.

೮. ಕುಲಸ್ತ್ರೀಯು ಭರ್ತೃವಿನ ಇಹ, ಪರ ಎಂಬ ಎರಡು ಲೋಕಗಳನ್ನೂ ಅನುಸರಿಸಿ ಸುಖವುಂಟುಮಾಡುವಂತೆ; ಒಳ್ಳೆಯ ನೆರಳು, ಪುಷ್ಪ, ಫಲಗಳುಳ್ಳ ವೃಕ್ಷಪಂಕ್ತಿಗಳು, ಯಜಮಾನನು ಬದುಕಿರುವವರೆಗೆ ಈ ಲೋಕದಲ್ಲಿ ಅವನ ಸುಖಕ್ಕೆ ನೆರವಾಗುವುದಲ್ಲದೆ ಆ ಪುಣ್ಯದಿಂದ ಪರಲೋಕದಲ್ಲಿ ಸಹ ಯಜಮಾನನ ಸಂತೋಷಕ್ಕೆ ಕಾರಣವಾಗುವುದು.

೯. ಅಶೋಕಪುಷ್ಪಗಳನ್ನು ತಲೆಯಲ್ಲಿ ಮುಡಿದು, ತಿಲಕದಿಂದ ಶೋಭಿಸುವ ಹಣೆಯುಳ್ಳವಳೂ, ಸರ್ವರ ಉಪಭೋಗಕ್ಕೆ ಅರ್ಹಳೂ, ರಸಿಕಳೂ ಆದ, ವೇಶ್ಯಾಸ್ತ್ರೀಯಂತೆ ಈ ವೃಕ್ಷಪಂಕ್ತಿಯು ತನ್ನ ಛಾಯಾ, ಫಲ, ಪುಷ್ಪಾದಿಗಳಿಂದ ಸರ್ವರಿಗೂ ಉಪಭೋಗಾರ್ಹವಾಗಿರುವುದು.

ಸದಾ ಚ ತೀರ್ಥೀ ಭವತಿ ಸದಾ ದಾನಂ ಪ್ರಯಚ್ಛತಿ ।
ಸದಾ ಯಜ್ಞಂ ಸ ಯಜತೇ ಯೋ ರೋಪಯತಿ ಪಾದಪಂ ॥ ೧೦ ॥

ಅಶ್ವತ್ಥಮೇಕಂ ಪಿಚುಮಂದಮೇಕಂ ।
ನ್ಯಗ್ರೋಧಮೇಕಂ ದಶ ಚಿಂಚಿಣೀಕಾ ॥
ಕಪಿತ್ಥಬಿಲ್ವಾಮಲಕೀ ತ್ರಯಂ ಚ ।
ಪಂಚಾಮ್ರವಾಪೀ ನರಕಂ ನ ಪಶ್ಯೇತ್ ॥ ೧೧ ॥

ಪುಷ್ಪೋಪಗಂಧಾಢ್ಯಫಲೋಪಗಂಧಂ ।
ಯಃ ಪಾದಪಂ ಸ್ಪರ್ಶಯತೇ ದ್ವಿಜಾಯ ॥
ಸ ಸ್ತ್ರೀಸಮೃದ್ಧಂ ಬಹುರತ್ನಪೂರ್ಣಂ ।
ಲಭೇದ್ವಿಮಾನಪ್ರತಿಮಂ ಗೃಹೇ ವೈ ॥ ೧೨ ॥

---

೧೦. ವೃಕ್ಷಾರೋಪಣಕರ್ಮವನ್ನು ಆಚರಿಸಿದ ಮಾನವನು, ಸದಾ ತೀರ್ಥಸ್ನಾನಮಾಡಿದಂತೆಯೂ, ಸಕಲದಾನಗಳನ್ನೂ, ಸರ್ವಯಜ್ಞಗಳನ್ನೂ ಮಾಡಿದಂತೆಯೂ ಆಗುವುದೆಂದು ತಿಳಿಯಬೇಕು.

೧೧. ಒಂದು ಅಶ್ವತ್ಥ (ಅರಳಿ), ಒಂದು ಪಿಚುಮಂದ (ಬೇವು), ಒಂದು ನ್ಯಗ್ರೋಧ(ಆಲ), ಹತ್ತು ಚಿಂಚಾವೃಕ್ಷ(ಹುಣಿಸೆ), ಒಂದು ಕಪಿತ್ಥವೃಕ್ಷ(ಬೇಲ), ಒಂದು ಬಿಲ್ವವೃಕ್ಷ, ಮೂರು ಆಮಲಕವೃಕ್ಷ (ನೆಲ್ಲಿಯ ಮರ) ಮತ್ತು ಐದು ಆಮ್ರ ವೃಕ್ಷ(ಮಾವು) ಇವುಗಳನ್ನು ಹಾಕಿ ಬೆಳೆಯಿಸುವವನು ಎಂದಿಗೂ ನರಕಹೊಂದು ವುದಿಲ್ಲ.

೧೨. ಸುವಾಸನೆಯ ಪುಷ್ಪಗಳಿಂದ ಕೂಡಿ, ಮಧುರವೂ ಸುವಾಸಿತವೂಆದ ಫಲವನ್ನು ಬಿಟ್ಟು ಅಲಂಕೃತವಾಗಿರುವ ವೃಕ್ಷವನ್ನು ಬ್ರಾಹ್ಮಣನು ಸ್ಪರ್ಶಮಾಡಿ ಉಪಭೋಗಿಸುವಂತೆ ಮಾಡಿಸುವಾತನು, ಸ್ತ್ರೀರತ್ನಗಳಿಂದಲೂ, ನಾನಾಮಣಿರತ್ನ ಗಳಿಂದಲೂ ಶೋಭಿಸುವ ದಿವ್ಯವಿಮಾನಸದೃಶವಾದ ನಿವಾಸವನ್ನು ಪಡೆಯು ತ್ತಾನೆ.

ಪ್ರತಿಶ್ರಯಾಶ್ರಾಂತ ಸಮಾಶ್ರಯತ್ವಾತ್ ।
ಸಮಾಹಿತಂ ತತ್ರ ಫಲಂ ಬುಭುಕ್ಷೋಃ ॥
ಅಪತ್ಯಮೇಕಂ ಪರಲೋಕಹೇತೋಃ ।
ವಿಮೃಶ್ಯತಾಂ ಕಿಂ ತರವೋ ನ ರೋಪಿತಾಃ ॥ ೧೩ ॥

ನ ಖಾನಿತಾಃ ಪುಷ್ಕರಿಣ್ಯೋ ರೋಪಿತಾ ನ ಮಹೀರುಹಾಃ ।
ಮಾತುರ್ಯೌವನಚೌರೇಣ ತೇನ ಜಾತೇನ ಕಿಂ ಕೃತಂ ॥ ೧೪ ॥

ಛಾಯಾಮನ್ಯಸ್ಯ ಕುರ್ವಂತಿ ತಿಷ್ಠಂತಿ ಸ್ವಯಮಾತಪೇ ।
ಫಲಂತಿ ಚ ಪರಾರ್ಥೇಷು ನ ಸ್ವಾರ್ಥೇಷು ಫಲದ್ರುಮಾಃ ॥ ೧೫ ॥

ಅತಃ ಪರಂ ಪ್ರವಕ್ಷ್ಯಾಮಿ ವೃಕ್ಷಸ್ಯೋದ್ಯಾಪನೇ ವಿಧಿಂ ।
ಸರ್ವಪಾಪಪ್ರಶಮನಂ ಸರ್ವಕೀರ್ತಿವಿವರ್ಧನಂ ॥ ೧೬ ॥

---

೧೩. ತನ್ನ ಬಳಿ ಬರುವವರಿಗೆ ತನ್ನ ನೆಳಲಿನಿಂದ ಶ್ರಮಪರಿಹಾರಮಾಡಿ ಆಶ್ರಯಕೊಡುವ ಉತ್ತಮ ವೃಕ್ಷವನ್ನು ನೆಟ್ಟು ಬೆಳಸದೆ ಇದ್ದವನು, ತನ್ನ ಸದ್ಗತಿಪ್ರಾಪ್ತಿಗಾಗಿ ಪುತ್ರನನ್ನು ಪಡೆದೇ ತೀರಬೇಕು. ವೃಕ್ಷಾರೋಪಣಮಾಡುವವನಿಗೆ ಸ್ವಂತ ಮಗನಿಲ್ಲದಿದ್ದರೂ ಸದ್ಗತಿಯುಂಟಾಗುವುದು.

೧೪. ಮಾನವನು ಕಮಲಸರೋವರವನ್ನು ತೋಡಿಸದೆಯೂ, ವೃಕ್ಷಸಮೂಹವನ್ನು ರೋಪಣಮಾಡವೆಯೂ ಹೋದರೆ, ಅವನ ಜನನವು ತಾಯಿಯ ಯೌವನವನ್ನು ಕುಗ್ಗಿಸುವುದಕ್ಕೆ ಮಾತ್ರ ಕಾರಣವಾಯಿತೇವಿನಾ ಇನ್ನೇನೂ ಫಲವಿಲ್ಲ. ಸರಃಖನನ, ವೃಕ್ಷರೋಪಣರೂಪವಾದ ಧರ್ಮಕಾರ್ಯಮಾಡದ ಮಾನವನ ಜನ್ಮ ವ್ಯರ್ಥ.

೧೫. ಈ ಮಹಾವೃಕ್ಷಗಳು ತಾವು ಬಿಸಿಲಿನಲ್ಲಿಯೇ ನಿಂತುಕೊಂಡು ಮತ್ತೊಬ್ಬರಿಗೆ ನೆರಳನ್ನು ಒದಗಿಸಿಕೊಡುತ್ತವೆ. ತಮ್ಮ ಹೂವು ಕಾಯಿಗಳೆಲ್ಲವನ್ನೂ ಕೇವಲ ಪರಾರ್ಥಕ್ಕಾಗಿ ವಿನಿಯೋಗಿಸಲು ಬದ್ಧಕಂಕಣವಾಗಿವೆಯೇ ವಿನಾ ಸ್ವಲ್ಪವನ್ನೂ ಸ್ವಾರ್ಥಕ್ಕೆ ಬಳಸುವುದಿಲ್ಲ.

೧೬. ಓ ಯುಧಿಷ್ಠಿರ! ಇನ್ನುಮುಂದೆ ಸರ್ವಪಾಪಗಳನ್ನೂ ನಿರ್ಮೂಲಮಾಡಿ, ಸಕಲಕೀರ್ತಿಗಳನ್ನೂ ಹೆಚ್ಚಿಸುವ ವೃಕ್ಷೋದ್ಯಾಪನವಿಧಿಯನ್ನು ಹೇಳುವೆನು ಕೇಳು.

ಅಪುತ್ರಯಾ ಪುರಾ ಪಾರ್ಥ ಪಾರ್ವತ್ಯಾ ಮಂದರಾಚಲೇ ।
ಅಶೋಕಃ ಶೋಕಶಮನಃ ಪುತ್ರತ್ವೇ ಪರಿಕಲ್ಪಿತಃ ॥ ೧೭ ॥

ಜಾತಕರ್ಮಾದಿಕಾಸ್ತಸ್ಯ ಯಾಃ ಕ್ರಿಯಾಃ ಕಿಲ ಬುದ್ಧಿಮಾನ್ ।
ಚರಕಾತ್ರಿಪುರಾಣೋಕ್ತಾಸ್ತಾಃ ಶೃಣುಷ್ವ ಯುಧಿಷ್ಠಿರ ॥ ೧೮ ॥

ತತೋ ಮೂಲೇ ಘನದಲೇ ವಲ್ಗುಚ್ಛಾಯಾಂಗಪಲ್ಲವಃ ।
ಶೀತವಾತಾತಪಸಹಃ ಸಂಸ್ಕಾರ್ಯಸ್ತರುಣಸ್ತರುಃ ॥ ೧೯ ॥

ಸ್ತ್ರೀ ನಾಮ ಕಂಟಕೀಕುಬ್ಜಕೀಟವೃಶ್ಚಿಕಕೋಟರಃ ।
ನೋದ್ಯಾಪ್ಯಃ ಪಾದಪಃ ಪಾರ್ಥ ಶಿಷ್ಟಾನಾಂ ಯೋ ನ ಸಂಮತಃ ॥

---

೧೭. ಓ ಕುಂತೀಪುತ್ರನೇ! ಹಿಂದೆ ಪಾರ್ವತಿಯು ಮಂದರಪರ್ವತದಲ್ಲಿ ಪುತ್ರಸಂತಾನವಿಲ್ಲದೆ ದುಃಖಿತಳಾಗಿದ್ದಾಗ, ಶೋಕನಾಶಕವಾದ ಅಶೋಕವೃಕ್ಷವನ್ನೇ ಪುತ್ರನೆಂದು ಭಾವಿಸಿ ಅದನ್ನು ರೋಪಣಮಾಡಿದಳು.

೧೮. ಅಯ್ಯಾ ಬುದ್ಧಿಶಾಲಿಯಾದ ಯುಧಿಷ್ಠಿರ! ಚರಕಪುರಾಣ ಮತ್ತು ಅತ್ರಿಪುರಾಣಗಳಲ್ಲಿ ಈ ವೃಕ್ಷಗಳಿಗೆ ಉಕ್ತವಾಗಿರುವ ಜಾತಕರ್ಮಾದಿ ಸಕಲಕ್ರಿಯೆಗಳನ್ನೂ ನಿನಗೆ ಹೇಳುವೆನು ಕೇಳು.

೧೯. ವೃಕ್ಷವನ್ನು ರೋಪಣಮಾಡಿ ಸಂಸ್ಕಾರಮಾಡುವಾಗ ಆ ಮರವು ಮೂಲದಲ್ಲಿ ಘನವಾದ ದಳಗಳಿಂದ ಕೂಡಿರಬೇಕು. ತನ್ನ ಅಂಗರೂಪವಾದ ಚಿಗುರುಗಳ ಸಾಂದ್ರತೆಯಿಂದ ಚೆನ್ನಾಗಿ ನೆಳಲನ್ನು ಕೊಡುತ್ತಿರಬೇಕು. ಮತ್ತು ಶೀತ, ಗಾಳಿ, ಬಿಸಿಲು ಇವನ್ನು ಚೆನ್ನಾಗಿ ಸಹಿಸುವಂತಿರಬೇಕು. ಇಂತಹ ತರುಣವೃಕ್ಷಕ್ಕೆ ಯಾವಾಗಲೂ ಸಂಸ್ಕಾರಮಾಡಬೇಕು.

೨೦. ಮುಳ್ಳುಗಳಿಂದ ಕೂಡಿದುದು, ಕುಳ್ಳಾಗಿ ಕುರುಚಲಾಗಿರುವುದು, ಹುಳು ಮುಂತಾದುವುಗಳಿಂದ ಕೊರೆಯಲ್ಪಟ್ಟು ಅವುಗಳಿಗೆ ಆಶ್ರಯವಾದ ಪೊಟರೆಗಳನ್ನುಳ್ಳದು, ಇಂತಹ ಮರಗಳು ಸ್ತ್ರೀವೃಕ್ಷಗಳೆನಿಸುವುವು. ಎಲೈ ಕುಂತೀಪುತ್ರನೇ! ಇಂತಹ ವೃಕ್ಷಗಳಿಗೆ ಎಂದಿಗೂ ಸಂಸ್ಕಾರಮಾಡಬಾರದು. ಇದು ಶಿಷ್ಟರ ಸಂಪ್ರದಾಯಕ್ಕೆ ವಿರುದ್ಧವಾಗುವುದು. ಅವರ ಮತಕ್ಕೆ ವಿರುದ್ಧವಾಗುವಂತೆ ಎಂದಿಗೂ ಮಾಡಬಾರದು.

ಆಲವಾಲೇ ಸುವಿಹಿತೇ ಶುಭೇ ಬದ್ಧಚತುಷ್ಕಿಕೇ ।
ಶೋಧಯಿತ್ವಾ ತಮುದ್ದೇಶಂ ಸುಗುಪ್ತಂ ಕಾರಯೇತ್ತತಃ    ॥ ೨೧ ॥

ಸದೈವೋದ್ಯಾಪನಂ ಪಾರ್ಥ ಪಾದಪಾನಾಂ ಪ್ರಶಸ್ಯತೇ ।
ಶುಭೇಽಹ್ನಿ ವಿಪ್ರಕಥಿತೇ ಗ್ರಹನಕ್ಷತ್ರಸಂಯುತೇ    ॥ ೨೨ ॥

ಪತಾಕಾಲಂಕೃತಂ ವೃಕ್ಷಂ ಪೂರ್ವೇದ್ಯುರಧಿವಾಸಯೇತ್ ।
ರಕ್ತವಸ್ತ್ರೈಃ ಸಮಾಚ್ಛಾದ್ಯ ರಕ್ತಸೂತ್ರೇಣ ವೇಷ್ಟಯೇತ್    ॥ ೨೩ ॥

ಪಿಷ್ಟಾತಕೇನಾವಕಿರೇತ್ಸರ್ವೌಷಧ್ಯಾ ಚ ಪಾದಪಂ ।
ಸ್ಥಾಪಯೇತ್ಪೂರ್ಣಕಲಶಾಂಶ್ಚತುರ್ದಿಕ್ಷು ವಿಚಕ್ಷಣಃ    ॥ ೨೪ ॥

---

೨೧. ತಾನು ಬೆಳೆಯಿಸುವ ವೃಕ್ಷದ ನಾಲ್ಕುದಿಕ್ಕುಗಳಲ್ಲಿಯೂ ಅಗೆದು, ಚೆನ್ನಾಗಿ ಪಾತಿಮಾಡಿ, ಬಿಗಿಯಾಗಿ ದಡ ಕಟ್ಟಬೇಕು. ಅನಂತರ ಆ ಸ್ಥಳವನ್ನು ಸುತ್ತಲೂ ಚೆನ್ನಾಗಿ ಶುದ್ಧಿಮಾಡಿ, ಕೆಡದಂತೆ ನೋಡಿಕೊಂಡು ಕಾಪಾಡಬೇಕು.

೨೨. ಎಲೈ ಕುಂತೀಪುತ್ರ! ವಿಪ್ರೋತ್ತಮರು ಹೇಳುವ ಶುಭನಕ್ಷತ್ರ, ವಾರ ತಿಥಿ ಯುಕ್ತವಾದದಿನ ಹಗಲಿನಲ್ಲಿ, ಸಾಧಾರಣವಾಗಿ ಮಾಸನಿಯಮವಿಲ್ಲದೆ ಸರ್ವದಾ ವೃಕ್ಷೋದ್ಯಾಪನೆಯನ್ನು ಮಾಡುವುದು ಪ್ರಶಸ್ತವಾದುದೆಂದು ಹೇಳಿದೆ.

೨೩. ಉದ್ಯಾಪನೆಯ ಹಿಂದಿನದಿನ ಪತಾಕೆಗಳಿಂದ ವೃಕ್ಷವನ್ನು ಅಲಂಕರಿಸಿ ಅಧಿವಾಸಮಾಡಬೇಕು. ಅನಂತರ ಕೆಂಪುಬಟ್ಟೆಗಳನ್ನು ಹೊದ್ದಿಸಿ, ಕೆಂಪು ದಾರವನ್ನು ಆ ಮರದ ಸುತ್ತಲೂ ಸುತ್ತಬೇಕು.

೨೪. ಆ ವೃಕ್ಷವನ್ನು ಸುಗಂಧಚೂರ್ಣದಿಂದ ಸುವಾಸನಾಯುಕ್ತವನ್ನಾಗಿ ಮಾಡಿ ಸಕಲ ಓಷಧಿರಸಗಳಿಂದ ಆ ಮರವನ್ನು ಪ್ರೋಕ್ಷಿಸಬೇಕು. ಪ್ರಾಜ್ಞನಾದವನು ಆನಂತರ ನಾಲ್ಕು ದಿಕ್ಕುಗಳಲ್ಲಿಯೂ, ನಾಲ್ಕು ಜಲಪೂರ್ಣಕಲಶಗಳನ್ನು ಸ್ಥಾಪಿಸಬೇಕು.

ಪಲ್ಲವಾಲಂಕೃತಮುಖಾನ್ ಸಿತಚಂದನಚರ್ಚಿತಾನ್ ।
ಸಿತವಾಸೋಯುಗಚ್ಛನ್ನಾನ್ಸಕಲಾನ್ರತ್ನಗರ್ಭಿಣಃ ॥ ೨೫ ॥

ಪತಾಕಾಲಂಕೃತಾಸ್ಸರ್ವೇ ಕಾರ್ಯಾಸ್ತತ್ಸನ್ನಿಧೌ ದ್ರುಮಾಃ ।
ಮೂಲವಿನ್ಯಸ್ತಕಲಶಾ ರಕ್ತಸೂತ್ರಾವಗುಂಠಿತಾಃ ॥ ೨೬ ॥

ರಕ್ತಪೀತಸಿತಾಚ್ಛಾದ್ಯೈಶ್ಚರ್ಚಿತಾಃ ಸುಮನೋಹರೈಃ ।
ಕಲಧೌತಮಯಾನ್ಯತ್ರ ಫಲಾನಿ ದಶ ಪಂಚ ವಾ ॥ ೨೭ ॥

ತಾಮ್ರಪಾತ್ರ್ಯಾಂ ಸಬೀಜಾನಿ ಸರತ್ನಾನ್ಯಧಿವಾಸಯೇತ್ ।
ತೂರ್ಯಮಂಗಲಘೋಷೇಣ ಚತುರ್ದಿಕ್ಷು ಕ್ಷಿಪೇದ್ಬಲಿಂ ॥ ೨೮ ॥

ಇಂದ್ರಾದಿಲೋಕಪಾಲೇಭ್ಯೋ ಭೂತೇಭ್ಯೋ ಮಂತ್ರವಿದ್ಗುರುಃ ।
ತತಃ ಪ್ರಭಾತೇ ವಿಮಲೇ ಕುಂಡಂ ಕೃತ್ವಾ ಸಮೇಖಲಂ ॥ ೨೯ ॥

---

೨೫. ಆ ಕಲಶಗಳನ್ನು ಚಿಗುರುಗಳಿಂದ ಅಲಂಕರಿಸಿ (ಕಲಶದೊಳಗೆ ಪಲ್ಲವಗಳನ್ನು ಹಾಕಿ) ಬಿಳಿಯಚಂದನವನ್ನು ಆ ಕಲಶಗಳಿಗೆ ಲೇಪನಮಾಡಬೇಕು. ಆಮೇಲೆ ಒಂದುಜತೆ ಬಿಳಿಯುವಸ್ತ್ರವನ್ನು ಆ ಕಲಶಕ್ಕೆ ಹೊದ್ದಿಸಿ, ಅದರೊಳಗೆ ರತ್ನಗಳನ್ನು ಹಾಕಬೇಕು.

೨೬. ಆ ವೃಕ್ಷದ ಸಮೀಪದಲ್ಲಿರುವ ಇತರ ಮರಗಳಿಗೂ ಪತಾಕೆಮುಂತಾದುವುಗಳಿಂದ ಅಲಂಕಾರಮಾಡಬೇಕು. ಹಾಗೆಯೇ ಆ ವೃಕ್ಷಗಳ ಬುಡದಲ್ಲಿಯೂ ರಕ್ತಸೂತ್ರಗಳಿಂದ ಕೂಡಿರುವ ಕಲಶಗಳನ್ನು ಸ್ಥಾಪಿಸಬೇಕು.

೨೭-೨೮. ಆ ಕಲಶಗಳಮೇಲೆ ಸುಂದರವಾದ ಕೆಂಪು, ಹಳದಿ, ಬಿಳಿ ಈ ಬಣ್ಣಗಳ ವಸ್ತ್ರಗಳನ್ನು ಹೊದ್ದಿಸಬೇಕು. ಅನಂತರ ಹತ್ತೋ ಅಥವಾ ಐದೋ ಹಣ್ಣುಗಳನ್ನು ಬೀಜಸಹಿತವಾಗಿರುವಂತೆ ಚಿನ್ನದಿಂದಾಗಲಿ, ಬೆಳ್ಳಿಯಿಂದಾಗಲಿ ಮಾಡಿಸಿ, ತಾಮ್ರದ ಪಾತ್ರೆಯಲ್ಲಿ ಅವುಗಳನ್ನು ರತ್ನಗಳೊಡನೆ ಇರಿಸಿ ಅಧಿವಾಸ ಮಾಡಿಸಬೇಕು.

೨೯. ಆಮೇಲೆ ಮಂತ್ರವೇತ್ತನಾದ ಗುರುವು ಮಂಗಳವಾದ್ಯಘೋಷದೊಡನೆ ಇಂದ್ರಾದಿ ಅಷ್ಟದಿಕ್ಪಾಲಕರಿಗೂ, ಪೃಥಿವ್ಯಾದಿ ಭೂತಗಳಿಗೂ, ಬಲಿಸಮರ್ಪಣ ಮಾಡಬೇಕು. ಮಾರನೆಯದಿನ ಬೆಳಿಗ್ಗೆ ಈ ಕಾರ್ಯಕ್ಕೆ ಅನುಕೂಲಿಸುವಂತೆ ಮೇಖಲಾಸಮೇತವಾದ ಕುಂಡವನ್ನು ಸಿದ್ಧಪಡಿಸಬೇಕು.

**ಗ್ರಹಯಜ್ಞವಿಧಾನೇನ ಶಾಂತಿಕರ್ಮ ಸಮಾರಭೇತ್ ।**
**ಸುವರ್ಣಾಲಂಕೃತಾನ್ ಕೃತ್ವಾ ಬ್ರಾಹ್ಮಣಾ ವೇದಪಾರಗಾನ್ ॥೩೦॥**

**ಚತುರೋಽಷ್ಟೌ ಯಥಾಶಕ್ತ್ಯಾ ವಾಸೋಭಿರಭಿಪೂಜಯೇತ್ ।**
**ತಿಲಾಜ್ಯೇನ ಚ ಹೋಮಃ ಸ್ಯಾತ್ತುಷ್ಟಿಪುಷ್ಟಿಕರಸ್ಸದಾ ॥ ೩೧ ॥**

**ಮಾತರಂ ಸ್ಥಾಪಯಿತ್ವಾಗ್ರೇ ಪೂಜಯೇತ್ಕುಸುಮಾಕ್ಷತೈಃ ।**
**ಶ್ರಪಯಿತ್ವಾ ಚರುಂ ಸಮ್ಯಕ್ಪಾಯಸಾದ್ಯಪರಿಪ್ಲುತಂ ॥ ೩೨ ॥**

**ಹೋಮಾದೌ ಜಾತಕರ್ಮಾದಿ ಗೋದಾನಂ ಯಾವದೇವ ತು ।**
**ಪಾದಪಂ ಸ್ಥಾಪಯಿತ್ವಾ ತು ಸಮಂತ್ರೈಸ್ತೀರ್ಥವಾರಿಭಿಃ ॥ ೩೩ ॥**

**ಜಾತಕಂ ನಾಮಕರ್ಣಮನ್ನಪ್ರಾಶನಮೇವ ಚ ।**
**ಸುವರ್ಣಸೂಚ್ಯಾ ಕುರ್ವೀತ ಕರ್ಣವೇಧಂ ವಿಧಾನವಿತ್ ॥ ೩೪ ॥**

---

೩೦. ಕುಂಡವು ಸಿದ್ಧವಾದನಂತರ ಗ್ರಹಯಜ್ಞವಿಧಿಯಂತೆ ಶಾಂತಿಕರ್ಮವನ್ನು ನೆರವೇರಿಸಬೇಕು. ಈ ಶಾಂತಿಕರ್ಮವು ಮುಗಿದಮೇಲೆ ವೇದಪಾರಂಗತರಾದ ಬ್ರಾಹ್ಮಣರ ಎಂಟುಮಂದಿಗೋ ಅಥವಾ ನಾಲ್ಕುಮಂದಿಗೋ ತನ್ನ ಶಕ್ತ್ಯನುಸಾರ ಸ್ವರ್ಣಾಭರಣದಾನ, ವಸ್ತ್ರದಾನಗಳಿಂದ ಪೂಜಿಸಿ ಸಂತೋಷಪಡಿಸಬೇಕು.

೩೧. ತಿಲಾಹುತಿ, ಆಜ್ಯಾಹುತಿಗಳಿಂದ ಈ ಹೋಮವನ್ನು ನೆರವೇರಿಸಬೇಕು. ಹೀಗೆಮಾಡಿದರೆ ಅದು ಶಾಂತಿಯನ್ನೂ, ಗ್ರಹಗಳಿಗೆ ತೃಪ್ತಿಯನ್ನೂ ದೇಹಪುಷ್ಟಿಯನ್ನೂ ಉಂಟುಮಾಡುವುದು.

೩೨-೩೩. ಅನಂತರ ಸಪ್ತಮಾತೃಕೆಯರನ್ನು ಆ ವೃಕ್ಷದ ಸಮ್ಮುಖದಲ್ಲಿ ಆವಾಹನಮಾಡಿ, ಗಂಧಪುಷ್ಪಾಕ್ಷತೆ ಮೊದಲಾದುವುಗಳಿಂದ ಪೂಜಿಸಬೇಕು. ಬಳಿಕ ಆ ಮರಕ್ಕೆ ಜಾತಕರ್ಮಾದಿ ಗೋದಾನಕರ್ಮಪರ್ಯಂತ ಸಂಕಲ್ಪಿಸಿ ಮಂತ್ರಪೂರ್ವಕವಾಗಿ, ತೀರ್ಥೋದಕಗಳಿಂದ ಆ ಮರಕ್ಕೆ ಸ್ನಾನಮಾಡಿಸಬೇಕು. ಅನಂತರ ಚರುವನ್ನು ಚೆನ್ನಾಗಿ ಸಿದ್ಧಪಡಿಸಿಟ್ಟುಕೊಂಡು, ಅದಕ್ಕೆ ಪಾಯಸ ಮುಂತಾದುವನ್ನು ಬೆರಸದೆ, ಕರ್ಮಾಂಗವಾದ ಹೋಮಕ್ಕೆ ಉಪಯೋಗಿಸಬೇಕು.

೩೪. ವಿಧಿಜ್ಞನಾದ ಮಾನವನು ಆ ವೃಕ್ಷಕ್ಕೆ ಜಾತಕರ್ಮ, ನಾಮಕರಣ, ಅನ್ನಪ್ರಾಶನ ಇವನ್ನು ಮಾಡಿ, ಚಿನ್ನದ ಸೂಜಿಯಿಂದ ಕರ್ಣವೇಧವನ್ನು ಮಾಡಬೇಕು.

ಜಾತರೂಪಕ್ಷುರೇಣಾತ್ರ ಚೂಡಾ ಕಾರ್ಯಾ ಯಥಾಕ್ರಮಂ ।
ಬಧ್ನೀಯಾನ್ಮೇಖಲಾಂ ಮೌಂಜೀಂ ವಾಸಶ್ಚ ಪರಿಧಾಪಯೇತ್ ॥

ಯಜಮಾನಸ್ತತಸ್ಸ್ನಾತಃ ಶುಕ್ಲಾಂಬರಧರಃ ಶುಚಿಃ ।
ಪುಷ್ಪಾಂಜಲಿಃ ಸಮಭ್ಯೇತ್ಯ ಮಂತ್ರಮೇತಮುದೀರಯೇತ್ ॥ ೩೬ ॥

ಯೇ ಶಾಖಿನಃ ಶಿಖರಿಣಾಂ ಶಿರಸಾ ವಿಭೂಷಾ ।
ಯೇ ನಂದನಾದಿಷು ವನೇಷು ಕೃತಪ್ರತಿಷ್ಠಾಃ ॥
ಯೇ ಕಾಮದಾಃ ಸುರನರೋರಗಕಿನ್ನರಾಣಾಂ ।
ತೇ ಮೇ ನತಸ್ಯ ದುರಿತಾರ್ತಿಹರಾ ಭವಂತು ॥ ೩೭ ॥

ಏತೈರ್ದ್ವಿಜೈರ್ವಿಧಿವರಪ್ರಹುತೋ ಹುತಾಶಃ ।
ಪಶ್ಯತ್ಯಸಾವಹಿಮದೀಧಿತಿರಂಬರಸ್ಥಃ ॥

---

೩೫. ಅನಂತರ ಚಿನ್ನದ ಕತ್ತಿಯಿಂದ ಆ ವೃಕ್ಷಕ್ಕೆ ಚೂಡಾಕರ್ಮವನ್ನೂ ಮಾಡಬೇಕು. ಅನಂತರ ಮೇಖಲಾಬಂಧನ, ಮೌಂಜೀಧಾರಣ ಇವುಗಳನ್ನು ಮಾಡಿ, ವಸ್ತ್ರಗಳನ್ನು ಹೊದ್ದಿಸಬೇಕು. (ಮರಕ್ಕೆ ಸುತ್ತಬೇಕು)

೩೬-೩೮. ಸ್ನಾನಮಾಡಿ ಶುಭ್ರವಸ್ತ್ರವನ್ನು ಧರಿಸಿ ಶುಚಿಯಾದ ಯಜಮಾನನು, ಅನಂತರ ಪುಷ್ಪಾಂಜಲಿಯನ್ನು ಅರ್ಪಿಸಲು ಕೈಯಲ್ಲಿ ಹಿಡಿದುಕೊಂಡು " ಪರ್ವತಶಿಖರಗಳಿಗೆ ಶಿರೋಭೂಷಣಪ್ರಾಯವಾಗಿರುವ ವೃಕ್ಷಗಳೂ, ನಂದನವನ ಮೊದಲಾದ ಶ್ರೇಷ್ಠವಾದ ಉದ್ಯಾನವನಗಳಲ್ಲಿ ಪ್ರತಿಷ್ಠಿತವಾಗಿ, ಸದಾ ದೇವ, ಮಾನವ, ಉರಗ, ಕಿನ್ನರಾದಿಗಳಿಗೆಲ್ಲಾ ಇಷ್ಟಾರ್ಥಗಳನ್ನು ಕೊಡುತ್ತಿರುವ ವೃಕ್ಷಗಳೂ, ಇವೆಲ್ಲಕ್ಕೂ ಸಹ ವಿನಯದಿಂದ ತಲೆಬಾಗಿ ನಮಸ್ಕರಿಸುತ್ತೇನೆ, ಅವೆಲ್ಲಾ ನನ್ನ ಪಾಪವನ್ನು ನಾಶಪಡಿಸಲಿ. ಎಲೈ ವೃಕ್ಷವೇ ! ಶ್ರೇಷ್ಠವಾದ ವಿಧಿಯನ್ನು ಅನುಸರಿಸಿ ಬ್ರಾಹ್ಮಣಸಮೇತನಾಗಿ ಈ ಹೋಮಮಾಡಿದುದರಿಂದ ತೃಪ್ತನಾದ ಯಜ್ಞೇಶ್ವರ, ಅಂತರಿಕ್ಷದಲ್ಲಿ ಪ್ರಜ್ವಲಿಸುತ್ತಿರುವ ಚಂಡಕಿರಣನಾದ ಸೂರ್ಯ ಇವರುಗಳು ನೋಡುತ್ತಿರುವಂತೆಯೇ (ಅಗ್ನಿಸಾಕ್ಷಿಯಾಗಿ, ಸೂರ್ಯಸಾಕ್ಷಿಯಾಗಿ) ನಿನ್ನನ್ನು ನಾನು ಪುತ್ರನೆಂದು ಭಾವಿಸಿ, ನಿನಗೆ ಜಾತಕರ್ಮಾದಿಸಂಸ್ಕಾರಮಾಡಿರುವೆನು. ಆದ್ದರಿಂದ ಎಲೈ ವೃಕ್ಷವೇ ! ನೀನು ಇನ್ನುಮೇಲೆ ನನಗೆ ಪುತ್ರನಾಗಿದ್ದು

ತ್ವಂ ವೃಕ್ಷ ಪುತ್ರಪರಿಕಲ್ಪನಯಾ ವೃತೋಽಸಿ ।
ಕಾರ್ಯಂ ಸದೈವ ಭವತಾ ಮಮ ಪುತ್ರಕಾರ್ಯಂ ॥ ೩೮ ॥

ಇತ್ಯೇವಮುಕ್ತ್ವಾ ತಂ ವೃಕ್ಷಂ ಲಾಲಯಿತ್ವಾ ಪುನಃ ಪುನಃ ।
ಘೃತಪಾತ್ರೇ ಸ್ವವದನಂ ದೃಷ್ಟ್ವಾಽಶಿಷಮುದೀರಯೇತ್ ॥ ೩೯ ॥

ಅಂಗಾದಂಗಾತ್ಸಂಭವಸಿ ಹೃದಯಾದಭಿಜಾಯಸೇ ।
ಆತ್ಮಾ ವೈ ಪುತ್ರನಾಮಾಸಿ ಸ ಜೀವ ಶರದಃ ಶತಂ ॥ ೪೦ ॥

ಬ್ರಾಹ್ಮಣಾನಾಂ ತತೋ ದೇಯಾ ದಕ್ಷಿಣಾ ಹೃಷ್ಟಮಾನಸೈಃ ।
ಸ್ಥಾಪಕಾಯ ಶುಭಾಂ ಧೇನುಂ ದತ್ವಾ ಕುರ್ಯಾನ್ಮಹೋತ್ಸವಂ ॥ ೪೧ ॥

ದೀನಾನಾಥಜನಾನಾಂ ಚ ಭೋಜನಂ ಚಾನಿವಾರಿತಂ ।
ಇತರೇಷಾಂ ಪ್ರದಾತವ್ಯಂ ಸಂತುಷ್ಟೇನ ಸುರಾಸವಂ ॥ ೪೨ ॥

---

ಸದಾ ನನ್ನ ಕೆಲಸವನ್ನು ಮಾಡಬೇಕು. (ಪುತ್ರನು ತಂದೆಗೆ ಮಾಡಬೇಕಾದ ಕರ್ತವ್ಯವನ್ನು ಮಾಡು)" ಈ ಅರ್ಥವುಳ್ಳ ಮಂತ್ರಗಳನ್ನು ಹೇಳಿ ಮಂತ್ರಪುಷ್ಪವನ್ನು ಸಮರ್ಪಿಸಬೇಕು.

೩೯. ಈ ಮಂತ್ರವನ್ನು ಹೇಳಿ ಆ ವೃಕ್ಷವನ್ನು ಪುನಃಪುನಃ ಲಾಲನೆಮಾಡಿ ಅನಂತರ ತುಪ್ಪದ ಪಾತ್ರೆಯಲ್ಲಿ ತನ್ನ ಮುಖವನ್ನು ನೋಡಿಕೊಳ್ಳಬೇಕು.

೪೦. ಬಳಿಕ "ಅಂಗಾದಂಗಾತ್ಸಂಭವಸಿ ಹೃದಯಾದಭಿಜಾಯಸೇ ಆತ್ಮಾ ವೈ ಪುತ್ರನಾಮಾಸಿ ಸಜೀವ ಶರದಶ್ಶತಂ" ಎಂದು ಆ ವೃಕ್ಷಕ್ಕೆ ಆಶೀರ್ವಾದ ಮಾಡಬೇಕು.

೪೧. ಅನಂತರ ಸಂತೋಷಚಿತ್ತದಿಂದ ಬ್ರಾಹ್ಮಣರಿಗೆ ದಕ್ಷಿಣೆತಾಂಬೂಲಾದಿಗಳನ್ನು ಕೊಟ್ಟು, ಸ್ಥಾಪಕನಾದ ಆಚಾರ್ಯನಿಗೆ ಗೋದಾನಮಾಡಬೇಕು. ಈ ರೀತಿ ದೊಡ್ಡ ಉತ್ಸವವನ್ನು ಮಾಡಿಸಬೇಕು.

೪೨. ಈ ಸಂದರ್ಭದಲ್ಲಿ ದೀನರಿಗೂ, ಅನಾಥರಿಗೂ ತೃಪ್ತಿಯಾಗುವಂತೆ ಭೋಜನಮಾಡಿಸಿ, ಮದ್ಯಪಾನಾದಿ ಅಭ್ಯಾಸವುಳ್ಳ ಇತರರಿಗೂ ಸಂತೋಷದಿಂದ ಸುರಾಪಾನ ಮದ್ಯಪಾನಗಳನ್ನು ಮಾಡಿಸಬೇಕು.

ಜ್ಞಾತಿಬಂಧುಜನೈಃ ಸಾರ್ದ್ಧಂ ಸ್ವಯಂ ಭುಂಜೀತ ಕಾಮತಃ ।
ಪ್ರೇಷ್ಯಾಃ ಕರ್ಮಕರಾಃ ಸರ್ವೇ ಪೂಜನೀಯಾಃ ಸ್ವಶಕ್ತಿತಃ ॥ ೪೩ ॥

ಯ ಏವಂ ಕುರುತೇ ಪಾರ್ಥ ವೃಕ್ಷಾಣಾಂ ಮಹದುತ್ಸವಂ ।
ಸರ್ವಕಾಮಾನವಾಪ್ನೋತಿ ಇಹಲೋಕೇ ಪರತ್ರ ಚ ॥ ೪೪ ॥

ಪುತ್ರೈರ್ವಿನಾ ಶುಭಗತಿರ್ನ ಭವೇನ್ನರಾಣಾಂ ।
ದುಷ್ಪುತ್ರಕೈರಿತಿ ತತೋಭಯಲೋಕನಾಶಃ ॥

---

೪೩. ಆಮೇಲೆ ಯಜಮಾನನು ತನ್ನ ಜ್ಞಾತಿ, ಬಂಧುಜನ ಇವರೊಡನೆ ಯಥೇಚ್ಛವಾಗಿ ತಾನೂ ಭೋಜನಮಾಡಬೇಕು. ಸೇವಕರು, ಕೂಲಿಯವರು ಎಲ್ಲರಿಗೂ ಅವರ ಯೋಗ್ಯತೆಗೆತಕ್ಕಂತೆ ತನ್ನ ಶಕ್ತಿಯಿದ್ದಷ್ಟುಮಟ್ಟಿಗೆ ಬಹುಮಾನ ಗಳನ್ನು ಕೊಡಬೇಕು.

೪೪. ಅಯ್ಯಾ ಧರ್ಮಜನೇ ! ಈರೀತಿ ವೃಕ್ಷರೋಪಣವನ್ನೂ, ಅಂತೆಯೇ ಅದರ ಉದ್ಯಾಪನವನ್ನೂ, ಮಹೋತ್ಸವಾದಿಗಳನ್ನೂ ಮಾಡುವ ಮಾನವನು, ಇಹಲೋಕದಲ್ಲಿ ಸಕಲ ಅಭೀಷ್ಟಗಳನ್ನೂ ಹೊಂದುವನಲ್ಲದೆ, ಪರಲೋಕದ ಲ್ಲಿಯೂ ದಿವ್ಯವಾದ ಸುಖವನ್ನು ಅನುಭವಿಸುವನು.

೪೫. ಅಯ್ಯಾ ಯುಧಿಷ್ಠಿರ ! 'ಅಪುತ್ರಸ್ಯಗತಿರ್ನಾಸ್ತಿ' ಎಂಬುದು ವೃದ್ಧರ ವಾಕ್ಯ ಅದರಂತೆ ಮಕ್ಕಳಿಲ್ಲದ ಮಾನವರಿಗೆ ಸದ್ಗತಿಯಿಲ್ಲವೆಂದೂ ದುಷ್ಪುತ್ರರಿಂದ ಇಹಲೋಕ ಪರಲೋಕ ಎರಡರ ಸುಖವೂ ಇಲ್ಲವೆಂದೂ ತಿಳಿದು (ಮಕ್ಕಳ ದುರ್ನಡತೆಯಿಂದ ಮಾತಾಪಿತೃಗಳಿಗೆ ಆಗುವ ವ್ಯಥೆ, ಸಮಾಜದಲ್ಲಿ ತಲೆ ಬಗ್ಗಿಸಬೇಕಾಗುವುದು. ಇವು ಇಹದ ಸುಖವಿಲ್ಲವೆಂಬುದಕ್ಕೂ; ಆ ಮಕ್ಕಳು ತಾಯಿ ತಂದೆಗಳಿಗೆ ಸದ್ಗತಿಪ್ರದವಾದ ಕರ್ಮಮಾಡದೆ ಅವರನ್ನು ದುರ್ಗತಿಗೀಡುಮಾಡು ವಂಥ ಕರ್ಮಮಾಡುವುದು. ಪರಲೋಕಸುಖವಿಲ್ಲವೆಂಬುದಕ್ಕೂ ನಿದರ್ಶನವಾಗಿದೆ) ಪ್ರಾಜ್ಞನಾದ ಮಾನವನು ಪುರಾಣದಲ್ಲಿ ಹೇಳಿರುವ ವಿಧಿಯಂತೆ ಸಂಸ್ಕರಿಸಿದ ವೃಕ್ಷ ರೂಪವಾದ ಪುತ್ರರನ್ನು ಪರಿಪಾಲಿಸಬೇಕು. ಈ ವೃಕ್ಷರೂಪೀಸಂತತಿಯು ಯಾವ

ಏತದ್ವಿಚಾರ್ಯ ಸುಧಿಯಾ ಪರಿಪಾಲ್ಯ ವೃಕ್ಷಾನ್ ।
ಪುತ್ರಾಃ ಪುರಾಣವಿಧಿನಾ ಪರಿಕಲ್ಪನೀಯಾಃ ॥ ೪೫ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣಯುಧಿ
ಷ್ಠಿರಸಂವಾದೇ ವೃಕ್ಷೋದ್ಯಾಪನವಿಧಿವರ್ಣನಂ ನಾಮ
ಅಷ್ಟಾವಿಂಶತ್ಯುತ್ತರಶತತಮೋಽಧ್ಯಾಯಃ.



---

ದುರಾಚಾರವನ್ನೂ ಮಾಡತಕ್ಕವಲ್ಲವಾದುದರಿಂದ ಇದರಿಂದ ಇಹಪರಸುಖಗಳೆರಡೂ ಮಾನವನಿಗೆ ತಪ್ಪದೆ ಲಭಿಸುವುದು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ವೃಕ್ಷೋದ್ಯಾಪನವಿಧಿ
ವರ್ಣನೆಯೆಂಬ ನೂರಿಪ್ಪತ್ತೆಂಟನೆಯ ಅಧ್ಯಾಯ ಮುಗಿದುದು.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣ

## ಉತ್ತರಪರ್ವಣಿ

## ಏಕೋನವಿಂಶತ್ಯುತ್ತರಶತತಮೋಽಧ್ಯಾಯಃ

|| ಶ್ರೀಕೃಷ್ಣ ಉವಾಚ ||

ಯೇ ಮಾನವಾಸ್ತ್ರಿದಶಮೂರ್ತಿನಿಕೇತನಾನಿ |
ಕುರ್ವಂತಿ ಸಾಧುಜನದೃಷ್ಟಿಮನೋಹರಾಣಿ ||
ತೇಷಾಂ ಮೃತೇಽಥ ಪರಮಾರ್ಥಮಯೇ ಶರೀರೇ |
ಲೋಕೇ ಪರಿಭ್ರಮತಿ ಕೀರ್ತಿಮಯಂ ಶರೀರಂ || ೧ ||

ಯಃ ಕಾರಯೇದ್ದ್ವಾರಸಿತಾಭ್ರಗೌರ- |
ತ್ತುಂಗ ಸೌಧವಲಯಾಯತನಂ ಸುರಾಣಾಂ ||

---

### ನೂರಇಪ್ಪತ್ತೊಂಭತ್ತನೆಯ ಅಧ್ಯಾಯ

೧. ಶ್ರೀಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರ! ಕೇಳು ಸಾಧು ಜನಗಳ ದೃಷ್ಟಿಗೆ ಮನೋಹರವಾಗಿರುವ ದೇವಾಲಯಗಳನ್ನು ನಿರ್ಮಿಸುವವರು ಇಹಲೋಕದಲ್ಲಿ ಈ ಪಾಂಚಭೌತಿಕಶರೀರತ್ಯಾಗಮಾಡಿ ಪರಲೋಕಕ್ಕೈಹೋದರೂ ಅವರ ಕೀರ್ತಿಶರೀರವು ಮಾತ್ರ ಯಾವಾಗಲೂ ಈ ಲೋಕದಲ್ಲಿ ಸಂಚರಿಸುತ್ತಿರುವುದು.

೨. ಶುಭ್ರವಾದ ಬಾಗಿಲುಗಳಿಂದ ಕೂಡಿ ಸ್ವಚ್ಛವಾದ ಮೇಘದಂತೆ ಕಾಂತಿಯುಳ್ಳ ಸೌಧವನ್ನು, ದೇವರಿಗಾಗಿ ಕಟ್ಟಿಸುವ ಮಾನವನು ಸ್ವರ್ಗವನ್ನು ಸೇರಿ, ಅಲ್ಲಿ ಚಂದ್ರನಂತೆ ಶುಭ್ರವಾದ ದಿವ್ಯಭವನದಲ್ಲಿ ಅನೇಕ ದಿವ್ಯಸುಖಗಳನ್ನು

ಚಂದ್ರಾವದಾತಭವನೇ ದಿವಿ ಲಬ್ಧಸೌಖ್ಯೋ ।
ರಾಜ್ಯಶ್ರಿಯಂ ಸ ಭುವಿ ಬೋಧಯುತಾಮುಪೈತಿ ॥ ೨ ॥

ಯೇ ಕಾರಯಂತಿ ಸುರಸದ್ಮಸು ದೇವತಾನಾ- ।
ಮರ್ಚಾಃ ಸುವರ್ಣರಜತಾಯಸಶೈಲತಾಮ್ರಾಃ ॥
ಸಾಮಂತಮೌಲಿಮಣಿರಶ್ಮಿಸಮರ್ಚಿತಾಸ್ತೇ ।
ಸಿಂಹಾಸನೇಽಙ್ಗದಕಿರೀಟಭೃತೋಽವಭಾಂತಿ ॥ ೩ ॥

ಯೇ ಮೇರುಮೌಲಿಸುರಸಂಘಕೃತಾಭಿಷೇಕಾಃ ।
ಪಂಚಾಮೃತೈಃ ಸುರವರಾನಭಿಷೇಚಯಂತಿ ॥
ತೇ ದಿವ್ಯಕಲ್ಪಮಭಿಧಾರ್ಯ ಸುರೇಶ್ವರತ್ವಂ ।
ರಾಜ್ಯಾಭಿಷೇಕಮತುಲಂ ಪುನರಾಪ್ನುವಂತಿ ॥ ೪ ॥

---

ಅನುಭವಿಸಿ, ಅನಂತರ ದಿವ್ಯಜ್ಞಾನಸಂಪನ್ನನಾಗಿ ಭೂಮಿಯಲ್ಲಿ ಜನಿಸಿ ರಾಜ್ಯ ಪದವಿಯನ್ನು ಪಡೆದು ಸುಖಿಸುವನು.

೩. ದೇವಾಲಯಗಳಲ್ಲಿ ಚಿನ್ನ, ಬೆಳ್ಳಿ, ಕಬ್ಬಿಣ, ಕಲ್ಲು ತಾಮ್ರ ಮೊದಲಾದವುಗಳಿಂದ ದೇವತಾಪ್ರತಿಮೆಗಳನ್ನು ಮಾಡಿಸಿ ಸ್ಥಾಪಿಸುವವಮಾನವರು ಮುಂದಿನ ಜನ್ಮದಲ್ಲಿ ರಾಜಾಧಿರಾಜರಾಗಿ ಸಾಮಂತರಾಜರುಗಳಿಂದ ನಮಸ್ಕರಿಸಲ್ಪಡುತ್ತಾ, ಅವರ ತಲೆಯ ಕಿರೀಟಮಣಿಗಳ ಕಾಂತಿಗಳಿಂದ ಆವೃತರೂ, ಸಿಂಹಾಸನದಮೇಲೆ ಕುಳಿತು ಕಿರೀಟ ಅಂಗದ ಮುಂತಾದ ದಿವ್ಯಾಭರಣಗಳಿಂದ ಅಲಂಕೃತರೂ ಆಗಿ ಶೋಭಿಸುವರು.

೪. ಮೇರುಪರ್ವತದ ಶಿಖರದಲ್ಲಿರುವ ದೇವತೋತ್ತಮರಿಗೆ ಪಂಚಾಮೃತದಿಂದ ಅಭಿಷೇಕ ಮಾಡಿಸುವ ಮಾನವರು ಒಂದು ಕಲ್ಪ ದಿವ್ಯವರ್ಷಗಳವರೆಗೂ ದೇವೇಶ್ವರತ್ವವನ್ನು ಪಡೆದು ಅನಂತರ ಪುನಃ ಭೂಲೋಕದಲ್ಲಿ ಜನಿಸಿ ವೈಭವದಿಂದ ರಾಜ್ಯಾಭಿಷಿಕ್ತರಾಗುವರು.

ಯೇ ಶೈಲರಾಜಮಲಯೋದ್ಭವಚಂದನೇನ।
ಸತ್ಕುಂಕುಮೇನ ಚ ಸುರಾನನುಲೇಪಯಂತಿ॥
ತೇ ದಿವ್ಯಗಂಧಪಟವಾಸಸುಗಂಧಿದೇಹಾ।
ನಂದಂತಿ ನಂದನವನೇಷು ಸಹಾಪ್ಸರೋಭಿಃ ॥ ೫ ॥

ಗಂಧಾಢ್ಯಜಾತಿಕಮಲೋತ್ಪಲದಿವ್ಯಪುಷ್ಪೈಃ।
ದೇವಾನ್ನರೈರನುದಿನಂ ನನು ಯೇಽರ್ಚಯಂತಿ॥
ಪುಷ್ಪೋತ್ತಮೈರ್ನರಪತಿತ್ವಮವಾಪ್ಯ ತೇಽಪಿ।
ಯಾಸ್ಯಂತಿ ಕುಂದಧವಲಾಮಚಿರೇಣ ಸಿದ್ಧಿಂ ॥ ೬ ॥

ಆಮೋದಿಭಿರ್ಹಿಮತುರುಷ್ಕಸುಗಂಧಧೂಪೈ-।
ರ್ಯೇ ಮಾನವಾಸ್ಸುರವರಾನಪಿ ಧೂಪಯಂತಿ॥
ಕರ್ಪೂರಧಾರನಿಭಗಂಧವರಾಭಿರಾಮೇ।
ಸ್ವರ್ಗೇ ವಿಮಾನವತಿ ತೇ ಭವನೇ ರಮಂತೇ ॥ ೭ ॥

---

೫. ಪರ್ವತರಾಜನೆಂದು ಖ್ಯಾತಿವೆತ್ತ ಮಲಯಾದ್ರಿಯಲ್ಲಿ ಬೆಳೆದಿರುವ ಚಂದನದಿಂದಲೂ, ಒಳ್ಳೆಯ ಕುಂಕುಮಕೇಸರಿಯಿಂದಲೂ ದೇವರಿಗೆ ಅನುಲೇಪನಮಾಡುವ ಮಾನವರು ದಿವ್ಯಸುಗಂಧದ್ರವ್ಯಗಳಿಂದ ಸುವಾಸನಾಯುಕ್ತವಾದ ದೇಹವುಳ್ಳವರಾಗಿ, ಇಂದ್ರನ ನಂದನವನದಲ್ಲಿ ಅಪ್ಸರಸ್ತ್ರೀಯರೊಡನೈದಿವ್ಯವಾಗಿ ವಿಹರಿಸುವರು.

೬. ಸುಗಂಧಯುಕ್ತವಾದ ಜಾಜಿ, ಕಮಲ, ನೈದಿಲೆ ಮುಂತಾದ ಹೊಸ ಹೊಸದಾದ ಪುಷ್ಪಗಳಿಂದ ಪ್ರತಿದಿನವೂ ದೇವರನ್ನು ಪೂಜಿಸುವ ಮಾನವರು ಭೂಪತಿಗಳಾಗಿ ಕುಂದಪುಷ್ಪದಂತೆ ಬಹು ಶುಭ್ರವಾದ ಯಶಸ್ಸನ್ನೂ ಸರ್ವಸಿದ್ಧಿಗಳನ್ನೂ ಪಡೆಯುವರು.

೭. ಘಮಘಮಿಸುವ ಅಗರು, ಸಾಮ್ರಾಣಿ, ಹಾಲುಮಡ್ಡಿ ಮುಂತಾದ ಧೂಪಗಳಿಂದ ದೇವರಿಗೆ ಧೂಪ ಹಾಕುವ ಮಾನವರು, ಕರ್ಪೂರಧಾರೆಗೆ ಸಮನಾದ ಸುಗಂಧದಿಂದ ಮನೋಹರವಾಗಿರುವ ಸ್ವರ್ಗಲೋಕವನ್ನು ಸೇರಿ, ವಿಮಾನಸದೃಶವಾದ ದಿವ್ಯಭವನಗಳಲ್ಲಿ ಸಂತೋಷದಿಂದ ವಿಹರಿಸುವರು.

ದೋಧೂಯತೇ ಕನಕದಂಡವಿರಾಜಿತೈಶ್ಚ ।
ಸಚ್ಚಾಮರೈರ್ಧವಲಕುಂಡಲಸುಂದರೀಭಿಃ ॥
ದಿವ್ಯಾಂಬರಸ್ರಗನುಲೇಪನಭೂಷಿತಾಂಗಾಂ ।
ಕೃತ್ವಾ ಸುರೇಶಭವನಾಂಬರವಸ್ತ್ರಪೂಜಾಂ ॥ ೮ ॥

ದೇದೀಪ್ಯತೇ ದಿನಕರೋಜ್ಜ್ವಲಪದ್ಮರಾಗ ।
ರತ್ನಪ್ರಭಾಚ್ಛುರಿತಹೇಮಮಯೇ ವಿಮಾನೇ ॥
ದಿವ್ಯಾಂಗನಾಪರಿವೃತೋ ನಯನಾಭಿರಾಮಃ ।
ಪ್ರಜ್ವಾಲ್ಯ ದೀಪಮಮಲಂ ಭವನೇ ಸುರಾಣಾಂ ॥ ೯ ॥

ಯೋ ಜಾಗರಂ ಸುರವರಾಭಿಮತೋ ದದಾತಿ ।
ಚೈತ್ರೋತ್ಸವಾದಿ ದಿವಸೇಷ್ವಪಿ ತೂರ್ಯನಾದ್ಯೈಃ ॥
ವೀಣಾಸುವೇಣುಮಧುರಸ್ವರಭಾಷಿಣೀಭಿಃ ।
ಸಂಗೀಯತೇ ಚ ಸ ಕೃಶೋದರಕಿನ್ನರೀಭಿಃ ॥ ೧೦ ॥

---

೮. ದೇವಾಲಯದಲ್ಲಿ ಪ್ರತಿಷ್ಠಿತವಾಗಿರುವ ದೇವರುಗಳನ್ನು ದಿವ್ಯವಾದ ಪುಷ್ಪ, ಧೂಪ, ದೀಪ ಮತ್ತು ವಸ್ತ್ರ, ಚಾಮರ ಮುಂತಾದುವುಗಳಿಂದ ಪೂಜಿಸುವ ಮಾನವರು, ದಿವ್ಯವಾದ ಸ್ವರ್ಗವನ್ನು ಸೇರಿ, ಅಲ್ಲಿ ಶುಭವಾದ ಕುಂಡಲಗಳನ್ನು ಧರಿಸಿರುವ ಸುಂದರಾಂಗಿಯರಾದ ದೇವಸ್ತ್ರೀಯರಿಂದ ಸ್ವರ್ಣದಂಡಯುಕ್ತವಾದ ಚಾಮರಗಳ ಸೇವೆಯನ್ನು ಸ್ವೀಕರಿಸುತ್ತಾ ಆನಂದದಿಂದ ಮೆರೆಯುವನು.

೯. ದೇವಾಲಯದಲ್ಲಿ ದೇವರ ಇದಿರಿಗೆ ಪ್ರಕಾಶಮಾನವಾದ ದೀಪಗಳನ್ನು ಹತ್ತಿಸಿಡುವ ಮಾನವನು, ನಯನಮನೋಹರವಾದ ರೂಪನ್ನು ಧರಿಸಿ ದಿನಕರನಂತೆ ಉಜ್ವಲವಾಗಿಯೂ, ಪದ್ಮರಾಗಮಣಿಗಳ ಕಾಂತಿಯಿಂದ ವ್ಯಾಪ್ತವಾಗಿಯೂ ಇರುವ ಸುವರ್ಣಮಯವಾದ ವಿಮಾನದಲ್ಲಿ ದೇವಾಂಗನೆಯರೊಡನೆ ಸಂತೋಷದಿಂದ ಕ್ರೀಡಿಸುವನು.

೧೦. ಚೈತ್ರೋತ್ಸವಾದಿಗಳಲ್ಲಿ ದೇವರಿಗೆ ಅಭಿಮತವಾದ ಜಾಗರಣೆಯನ್ನು ತೂರ್ಯವಾದ್ಯಘೋಷಯುಕ್ತವಾಗಿ ಆಚರಿಸುವ ಮಾನವನು, ವೀಣಾನಾದ ವೇಣುನಾದದಂತೆ ಮಧುರಧ್ವನಿಯುಳ್ಳ ಕೃಶಾಂಗಿಯರಾದ ಕಿನ್ನರಸ್ತ್ರೀಯರೊಡನೆ ಗಾನ ಮಾಡುತ್ತಾ ವಿಹರಿಸುವನು.

ಕುರ್ವಂತಿ ಯೇ ಸದುಪಲೇಪನಧಾತುರಾಗ ।
ಸಂಮಾರ್ಜನಂ ಸುರವರಾಯತನೇऽನುರಕ್ತಾಃ ॥
ಮುಕ್ತಾಕಲಾಪಮುಪಿ ಕಾಂಚನಭಕ್ತಿಚಿತ್ರೈಃ ।
ವೈಡೂರ್ಯಕುಟ್ಟಿಮತಲೇ ದಿವಿ ತೇ ವಸಂತಿ ॥ ೧೧ ॥

ದದ್ಯಾಚ್ಚ ಯಃ ಪರಮಭಕ್ತಿಯುತಃ ಸುರಾಣಾಂ ।
ಘಂಟಾವಿತಾನವರಚಾಮರಮಾತಪತ್ರಂ ॥
ಕೇಯೂರಹಾರಮಣಿಕುಂಡಲಭೂಷಿತೋऽಸೌ ।
ರತ್ನಾಧಿಪೋ ವಸತಿ ಭೂತಲಚಕ್ರವರ್ತೀ ॥ ೧೨ ॥

ಅಭ್ಯರ್ಚಯೇತ್ಪ್ರತಿದಿನಂ ಕುಸುಮೈರ್ವಿಚಿತ್ರೈಃ ।
ದೇವಾಧಿದೇವಪರಿಸಂಸ್ತುತಪಾದಪದ್ಮಾನ್ ॥

---

೧೧. ದೇವಾಲಯದಲ್ಲಿ ಚೆನ್ನಾಗಿ ಸಾರಿಸುವುದು, ಗುಡಿಸುವುದು, ಧಾತು ರಾಗ ಮುಂತಾದ ಪುಡಿಗಳ ರಂಗವಲ್ಲಿಗಳಿಂದ ವಿಚಿತ್ರವಾಗಿ ಶೃಂಗರಿಸುವುದು. ಈ ಕೆಲಸಗಳನ್ನು ಶ್ರದ್ಧೆಯಿಂದ ಮಾಡುವವರೂ, ಮುತ್ತಿನ ಅಲಂಕಾರಮಾಡುವ ವರೂ, ಸ್ವರ್ಣಮಯವಾದ ಚಿತ್ರಗಳನ್ನು ಕೆತ್ತುವವರೂ ಸಹ ಸ್ವರ್ಗದಲ್ಲಿ ವೈಡೂ ರ್ಯರತ್ನ ನಿಬದ್ಧ ಭೂಮಿಯುತವಾದ ಪ್ರದೇಶದಲ್ಲಿ ವಾಸಮಾಡುವರು.

೧೨. ದೇವರುಗಳಿಗೆ ಘಂಟೆ, ವಿತಾನ (ನಡೆಚಪ್ಪರ), ಚಾಮರ, ಶ್ವೇತ ಚ್ಛತ್ರಿ ಮುಂತಾದುವನ್ನು ಭಕ್ತಿಯಿಂದ ಅರ್ಪಿಸುವ ಮಾನವನು, ಮುಂದಿನ ಜನ್ಮ ದಲ್ಲಿ ಕೇಯೂರ, ಹಾರ ಮಣಿಕುಂಡಲ ಮುಂತಾದ ಆಭರಣಗಳಿಂದ ಅಲಂಕೃತ ನಾಗಿ ರತ್ನಾಧಿಪನೆನಿಸಿ ಭೂಮಿಯಲ್ಲಿ ಚಕ್ರವರ್ತಿಯಾಗಿ ಶೋಭಿಸುವನು.

೧೩. ದೇವಾಧಿದೇವತೆಗಳಿಂದ ಸ್ತೋತ್ರಮಾಡಲ್ಪಡುವ ಪಾದಪದ್ಮವುಳ್ಳ ದೇವರುಗಳನ್ನು, ಚಿತ್ರವಿಚಿತ್ರವಾದ ಪುಷ್ಪಗಳಿಂದ ಭಕ್ತಿಪೂರ್ವಕವಾಗಿ ಸಂತೋಷ ದಿಂದ ಪ್ರತಿದಿನವೂ ಪೂಜಿಸಿ ನಮಸ್ಕರಿಸುವ ಮಾನವರು ಭೂಲೋಕ, ಭುವ

ಭಕ್ತ್ಯಾ ಪ್ರಹೃಷ್ಟಮನಸಃ ಪ್ರಣಮಂತಿ ದೇವಾಂ- ।
ಸ್ತೇ ಭೂರ್ಭುವಃ ಸ್ವರ್ಮಹಿಮಾಪ್ತ ಫಲಾ ಭವಂತಿ ॥ ೧೩ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣಯುಧಿಷ್ಠಿರ ಸಂವಾದೇ ಏಕೋನತ್ರಿಂಶದುತ್ತರಶತತಮೋಽಧ್ಯಾಯಃ.



---

ರ್ಲೋಕ, ಸುವರ್ಲೋಕ ಎಂಬ ಮೂರು ಲೋಕಗಳಲ್ಲಿಯೂ ಆ ದೇವರುಗಳ ಮಹಿಮೆಯಿಂದ ದಿವ್ಯವಾದ ಫಲಗಳನ್ನು ಹೊಂದಿ ವಿರಾಜಿಸುವರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ದೇವಾಲಯನಿರ್ಮಾಣ ಮತ್ತು ಪೂಜಾದಿಮಹಿಮಾವರ್ಣನೆಯೆಂಬ ನೂರ ಇಪ್ಪತ್ತೊಂಭತ್ತನೆಯ ಅಧ್ಯಾಯ ಮುಗಿದುದು.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣ

## ಉತ್ತರಪರ್ವಣಿ

## ತ್ರಿಂಶದುತ್ತರಶತತಮೋಽಧ್ಯಾಯಃ

|| ಯುಧಿಷ್ಠಿರ ಉವಾಚ ||

ಭಗವನ್ಕೇನ ತಪಸಾ ವ್ರತೇನ ನಿಯಮೇನ ವಾ |
ದಾನೇನ ಕೇನ ವಾ ಲೋಕೇ ಪ್ರೋಜ್ಜ್ವಲತ್ವಂ ಪ್ರಜಾಯತೇ || ೧ ||
ಅತಿತೇಜೋ ಮಹದ್ದೀಪ್ತಂ ದೀಪ್ತಾಂಶುಕಿರಣೋಜ್ಜ್ವಲಂ |
ಶರೀರಂ ಜಾಯತೇ ಯೇನ ತನ್ಮೇ ವಕ್ತುಮಥಾರ್ಹಸಿ || ೨ ||

|| ಶ್ರೀಕೃಷ್ಣ ಉವಾಚ ||

ಮಥುರಾಯಾಂ ಪುರಾ ಪಾರ್ಥ ಪಿಂಗಲೋ ನಾಮ ತಾಪಸಃ |
ಆಗತಸ್ಸ ಚ ಮೇ ಪತ್ನ್ಯಾ ಜಾಂಬವತ್ಯಾ ಪ್ರಪೂಜಿತಃ || ೩ ||

---

### ನೂರ ಮೂವತ್ತನೆಯ ಅಧ್ಯಾಯ

೧-೨. ಯುಧಿಷ್ಠಿರನು ಶ್ರೀಕೃಷ್ಣನನ್ನು ಪ್ರಶ್ನೆ ಮಾಡುತ್ತಾನೆ-ಪೂಜ್ಯನಾದ ಕೃಷ್ಣಸ್ವಾಮಿಯೇ! ಲೋಕದಲ್ಲಿ ಯಾವ ತಪಸ್ಸು, ವ್ರತ, ನಿಯಮ, ದಾನ ಇವುಗಳಿಂದ ಮಾನವನಿಗೆ ಉಜ್ವಲವಾದ ದೇಹಕಾಂತಿಯುಂಟಾಗುವುದು? ಶರೀರಕ್ಕೆ ಸೂರ್ಯನ ಕಿರಣಗಳಂತೆ ಜಾಜ್ವಲ್ಯಮಾನವಾದ ಅತಿತೇಜಸ್ಸೂ ಮತ್ತು ಹೊಳಪೂ ಉಂಟಾಗುವಬಗೆ ಹೇಗೆ? ಇದನ್ನು ದಯೆಯಿಟ್ಟು ಹೇಳು ಎಂದನು.

೩. ಶ್ರೀಕೃಷ್ಣನು ಹೇಳುತ್ತಾನೆ—ಅಯ್ಯಾ ಪಾರ್ಥ! ಹಿಂದೆ ಮಥುರಾ ಪಟ್ಟಣಕ್ಕೆ ಪಿಂಗಲನೆಂಬ ತಾಪಸನು ಬಂದಿದ್ದನು. ನನ್ನ ಪತ್ನಿಯಾದ ಜಾಂಬವತಿಯು ಆತಿಥಿಸತ್ಕಾರಪೂರ್ವಕವಾಗಿ ಆತನನ್ನು ಪೂಜಿಸಿದಳು. ಅನಂತರ ಅವಳು ಆ ಬ್ರಾಹ್ಮಣೋತ್ತಮನನ್ನು ಕುರಿತು ನೀನು ನನ್ನನ್ನು ಕೇಳಿದ ಪ್ರಶ್ನೆಯನ್ನೇ ಕೇಳಿದಳು.

ಪೃಷ್ಟಶ್ಚ ಪ್ರಶ್ನಮೇನ್ಯೈತಂ ಸ ಚಾಪ್ರೋಚದ್ಯಥಾತಥಂ ।
ತಯಾಪಿ ಮೇ ಸಮಾಖ್ಯಾತಂ ತತ್ಸರ್ವಂ ತೇ ವದಾಮ್ಯಹಂ　　॥ ೪ ॥

ಯದಾಯದಾ ನೃಪಶ್ರೇಷ್ಠ ಪುಣ್ಯಕಾಲಃ ಪ್ರಪದ್ಯತೇ ।
ಸಂಕ್ರಾಂತೌ ಸೂರ್ಯಗ್ರಹಣೇ ಚಂದ್ರಪರ್ವಣಿ ವೈಧೃತೌ　　॥ ೫ ॥

ಉತ್ತರೇತ್ವಯನೇ ಪ್ರಾಪ್ತೇ ದಕ್ಷಿಣೇ ವಿಷುವೇ ತಥಾ ।
ಏಕಾದಶ್ಯಾಂ ಶುಕ್ಲಪಕ್ಷೇ ಚತುರ್ದಶ್ಯಾಂ ದಿನಕ್ಷಯೇ　　॥ ೬ ॥

ಸಪ್ತಮ್ಯಾಮಥ ವಾಷ್ಟಮ್ಯಾಂ ಸ್ನಾತ್ವಾ ವ್ರತಪರೋ ನರಃ ।
ನಾರೀ ವಾ ಭೂಮಿದೇವೇಭ್ಯಃ ಪ್ರಯಚ್ಛೇತ್ಪ್ರಯತಾಂಗಣೇ ॥
ಘೃತಕುಂಭೇನ ದೀಪೇನ ಪ್ರಜ್ವಲಂತಂ ಪ್ರದೀಪಕಂ　　॥ ೭ ॥

॥ ಯುಧಿಷ್ಠಿರ ಉವಾಚ ॥

ಭೂಮಿದೇವಾ ಇತಿ ಪ್ರೋಕ್ತಂ ಯತ್ತ್ವಯಾ ಮಧುಸೂದನ ।
ಕಿಮೇತತ್ಕೌತುಕಂ ಮೇಽಸ್ತಿ ಸಂಶಯಂ ಛೇತ್ತುಮರ್ಹಸಿ　　॥ ೮ ॥

---

೪. ಆಗ ಆ ಮಹಾತಾಪಸನು ಜಾಂಬವತಿಗೆ ಉಪದೇಶಮಾಡಿದುದನ್ನು ಅವಳು ನನಗೆ ತಿಳಿಸಿದ್ದಳು. ಅದನ್ನೇ ನಿನಗೆ ತಿಳಿಸುವೆನು ಕೇಳು ಎಂದು ಹೇಳತೊಡಗಿದನು.

೫-೭. ಓ ನೃಪಶ್ರೇಷ್ಠ ! ಪುಣ್ಯಕಾಲಗಳೊದಗಿದಾಗೆಲ್ಲಾ ಎಂದರೆ ಸಂಕ್ರಮಣ, ಸೂರ್ಯಗ್ರಹಣ, ಚಂದ್ರಗ್ರಹಣ, ವೈಧೃತಿ, ಉತ್ತರಾಯಣ, ದಕ್ಷಿಣಾಯನ, ವಿಷುವತ್ಪುಣ್ಯಕಾಲ, ಶುಕ್ಲೈಕಾದಶೀ, ಕೃಷ್ಣಚತುರ್ದಶೀ, ಸಪ್ತಮಿ, ಅಷ್ಟಮೀ ಈ ಪುಣ್ಯಕಾಲಗಳಲ್ಲಿ ಮಾನವರು ಸ್ನಾನಮಾಡಿ ವ್ರತಪರರಾಗಿರುತ್ತಾ ಪರಿಶುದ್ಧವಾದ ಅಂಗಣಪ್ರದೇಶದಲ್ಲಿ ಘೃತಕುಂಭಯುಕ್ತವಾಗಿ ಉಜ್ವಲವಾಗಿ ಉರಿಯುತ್ತಾ ಇರುವ ದೊಡ್ಡ ದೀಪಸ್ತಂಭವನ್ನು ಭೂಲೋಕದ ದೇವರ ಮುಂದೆ ಭಕ್ತಿಯಿಂದ ಸಮರ್ಪಿಸಬೇಕು ಎಂದನು.

೮. ಯುಧಿಷ್ಠಿರನು ಪ್ರಶ್ನೆ ಮಾಡುತ್ತಾನೆ-ಓ ಮಧುಸೂದನ ! ನೀನು ಹೇಳಿದೆಯಷ್ಟೆ. ಭೂಮಿದೇವ ಎಂದು ಅವರಿಗೆ ಈ ಹೆಸರು ಹೇಗೆ ರೂಢಿಗೆ ಬಂದಿತು ಎಂಬ ವಿಷಯವು ನನ್ನನ್ನು ಸಂಶಯಗ್ರಸ್ತನನ್ನಾಗಿ ಮಾಡಿದೆ. ಓ ದೇವ ! ನೀನು ದಯವಿಟ್ಟು ಅದನ್ನು ನಿವೃತ್ತಿಮಾಡು. ಈ ವಿಷಯದಲ್ಲಿ ನೀನೇ ಸಮರ್ಥನು ಎಂದು ಯುಧಿಷ್ಠಿರನು ಪ್ರಾರ್ಥಿಸಿದನು.

॥ ಶ್ರೀಕೃಷ್ಣ ಉವಾಚ ॥

ಪುರಾ ಕೃತಯುಗಸ್ಯಾದೌ ತ್ರಿಶಂಕುರ್ನಾಮ ಪಾರ್ಥಿವಃ ।
ಸ ಸ್ವರ್ಗಂ ಗಂತುಕಾಮೋಽಭೂಚ್ಛರೀರೇಣ ನರೋತ್ತಮ ॥
ತತಶ್ಚಂಡಾಲತಾಂ ನೀತೋ ವಶಿಷ್ಠೇನ ಮಹಾತ್ಮನಾ ॥ ೯ ॥

ತ್ರಿಶಂಕುಃ ಸರ್ವಮಾಚಖ್ಯೌ ವಿಶ್ವಾಮಿತ್ರಾಯ ಧೀಮತೇ ।
ಸೋಽಪಿ ಮನ್ಯುವಶಾದ್ಯಜ್ಞಂ ಚಕಾರಾಹೂಯ ದೇವತಾಃ ॥ ೧೦ ॥

ನ ತಾ ಹವಿಃ ಪ್ರತ್ಯಗೃಹ್ಣಂಸ್ತತಃಕ್ರುದ್ಧಃ ಕುಶಾತ್ಮಜಃ ।
ವಿಶ್ವಾಮಿತ್ರಸ್ತು ಕೋಪೇನ ಚಕಾರಾನ್ಯಾನ್ಸುರೋತ್ತಮಾನ್ ॥ ೧೧ ॥

---

೯. ಶ್ರೀಕೃಷ್ಣನು ಹೇಳುತ್ತಾನೆ—ಓ ರಾಜೇಂದ್ರ ! ಹಿಂದೆ ಕೃತಯುಗವ ಆದಿಯಲ್ಲಿ ತ್ರಿಶಂಕುವೆಂಬ ರಾಜನಿದ್ದನು. ಅವನಿಗೆ ಒಂದುಸಲ ಈ ಪಾರ್ಥಿವ ಶರೀರಸಮೇತವಾಗಿ ಸ್ವರ್ಗಕ್ಕೆ ಹೋಗಬೇಕೆಂಬ ಅಪೇಕ್ಷೆಯುಂಟಾಯಿತು. ಆಗ ಅವನು ತನ್ನ ಈ ಕೋರಿಕೆಯನ್ನು ನಡೆಯಿಸಿಕೊಡುವಂತೆ ವಸಿಷ್ಠಮಹರ್ಷಿಯನ್ನು ಪ್ರಾರ್ಥಿಸಿದನು. ಆಗ ಆ ಮಹರ್ಷಿಯು ಕುಪಿತನಾಗಿ ನಿನಗೆ ಚಂಡಾಲತ್ವ ಪ್ರಾಪ್ತಿಯಾಗಲಿ ಎಂದು ಶಪಿಸಿದನು.

೧೦. ಆಗ ಆ ತ್ರಿಶಂಕುವು ಅಲ್ಲಿಂದ ಹೊರಟುಬಂದು ತಾನು ಪ್ರಾರ್ಥಿಸಿದ ಕೋರಿಕೆಯನ್ನೂ, ತನಗೆ ವಸಿಷ್ಠರು ಶಾಪಕೊಟ್ಟ ವೃತ್ತಾಂತವನ್ನೂ ಮೇಧಾವಿಯಾದ ವಿಶ್ವಾಮಿತ್ರಮಹರ್ಷಿಗೆ ತಿಳಿಸಿದನು. ಇದನ್ನು ಕೇಳಿ ಆ ವಿಶ್ವಾಮಿತ್ರ ಮಹರ್ಷಿಯು ವಸಿಷ್ಠನ ಮೇಲಿನ ದ್ವೇಷದಿಂದ ಆ ತ್ರಿಶಂಕುವಿನಿಂದ ಯಜ್ಞ ಮಾಡಿಸಲು ನಿಶ್ಚಯಿಸಿ ದೇವತೆಗಳನ್ನೆಲ್ಲಾ ಆಹ್ವಾನಿಸಿ ಯಜ್ಞಮಾಡಿದನು.

೧೧. ಚಂಡಾಲನಾದ ತ್ರಿಶಂಕುವು ಯಜ್ಞಮಾಡಿದುದರಿಂದ ದೇವತೆಗಳ್ಯಾರೂ ಆ ಯಜ್ಞದ ಹವಿರ್ಭಾಗವನ್ನು ಸ್ವೀಕರಿಸಲಿಲ್ಲ. ಇದನ್ನು ನೋಡಿದ ವಿಶ್ವಾಮಿತ್ರನು ದೇವತೆಗಳು ತನ್ನ ಮಾತನ್ನು ನಡೆಸಲಿಲ್ಲವೆಂಬ ಕ್ರೋಧದಿಂದ ಆ ದೇವತೆಗಳು ನೋಡುತ್ತಿರುವಂತೆಯೇ ಈ ಹವಿರ್ಭಾಗಸ್ವೀಕಾರಕ್ಕಾಗಿ ತನ್ನ ತಪಶ್ಶಕ್ತಿಯಿಂದ ಬೇರೆದೇವತೆಗಳನ್ನು ಸೃಷ್ಟಿಸಿದನು.

ಶೃಂಗಾಟಕಾನ್ನಾರಿಕೇಲಾನ್ವಚನಾನಾನಜೌಡಕಾನ್ ।
ಮೋಧಾರಥದವಾರ್ತಾಕತಾರಿಕೂಷ್ಮಾಂಡಕೋದ್ರವಾ॥ ॥ ೧೨ ॥

ಉಷ್ಟ್ರಾನ್ಮನುಜದೇವಾಂಶ್ಚ ಕ್ರೋಧಾನ್ಮುನಿರವಾಸೃಜತ್ ।
ಚಕಾರಾನ್ಯಾನ್ಸಪ್ತಋಷೀ॥ ಪ್ರತಿಮಾಸಂ ಸುರೋತ್ತಮಾ॥ ॥ ೧೩ ॥

ತತಃ ಶಕ್ರಸ್ಸಮಾಗಮ್ಯ ವಿಶ್ವಾಮಿತ್ರಂ ಪ್ರಸಾದ್ಯ ವೈ ।
ಸೃಷ್ಟಿಂ ನಿವಾರಯಾಮಾಸ ಯೇ ಸೃಷ್ಟಾಸ್ತೇ ತಥಾಪಿ ಚ ॥ ೧೪ ॥

ಮರ್ತ್ಯಲೋಕೇ ಚ ತೇ ಸರ್ವೇ ದೇವಾ ದೇವಕುಲೇಷ್ವಥ ।
ಮಂತ್ರೈರ್ನಿಬದ್ಧಾಃ ಪಿಂಡೀಷು ಸ್ಥಿತಾ ಮೂರ್ತಿಭೃತೋ ಯಥಾ ॥

---

೧೨–೧೩. ಅಲ್ಲದೆ ಶೃಂಗಾಟಕ (ನುಗ್ಗೆಕಾಯಿ), ನಾರಿಕೇಳ (ತೆಂಗು), ವಚ (ಬಜೆ-ಹಸಿಶುಂಠಿ), ಅನಾನ, ಜೋಡಕ (ಜೋಳ), ಕೂಶ್ಮಾಂಡ (ಕುಂಬಳ), ಕೋದ್ರವ (ಹಾರಕ) ಇವುಗಳನ್ನೂ ಮತ್ತು ಒಂಟೆಗಳು, ಮನುಜದೇವರು ಇವರು ಗಳನ್ನೆಲ್ಲಾ ಸೃಷ್ಟಿಮಾಡಿದನು. ಮತ್ತು ಬೇರೆ ಏಳುಮಂದಿ ಸಪ್ತರ್ಷಿಗಳನ್ನೂ, ಮಾಸಾಧಿಪತಿಗಳಾಗಿ ಬೇರೆಬೇರೆ ದೇವತೋತ್ತಮರನ್ನೂ ನಿರ್ಮಿಸಿದನು.

೧೪. ಆಗ ದೇವೇಂದ್ರನು ವಿಶ್ವಾಮಿತ್ರನ ಈ ಬಗೆಯಾದ ಸೃಷ್ಟಿಕಾರ್ಯವನ್ನು ನೋಡಿ ಗಾಬರಿಗೊಂಡು ಆ ಮುನಿಯ ಸಮೀಪಕ್ಕೆ ಬಂದು ಅವನನ್ನು ಸಮಾಧಾನಪಡಿಸಿ, ಸೃಷ್ಟಿಕಾರ್ಯವನ್ನು ಅಷ್ಟಕ್ಕೇ ಮುಗಿಸುವಂತೆ ಬೇಡಿಕೊಂಡನು.

೧೫. ಅದುವರೆಗೆ ಸೃಷ್ಟಿಯಾಗಿದ್ದ ಮನುಜದೇವತೆಗಳೇ ಮುಂತಾದವರು ಮರ್ತ್ಯಲೋಕದಲ್ಲಿ, ದೇವಾಲಯಗಳಲ್ಲಿ ದೇವರುಗಳಂತೆ ಗೌರವಾಸ್ಪದರಾದರು. ಇದಲ್ಲದೆ ಇವರೆಲ್ಲರೂ ಪಿಂಡಿಕಾದಿ (ಮೂರ್ತಿಗಳಲ್ಲೂ ಮತ್ತು ವಿಗ್ರಹ) ಗಳಲ್ಲೂ ಮಂತ್ರಮಹಿಮೆಯಿಂದ ಮೂರ್ತಿಮತ್ತಾದ ದೇವತೆಗಳಂತೆ ಪೂಜ್ಯರೆನಿಸಿದರು.

ಬ್ರಹ್ಮಾವಿಷ್ಣುಸ್ತಥಾ ರುದ್ರೋ ಯೇ ಚಾನ್ಯೇ ದೇವತಾ ಗಣಾಃ ।
ಲೋಕಾನಾಮುಪಕಾರಾಯ ಮರ್ತ್ಯಲೋಕಮುಪಾಗತಾ ॥ ೧೬ ॥

ಪ್ರತಿಮಾಸು ಸ್ಥಿತಾಃ ಶಶ್ವದ್ಭೋಗಾನ್ ಭುಂಜಂತಿ ಶಾಶ್ವತಾನ್ ।
ವರಪ್ರದಾಶ್ಚ ಭಕ್ತಾನಾಮಿತಿ ತೇ ಗುಹ್ಯಮೀರಿತಂ ॥ ೧೭ ॥

ತೇಭ್ಯಃ ಪುರಸ್ತಾದ್ದಾತವ್ಯೋ ದೀಪ್ಯಮಾನಃ ಪ್ರದೀಪಕಃ ।
ಸೂರ್ಯಾಯ ರಕ್ತವಸ್ತ್ರೇಣ ಪೂರ್ಣವರ್ತಿಂ ಘೃತೈರ್ಯುತಾಂ ॥
ಚತುಃಪ್ರಸ್ಥೈಃ ಸಂಜ್ವಲಂತೀಂ ಮಂತ್ರೇಣಾನೇನ ದಾಪಯೇತ್ ॥

" ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ ।
ದಿವೀವ ಚಕ್ಷುರಾತತಂ " ॥ ೧೯ ॥

---

೧೬-೧೭. ಬ್ರಹ್ಮ, ವಿಷ್ಣು, ಮಹೇಶ್ವರ ಮತ್ತು ಇತರ ದೇವತಾವೃಂದಗಳು ಲೋಕೋಪಕಾರಾರ್ಥವಾಗಿ ಮರ್ತ್ಯಲೋಕಕ್ಕೆ ಬಂದು, ಪ್ರತಿಮೆ ಮೊದಲಾದುವುಗಳಲ್ಲಿ ನೆಲಸಿ ಶಾಶ್ವತವಾದ ಭೋಗಗಳನ್ನು ಅನುಭವಿಸುತ್ತಾ ತಮ್ಮನ್ನು ಭಕ್ತಿಪೂರ್ವಕವಾಗಿ ಅರ್ಚಿಸುವ ಭಕ್ತಾದಿಗಳಿಗೆ ಅವರ ಪ್ರಾರ್ಥನೆಯನ್ನು ಸಲ್ಲಿಸುತ್ತಾ ಮನುಜದೇವರೆನಿಸಿದರು. (ಸ್ವರ್ಗನಿವಾಸಿಗಳು ಮರ್ತ್ಯಲೋಕದಲ್ಲಿ ವಿಗ್ರಹಾದಿ ರೂಪದಿಂದ ದೇವತ್ವವನ್ನು ಪ್ರಕಟಪಡಿಸುವುದರಿಂದ ಈ ಹೆಸರು ಬಂದಿತು ಎಂದು ತೋರುತ್ತದೆ. ಕೃತಯುಗದ ಆದಿಯಲ್ಲಿ ಮೂರ್ತಿಪೂಜೆಯಿರಲಿಲ್ಲ. ಈ ತ್ರಿಶಂಕುವಿನ ಕಾಲದಿಂದ ಮುಂದೆ ವಿಶ್ವಾಮಿತ್ರಸೃಷ್ಟಿಯಾದನಂತರ ವಿಗ್ರಹಪೂಜೆಯು ಏರ್ಪಟ್ಟಿರಬೇಕು.) ಓ ಯುಧಿಷ್ಠಿರ! ಈ ವೃತ್ತಾಂತವು ತುಂಬಾರಹಸ್ಯವಾದುದೆಂದು ತಿಳಿ.

೧೮-೧೯. ದೀಪದ ಕಂಭಕ್ಕೆ ನಾಲ್ಕುಪ್ರಸ್ಥಪ್ರಮಾಣ ತುಪ್ಪವನ್ನು ಹಾಕಿ ಅದಕ್ಕೆ ಕೆಂಪುಬಟ್ಟೆಯಿಂದ ಮಾಡಿದ ಬತ್ತಿಗಳನ್ನು ಹಾಕಿ ದೀಪಹತ್ತಿಸಿ, ಈ ಮನುಜದೇವರ ಮುಂದೆ ಪ್ರಕಾಶವಾಗಿ ಉರಿಯುವಂತೆ ಮಾಡಿ, ಅನಂತರ "ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ ದಿವೀವಚಕ್ಷುರಾತತಂ" ಎಂಬ ಮಂತ್ರವನ್ನುಚ್ಚರಿಸುತ್ತಾ ಸೂರ್ಯದೇವನನ್ನುದ್ದೇಶಿಸಿ ಈ ದೀಪವನ್ನು ಸಮರ್ಪಣಮಾಡಬೇಕು.

ಪೀತವಸ್ತ್ರೇಣ ಕೃಷ್ಣಾಯ ಶ್ವೇತವಸ್ತ್ರೇಣ ಶೂಲಿನೇ ।
ಕೌಸುಂಭವಸ್ತ್ರೇಣಾಢ್ಯೇನ ಗೌರೀಮುದ್ದಿಶ್ಯ ದಾಪಯೇತ್ ॥ ೨೦ ॥

ಲಾಕ್ಷಾರಕ್ತೇನ ದುರ್ಗಾಯೈ ಪೂರ್ಣವರ್ತಿಂ ಪ್ರಬೋಧಯೇತ್ ।
ನೀಲವಸ್ತ್ರೇಣ ಕಾಮಾಯ ಗಣನಾಥಾಯ ಖಾದಿರೈಃ ॥ ೨೧ ॥

ನಾಗೇಭ್ಯಃ ಕೃಷ್ಣವಸ್ತ್ರೇಣ ಗ್ರಹೇಭ್ಯ ಇಷಿಕಾಯುಧಾಂ ।
ದೇವಾಂಗನಾಪಿತೃಭ್ಯಸ್ತು ಪಿತೃವರ್ತಿಂ ಪ್ರಬೋಧಯೇತ್ ॥ ೨೨ ॥

ವಿಶೇಷಂ ಶೃಣು ಸೂರ್ಯಾಯ ಪೂರ್ಣವರ್ತಿರ್ನಿಗದ್ಯತೇ ।
ಶಿವಾಯೇಶ್ವರವರ್ತೀತಿ ಭೋಗವರ್ತಿರ್ಜನಾರ್ದನೇ ॥ ೨೩ ॥

---

೨೦. ಇದೇರೀತಿ ಹಳದಿಯ ವಸ್ತ್ರದಿಂದ ಮಾಡಿದ ಬತ್ತಿಹಾಕಿ ಹತ್ತಿಸಿದ ತುಪ್ಪದ ದೀಪವನ್ನು ಕೃಷ್ಣ (ವಿಷ್ಣು) ನಿಗೂ, ಬಿಳಿಯ ವಸ್ತ್ರದಿಂದ ಮಾಡಿದ ಬತ್ತಿಯನ್ನು ಹಾಕಿ ಹತ್ತಿಸಿದ ದೀಪವನ್ನು ಶೂಲಧಾರಿಯಾದ ಪರಮೇಶ್ವರನಿಗೂ, ಕುಸುಂಭವರ್ಣದ ಬಟ್ಟೆಯ ಬತ್ತಿಹಾಕಿ ಹತ್ತಿಸಿದ ದೀಪವನ್ನು ಗೌರಿದೇವಿಗೂ ಸಮರ್ಪಿಸಬೇಕು.

೨೧. ಲಾಕ್ಷಾರಾಗದಂಥ ಬಣ್ಣದ ಬಟ್ಟೆಯ ಬತ್ತಿಹಾಕಿದ ತುಪ್ಪದ ದೀಪವನ್ನು ದುರ್ಗಾದೇವಿಗೂ, ನೀಲವಸ್ತ್ರದ ಬತ್ತಿಯುಳ್ಳ ಘೃತದೀಪವನ್ನು ಮನ್ಮಥನಿಗೂ, ಕಗ್ಗಲೀಮರದಬಣ್ಣದಬಟ್ಟೆಯ ಬತ್ತಿಯುಳ್ಳ ದೀಪವನ್ನು ಗಣನಾಥನಿಗೂ ಸಮರ್ಪಿಸಬೇಕು.

೨೨. ಕಪ್ಪುಬಣ್ಣದಬಟ್ಟೆಯ ಬತ್ತಿಯುಳ್ಳ ಘೃತದೀಪವನ್ನು ಸರ್ಪಗಳಿಗೂ, ಹತ್ತಿಯ ಬತ್ತಿಗಳನ್ನು ಹಾಕಿ ಉರಿಸುವ ದೀಪವನ್ನು ಗ್ರಹಗಳಿಗೂ, ಪಿತೃವರ್ತಿಯುಳ್ಳ ದೀಪವನ್ನು ಸ್ತ್ರೀದೇವತೆಗಳು ಮತ್ತು ಪಿತೃಗಳಿಗೂ ಸಮರ್ಪಿಸಬೇಕು.

೨೩-೨೪. ಅಯ್ಯಾ ಯುಧಿಷ್ಠಿರ! ಇನ್ನೂ ವಿಶೇಷವನ್ನು ಹೇಳುವೆನು ಕೇಳು. ಸೂರ್ಯನಿಗೆ ಹತ್ತಿಸುವ ದೀಪದಬತ್ತಿಗೆ ಪೂರ್ಣವರ್ತಿಯೆಂದೂ, ಶಿವನಿಗೆ ಹತ್ತಿಸುವ ದೀಪದಬತ್ತಿಗೆ ಈಶ್ವರವರ್ತಿಯೆಂದೂ, ಬ್ರಹ್ಮನಿಗೆ ಸಮರ್ಪಿಸುವುದಕ್ಕೆ

ಪದ್ಮವರ್ತಿರ್ವಿರಿಂಚಾಯ ಗೌರ್ಯೈ ಸೌಭಾಗ್ಯವರ್ತಿಕಾ ।
ನಾಗೇಭ್ಯೋ ನಾಗವರ್ತೀತಿ ಗ್ರಹವರ್ತಿರ್ಯುಧಿಷ್ಠಿರ ॥ ೨೪ ॥

ನೇತ್ರಪಟ್ಟೇನ ಮಧುನಾ ಘೃತೇನ ಮಧುಕುಂಡಕೇ ।
ಅರ್ಚಿತೇ ಚರ್ಚಿತೇ ಚೈವ ಲಲಿತಾಯೈ ಪ್ರಬೋಧಯೇತ್ ॥ ೨೫ ॥

ಮಂತ್ರೇಣಾನೇನ ರಾಜೇಂದ್ರ ತನ್ನಿಶಾಮಯ ವೈದಿಕಂ ॥ ೨೬ ॥

" ಅಗ್ನೇ ತ್ವಾಂ ಕಾಮ್ಯಯಾ ಗಿರಾ ತುಭ್ಯಂ ತಾ ಗಿರಸಸ್ತು
ವಿಶ್ವಾಃ । ಸುಕ್ಷಿತಯಃ ಪೃಥಕ್ಪೃಥಕ್ ॥ ೨೭ ॥

ಅಗ್ನೇ ಕಾಮಾಯ ಜೇಗಿರೇ ಅಗ್ನಿಪ್ರಿಯೇಷು ಧಾಮಸು ।
ಕಾಮೋ ಭೂತಸ್ಯ ಭವ್ಯಸ್ಯ ಸಮ್ರಾಡೇಕೋ ವಿರಾಜತಿ ॥
ತಾಭ್ಯಾಂ ನಾಮ ಸ್ವಾಹಾ " ॥ ೨೮ ॥

ಏವಮೇತೇನ ವಿಧಿನಾ ಯಃ ಪ್ರಯಚ್ಛತಿ ದೀಪಕಂ ।
ವಿಸ್ತೀರ್ಣೇ ವಿಪುಲೇ ಪಾತ್ರೇ ಘೃತಕುಂಭೇ ನಿಯೋಜಿತಂ ॥ ೨೯ ॥

---

ಪದ್ಮವರ್ತಿಯೆಂದೂ, ಗೌರಿಗೆ ಸಮರ್ಪಿಸುವ ಬತ್ತಿಗೆ ಸೌಭಾಗ್ಯವರ್ತಿಯೆಂದೂ ನಾಗಗಳಿಗೆ ಅರ್ಪಿಸುವುದಕ್ಕೆ ನಾಗವರ್ತಿಯೆಂದೂ, ಗ್ರಹಗಳಿಗೆ ಅರ್ಪಿಸುವುದಕ್ಕೆ ಗ್ರಹವರ್ತಿಯೆಂದೂ ಬತ್ತಿಗಳಿಗೆ ವಿಶೇಷರೀತಿ ಸಂಜ್ಞಾಂತರಗಳನ್ನು ಹೇಳಿದೆ.

೨೫-೨೮. ಅಯ್ಯಾ ರಾಜೇಂದ್ರನೇ ! ಜೇನುಮತ್ತು ತುಪ್ಪ ಇವುಗಳಿಂದ ಲೇಪನಮಾಡಿದ ಮಧುಮಯವಾದ ಶರಾವದಲ್ಲಿ ದೀಪವನ್ನು ಹತ್ತಿಸಿ ಪಟ್ಟೆಯ ವಸ್ತ್ರವನ್ನು ಹೊದ್ದಿಸಿ " ಅಗ್ನೇ ತ್ವಾಂ ಕಾಮ್ಯಯಾಗಿರಾ। ತುಭ್ಯಂ ತಾ ಗಿರಸಸ್ತು ವಿಶ್ವಾಃ ಸುಕ್ಷಿತಯಃ ಪೃಥಕ್ ಪೃಥಕ್ ಅಗ್ನೇ ಕಾಮಾಯಜೇಗಿರೇ ಅಗ್ನಿಪ್ರಿಯೇಷು ಧಾಮಸು ಕಾಮೋ ಭೂತಸ್ಯ ಭವ್ಯಸ್ಯ ಸಮ್ರಾಡೇಕೋ ವಿರಾಜತಿ ತಾಭ್ಯಾಂ ನಾಮ ಸ್ವಾಹಾ " ಎಂಬ ವೈದಿಕಮಂತ್ರವನ್ನು ಹೇಳಿ, ಲಲಿತಾದೇವಿಗೆ ದೀಪವನ್ನು ಸಮರ್ಪಣೆಮಾಡಬೇಕು.

೨೯-೩೦. ಈರೀತಿ ವಿಧಿಪ್ರಕಾರ ವಿಸ್ತಾರವಾದ ಘೃತಕುಂಭದಲ್ಲಿ ದೀಪವನ್ನಿರಿಸಿ, ದೇವರಿಗೆ ಸಮರ್ಪಣಮಾಡುವವರು ಸೂರ್ಯನಂತೆ ಜಾಜ್ವಲ್ಯ

**ಯಾಂತಿ ತೇ ಬ್ರಹ್ಮಸದನಂ ವಿಮಾನೇನಾರ್ಕವರ್ಚಸಾ ।**
**ತಿಷ್ಠಂತಿ ದ್ಯೋತಮಾನಾಸ್ತೇ ಯಾವದಾಭೂತಸಂಪ್ಲವಂ ॥ ೩೦ ॥**

**ಸದೀಪೇ ತು ಯಥಾ ದೇಶೇ ಚಕ್ಷೂಂಷಿ ಬಲವಂತಿ ಹಿ ।**
**ತಥಾ ದೀಪಸ್ಯ ದಾತಾರೋ ರಾಜಂಸ್ತೈಲೇನ ವಾ ಪುನಃ ॥ ೩೧ ॥**

**ಯಥೈವೋರ್ಧ್ವಂ ಗತಿರ್ನಿತ್ಯಂ ರಾಜರ್ ದೀಪಶಿಖಾಸು ವೈ ।**
**ದೀಪದಾತುಸ್ತಥೈವೋರ್ಧ್ವಂ ಗತಿರ್ಭವತಿ ಶೋಭನಾ ॥ ೩೨ ॥**

**ಘೃತೇನ ದೀಪೋ ದಾತವ್ಯೋ ರಾಜಂಸ್ತೈಲೇನ ವಾ ಪುನಃ ।**
**ವಸಾಮಜ್ಜಾದಿಭಿರ್ದೇಯೋ ನ ತು ದೀಪಃ ಕಥಂಚನ ॥ ೩೩ ॥**

---

ಮಾನವಾದ ತೇಜಸ್ಸುಳ್ಳ ವಿಮಾನವಲ್ಲಿ ಕುಳಿತು, ಬ್ರಹ್ಮಲೋಕವನ್ನು ಸೇರಿ ಅಲ್ಲಿ ಕಲ್ಪಾಂತಪರ್ಯಂತ ದಿವ್ಯವಾದ ತೇಜಸ್ಸಿನಿಂದ ಹೊಳೆಯುತ್ತಾ ವಿರಾಜಿಸುವರು.

೩೧. ದೀಪವಿರುವ ಸ್ಥಳದಲ್ಲಿ ನೇತ್ರಪಾಟವವು ಹೆಚ್ಚಾಗಿರುವಂತೆ ಈ ದೀಪ ದಾನಮಾಡುವ ಮಾನವರು ತಾವು ನೇತ್ರಪಾಟವವನ್ನು ಅತಿಶಯವಾಗಿ ಪಡೆದು, ಸಫಲವಾದ ದೃಷ್ಟಿಯುಳ್ಳವರಾಗುವರು. (ದೀಪದಾನದ ಮಹಿಮೆ ಯಿಂದ ಅವರುಗಳಿಗೆ ದೃಷ್ಟಿಮಾಂದ್ಯವು ಸಂಭವಿಸದೆ, ಅಪ್ರತಿಹತವಾದ ನೇತ್ರ ಶಕ್ತಿಯುಳ್ಳವರಾಗುವರು.)

೩೨. ಅಯ್ಯಾ ರಾಜೇಂದ್ರ! ಯಾವಾಗಲೂ ದೀಪದ ಜ್ವಾಲೆಯು ಊರ್ಧ್ವ ಮುಖವಾಗಿಯೇ ಪ್ರಸರಿಸುವಂತೆ ಈ ದೀಪದಾನಾದಿಗಳನ್ನು ಮಾಡಿದವರಿಗೆ ಊರ್ಧ್ವಲೋಕ (ಸ್ವರ್ಗ) ಗಮನವೇ ಲಭಿಸುವುದು.

೩೩. ದಾನಮಾಡಬೇಕಾದರೆ ಯಾವಾಗಲೂ ತುಪ್ಪದ ದೀಪವನ್ನೇ ದಾನ ಮಾಡಬೇಕು, ಒಂದುವೇಳೆ ಸಾಧ್ಯವಾಗದಿದ್ದಗೆ ಎಣ್ಣೆಯದೀಪವನ್ನಾದರೂ ದಾನಕೊಡಬಹುದು. ಆದರೆ ವಸೆಯ (ಕೊಬ್ಬು) ಸಂಬಂಧ, ಮೇದಸ್ಸಂಬಂಧ ವಾದ ದೀಪವನ್ನು ಮಾತ್ರ ಎಂದೂ ದಾನಕೊಡಬಾರದು.

ದೀಪಸ್ತೈಲೇನ ಕರ್ತವ್ಯೋ ನ ತು ಕರ್ಮ ವಿಜಾನತಾ ।
ನಿರ್ವಾಪಣಂ ಚ ದೀಪಸ್ಯ ಹಿಂಸನಂ ಚ ವಿಗರ್ಹಿತಂ ॥ ೩೪ ॥

ಯಃ ಕುರ್ಯಾತ್ಕರ್ಮಣಾ ತೇನ ಸ್ಯಾದಸೌ ಪುಷ್ಪಿತೇಕ್ಷಣಃ ।
ದೀಪಹರ್ತಾ ಭವತ್ಯಂಧಃ ಕಾಣೋ ನಿರ್ವಾಪಕೋ ಭವೇತ್ ॥ ೩೫ ॥

ಪದ್ಮಸೂತ್ರೋದ್ಭವಾಂ ವರ್ತಿಂ ಗಂಧತೈಲೇನ ದೀಪಿತಾಂ ।
ವಿರೋಗಃ ಸುಭಗಶ್ಚೈವ ದತ್ವಾ ಭವತಿ ಮಾನವಃ ॥ ೩೬ ॥

ಪ್ರಜ್ವಾಲ್ಯ ದೇವದೇವಸ್ಯ ಕರ್ಪೂರೇಣ ತು ದೀಪಕಂ ।
ಅಶ್ವಮೇಧಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ॥ ೩೭ ॥

---

೩೪. ದೀಪಕ್ಕೆ ಎಣ್ಣೆಯನ್ನು ಉಪಯೋಗಿಸಬಹುದು. ಆದರೆ ವಿಧಿಪ್ರಕಾರ ಕರ್ಮವಿಧಾನ ತಿಳಿದವನು, ಆ ರೀತಿ ದಾನಮಾಡುವಾಗ ಎಣ್ಣೆಯ ದೀಪವನ್ನು ಹತ್ತಿಸಿ ದಾನಮಾಡುವುದಿಲ್ಲ. ವಿಧಾನವನ್ನು ಪೂರ್ಣವಾಗಿ ತಿಳಿಯದೆ ಇದ್ದರೆ ಮಾಡಿದುದೂ ವ್ಯರ್ಥವಾಗುವುದು. ಉರಿಯುತ್ತಿದ್ದ ದೀಪವನ್ನು ಆರಿಸುವುದು ಪ್ರಾಣಿಹಿಂಸೆಗೆ ಸಮಾನವಾದುದು ಎಂದು ತಿಳಿಯಬೇಕು, ಇದು ತುಂಬಾ ನಿಂದಾಸ್ಪದವಾದ ಕರ್ಮ.

೩೫. ಉರಿಯುತ್ತಿದ್ದ ದೀಪವನ್ನು ಉರಿಯದಂತೆ ಮಾಡಿದವನ ಕಣ್ಣಿನಲ್ಲಿ ಹೂ ಬರುವುದು, ಉರಿಯುತ್ತಿದ್ದ ದೀಪವನ್ನು ಕದ್ದರೆ ಕುರುಡನಾಗುವನು, ಉರಿಯುತ್ತಿದ್ದ ದೀಪವನ್ನು ಸಂಪೂರ್ಣವಾಗಿ ಆರಿಸಿಬಿಟ್ಟರೆ ಕಿವುಡನಾಗುವನು.

೩೬. ಪದ್ಮದ ದಂಟಿನ ಮೇಲೆ ಇರುವ ಸಣ್ಣಪೊರೆಯಂತಹ ನಾರನ್ನು ತಂದು, ಅದನ್ನು ಬತ್ತಿಮಾಡಿ, ಗಂಧದ ಎಣ್ಣೆಯಿಂದ ನೆನಸಿ, ಅದನ್ನು ದೀಪಸ್ತಂಭದಲ್ಲಿಟ್ಟು, ತುಂಬಾ ಗಂಧದೆಣ್ಣೆಹಾಕಿ ಚೆನ್ನಾಗಿ ಉರಿಯುವಂತೆ ಮಾಡಿ, ಆ ದೀಪವನ್ನು ದೇವರಿಗೆ ಸಮರ್ಪಿಸಿದವನು ಸಮಸ್ತವ್ಯಾಧಿವಿಮುಕ್ತನಾಗಿ ಸಕಲಸೌಭಾಗ್ಯಗಳನ್ನೂ ಹೊಂದುತ್ತಾನೆ.

೩೭. ಕರ್ಪೂರದಿಂದ ದೀಪವನ್ನು ಹತ್ತಿಸಿ ದೇವದೇವನಿಗೆ ಸಮರ್ಪಿಸುವವನಿಗೆ, ಅಶ್ವಮೇಧಯಜ್ಞಮಾಡಿದಷ್ಟು ಫಲಬರುವುದಲ್ಲದೆ, ಅವನು ತನ್ನ ವಂಶದವರು ನರಕಗತರಾಗಿದ್ದರೆ ಅವರನ್ನೆಲ್ಲಾ ಉದ್ಧರಿಸುವನು.

ಏತನ್ಮಯೋಕ್ತಂ ತವ ದೀಪದಾನ- ।
ಫಲಂ ಸಮಗ್ರಂ ಕುರುವಂಶಚಂದ್ರ ॥
ಶ್ರುತ್ವಾ ಯಥಾವತ್ಸತತಂ ಹಿ ದೇಯಾ ।
ದೀಪಾಸ್ತ್ವಯಾ ವಿಪ್ರಸುರಾಲಯೇಷು ॥ ೩೮ ॥

ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಂ ।
ದೀಪದಾನಾಲ್ಲಲಿತಯಾ ಯದವಾಪ್ತಂ ಪುರಾನಘ ॥ ೩೯ ॥

ಆಸೀಚ್ಚಿತ್ರರಥೋ ನಾಮ ವಿದರ್ಭೇಷು ಮಹೀಪತಿಃ ।
ತಸ್ಯ ಪುತ್ರಶತಂ ರಾಜ್ಞೋ ಜಜ್ಞೇ ಪಂಚದಶೋತ್ತರಂ ॥ ೪೦ ॥

ಏಕೈವ ಕನ್ಯಾ ತಸ್ಯಾಸೀಲ್ಲಲಿತಾ ನಾಮ ನಾಮತಃ ।
ಸರ್ವಲಕ್ಷಣಸಂಪನ್ನಾ ರೂಪೇಣಾಪ್ರತಿಮಾ ಭುವಿ ॥ ೪೧ ॥

---

೩೮. ಕುರುವಂಶಶ್ರೇಷ್ಠನೇ! ದೀಪದಾನದ ವಿಧಿಯನ್ನೂ ಅದರಿಂದ ಲಭ್ಯವಾಗುವ ಸಮಸ್ತಫಲಸಂಪತ್ತಿಯನ್ನೂ ನಿನಗೆ ತಿಳಿಸಿದುದಾಯಿತು. ಈ ವ್ರತದ ವಿಧಾನವನ್ನು ಕೇಳಿ, ನೀನು ಅನವರತವೂ ಬ್ರಾಹ್ಮಣರಿಗೂ ಮತ್ತು ದೇವತೆಗಳಿಗೂ ದೀಪದಾನಮಾಡು. ಮತ್ತು ದೇವಾಲಯಗಳಲ್ಲಿ ಸದಾ ದೀಪವನ್ನು ಹತ್ತಿಸು.

೩೯. ಎಲೈ ರಾಜೋತ್ತಮನೇ! ಈ ವಿಷಯದಲ್ಲಿ ಲಲಿತಾದೇವಿಗೆ ದೀಪದಾನದಿಂದ ಫಲಪ್ರಾಪ್ತಿಯಾದುದನ್ನು ತಿಳಿಸುವ ಒಂದು ಪುರಾತನವಾದ ಇತಿಹಾಸವನ್ನು ದೊಡ್ಡವರು ಉದಾಹರಿಸುವರು. ಅದನ್ನು ಹೇಳುವೆನು ಕೇಳು ಎಂದು ಹೇಳತೊಡಗಿದನು.

೪೦ ಹಿಂದೆ ವಿದರ್ಭದೇಶದಲ್ಲಿ ಚಿತ್ರರಥನೆಂಬ ಒಬ್ಬ ರಾಜನಿದ್ದನು. ಆ ರಾಜನಿಗೆ ಕಾಲಕ್ರಮದಲ್ಲಿ ನೂರಹದಿನೈದು ಮಂದಿ ಗಂಡುಮಕ್ಕಳುಹುಟ್ಟಿದರು.

೪೧. ಕೊನೆಯಲ್ಲಿ ಒಬ್ಬಳು ಹೆಣ್ಣುಮಗಳು ಹುಟ್ಟಿದಳು. ಅವಳ ಹೆಸರು ಲಲಿತೆ. ಅವಳು·ಸರ್ವಲಕ್ಷಣ ಸಂಪನ್ನೆಯಾಗಿ ಈ ಭೂಮಂಡಲದಲ್ಲಿ ಆಕೆಯಂತೆ ಸೌಂದರ್ಯವತಿಯರು ಮತ್ತೆ ಯಾರೂ ಇಲ್ಲವೋ ಎಂಬಂತೆ ನವಮೋಹನಾಂಗಿಯಾಗಿದ್ದಳು.

**ತಾಂ ದದೌ ಕಾಶಿರಾಜಾಯ ಚಾರ್ವಂಗೀಂ ಚಾರುಧರ್ಮಣೇ ।**
**ಶತಾನ್ಯನ್ಯಾನಿ ಭಾರ್ಯಾಣಾಂ ತ್ರೀಣ್ಯಾಸಂಶ್ಚಾರುಧರ್ಮಣಃ ॥ ೪೨ ॥**

**ತಾಸಾಂ ಮಧ್ಯೇಽಗ್ರಮಹಿಷೀ ಲಲಿತಾ ಸಾಪ್ಯಥಾ ಭವತ್ ॥ ೪೩ ॥**

**ವಿಷ್ಣೋರಾಯತನೇ ಸಾ ತು ಸಹಸ್ರಂ ಪರಿದೀಪಕಾನ್ ।**
**ಪ್ರಜ್ವಾಲಯಂತ್ಯನುದಿನಂ ದಿವಾರಾತ್ರಮನಿರ್ವೃತಂ ॥ ೪೪ ॥**

**ತಾಮಿಸ್ರಮಾಶ್ವಯುಕ್ಪಕ್ಷಂ ಶುಕ್ಲಪಕ್ಷಂ ಚ ಕಾರ್ತಿಕಂ ।**
**ತಸ್ಯಾಃ ಪ್ರಜ್ವಲಿತೋ ದೀಪ ಉಚ್ಚಸ್ಥಾನಕೃತಃ ಶುಭಃ ॥ ೪೫ ॥**

**ತಸ್ಮಿನ್ ಕಾಲೇ ತಥಾ ನಿತ್ಯಂ ಬ್ರಾಹ್ಮಣಾವಸಥೇ ಚ ಸಾ ।**
**ವ್ಯಗ್ರಾ ಭವತಿ ಸಾಯಾಹ್ನೇ ದೀಪಪ್ರೇಷಣತತ್ಪರಾ ॥ ೪೬ ॥**

---

೪೨. ತಂದೆಯಾದ ಚಿತ್ರರಥಮಹಾರಾಜನು ಸುಂದರಾಂಗಿಯಾದ ತನ್ನ ಕುಮಾರಿ ಲಲಿತೆಯನ್ನು ಕಾಶಿಯ ರಾಜನಾದ ಚಾರುಧರ್ಮನಿಗೆ ಕೊಟ್ಟು ಮದುವೆಮಾಡಿದನು.

೪೩. ಇವಳಲ್ಲದೆ ಈ ಚಾರುಧರ್ಮನಿಗೆ ಇನ್ನೂ ಮುನ್ನೂರುಮಂದಿ ಭಾರ್ಯೆಯರಿದ್ದರು. ಇವರಲ್ಲಿ ಈ ಲಲಿತೆಯೇ ಪಟ್ಟದರಾಣಿಯೆನಿಸಿ ಶೋಭಿಸುತ್ತಿದ್ದಳು.

೪೪. ಈ ಲಲಿತಾದೇವಿಯು ವಿಷ್ಣುದೇವಾಲಯಗಳಲ್ಲಿ ಪ್ರತಿನಿತ್ಯವೂ ಹಗಲೂ ರಾತ್ರಿಯೂ ಸಹ, ಅವಿಚ್ಛಿನ್ನವಾಗಿ, ಉಜ್ವಲವಾದ ಸಾವಿರ ದೀಪಗಳನ್ನು ಹತ್ತಿಸುತ್ತಿದ್ದಳು.

೪೫. ಆಶ್ವಯುಜಮಾಸದ ಕೃಷ್ಣಪಕ್ಷದಲ್ಲಿಯೂ, ಕಾರ್ತಿಕಮಾಸದ ಶುಕ್ಲಪಕ್ಷದಲ್ಲಿಯೂ ಈ ದೇವಿಯು ದೇವತೋದ್ದೇಶಕವಾಗಿ ಉನ್ನತವಾದ ಸ್ಥಳವಲ್ಲಿ (ದೀಪಾಲೆ ಕಂಬದ ಮೇಲೆ) ಪ್ರಜ್ವಲಿಸುವಂತೆ ಶುಭಕರವಾದ ದೀಪವನ್ನು ಹತ್ತಿಸುತ್ತಿಪ್ಪಳು.

೪೬. ಅದೇ ಮಾಸದ ಸಾಯಂಕಾಲದ ವೇಳೆಯಲ್ಲಿ ನಿತ್ಯವೂ ಬ್ರಾಹ್ಮಣರು ಗುಂಪುಕೂಡುವ ಸ್ಥಳ (ಸಂಧ್ಯಾಮಂಟಪ, ನದೀ ತೀರದ ಸೋಪಾನ) ಗಳಲ್ಲಿಯೂ ಬ್ರಾಹ್ಮಣರ ವಾಸಸ್ಥಳವಲ್ಲಿಯೂ ದೀಪ ಹತ್ತಿಸಿ ಇರಿಸಲು ಜನರನ್ನು ಕಳುಹಿಸುವುದರಲ್ಲಿ ತತ್ಪರಳಾಗಿಪ್ಪಳು.

ಚತುಷ್ಪಥೇಷು ರಥ್ಯಾಸು ದೇವತಾಯತನೇಷು ಚ ।
ಚೈತ್ಯವೃಕ್ಷೇಷು ಗೋಷ್ಠೇಷು ಪರ್ವತಾನಾಂ ಚ ಮೂರ್ಧಸು ॥ ೪೭ ॥

ಪುಲಿನೇಷು ನದೀನಾಂ ಚ ಕೂಪಮೂಲೇಷು ಪಾಂಡವ ।
ತಾಂ ಸಪತ್ನ್ಯೋಽಥ ಸಂಗಮ್ಯ ಪಪ್ರಚ್ಛುರಿದಮಾದೃತಾಃ ॥ ೪೮ ॥

ಲಲಿತೇ ವದ ಭದ್ರಂ ತೇ ಲಲಿತಂ ವಚನಂ ತಥಾ ।
ನ ತಥಾ ಬಲಿಪುಷ್ಪೇಷು ನ ತಥಾ ದ್ವಿಜಪೂಜನೇ ॥ ೪೯ ॥

ಭವತ್ಯಾಃ ಸುಮಹಾನ್ ಯತ್ನೋ ದೀಪಪ್ರಜ್ವಾಲನೇ ತಥಾ ।
ತದೇತತ್ಕಥಯಾಸ್ಮಾಕಂ ಲಲಿತೇ ಕೌತುಕಂ ಪರಂ ॥ ೫೦ ॥

---

೪೭. ಅಲ್ಲದೆ ನಾಲ್ಕುದಾರಿಗಳು ಕೂಡುವ ಸ್ಥಳ, ರಸ್ತೆಗಳು, ರಾಜಬೀದಿ, ದೇವಾಲಯ, ಯಜ್ಞಶಾಲೆ, ಪೂಜ್ಯವಾದ ಅಶ್ವತ್ಥಾದಿ ವೃಕ್ಷಗಳು, ದನಗಳಕೊಟ್ಟಿಗೆಗಳು, ಪರ್ವತದ ಶಿಖರಪ್ರದೇಶಗಳು ಇವುಗಳಲ್ಲಿಯೂ.

೪೮. ಮತ್ತು ನದಿಯ ಮರಳುದಿಣ್ಣೆಗಳು, ಬಾವಿಯ ದಡ ಮುಂತಾದ ಸ್ಥಳಗಳಲ್ಲಿಯೂ ದೀಪಗಳನ್ನು ಹತ್ತಿಸುವ ವ್ಯವಸ್ಥೆ ಮಾಡಿದ್ದಳು. ಈರೀತಿ ಪಟ್ಟದರಾಣಿಯು ಯಾವಾಗಲೂ ದೀಪ ಹತ್ತಿಸುವ ವಿಚಾರದಲ್ಲೇ ತತ್ಪರಳಾಗಿರುವುದನ್ನು ನೋಡಿ, ಅವಳ ಮುನ್ನೂರು ಮಂದಿ ಸವತಿಯರೂ ಇವಳ ಸಮೀಪಕ್ಕೆ ಬಂದು ಇವಳನ್ನು ಆದರದಿಂದ ಪ್ರಶ್ನೆಮಾಡಿದರು.

೪೯-೫೦. "ಎಲೌ ಲಲಿತಾದೇವಿ! ನಿನಗೆ ಮಂಗಳವಾಗಲಿ. ನಮ್ಮ ಪ್ರಶ್ನೆಗೆ ಲಲಿತವಾದ (ಸಮಾಧಾನಕರವಾದ) ಪ್ರತ್ಯುತ್ತರ ಕೊಡು. ದೇವತೆಗಳಿಗೆ ದೀಪವನ್ನು ಹತ್ತಿಸುವುದರಲ್ಲಿ ನಿನಗೆ ಇರುವಷ್ಟು ಆಸಕ್ತಿಯು ದೇವತಾಪೂಜೆ, ಬಲಿಸಮರ್ಪಣೆ ಮತ್ತು ಬ್ರಾಹ್ಮಣಪೂಜೆ ಮೊದಲಾದುವುಗಳಲ್ಲಿ ತೋರುವುದಿಲ್ಲ. ಇದಕ್ಕೆ ಕಾರಣವನ್ನು ತಿಳಿಯಬೇಕೆಂದು ನಮಗೆ ಕುತೂಹಲವುಂಟಾಗಿದೆ. ಆದುದರಿಂದ ದಯೆಯಿಟ್ಟು ಇದರ ತಥ್ಯಾಂಶವನ್ನು ನಮಗೆ ತಿಳಿಸು" ಎಂದರು.

ಮನ್ಯಾಮಹೇ ತ್ವಯಾವಶ್ಯಂ ದೀಪದಾನಫಲಂ ಶ್ರುತಂ ।
॥ ಲಲಿತೋವಾಚ ॥
ನಾಹಂ ಮತ್ಸರಿಣೀ ಭದ್ರಾ ನ ಚ ರಾಗಾದಿ ದೂಷಿತಾ ॥ ೫೧ ॥

ಏಕಪತ್ಯಾಶ್ರಿತಾಃ ಸಾಧ್ವ್ಯೋ ಭವತ್ಯೋ ಮಮ ಮಾನದಾಃ ।
ಅಪೃಥಗ್ಧರ್ಮಚರಣಾಃ ಶೃಣ್ವಂತು ಗದಿತಂ ಮಮ ॥ ೫೨ ॥

ಮಯ್ಯೈತದ್ದೀಪದಾನಸ್ಯ ಯಥೇಷ್ಟಂ ಭುಜ್ಯತೇ ಫಲಂ ।
ಹಿರಣ್ಯದಯಿತಾ ಭಾರ್ಯಾ ಶೈಲರಾಜಸುತಾ ವರಾ ॥ ೫೩ ॥

ಉಮಾದೇವೀತಿ ಮದ್ರೇಷು ದೇವಿಕಾ ಸಾ ಸರಿದ್ವರಾ ।
ನರಾಣಾಮನುಕಂಪಾರ್ಥಂ ಬ್ರಹ್ಮಣಾ ಹ್ಯವತಾರಿತಾ ॥
ಶ್ರುತಾ ಕಿಂ ಭವತೀಭಿ ಸಾಃ ದೇವಿಕಾ ಪಾಪನಾಶಿನೀ ॥ ೫೪ ॥

---

೫೧. ದೀಪದಾನದಿಂದ ಲಭಿಸುವ ಮಹಾಫಲವೇನೆಂಬುದನ್ನು ನೀನು ಚೆನ್ನಾಗಿ ತಿಳಿದಿರುವೆಯೆಂದು ನಮ್ಮ ಭಾವನೆ. ದಯವಿಟ್ಟು ಅದನ್ನು ನಮಗೂ ತಿಳಿಸು ಎಂದು ಪ್ರಾರ್ಥಿಸಿದರು.

೫೨. ಲಲಿತೆಯು ಹೇಳುತ್ತಾಳೆ—ಎಲೌ ಮಂಗಳಾಂಗಿಯರೇ! ನನಗೆ ನಿಮ್ಮಲ್ಲಿ ಎಂದಿಗೂ ಮತ್ಸರವಿಲ್ಲ. ಅಲ್ಲದೆ ನಿಮ್ಮ ವಿಚಾರವಾದ ರಾಗದ್ವೇಷಗಳೂ ನನ್ನನ್ನು ಪೀಡಿಸಲಾರವು (ನನಗೆ ರಾಗದ್ವೇಷಾದಿಗಳೂ ಇಲ್ಲ). ಒಬ್ಬನನ್ನೇ ಪತಿಯನ್ನಾಗಿ ಆಶ್ರಯಿಸಿ, ಪಾತಿವ್ರತ್ಯಧರ್ಮವನ್ನನುಸರಿಸುತ್ತಿರುವ ನೀವೆಲ್ಲರೂ ನನಗೆ ಗೌರವಾಸ್ಪದರಾಗಿರುವಿರಿ. ನೀವೆಲ್ಲರೂ ನನ್ನಂತೆ ಪತಿಶುಶ್ರೂಷಾಧರ್ಮ ವೊಂದರಲ್ಲೇ ತತ್ಪರರಾಗಿರುವಿರಿ. ಕೋಮಲಾಂಗಿಯರೇ! ನಾನು ಹೇಳುವುದನ್ನು ಲಾಲಿಸಿ.

೫೩. ಹಿಂದಿನ ಜನ್ಮದಲ್ಲಿ ನಾನು ಮಾಡಿದ ದೀಪದಾನದ ಫಲವನ್ನು ಈಗ ಯಥೇಷ್ಟವಾಗಿ ಅನುಭವಿಸುತ್ತಿರುವೆನು. ಈ ರಾಜಭೋಗಗಳು ಅದರ ಫಲವೇ ಆಗಿದೆ. ಪರ್ವತರಾಜನಿಗೆ ಪೂರ್ವದಲ್ಲಿ ಉಮಾದೇವಿಯೆಂಬ ಮಗಳಿದ್ದಳು. ಅವಳು ಹಿರಣ್ಯನೆಂಬವನಿಗೆ ಪ್ರೀತಿಪಾತ್ರಳಾದ ಪತ್ನಿಯೂ ಆಗಿದ್ದಳು.

೫೪. ಆತನು ಈ ಉಮಾದೇವಿಯನ್ನು ಮಾನವರ ಉಪಕಾರಕ್ಕಾಗಿ, ಮದ್ರ ದೇಶದಲ್ಲಿ ದೇವಿಕಾ ಎಂಬ ಹೆಸರಿನ ನದಿಯಾಗಿ ಹರಿಯುವಂತೆ ಮಾಡಿದನು. (ಪಾಪನಾಶಿನಿಯಾದ ಆ ದೇವಿಕಾನದಿಯ ವಿಷಯವನ್ನು ನೀವು ಕೇಳಿರಬಹುದು ಈಗ ಆ ನದಿಗೆ ಪಾಪನಾಶಿನಿಯೆಂದು ಹೆಸರಾಗಿದೆ.)

**ತಸ್ಯಾಂ ಸ್ನಾತ್ವಾ ಸಕೃನ್ನದ್ಯಾಂ ಗಾಣಪತ್ಯಮವಾಪ್ನುಯಾತ್ ।**
**ತಸ್ಯಾಮಥ ನೃಸಿಂಹಾಖ್ಯಂ ತೀರ್ಥಂ ಕಲ್ಮಷನಾಶನಂ ॥**
**ಹರಿಣಾ ನೃಸಿಂಹವಪುಷಾ ಯತ್ರ ಸ್ನಾನಂ ಕೃತಂ ಪುರಾ ॥ ೫೫ ॥**

**ಸೌವೀರರಾಜಸ್ಯ ಪುರಾ ಮೈತ್ರೇಯೋಭೂತ್ಪುರೋಹಿತಃ ।**
**ತೇನ ಚಾಯತನಂ ವಿಷ್ಣೋಃ ಕಾರಿತಂ ದೇವಿಕಾ ತಟೇ ॥ ೫೬ ॥**

**ಅಹನ್ಯಹನಿ ಶುಶ್ರೂಷಾಂ ಪುಷ್ಪಧೂಪಾನುಲೇಪನೈಃ ।**
**ದೀಪದಾನಾದಿಭಿಶ್ಚೈವ ಚಕ್ರೇ ತತ್ರ ಸ ವೈ ದ್ವಿಜಃ ॥ ೫೭ ॥**

**ಕಾರ್ತಿಕ್ಯಾಂ ದೀಪಕಸ್ತತ್ರ ಪ್ರದತ್ತಸ್ತೇನ ಚೈಕದಾ ।**
**ಆಸೀನ್ನಿರ್ವಾಣಭೂಯಿಷ್ಠೋ ದೇವಾರ್ಚಾಸು ರಥೋನಿಶಿ ॥ ೫೮ ॥**

---

೫೫. ಈ ಪಾಪನಾಶಿನೀನದಿಯಲ್ಲಿ ಒಂದುಸಲ ಸ್ನಾನಮಾಡಿದಮಾತ್ರ ದಿಂದಲೇ ಮಾನವನಿಗೆ ಶಿವಗಣಗಳ ಆಧಿಪತ್ಯ ಲಭಿಸುವುದು. ಸರ್ವಪಾಪ ಗಳನ್ನೂ ನಾಶಮಾಡುವ ನೃಸಿಂಹತೀರ್ಥವು ಈ ನದಿಯಲ್ಲಿರುವುದು. ಹಿಂದೆ ನೃಸಿಂಹರೂಪಿಯಾದ ಮಹಾವಿಷ್ಣುವು ಈ ತೀರ್ಥದಲ್ಲಿ ಸ್ನಾನಮಾಡಿದನು. ಆದುದರಿಂದ ಇದಕ್ಕೆ ಈ ಹೆಸರು ಬಂದಿದೆ.

೫೬. ಹಿಂದೆ ಸೌವೀರದೇಶದ ರಾಜನಿಗೆ ಮೈತ್ರೇಯನೆಂಬ ಪುರೋಹಿತ ನಿದ್ದನು. ಆ ಮಹಾನುಭಾವನು ಈ ದೇವಿಕಾನದಿಯ ದಡದಲ್ಲಿ ಒಂದು ವಿಷ್ಣು ದೇವಾಲಯವನ್ನು ಕಟ್ಟಿಸಿದನು.

೫೭. ಆ ವಿಪ್ರನು ಅಲ್ಲಿ ದೇವರನ್ನು ಪ್ರತಿಷ್ಠಿಸಿ, ಪ್ರತಿದಿನವೂ ಪುಷ್ಪ ಅನು ಲೇಪನ, ಧೂಪ, ದೀಪ ಇವುಗಳನ್ನು ಸಮರ್ಪಿಸುತ್ತಾ ಆ ವಿಷ್ಣುಮೂರ್ತಿಯನ್ನು ಬಿಡದೆ ಸೇವೆಮಾಡುತ್ತಿದ್ದನು.

೫೮. ಆ ಮೈತ್ರೇಯನು ಒಂದುಸಲ ಕಾರ್ತಿಕಮಾಸದಲ್ಲಿ ಆ ದೇವಾ ಲಯದ ಒಳಗಡೆ ದೇವರ ಸಮ್ಮುಖದಲ್ಲಿ ದೀಪವನ್ನು ಹತ್ತಿಸಿದ್ದನು. ಆ ದೀಪವು ಅರ್ಧರಾತ್ರಿಯ ಸಮಯದಲ್ಲಿ ಮಂದಪ್ರಕಾಶವುಳ್ಳದ್ದಾಗಿ ಆರಿಹೋಗುವ ಸ್ಥಿತಿ ಯಲ್ಲಿ ಇದ್ದಿತು.

**ದೇವತಾಯತನೇವಾತ್ಸಂ ತತ್ರಾಹಮಪಿ ಮೂಷಿಕಾ ।**
**ಪ್ರದೀಪವರ್ತಿಹರಣೇ ಕೃತಬುದ್ಧಿರ್ವರಾನನಾಃ ॥ ೫೯ ॥**

**ಗೃಹೀತಾಥ ಮಯಾ ವರ್ತಿರ್ವೃಷದಂಶೋ ರರಾಸ ಚ ।**
**ನಷ್ಟಾ ಚಾಹಂ ತತಸ್ತಸ್ಯ ಮಾರ್ಜಾರಸ್ಯ ಭಯಾತುರಾ ॥ ೬೦ ॥**

**ವಕ್ತ್ರಪ್ರಾಂತೇನ ಪಶ್ಯಂತ್ಯಾ ಸ ದೀಪಃ ಪ್ರೇರಿತೋ ಮಯಾ ।**
**ಜಜ್ವಾಲ ಪೂರ್ವವದ್ದೀಪ್ತ್ಯಾ ತಸ್ಮಿನ್ನಾಯತನೇ ಪುನಃ ॥ ೬೧ ॥**

**ಮೃತಾಹಂ ತು ಪುನರ್ಜಾತಾ ವೈದರ್ಭೇ ರಾಜಕನ್ಯಕಾ ।**
**ಜಾತಿಸ್ಮರಾ ಮಹೀಪಸ್ಯ ಮಹಿಷೀ ಚಾರುಧರ್ಮಣಃ ॥ ೬೨ ॥**

---

೫೯. ಹೆಣ್ಣು ಇಲಿಯ ಜನ್ಮವನ್ನು ಪಡೆದಿದ್ದ ನಾನು ಆಗ ಆ ದೇವಾಲಯದಲ್ಲಿ ವಾಸಿಸುತ್ತಿದ್ದೆನು. ಎಲೌ ಸುಂದರಮುಖಿಯರೇ! ಇಲಿಯಾದ ನನಗೆ ಆ ದೀಪದ ಬತ್ತಿಯನ್ನು ಅಪಹರಿಸಿ ತಿಂದುಹಾಕಬೇಕೆಂಬ ಬುದ್ಧಿಯುಂಟಾಯಿತು.

೬೦. ಅನಂತರ ನಾನು ಆ ದೀಪದ ಬತ್ತಿಯನ್ನು ಕಚ್ಚಿಕೊಂಡುಹೋಗಬೇಕೆಂದು ಪ್ರಯತ್ನಿಸುವಷ್ಟರಲ್ಲಿಯೇ ಒಂದು ಬೆಕ್ಕು ಕೂಗಿತು. ಆ ಶಬ್ದ ಕೇಳಿದಕೂಡಲೇ ನಾನು ಬೆಕ್ಕಿಗೆ ಹೆದರಿ ಹಾಗೆಯೇ ಓಡಿಹೋದೆನು.

೬೧. ಹಾಗೆ ಹೋಗುವ ರಭಸದಲ್ಲಿ ನನ್ನ ಮುಖದ ತುದಿಯಿಂದ ಆ ದೀಪದಬತ್ತಿಯು ಸ್ವಲ್ಪ ಮುಂದಕ್ಕೆ ನೂಕಲ್ಪಟ್ಟಿತು. ಆಗ ಆ ದೀಪವು ಮೊದಲಿನಂತೆಯೇ ಉಜ್ವಲವಾಗಿ ಉರಿಯಲಾರಂಭಿಸಿತು.

೬೨. ಮನಃಪೂರ್ವಕವಾಗಿಯಲ್ಲದೆ ಇದ್ದರೂ ಈರೀತಿ ನಾನು ಯಾವುದೋ ಉದ್ದೇಶದಿಂದ ದೀಪವು ಚೆನ್ನಾಗಿ ಉರಿಯುವಂತೆ ಮಾಡಿದ ಕಾರಣದಿಂದಲೇ ನನಗೆ ಆ ಮೂಷಿಕಜನ್ಮವು ಕಳೆದು ಆ ಮುಂದಿನ ಜನ್ಮದಲ್ಲಿ ವೈದರ್ಭದೇಶದ ರಾಜನ ಮಗಳಾಗಿ ಜನಿಸಿದೆನು. ಆ ಮಹಿಮೆಯಿಂದ ಪೂರ್ವಜನ್ಮ ಸ್ಮರಣ ಶಕ್ತಿಯನ್ನು ಹೊಂದಿದ ನಾನು ಈಗ ಈ ಚಾರುಧರ್ಮ ಮಹಾರಾಜನ ಪಟ್ಟಮಹಿಷಿಯಾದೆನು.

**ಏಷ ಪ್ರಭಾವೋ ದೀಪಸ್ಯ ಕಾರ್ತಿಕೇ ಮಾಸಿ ಶೋಭನಃ ।**
**ದತ್ತಸ್ಯಾಯತನೇ ವಿಷ್ಣೋರ್ಯಸ್ಯೇಯಂ ವ್ಯುಷ್ಟಿರುತ್ತಮಾ ॥ ೬೩ ॥**

**ಅಸಂಕಲ್ಪಿತಮಧ್ಯಸ್ಯ ಪ್ರೇರಣಂ ಯನ್ಮಯಾ ಕೃತಂ ।**
**ಕೇಶವೇ ಬಾಲದೀಪಸ್ಯ ತಸ್ಯೇದಂ ಭುಜ್ಯತೇ ಫಲಂ ॥ ೬೪ ॥**

**ಏತಸ್ಮಾತ್ಕಾರಣಾದ್ದೀಪಾನಹಮೇತಾನಹರ್ನಿಶಂ ।**
**ಪ್ರಯಚ್ಛಾಮಿ ಹರೇರ್ಗೇಹೇ ಜಾತಮಸ್ಯ ಮಹಾಫಲಂ ॥ ೬೫ ॥**

**ಏವಮುಕ್ತ್ವಾ ಸಪತ್ನೀಃ ಸಾ ದೀಪದಾನಪರಾಯಣಾ ।**
**ಬಭೂವ ದೇವದೇವಸ್ಯ ಕೇಶವಸ್ಯ ಗೃಹೇ ಸದಾ ॥ ೬೬ ॥**

**ತತಃ ಕಾಲೇನ ಮಹತಾ ಸಹ ರಾಜ್ಞಾ ಮಹಾತ್ಮನಾ ।**
**ವಿಷ್ಣುಲೋಕಮನುಪ್ರಾಪ್ತಾ ಪಂಚತ್ವಂ ಪ್ರಾಪ್ಯ ಮಾನದಾ ॥ ೬೭ ॥**

---

೬೩. ವಿಷ್ಣುದೇವಾಲಯದಲ್ಲಿ ಪ್ರತಿ ಕಾರ್ತಿಕಮಾಸಗಳಲ್ಲಿ ಶುಭಕರವಾದ ದೀಪವನ್ನು ಹತ್ತಿಸಿ, ದೇವರಿಗೆ ಸಮರ್ಪಿಸಿದುದರ ಫಲವೇ ಈರೀತಿ ನನ್ನ ಉತ್ತಮವಾದ ಸೌಭಾಗ್ಯಕ್ಕೆ ಕಾರಣವೆಂದು ತಿಳಿಯಿರಿ.

೬೪. ನನಗೆ ಅದರಲ್ಲಿ ಸಂಕಲ್ಪ (ಪ್ರವೃತ್ತಿ) ಇಲ್ಲದಿದ್ದರೂ ಏನೋ ಕಾರಣಾಂತರದಿಂದ ಕೇಶವನಿಗೆ ಸಮರ್ಪಿಸಿದ್ದ ದೀಪವು ಕೇವಲ ಸಣ್ಣದಾಗಿದ್ದಾಗ ಅದನ್ನು ಮೀಟಿ ಚೆನ್ನಾಗಿ ಉರಿಯುವಂತೆ ಮಾಡಿದ ಫಲವನ್ನೇ ಈಗ ನಾನು ಸಂತೋಷದಿಂದ ಅನುಭವಿಸುತ್ತಿರುವೆನು.

೬೫. ಎಲೌ ಸಹೋದರಿಯರೇ ! ಈ ಕಾರಣದಿಂದಲೇ ನಾನು ಹಗಲೂ ರಾತ್ರಿ, ವಿಷ್ಣುದೇವಾಲಯದಲ್ಲಿ ದೀಪಸಮರ್ಪಣೆಯನ್ನು ಮಾಡುತ್ತಿದೇನೆ. ಇದು ಮಹಾಫಲಗಳನ್ನುಂಟುಮಾಡುವುದು ಎಂದಳು.

೬೬. ಈರೀತಿ ಲಲಿತಾದೇವಿಯು ತನ್ನ ಸಪತ್ನಿಯರಿಗೆ ಹೇಳಿ, ತಾನು ಮಾತ್ರ ದೇವದೇವನೆನಿಸಿದ ಕೇಶವನ ದೇವಾಲಯದಲ್ಲಿ ಸದಾ ದೀಪಾರಾಧನಪರಾಯಣಳಾಗಿಯೇ ಇರುತ್ತಿದ್ದಳು.

೬೭. ಮಾನಿನಿಯಾದ ಈ ಲಲಿತಾದೇವಿಯು ಹೀಗೆ ಬಹಳಕಾಲ ಕಳೆದನಂತರ ಮೃತಳಾಗಿ, ಮಹಾತ್ಮನೆನಿಸಿದ ತನ್ನ ಪತಿಯಾದ ಚಾರುಧರ್ಮಮಹಾರಾಜನೊಡನೆ ವಿಷ್ಣುಲೋಕವನ್ನು ಹೊಂದಿದಳು.

ತಂ ಲೋಕಮಾಸಾದ್ಯ ನೃಪೇಣ ಸಾರ್ಧಂ ।
ಸಾ ರಾಜಪತ್ನೀ ಕಮಲಾಭನೇತ್ರಾ ॥
ರೇಮೇ ಮಹೀಪಾಲ ಮುದಾ ಸಮೇತಾ ।
ದೀಪಪ್ರದಾನಾತ್ಸಕಲಾರ್ತಿಹೀನಾ ॥ ೬೮ ॥

ದೀಪಪ್ರದಾನಮಪಿ ಪುಣ್ಯತರಂ ವದಂತಿ ।
ವಿಪ್ರಾಗ್ನಿಗೋಸುರಕುಲೈಕಗೃಹಾಂಗಣೇಷು ॥
ತದ್ದಾನದೀಪ್ತವಪುಷಾಥ ಪಥೋಂಧಕಾರೇ ।
ಗಚ್ಛನ್ನರಃ ಪತತಿ ನ ಸ್ಖಲತೇ ಕದಾಚಿತ್ ॥ ೬೯ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣಯುಧಿಷ್ಠಿರ ಸಂವಾದೇ ದೀಪದಾನವಿಧಿವರ್ಣನಂ ನಾಮ ತ್ರಿಂಶದುತ್ತರಶತತಮೋಽಧ್ಯಾಯಃ.

---

೬೮. ಓ ರಾಜೇಂದ್ರನೇ! ಕಮಲದಳದಂತೆ ನೇತ್ರಗಳುಳ್ಳ ರಾಜಪತ್ನಿಯಾದ ಈ ಲಲಿತಾದೇವಿಯು, ತನ್ನ ಪತಿಯಾದ ಚಾರುಧರ್ಮಮಹಾರಾಜನೊಡನೆ ಆ ವಿಷ್ಣುಲೋಕವನ್ನು ಸೇರಿ, ದೀಪದಾನಮಹಿಮೆಯಿಂದ ಅಲ್ಲಿ ಸಂತೋಷಯುಕ್ತಳಾಗಿ ಯಾವ ತೊಂದರೆಯೂ ಇಲ್ಲದಂತೆ ವಾಸಿಸುತ್ತಿದ್ದಳು.

೬೯. ಅಯ್ಯಾ ಯುಧಿಷ್ಠಿರ! ಮುಖ್ಯವಾಗಿ ಬ್ರಾಹ್ಮಣರು, ಅಗ್ನಿ, ಗೋವುಗಳು, ಮತ್ತು ದೇವತೆಗಳು ಇವರ ಗೃಹಂಗಣ, ಮನೆ, ಮತ್ತು ಆಲಯ, ಇವುಗಳಲ್ಲಿ ದೀಪದಾನ ಮಾಡುವುದು ತುಂಬಾ ಪುಣ್ಯಕರವೆಂದು ಹೇಳುವರು. ಈ ದಾನದಿಂದ ಲಭಿಸುವ ಉಜ್ವಲವಾದ ದೇಹಕಾಂತಿಯಿಂದ ಮಾನವನು ಎಂತಹ ಘೋರಾಂಧಕಾರದಲ್ಲಿ ಸಂಚರಿಸಿದರೂ ಕತ್ತಲೆಯ ಕಷ್ಟವನ್ನು (ಎಂದರೆ ಎಡಹುವುದು, ಬೀಳುವುದು ಮುಂತಾದ್ದನ್ನು) ಅನುಭವಿಸದೆ ಸುಖವಾಗಿರುವನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರರ್ಪದಲ್ಲಿ ದೀಪದಾನವಿಧಿವರ್ಣನೆಯೆಂಬ ನೂರಮೂವತ್ತನೆಯ ಅಧ್ಯಾಯ ಮುಗಿದುದು.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣ

## ಉತ್ತರಪರ್ವಣಿ

## ಏಕತ್ರಿಂಶತ್ಯುತ್ತರಶತತಮೋಽಧ್ಯಾಯಃ

|| ಶ್ರೀಕೃಷ್ಣ ಉವಾಚ ||

**ಕಾರ್ತಿಕ್ಯಾಮಥ ವಾ ಮಾಘ್ಯಾಮೇವಮೇವ ಯುಧಿಷ್ಠಿರ || ೧ ||**

**ಚೈತ್ರ್ಯಾಮಥ ತೃತೀಯಾಯಾಂ ವೈಶಾಖ್ಯಾಂ ದ್ವಾದಶೇಽಹ್ನಿ ವಾ |**
**ಖಂಡನೀಲಂ ಶಂಖಪಾದಂ ಸ ಪೌಂಡ್ರಂ ಧೌತಪುಷ್ಪಕಂ || ೨ ||**

**ಗೋಭಿಶ್ಚತುರ್ಭಿಃ ಸಹಿತಂ ಸೃಜೇಚ್ಚೈವ ವಿಧಿಂ ಶೃಣು |**
**ಯದುವಾಚ ಪುರಾ ಗರ್ಗೋ ಗೋಕುಲೇಽನಘ ಪಾಂಡವ || ೩ ||**

---

### ನೂರಮೂವತ್ತೊಂದನೆಯ ಅಧ್ಯಾಯ

೧-೩. ಶ್ರೀಕೃಷ್ಣನು ಪುನಃ ಯುಧಿಷ್ಠಿರನನ್ನು ಕುರಿತು ಹೇಳುತ್ತಾನೆ— ಓ ಯುಧಿಷ್ಠಿರನೇ! ಕಾರ್ತಿಕಮಾಸ, ಮಾಘಮಾಸ, ಚೈತ್ರಮಾಸ ಇವುಗಳ ತದಿಗೆ, ಮತ್ತುವೈಶಾಖಮಾಸದ ದ್ವಾದಶೀ, ಇವುಗಳಲ್ಲಿ ಶಂಖದಂತೆ ಸುಂದರವಾದ ಕಾಲುಗಳೂ, ಬಲಎಡಭಾಗಗಳಲ್ಲಿ ಶಂಖ ಚಕ್ರ ಈ ಚಿಹ್ನೆಗಳೂ ಇವುಗಳಿಂದ ಶೋಭಿಸುತ್ತಿರುವ ಕರಿಯಬಣ್ಣದ ವೃಷಭವನ್ನು ಪುಷ್ಪಾದಿಗಳಿಂದ ಪೂಜಿಸಿ, ನಾಲ್ಕು ಹಸುಗಳೊಡನೆ ಬಿಟ್ಟುಬಿಡಬೇಕು. ಓ ಪಾಂಡವನೇ ! ಈ ವೃಷೋತ್ಸರ್ಗವಿಧಿಯನ್ನು ಹಿಂದೆ ಗರ್ಗಮಹರ್ಷಿಯು ಗೋಕುಲದಲ್ಲಿ ಹೇಳಿದ್ದನು. ಅದನ್ನು ನಿನಗೆ ಕ್ರಮವಾಗಿ ಹೇಳುತ್ತೇನೆ ಕೇಳು ಎಂದನು.

ತತ್ರೇಽಹಂ ಚ ಪ್ರವಕ್ಷ್ಯಾಮಿ ವಿಧಿಂ ಗರ್ಗಪ್ರಚೋದಿತಂ ।
ಮಾತರಂ ಸ್ಥಾಪಯಿತ್ವಾಗ್ರೇ ಪೂಜಯೇತ್ಕುಸುಮಾಕ್ಷತೈಃ ॥ ೪ ॥

ಮಾತೃಶ್ರಾದ್ಧಂ ತತಃ ಕುರ್ಯಾತ್ಸದಾಭ್ಯುದಯಕಾರಕಂ ।
ಆಕಾಲಮೂಲಂ ಕಲಶಮಶ್ವತ್ಥದಲಶೋಭಿತಂ ॥ ೫ ॥

ತತ್ರ ವಿದ್ವಾನ್ ಜಪಿತ್ವಾ ತು ಸ್ಥಾಪಯೇದ್ರುದ್ರದೇವತಾಂ ।
ಸುಸಮಿದ್ಧಂ ತತಃ ಕೃತ್ವಾ ವಹ್ನಿಂಮಂತ್ರಪುರಸ್ಸರಂ ॥ ೬ ॥

ಅಥೈನಂ ಜುಹುಯಾತ್ ಷಡ್ಭಿಃಪೃಥಗಾಹುತಿಸಂಜ್ಞಿತೈಃ ।
ಪೌಷ್ಯಾಮಂತ್ರೈಸ್ತತಃ ಪಶ್ಚಾದ್ಧುತ್ವಾ ವಹ್ನಿಂ ಯಥಾವಿಧಿ ॥ ೭ ॥

ಏಕವರ್ಣಂ ದ್ವಿವರ್ಣಂ ವಾ ರೋಹಿತಂ ಶ್ವೇತಮೇವ ವಾ ।
ಜೀವದ್ವತ್ಸಪಯಸ್ವಿನ್ಯಾಃ ಪುತ್ರಂ ಸರ್ವಾಂಗಸುಂದರಂ ॥ ೮ ॥

---

೪-೫. ಈ ಕಾರ್ಯಕ್ಕೆ ಮೊದಲು (ನಾಂದೀ) ಮಾತೃದೇವತೆಗಳನ್ನು ಮುಂದುಗಡೆ ಆವಾಹಿಸಿ, ಅವರನ್ನು ಪುಷ್ಪ ಮತ್ತು ಅಕ್ಷತೆ ಮುಂತಾದುವುಗಳಿಂದ ಪೂಜೆಮಾಡಬೇಕು. ಅನಂತರ ಆ ಮಾತೃದೇವತೆಗಳನ್ನುದ್ದೇಶಿಸಿ ಸದಾ ಮಂಗಳ ಕಾರಕವೆನಿಸಿ ಇರುವ ಮಾತೃಶ್ರಾದ್ಧವನ್ನು ಮಾಡಬೇಕು. ಆಮೇಲೆ (ಅಕಾಲ ಮೂಲ ಕಲಶವನ್ನು) ಕಲ್ಮಷರಹಿತವಾದ ಕಲಶಗಳನ್ನು ಸ್ಥಾಪಿಸಿ ಅವುಗಳನ್ನು ಅರಳಿ ಎಲೆಗಳ ಚಿಗುರುಗಳಿಂದ ಅಲಂಕರಿಸಬೇಕು.

೬-೭. ಅನಂತರ ವಿದ್ವಾಂಸನಾದವನು ಮಂತ್ರವನ್ನು ಜಪಿಸುತ್ತಾ, ಆ ಕಲಶಗಳಲ್ಲಿ ರುದ್ರನನ್ನು ಆವಾಹಿಸಬೇಕು. ಆಮೇಲೆ ಅಗ್ನಿ ಮಂತ್ರ ಪುರಸ್ಸರವಾಗಿ ಯಜ್ಞೇಶ್ವರನನ್ನು ಹುತಮಾಡಿ, ವಿಧಿಪೂರ್ವಕವಾಗಿ ಪುಷ್ಯನಕ್ಷತ್ರಕ್ಕೆ ವಿಹಿತವಾದ ಮಂತ್ರಗಳಿಂದ ರುದ್ರದೇವತೆಗೆ, ಪ್ರತ್ಯೇಕವಾಗಿ ಆರು ಆಹುತಿಗಳನ್ನು ಕೊಡಬೇಕು. ಅನಂತರ ವಿಧಿಗನುಸಾರವಾಗಿ ಅಗ್ನಿಗೂ ಆಹುತಿ ಕೊಡಬೇಕು.

೮-೯. ಆಮೇಲೆ ಪೂರ್ಣ ನೀಲಿಬಣ್ಣ, ಅಥವಾ ಕಪ್ಪು ಬಿಳುಪು ಎರಡು ಮಿಶ್ರವಾಗಿರುವುದು ಅಥವಾ ಕೆಂಪುಬಣ್ಣ, ಅಥವಾ ಬಿಳಿಯಬಣ್ಣವುಳ್ಳದ್ದಾಗಿ ಸರ್ವಾಂಗಗಳಲ್ಲಿಯೂ ಸುಂದರವಾಗಿರುವ ಒಂದು ವೃಷಭವನ್ನು ತೆಗೆದುಕೊಂಡು ಬರಬೇಕು. ಈ ವೃಷಭದ ತಾಯಿಯು ತಾನು ಹಾಕಿದ ಕರುಗಳೆಲ್ಲಾ ಸಾಯದೇ

**ಚತಸ್ರೋಃ ವತ್ಸತರ್ಯಶ್ಚ ತಾಭಿಃ ಸಾರ್ಧಮಲಂಕೃತಂ ।**
**ತಾಸಾಂ ಕರ್ಣೇಃ ಜಪೇದ್ವಿಪ್ರಃ ಪತಿಂ ವೋಃ ಬಲಿನಂ ಶುಭಂ ॥ ೯ ॥**

**ಸಮಿತಾಸ್ತೇನ ಸಹಿತಾಃ ಕ್ರೀಡಧ್ವಂ ಹೃಷ್ಟಮಾನಸಾಃ ।**
**ತತೋ ವಾಮೇ ತ್ರಿಶೂಲಂ ಚ ದಕ್ಷಿಣೇ ಚಕ್ರಮಾಲಿಖೇತ್ ॥ ೧೦ ॥**

**ಅಂಕಿತಂ ಶಂಖಚಕ್ರಾಭ್ಯಾಂ ವರ್ಷಿತಂ ಕುಸುಮಾದಿನಾ ।**
**ಪುಷ್ಪಮಾಲಾಕೃತಗ್ರೀವಂ ಸಿತವಸ್ತ್ರೈಶ್ಚ ಛಾದಿತಂ ॥ ೧೧ ॥**

**ವಿಮುಂಚೇದ್ವತ್ಸಕಾಭಿಶ್ಚ ನೀಲಾಭಿರ್ಬಲಿನಂ ವೃಷಂ ।**
**ದೇವಾಲಯೇ ಗೋಕುಲೇ ವಾ ನದೀನಾಂ ಸಂಗಮೇಽಥವಾ ॥ ೧೨ ॥**

---

ಇರುವುದಾಗಿಯೂ ತುಂಬಾ ಹಾಲು ಕೊಡುವುದಾಗಿಯೂ ಇರಬೇಕು. ಇಂತಹ ಹಸುವಿನ ಕರುವನ್ನೇ ಈ ಕರ್ಮಕ್ಕೆ ಆರಿಸಬೇಕು. ಅಲ್ಲದೆ ಈ ವೃಷಭದ ಜೊತೆ, ಇನ್ನೂ ನಾಲ್ಕು ಒಳ್ಳೆಯ ಹಸುವಿನ ಕಡಸುಗಳನ್ನು ಬಿಟ್ಟು, ಎಲ್ಲಕ್ಕೂ ಚೆನ್ನಾಗಿ ಅಲಂಕರಿಸಬೇಕು. ಅನಂತರ ಈ ನಾಲ್ಕು ಕಡಸುಗಳ ಕಿವಿಗಳಲ್ಲಿಯೂ "ನಿಮ ಗೋಸ್ಕರ ಈ ಶುಭಕರವಾದ ವೃಷಭವನ್ನು ಬಿಟ್ಟಿರುತ್ತೇನೆ. ನೀವು ಈ ವೃಷಭವನ್ನು ಪತಿಯೆಂದು ಭಾವಿಸಿ ಸಂತೋಷದಿಂದ ಇದರೊಡನೆ ವಿಹರಿಸಿ" ಎಂದು ಜಪ ಮಾಡಬೇಕು.

೧೦-೧೨. ಬಳಿಕ ಆ ವೃಷಭದ ಎಡಭಾಗದಲ್ಲಿ ತ್ರಿಶೂಲರೇಖೆಯನ್ನೂ, ಬಲಭಾಗದಲ್ಲಿ ಚಕ್ರಚಿಹ್ನೆಯನ್ನೂ ಶ್ರೀಗಂಧದಲ್ಲಿ ಬರೆಯಬೇಕು. ಆಮೇಲೆ ಅದೇರೀತಿ ಅದರ ಎಡಭಾಗದಲ್ಲಿ ಶಾಶ್ವತವಾದ ಗುರುತಾಗುವಂತೆ ಕಾಯಿಸಿದ ಕಬ್ಬಿಣದಿಂದ ಬರೆ ಹಾಕಿ, ಆ ಜಾಗ ಉರಿಯದೆ ಹಿತವಾಗುವಂತೆ ಅದರ ಮೇಲೆ ಜೇನು ಮುಂತಾದುವುಗಳನ್ನು ಹಚ್ಚಬೇಕು. ಅನಂತರ ಪುಷ್ಪಾದಿಗಳಿಂದ ಪೂಜೆ ಮಾಡಿ, ಕೊರಳಿಗೆ ಹೂಮಾಲೆಯನ್ನು ಹಾಕಿ, ಬಿಳಿಯ ವಸ್ತ್ರವನ್ನು ಆ ವೃಷಭಕ್ಕೆ ಹೊದ್ದಿಸಬೇಕು. ಆಮೇಲೆ ಈ ವೃಷಭವನ್ನು ದೇವಾಲಯ, ಗೋಕುಲ, ನದಿಗಳ ಸಂಗಮಸ್ಥಳ ಮುಂತಾದ ಪ್ರದೇಶಗಳಲ್ಲಿ ನೀಲವರ್ಣದ ಕಡಸುಗಳೊಡನೆ ಬಿಟ್ಟು ಬಿಡಬೇಕು.

೧೩-೧೪. ಓ ರಾಜನೇ ! ಗರ್ಗಮುನಿಯು ವೃಷೋತ್ಸರ್ಗವಿಧಿಯನ್ನು ಈ ರೀತಿ ಹೇಳಿದ್ದನು. ಹಸುಗಳ ಮಧ್ಯೆ ಯಥೇಚ್ಛವಾಗಿ ವಿಹರಿಸುತ್ತಾ ಕೊಬ್ಬಿಯೂ

ಇತ್ಯುಕ್ತಂ ಗರ್ಗಮುನಿನಾ ವಿಧಾನಂ ವೃಷಮೋಕ್ಷಣೇ ।
ಶ್ವೇಚ್ಛಾನಿಹಾರಿಣಂ ದೃಷ್ಟಂ ಗರ್ಜಂತಂ ಸುಂದರಂ ಗವಾಂ ॥ ೧೩ ॥

ಕಕುದ್ಮಿನಂ ಪತಿಂ ರಾಜನ್ ಯೋ ವಿಮುಂಚಂತಿ ಗೋವೃಷಂ ।
ಫಲಂ ಚ ತಸ್ಯ ವಕ್ಷ್ಯಾಮಿ ಬ್ರುವತೋ ಮೇ ನಿಭೋಧತತ್ ॥ ೧೪ ॥

ವೃಷೋತ್ಸರ್ಗೇ ಪುನಾತ್ಯೇವ ದಶಾತೀತಾರ್ ದಶಾಪರಾರ್ ।
ಯತ್ಕಿಂಚಿತ್ಸ್ಪೃಶತೇ ತೋಯಂ ಸಮುತ್ತೀರ್ಯ ಜಲಾನ್ಮಹೀಂ ॥

ವೃಷೋತ್ಸರ್ಗಂ ಪಿತೃಣಾಂ ತು ತದಕ್ಷಯಮುದಾಹೃತಂ।
ಯೈಶ್ಚ ಯೈಶ್ಚ ಸ್ಪೃಶೇತ್ತೋಯಂ ಲಾಂಗೂಲಾದಿಭಿರಂತತ ॥ ೧೬ ॥

ಸರ್ವಂ ತದಕ್ಷಯಂ ತಸ್ಯ ಪಿತೃಣಾಂ ನಾತ್ರ ಸಂಶಯಃ ।
ಶೃಂಗೈಃ ಖುರೈರ್ವಾ ಯದ್ಭೂಮಿಮುಲ್ಲಿಖತ್ಯನಿಶಂ ವೃಷಃ ॥ ೧೭ ॥

---

ಶ್ರೇಷ್ಠವಾದ ಹಿಳಲಿನಿಂದಸುಂದರವಾಗಿ ಶೋಭಿಸುತ್ತಲೂ ಇರುವ ಗೂಳಿಯನ್ನು ಗೋವುಗಳಿಗೆ ಪತಿಯಾಗುವಂತೆ ಬಿಡುವವನಿಗೆ ಲಭಿಸುವ ಫಲಗಳನ್ನು ಹೇಳುವೆನು ಕೇಳು.

೧೫-೧೯. ಓ ಯುಧಿಷ್ಠಿರನೇ! ಈ ವೃಷೋತ್ಸರ್ಗಕರ್ಮದಿಂದ ಮಾನವನು ತನ್ನ ಹಿಂದಿನ ಹತ್ತು ತಲೆಯವರನ್ನೂ ತನ್ನ ಮುಂದಿನ ಹತ್ತು ತಲೆಮಾರಿನವರನ್ನೂ ನರಕಗಳಿಂದ ಉದ್ಧಾರಮಾಡಿ ಪವಿತ್ರರನ್ನಾಗಿ ಮಾಡುವನು. ಈರೀತಿ ವೃಷೋತ್ಸರ್ಗವಿಧಿಯಾದನಂತರ ಆ ಗೂಳಿಯು ಯಾವ ನೀರನ್ನು ಪ್ರವೇಶಿಸಿ ಅಲ್ಲಿಂದ ಭೂಮಿಯ ಮೇಲೆ ಬರುತ್ತದೆಯೋ, ಆ ನೀರು ಪಿತೃದೇವತೆಗಳಿಗೆ ಅಕ್ಷಯಪ್ರದವಾಗುವುದು. ಆ ವೃಷಭವು ತನ್ನ ಬಾಲ ಮುಂತಾದ ಅವಯವಗಳಿಂದ ಯಾವಯಾವ ನೀರನ್ನು ಮುಟ್ಟುತ್ತಾ ಚಲಿಸುವುದೋ ಅವೆಲ್ಲವೂ ಪಿತೃದೇವತೆಗಳಿಗೆ ತೃಪ್ತಿಯನ್ನುಂಟುಮಾಡುವುವು. ಅಲ್ಲದೆ ಮಧುಮಯವಾದ ಸಣ್ಣಸಣ್ಣ ಸರೋವರಗಳಲ್ಲಿ ಈ ವೃಷಭಗಳು ತಮ್ಮ ಕೊಂಬು ಮತ್ತು ಗೊರಸು ಇವುಗಳಿಂದ ಭೂಮಿಯನ್ನು ಕೆರೆದರೆ ಆ ಸರಸ್ಸಿನ ನೀರು ಪಿತೃದೇವತೆಗಳಿಗೆ ಸಾವಿರತಲೆಯವರೆಗೂ ತುಂಬಾ ಅಕ್ಷಯಫಲಪ್ರದವೆನಿಸುವುದು. ಕೇವಲ ತಟಾಕಾದಿಗಳ ನೀರು ಪಿತೃಗಳಿಗೆ ತೃಪ್ತಿಯನ್ನುಂಟುಮಾಡದೆ ಹೋದರೂ, ಈ ವೃಷೋತ್ಸರ್ಗವಿಧಿಯನ್ನು ಮಾಡಿ ಈ ವೃಷಭದಿಂದ ಸ್ಪೃಷ್ಟ

**ಮಧುಕುಲ್ಯಾಃ ಪಿತುಸ್ತಸ್ಯ ಅಕ್ಷಯಾಸ್ತಾ ಭವಂತಿ ವೈ ।**
**ಸಹಸ್ರತಲಮಾತ್ರೇಣ ತಡಾಗೋ ನ ಯಥಾಶ್ರುತಿ ॥ ೧೮ ॥**

**ಪಿತೃಣಾಂ ಯಾ ಭವೇತ್ತೃಪ್ತಿಂಸ್ತಾವೃಷಸ್ತ್ವತಿರಿಚ್ಯತೇ ।**
**ಯೋ ದದಾತಿ ತಿಲೈರ್ಮಿಶ್ರಾಂಸ್ತಿಲಾನ್ವಾ ಶ್ರಾದ್ಧಕರ್ಮಣಿ ॥**
**ಮಧು ವಾ ನೀಲಖಂಡಂ ವಾ ಅಕ್ಷಯಂ ಸರ್ವಮೇವ ತತ್ ॥ ೧೯ ॥**

**ಏಷ್ಟವ್ಯಾ ಬಹವಃ ಪುತ್ರಾ ಯದ್ಯೇಕೋಽಪಿ ಗಯಾಂ ವ್ರಜೇತ್ ।**
**ಯಜೇತ ವಾಶ್ವಮೇಧೇನ ನೀಲಂ ವಾ ವೃಷಮುತ್ಸೃಜೇತ್ ॥ ೨೦ ॥**

**ನ ಕರೋತಿ ವೃಷೋತ್ಸರ್ಗಂ ಸುತೀರ್ಥೇ ವಾ ಜಲಾಂಜಲಿಂ ।**
**ನ ಪ್ರಯಚ್ಛತಿ ಯಃ ಪುತ್ರಃ ಪಿತುರುಚ್ಚಾರ ಏವ ಸಃ ॥ ೨೧ ॥**

---

ವಾದರೆ ಅದೇ ಕೆರೆಯ ನೀರು ಆ ಪಿತೃದೇವತೆಗಳಿಗೆ ಅತಿಶಯವಾದ ತೃಪ್ತಿಯನ್ನುಂಟುಮಾಡುವುದು. ಶ್ರಾದ್ಧಕರ್ಮದಲ್ಲಿ ತಿಲಮಿಶ್ರಿತವಾದ ಜಲಾಂಜಲಿಯನ್ನಾಗಲಿ, ತಿಲವನ್ನಾಗಲಿ, ಮಧುವನ್ನಾಗಲಿ, ನೀಲವಾದ ಖಂಡಗಳುಳ್ಳ ವೃಷಭವನ್ನಾಗಲಿ ದಾನಮಾಡುವವನು ತನ್ನ ಪಿತೃಗಳಿಗೆ ಅಕ್ಷಯವಾದ ತೃಪ್ತಿಯನ್ನುಂಟುಮಾಡುವನು.

೨೦. ಇದಕ್ಕೋಸ್ಕರವೇ ಪ್ರಾಜ್ಞನು ಅನೇಕಮಂದಿ ಪುತ್ರರನ್ನು ಪಡೆದಿರಬೇಕು. ಅವರಲ್ಲಿ ಯಾವನಾದರೂ ಒಬ್ಬನು ಗಯೆಗೆ ಹೋಗಿ ಅಲ್ಲಿ ಪಿಂಡಪ್ರದಾನ ಮಾಡಿ, ಪಿತೃಗಳಿಗೆ ತೃಪ್ತಿಯನ್ನುಂಟುಮಾಡಬಹುದು. ಅಥವಾ ಮತ್ತೊಬ್ಬನು ಅಶ್ವಮೇಧಯಾಗ ಮಾಡಿ ಅದರಿಂದಲಾದರೂ ಪಿತೃಗಳನ್ನು ಉದ್ಧಾರಮಾಡಬಹುದು. ಅಥವಾ ಮಗದೊಬ್ಬನು ಪಿತೃಪ್ರೀತ್ಯರ್ಥವಾಗಿ ನೀಲವೃಷಭವನ್ನಾದರೂ ಉತ್ಸರ್ಜನಮಾಡಬಹುದೆಂದು ಪಿತೃಗಳು ಸದಾ ನಿರೀಕ್ಷಿಸುತ್ತಿರುವರು.

೨೧. ವೃಷೋತ್ಸರ್ಗವನ್ನು ಮಾಡದೆಯೂ, ಉತ್ತಮವಾದ ತೀರ್ಥಗಳಲ್ಲಿ ಪಿತೃಗಳನ್ನುದ್ದೇಶಿಸಿ ಜಲಾಂಜಲಿಯನ್ನು ಕೊಡದೆಯೂ ಇರುವ ಮಾನವನು, ತನ್ನ ತಂದೆಗೆ ಕೇವಲ ಅಪ್ರಯೋಜಕನಾಗಿ ' ಆನೆಯ ಹೊಟ್ಟೆಯಲ್ಲಿ ಲದ್ದಿ ಬಿದ್ದ ಹಾಗೆ ' ಎಂಬ ಗಾದೆಗನುಸಾರವಾಗಿ ಕೇವಲ ವಿಷ್ಠಾದಿಗಳಂತೆ ಅಪ್ರಯೋಜಕನೆನಿಸುವನು.

ಯದ್ಭೂಮಿಮಾಲಿಖತಿ ಶೃಂಗಖುರೈಃ ಪ್ರಹೃಷ್ಟೋ ।
ಯದ್ವಾ ಕರೋತಿ ಪ್ರತಿಮಲ್ಲವೃಷಾನ್ನಿರೀಕ್ಷ್ಯ ॥
ಖಂಡಂ ಸಮಸ್ತಮಪಿ ತಸ್ಯ ವಿವಾಹಕರ್ತುಃ ।
ಸಂತೋಷಮಾವಹತಿ ಶಕ್ರಸಭಾಗತಸ್ಯ ॥ ೨೨ ॥

ಇತಿ ಶ್ರೀಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ
ಯುಧಿಷ್ಠಿರಸಂವಾದೇ ವೃಷೋತ್ಸರ್ಗವಿಧಿವರ್ಣನಂ ನಾಮ
ಏಕತ್ರಿಂಶದುತ್ತರಶತತಮೋಽಧ್ಯಾಯಃ.



---

೨೨. ವೃಷೋತ್ಸರ್ಗವಿಧಿಯನ್ನನುಸರಿಸಿ ಬಿಟ್ಟಿರುವ ಈ ವೃಷಭವು ಸಂತೋಷದಿಂದ ತನ್ನ ಕೊಂಬುಗಳು ಮತ್ತು ಗೊರಸುಗಳಿಂದ ಭೂಮಿಯನ್ನು ಕೆರೆಯುತ್ತಲೂ, ಮತ್ತು ತನ್ನ ಜತೆಯ ಗೂಳಿಗಳೊಡನೆ ಗುದ್ದಾಡುತ್ತಲೂ ಇದ್ದರೆ ಈ ವೃಷೋತ್ಸರ್ಗಕರ್ಮವನ್ನು ಮಾಡಿ ಸ್ವರ್ಗಸ್ಥನಾಗಿರುವ ಮಾನವನು ಈ ಸನ್ನಿವೇಶಗಳನ್ನು ನೋಡಿ ಇಂದ್ರನ ಸಭೆಯಲ್ಲಿ ಸನ್ಮಾನ ಸಂತೋಷಗಳನ್ನು ಹೊಂದುವನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀಕೃಷ್ಣಯುಧಿಷ್ಠಿರ
ಸಂವಾದದಲ್ಲಿ ವೃಷೋತ್ಸರ್ಗವಿಧಿವರ್ಣನೆಯೆಂಬ ನೂರಮೂವ
ತ್ತೊಂದನೆಯ ಅಧ್ಯಾಯವು ಮುಗಿದುದು.



|| ಶ್ರೀ ||

---

# ಅಥ ಶ್ರೀ ಭವಿಷ್ಯೇ ಮಹಾಪುರಾಣ

## ಉತ್ತರಪರ್ವಣಿ

## ದ್ವಾತ್ರಿಂಶತ್ಯುತ್ತರಶತತಮೋಽಧ್ಯಾಯಃ

---

|| ಯುಧಿಷ್ಠಿರ ಉವಾಚ ||

ಕಿಮರ್ಥಂ ಫಾಲ್ಗುನಸ್ಯಾಂತೇ ಪೌರ್ಣಮಾಸ್ಯಾಂ ಜನಾರ್ದನ |
ಉತ್ಸವೋ ಜಾಯತೇ ಲೋಕೇ ಗ್ರಾಮೇಗ್ರಾಮೇ ಪುರೇಪುರೇ || ೧ ||

ಕಿಮರ್ಥಂ ಶಿಶವಸ್ತಸ್ಯಾಂ ಗೇಹೇಗೇಹೇಽತಿವಾದಿನಃ |
ಹೋಲಿಕಾ ದೀಪ್ಯತೇ ಕಸ್ಮಾತ್ಫಾಲ್ಗುನಾಂತೇ ಕಿಮುಚ್ಯತೇ || ೨ ||

ಅಡಾಡೇತಿ ಚ ಕಾ ಸಂಜ್ಞಾ ಶೀತೋಷ್ಣೇತಿ ಕಿಮುಚ್ಯತೇ |
ಕೋಽಹ್ಯಸ್ಯಾಂ ಪೂಜ್ಯತೇ ದೇವಃ ಕೇನೇಯಮವತಾರಿತಾ ||
ಕಿಮಸ್ಯಾಂ ಕ್ರಿಯತೇ ಕೃಷ್ಣ ಏತದ್ವಿಸ್ತರತೋ ವದ || ೩ ||

---

### ನೂರಮೂವತ್ತೆರಡನೆಯ ಅಧ್ಯಾಯ

೧-೩. ಪುನಃ ಯುಧಿಷ್ಠಿರನು ಶ್ರೀಕೃಷ್ಣನನ್ನು ಪ್ರಶ್ನೆಮಾಡುತ್ತಾನೆ—ಓ ಜನಾರ್ದನ! ಪ್ರತಿಯೊಂದು ಗ್ರಾಮದಲ್ಲಿಯೂ ಮತ್ತು ಪಟ್ಟಣಗಳಲ್ಲಿಯೂ ಫಾಲ್ಗುನಮಾಸದ ಪೂರ್ಣಿಮೆಯಲ್ಲಿ ಜನಗಳು ಉತ್ಸವವನ್ನಾಚರಿಸಲು ಕಾರಣವೇನು? ಮನೆಮನೆಗಳಲ್ಲಿಯೂ ಮಕ್ಕಳು ಏತಕ್ಕೋಸ್ಕರ ಬೈದಾಡುವರು? ಫಾಲ್ಗುಣಮಾಸದ ಈ ಪೂರ್ಣಿಮೆಯಲ್ಲಿ ಹೋಳಿಗೆಯನ್ನು ಉರಿಸಲು ಕಾರಣವೇನು? ಅಡಾಡಾ ಎಂಬ ಸಂಜ್ಞೆಯು ಏತಕ್ಕೆ ವ್ಯವಹಾರಕ್ಕೆ ಬಂದಿತು? ಶೀತೋಷ್ಣವೆಂದು ಇದನ್ನು ಹೇಳಲು ಕಾರಣವೇನು? ಈ ಪೂರ್ಣಿಮೆಯಲ್ಲಿ ಪೂಜಿತನಾಗುವ ದೇವನಾರು? ಈರೀತಿ ಆಚರಿಸಬೇಕೆಂದು ವಿಧಾಯಕಮಾಡಿದವರಾರು? ಈ ಸಂದರ್ಭದಲ್ಲಿ ಏನೇನು ಮಾಡಬೇಕು? ಎಲ್ಲವನ್ನೂ ವಿಸ್ತಾರವಾಗಿ ನನಗೆ ತಿಳಿಸಬೇಕು ಎಂದನು.

॥ಶ್ರೀಕೃಷ್ಣ ಉವಾಚ ॥

ಆಸೀತ್ಕೃತಯುಗೇ ಪಾರ್ಥ ರಘುರ್ನಾಮ ನರಾಧಿಪಃ ।
ಶೂರಃ ಸರ್ವಗುಣೋಪೇತಃ ಪ್ರಿಯವಾದೀ ಬಹುಶ್ರುತಃ ॥ ೪ ॥

ಸ ಸರ್ವಾಂ ಪೃಥಿವೀಂ ಜಿತ್ವಾ ವಶೀಕೃತ್ಯ ನರಾಧಿಪಾನ್ ।
ಧರ್ಮತಃ ಪಾಲಯಾಮಾಸ ಪ್ರಜಾಃ ಪುತ್ರಾನಿವೌರಸಾನ್ ॥ ೫ ॥

ನ ದುರ್ಭಿಕ್ಷಂ ನ ಚ ವ್ಯಾಧಿರ್ನಾಕಾಲಮರಣಂ ತಥಾ ।
ನಾಧರ್ಮರುಚಯಃ ಪೌರಾಸ್ತಸ್ಮಿಞ್ಶಾಸತಿ ಪಾರ್ಥಿವ ॥ ೬ ॥

ತಸ್ಯೈವಂ ಶಾಸತೋ ರಾಜ್ಯಂ ಕ್ಷಾತ್ರಧರ್ಮರತಸ್ಯ ಚ ।
ಪೌರಾಸ್ಸರ್ವೇ ಸಮಾಗತ್ಯ ಪಾಹಿಪಾಹೀತ್ಯಥಾಬ್ರುವನ್ ॥ ೭ ॥

---

೪. ಆಗ ಶ್ರೀಕೃಷ್ಣನು ಯುಧಿಷ್ಠಿರನನ್ನು ಕುರಿತು ಹೇಳುತ್ತಾನೆ—ಎಲೈ ಪಾರ್ಥನೇ! ಹಿಂದೆ ಕೃತಯುಗದಲ್ಲಿ ರಘುವೆಂಬ ರಾಜನಿದ್ದನು. ಇವನು ಶೂರನೂ, ಸರ್ವಲಕ್ಷಣಸಂಪನ್ನನೂ, ಗುಣಶಾಲಿಯೂ, ಪ್ರಿಯವಾದಿಯೂ, ಸರ್ವಶಾಸ್ತ್ರಪಂಡಿತನೂ ಆಗಿದ್ದನು.

೫. ಈ ರಘುಮಹಾರಾಜನು ಸಕಲರಾಜ್ಯಗಳನ್ನೂ ಜಯಿಸಿ, ಆ ದೇಶದ ರಾಜರನ್ನೆಲ್ಲಾ ತನ್ನ ವಶಮಾಡಿಕೊಂಡು, ಎಲ್ಲಾ ಪ್ರಜೆಗಳನ್ನೂ ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಂತೆಯೇ ಧರ್ಮದಿಂದ ಕಾಪಾಡುತ್ತಿದ್ದನು.

೬. ಓ ರಾಜೇಂದ್ರ! ಈ ರಘುವು ರಾಜ್ಯವಾಳುತ್ತಿದ್ದಾಗ ಪ್ರಜೆಗಳಿಗೆ ದುರ್ಭಿಕ್ಷ, ವ್ಯಾಧಿ ಅಥವಾ ಅಕಾಲಮೃತ್ಯು ಇವುಗಳು ಯಾವುದೂ ಉಂಟಾಗುತ್ತಿರಲಿಲ್ಲ. ಅಲ್ಲದೆ ಯಾವ ಪ್ರಜೆಗಳೂ ಅಧರ್ಮಪ್ರವರ್ತಕರಾಗದೆ ಕೇವಲ ಧರ್ಮಮಾರ್ಗದಲ್ಲಿಯೇ ನಿರತರಾಗಿದ್ದರು.

೭; ಹೀಗೇ ಕ್ಷತ್ರಧರ್ಮಪರಾಯಣನಾದ ಈ ರಘುವು ರಾಜ್ಯವಾಳುತ್ತಿದ್ದಾಗ ಒಂದುದಿನ ಅಕಸ್ಮಾತ್ತಾಗಿ ಪ್ರಜೆಗಳೆಲ್ಲರೂ ಬಂದು "ಪ್ರಭುವೇ ನಮ್ಮನ್ನು ರಕ್ಷಿಸಬೇಕು! ರಕ್ಷಿಸಬೇಕು!" ಎಂದು ಬೇಡಿಕೊಂಡರು.

|| ಪೌರಾ ಊಚುಃ ||

**ಅಸ್ಮಾಕಂ ಹಿ ಗೃಹೇ ಕಾಚಿಢ್ಢೌಂಢಾ ನಾಮೇತಿ ರಾಕ್ಷಸೀ |**
**ದಿವಾರಾತ್ರೌ ಸಮಾಗಮ್ಯ ಬಾಲಾನ್ಪೀಡಯತೇ ಬಲಾತ್ || ೮ ||**

**ರಕ್ಷಯಾ ಕಂಡಕೇನಾಪಿ ಭೇಷಜ್ಯೈರ್ವಾ ನರಾಧಿಪ |**
**ಮಂತ್ರಜ್ಞೈಃ ಪರಮಾಚಾರ್ಯೈಃ ಸಾ ನಿಯಂತುಂ ನ ಶಕ್ಯತೇ || ೯ ||**

**ಪೌರಾಣಾಂ ವಚನಂ ಶ್ರುತ್ವಾ ರಘುರ್ವಿಸ್ಮಯಮಾಗತಃ |**
**ವಿಸ್ಮಯಾವಿಷ್ಟಹೃದಯಃ ಪುರೋಹಿತಮಥಾಬ್ರವೀತ್ || ೧೦ ||**

|| ರಘುರುವಾಚ ||

**ಢೌಂಢೇತಿ ರಾಕ್ಷಸೀ ಕೇಯಂ ಕಿಂಪ್ರಭಾವಾ ದ್ವಿಜೋತ್ತಮ |**
**ಕಥಮೇಷಾ ನಿಯಂತವ್ಯಾ ಮಯಾ ದುಷ್ಕೃತಕಾರಿಣೀ || ೧೧ ||**

---

೮. ಪೌರರು ಪ್ರಾರ್ಥಿಸಿಕೊಂಡ ಪ್ರಕಾರವು ಹೀಗಿದ್ದಿತು—ಓ ರಾಜೇಂದ್ರ! ನಮ್ಮ ಮನೆಯಲ್ಲಿ ಢೌಂಢಾ ಎಂಬ ರಾಕ್ಷಸಿಯೊಬ್ಬಳು ಬಂದು ಹಗಲೂ ರಾತ್ರಿ ಎಡೆಬಿಡದೆ ಬಲಾತ್ಕಾರದಿಂದ ಬಾಲಕರನ್ನು ಪೀಡಿಸುತ್ತಿರುವಳು.

೯. ಓ ನರಾಧಿಪ! ರಕ್ಷೆ, ಪ್ರತಿಬಂಧಕ, ಚಿಕಿತ್ಸೆ ಮುಂತಾದುವುಗಳಿಂದಾಗಲಿ ಅಥವಾ ಮಂತ್ರಜ್ಞರೆನಿಸಿದ ಬ್ರಾಹ್ಮಣರಿಂದಾಗಲಿ ಈ ರಾಕ್ಷಸಿಯನ್ನು ನಿವಾರಣೆಮಾಡಲು ಸಾಧ್ಯವಿಲ್ಲದಂತಾಗಿದೆ. ಆದುದರಿಂದ ದಯವಿಟ್ಟು ಈ ರಾಕ್ಷಸಿಯನ್ನು ಧ್ವಂಸಮಾಡಿ ನಮಗೊದಗಿರುವ ಈ ವಿಪತ್ತನ್ನು ಪರಿಹರಿಸಿಕೊಡಬೇಕು'' ಎಂದು ಬಿನ್ನವಿಸಿಕೊಂಡರು.

೧೦. ಪೌರರು ಹೀಗೆ ಹೇಳಿದುದನ್ನು ಕೇಳಿ, ರಘುವು ತುಂಬಾ ಆಶ್ಚರ್ಯಚಕಿತನಾಗಿ ತನ್ನ ಪುರೋಹಿತನಾದ ವಸಿಷ್ಠಮಹರ್ಷಿಯನ್ನು ಕುರಿತು ಪ್ರಶ್ನೆ ಮಾಡಿದನು.

೧೧. ರಘುವು ವಸಿಷ್ಠಮಹಾಮುನಿಯನ್ನು ಕೇಳುತ್ತಾನೆ—"ಎಲೈ ಬ್ರಾಹ್ಮಣೋತ್ತಮ! ಈ ಪ್ರಜೆಗಳೆಲ್ಲರೂ ಹೇಳುತ್ತಿರುವ ಢೌಂಢಾ ಎಂಬ ರಾಕ್ಷಸಿಯು ಯಾರು? ಇವಳ ಪ್ರಭಾವವೆಂತಹುದು? ದುಷ್ಟಕರ್ಮಾಚರಣತತ್ಪರಳಾಗಿರುವ ಈ ರಾಕ್ಷಸಿಯನ್ನು ನಿವಾರಣೆಮಾಡುವ ಬಗೆ ಹೇಗೆ?

**ರಕ್ಷಣಾತ್ಪ್ರೋಚ್ಯತೇ ರಾಜಾ ಪೃಥಿವೀಪಾಲನಾತ್ಪತಿಃ ।**
**ಅರಕ್ಷಮಾಣಃ ಪೃಥಿವೀಂ ರಾಜಾ ಭವತಿ ಕಿಲ್ಬಿಷೀ ॥ ೧೨ ॥**

**॥ ವಶಿಷ್ಠ ಉವಾಚ ॥**
**ಶೃಣು ರಾಜನ್ಪರಂ ಗುಹ್ಯಂ ಯನ್ನಾಖ್ಯಾತಂ ಮಯಾ ಕ್ವಚಿತ್ ।**
**ಢೌಂಢಾ ನಾಮೇತಿ ವಿಖ್ಯಾತಾ ರಾಕ್ಷಸೀ ಮಾಲಿನಃ ಸುತಾ ॥ ೧೩ ॥**

**ತಯಾ ಚಾರಾಧಿತಃ ಶಂಭುರುಗ್ರೇಣ ತಪಸಾ ಪುರಾ ।**
**ಪ್ರೀತಸ್ತಾಮಾಹ ಭಗವಾನ್ವರಂ ವರಯ ಸುವ್ರತೇ ॥ ೧೪ ॥**

**ಯತ್ತೇ ಮನೋಽಭಿಲಷಿತಂ ತದ್ದದಾಮ್ಯವಿಚಾರಿತಂ ।**
**ಢೌಂಢಾ ಪ್ರಾಹ ಮಹಾದೇವಂ ಯದಿ ತುಷ್ಟಃ ಸ್ವಯಂ ಮಮ ॥ ೧೫ ॥**

---

೧೨. ಪ್ರಜೆಗಳನ್ನು ರಂಜನೆಮಾಡುವುದರಿಂದ ರಾಜನೆಂದೂ, ಪೃಥಿವಿಯನ್ನು ಪಾಲನೆಮಾಡುವುದರಿಂದ ಪೃಥಿವೀಪತಿಯೆಂದೂ ರಾಜನಿಗೆ ಅನ್ವರ್ಥಗಳಾದ ಹೆಸರುಂಟಾಗಿವೆ. ಭೂಮಿಯನ್ನೂ ಪ್ರಜಾವರ್ಗವನ್ನೂ ಕಾಪಾಡಲು ಸಾಮರ್ಥ್ಯವಿಲ್ಲದವನು ಪಾಪಿ. ಅವನು ರಾಜನೆಂಬ ಹೆಸರನ್ನು ಹೊಂದಲು ಅನರ್ಹನು, ಆದುದರಿಂದ ರಾಜನೆನಿಸಿರುವ ನಾನು ಪ್ರಜೆಗಳಿಗೊದಗಿರುವ ಈ ವಿಪತ್ತನ್ನು ನಿಶ್ಚಯವಾಗಿಯೂ ಹೋಗಲಾಡಿಸಲೇಬೇಕಾಗಿದೆ. ಎಲೈ ಋಷಿವರ್ಯನಾದ ವಸಿಷ್ಠಮಹರ್ಷಿಯೇ! ಇದಕ್ಕೆ ಮಾರ್ಗವನ್ನು ತೋರಿಸಿಕೊಡು" ಎಂದು ಪ್ರಾರ್ಥಿಸಿದನು.

೧೩. ಓ ರಾಜೇಂದ್ರ! ನೀನು ಈಗ ಪ್ರಶ್ನೆಮಾಡಿರುವುದು ತುಂಬಾ ರಹಸ್ಯವಾದುದು. ಇದನ್ನು ಹಿಂದೆ ಯಾರಿಗೂ ಎಂದೂ ತಿಳಿಸಿಲ್ಲ. ನೀನು ಕೇಳಿದ ಢೌಂಢಾ ರಾಕ್ಷಸಿಯು ಮಾಲಿ ಎಂಬ ರಾಕ್ಷಸನ ಮಗಳು.

೧೪-೧೫. ಈ ರಾಕ್ಷಸಿಯು ಹಿಂದೆ ಉಗ್ರವಾದ ತಪಸ್ಸನ್ನಾಚರಿಸಿ ಶಂಭುವನ್ನು ಸಂತೋಷಪಡಿಸಿದಳು. ಈ ತಪಸ್ಸಿನಿಂದ ತೃಪ್ತನಾದ ಮಹೇಶ್ವರನು "ಎಲೌ ಸುವ್ರತೆ! ನಿನಗೆ ಬೇಕಾದ ವರವನ್ನು ಕೇಳು. ಕೊಡುತ್ತೇನೆ" ಎಂದು ಹೇಳಿದನು. ಮಹಾದೇವನ ಈ ಮಾತನ್ನು ಕೇಳಿ ಆ ಢೌಂಢಾ ರಾಕ್ಷಸಿಯು 'ಪ್ರಭೋ ನೀನು ನಿಜವಾಗಿಯೂ ಸಂತುಷ್ಟನಾಗಿದ್ದರೆ ದೇವತೆಗಳು, ರಾಕ್ಷಸರು

**ನ ಚ ವಧ್ಯಾಂ ಸುರಾದೀನಾಂ ಮನುಜಾನಾಂ ಚ ಶಂಕರ ।**
**ಮಾಂ ಕುರು ತ್ವಂ ತ್ರಿಲೋಕೇಶ ಶಸ್ತ್ರಾಸ್ತ್ರಾಣಾಂ ತಥೈವ ಚ　॥ ೧೬ ॥**

**ಶೀತೋಷ್ಣವರ್ಷಾಸಮಯೇ ದಿವಾ ರಾತ್ರೌ ಬಹಿರ್ಗೃಹೇ ।**
**ಅಭಯಂ ಸರ್ವದಾ ಮೇ ಸ್ಯಾತ್ತ್ವತ್ಪ್ರಸಾದಾನ್ಮಹೇಶ್ವರ　॥ ೧೭ ॥**

**॥ ಶಂಕರ ಉವಾಚ ॥**

**ಏವಮಸ್ತ್ವಿತ್ಯ ಥೋಕ್ತ್ವಾ ತಾಂ ಪುನಃ ಪ್ರೋವಾಚ ಶೂಲಭೃತ್ ।**
**ಉನ್ಮತ್ತೇಭ್ಯಃ ಶಿಶುಭ್ಯಶ್ಚ ಭಯಂ ತೇ ಸಂಭವಿಷ್ಯತಿ ॥**
**ಋತಾವೃತೌ ಮಹಾಭಾಗೇ ಮಾ ವ್ಯಥಾಂ ಹೃದಯೇ ಕೃಥಾಃ ॥ ೧೮ ॥**

**ಏವಂ ದತ್ವಾ ವರಂ ತಸ್ಯೈ ಭಗವಾನ್ಭಗನೇತ್ರಹಾ ।**
**ಸ್ಪಷ್ಟೇ ಲಬ್ಧೇ ಯಥಾರ್ಥಾರ್ಥಸ್ತತ್ರೈವಾಂತರ್ಹಿತೋಽಭವತ್॥೧೯॥**

---

ಮತ್ತು ಮಾನವರು ಇವರೇ ಮುಂತಾದ ಯಾರಿಂದಲೂ ನನಗೆ ಮರಣವಾಗ ಬಾರದು. ಎಲೈ ತ್ರಿಲೋಕಾಧಿಪತಿಯಾದ ಶಂಕರನೇ! ಯಾವ ಶಸ್ತ್ರಾಸ್ತ್ರಗಳ ಭಯವೂ ನನಗುಂಟಾಗಕೂಡದು. ಅಲ್ಲದೆ-ಚಳಿಗಾಲ, ಬೇಸಗೆಕಾಲ, ಮಳೆಗಾಲದ ಹಗಲು ರಾತ್ರಿಗಳಲ್ಲಿಯೂ ಮನೆಯ ಒಳಗೆ ಹೊರಗಡೆಯಲ್ಲಿಯೂ ಯಾವಾಗಲೂ ನಿನ್ನ ಅನುಗ್ರಹದಿಂದ ನನಗೆ ನಿರ್ಭಯವುಂಟಾಗಲಿ. ಓ ಮಹೇಶ್ವರ! ನಾನು ಕೇಳಿದ ಇಷ್ಟು ವರವನ್ನೂ ದಯವಿಟ್ಟು ಕರುಣಿಸಬೇಕು ಎಂದು ಆ ರಾಕ್ಷಸಿಯು ಪ್ರಾರ್ಥನೆ ಮಾಡಿದಳು.

೧೮. ಆಗ ಇದನ್ನು ಕೇಳಿ ಶಂಕರನು ಹೇಳುತ್ತಾನೆ—ಎಲೌ ಢೌಂಢಾ ರಾಕ್ಷಸಿಯೇ! ನೀನು ಕೇಳಿದಂತೆಯೇ ನಿನಗೆ ವರವನ್ನು ಕೊಟ್ಟಿರುವೆನು. ಎಲೌ ಮಹಾಭಾಗಳೇ! ಆದರೆ ಪ್ರತಿಯೊಂದು ಋತುವಿನಲ್ಲಿಯೂ ಉನ್ಮತ್ತರು ಮತ್ತು ಮಕ್ಕಳು ಇವರಿಂದ ನಿನಗೆ ಭಯವುಂಟಾಗುವುದು. ಇದಕ್ಕೋಸ್ಕರ ಮನಸ್ಸಿನಲ್ಲಿ ಕಳವಳಪಡಬೇಡ ಎಂದು ಪರಮೇಶ್ವರನು ಆ ಢೌಂಢಾರಾಕ್ಷಸಿಗೆ ವರವನ್ನು ಕರುಣಿಸಿದನು.

೧೯-೨೦. ಭಗನೇತ್ರಧ್ವಂಸಕನಾದ ಮಹೇಶ್ವರನು ಈರೀತಿ ವರವನ್ನು ಕೊಟ್ಟು, ಇದರಿಂದಾಗುವ ಪ್ರಯೋಜನಾಪ್ರಯೋಜನಗಳನ್ನು ತನ್ನ ದಿವ್ಯದೃಷ್ಟಿಯಿಂದರಿತು ಅಲ್ಲಿಯೇ ಮರೆಯಾದನು. ಈರೀತಿ ಪರಮೇಶ್ವರನಿಂದ ವರವನ್ನು

**ಏವಂ ಲಬ್ಧವರಾ ಸಾ ತು ರಾಕ್ಷಸೀ ಕಾಮರೂಪಿಣೀ ।**
**ನಿತ್ಯಂ ಪೀಡಯತೇ ಬಾಲಾರ್ ಸಂಸ್ಮೃತ್ಯ ಹರಭಾಷಿತಂ ॥ ೨೦ ॥**

**ಅಡಾಡಯೇತಿ ಗೃಹ್ಣಾತಿ ಸಿದ್ಧಮಂತ್ರಂ ಕುಂಟುಬಿನೀ ।**
**ಗೃಹೇಷು ತೇನ ಸಾ ಲೋಕೇ ಹ್ಯಡಾಡೇತ್ಯಭಿಧೀಯತೇ ॥ ೨೧ ॥**

**ಏತತ್ತೇ ಸರ್ವಮಾಖ್ಯಾತಂ ಢೌಂಢಾಯಾಶ್ಚರಿತಂ ಮಯಾ ।**
**ಸಾಂಪ್ರತಂ ಕಥಯಿಷ್ಯಾಮಿ ಯೇನೋಪಾಯೇನ ಹನ್ಯತೇ ॥ ೨೨ ॥**

**ಅದ್ಯ ಪಂಚದಶೀ ಶುಕ್ಲಾ ಫಾಲ್ಗುನಸ್ಯ ನರಾಧಿಪ ।**
**ಶೀತಕಾಲೋ ವಿನಿಷ್ಕ್ರಾಂತಃ ಪ್ರಾತರ್ಗ್ರೀಷ್ಮೋ ಭವಿಷ್ಯತಿ ॥ ೨೩ ॥**

**ಅಭಯಪ್ರದಾನಂ ಲೋಕಾನಾಂ ದೀಯತಾಂ ಪುರುಷೋತ್ತಮ ।**
**ಯಥಾದ್ಯಾಶಂಕಿತಾ ಲೋಕಾ ರಮಂತಿ ಚ ಹಸಂತಿ ಚ ॥ ೨೪ ॥**

---

ಪಡೆದು ಕೊಬ್ಬಿರುವ ಈ ಢೌಂಢಾ ರಾಕ್ಷಸಿಯು ಕಾಮರೂಪಿಣಿಯಾಗಿ ಹುಡುಗರಿಂದಲೂ ಮತ್ತು ಹುಚ್ಚರಿಂದಲೂ ನಿನಗೆ ಭಯವುಂಟು ಎಂದು ಪರಮೇಶ್ವರನು ತನಗೆ ಹೇಳಿರುವುದನ್ನು ನಿತ್ಯವೂ ಜ್ಞಾಪಿಸಿಕೊಳ್ಳುತ್ತಾ ಈ ಹುಡುಗರನ್ನೆಲ್ಲಾ ಅದಕ್ಕೋಸ್ಕರವೇ ಪೀಡಿಸುತ್ತಿರುವಳು.

೨೧. ಕುಟುಂಬಿನಿ ಎನಿಸಿದ ಈ ರಾಕ್ಷಸಿಯು ' ಅಡಾಡಯ ' ಎಂಬ ಸಿದ್ಧ ಮಂತ್ರವನ್ನು ಧರಿಸಿ ಬಾಲಕರನ್ನು ಪೀಡಿಸುವುದರಿಂದ ಎಲ್ಲರೂ ತಮ್ಮ ಮನೆಗಳಲ್ಲಿ ಇವಳನ್ನು ಅಡಾಡಾ ಎಂಬ ಹೆಸರಿನಿಂದ ಕೂಗುವರು.

೨೨. ಓ ರಾಜೇಂದ್ರಾ ! ಇಲ್ಲಿಯವರೆಗೆ ನಾನು ನಿನಗೆ ಈ ಢೌಂಢಾ ರಾಕ್ಷಸಿಯ ಕಥೆಯನ್ನು ಹೇಳಿದುದಾಯಿತು. ಅವಳನ್ನು ಯಾವರೀತಿ ಕೊಲ್ಲಬೇಕೆಂಬುದನ್ನು ಇನ್ನು ಮುಂದೆ ತಿಳಿಸುವೆನು ಕೇಳು.

೨೩. ಓ ರಾಜೇಂದ್ರಾ ! ಈಗ ಫಾಲ್ಗುಣಮಾಸದ ಪೂರ್ಣಿಮಾ ಸನ್ನಿಹಿತವಾಗಿದೆ. ಶೀತಕಾಲವು ಕಳೆದು ಗ್ರೀಷ್ಮಋತುವು ಬರುವ ಸಮಯ.

೨೪. ಎಲೈ ಪುರುಷಶ್ರೇಷ್ಠನೇ ! ಪ್ರಜೆಗಳಿಗೆಲ್ಲಾ ಈಗ ಅಭಯಪ್ರದಾನ ಮಾಡು. ಭೀತಿಹೊಂದಿರುವ ಜನಗಳೆಲ್ಲರೂ ಇನ್ನುಮೇಲೆ ಸಂತೋಷದಿಂದ ವಿಹರಿಸುವಂತೆ ಸಮಾಧಾನಪಡಿಸಿ ಕಳುಹಿಸಿಕೊಡು.

ಕಾಷ್ಠಜಾನಿ ಚ ಖಂಡಾನಿ ಗೃಹೀತ್ವಾ ಸಮರೋತ್ಸುಕಾಃ ।
ಯೋಧಾ ಇವ ವಿನಿರ್ಯಾಂತು ಶಿಶವಃ ಸಂಪ್ರಹರ್ಷಿತಾಃ ॥ ೨೫ ॥

ಸಂಚಯಂ ಶುಷ್ಕಕಾಷ್ಠಾನಾಮುಪಲಾನಾಂ ಚ ಕಾರಯೇತ್ ।
ತತ್ರಾಗ್ನಿಂ ವಿಧಿವದ್ಧುತ್ವಾ ರಕ್ಷೋಘ್ನೈರ್ಮಂತ್ರವಿಸ್ತರೈಃ ॥ ೨೬ ॥

ತತಃ ಕಿಲಕಿಲಾಶಬ್ದೈಸ್ತಾಲಶಬ್ದೈರ್ಮನೋಹರೈಃ ।
ತಮಗ್ನಿಂ ತ್ರಿಃ ಪರಿಕ್ರಮ್ಯ ಗಾಯಂತು ಚ ಹಸಂತು ಚ ॥
ಜಲ್ಪಂತು ಸ್ವೇಚ್ಛಯಾ ಲೋಕಾ ನಿಃಶಂಕಾ ಯಸ್ಯ ಯನ್ಮತಂ॥ ೨೭ ॥

ತೇನ ಶಬ್ದೇನ ಸಾ ಪಾಪಾ ಹೋಮೇನ ಚ ನಿರಾಕೃತಾ ।
ಅದೃಷ್ಟಘಾತೈರ್ಡಿಂಭಾನಾಂ ರಾಕ್ಷಸೀ ಕ್ಷಯಮೇಷ್ಯತಿ ॥ ೨೮ ॥

---

೨೫. ಆ ದಿನ ಹುಡುಗರೆಲ್ಲರೂ ಮರದ ತುಂಡುಗಳನ್ನು ತಮ್ಮ ಕಯ್ಯಲ್ಲಿ ಹಿಡಿದು ಸೈನಿಕರಂತೆ ಉತ್ಸಾಹದಿಂದಲೂ ಸಂತೋಷದಿಂದಲೂ ಹೊರಡಲಿ.

೨೬. ಒಣಗಿದ ಸೌದೆಗಳನ್ನೂ ಸಣ್ಣ ಸಣ್ಣ ಕಲ್ಲುಗಳನ್ನೂ ಸಂಗ್ರಹಿಸಲಿ. ಅನಂತರ ವಿಧಿವತ್ತಾಗಿ ಅಗ್ನಿ ಪ್ರತಿಷ್ಠೆಮಾಡಿ ಆ ಯಜ್ಞೇಶ್ವರನಿಗೆ ವಿಧಿಪೂರ್ವಕ ರಕ್ಷೋಘ್ನ ಮಂತ್ರಗಳಿಂದ ಹೋಮಮಾಡಬೇಕು.

೨೭. ಅನಂತರ ಕಿಲಕಿಲ ಎಂಬ ಶಬ್ದ ಮಾಡುತ್ತಲೂ ಮತ್ತು ಮನೋಹರವಾದ ತಾಳಧ್ವನಿ ಮಾಡುತ್ತಲೂ, ಹಾಡುತ್ತಲೂ, ನಗುತ್ತಲೂ ಆ ಅಗ್ನಿಯನ್ನು ಮೂರುಸಲ ಸುತ್ತಿಬರಬೇಕು. ಅಲ್ಲದೆ ಈ ಸಂದರ್ಭದಲ್ಲಿ ಜನಗಳು ಸ್ವಲ್ಪವೂ ಭಯವಿಲ್ಲದೆ ಸ್ವೇಚ್ಛೆಯಿಂದ ಏನು ಬೇಕಾದರೂ ಹೇಳಬಹುದು.

೨೮ ಈ ಜನಗಳ ಕಿಲಕಿಲಾದಿ ಶಬ್ದಗಳಿಂದಲೂ, ರಕ್ಷೋಘ್ನಮಂತ್ರ ಪೂರ್ವಕವಾದ ಹೋಮದಿಂದಲೂ ನಿರಾಕರಿಸಲ್ಪಟ್ಟ ಅವಳು ಅದೃಷ್ಟಪೂರ್ವವಾದ ಮಕ್ಕಳ ಏಟನಿಂದ ನಾಶಹೊಂದುವಳು" ಎಂದು ವಸಿಷ್ಠಮುನಿಯು ಶ್ರೀ ರಘುಮಹಾರಾಜನಿಗೆ ತಿಳಿಸಿದನು.

॥ ಶ್ರೀಕೃಷ್ಣ ಉವಾಚ ॥

ತಸ್ಯರ್ಷೇರ್ವಚನಂ ಶ್ರುತ್ವಾ ಸ ನೃಪಃ ಪಾಂಡುನಂದನ ।
ಸರ್ವಂ ಚಕಾರ ವಿಧಿವದುಕ್ತಂ ತೇನ ಚ ಧೀಮತಾ ॥ ೨೯ ॥

ಗತಾ ಸಾ ರಾಕ್ಷಸೀ ನಾಶಂ ತೇನ ಚೋಗ್ರೇಣ ಕರ್ಮಣಾ ।
ತತಃ ಪ್ರಭೃತಿ ಲೋಕೇಽಸ್ಮಿನ್ನಡಾಡಾ ಖ್ಯಾತಿಮಾಗತಾ ॥ ೩೦ ॥

ಸರ್ವದುಷ್ಟಾಪಹೋ ಹೋಮಃ ಸರ್ವರೋಗೋಪಶಾಂತಿದಃ ।
ಕ್ರಿಯತೇಽಸ್ಯಾಂ ದ್ವಿಜೈಃ ಪಾರ್ಥ ತೇನ ಸಾ ಹೋಲಿಕಾ ಮತಾ ॥೩೧॥

ಸರ್ವಸಾರಾತಿವಿಶ್ವೇಯಂ ಪೂರ್ವಮಾಸೀದ್ಯುಧಿಷ್ಠಿರ ।
ಸಾರತ್ವಾತ್ಫಲ್ಗುರಿತ್ಯೇಷಾ ಪರಮಾನಂದದಾಯಿನೀ ॥೩೨॥

---

೨೯. ಶ್ರೀಕೃಷ್ಣನು ಹೇಳುತ್ತಾನೆ—ಓ ಪಾಂಡುನಂದನ! ಮಹರ್ಷಿಯ ಈ ಮಾತನ್ನು ಕೇಳಿ ರಘುಮಹಾರಾಜನು ಮೇಧಾವಿಯಾದ ಆ ವಸಿಷ್ಠನು ಹೇಳಿದಂತೆಯೇ ಎಲ್ಲವನ್ನೂ ವಿಧಿಪೂರ್ವಕವಾಗಿ ಮಾಡಿಸಿದನು.

೩೦. ಉಗ್ರವಾದ ಈ ಕರ್ಮದಿಂದ ಆ ರಾಕ್ಷಸಿಯು ನಾಶಹೊಂದಿದಳು. ಅಲ್ಲಿಂದ ಮುಂದೆ ಈ ಅಡಾಡಾ ಎಂಬ ಹೆಸರು ಪ್ರಸಿದ್ಧಿಗೆ ಬಂದಿತು.

೩೧. ಓ ಪಾರ್ಥ! ಸಕಲ ದುಷ್ಟರನ್ನೂ ನಾಶಮಾಡಿ, ಸರ್ವರೋಗಗಳಿಗೂ ಉಪಶಮನವನ್ನುಂಟುಮಾಡುವಂತಹ ಈ ಹೋಮವನ್ನು ಬ್ರಾಹ್ಮಣರು ಫಾಲ್ಗುಣಪೂರ್ಣಿಮಾದಿನ ಮಾಡುವುದರಿಂದ ಇದಕ್ಕೆ 'ಹೋಲಿಕಾ' ಎಂದು ಪ್ರಸಿದ್ಧಿಯುಂಟಾಯಿತು.

೩೨. ಓ ಯುಧಿಷ್ಠಿರ! ಹಿಂದೆ ಈ ಫಾಲ್ಗುಣಮಾಸವು ಇತರ ಎಲ್ಲಾ ಮಾಸಗಳಿಗಿಂತಲೂ ಶ್ರೇಷ್ಠವೂ, ಸಕಲಸಾರಭೂತವೂ ಆಗಿದ್ದಿತು. ಫಲ್ಗು ಎನ್ನುವುದು ಸಾರಭೂತ ಎಂಬ ಅರ್ಥವನ್ನು ತಿಳಿಸುವುದು. ಇದನ್ನುಳ್ಳದ್ದಾದ್ದರಿಂದ ಫಾಲ್ಗುಣ ಅಥವಾ ಫಲ್ಗುಣೀ ಎಂಬ ಹೆಸರುಂಟಾಗಿ ಸರ್ವಾನಂದಪ್ರದಾಯಕವಾದುದೆಂದು ಪ್ರಸಿದ್ಧಿಪಡೆದಿದೆ.

**ಅಸ್ಯಾಂ ನಿಶಾಗಮೇ ಪಾರ್ಥ ಸಂರಕ್ಷ್ಯಾಃ ಶಿಶವೋ ಗೃಹೇ ।**
**ಗೋಮಯೇನೋಪಸಂಲಿಪ್ತೇ ಸಚತುಷ್ಕೇ ಗೃಹಾಂಗಣೇ ॥ ೩೩ ॥**

**ಆಕಾರಯೇಚ್ಛಿಶುಪ್ರಾಯಾರ್ನ್ ಖಡ್ಗವ್ಯಗ್ರಕರಾನ್ನರಾನ್ ।**
**ತೇ ಕಾಷ್ಠಖಂಡೈಃ ಸಂಸ್ಪೃಶ್ಯ ಗೀತೈರ್ಹಾಸ್ಯಕರೈಃ ಶಿಶೂನ್ ॥**
**ರಕ್ಷಂತಿ ತೇಷಾಂ ದಾತವ್ಯಂ ಗುಡಂ ಪಕ್ವಾನ್ನಮೇವ ಚ ॥ ೩೪ ॥**

**ಏವಂ ಢೌಂಢಿತಮಾತ್ರಸ್ಯ ಸ ದೋಷಃ ಪ್ರಶಮಂ ವ್ರಜೇತ್ ।**
**ಬಾಲಾನಾಂ ರಕ್ಷಣಂ ಕಾರ್ಯಂ ತಸ್ಮಾತ್ತಸ್ಮಿನ್ನಿಶಾಗಮೇ ॥ ೩೫ ॥**

**॥ ಯುಧಿಷ್ಠಿರ ಉವಾಚ ॥**
**ಪ್ರಭಾತೇ ಕಿಂಜನೈರ್ದೇವ ಕರ್ತವ್ಯಂ ಸುಖಮೀಪ್ಸುಭಿಃ ।**
**ಪ್ರವೃತ್ತೇ ಮಾಧವೇ ಮಾಸಿ ಪ್ರತಿಪದ್ಭಾಸ್ಕರೋದಯೇ ॥ ೩೬ ॥**

---

೩೩-೩೫. ಓ ಪಾರ್ಥ! ಫಾಲ್ಗುಣಮಾಸದ ಪೂರ್ಣಿಮಾದಿನ ರಾತ್ರಿಯ ಹೊತ್ತಿನಲ್ಲಿ ಮಕ್ಕಳನ್ನು ಹೊರಕ್ಕೆ ಬಿಡದೆ ಮನೆಯಲ್ಲೇ ಕಾದಿಡಬೇಕು. ಆ ದಿನ ಮನೆಯ ಅಂಗಳದ ನಾಲ್ಕು ಮೂಲೆಗಳನ್ನು ಗೋಮಯದಿಂದ ಚೆನ್ನಾಗಿ ಸಾರಿಸಬೇಕು. ಕೆಲವರು ಗಂಡಸರಿಗೆ ಮಕ್ಕಳಂತೆ ವೇಷವನ್ನು ಹಾಕಿ, ಕೈಲಿ ಕತ್ತಿಯನ್ನು ಕೊಟ್ಟಿರಬೇಕು. ಅನಂತರ ಬಾಲಕವೇಷಧಾರಿ ಮಾನವರು ಸಂಗೀತ ಹಾಡುತ್ತಲೂ, ವಿನೋದಮಾಡುತ್ತಲೂ ಆ ಮಕ್ಕಳನ್ನು ಕಡ್ಡಿಯ ತುಂಡುಗಳಿಂದ ಮುಟ್ಟಬೇಕು. ಇದು ಮಕ್ಕಳಿಗೆ ರಕ್ಷೆಮಾಡಿದಂತಾಗುವುದು. ಆಮೇಲೆ ಆ ಶಿಶುವೇಷಧಾರಿಗಳಿಗೆ ಬೆಲ್ಲವನ್ನೂ, ಅನ್ನವನ್ನೂ ಸಮರ್ಪಿಸಬೇಕು. ಹೀಗೆ ಮಾಡಿದರೆ ಢೌಂಢಾಸಂಬಂಧವಾದ ಮಕ್ಕಳ ಪೀಡೆಯು ಶಮನವಾಗುವುದು. ಆದುದರಿಂದ ಆ ದಿನ ಮಕ್ಕಳನ್ನು ಹೊರಗೆ ಬಿಡದೆ ಮನೆಯಲ್ಲಿಯೇ ಇರಿಸಿ ಕೊಂಡಿರಬೇಕು.

೩೬. ಯುಧಿಷ್ಠಿರನು ಪ್ರಶ್ನೆಮಾಡುತ್ತಾನೆ—ಎಲೈ ಮಾಧವ! ಹೀಗೆ ಫಾಲ್ಗುಣಮಾಸ ಕಳೆದು ಚೈತ್ರಮಾಸದ ಪ್ರತಿಪತ್ತಿನಲ್ಲಿ ಸೂರ್ಯೋದಯವಾದ ನಂತರ ಸುಖಾಪೇಕ್ಷಿಗಳಾದವರು ಮಾಡಬೇಕಾದ ಕಾರ್ಯವೇನು? ಇದನ್ನು ನನಗೆ ತಿಳಿಸು ಎಂದನು.

॥ ಶ್ರಿ ಕೃಷ್ಣ ಉವಾಚ ॥

ಕೃತ್ವಾ ಚಾವಶ್ಯಕಾರ್ಯಾಣಿ ಸಂತರ್ಪ್ಯ ಪಿತೃದೇವತಾಃ ।
ವಂದಯೇದ್ಧೋಲಿಕಾಭೂತಿಂ ಸರ್ವದುಷ್ಟೋಪಶಾಂತಯೇ ॥ ೩೭ ॥

ಮಂಡಿತೇ ಚರ್ಚಿತೇ ಚೈವ ಉಪಲಿಪ್ತೇ ಗೃಹಾಜಿರೇ ।
ಚತುಷ್ಕಂ ಕಾರಯೇಚ್ಛ್ರೇಷ್ಠಂ ವರ್ಣಕೈಶ್ಚಾಕ್ಷತೈಃ ಶುಭೈಃ ॥ ೩೮ ॥

ತನ್ಮಧ್ಯೇ ಸ್ಥಾಪಯೇತ್ಪೀಠಂ ಶುಕ್ಲವಸ್ತ್ರೋತ್ತರಚ್ಛದಂ ।
ಅಗ್ರತಃ ಪೂರ್ಣಕಲಶಂ ಸ್ಥಾಪಯೇತ್ಪಲ್ಲವೈರ್ಯುತಂ ॥ ೩೯ ॥

ಸಾಕ್ಷತಂ ಸಹಿರಣ್ಯಂ ಚ ಸಿತಚಂದನಚರ್ಚಿತಂ ।
ಕಲಶಸ್ಯಾಗ್ರತೋ ದೇಯಾ ಉಪಾನಹವರಾಂಶುಕಾಃ ॥ ೪೦ ॥

---

೩೭. ಶ್ರೀಕೃಷ್ಣನು ಹೇಳುತ್ತಾನೆ—ಎಲೈ ಯುಧಿಷ್ಠಿರನೇ! ಈ ಚೈತ್ರ ಶುದ್ಧ ಪಾಡ್ಯಮಿದಿನ ಅವಶ್ಯವಾಗಿ ಮಾಡಬೇಕಾದ ಪ್ರಾತಃಸ್ನಾನ ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ನೆರವೇರಿಸಿದನಂತರ ಪಿತೃದೇವತೆಗಳಿಗೆ ತರ್ಪಣಮಾಡಬೇಕು. ಅನಂತರ ಹೋಲಿಕಾಭಸ್ಮವನ್ನು ನಮಸ್ಕಾರಪೂರ್ವಕವಾಗಿ ಧಾರಣೆ ಮಾಡಬೇಕು. ಇದರಿಂದ ಸಕಲ ದೋಷಗಳೂ ನಿವಾರಣೆಯಾಗುವುವು.

೩೮. ಮನೆಯ ಅಂಗಳವನ್ನು ಸಾರಿಸಿ ರಂಗವಲ್ಲಿ ಮುಂತಾದವುಗಳಿಂದ ಅಲಂಕರಿಸಿದ ಮೇಲೆ, ಆ ಅಂಗಳದಲ್ಲಿ ಬಣ್ಣಗಳಿಂದಲೂ ಶುಭಕರವಾದ ಅಕ್ಷತೆಗಳಿಂದಲೂ, ಚತುರಸ್ರವಾದ ಮಂಡಲವನ್ನು ರಚಿಸಬೇಕು.

೩೯-೪೦. ಆ ಮಂಡಲದ ಮಧ್ಯಭಾಗದಲ್ಲಿ ಒಂದು ಪೀಠವನ್ನು ಇರಿಸಿ, ಅದರ ಮೇಲೆ ಬಿಳಿಯ ಬಟ್ಟೆಯನ್ನು ಉತ್ತರದಿಕ್ಕಿಗೆ ಅಂಚು ಬರುವಂತೆ ಹಾಸಬೇಕು. ಆಮೇಲೆ ಇದರ ಮುಂದೆ ಚಿಗುರುಗಳಿಂದ ಸಮೇತವಾದ ಪೂರ್ಣಕಲಶವನ್ನು ಸ್ಥಾಪಿಸಬೇಕು. ಈ ಕಲಶಕ್ಕೆ ಅಕ್ಷತೆ ಸುವರ್ಣ ಇವುಗಳನ್ನು ಹಾಕಿ ಶ್ರೀಗಂಧದಿಂದ ಲೇಪನ ಮಾಡಬೇಕು. ಅನಂತರ ಈ ಕಲಶದ ಮುಂದೆ ಜೋಡು ಮತ್ತು ಉತ್ತಮವಾದ ವಸ್ತ್ರಗಳು ಇವುಗಳನ್ನು ಇರಿಸಬೇಕು.

**ಆಸನೇ ಚೋಪವಿಷ್ಟಸ್ಯ ಬ್ರಹ್ಮಘೋಷೇಣ ಭಾರತ ।**
**ಚರ್ಚಯೇಚ್ಚಂದನಂ ನಾರೀ ಅವ್ಯಂಗಾಂಗಾ ಸುಲಕ್ಷಣಾ ॥ ೪೧ ॥**

**ಪದ್ಮರಾಗೋತ್ತರಪಟಾ ಶ್ರೇಷ್ಠಾಂಶುಕವಿಭೂಷಿತಾ ।**
**ವಸುಧಾರಾಂ ಶಿರೋಗ್ರೇ ಚ ದಧಿದೂರ್ವಾಕ್ಷತಾನ್ವಿತಾಂ ॥ ೪೨ ॥**

**ಚರ್ಚಾಪಯಿತ್ವಾ ಶ್ರೀಖಂಡಂ ಆಯುರಾರೋಗ್ಯವೃದ್ಧಯೇ ।**
**ಪಶ್ಚಾಚ್ಚ ಪ್ರಾಶಯೇದ್ವಿದ್ವಾಂಶ್ಚೂತಪುಷ್ಪಂ ಸಚಂದನಂ ॥ ೪೩ ॥**

**ಮನೋಭವಸ್ಯ ಸಾ ಪೂಜಾ ಋಷಿಭಿಃ ಸಂಪ್ರದರ್ಶಿತಾ ।**
**ಯೇ ಪಿಬಂತಿ ವಸಂತಾದೌ ಚೂತಪುಷ್ಪಂ ಸಚಂದನಂ ॥ ೪೪ ॥**

---

೪೧-೪೨. ಓ ಭರತಕುಲಶ್ರೇಷ್ಠನೇ ! ಅನಂತರ ಸುಂದರಾಂಗಿಯೂ, ಲಕ್ಷಣವತಿಯೂ ಆಗಿ ಪದ್ಮರಾಗದಂತೆ ಕೆಂಪಾದ ಉತ್ತರೀಯವನ್ನು ಹೊದೆದು ಶ್ರೇಷ್ಠವಾದ ವಸ್ತ್ರವನ್ನು ಉಟ್ಟಿರುವ ನಾರಿಯು, ಆಸನದ ಮೇಲೆ ಬ್ರಹ್ಮಘೋಷ ಪುರಸ್ಸರವಾಗಿ ಕುಳಿತಿರುವ ಯಜಮಾನನಿಗೆ ಚಂದನವನ್ನು ಲೇಪನ ಮಾಡಬೇಕು. ಅನಂತರ ಮೊಸರು ದೂರ್ವೆ (ಗರಿಕೆ) ಮತ್ತು ಅಕ್ಷತೆ ಇವುಗಳ ಸಮೇತ ರತ್ನಗಳನ್ನು ಯಜಮಾನನ ತಲೆಯ ಮೇಲೆ ಮೆಲ್ಲನೆ ಧಾರೆಯಾಗಿ ಸುರಿಯಬೇಕು.

೪೩. ವಿದ್ವಾಂಸನಾದನು ಈ ರೀತಿ ಚಂದನವನ್ನು ಲೇಪನ ಮಾಡಿಸಿಕೊಂಡನಂತರ ಆಯುರಾರೋಗ್ಯಗಳು ಅಭಿವೃದ್ಧಿಯಾಗುವುದಕ್ಕೋಸ್ಕರ ಚಂದನ ಸಮೇತವಾಗಿ ಮಾವಿನ ಹೂವನ್ನು ತಿನ್ನಬೇಕು.

೪೪. ಈ ಪೂಜೆಯು ಮನೋಭವನ ಪ್ರೀತ್ಯರ್ಥವಾಗಿ ಮಾಡುವ ಪೂಜೆಯೆನಿಸುವುದೆಂದು ಋಷಿಗಳು ವಿಧಿಸಿರುವರು ವಸಂತಋತುವಿನ ಆದಿಭಾಗದಲ್ಲಿ ಚಂದನ ಸಮೇತವಾದ ಮಾವಿನ ಹೂವನ್ನು ತಿನ್ನುವವನಿಗೆ ಹೃದಯದಲ್ಲಿ ಮನ್ಮಥಸ್ಫೂರ್ತಿಯು ಜಾಗ್ರತೆಯಲ್ಲೇ ಸತ್ಯವಾಗಿ ಉಂಟಾಗುವುವು.

ಸತ್ಯಂ ಹೃದಿಸ್ಥಕಾಮಸ್ಯ ತತ್ಪೂರ್ತಿರ್ಜಾಯತೇಽಂಜಸಾ ।
ಅನಂತರಂ ದ್ವಿಜೇಂದ್ರಾಣಾಂ ಸೂತಮಾಗಧಬಂದಿನಾಂ ॥ ೪೫ ॥

ದದ್ಯಾದ್ದಾನಂ ಯಥಾಶಕ್ತ್ಯಾ ಕಾಮೋ ಮೇ ಪ್ರೀಯತಾಮಿತಿ ।
ತತೋ ಭೋಜನವೇಳಾಯಾಂ ಶ್ರುತಂ ಯತ್ಪ್ರಾಕ್ತನೇಽಹನಿ ॥ ೪೬ ॥

ಪ್ರಾಶ್ನೀಯಾತ್ಪ್ರಥಮಂ ಚಾನ್ನಂ ತತೋ ಭುಂಜೀತ ಕಾಮತಃ ।
ಯ ಏವಂ ಕುರುತೇ ಪಾರ್ಥ ಶಾಸ್ತ್ರೋಕ್ತಂ ಫಾಲ್ಗುನೋತ್ಸವಂ ॥೪೭॥

ಅನಾಯಾಸೇನ ಸಿದ್ಧ್ಯಂತಿ ತಸ್ಯ ಸರ್ವೇ ಮನೋರಥಾಃ ।
ಆಧಯೋ ವ್ಯಾಧಯಶ್ಚೈವ ಯಾಂತಿ ನಾಶಂ ನ ಸಂಶಯಃ ॥ ೪೮ ॥

ಪುತ್ರಪೌತ್ರಸಮಾಯುಕ್ತಃ ಸುಖಂ ತಿಷ್ಠತಿ ಮಾನವಃ ॥ ೪೯ ॥

---

೪೫. ಅನಂತರ ಬ್ರಾಹ್ಮಣೋತ್ತಮರಿಗೂ, ಸೂತ ಮಾಗಧ ಮುಂತಾದ ಸ್ತುತಿಪಾಠಕರಿಗೂ, ಮನ್ಮಥನು ತನ್ನ ವಿಷಯದಲ್ಲಿ ಪ್ರೀತಿಯುಳ್ಳವನಾಗಲಿ ಎಂದು ಹೇಳುತ್ತಾ ತನ್ನ ಶಕ್ತ್ಯನುಸಾರವಾಗಿ ದಾನಮಾಡಬೇಕು.

೪೬. ಅನಂತರ ಭೋಜನ ಸಮಯದಲ್ಲಿ ಬೆಳಗ್ಗೆ ಪಾಕಮಾಡಿದ್ದ ಪದಾರ್ಥಗಳಲ್ಲಿ ಅನ್ನವನ್ನು ಮೊದಲು ಊಟಮಾಡಿದನಂತರ ತನ್ನ ಮನಸ್ಸಿಗೆ ಇಷ್ಟವಾದ ಭಕ್ಷ್ಯ ಭೋಜ್ಯಾದಿಗಳನ್ನು ತಿನ್ನಬೇಕು.

೪೭-೪೯. ಎಲೈ ಪಾರ್ಥ ! ಈ ರೀತಿ ಶಾಸ್ತ್ರೋಕ್ತವಾದ ಫಾಲ್ಗುಣೋತ್ಸವವನ್ನು ಯಾವನು ಆಚರಿಸುವನೋ ಅವನಿಗೆ ಅನಾಯಾಸವಾಗಿ ಸಕಲ ಇಷ್ಟಾರ್ಥಗಳೂ ಲಭಿಸುವುವು. ಮತ್ತು ಎಲ್ಲಾ ಮನೋವ್ಯಥೆಗಳೂ ಸಕಲ ವ್ಯಾಧಿಗಳೂ ಸಹ ಸಂಶಯವಿಲ್ಲದೆ ನಾಶವಾಗುತ್ತವೆ. ಈ ಉತ್ಸವವನ್ನು ಏರ್ಪಡಿಸುವ ಮಾನವನು ಪುತ್ರಪೌತ್ರಸಮನ್ವಿತನಾಗಿ ಸುಖವಾಗಿ ಬಾಳುವನು.

ಪುಣ್ಯಾ ಪವಿತ್ರಾ ಜಯದಾ ಸರ್ವವಿಘ್ನವಿನಾಶಿನೀ ।
ಏಷಾ ತೇ ಕಥಿತಾ ಪಾರ್ಥ ತಿಥೀನಾಮುತ್ತಮಾ ತಿಥಿಃ ॥ ೫೦ ॥

ವೃತ್ತೇ ತುಷಾರಸಮಯೇ ಸಿತಪಂಚದಶ್ಯಾಂ ।
ಪ್ರಾತರ್ವಸಂತಸಮಯೇ ಸಮುಪಸ್ಥಿತೇ ಚ ।
ಸಂಪ್ರಾಶ್ಯ ಚೂತಕುಸುಮಂ ಸಹ ಚಂದನೇನ ।
ಸತ್ಯಂಹಿ ಪಾರ್ಥ ಪುರುಷಃ ಸ ಸುಖೀ ಸಮಾಸ್ತೇ ॥ ೫೧ ॥

ಇತಿ ಶ್ರೀಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ಫಾಲ್ಗುನಪೂರ್ಣಿಮೋತ್ಸವ ವರ್ಣನಂ ನಾಮ ದ್ವಾತ್ರಿಂಶದುತ್ತರಶತತಮೋಽಧ್ಯಾಯಃ.



---

೫೦. ಓ ಪಾರ್ಥ ! ಪುಣ್ಯಕರವೂ, ಪವಿತ್ರವೂ, ಜಯವನ್ನುಂಟು ಮಾಡುವುದೂ, ಮತ್ತು ಸಕಲವಿಘ್ನಗಳನ್ನು ನಾಶಮಾಡುವುದೂ, ಸರ್ವತಿಥಿಗಳಲ್ಲಿ ಉತ್ತಮವಾದುದೂ ಎನಿಸಿರುವ ಫಾಲ್ಗುಣ ಶುಕ್ಲ ಪೂರ್ಣಿಮಾ ತಿಥಿಯ ವಿಷಯ ವನ್ನು ನಿನಗೆ ಹೇಳಿದೆನು.

೫೧. ಎಲೈ ಕುಂತೀಪುತ್ರನಾದ ಯುಧಿಷ್ಠಿರನೇ ! ಚಳಿಗಾಲವೆಲ್ಲಾ ಕಳೆ ಯುತ್ತಬಂದು ಇನ್ನು ಕೊಂಚ ಉಳಿದಿರುವಾಗ ಫಾಲ್ಗುಣ ಶುಕ್ಲ ಪೂರ್ಣಿಮೆಯಲ್ಲಿ ಹೋಲಿಕಾದಹನವನ್ನು ಮಾಡಿ, ಆ ಫಾಲ್ಗುಣಮಾಸವು ಕಳೆದಮೇಲೆ ಚೈತ್ರ ಶುದ್ಧ ಪಾಡ್ಯಮಿಯ ದಿನ ಚಂದನ ಸಮೇತವಾದ ಮಾವಿನ ಹೂವನ್ನು ತಿನ್ನು ವವನು ಸತ್ಯವಾಗಿಯೂ ಸುಖದಿಂದ ಬಾಳುವನು. ಎಂದು ಶ್ರೀಕೃಷ್ಣನು ಧರ್ಮರಾಜನಿಗೆ ತಿಳಿಸಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀಕೃಷ್ಣಯುಧಿಷ್ಠಿರ ಸಂವಾದದಲ್ಲಿ ಫಾಲ್ಗುಣಮಾಸದ ಪೂರ್ಣಿಮೋತ್ಸವದ ವರ್ಣನೆ ಎಂಬ ನೂರಮೂವತ್ತೆರಡನೆಯ ಅಧ್ಯಾಯವು ಮುಗಿದುದು.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣ

## ಉತ್ತರಪರ್ವಣಿ

## ತ್ರಯಸ್ತ್ರಿಂಶದುತ್ತರಶತತಮೋಽಧ್ಯಾಯಃ

|| ಯುಧಿಷ್ಠಿರ ಉವಾಚ ||

ಸಂತ್ಯಜ್ಯಾಲಿಕುಲಾಲೀಢಕುಸುಮಾನಿ ಮೃದೂನ್ಯಪಿ |
ದಮನೇನ ಕಥಂ ಲೋಕೈಃ ಪೂಜ್ಯಂತೇ ನಾಕನಾಯಕಾಃ || ೧ ||

ದೋಲಾಂದೋಲನಮಾಹಾತ್ಮ್ಯಂ ರಥಯಾತ್ರಾಮಹೋತ್ಸವಂ |
ಕಥಯಸ್ವಾಮಲಂ ಪ್ರಾಜ್ಞ ಯಾದವಾಂಭೋಜಭಾಸ್ಕರ || ೨ ||

---

### ನೂರಮೂವತ್ತಮೂರನೆಯ ಅಧ್ಯಾಯ

೧-೨. ಯುಧಿಷ್ಠಿರನು ಶ್ರೀಕೃಷ್ಣನನ್ನು ಪ್ರಶ್ನೆಮಾಡುತ್ತಾನೆ—ಯದು ವಂಶವೆಂಬ ಕಮಲಕ್ಕೆ ಸೂರ್ಯನಂತೆ ಆನಂದಕರನಾದ ಎಲೈ ಜನಾರ್ದನ ! ಮಕರಂದಪಾನಕೋಸ್ಕರ ಝೇಂಕಾರ ಮಾಡುತ್ತಾ ಭ್ರಮರಗಳು ಬಂದು ಮುತ್ತಿ ಕೊಂಡು ಮನೋಹರವಾಗಿ ಕಾಣುತ್ತಿರುವ ಮೃದುಮಧುರವಾದ ಪುಷ್ಪಗಳನ್ನೆಲ್ಲಾ ಬಿಟ್ಟು ದಮನಕಪುಷ್ಪವನ್ನೇ ಮಾನವರು ಸ್ವರ್ಗಲೋಕವಾಸಿಗಳಾದ ದೇವತೆ ಗಳಿಗೂ ದೇವಾಧಿಪರಿಗೂ ಪೂಜೆಮಾಡಲು ಕಾರಣವೇನು ? ಎಂಬುದನ್ನೂ ಮತ್ತು ಉಯ್ಯಾಲೋತ್ಸವದ ಮಾಹಾತ್ಮ್ಯವನ್ನೂ ರಥೋತ್ಸವದ ಮಹಿಮೆ ಯನ್ನೂ ಪ್ರಾಜ್ಞನಾದ ನೀನು ನನಗೆ ತಿಳಿಸು ಎಂದನು.

**॥ ಶ್ರೀ ಕೃಷ್ಣ ಉವಾಚ ॥**

**ಪಾರ್ಥಾರ್ಥಿ ಜನಸದ್ವೃಕ್ಷ ಕ್ಷಾಂತಿಧಾಮ ಧರಾಪತೇ ।**
**ಯದೇತದ್ಭವತಾ ಪೃಷ್ಟಂ ತಚ್ಛೃಣುಷ್ವ ವದಾಮಿ ತೇ ॥ ೩ ॥**

**ಪುರಾ ಸುರಾಣಾಮಾವಾಸೇ ಮಂದರೇ ಚಾರುಕಂದರೇ ।**
**ಗಂಧಾಧಾರೀ ಕುಲಾಲೀಢೋ ಜಾತೋ ದಮನಕಸ್ತರುಃ ॥ ೪ ॥**

**ತಸ್ಯ ಗಂಧಮನಾಘ್ರೇಯಮಾಘ್ರಾಯ ಸುರಯೋಷಿತಃ ।**
**ಮದನೋನ್ಮಾದವಶಗಾ ಗಾಯಂತಿ ಚ ಹಸಂತಿ ಚ ॥ ೫ ॥**

**ಋಷಯೋ ನಿಯಮಾಂಸ್ತ್ಯಕ್ತ್ವಾಪ್ರಾದ್ರವಂತ ಗೃಹಾನ್ ಪ್ರತಿ ।**
**ನ ವೇದಾಧ್ಯಯನೇ ದಾನೇ ರತಿಸ್ತೇಷಾಂ ಬಭೂವ ಹ ॥ ೬ ॥**

---

೩. ಶ್ರೀಕೃಷ್ಣನು ಹೇಳುತ್ತಾನೆ—ಯಾಚಕರಿಗೆ ಕಲ್ಪವೃಕ್ಷದಂತಿರುವನೂ, ಕೃಪಾನಿಧಿಯೂ, ಭೂಪತಿಯೂ, ಆಗಿರುವ ಎಲೈ ಕುಂತಿಪುತ್ರನೇ ! ನಿನ್ನ ಪ್ರಶ್ನೆಗಳಿಗೆ ಉತ್ತರವನ್ನು ಹೇಳುವೆನು ಕೇಳು.

೪. ಮನೋಹರವಾದ ಗುಹೆಗಳಿಂದ ಕೂಡಿ ದೇವತೆಗಳಿಗೆ ಆವಾಸಸ್ಥಾನವಾಗಿರುವ ಮಂದರಪರ್ವತದಲ್ಲಿ, ಸುಗಂಧಯುಕ್ತವೂ, ಭ್ರಮರಕುಲಗಳಿಂದ ಆವೃತವಾದುದೂ ಆದ, ದಮನಕವೃಕ್ಷವು ಬಹು ಹಿಂದಿನ ಕಾಲದಲ್ಲಿಯೇ ಹುಟ್ಟಿತು.

೫. ಆಘ್ರಾಣಿಸಲು ಸಾಧ್ಯವಾಗದಷ್ಟು ಸುಗಂಧಭರಿತವಾದ ಈ ಹೂಗಳ ಸುವಾಸನೆಯನ್ನು ಆಘ್ರಾಣಿಸಿ, ದೇವತಾಸ್ತ್ರೀಯರೆಲ್ಲರೂ ಮನ್ಮಥನ ಬಾಣಗಳಿಂದ ಪೀಡಿತೆಯರಾಗಿ, ಸುಮ್ಮನೆ ಗಾನಮಾಡುತ್ತ ನಗುತ್ತಾ ಕಾಲಕಳೆಯತೊಡಗಿದರು.

೬. ಇದರ ಗಂಧವನ್ನಾಘ್ರಾಣಿಸಿದ ಋಷಿಗಳೆಲ್ಲರೂ, ತಮ್ಮ ತಪೋನಿಯಮಗಳನ್ನು ಬಿಟ್ಟು, ತಮ್ಮ ತಮ್ಮ ನಿವಾಸಗಳನ್ನು ಸೇರಿದರು. ಇದರ ದೆಸೆಯಿಂದ ಅವರಿಗೆ ವೇದಾಧ್ಯಯನದಲ್ಲಿಯಾಗಲಿ ಧ್ಯಾನದಲ್ಲಿಯಾಗಲಿ ಆಸಕ್ತಿಯುಂಟಾಗಲಿಲ್ಲ.

ಅಪರಾಧಾದ್ವಿಘಟಿತಂ ಯದ್ಬಭೂವ ಪ್ರಿಯೋ ಪರಂ ।
ಮಾನಸಂ ಮಾನಿನೀನಾಂ ತು ಪುನರ್ಗಂಧೇನ ಸಂಧಿತಂ ॥ ೭ ॥

ಗಂಧೇನಾಕುಲಿತಂ ಲೋಕಂ ದೃಷ್ಟ್ವಾ ಬ್ರಹ್ಮಾ ತಮಬ್ರವೀತ್ ।
ಶಮನಿರ್ಮಿತಯಾ ವಾಚಾ ರೋಷಾತ್ಪ್ರಸ್ಫುರಿತಾಧರಃ ॥ ೮ ॥

॥ ಬ್ರಹ್ಮೋವಾಚ ॥

ಜಾತಸ್ತ್ವಂ ಲೋಕದಮನಾನ್ನಾಮ್ನಾ ದಮನಕೋ ಮಯಾ ।
ಜಗದ್ವಾ ಘೂರ್ಣಸೇ ಕಸ್ಮಾತ್ಕರ್ಮ ನೈತತ್ತವೋಚಿತಂ ॥ ೯ ॥

ಯತ್ಸಂತಸ್ತ್ವನುಮನ್ಯಂತೇ ಸರ್ವಾತಿಶಯವರ್ಜಿತಂ ।
ತತ್ಸೇವೇತ ನರಃ ಕರ್ಮ ಯತ್ರೋದ್ವೇಗೋ ನ ಧೀಮತಾಂ ॥ ೧೦ ॥

---

೭. ಪ್ರಿಯೆಯರು ಮಾಡಿದ ಅಪರಾಧದಿಂದ ಅವರನ್ನು ವರ್ಜ್ಯಮಾಡ ಬೇಕೆಂದಿದ್ದ ಪ್ರಿಯರ ಮನಸ್ಸು ಈ ದಮನಕಪುಷ್ಪದ ಸುವಾಸನೆಯಿಂದ ಉದ್ರಿಕ್ತ ವಾಗಿ ಪುನಃ ತಮ್ಮ ಕಾಂತೆಯರೊಡಗೂಡುವಂತೆ ಆಯಿತು.

೮. ಹೀಗೆ ತನ್ನ ಸುಗಂಧದಿಂದ ಪ್ರಪಂಚವನ್ನೆಲ್ಲ ಅಲ್ಲೋಲಕಲ್ಲೋಲ ಮಾಡುತ್ತಿರುವ ಈ ದಮನಕವೃಕ್ಷವನ್ನು ನೋಡಿ ಬ್ರಹ್ಮನು ಕೋಪದಿಂದ ತುಟಿಗಳು ಕಂಪಿಸುತ್ತಿರಲು ಈ ಪ್ರಕಾರ ಬಿರುನುಡಿಗಳನ್ನಾಡಿದನು.

೯. ಬ್ರಹ್ಮನು ಹೇಳುತ್ತಾನೆ—"ಎಲೈ ದಮನಕವೃಕ್ಷವೇ ! ನೀನು ನನ್ನಿಂದ ಸೃಷ್ಟವಾಗಿ ಲೋಕಗಳನ್ನೆಲ್ಲಾ ನಿಜವಾಗಿಯೂ ದಮನ ಮಾಡುತ್ತಿರು ವುದರಿಂದ ನಿನಗೆ ದಮನಕ ಎಂಬ ಹೆಸರೇನೋ ಉಚಿತವಾದಂತಿದೆ. ಆದರೂ ಪ್ರಪಂಚವನ್ನೆಲ್ಲಾ ಈ ರೀತಿ ಕೋಟಲೆಗೊಳಿಸುವುದು ನನ್ನಿಂದ ಸೃಷ್ಟವಾದ ನಿನಗೆ ಉಚಿತವಲ್ಲ.

೧೦. ಸತ್ಪುರುಷರನೇಕರು ಅನುಮೋದಿಸುವ ಕರ್ಮವನ್ನು ನಿರತಿಶಯ ವಾಗಿ ಆಚರಿಸುವುದೇ ಮಾನವರ ಕರ್ತವ್ಯವಾಗಿರಬೇಕು. ಮೇಧಾವಿಗಳಾದ ಮಾನವರಿಗೆ ನಮ್ಮಿಂದ ಎಂದಿಗೂ ಉದ್ವೇಗವುಂಟಾಗಬಾರದು.

**ಏಕಸ್ಯಾಪ್ಯಪಕಾರಂ ಯಃ ಕರೋತಿ ಸ ನರಾಧಮಃ ।**
**ಬಹೂನಾಮುಪಕಾರಾಯ ಸಂಪ್ರವೃತ್ತಃ ಕಿಮುಚ್ಯತೇ　　　　॥ ೧೧ ॥**

**ದೃಷ್ಟಾರ್ಥಬಾಧಕಂ ಕರ್ಮ ನ ಕರ್ತವ್ಯಂ ಕಥಂಚನ ।**
**ಅದೃಷ್ಟಂ ಪ್ರತಿ ಸಂದೇಹಃ ಸೋಽಸ್ಮಾಭಿರನುಮೀಯತೇ　　　　॥ ೧೨ ॥**

**ತತಸ್ತ್ವಯಂ ಪ್ರಭಜತಿ ದೈವೇ ಪಿತ್ರ್ಯೇ ಚ ಕರ್ಮಣಿ ।**
**ಭೋಗಾರ್ಥೇ ಚ ತ್ರಿಭುವನನಿರಾದೇಯೋ ಭವಿಷ್ಯತಿ　　　　॥ ೧೩ ॥**

---

೧೧. ಲೋಕದಲ್ಲಿ ಮನುಷ್ಯನು ಯಾರಿಗಾದರೂ ಒಂದೇ ಒಂದು ಅಪಕಾರ ಮಾಡಿದರೂ ನರಾಧಮನು ಎನಿಸಿಕೊಳ್ಳುವನು ಹೀಗಿರುವಾಗ ಅನೇಕಮಂದಿ ಸಾಧುಸಜ್ಜನರಿಗೆ ಅಪಕಾರಮಾಡಲು ನೀನು ಉದ್ಯುಕ್ತನಾಗಿರುವೆ. ನಿನ್ನನ್ನು ಏನೆಂದು ಹೇಳಬೇಕು.

೧೨. ಯಾವಾಗಲೂ ದೃಷ್ಟಾರ್ಥಬಾಧಕವಾದ (ಎಂದರೆ ಪ್ರಯೋಜನವು ಸ್ಪಷ್ಟವಾಗಿ ಕಾಣುವ ತಪಸ್ಸು ಧ್ಯಾನ ಮುಂತಾದ ಕರ್ಮಗಳಿಗೆ ವಿಘ್ನವುಂಟು ಮಾಡುವ) ಕೆಲಸಗಳನ್ನು ಮಾಡಬಾರದು. ಅದೃಷ್ಟಾರ್ಥಬಾಧಕ ಕರ್ಮಗಳಿಗೂ (ಎಂದರೆ ಪ್ರಯೋಜನವು ಸ್ಪಷ್ಟವಾಗಿ ಕಾಣದಿರುವ ವೇದಾಧ್ಯಯನ ಯಾಗಾನುಷ್ಠಾನ ದೇವತಾರಾಧನ ಪಿತೃಕರ್ಮ ಮುಂತಾದವುಗಳಿಗೆ ಫಲವು ಸಂದಿಗ್ಧವಾಗಿದ್ದರೂ ಅನುಮಾನಪ್ರಮಾಣದಿಂದ ಫಲಕಾಣುವುದರಿಂದ) ವಿಘ್ನ ಮಾಡಬಾರದು.

೧೩. ಹೀಗಿರುವಲ್ಲಿ ದೃಷ್ಟಪ್ರಯೋಜನವುಳ್ಳ ಕರ್ಮಗಳಿಗೆ ನೀನು ವಿಘ್ನವುಂಟುಮಾಡುತ್ತಿರುವುದಲ್ಲದೆ ಅದೃಷ್ಟಪ್ರಯೋಜನಾಂಶವುಳ್ಳ ದೇವಕರ್ಮ, ಪಿತೃಕರ್ಮಗಳಿಗೂ ವಿಘ್ನಕಾರಿಯಾಗಿದ್ದೀಯೆ. ನಿನ್ನ ಸುಗಂಧವನ್ನಾಘ್ರಾಣಿಸಿ ದೇವತೆಗಳೂ, ಋಷಿಗಳೂ ತಮ್ಮ ತಪಸ್ಸು, ಧ್ಯಾನ, ದೇವತಾರಾಧನಾದಿಗಳನ್ನು ಬಿಟ್ಟು ವಿಷಯಾಸಕ್ತರಾಗುವರು. ನೀನು ಹೀಗೆ ಉನ್ಮಾರ್ಗಪ್ರವರ್ತಕನಾಗಿರುವುದರಿಂದ ದೇವಕರ್ಮ ಪಿತೃಕರ್ಮಗಳಲ್ಲೂ, ಸಕಲ ಜನರ ಭೋಗೋಪಯೋಗದಲ್ಲಿಯೂ ಸಹ್ಯವಾಗದೆ ಸ್ವರ್ಗ ಮರ್ತ್ಯ ಪಾತಾಳವೆಂಬ ತ್ರಿಲೋಕಗಳಲ್ಲಿಯೂ ಯಾರಿಗೂ ಬೇಡವಾಗಿ ತಿರಸ್ಕಾರಾರ್ಹವಾಗು'' ಎಂದನು.

|| ದಮನಕ ಉವಾಚ ||

ಪುರುಷಾದೇವಮಾರಬ್ಧಂ ನ ಕ್ರೋಧಾನ್ನಾರ್ಥಕಾರಣಾತ್ ।
ಸ್ವಭಾವ ಏಷ ಮೇ ಬ್ರಹ್ಮಂಸ್ತ್ವಯಾ ಸೃಷ್ಟಃ ಪುರಾ ವಿಭೋ || ೧೪ ||

ಯಾ ಯಸ್ಯ ಜಂತೋಃ ಪ್ರಕೃತಿಃ ಶುಭಾ ವಾ ಯದಿ ವೇತರಾ ।
ಸ ತಸ್ಯಾಮೇವ ರಮತೇ ದುಷ್ಕೃತೇ ಸುಕೃತೇ ತಥಾ || ೧೫ ||

ತತ್ಸ್ವಭಾವಪ್ರವೃತ್ತಸ್ಯ ಯದಿ ಶಾಪಸ್ತ್ವಯಾ ಮಮ ।
ಪ್ರದತ್ತಃ ಕಿಂ ಕರೋಮ್ಯೇತನ್ನ ಕೃತ್ಯಮಪರಾಧ್ಯತಿ || ೧೬ ||

ಯುಕ್ತಿಯುಕ್ತಂ ವಚಃ ಶ್ರುತ್ವಾ ದಮನೇನ ಸಮೀರಿತಂ ।
ಪ್ರೀತಾತ್ಮಾ ಪದ್ಮಜಃ ಪ್ರಾಹ ಕರೋಮಿ ತವ ಸತ್ಪ್ರಿಯಂ || ೧೭ ||

---

೧೪. ಎಲೈ ಬ್ರಹ್ಮನೆ ! ನಾನು ಕೋಪದಿಂದಾಗಲಿ ಮತ್ತೊಬ್ಬನಿಗೆ ಅನರ್ಥ ವುಂಟಾಗಲೆಂದಾಗಲಿ ಹಾಗೆ ಮಾಡಲಿಲ್ಲ. ಇದು ಕೇವಲ ಮನುಷ್ಯಸ್ವಭಾವ ದಿಂದುಂಟಾದುದು. ವಿಭುವೇ ! ಪೂರ್ವಕಾಲದಿಂದಲೂ ಈ ಸ್ವಭಾವವು ನನಗೆ ಉಂಟಾಗುವಂತೆ ನೀನೇ ಸೃಷ್ಟಿಮಾಡಿದ್ದೀಯೆ.

೧೫. ಯಾವ ಪ್ರಾಣಿಯೇ ಆಗಲಿ, ಶುಭಕರವೋ ಇಲ್ಲವೇ ಅಶುಭಕರವೋ ಆದ ತನ್ನ ಪ್ರಕೃತಿಯಲ್ಲಿಯೇ ನಡೆದುಕೊಳ್ಳುತ್ತಾ ಅದಕ್ಕೆ ಅನುಸಾರವಾಗಿ ಪುಣ್ಯಪಾಪಗಳನ್ನು ಅನುಭವಿಸಬೇಕೆಂಬುದೇ ನಿನ್ನಾಜ್ಞೆಯಲ್ಲವೇ ?

೧೬. ಅದೇರೀತಿ ನನ್ನ ಜನ್ಮಸಿದ್ಧವಾದ ಸ್ವಭಾವಾನುಗುಣವಾಗಿ ನಡೆದು ಕೊಂಡ ನನಗೆ, ಹೀಗೆ ನೀನು ಶಾಪಕೊಡುವುದಾದರೆ ಇನ್ನು ನಾನು ಮಾಡು ವುದೇನು ? ಇದರಲ್ಲಿ ಯಾರ ಅಪರಾಧವೂ ಇಲ್ಲ. (ನನ್ನ ಸ್ವಭಾವದಂತೆ ನಡೆದು ದರಲ್ಲಿ ನನ್ನ ತಪ್ಪಿಲ್ಲ. ನನ್ನಿಂದ ಲೋಕಕ್ಕೆ ತೊಂದರೆಯಾಯಿತೆಂದು ಶಾಪ ಕೊಟ್ಟಿರುವ ನಿನ್ನ ಆಚರಣೆಯಲ್ಲೂ ತಪ್ಪಿಲ್ಲ) ಎಂದಿತು.

೧೭. ಈ ಪ್ರಕಾರ ಯುಕ್ತಿಯುಕ್ತವಾದ ದಮನಕದ ಮಾತನ್ನು ಕೇಳಿ ಕಮಲಜನಾದ ಬ್ರಹ್ಮನು ಸಂತೋಷಪಟ್ಟು ಎಲೈ ದಮನಕ ! ಖಿನ್ನನಾಗಬೇಡ ನಿನಗೆ ಪ್ರಿಯವುಂಟುಮಾಡುವೆನು ಕೇಳು.

**ವಸಂತೇ ಸಹಕಾರೋತ್ಥಮಂಜರೀಪಿಂಜರೇ ಜನೇ ।**
**ಪುಷ್ಪಿತಾಶೋಕಶೋಭಾಢ್ಯೇ ವನೇ ಪುಂಸ್ಕೋಕಿಲಾಕುಲೇ　॥ ೧೮ ॥**

**ತಸ್ಮಿನ್ಕಾಲೇ ಸುರೇಶಾನಾಂ ಶಿರಾಂಸ್ಯಾಕ್ರಮ್ಯ ಲೀಲಯಾ ।**
**ಸ್ಥಾಸ್ಯಸಿ ತ್ವಂ ದಿನಂ ತ್ವೇಕಂ ಯದ್ಯಸ್ಯ ವಿಹಿತಂ ಹಿತಂ　॥ ೧೯ ॥**

**ಯೇ ತ್ವಾಮಾರೋಪಯಿಷ್ಯಂತಿ ದಾನಮಾನಪುರಸ್ಸರಾಃ ।**
**ಸುರಾಣಾಂ ತೇ ಭವಿಷ್ಯಂತಿ ಸದೈವ ಸುಖಿನೋ ನರಾಃ　॥ ೨೦ ॥**

**ಸರ್ವದೈವ ಶಿವಸ್ಯೇಷ್ಟಾ ಪುಣ್ಯಾ ಪಾಪಭಯಾಪಹಾ ।**
**ಪ್ರಸಿದ್ಧಿಂ ಯಾಸ್ಯತಿ ಮಧೌ ದಮನಾಖ್ಯಾ ಚತುರ್ದಶೀ　॥ ೨೧ ॥**

---

೧೮. ವಸಂತಋತುವಿನಲ್ಲಿ ಜನರು ಸಿಹಿಮಾವಿನಮರದ ಹೂಗೊಂಚಲುಗಳನ್ನು ಧರಿಸಿ ಅದರ ಹೊಂಬಣ್ಣದ ಕಾಂತಿಯಿಂದ ಮನೋಹರಾಕಾರವುಳ್ಳವರಾಗಿ, ಅರಳಿದ ಅಶೋಕ ಪುಷ್ಪಗಳಿಂದ ಸೊಂಪಾಗಿರುವ ಉದ್ಯಾನವನಗಳಲ್ಲಿ ಕೋಗಿಲೆಗಳ ಇಂಪಾದ ಧ್ವನಿಯನ್ನು ಕೇಳುತ್ತಾ ಸಂತೋಷದಿಂದ ವಿಹರಿಸುವರು.

೧೯. ಆ ವಸಂತಕಾಲದಲ್ಲಿ ಒಂದುದಿನ ಮಾತ್ರ ನೀನು ದೇವಾಧಿದೇವತೆಗಳ ಶಿರಸ್ಸನ್ನು ಲೀಲೆಯಿಂದ ಅಲಂಕರಿಸಿ ವಿರಾಜಿಸುವಂತೆ ಮಾಡುವೆನು ; ಇದೇ ನಾನು ನಿನಗೆ ಮಾಡುವ ಹಿತಕಾರ್ಯ.

೨೦. ವಸಂತಋತುವಿನ ಚತುರ್ದಶಿಯ ದಿವಸ ಈ ನಿನ್ನ (ದಮನಕ) ಪುಷ್ಪವನ್ನು ಭಕ್ತಿಯಿಂದ ದೇವರಿಗೆ ಸಮರ್ಪಿಸುವವರೂ ಗೌರವಪುರಸ್ಸರವಾಗಿ ದಾನಮಾಡುವವರೂ ದೇವತೆಗಳ ಪ್ರೀತಿಗೆ ಪಾತ್ರರಾಗಿ ಯಾವಾಗಲೂ ಸುಖವಾಗಿರುವರು.

೨೧. ಈ ಪುಷ್ಪವನ್ನು ಸಮರ್ಪಿಸುವ ಕಾರಣದಿಂದ ವಸಂತಚತುರ್ದಶಿಗೆ ದಮನಕ ಚತುರ್ದಶಿಯೆಂದು ಹೆಸರಾಗಿ, ಆ ತಿಥಿಯು ಪಾಪಪರಿಹಾರಕವೂ ಪುಣ್ಯಕರವೂ ಆಗಿ ಸದಾ ಈಶ್ವರನಿಗೆ ಪ್ರಿಯವಾದುದೆಂದು ಪ್ರಸಿದ್ಧಿ ಪಡೆಯುವುದು.

ಏವಮುಕ್ತ್ವಾ ಯಯೌ ಬ್ರಹ್ಮಾ ದಮನೋ ಮಂದರೇ ಗಿರೌ ।
ಉವಾಸ ವಾಸಿತಾಶೇಷಭುವನೋ ಗಂಧಸಂಪದಾ ॥ ೨೨ ॥

ದಿವ್ಯೇ ಗಿರೌ ಗಿರಿಸುತಾದಯಿತಾಧಿವಾಸೇ ।
ರತ್ನಾಂಶುಕಚ್ಛುರಿತಕಾಂಚನಭೂಮಿಭಾಗೇ ॥
ಶಾಪಂ ವರಂ ಚ ಹೃದಯೇ ವಿನಿವೇಶ್ಯ ಶಂಭೋಃ ।
ತತ್ರಾಸ್ಥಿತೋ ದಮನಕೋ ದಮಿತಾಂತರಾತ್ಮಾ ॥ ೨೩ ॥

॥ ಶ್ರೀಕೃಷ್ಣ ಉವಾಚ ॥
ಧರ್ಮರಾಜ ನಿಬೋಧೇದಮಾಂದೋಲಕಮಹೋತ್ಸವಂ ।
ಪ್ರವೃತ್ತನರನಾರೀಕಂ ಪಂಚಮೋಚ್ಚಾರಸುಂದರಂ ॥ ೨೪ ॥

ಸಾನಂದಂ ನಂದನವನೇ ಆರ್ದ್ರಯಾ ಸಹಿತೋ ಯಥಾ ।
ವಿಸ್ಮಯಸ್ಮೇರನಯನೋ ಬಭ್ರಾಮೋದ್ಭ್ರಾಂತಸೌರಭಃ ॥ ೨೫ ॥

---

೨೨. ಈ ಪ್ರಕಾರ ಹೇಳಿ ಬ್ರಹ್ಮನು ತನ್ನ ನಿವಾಸಕ್ಕೆ ಹಿಂತಿರುಗಿದನು ಈ ದಮನಕವು ಮಂದರಪರ್ವತದಲ್ಲಿ ಬೆಳೆಯುತ್ತಾ ತನ್ನ ದಿವ್ಯಪರಿಮಳಸುಗಂಧ ದಿಂದ ಪ್ರಪಂಚವನ್ನೆಲ್ಲಾ ಸುವಾಸನೆ ಮಾಡತೊಡಗಿತು.

೨೩. ಗಿರಿಜಾರಮಣನಾದ ಶಂಕರನಿಗೆ ಆವಾಸಸ್ಥಳವಾಗಿ ರತ್ನಮಯ ವಾದ ವಸ್ತ್ರಗಳಿಂದ ವ್ಯಾಪ್ತವಾದಂತೆ ಭೂಪ್ರದೇಶವುಳ್ಳ ಈ ಮೇರುಪರ್ವತದಲ್ಲಿ ತನಗೆ ಸಂಭವಿಸಿದ ಬ್ರಹ್ಮನ ಶಾಪ ಮತ್ತು ಲಭಿಸಿದ ವರ, ಇವೆರಡನ್ನೂ ಪರಮೇಶ್ವರನ ಸಾನ್ನಿಧ್ಯದಲ್ಲಿ ಅರ್ಪಿಸಿ, ತಾನು ಅಹಂಕಾರವನ್ನು ಬಿಟ್ಟು ಶಾಂತ ಚಿತ್ತದಿಂದ ನಿರಂತರವೂ ಶಿವಧ್ಯಾನ ಮಾಡುತ್ತಾ ಅಲ್ಲಿಯೇ ನೆಲಸಿತು.

೨೪. ಎಲೈ ಧರ್ಮಜನೆ! ನೀನು ಪ್ರಶ್ನೆಮಾಡಿದ ಆಂದೋಳನ (ಉಯ್ಯಾಲೆ) ಮಹೋತ್ಸವ ವಿಚಾರವನ್ನು ಈಗ ಹೇಳುತ್ತೇನೆ ಕೇಳು. ವಸಂತಋತುವಿನಲ್ಲಿ ಸ್ತ್ರೀಪುರುಷರು ಅನ್ಯೋನ್ಯವಾಗಿ ಮಧುರವಾದ ಪಂಚಮಸ್ವರದಿಂದ ಗಾನ ಮಾಡುತ್ತಾ ಆಂದೋಳನ (ಉಯ್ಯಾಲೆ) ಆಡುವರು.

೨೫. ಆ ಋತುವಿನಲ್ಲಿ ಆರ್ದ್ರವಾದ ಲತೆಗಳ ಮೂಲಕ ತನ್ನ ಲೀಲೆಗಳನ್ನು ತೋರಿಸುತ್ತಾ, ಪುಷ್ಪಗಳ ಮೂಲಕ ಸೌರಭವನ್ನು ಹೊರಸೂಸುತ್ತ ಆಶ್ಚರ್ಯ

**ಉನ್ಮಾದಯನ್ ವನೇ ಪುಣ್ಯೇ ವಿದ್ಯಾಧರಗಣಾನ್ ಬಹೂನ್ ।**
**ವಸಂತಸ್ತೌ ನೃತ್ಯಮಾನಾನ್ ಸುರಾಸುರಶತಾರ್ಚಿತಃ ॥ ೨೬ ॥**

**ಸಂತಾನಪಾರಿಜಾತೋತ್ಥಾಂ ಬದ್ಧ್ವಾ ಸ ಮಾಧವೀಲತಾಂ ।**
**ಕಶ್ಚಿದಾಂದೋಲನಂ ಚಕ್ರೇ ಸಮಾಲಿಂಗ್ಯ ಘನಸ್ತನೀಂ ॥ ೨೭ ॥**

**ಗೀತಮಾಂದೋಲಕಾರೂಢಸ್ತದ್ಗಾಯಂತ್ಯಮರಸ್ತ್ರಿಯಃ ।**
**ಯೇನ ಚೋತ್ಪಾದಯಂತಿಸ್ಮ ಮನ್ಮಥಸ್ಯಾಪಿ ಮನ್ಮಥಂ ॥ ೨೮ ॥**

**ತಂ ದೃಷ್ಟ್ವಾಷ್ಟಾಪದನಿಭಾ ಭವಾನೀ ಪ್ರಾಹ ಶಂಕರಂ ।**
**ಕೌತುಕಂ ಮೇ ಸಮುತ್ಪನ್ನಂ ಪಶ್ಯೇಮಾಃ ಶಂಕರ ಪ್ರಭೋ ॥ ೨೯ ॥**

---

ವನ್ನೂ ಮಂದಹಾಸವನ್ನೂ ಸೂಚಿಸುವ ನೇತ್ರಗಳಿಂದ ವಿರಾಜಿಸುತ್ತಿರುವಂತೆ ತೋರುವರು.

೨೬. ಪುಣ್ಯಕರವಾದ ಆ ನಂದನವನದಲ್ಲಿ ಆ ಋತುವಿನಲ್ಲಿ ನೂರಾರು ಮಂದಿ ದೇವದಾನವರಿಂದ ಪೂಜಿತನಾದ ವಸಂತನು, ನರ್ತನಮಾಡುತ್ತಿರುವ ಅನೇಕ ವಿದ್ಯಾಧರ ಸಮೂಹಗಳನ್ನು ಉನ್ಮಾದಗೊಳಿಸುತ್ತಿರುವನು.

೨೭. ಒಬ್ಬ ದೇವತೆಯು ಸಂತಾನವೃಕ್ಷ, ಪಾರಿಜಾತವೃಕ್ಷ ಇವೆರಡಕ್ಕೂ ಮಾಧವೀಲತೆಯನ್ನು ಕಟ್ಟಿಕೊಂಡು ತನ್ನ ಪ್ರೇಯಸಿಯೊಡನೆ ಅದರಲ್ಲಿ ಆಂದೋಲನಮಾಡುತ್ತಾ ಉನ್ನತಸ್ತನವುಳ್ಳ ಆಕೆಯನ್ನು ಆನಂದದಿಂದ ಆಲಿಂಗಿಸುವನು.

೨೮. ಇನ್ನು ಕೆಲವರು ದೇವತಾಸ್ತ್ರೀಯರು ಆಂದೋಳನವಾಡುತ್ತಾ ಇಂಪಾಗಿ ಗಾನಮಾಡಿ ಆ ಮೂಲಕ ಮನ್ಮಥನಿಗೂ ಮನ್ಮಥ ವಿಕಾರವನ್ನುಂಟು ಮಾಡಲು ಉದ್ಯುಕ್ತರಾಗಿರುವರೋ ಎಂಬಂತೆ ವಿಹರಿಸುತ್ತಿರುವರು.

೨೯. ಈ ರೀತಿ ದೇವತಾಸ್ತ್ರೀಯರು ತಮ್ಮ ಕಾಂತರೊಡನೆ ಸ್ವಚ್ಛಂದವಾಗಿ ಆಂದೋಳನವಾಡುತ್ತಾ ಸಂತೋಷವಾಗಿರುವುದನ್ನು ನೋಡಿ, ಭಂಗಾರದಂತೆ ಮೈಬಣ್ಣವುಳ್ಳ ಪಾರ್ವತಿಯು ಪತಿಯಾದ ಶಂಕರನನ್ನು ಕುರಿತು "ಪ್ರಭುವಾದ ಶಂಕರನೇ! ಇವರು ಕ್ರೀಡಿಸುವ ಆಂದೋಲನೋತ್ಸವವನ್ನು ನೋಡಿ ನನಗೂ ಅದರಲ್ಲಿ ಕುತೂಹಲ ಹುಟ್ಟಿದೆ.

**ಆಂದೋಲಕಂ ಮಮಕೃತೇ ಕಾರಯಸ್ವ ಸ್ವಲಂಕೃತಂ ।**
**ತ್ವಯಾ ಸಹಾಂದೋಲಯೇಯಂ ಯಥಾ ಚೈತೇ ತ್ರಿಲೋಚನ ॥ ೩೦ ॥**

**ತದ್ಗೌರೀವಚನಂ ರಮ್ಯಂ ಶ್ರುತ್ವಾ ಗೋವೃಷಭಧ್ವಜಃ ।**
**ಸದ್ದೋಲಾಂ ಕಾರಯಾಮಾಸ ಸಮಾಹೂಯ ಮಹಾಸುರಾನ್ ॥ ೩೧ ॥**

**ಸ್ತಂಭದ್ವಯಂ ರೋಪಯಿತ್ವಾ ಇಷ್ಟಾಪೂರ್ತಮಯಂ ದೃಢಂ ।**
**ಸತ್ಯಂ ಚೈವೋಪರಿತತಂ ಶ್ರೇಷ್ಠಂ ಕಾಷ್ಠಮಕಲ್ಪಯತ್ ॥ ೩೨ ॥**

**ವಾಸುಕಿಂ ದಂಡಕಸ್ಥಾನೇ ಬದ್ಧ್ವಾ ತಾಂತವಸಪ್ರಭಂ ।**
**ತತ್ಫಣಾಮಂತರಾಪೀಠಂ ಕೃತವಾನ್ಮಣಿಮಂಡಿತಂ ॥ ೩೩ ॥**

**ಕೃಮಿಕಾರ್ಪಾಸಕೌಶೇಯವಸ್ತ್ರೈಃ ಸಂವೇಷ್ಟಿತಂ ನವೈಃ ।**
**ಸ್ರಗ್ದಾಮಲಂಬಿತಪ್ರಾಂತಮಣಿಮೌಕ್ತಿಕಶೇಖರಂ ॥ ೩೪ ॥**

---

೩೦. ಸ್ವಾಮಿ ತ್ರಿಲೋಚನನೇ! ಚನ್ನಾಗಿ ಅಲಂಕರಿಸಿದ ಒಂದು ಆಂದೋಲನವನ್ನು ನನಗೋಸ್ಕರ ಮಾಡಿಸಿಕೊಡು. ನಾನು ನಿನ್ನೊಡನೆ ಅದರಲ್ಲಿ ಮಂಡಿಸಿ ಈ ದೇವಾಂಗನೆಯರಂತೆ ವಿಹರಿಸುವೆನು " ಎಂದಳು.

೩೧. ಪ್ರೇಯಸಿಯಾದ ಆ ಗೌರಿಯು ಆಡಿದ ರಮ್ಯವಾದ ಮಾತನ್ನು ಕೇಳಿ ವೃಷಭಧ್ವಜನಾದ ಶಂಕರನು ಆಗ ದೇವತೋತ್ತಮರನ್ನು ಕರೆಯಿಸಿ ಉತ್ತಮವಾದ ಒಂದು ಆಂದೋಲನವನ್ನು ರಚಿಸಿದನು.

೩೨. ಅನಂತರ ಮಹೇಶ್ವರನು ಇಷ್ಟಾ ಮತ್ತು ಪೂರ್ತ ಎಂಬಿವುಗಳನ್ನು ಗಟ್ಟಿಯಾದ ಎರಡು ಕಂಬಗಳನ್ನಾಗಿಯೂ ಸತ್ಯವನ್ನೇ ಎರಡು ಕಂಬಗಳ ಮೇಲೆ ಇರಿಸುವ ಶ್ರೇಷ್ಠವಾದ ತೊಲೆಯನ್ನಾಗಿಯೂ ಮಾಡಿದನು.

೩೩. ತಾಂತವ (ತಾಮ್ರ) ದಂತೆ ಶುಭ್ರವಾದ ಕಾಂತಿಯುಳ್ಳ ವಾಸುಕಿಯನ್ನು ದಂಡಸ್ಥಾನದಲ್ಲಿ (ಕೋಲನ್ನಾಗಿ) ಕಟ್ಟಿ, ನಾಗಮಣಿಗಳಿಂದ ಶೋಭಿಸುವ ಆದಿಶೇಷನ ಹೆಡೆಯ ಮಧ್ಯಭಾಗವನ್ನು ಉತ್ತಮವಾಗಿ ಪೀಠವನ್ನಾಗಿ ಏರ್ಪಡಿಸಿದನು.

೩೪. ಅನಂತರ ಉತ್ತಮವಾದ ಹತ್ತಿಯ ಹೊಸಬಟ್ಟೆ, ಕ್ರಿಮಿಸಂಬಂಧಿಯಾದ ರೇಷ್ಮೆಬಟ್ಟೆ, ಹೂವಿನಹಾರ, ಜೋಲಾಡುತ್ತಿರುವ ಮಣಿಗಳು, ಮುತ್ತಿನಸರ ಇವುಗಳಿಂದ ಆ ಪೀಠವನ್ನು ಅಲಂಕರಿಸಿದನು.

**ರಚಯಿತ್ವಾ ವಿಚಿತ್ರಾಂ ತಾಂ ದೋಲಾಂ ಚೈಲಾಜಿನೋತ್ತರಾಂ |**
**ಸ ಸಿದ್ಧಾಂ ಸಿದ್ಧಗುರವೇ ಗೌರವೇಣ ನ್ಯವೇದಯತ್ || ೩೫ ||**

**ತತ್ರಾರೂಢಸ್ತು ಯೂವತ್ಸ ಸೌಮ್ಯಸೋಮವಿಭೂಷಣಃ |**
**ಮಂದರಂ ದೋಲಯಾಮಾಸ ಪಾರ್ಶ್ವಸ್ಥೈಃ ಪಾರ್ಷದೈಃ ಸಹ || ೩೬ ||**

**ವಾಮಪಾರ್ಶ್ವೇ ತು ವಿಜಯಾ ದಕ್ಷಿಣೇನ ಜಯಾ ಭವೇತ್ |**
**ಚಾಮರಾಕ್ರಾಂತಬಾಹೂ ತೇ ತೇನಾಶ್ಲಿಷ್ಟೇ ನ್ಯವೀಜತಾಂ || ೩೭ ||**

**ಆಂದೋಲಯಂತ್ಯಾ ಪಾರ್ವತ್ಯಾ ಸಹಿತಂ ಸ ಗದಾಕ್ಷರಂ |**
**ಯೇನ ದೇವಾಸುರಸ್ತ್ರೈಣಮಾಸೀದಾನಂದನಿರ್ಭರಂ || ೩೮ ||**

೩೫. ಉತ್ತಮವಾದ ವಸ್ತ್ರಗಳಿಂದ ವಿಚಿತ್ರವಾಗಿರುವ ಆ ಉಯ್ಯಾಲೆಯ ಮೇಲೆ ನಂದೀಶ್ವರನು ಗಜಚರ್ಮ ವ್ಯಾಘ್ರಚರ್ಮ ಇವುಗಳನ್ನು ಹಾಸಿ ಮೃದುವಾಗುವಂತೆ ಮಾಡಿದನು. ಈರೀತಿ ಸಿದ್ಧವಾದ ಆ ಉಯ್ಯಾಲೆಯನ್ನು ಸಿದ್ಧರು ದೇವತೆಗಳು ದಾನವರು ಇವರಿಗೆಲ್ಲಾ ಗುರುವೆನಿಸಿದ ಮಹೇಶ್ವರನಿಗೆ ಗೌರವದಿಂದ ನಿವೇದನಮಾಡಿದನು.

೩೬. ಸೌಮ್ಯನಾದ ಬಾಲಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿದ ಮಹಾದೇವನು, ಮಂದರಪರ್ವತಸ್ವರೂಪವಾಗಿರುವ ಆ ಉಯ್ಯಾಲೆಯಲ್ಲಿ ಕುಳಿತು, ತನ್ನ ಪರಿವಾರಗಣಗಳೊಡನೆ ಮೆಲ್ಲಗೆ ಅದನ್ನು ಆಡಿಸಿದನು.

೩೭. ಆಗ ಮಹೇಶ್ವರನ ಎಡಭಾಗದಲ್ಲಿ ವಿಜಯೆ ಎಂಬ ಸಖಿಯೂ ಬಲಭಾಗದಲ್ಲಿ ಜಯಾ ಎಂಬ ಸಖಿಯೂ, ಕೈಯಲ್ಲಿ ಚಾಮರಗಳನ್ನು ಹಿಡಿದು ಅಪ್ಪಿಕೊಂಡು ಬೀಸುತ್ತಿದ್ದರು.

೩೮. ಹೀಗೆ ಪಾರ್ವತೀದೇವಿಯೊಡನೆ ಮಹಾದೇವನು ಆಂದೋಲನದಲ್ಲಿ ಕುಳಿತು ಮೃದುಮಧುರವಾದ ಆಲಾಪವಾಡುತ್ತಾ ಕ್ರೀಡಿಸಲು ಇದರಿಂದ ಮೂರು ಲೋಕದ ದೇವದಾನವ ಮಾನವರೆಲ್ಲರೂ ಆನಂದಭರಿತರಾದರು.

ಜಗುರ್ಗಂಧರ್ವಪತಯೋ ನನೃತುಶ್ಚಾಪ್ಸರೋಗಣಾಃ ।
ಉಚ್ಛಲತ್ತಾಲವಾದ್ಯಾನಿ ವಾದಯಂತಿಸ್ಮ ಚಾರಣಾಃ ॥ ೩೯ ॥

ಚೇಲುಃ ಕುಲಾಚಲಾಃ ಸರ್ವೇ ಚುಕ್ಷುಭುಃ ಸಪ್ತ ಸಾಗರಾಃ ।
ವವುರ್ವಾತಾಃ ಸನಿರ್ಘಾತಾ ದೇವೇ ದೋಲಾಂ ಸಮಾಸ್ಥಿತೇ ॥ ೪೦ ॥

ಆಲೋಕ್ಯ ವ್ಯಾಕುಲಂ ಲೋಕಂ ದೇವಾಃ ಶಕ್ರಪುರೋಗಮಾಃ ।
ಉಪೇತ್ಯ ಪ್ರಣಿಪತ್ಯೋಚುಃ ಸರ್ವಪಾಪಹರಂ ಪರಂ ॥ ೪೧ ॥

ಉಪಾರಮಸ್ವ ಭಗವನ್ ಭವತಃ ಕ್ರೀಡಯಾನಯಾ ।
ಜಗದ್ವ್ಯಾಪದ್ಯತೇ ದೇವೇ ಚಲಿತಃ ಸಾಗರಶ್ಚ ಯತ್ ॥ ೪೨ ॥

---

೩೯. ಆ ಸಮಯದಲ್ಲಿ ಗಂಧರ್ವಶ್ರೇಷ್ಠರು ಗಾನಮಾಡುತಿದ್ದರು. ಅಪ್ಸರ ಸ್ತ್ರೀಗಣವು ನರ್ತನಮಾಡುತ್ತಿದ್ದಿತು. ಚಾರಣರು ಗಂಭೀರವಾದ ತಾಳ, ವಾದ್ಯ ಇವುಗಳನ್ನು ಬಾರಿಸುತ್ತಿದ್ದರು.

೪೦. ಮಹೇಂದ್ರ ಮಲಯ, ಮುಂತಾದ ಏಳು ಕುಲಪರ್ವತಗಳೂ ಸಂತೋಷದಿಂದ ತಮ್ಮ ಸ್ಥಳಬಿಟ್ಟು ಸಂಚಾರ ಮಾಡತೊಡಗಿದವು. ಲವಣ ಕ್ಷೀರ ಮುಂತಾದ ಏಳು ಮಹಾಸಾಗರಗಳೂ ಸಂತೋಷದಿಂದ ಉಕ್ಕಿ ಕ್ಷುಭಿತ ವಾದುವು. ಮಾರುತವು ತಡೆಯಿಲ್ಲದೆ ಬೀಸಲು ಆರಂಭಿಸಿತು.

೪೧. ಈರೀತಿ ಆನಂದಾತಿರೇಕದಿಂದ ಎಲ್ಲೆಮೀರಿ ಪ್ರವರ್ತಿಸುತ್ತಿರುವ ಪರ್ವತಗಳು, ಸಮುದ್ರಗಳು, ವಾಯುಗಳು ಇವುಗಳಿಂದ ಲೋಕವೆಲ್ಲಾ ಅಲ್ಲೋಲಕಲ್ಲೋಲವಾಗುತ್ತಿರುವುವನ್ನು ನೋಡಿ, ಇಂದ್ರನೇ ಮೊದಲಾದ ದೇವತೆಗಳೆಲ್ಲಾ ಬಂದು, ಸಮಸ್ತ ಪಾಪಸಂಹಾರಕನೂ ಶ್ರೇಷ್ಠನೂ ಆದ ಶಿವನ ಸಮೀಪವನ್ನೈದಿ ನಮಸ್ಕರಿಸಿ ಇಂತೆಂದರು.

೪೨. ಸ್ವಾಮಿ ಭಗವಂತ! ಈ ನಿನ್ನ ಆಂದೋಲನಕ್ರೀಡೆಯನ್ನು ಸಾಕು ಮಾಡು. ಇದರಿಂದ ಪ್ರಪಂಚವೆಲ್ಲಾ ನಾಶಹೊಂದುತ್ತಿದೆ. ಸಾಗರಗಳು ಎಲ್ಲೆ ಮೀರಿಹರಿಯುತ್ತಿದೆ. ಕೃಪೆಯಿಟ್ಟು ರಕ್ಷಿಸು. ಎಂದು ಪ್ರಾರ್ಥಿಸಿದರು.

ಗೀರ್ವಾಣಗೀರ್ಭಿಸ್ಸಂಹೃಷ್ಟೋ ಶಂಕರೋ ಲೋಕಶಂಕರಃ |
ಸಮುತ್ಪಪಾತ ದೋಲಾತಃ ಪ್ರಹರ್ಷೋತ್ಫುಲ್ಲಲೋಚನಃ || ೪೩ ||

ಉವಾಚ ವಚನಂ ಪಾರ್ಥ ಸುರಸಾರ್ಥಸ್ಯ ಪಶ್ಯತಃ |
ಸಾನುಕಂಪಂ ಸುಲಲಿತಂ ವಿಸ್ಫುಟಾರ್ಥಪದಾಕ್ಷರಂ || ೪೪ ||

|| ಶ್ರೀಮಹಾದೇವ ಉವಾಚ ||

ಅದ್ಯ ಪ್ರಭೃತಿ ಯೋ ದೋಲಾಕ್ರೀಡಾಂ ಪುಷ್ಕರಿಣೀತಟೇ |
ವಸಂತೇ ಕಾರಯಿಷ್ಯಂತಿ ಮಂಡಿತೇ ತ್ರಿದಶಾಂ ಗಣೇ || ೪೫ ||

ನೇತ್ರಪಟ್ಟಾಪಟಚ್ಛನ್ನಾಂ ಪದ್ಮರಾಗವಿಭೂಷಿತಾಂ |
ಆತಪತ್ರೇಣ ಸಂಯುಕ್ತಾಂ ವಿನ್ಯಸ್ತಕನಕಾಂಡಕಾಂ || ೪೬ ||

---

೪೩. ದೇವತೆಗಳು ಈ ಪ್ರಕಾರ ಸ್ತುತಿಸಲಾಗಿ ಲೋಕಗಳಿಗೆ ಸುಖವನ್ನುಂಟುಮಾಡತಕ್ಕ ಶಿವನು ಸಂತುಷ್ಟನಾಗಿ ಹರ್ಷಾತಿರೇಕದಿಂದ ಅರಳಿದ ಕಣ್ಣುಳ್ಳವನಾಗಿ ಕೂಡಲೇ ಉಯ್ಯಾಲೆಯಿಂದ ಕೆಳಕ್ಕಿಳಿದನು.

೪೪. ಮತ್ತು ದೇವತೆಗಳೆಲ್ಲರೂ ನೋಡುತ್ತಿರುವಂತೆಯೇ ದಯಾಪೂರ್ವಕವಾಗಿ ಸ್ಪಷ್ಟವರ್ಣೋಚ್ಚಾರಣೆಯುಳ್ಳ ಮೃದುವಾದ ಮಾತುಗಳಿಂದ ಈ ಪ್ರಕಾರ ಹೇಳಿದನು.

೪೫. ಮಹಾದೇವನು ಹೇಳುತ್ತಾನೆ—ಇದು ಮೊದಲುಗೊಂಡು ಪ್ರತಿವರ್ಷದ ವಸಂತಕಾಲದಲ್ಲಿ ಪುಷ್ಕರಿಣಿಯ ದಡದಲ್ಲಿ ಈ ಉತ್ಸವವನ್ನು ಮಾಡಬೇಕು.

೪೬. ·ದೇವತಾಸಮೂಹವನ್ನು ಪ್ರತಿಷ್ಠಾಪನೆ ಮಾಡಿ ಆಂದೋಳನವನ್ನು ರಚಿಸಿ, ನೇತ್ರಾವಳಿವಸ್ತ್ರಗಳಿಂದ ಅದನ್ನು ಆವರಿಸಿ, ಪದ್ಮರಾಗಮಣಿಯಿಂದ ಭೂಷಿತವಾಗುವಂತೆ ಮಾಡಿ, ಛತ್ರಿಗಳನ್ನೂ ಸುವರ್ಣಗೋಳಕಗಳನ್ನೂ ಮೇಲ್ಗಡೆ ವಿನ್ಯಾಸಮಾಡಬೇಕು.

ವಿಚಿತ್ರಾಭರಣಾಭಾಭಿರಾಭಾಸಿತದಿಗಂತರಾಂ ।
ತಾರಕಾಶಾಂತಚಿತ್ರಾಂಗಪುಷ್ಪಮಾಲಾಮನೋರಮಾಂ ॥ ೪೭ ॥

ಮಾಲಾಂ ವಿದ್ಯಾಧರಾಕ್ರಾಂತಾಂ ಪ್ರಾಂತರೋಪಿತ ದರ್ಪಣಾಂ ।
ಛತ್ರಚಾಮರಸಂಛನ್ನಾಂ ಯಥಾಶಕ್ತ್ಯಾಪ್ಯಲಂಕೃತಾಂ ॥ ೪೮ ॥

ಅಗ್ನಿಕಾರ್ಯಂ ತತಃ ಕೃತ್ವಾ ಕ್ಷಿಪ್ತ್ವಾ ಚೈವ ದಿಶಾಂ ಬಲಿಂ ।
ತಸ್ಯಾಮಾರೋಪಯೇದ್ದೇವಮಿಷ್ಟಹೃಷ್ಟಜನಾವೃತಃ ॥ ೪೯ ॥

ಮೂಲಮಂತ್ರೇಣ ದೇವಾನಾಂ ಪ್ರೋಕ್ತಂ ದೋಲಾಧಿರೋಹಣಂ ।
ಪಾರ್ಶ್ವಸ್ಥೋ ಬ್ರಾಹ್ಮಣೋ ವಿದ್ವಾನ್ ಪಠೇದ್ವಾ ಮಂತ್ರಮುತ್ತಮಂ ॥

ಗಂಭೀರಾಂತರನಿರ್ಘೋಷೈರ್ಲಲನಾನಾಂ ಚ ನಿಸ್ವನೈಃ ।
ಸ್ತುತಿಮಂಗಲಶಬ್ದೈಶ್ಚ ಪುಷ್ಪಧೂಪಾಧಿವಾಸಿತಾಂ ॥ ೫೦ ॥

---

೪೭. ವಿಚಿತ್ರವಾದ ಆಭರಣಗಳನ್ನೂ, ದಿಗಂತವನ್ನು ಪ್ರಕಾಶಗೊಳಿಸು ವಂತಹ ಪ್ರಕಾಶವುಳ್ಳ ತಾರಕೆಗಳಿಂದ ಶಾಂತವೂ, ಚಿತ್ರವೂ ಆಗಿರುವಂತೆ ರಮ್ಯ ವಾದ ಪುಷ್ಪಮಾಲೆಗಳನ್ನೂ ಅಲಂಕರಿಸಬೇಕು.

೪೮. ಸುತ್ತಲೂ ವಿದ್ಯಾಧರರು ಮಾಲೆಗಳನ್ನು ಹಿಡಿದು ಸೇವಿಸುವಂತೆ ಅಲಂಕರಿಸಿ, ಅಕ್ಕಪಕ್ಕಗಳಲ್ಲಿ ದರ್ಪಣಗಳನ್ನು ಇಟ್ಟು, ಛತ್ರಿ ಚಾಮರಗಳು ಇವುಗಳಿಂದ ಯಥಾಶಕ್ತಿ ಉಯ್ಯಾಲೆಯನ್ನು ಅಲಂಕರಿಸಬೇಕು.

೪೯-೫೦. ಬಳಿಕ ಅಗ್ನಿಯಲ್ಲಿ ಹೋಮಾದಿಗಳನ್ನು ನೆರವೇರಿಸಿ, ಅಷ್ಟ ದಿಕ್ಕುಗಳಲ್ಲೂ ಬಲಿಪ್ರದಾನಮಾಡಿ ಜನಗಳೆಲ್ಲರೂ ಸಂಭ್ರಮದಿಂದ ಸುತ್ತಲೂ ಸೇರಿರುವಲ್ಲಿ ಯಥೋಕ್ತರೀತ್ಯಾ ಮೂಲಮಂತ್ರಪೂರ್ವಕವಾಗಿ ದೇವರನ್ನು ಉಯ್ಯಾಲೆಯಲ್ಲಿ ಕೂರಿಸುವುದು ಅಲ್ಲದೆ ಆ ಕಾಲದಲ್ಲಿ ಪಾರ್ಶ್ವದಲ್ಲಿ ವಿದ್ವಾಂಸ ನಾದ ವಿಪ್ರನು ನಿಂತು ಶ್ರೇಷ್ಠವಾದ ಮಂತ್ರಪಠನಮಾಡಬೇಕು.

೫೧. ಗಂಭೀರವಾದ ಗಾನಧ್ವನಿ, ಲಲನೆಯರ ಹಾಡಿನಶಬ್ದ, ಸ್ತುತಿಕಾರರ ಮಂಗಲಪಾಠಶಬ್ದಗಳು, ಇವೆಲ್ಲಾ ಆಗುತ್ತಿರಲು, ಆ ಸ್ಥಳವೆಲ್ಲಾ ಪುಷ್ಪ, ಧೂಪ ಮುಂತಾದುವುಗಳಿಂದ ಸುವಾಸಿತವಾಗುವಂತೆ ಮಾಡಬೇಕು.

**ಏತಸ್ಮಿನ್ನಂತರೇ ನಾರೀಂ ದೋಹನಾಯ ನಿಕುಟ್ಟಿಕಾಂ ।**
**ಪ್ರವೇಶಯೇತ್ಕುಂಕುಮಾಢ್ಯಾಂ ಕ್ರೀಡಾವರ್ಣಪ್ರಿಯೈಃ ಸಹ ॥ ೫೨ ॥**

**ಸುವರ್ಣಶೃಂಗಿಣಾ ಪ್ರೋಕ್ಷ್ಯಂ ಸ್ಮಿತದಂತಾಂಶುಕರ್ಬುರಂ ।**
**ಲಗಮಾನಂ ಜಲಂ ಚಾಂಗೇ ಕಸ್ಯ ನ ಸ್ಯಾತ್ಸುಖಪ್ರದಂ ॥ ೫೩ ॥**

**ಜಲಸಂಕ್ಲಿನ್ನವಸನೋ ರಶನಾದಾಮಮಂಡಿತಃ ।**
**ಕಂಬುಗ್ರೀವೋಲ್ಲಸರ್ ಸರ್ವೋ ಬಭೂವ ಗಣಿಕಾಗಣಃ ॥ ೫೪ ॥**

**ಕುಂಕುಮಕ್ಷೋದತಾಂಬೂಲಪುಷ್ಪಮಾಲಾಕುಲೋ ಜನಃ ।**
**ತಾಂ ವಿಹಾಯ ಜಲಕ್ರೀಡಾಂ ನಾನ್ಯಸ್ಯಾಂ ವಿದಧೇ ಮನಃ ॥ ೫೫ ॥**

---

೫೨. ಈ ಸಂದರ್ಭದಲ್ಲಿ ಓಕುಳಿ (ಕೇಸರಿ) ಯನ್ನು ಧರಿಸಿದ ಸ್ತ್ರೀಯೂ ಕ್ರೀಡಾರ್ಥವಾಗಿ ವರ್ಣವಸ್ತ್ರವನ್ನು ಧರಿಸಿದ ಸ್ತ್ರೀಯರೂ ದೋಹನ ಕ್ರೀಡೆಗಾಗಿ ಉಯ್ಯಾಲೆಯ ಸಮ್ಮುಖದ ನಿಕುಟ್ಟಿಕೆಯಲ್ಲಿ ಪ್ರವೇಶಿಸುವರು.

೫೩. ಸುವರ್ಣಶೃಂಗಿಯಾದ ಒಂದುವ್ಯಕ್ತಿಯು ತಾನು ನಗುವಾಗಿನ ಹಲ್ಲಿನ ಕಾಂತಿಯಿಂದ ಚಿತ್ರವರ್ಣವಾಗುತ್ತಿರಲು ಶರೀರದಲ್ಲಿ ಜಲವು ಚಿಮ್ಮುತ್ತಿರಲು ಬಾಯಿಂದ ಗೀತಾದಿಗಳು ಉಕ್ತವಾಗುವುದನ್ನು ನೋಡಿದರೆ ಎಂಥವರಿಗೂ ಸಂತೋಷವಾಗುವುದು.

೫೪. ವೇಶ್ಯಾಸಮೂಹವು ಸೊಂಟದಲ್ಲಿ ಡಾಬನ್ನು ಧರಿಸಿ ಅಲಂಕೃತರಾಗಿ ಮೈಗೆ ಅಂಟಿಕೊಂಡಂತಿರುವ ಒದ್ದೆಯಾದ ಬಟ್ಟೆಯಿಂದಲೂ ಶಂಖದಂತೆ ಇರುವ ಕುತ್ತಿಗೆಯಿಂದಲೂ ಕೂಡಿರಲು ನೋಟಕ್ಕೆ ಉಲ್ಲಾಸಯುಕ್ತವಾಗಿರುವುದು.

೫೫. ಪುರುಷರು ಕೇಸರಿಗಂಧವನ್ನು ಲೇಪಿಸಿಕೊಂಡು, ತಾಂಬೂಲ ಹಾಕಿಕೊಂಡು, ಪುಷ್ಪಮಾಲೆಯನ್ನು ಧರಿಸಿಕೊಂಡು, ಜಲಕ್ರೀಡೆ ಹೊರತಾಗಿ ಇನ್ನು ಯಾವುದರಲ್ಲೂ ಮನಸ್ಸು ಹೋಗದೆ ಕುತೂಹಲಾವಿಷ್ಟರಾಗುವರು.

ಹೀತಶೀತಜಲಾಘಾತತಾಡಿತೋಽಪಿ ಜನಃ ಸುಖಂ ।
ಮನ್ಯತೇ ನಿಯತಃ ಕೋಽಪಿ ಪ್ರಭಾವೋಽಯಮನಂಗಜಃ ॥ ೫೬ ॥

ಏವಂ ಯೇ ತು ಗಮಿಷ್ಯಂತಿ ನರಾ ವರ್ತ್ಮ ಕೃತಯಾ ಗತಂ ।
ನೀರುಜಸ್ತೇ ಭವಿಷ್ಯಂತಿ ಸುಖಿತಾಃ ಶರದಾಂ ಶತಂ ॥ ೫೭ ॥

ಪುತ್ರಪೌತ್ರಸಮಾಯುಕ್ತಾ ಧನಧಾನ್ಯಸಮಾಯುತಾಃ ।
ವಿಪೃತ್ಯ ಸುಖಸಂಪತ್ತೌ ತತೋ ಯಾಸ್ಯಂತಿ ಮತ್ಪುರಂ ॥ ೫೮ ॥

ಪ್ರಾಪ್ತೇ ವಸಂತಸಮಯೇ ಸುರಸತ್ತಮಾನಾ-
ಮಾಂದೋಲನಂ ಸುರವರಾನನುಕುರ್ವತೇ ಯೇ ।

---

೫೬. ಹಳದಿಯಾಗಿಯೂ ತಣ್ಣಗೂ ಇರುವ ಓಕುಳಿ ತುಂಬಿದ ಜಲ ಯಂತ್ರದಿಂದ ಬಲವಾದ ಏಟು ಬೀಳುತ್ತಿದ್ದರೂ ಇದನ್ನು ಜನರು ನಿಜವಾಗಿ ಸುಖವೆಂದೇ ಭಾವಿಸುವರು. ಹೀಗಾಗಲು ಇದೊಂದು ಮನ್ಮಥನ ಪ್ರಭಾವವಿರ ಬೇಕೆಂದು ತೋರುತ್ತಿತ್ತು.

೫೭-೫೮. ಯಾವ ಮನುಷ್ಯರು ಈ ರೀತಿ ಆಂದೋಳನೋತ್ಸವವನ್ನು ಏರ್ಪಡಿಸುವ ಈ ಮಾರ್ಗದಲ್ಲಿ ಹಿಂದೆ ನಡೆದಿದ್ದರೂ ಮುಂದೆ ನಡೆದರೂ ಅವರು ರೋಗಾದ್ಯುಪದ್ರವರಹಿತರಾದ ಮಕ್ಕಳು ಮೊಮ್ಮಕ್ಕಳುಗಳಿಂದೊಡಗೂಡಿ ಧನ ಧಾನ್ಯ ಸಮೃದ್ಧಿವುಳ್ಳವರಾಗಿ ಸುಖಸಂಪತ್ತುಗಳನ್ನು ಯಥೇಚ್ಛವಾಗಿ ಅನುಭವಿ ಸುತ್ತಾ ನೂರಾರುವರ್ಷಕಾಲ ಬಾಳಿಬದುಕಿ ಅನಂತರ ನನ್ನ(ಶಿವ)ಲೋಕಕ್ಕೆ ಬರುತ್ತಾರೆ.

೫೯. ವಸಂತಕಾಲ ಪ್ರಾಪ್ತವಾಗುತ್ತಲೆ ದೇವತಾಶ್ರೇಷ್ಠರನ್ನು ಅನುಕರಿಸಿ ದೇವೋತ್ತಮರಿಗೆ ಆಂದೋಳನೋತ್ಸವವನ್ನು ಯಾರು ಮಾಡಿಸುವರೋ ಅವರು ಭೂಲೋಕದಲ್ಲಿ ನರಜನ್ಮವೆಂಬ ವೃಕ್ಷದ ಸವಿಯಾದ ಫಲವನ್ನು ಹೊಂದುವರು.

**ತೇ ಪ್ರಾಪ್ನುವಂತಿ ಭುವಿ ಜನ್ಮತರೋಃ ಫಲಾನಿ ।**
**ದುಃಖಾರ್ಣವಾತ್ಕುಲಶತಾನ್ಯಪಿ ತಾರಯಂತಿ ॥ ೫೯ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ಆಂದೋಲಕವಿಧಿವರ್ಣನಂ ನಾಮ ತ್ರಯಸ್ತ್ರಿಂಶದುತ್ತರಶತತಮೋಽಧ್ಯಾಯಃ.**



---

ತಮ್ಮ ವಂಶದ ನೂರಾರು ತಲೆಮಾರಿನವನ್ನೂ ದುಃಖಸಮುದ್ರದಿಂದ ಉದ್ಧಾರ ಮಾಡುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಆಂದೋಳಕ
ವಿಧಿವರ್ಣನೆಯೆಂಬ ನೂರಮೂವತ್ತಮೂರನೆಯ
ಅಧ್ಯಾಯವು ಮುಗಿದುದು.

|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣ
## ಉತ್ತರಪರ್ವಣಿ
## ಚತುಸ್ತ್ರಿಂಶದುತ್ತರಶತತಮೋಽಧ್ಯಾಯಃ

|| ಶ್ರೀಕೃಷ್ಣ ಉವಾಚ ||

ರಥಯಾತ್ರಾವಿಧಾನಂ ತೇ ಕಥಯಾಮಿ ಯುಧಿಷ್ಠಿರ ।
ಸ್ಥಿರೋ ಭೂತ್ವಾ ನಿಬೋಧೇದಂ ತ್ವಂ ಹಿ ಮೂರ್ತವಿದಾಂ ವರಃ || ೧ ||

ಚೈತ್ರೇ ತ್ರಿನೇತ್ರಸಂಭೂತಮಲಯಾಖ್ಯಮಹಾಗಿರೌ ।
ಪ್ರವಹತ್ಪವನಧ್ವಾನಪ್ರೇಂಖೋಲಿತ ಲತಾಚಯೇ || ೨ ||

ಏತಸ್ಮಿನ್ನೇವ ಕಾಲೇ ತು ಭ್ರಮಮಾಣೋ ಯದೃಚ್ಛಯಾ ।
ನಾರದಃ ಶಾರದಾಕಾನ್ತಾಚ್ಛಿವಲೋಕೇ ಸಮಾಯಯೌ || ೩ ||

---

## ನೂರಮೂವತ್ತನಾಲ್ಕನೆಯ ಅಧ್ಯಾಯ

೧. ಶ್ರೀಕೃಷ್ಣನು ಹೇಳುತ್ತಾನೆ—ಮೂರ್ತಜ್ಞರಲ್ಲಿ ಶ್ರೇಷ್ಠನಾದ ಎಲೈ ಯುಧಿಷ್ಠಿರನೆ ! ನಿನಗೆ ರಥಯಾತ್ರಾ ವಿಧಾನವನ್ನು ಹೇಳುತ್ತೇನೆ. ಸ್ಥಿರಮನಸ್ಸುಳ್ಳವನಾಗಿ ಕೇಳಿ ತಿಳಿದುಕೋ.

೨. ತ್ರಿನೇತ್ರನಿಂದ ಉತ್ಪನ್ನವಾದ ಮಲಯವೆಂಬ ಮಹಾಪರ್ವತದಲ್ಲಿ ಚೈತ್ರಮಾಸದಲ್ಲಿ ಗಾಳಿಬೀಸುತ್ತಿರುವ ಧ್ವನಿಯಿಂದ ಕೂಡಿ ಲತಾಸಮೂಹಗಳು ತೂಗಾಡುತ್ತಿದ್ದವು.

೩. ಮನಬಂದಕಡೆ ಸುತ್ತುವ ತ್ರಿಲೋಕಸಂಚಾರಿಯಾದ ನಾರದನು ಒಂದಾನೊಂದು ದಿವಸ ಬ್ರಹ್ಮಲೋಕದಿಂದ ಹೊರಟು ಶಿವಲೋಕಕ್ಕೆ ಬಂದನು.

ದೃಷ್ಟ್ವಾಽಪೂರ್ವಂ ಶಿವಂ ಶಾಂತಂ ಸುರೇಶೈಸ್ಸರ್ವತೋ ವೃತಂ ।
ಪ್ರಣಮ್ಯೋಪಾವಿಶದ್ವಿಪ್ರಃ ಪುರತಃ ಕೇಶವೇಶಯೋಃ ॥ ೪ ॥

ತಮುಪಾಸೀನಮಾಲಕ್ಷ್ಯ ಭಗವಾನ್ ಭಗನೇತ್ರಹಾ ।
ಪಪ್ರಚ್ಛಾಛ್ಛಾದಿತಮನಾಃ ಕುತಶ್ಚಾಗಮ್ಯತೇ ಪುನಃ ॥ ೫ ॥

॥ ಶ್ರೀ ನಾರದ ಉವಾಚ ॥

ಶಿವ ಕಾಮಂ ಚ ತಂ ವಿದ್ಧಿ ದಗ್ಧಂ ಮಾ ವಿಬುಧೋತ್ತಮ ।
ವಸಂತೋ ನಾಮ ಕೋಽಪ್ಯೇಷ ಕಾಮಸ್ಯ ದಯಿತಃ ಸಖಾ ॥ ೬ ॥

ಮಲಯಾನಿಲಯುಕ್ತೇನ ತೇನ ವಿಶ್ವಂ ವಶೀಕೃತಂ ।
ಸಹಕಾರಕರೀಂದ್ರಸ್ಥಂ ಕೃತ್ವಾ ಕೋಕಿಲಡಿಂಡಿಮಂ ॥ ೭ ॥

ಘೋಷಯಾಮಾಸ ವಿಜಯಂ ಮನ್ಮಥಸ್ಯ ಪುರೇಪುರೇ ।
ಶಶಾಂಕಶೇಖರಃ ಕೋಽಯಂ ಕೋಽಯಂ ಶಂಖಗದಾಧರಃ ॥ ೮ ॥

---

೪. ಹೀಗೆ ಬಂದ ನಾರದನು, ಶಾಂತನೂ ಮಂಗಳಕರನೂ ಎನಿಸಿ ಸುರಾಧೀಶರಿಂದ ಆವೃತನಾಗಿ ಕುಳಿತಿದ್ದ ಪರಮೇಶ್ವರರನ್ನು ಕಂಡು ನಮಸ್ಕರಿಸಿ ಶಿವ ವಿಷ್ಣುಗಳ ಸಮ್ಮುಖದಲ್ಲಿ ಕುಳಿತುಕೊಂಡನು.

೫. ದಕ್ಷಾಧ್ವರಕಾಲದಲ್ಲಿ ಭಗನೆಂಬ ಸೂರ್ಯನ ನೇತ್ರವನ್ನು ಭೇದಿಸಿದವನೂ ಷಡ್ಗುಣೈಶ್ವರ್ಯಯುಕ್ತನೂ ಆದ ಶಿವನು ಆ ನಾರದನನ್ನು ನೋಡಿ-ತನ್ನ ಮನಸ್ಸಿನ ಇಂಗಿತ ತೋರ್ಪಡಿಸದೆ ಏನು ಬಂದಿರಿ? ಎಂದು ಪ್ರಶ್ನೆಮಾಡಿದನು.

೬. ನಾರದನು ಹೇಳುತ್ತಾನೆ—ಸರ್ವಜ್ಞನೆನಿಸಿ ಶ್ರೇಷ್ಠನಾದ ಪರಮೇಶ್ವರನೇ! ಕಾಮನು ದಗ್ಧನಾದನೆಂದು ನೀನು ಸರ್ವಥಾ ಭಾವಿಸಬೇಡ. ಕಾಮನಿಗೆ ಪ್ರಿಯಸ್ನೇಹಿತನಾದ ಈ ವಸಂತನಿಲ್ಲವೇ ?

೭. ಮಲಯಮಾರುತನಿಂದೊಡಗೂಡಿ ಅವನು ಪ್ರಪಂಚವನ್ನೆಲ್ಲಾ ತನ್ನ ವಶಪಡಿಸಿಕೊಂಡಿದ್ದಾನೆ. ಸಿಹಿಮಾವಿನಮರದ ಮೇಲೆ ಕೋಗಿಲೆಯು ಕುಳಿತು ಧ್ವನಿಮಾಡುತ್ತಿದ್ದರೆ ಆನೆಯ ಮೇಲೆ ನಗಾರಿಯನ್ನಿಟ್ಟು ಬಾರಿಸುತ್ತಾ.

೮. ಪ್ರತಿಯೊಂದು ಪುರವಲ್ಲಿಯೂ ಮನ್ಮಥನ ವಿಜಯೋತ್ಸವವನ್ನು ಸಾರಿ ಹೇಳುವಂತಿದೆ. ಅವರ ಮುಂದೆ ತ್ರಿಲೋಕಪ್ರಭುವಾದ ಚಂದ್ರಶೇಖರನೂ ಶಂಖಚಕ್ರಗದಾಧರನಾದ ವಿಷ್ಣುವೂ ಯಾವ ಲಕ್ಷ್ಯ.

ಕೋಽಯಂ ಚ ಡಿಂಬೋ ವಾ ಬ್ರಹ್ಮಾ ಕಾಮಸ್ತ್ರಿಜಗತಾಂ ಪ್ರಭುಃ ।
ಪ್ರಾಯಃ ಕ್ರೀಡಾರತಿರ್ಲೋಕೋ ವಸಂತವಚನಾತ್ಮನಃ ॥ ೯ ॥

ಊರ್ಧ್ವಬಾಹುಸ್ತು ನರ್ನರ್ತಿ ತಾಲದತ್ತಪದಕ್ರಮಃ ।
ವ್ಯವಸಾಯಂ ನ ಗಚ್ಛಂತಿ ಯೇ ಸಂಹೃತ್ಯ ವನಾತರಂ ॥ ೧೦ ॥

ಗಾಯಂತಶ್ಚ ಪರೀಹ್ಯಸ್ತಾಸ್ತೇ ಚಾಪ್ಯಾಯಾಂತಿ ಯಾಂತಿ ಚ ।
ಗೋಪ್ಯಸೀಮಾಂತರಗತಾಃ ಕ್ಷೇತ್ರಸ್ಥಾನಸ್ಯ ರಕ್ಷಿಣಃ ॥ ೧೧ ॥

ತೇಽಪಿ ಗಾಯಂತಿ ನೃತ್ಯಂತಿ ಹಸಂತಿ ಸ್ಮರತಾರಕಾಃ ।
ಕರಸ್ಯ ತಾಡನೇಽತ್ಯರ್ಥಂ ಮುರಜೋ ಘುರ್ಘರಾಯತೇ ॥ ೧೨ ॥

---

೯. ಬಾಲಕನಾದ ಬ್ರಹ್ಮನು ತಾನೆ ಲಕ್ಷ್ಯವೇ? ಇವರೆಲ್ಲಾ ಎಲ್ಲಿಯ ಪ್ರಭುಗಳು? ಮೂರುಲೋಕಗಳಿಗೂ ಕಾಮನೇ ವಿಭುವೆನ್ನಿಸಿಕೊಂಡಿದ್ದಾನೆ. ಪ್ರಾಯಶಃ ಲೋಕದಲ್ಲಿ ಕ್ರಿಡೆ, ರತಿ, ಇವು ವಸಂತನ ಪ್ರೇರಣೆಯಂತಯೇ ನಡೆಯುತ್ತವೆ.

೧೦. ಹಾಗೆ ಪ್ರೇರಣೆಯಾದರೆ ವ್ಯಕ್ತಿಗಳು ವನಾಂತರದಲ್ಲಿ ತಾವು ವ್ಯವಸಾಯಾದಿಗಳನ್ನು ಮಾಡುವುವನ್ನು ಬಿಟ್ಟು, ತೋಳುಗಳಿನ್ನೆತ್ತಿಕೊಂಡು ತಾಳಕ್ಕನುಸಾರವಾಗಿ ಪಾದವಿನ್ಯಾಸಮಾಡಿಕೊಂಡು ನರ್ತನಮಾಡತೊಡಗುತ್ತಾರೆ.

೧೧. ಅವರ ಜತೆಗೆ ಗಾನಮಾಡುವುದು, ನಲಿದಾಡುವುದು, ಸುಮ್ಮನೆ ಅಲೆದಾಡುವುದು, ಹೀಗೆ ಮಾಡುತ್ತಿದ್ದು ತಮಗೆ ಅನುಕೂಲವೆನಿಸಿದ ಕ್ಷೇತ್ರ ಮತ್ತು ಏಕಾಂತಪ್ರದೇಶ ಇವುಗಳನ್ನು ರಕ್ಷಿಸಿಕೊಳ್ಳುವುದು.

೧೨. ಮನ್ಮಥನನ್ನು ತಾರಕಮಾಡಿ ಉಜ್ಜೀವಿಸುವವರು ತಾವೇ ಎಂಬ ಭಾವನೆಯಿಂದ ಗಾನಮಾಡುವುದು, ಕುಣಿಯುವುದು, ನಗುವುದು, ಹೀಗೆಲ್ಲಾ ಮಾಡುವರು. ಇವರು ಮಧುರವಾಗಿ ಬಾರಿಸುವುದರಿಂದ ಮುರಜಪ್ಪಸಿಯು ಕೇಳಿ ಸುಮ್ಮನಿರಲು ಮರ್ಘರವಾಗಿವೆ.

**ವಿಟಂ ಪಶ್ಯಂತಿ ಕುಲಟಾಃ ಪ್ರಾರಬ್ಧೋಚಿತಪಂಡಿತಾಃ ।**
**ಸುಮನಾಂಸಿ ಸುಸಂಗೀತನೃತ್ಯವಾದ್ಯಸುವಾಸಿತಂ ॥ ೧೩ ॥**

**ಏವಮೇತತ್ತ್ರಿಲೋಕೇಽಸ್ಮಿನ್ನಿತಿ ವ್ಯವಸಿತೋ ಜನಃ ।**
**ಲಲಲ್ಲಂಬಸ್ತನೀಂ ದೃಷ್ಟ್ವಾ ಜರಾ ಯೋಷಾಪಿ ನೃತ್ಯತಿ ॥ ೧೪ ॥**

**ವಸಂತಸ್ಯ ಪ್ರಭಾವೋಽಯಂ ಕೋಽಪ್ಯಪೂರ್ವೋ ವಿಜೃಂಭತೇ ।**
**ಸರಾಂಸ್ಯದ್ಭುತಪದ್ಮಾನಿ ಪ್ರಫುಲ್ಲಾಃ ಪುಷ್ಪವಾಟಿಕಾಃ ॥ ೧೫ ॥**

**ವೃಕ್ಷಾಃ ಪಕ್ಷಿಶತಾಕೀರ್ಣಾ ವಿಜಿಘ್ರಾಣಮುಖಾಃ ಸುರಾಃ ।**
**ವಿಕಂಪವಸನಾ ಮರ್ತ್ಯಾಃ ಪವನಸ್ತ್ರಿಗುಣಾತ್ಮಕಃ ॥ ೧೬ ॥**

---

೧೩. ತಮ್ಮ ಸಂಸ್ಕಾರಾನುಸಾರ ನಿಪುಣೆಯರೆನಿಸಿದ ಕುಲಟಾಸ್ತ್ರೀಯರು ವಿಟರನ್ನು ಸಸ್ಪೃಹತೆಯಿಂದ ನೋಡುತ್ತಾರೆ. ದೇವತೆಗಳೂ ನೃತ್ಯಗೀತವಾದ್ಯ ಧ್ವನಿಗಳಿಂದ ಕಾಲಹರಣಮಾಡುತ್ತಾರೆ.

೧೪. ಮೂರು ಲೋಕಗಳ ಜನರೆಲ್ಲರೂ ಇದೇರೀತಿ ಕಾಲಹರಣಮಾಡುತ್ತಾರೆ. ತನ್ನ ಜೋಲಾಡುವ ಸ್ತನಗಳನ್ನು ನೋಡಿಕೊಂಡು ಮುದಕಿಯು ಕೂಡ ನರ್ತನಮಾಡುತ್ತಾಳೆ.

೧೫. ಈ ರೀತಿಯಾಗಿ ವಸಂತನದೇ ಒಂದು ಅಪೂರ್ವ ಪ್ರಭಾವವಾಗಿ ಶೋಭಿಸುತ್ತಿದೆ. ಕಮಲ ಸರೋವರಗಳಲ್ಲಿ ಪದ್ಮಗಳು ಸಮೃದ್ಧಿಯಾಗಿ ವಿಕಾಸಗೊಂಡಿವೆ. ಪುಷ್ಪವಾಟಿಕೆಗಳಲ್ಲಿ ಹೂವು ಯಥೇಚ್ಛವಾಗಿ ವಿಕಾಸಗೊಳ್ಳುತ್ತಿದೆ.

೧೬. ವೃಕ್ಷಗಳು ನೂರಾರು ಪಕ್ಷಿಗಳಿಂದ ತುಂಬಿವೆ. ದೇವತೆಗಳು ಪುಷ್ಪಗಳ ಸುವಾಸನೆಯನ್ನು ಸೇವಿಸುವುದರಲ್ಲಿ ಆಸಕ್ತರಾಗಿದ್ದಾರೆ. ಮಾನವರು ಮನ್ಮಥವಿಕಾರದಿಂದ ಅಸ್ತವ್ಯಸ್ತವಾದ ವಸ್ತ್ರಾದಿಗಳನ್ನು ಪರಿಗಣಿಸದೆ ನಿರ್ಭೀತರಾಗಿ ವಿಹರಿಸುವರು. ವಾಯುವು ತ್ರಿಗುಣಾಧಿಕವಾಗಿ ಬೀಸುತ್ತಿದೆ.

ಕೃತಃ ಪ್ರತ್ಯಕ್ಷಸುಮಹಾರ್ ವಸಂತೋ ನ ಜಗತ್ತ್ರಯೇ ।
ಅವಜಲ್ಪಮುಖಾ ಬಾಲಾ ವೃದ್ಧಾಸ್ತುವಿಕಲದ್ವಿಜಾಃ ॥ ೧೭ ॥

ಉಭಾವಪಿ ಪ್ರತಪ್ಯೇತೇ ಪಶ್ಯೇದಂ ಕಾಮಚೇಷ್ಟಿತಂ ।
ಪಕ್ಷಿಣಾಂ ಪಕ್ಷನಿಕ್ಷೇಪೈರ್ನದ್ಯಸ್ತುಂಗತರಂಗಕೈಃ ॥ ೧೮ ॥

ಪಾದಪಾಃ ಪಲ್ಲವಶತೈರ್ನೃತ್ಯಂತೇ ಚ ಪ್ರಹರ್ಷಿಣಃ ।
ಏತಚ್ಛ್ರುತ್ವಾ ತು ವಚನಂ ನಾರದಸ್ಯೇಂದುಶೇಖರಃ ॥ ೧೯ ॥

ಕೌತುಕಾಕುಲಿತಃ ಶೀಘ್ರಮಾರುರೋಹ ರಥಂ ಸ್ವಕಂ ।
ರಥೇನ ಕಾಂಚನಾಂಗೇನ ಪತತ್ರಿವರಕೇತನಃ ॥ ೨೦ ॥

---

೧೭. ಧೂರ್ತನಾದ ಆ ವಸಂತನ ಕಾರ್ಯಗಳು ಅದ್ಭುತರೀತಿಯಲ್ಲಿ ಕಾಣಬರುತ್ತಿವೆ. ಆದರೆ ಆತನು ತ್ರಿಲೋಕದಲ್ಲಿ ಎಲ್ಲಿಯೂ ಇಲ್ಲ. ಬಾಲೆಯರು ಮೌನವಾಗಿ ತಲೆತಗ್ಗಿಸಿದ್ದಾರೆ. ವೃದ್ಧಬ್ರಾಹ್ಮಣರು ಕೂಡ ಮನೋವೈಕಲ್ಯ ಹೊಂದಿದ್ದಾರೆ.

೧೮. ವಯಸ್ಸಿನಲ್ಲಿ ಅನುರೂಪ್ಯವಿಲ್ಲದಿರುವ ಈ ಸ್ತ್ರೀ ಪುರುಷಜನರು ಕಾಮಪೀಡೆಯಿಂದ ತಾಪಪಡುತ್ತಿದ್ದಾರೆ. ಕಾಮನ ವಿಚಿತ್ರ ವ್ಯಾಪಾರವನ್ನು ನೋಡು ! ಎಂಥ ಅದ್ಭುತ? ಪಕ್ಷಿಗಳು ರೆಕ್ಕೆಗಳನ್ನು ಬಡಿಯುವ ಮೂಲಕವೂ.

೧೯. ನದಿಗಳು ಎತ್ತರವಾದ ಅಲೆಗಳನ್ನೆಬ್ಬಿಸುವ ಮೂಲಕವೂ, ಮರಗಳು ಸಮೃದ್ಧಿಯಾಗಿ ಚಿಗುರುಗಳನ್ನು ಹೊರಸೂಸುವ ಮೂಲಕವೂ, ಅಲಂಕೃತವಾಗಿ ಸಂತೋಷದಿಂದ ನರ್ತನ ಮಾಡುವಂತಿವೆ. ಎಂಬದಾಗಿ ನಾರದರು ಹೇಳಿದ ಮಾತನ್ನು ಶಿವನು ಆಲಿಸಿ ಕೇಳಿದನು.

೨೦. ಈ ಮಾತನ್ನು ಕೇಳಿ ಈಶ್ವರನು ಬಹಳ ಕುತೂಹಲದಿಂದ ಕೂಡಿ, ಆ ಕೂಡಲೆ ತನ್ನ ರಥವನ್ನು ತರಿಸಿ, ಅದನ್ನು ಏರಿದನು. ಶಂಖಚಕ್ರಗದಾಧರನಾದ ಶ್ರೀಮನ್ನಾರಾಯಣನು ಗರುಡಧ್ವಜಯುಕ್ತವಾದ ಕಾಂಚನರಥವನ್ನು ಏರಿದನು.

**ಪ್ರಯಯೌ ಪುಂಡರೀಕಾಕ್ಷಃ ಶಂಖಚಕ್ರಗದಾಧರಃ ।**
**ಪಾರಾವತಪ್ರತೀಕಾಶಂ ಚತುರ್ವೇದಮಯಂ ರಥಂ ॥ ೨೧ ॥**

**ಆಸ್ಥಾಯ ಪ್ರಯಯೌ ಹೃಷ್ಟೋ ಬ್ರಹ್ಮಾ ಬ್ರಾಹ್ಮಣಸಂಸ್ತುತಃ ।**
**ಮುನಿಭಿಶ್ಚಾಪ್ಸರೋಭಿಶ್ಚ ಯಕ್ಷರಕ್ಷೋಮಹೋರಗೈಃ ॥ ೨೨ ॥**

**ವೃತೋ ರಥೇನ ಪ್ರಯಯೌ ಭಾಸ್ಕರೋ ವಾರಿತಸ್ಕರಃ ।**
**ಶೈಲಜೋರುಪತಾಕೇನ ರಥೇನಾದಿತ್ಯವರ್ಚಸಾ ॥ ೨೩ ॥**

**ಕಾತ್ಯಾಯನೀ ಪ್ರಚಲಿತಾ ಪಂಚವಕ್ತ್ರೇಣ ಕೇತುನಾ ।**
**ಲಂಬೋದರಃ ಕರಶತಗೃಹೀತಕನಕೋತ್ಪಲಃ ॥ ೨೪ ॥**

**ಪ್ರಯಾತಃ ಸ್ವರಥಾರೂಢಃ ಕೃತಕರ್ಣಕುಲಾಕುಲಃ ।**
**ಏವಂ ದೇವಃ ಪರಿವೃತೋ ಭಗವಾನ್ ವೃಷಭಧ್ವಜಃ ॥ ೨೫ ॥**

---

೨೧. ಪಾರಿವಾಳದ ಪಕ್ಷಿಯಂತೆ ಬಣ್ಣವುಳ್ಳದ್ದೂ ಚತುರ್ವೇದಮಯವೂ ಆದ ರಥವನ್ನು ಬ್ರಹ್ಮನು ಏರಿ, ಕುಳಿತು ವಿಪ್ರರಿಂದ ಸ್ತುತಿಸಲ್ಪಡುತ್ತಾ ಜತೆಯಲ್ಲಿ.

೨೨. ಜಲಶೋಷಣಸಮರ್ಥನಾದ ಭಾಸ್ಕರ, ಮುನಿಗಳು, ಯಕ್ಷರು, ರಕ್ಷರು, ಉರಗರು, ಇವರುಗಳಿಂದ ಆವೃತನಾಗಿ ಹೊರಟನು.

೨೩. ಪಾರ್ವತೀದೇವಿಯು ಶ್ರೇಷ್ಠವಾದ ಪತಾಕೆಯುಳ್ಳದ್ದಾಗಿ ಆದಿತ್ಯನಂತೆ ಥಳಥಳಿಸುತ್ತಿರುವ ರಥವನ್ನು ಏರಿಕೊಂಡು ಹೊರಟಳು.

೨೪. ಕಾತ್ಯಾಯನಿಯು ಸಿಂಹ ಧ್ವಜದಿಂದ ಯುಕ್ತವಾದ ರಥವಲ್ಲಿ ಕುಳಿತು ಹೊರಟಳು. ವಿನಾಯಕನು ತನ್ನ ನೂರುಕೈಗಳಲ್ಲಿಯೂ ಕನಕದ ಉತ್ಪಲಗಳನ್ನು ಹಿಡಿದುಕೊಂಡು ತನ್ನ ರಥವನ್ನೇರಿ.

೨೫—೨೬. ಕರ್ಣಸಮೂಹಗಳಿಗೆ ಆಕುಲವುಂಟುಮಾಡುವವನಾಗಿ ಹೊರಟನು. ಷಡ್ಗುಣೈಶ್ವರ್ಯಸಂಪನ್ನನೂ, ವೃಷಭಧ್ವಜನೂ ಅಮೂಢಾತ್ಮನೂ

**ರಥಾರೂಢೈರಮೂಢಾತ್ಮಾ ಮರ್ತ್ಯಲೋಕಮವಾತರತ್ ।**
**ಯಾವತ್ಪಶ್ಯತಿ ದೇವೇಶಸ್ತಾವತ್ಸರ್ವಂ ತದಕ್ಷರಂ ॥ ೨೬ ॥**

**ನಾರದೇನ ಯಥೈವೋಕ್ತಸ್ತಾವತ್ಸರ್ವಂ ತದಕ್ಷರಂ ।**
**ನಾರದೇನ ಯಥೈವೋಕ್ತಂ ಜಗನಾನಂ ದನಿರ್ಭರಂ ॥ ೨೭ ॥**

**ದೇವೈಸ್ಸಾರ್ಧಂ ಪಶುಪತಿರ್ಯಾದಪ್ಪಶ್ಯತಿ ವಿಸ್ಮಿತಃ ।**
**ತಾವತ್ತಸ್ಯೈವ ಹಿ ಗಣಾಃ ಪರಬ್ರಹ್ಮಸಮಂಜಸಂ ॥ ೨೮ ॥**

**ಗಾಯಂತಿ ಕೇಚಿತ್ಪ್ರೋತ್ಕಂಠಂ ಲುಠಂತ್ಯನ್ಯೇ ಪ್ರಹರ್ಷಿತಾಃ ।**
**ವಾದಯಂತ್ಯಪರೇ ತುಷ್ಟಾ ಜಹಸುಃ ಕೇಚಿದುಲ್ಬಣಂ ॥ ೨೯ ॥**

**ವಾದಯಂತ್ಯನ್ಯಥಾ ವಾದ್ಯಂ ಗಾಯಂತ್ಯನ್ಯೇಽನ್ಯಥಾ ಗಣಾಃ ।**
**ಅನ್ಯೇಽನ್ಯಥಾ ಪ್ರನೃತ್ಯಂತಿ ಚಿತ್ರಂ ಚೈತ್ರಸ್ಯ ಚೇಷ್ಟಿತಂ ॥ ೩೦ ॥**

---

ಮೋಪರಪಿತನೂ ಆದ ಪರಮೇಶ್ವರನು ತಮ್ಮ ತಮ್ಮ ರಥವೇರಿದ ಸಮಸ್ತ ದೇವರುಗಳಿಂದ ಸುತ್ತಗಟ್ಟಲ್ಪಟ್ಟವನಾಗಿ ಹೀಗೆ ಹೊರಟು.

೨೭. ಭೂಲೋಕಕ್ಕೆ ಬಂದು ನೋಡಲಾಗಿ ನಾರದನು ಹೇಳಿದ್ದ ವಿಚಾರ ವೆಲ್ಲಾ ಅಕ್ಷರಶಃ ಸತ್ಯವಾಗಿದ್ದಿತು. ನಾರದೋಕ್ತಿಯಂತೆ ಲೋಕವೆಲ್ಲಾ ಆನಂದ ಭರಿತವಾಗಿದ್ದಿತು.

೨೮. ಬ್ರಹ್ಮಾದಿಗಳೊಡಗೂಡಿ ಶಿವನು ಅದನ್ನೆಲ್ಲಾ ನೋಡಿ ಆಶ್ಚರ್ಯ ಚಕಿತನಾದನು. ಆ ಸಮಯದಲ್ಲಿ ಅವನ ಗಣಗಳಲ್ಲಿ ಕೆಲವರು ಪರಬ್ರಹ್ಮೋತ್ಕರ್ಷ ವನ್ನು ಪ್ರತಿಪಾದಿಸುವ ವಿಚಾರವಾಗಿ ಗಾನಮಾಡಿದರು.

೨೯. ಕೆಲವರು ಆನಂದಾತಿಶಯದಿಂದ ಹೊರಳಾಡಿದರು. ಅದನ್ನು ನೋಡಿ, ಇನ್ನು ಕೆಲವರು ಹರ್ಷಯುಕ್ತರಾಗಿ ವಾದ್ಯಗಳನ್ನು ಬಾಜಿಸಿದರು. ಕೆಲವರು ಸಂತುಷ್ಟಾಂತರಂಗದಿಂದ ಗಟ್ಟಿಯಾಗಿ ನಕ್ಕರು.

೩೦. ಆ ಗಣಗಳಲ್ಲಿ ಕೆಲವರು ಬೇರೆ ವಿಧವಾಗಿ ವಾದ್ಯಬಾರಿಸಿದರು. ಮತ್ತೆ ಕೆಲವರು ಬೇರೆ ರೀತಿಯಲ್ಲಿ ಗಾನಮಾಡಿದರು. ಇನ್ನು ಕೆಲವರು ಬೇರೊಂದು ಪ್ರಕಾರವಾಗಿ ನರ್ತನ ಮಾಡಿದರು. ಚೈತ್ರನ (ವಸಂತನ) ಚೇಷ್ಟೆ (ವ್ಯಾಪಾರವು) ವಿಚಿತ್ರತರವಾಯಿತು.

**ನೀಲೋತ್ಪಲಾಭನಯನೈರ್ವಿಲಸತ್ಪ್ರಾಂತತಾರಕೈಃ ।**
**ಕ್ರೀಡಾರತಿಭಿರಾರಬ್ಧಮಾಲಾಪೈಶ್ಚ ಸುರೈರಪಿ ॥ ೩೧ ॥**

**ಸುರಾಣಾಂ ಕ್ಷೋಭಮಾಲಕ್ಷ್ಯ ಭಗವಾನ್ ಗೋವೃಷಭಧ್ವಜಃ ।**
**ಚಿಂತಯಾಮಾಸ ಸುಮಹಾನ್ ಕಾರ್ಯಯೋಗೋ ಹ್ಯುಪಸ್ಥಿತಃ ॥ ೩೨ ॥**

**ಅನರ್ಥಮುತ್ಥಿತಂ ತದ್ವತ್ತದ್ವಿಘಾತಾಯ ಯೇ ಜನಾಃ ।**
**ನಯಂತೇ ಯೇಽತಿ ಮೂರ್ಖತ್ವಾದಾಪದೋಽಭಿಭವಂತಿ ತಾನ್ ॥ ೩೩ ॥**

**ವಸಂತಃ ಸ್ವಾಮಿಭಕ್ತತ್ವಾನ್ಮಾನ್ಯಪುಷ್ಪಾಕರಂ ಯದಾ ।**
**ಉನ್ಮಾದಾಢ್ಯಜನೋ ರಕ್ಷ್ಯಃ ಕಾರ್ಯಂ ಕಾಲಪ್ರಯಂ ಮಮ ॥ ೩೪ ॥**

---

೩೧. ತನ್ನ ಜತೆಯಲ್ಲಿ ಬಂದಿದ್ದ ದೇವತೆಗಳು ಕೂಡ ನೀಲೋತ್ಪಲದಂತೆ ಕಾಂತಿಯುಕ್ತವಾದ ಕಣ್ಣುಗಳಲ್ಲಿ ಕರಿಯಗುಡ್ಡೆಗಳನ್ನು ಒಂದು ಅಂಚಿಗೆ ತಂದು (ಕುಡಿ ನೋಟದಿಂದ) ರತಿ ಕ್ರೀಡಾಲಾಲಸೆಯಿಂದ ಆಲಾಪಗಳಿಗಾರಂಭಿಸಿದರು.

೩೨. ದೇವತೆಗಳಿಗೆ ಕೂಡ ಹೀಗೆ ಮನಸ್ಸು ಕ್ಷುಭಿತವಾದುದನ್ನು ನೋಡಿ, ವೃಷಭವಾಹನನಾದ ಶಿವನು ಬಹುವಾಗಿ ಯೋಚಿಸಿ.

೩೩. ಇವೆಲ್ಲಾ ಅವನ ಕಾರ್ಯವೇ ಇರಬೇಕು. ಆಹಾ ! ನಾರದನು ಹೇಳಿದಂತೆ ಅನರ್ಥಪ್ರಾಪ್ತಿಯೇ ಆಯಿತು. ಅವನನ್ನು ಘಾತಿಸುವುದಕ್ಕಾಗಿ ಕರೆತಂದ ಜನರನ್ನೆಲ್ಲಾ ಆಪತ್ತುಗಳು ಅತಿ ಮೂರ್ಖತೆಯಿಂದ ಲಕ್ಷ್ಯಮಾಡದೆ ಆವರಿಸಿವೆ.

೩೪. ತನ್ನ ಸ್ವಾಮಿಯಾದ ಮನ್ಮಥನಲ್ಲಿ ಬಹು ಭಕ್ತಿಯನ್ನು ತೋರಿಸಿ ವಸಂತನು ಹೂದೋಟವನ್ನು ಪುಷ್ಪಭರಿತವನ್ನಾಗಿ ಮಾಡಿದ್ದು ಒಂದುವಿಧದಲ್ಲಿ ಸರಿ. ಆದರೆ ಅನುಕೂಲಶಾಲಿಗಳಾದ ಜನರು ಮಹೋನ್ಮತ್ತತೆಯಿಂದ ನಡೆದರೆ ಅವರನ್ನು ತಿದ್ದಬೇಕಾದುದು ನನ್ನ ಕೆಲಸವೇ ಆಗಿದೆ.

ಸಂಚಿಂತ್ಯೈವಂ ಸಮಾನಾಯ್ಯ ವಸಂತಂ ಪ್ರಾಹ ಶಂಕರಃ ।
ಸಮಾನೀತೋ ಮಾಸಮೇಕಂ ಸ್ಥಾತವ್ಯಂ ಭವತಾ ತ್ವಿಹ ॥ ೩೫ ॥

ಸಿತಪಕ್ಷಃ ಸಹಾಯೋಽಯಂ ಸರ್ವಭೂತಸುಖಪ್ರದಃ ।
ಭವತ್ಯತಿಮಹಾನಂದೋ ವಿಶೇಷೇಣದಿವೌಕಸಾಂ ॥ ೩೬ ॥

ಯೋ ಯಥಾ ರಥಮಾರೂಢಃ ಸಮಾಯಾತಃ ಸಮೀಕ್ಷಿತುಂ ।
ವರ್ಷೇ ವರ್ಷೇ ಸ ತೇನೈವ ಸಂಸ್ಥಾನೇನಾಗಮಿಷ್ಯತಿ ॥ ೩೭ ॥

ಕಾರಯಿಷ್ಯಂತಿ ಯೇ ಮರ್ತ್ಯಾ ರಥಯಾತ್ರಾಮಹೋತ್ಸವಂ ।
ತೇ ದಿವ್ಯಭೋಗಭೋಕ್ತಾರೋ ಭವಿಷ್ಯಂತಿ ನಿರಾಮಯಾಃ ॥ ೩೮ ॥

ಏವಮಾಭಾಷ್ಯ ಭಗವಾನ್ವಸಂತಂ ಚ ತತಃ ಸುರೈಃ ।
ಸಂಸ್ತುತೋಽಥ ನತಶ್ಚಾಪಿ ಸ್ವಸ್ಥಾನಮಗಮತ್ತತಃ ॥ ೩೯ ॥

---

೩೫. ಹೀಗೆಂದು ಆಲೋಚಿಸಿ ಶಂಕರನು ವಸಂತನನ್ನು ಕರೆಯಿಸಿ ಇಂತೆಂದನು. "ನೀನು ಈ ಸ್ಥಳದಲ್ಲಿ ಒಂದು ತಿಂಗಳುಕಾಲ ಮಾತ್ರ ಇರಬೇಕು.

೩೬. ಸರ್ವಭೂತಗಳಿಗೂ ಸಹಾಯಕನಾದ ಈ ಶುಕ್ಲಪಕ್ಷ (ಚಂದ್ರನ) ಸಹಾಯದಿಂದ ದೇವತೆಗಳಿಗೆ ವಿಶೇಷವಾಗಿ ಮಹಾನಂದವುಂಟಾಗುವುದು.

೩೭. ಈಗ ಯಾರುಯಾರು ಯಾವರೀತಿ ರಥವೇರಿಕೊಂಡು ನೋಡುವುದಕ್ಕೆ ಬಂದಿದ್ದಾರೋ, ಪ್ರತಿವರ್ಷವೂ ಅವರು ಅದೇ ಸಂಸ್ಥಾನ (ವಿಧಾನ) ದಿಂದ ಬರುತ್ತಾರೆ.

೩೮. ಯಾವ ಮಾನವರು ಈ ರಥಯಾತ್ರಾಮಹೋತ್ಸವವನ್ನು ನಡೆಸುತ್ತಾರೋ ಅವರು ದಿವ್ಯಭೋಗಗಳನ್ನು ಅನುಭವಿಸಲಿ. ರೋಗರಹಿತರಾಗಲಿ. ಎಂಬದಾಗಿ ಹೇಳಿದನು.

೩೯. ಅಲ್ಲದೆ ವಸಂತನನ್ನು ಸನ್ಮಾನಿಸಿ ದೇವಗಣದಿಂದ ಸ್ತುತಿಮಾಡಿಸಿಕೊಳ್ಳುತ್ತಾ ಅವರ ವಂದನೆಯನ್ನು ಸ್ವೀಕರಿಸಿ ತನ್ನ ನಿವಾಸಕ್ಕೆ ತೆರಳಿದನು.

|| ಯುಧಿಷ್ಠಿರ ಉವಾಚ ||

**ರಥಃ ಕಿಮಾತ್ಮಕಃ ಕಾರ್ಯಃ ಕಾರ್ಯಾ ಯಾತ್ರಾ ಕಥಂ ಭವೇತ್ ।**
**ಆರೋಪಯೇತ್ಕಥಂ ದೇವಾರ್ ರಥೇ ವದ ಜಗತ್ಪತೇ　　|| ೪೦ ||**

|| ಶ್ರೀಕೃಷ್ಣ ಉವಾಚ ||

**ಸುವಿಚಿತ್ರಂ ಚಿತ್ರತನುಂ ಶ್ರೇಷ್ಠಕಾಷ್ಠಮಯಂ ರಥಂ ।**
**ಸುದೃಢಾಕ್ಷಂ ದೃಢಾಭಂದಂ ಸುಚಕ್ರರಥಕೂಬರಂ　　|| ೪೧ ||**

**ಅಥ ವಾ ವಂಶವಿಹಿತಂ ನೇತ್ರಪಟ್ಟಪಟಾವೃತಂ ।**
**ತಾರಕಾಶತಚಿತ್ರಾಂಶಂ ಪುಷ್ಪಮಾಲಾವಿಭೂಷಿತಂ　　|| ೪೨ ||**

---

೪೦. ಯುಧಿಷ್ಠಿರನು ಕೇಳುತ್ತಾನೆ—ಲೋಕೇಶ್ವರನಾದ ಶ್ರೀಕೃಷ್ಣನೇ ! ರಥವನ್ನು ಏತರಿಂದ ಮಾಡಬೇಕು. ಉತ್ಸಹವಾರ್ಹವಾದ ರಥವನ್ನು ಮಾಡಿಸಬೇಕಾದ ಕ್ರಮವಾವುದು ? ಸ್ವಾಮಿಯನ್ನು ರಥಾರೋಹಣಮಾಡಿಸುವ ವಿಧಾನವೆಂತು ? ಇವೆಲ್ಲವನ್ನೂ ಹೇಳು ಎಂದನು.

೪೧. ಶ್ರೀ ಕೃಷ್ಣನು ಹೇಳುತ್ತಾನೆ—ರಥವನ್ನು ಒಳ್ಳೆಯ ಜಾತಿಯ ಮರದಿಂದ ರಚಿಸಬೇಕು. ಅದು ವಿಚಿತ್ರವಾದ ಕಲಾಕೌಶಲ್ಯಯುಕ್ತವಾಗಿರಬೇಕು ಅದರಲ್ಲಿ ಚಿತ್ರಲತಾದಿಗಳು ಬೊಂಬೆಗಳು ಇವನ್ನು ಬಿಡಿಸಿರಬೇಕು. ಆದರ ಮಧ್ಯದ ಮೂಕಿ ಮರವು ಗಟ್ಟಿಯಾಗಿರಬೇಕು ಅದರ ಜೋಡಣೆಯು ಬಿಗಿಯಾಗಿರಬೇಕು. ಚಕ್ರಗಳೂ ದೂರಿಯುಮರವೂ ಭದ್ರವಾಗಿರಬೇಕು ಅವನ್ನು ಬಿದರಿನಿಂದಲಾದರೂ ಮಾಡಬಹುದು.

೪೨. ರಥೋತ್ಸವಕಾಲದಲ್ಲಿ ಅಂದವಾಗಿರುವಂತೆ ಬಿದಿರಿನಿಂದ ಗೊಪುರದಂತೆ ರಚಿಸಿ, ಬಣ್ಣಬಣ್ಣದ ಬಟ್ಟೆಗಳನ್ನು ಅದಕ್ಕೆ ಸುತ್ತಬೇಕು. ನೇತ್ರಾಪಟ ಬಟ್ಟೆಗಳಿಂದಲೂ ರೇಶಿಮೆ ಬಟ್ಟೆಗಳಿಂದಲೂ ಮಾಡಿದ ಧ್ವಜಗಳನ್ನು ರಥದ ಸುತ್ತಲೂ ಆವರಿಸುವಂತೆ ಕಟ್ಟಬೇಕು. ರಥವನ್ನು ನಕ್ಷತ್ರಸದೃಶವಾದ ನೂರಾರು ಪತಾಕೆಗಳಿಂದಲೂ ಹೂವಿನ ಮಾಲೆಗಳಿಂದಲೂ ವಿಚಿತ್ರವಾಗಿ ಶೋಭಿಸುವಂತೆ ಮಾಡಬೇಕು.

ಸಿತಗೋಯುಗಸಂಯುಕ್ತಂ ಪಂಚಬಾಣಪತಾಕಿನಂ ।
ಛತ್ರಚಾಮರಶೋಭಾಢ್ಯಂ ಸ್ಥಾಪಯೇದ್ಭವನಾಂಗಣೇ ॥ ೪೩ ॥

ವೈಶ್ವದೇವಂ ತತಃ ಕುರ್ಯಾದ್ಗ್ರಹಯಜ್ಞವಿಧಾನತಃ ।
ಚತುಶ್ಚರಣಕೈರ್ಮಂತ್ರೈರ್ವಿಪ್ರ ಶಾಂತಿಕಪೌಷ್ಟಿಕೈಃ ॥ ೪೪ ॥

ಆರೋಪಯೇದ್ರಥೇ ದೇವಂ ಮೂಲಮಂತ್ರೇಣ ಮಂತ್ರವಿತ್ ।
ವೇದೋಕ್ತೈರಥಪೌರಾಣೈರ್ಗಂಧಧೂಪಾಧಿವಾಸಿತೇ ॥ ೪೫ ॥

ರಥೇ ತಿಷ್ಠನ್ನಯತಿ ವಾಜಿನಃ ಪುರೋ ।
ಯತ್ರಯತ್ರ ಕಾಮಯತೇ ಸುಷಾರಥಿಃ ॥
ಅಭೀಷೂಣಾಂ ಮಹಿಮಾನಂ ಪನಾಯತ ।
ಮನುಃ ಪಶ್ಚಾದನುಯಚ್ಛಂತಿ ರಶ್ಮಯಃ ॥ ೪೬ ॥

---

೪೩. ಬಿಳಿಯಬಣ್ಣದ ಎರಡು ವೃಷಭಗಳನ್ನು ರಥಕ್ಕೆ ಹೂಡಬೇಕು. ಧ್ವಜದಲ್ಲಿಯೂ ವೃಷಭಾಂಕಿತವಿರಬೇಕು. ಪಂಚಬಾಣಯುಕ್ತನಾಗಿ ಛತ್ರಚಾಮರಗಳಿಂದ ಶೋಭಿಸುವಂತೆ ಮಾಡಿ ದೇವನನ್ನು ಭವನದ ಅಂಗಳದಲ್ಲಿ ವಿಜಯ ಮಾಡಿಸಬೇಕು.

೪೪. ಬಳಿಕ ಗ್ರಹಯಜ್ಞ ಮುಂತಾದವನ್ನೂ ವಿಧವಿಧಾನದಂತೆ ವೈಶ್ವದೇವವನ್ನೂ ಆಚರಿಸಬೇಕು, ಮಂತ್ರಜ್ಞನಾದವನು ಸುಲಗ್ನದಲ್ಲಿ ಶಾಂತಿ ಪುಷ್ಟಿಗಳನ್ನು ನಿರೂಪಿಸುವ ನಾಲ್ಕುಚರಣದ ಮಂತ್ರಘೋಷಣೆ ಮಾಡುತ್ತಿರಬೇಕು.

೪೫. ಗಂಧಪುಷ್ಪಧೂಪಾದಿಗಳಿಂದ ಅಧಿವಾಸಿತವಾದ ದೇವಮೂರ್ತಿಯನ್ನು ಆಗ ಮೂಲಮಂತ್ರಪೂರ್ವಕವಾಗಿಯೂ, ವೇದೋಕ್ತವೂ ಮತ್ತು ಪುರಾಣೋಕ್ತವೂ ಆದ ಮಂತ್ರಗಳಿಂದಲೂ ರಥಾರೋಹಣ ಮಾಡಬೇಕು.

೪೬. (ಇದು ವೇದದಮಂತ್ರ) ಚತುರನಾದ ಸಾರಥಿಯು ಕುದುರೆಗಳನ್ನು ಹೂಡಿದ ರಥದ ಮುಂದುಗಡೆ ಕುಳಿತು ಅವನು ಯಾವಕಡೆಗೆ ರಥವು ಹೋಗಬೇಕೆಂದು ಮನಸ್ಸು ಮಾಡುತ್ತಾನೆಯೋ ಆ ಕಡೆಗೆ ಮಂತ್ರಮಹಿಮೆಯಿಂದ ಅದು ಹೋಗುವುದು. ಅನಂತರ ಸೂರ್ಯಕಿರಣಗಳು ಅದನ್ನನುಸರಿಸಿ ಹೋಗುತ್ತವೆ.

**ಶಂಖದುಂದುಭಿನಿರ್ಘೋಷೈಃ ಕಾಹಲಾನಾಂ ಚ ನಿಸ್ವನೈಃ ।**
**ಹಸ್ತದೀಪೈಃ ಪ್ರಜ್ವಲಿತೈಸ್ತಾಲಕೋಲಾಹಲೇನ ಚ　　　　॥ ೪೭ ॥**

**ದೋಷಾಮುಖೇನ ರಮಿತಂ ಪ್ರೇಕ್ಷಣೀಯಪುರಸ್ಸರಂ ।**
**ಮಹತೋತ್ಸವಭಾರೇಣ ಭ್ರಾಮಯೇತ್ಪರಿತೋ ರಥಂ　　　　॥ ೪೮ ॥**

**ತಾಂಬೂಲಾನಿ ರಥೇ ದದ್ಯಾತ್ಪುಷ್ಪಮಾಲಾಯುತಾನಿ ಚ ।**
**ರಥಪ್ರೋಢ್ಢ್ರಂಪ್ರದದ್ಯಾತ್ತು ಪ್ರೇಕ್ಷಕೇಭ್ಯೋಽಪ್ಯವಾರಿತಂ　　॥ ೪೯ ॥**

**ಯಸ್ಯಯಸ್ಯ ಗೃಹೇಽಭ್ಯೇತಿ ಪ್ರೇರಿತೋ ರಥಿನಾ ರಥಃ ।**
**ತಸ್ಯತಸ್ಯ ಭವೇತ್ಪೂಜ್ಯಃ ಪುಷ್ಪಧೂಪಾಕ್ಷತಾಧಿಭಿಃ　　　　॥ ೫೦ ॥**

**ಇತರೋಽಪಿ ಭವೇತ್ಪೂಜ್ಯಃ ಸಂಪ್ರಾಪ್ತೇ ಗೃಹಿಣಾಂ ಗೃಹೇ ।**
**ಕಿಂ ಪುನರ್ಜಗತಾಂ ಭರ್ತಾ ಸರ್ವಲೋಕಮಹೇಶ್ವರಃ　　　　॥ ೫೧ ॥**

---

೪೭. ಶಂಖ ನಗಾರಿ ಕಹಳೆ ಇವುಗಳು ಮತ್ತು ಮಂಗಳವಾದ್ಯಧ್ವನಿಯಿಂದಲೂ ತಾಳ ಸಮೇತವಾಗಿ ಭಜಿಸುವ ಜನರ ಕೋಲಾಹಲಧ್ವನಿಯಿಂದಲೂ ಕೈದೀವಟಿಗೆಗಳ ಪ್ರಕಾಶಗಳಿಂದಲೂ ಕೂಡಿರುವಂತೆ ಮಾಡಬೇಕು.

೪೮. ಸಂಜೆಯಾಗುತ್ತಲೆ ಪ್ರೇಕ್ಷಣೀಯವಾದ ದೃಶ್ಯಪ್ರದರ್ಶನ, ಪ್ರಕಾಶವಾದ ದೀಪಗಳು, ಇವುಗಳ ಸಮೇತ ಉತ್ಸವವು ವೈಭವ ವಾಗುವಂತೆ ಊರ ಸುತ್ತಲೂ ರಥವನ್ನು ಎಳೆಯಬೇಕು.

೪೯. ಹೀಗೆ ರಥವು ಬೀದಿಯಲ್ಲಿ ಬರುವಾಗ ಆ ಮನೆಯ ಜನರು ತಮ್ಮ ಮನೆಯ ಮುಂದೆ ರಥದ ಮೇಲಿರುವ ಸ್ವಾಮಿಗೆ ಪುಷ್ಪಮಾಲೆ, ಹಣ್ಣು, ತಾಂಬೂಲ, ಇವನ್ನು ಸಮರ್ಪಿಸಲು ಅನುಕೂಲಮಾಡಬೇಕು.

೫೦. ರಥವನ್ನು ಪ್ರೇಕ್ಷಕರಿಗಾಗಿ ನಿಲ್ಲಿಸಿದ್ದರೂ ಗೃಹಸ್ಥರ ಮನೆಯ ಬಾಗಿಲಿಗೆ ಬಂದಾಗ ಸಾರಥಿಯು ರಥವನ್ನು ನಿಲ್ಲಿಸಿ ಅಲ್ಲಿ ಅಕ್ಷತೆ ಪುಷ್ಪಧೂಪಾದಿಗಳನ್ನು ಅವರು ಸಮರ್ಪಿಸಲು ಅವಕಾಶ ಕೊಡಬೇಕು.

೫೧. ಗೃಹಸ್ಥರ ಮನೆಗಳಲ್ಲಿ ಅಭ್ಯಾಗತನಾದ ಸಾಮಾನ್ಯ ಮನುಷ್ಯನಿಗೇ ಪೂಜೆ ನಡೆಯುವುದು ಎಂದ ಮೇಲೆ ಸರ್ವಲೋಕೇಶ್ವರನೂ ಜಗತ್ತಿಗೆಲ್ಲಾ ಭರ್ತನೂ ಆದ ಸ್ವಾಮಿಗೆ ಭಕ್ತಿಯಿಂದ ಪೂಜೆ ನಡೆಯಿಸಬೇಕಾದ ವಿಚಾರವನ್ನು ಹೇಳಬೇಕೆ ?

ಕದಾಚಿದಕ್ಷಭಂಗಃ ಸ್ಯಾದ್ಧ್ವಜಭಂಗೋಽಥ ವಾ ಭವೇತ್ ।
ಭಜ್ಯೇತ ವಾ ಯುಗಮಧ್ಯೇ ನಹನಂ ತ್ರುಟ್ಯತೇ ಯದಿ ॥ ೫೨ ॥

ಬ್ರಾಹ್ಮಣಾಂಸ್ತತ್ರ ಸಂಪೂಜ್ಯ ಹೋಮಃ ಕಾರ್ಯೋ ವಿಜಾನತಾ ।
ತಿಲೈರಾಜ್ಯೇನ ಪಯಸಾ ಯೇನ ಸಂಪದ್ಯತೇ ಸುಖಂ ॥ ೫೩ ॥

ಪ್ರೇರಣೀಪ್ರೇಕ್ಷಣೀಯೈಶ್ಚ ಭ್ರಾಮಯಿತ್ವಾ ರಥೋತ್ತಮಂ ।
ಸ್ಥಾಪಯೇನ್ನಗರಸ್ಯಾಂತಸ್ತತ್ರ ಕುರ್ಯಾನ್ಮಹೋತ್ಸವಂ ॥ ೫೪ ॥

ದೋಲಾಗ್ರಾಹೈಶ್ಚಕ್ರದೋಲಾಭ್ರಮ್ಯೈರ್ಡಮರುಕೈಸ್ತಥಾ ।
ವಿದ್ಯಾಧರೀಣಾಂ ಚರಿತಮಿತರಾಭಿಃ ಪ್ರಕಾಶ್ಯತೇ ॥ ೫೫ ॥

ಏವಂ ಯಃ ಕುರುತೇ ಪಾರ್ಥ ಸುಖದಂ ತು ರಥೋತ್ಸವಂ ।
ತಸ್ಯೈವ ಪೂಜಯೇತ್ಪಾರ್ಥ ಉಪವಾಸಪರೋ ನರಃ ॥ ೫೬ ॥

---

೫೨. ಅಕಸ್ಮಾತ್ತಾಗಿ ರಥದ ಅಚ್ಚಿನಮರ ಮುರಿಯುವುದು. ಧ್ವಜಸ್ತಂಭ ಮುರಿಯುವುದು. ನೊಗವು ಮಧ್ಯಕ್ಕೆ ಮುರಿದು ಹೋಗುವುದು. ಮೂಕಿಯ ಮರ ತುಂಡರಿಸುವುದು ಹೀಗೆಲ್ಲಾ ಆಗಬಹುದು.

೫೩. ಇಂತಹ ವಿಘ್ನಗಳು ಸಂಭವಿಸಿದರೆ ಪ್ರಾಜ್ಞನಾದವನು ಅದರ ಶಾಂತ್ಯರ್ಥವಾಗಿ ಬ್ರಾಹ್ಮಣರನ್ನು ಸತ್ಕರಿಸಿ, ಅಗ್ನಿಪ್ರತಿಷ್ಠಾಪನ ಮಾಡಿಸಿ ಎಳ್ಳು, ತುಪ್ಪ, ಹಾಲು ಇವುಗಳ ಮಿಶ್ರದ ಆಹುತಿಯ ಸಮರ್ಪಣ ಪೂರ್ವಕವಾಗಿ ಪ್ರಾಯಶ್ಚಿತ್ತ ಹೋಮಮಾಡಬೇಕು. ಇದರಿಂದ ತೊಂದರೆ ಪರಿಹಾರವಾಗಿ ಸುಖವಾಗುವುದು.

೫೪. ರಥದ ಸಮ್ಮುಖದಲ್ಲಿ ಪ್ರೇರಣೀ ಮುಂತಾದ ಆಟಗಳನ್ನು ಆಡಿಸುತ್ತಾ ರಥವನ್ನು ನಗರದ ಬೀದಿಗಳಲೆಲ್ಲಾ ಎಳೆಯುವ ಮೂಲಕ ಉತ್ಸವವು ವಿಜೃಂಭಣೆಯಾಗುವಂತೆ ಮಾಡಬೇಕು.

೫೫. ಡೋಲಾಗ್ರಾಹ ಚಕ್ರಡೋಲಾಭ್ರಮ ಡಮರುಕ ಮುಂತಾದವನ್ನು ಧರಿಸಿ ಜನರು ವಿದ್ಯಾಧರಿಯರ ಪಾತ್ರವನ್ನು ತೋರ್ಪಡಿಸಬಹುದು.

೫೬. ಅಯ್ಯಾ ಕುಂತೀಪುತ್ರ! ಈರೀತಿ ರಥೋತ್ಸವದಲ್ಲಿ ಸುಖಸಂತೋಷ ವುಂಟಾಗುವಂತೆ ಏರ್ಪಡಿಸುವವನಿಗೂ ಪೂಜಿಸಿ ವ್ರತೋಪವಾಸಾದಿಗಳನ್ನು ಆಚರಿಸುವವನಿಗೂ ಉಂಟಾಗುವ ಫಲಗಳನ್ನು ಕೇಳು.

**ಸರ್ವವ್ಯಾಧಿವಿಹೀನಶ್ಚ ಸುಖೀ ಸ್ಯಾಚ್ಛರದಾಂ ಶತಂ |**
**ಯಃ ಕಾರಯಿತ್ವಾ ಸೌವರ್ಣಂ ರೌಪ್ಯಂ ವಾ ರಥಮುತ್ತಮಂ || ೫೭ ||**

**ವರ್ಣಕೈಶ್ಚಿತ್ರಿತಂ ದಿವ್ಯಂ ದಾರುಜಂ ವಾ ಸುಶೋಭನಂ |**
**ಸ್ವಹಸ್ತರಚಿತಂ ಯಶ್ಚ ಭಾಸ್ಕರಾಯ ನಿವೇದಯೇತ್ || ೫೮ ||**

**ಸ ಮರ್ತ್ಯಲೋಕಂ ಸುಚಿರಾತ್ಸುಖಾನಿ ಚ ಸಮಶ್ನುತೇ |**
**ಪೂರ್ವೋಕ್ತವಿಧಿನಾ ಭಾನುಂ ಭ್ರಾಮಯಿತ್ವಾ ರಥೇ ಸ್ಥಿತಂ || ೫೯ ||**

**ಸ್ಥಾಪಯೇತ್ಸರ್ವಭಾಗೇ ತು ಗೇಯಂ ವಾದ್ಯಪುರಃಸರಂ |**
**ದಕ್ಷಿಣೇ ತು ದಿಶೋ ಭಾಗೇ ದ್ವಿತೀಯೇಽಹ್ನಿ ನಯೇದ್ರಥಂ || ೬೦ ||**

**ತತ್ರಾಪಿ ಜಾಗರಂ ಕುರ್ಯಾದ್ವಾದ್ಯಗೀತಸುಮಂಗಲೈಃ |**
**ಅಪರಾಯಾಂ ತೃತೀಯೇಽಹ್ನಿ ಸ್ಥಾಪಯೇದ್ರಥಮುತ್ತಮಂ || ೬೧ ||**

---

೫೭-೫೮. ಅವರು ರೋಗಾದ್ಯುಪದ್ರವಗಳಿಗೆ ಒಳಗಾಗದೆ ನೂರುವರ್ಷ ಕಾಲ ಸುಖವಾಗಿ ಬಾಳುವರು. ಚಿನ್ನದ ರಥವನ್ನೋ ಬೆಳ್ಳಿಯ ರಥವನ್ನೋ ಅಥವಾ ನಾನಾ ಬಣ್ಣಗಳಿಂದ ಶೋಭಿಸುವಂತೆ ದಿವ್ಯವಾದ ಮರದ ರಥವನ್ನೋ ಸ್ವಹಸ್ತದಿಂದ ರಚಿಸಿ ಸೂರ್ಯನಿಗೆ ಸಮರ್ಪಿಸಬಹುದು.

೫೯. ಅಂಥ ಮಾನವರು ಭೂಲೋಕದಲ್ಲಿ ಬಹುಕಾಲ ಸುಖಾನುಭವ ಮಾಡುತ್ತಾನೆ. ಇದುವರೆಗೆ ಹೇಳಿದ ವಿಧಾನದಂತೆ ಸ್ವಾಮಿಯಾದ ಭಾನುವನ್ನು ರಥದ ಮೇಲೆ ಕೂರಿಸಿ ರಥವನ್ನು ಎಳೆಯಬೇಕು.

೬೦. ಗೀತ ವಾದ್ಯ ಸಮೇತವಾಗಿ ಊರಿನ ಎಲ್ಲಬೀದಿಗಳಲ್ಲೂ ಎಳೆಯ ತೊಡಗಿ, ಪ್ರತಿಯೊಂದು ಭಾಗದಲ್ಲೂ ಕೆಲಕೆಲವು ಹೊತ್ತು ನಿಲ್ಲಿಸುತ್ತಾ ರಾತ್ರಿ ಯನ್ನು ಮೇಲೆ ಹೇಳಿದ ವೃತ್ಯಗಳಿಂದ ಕಳೆದು ಎರಡನೆಯ ದಿವಸ ಊರಿನ ದಕ್ಷಿಣ ದಿಗ್ಭಾಗದ ಬೀದಿಯಲ್ಲಿ ನಿಲ್ಲಿಸಬೇಕು.

೬೧. ಅಲ್ಲಿ ಆ ರಾತ್ರಿಯೆಲ್ಲಾ ಸಂಗೀತ ಮಂಗಳವಾದ್ಯ ಮುಂತಾದುವು ಗಳ ಮೂಲಕ ಜಾಗರಣ ಮಾಡಿ ಮೂರನೆಯ ದಿನ ಹಗಲು ಆ ರಥವನ್ನು ಊರಿನ ಪಶ್ಚಿಮದ ಕಡೆಯ ಬೀದಿಯಲ್ಲಿ ನಿಲ್ಲಿಸಬೇಕು.

ಪ್ರೇಕ್ಷಣೀಯವಿನೋದೇನ ತಾಂ ರಾತ್ರಿಮತಿವಾಹಯೇತ್ ।
ಸ್ಥಾಪಯೇದುತ್ತರಸ್ಯಾಂ ತು ಚತುರ್ಥೇ ದಿವಸೇ ರಥಂ ॥ ೬೨ ॥

ಮಹಾಯಾತ್ರಾಂ ಪ್ರಕುರ್ವೀತ ತತ್ರಾಪ್ಯದ್ಭುತಚೇಷ್ಟಿತಂ ।
ಪಂಚಮೇ ದಿವಸೇ ಪ್ರಾಪ್ತೇ ನಗರಾಂತಸ್ಥಿತಂ ರವಿಂ ॥ ೬೩ ॥

ಪೂಜಯಿತ್ವಾ ವಿಧಾನೇನ ಷಷ್ಠೇಽಹ್ನಿ ಭವನಂ ನಯೇತ್ ।
ರಥಯಾತ್ರಾಪ್ರಸಂಗೇನ ಕಥಿತಾ ರಥಸಪ್ತಮೀ ॥ ೬೪ ॥

ಸರ್ವಪಾಪಹರಾ ಪುಣ್ಯಾ ಕಿಂಚಿದನ್ಯನ್ನಿಬೋಧ ಮೇ ।
ಗೌರೀ ಪೂಜ್ಯಾ ತೃತೀಯಾಯಾಂ ಚತುರ್ಥ್ಯಾಂ ವಿಘ್ನನಾಯಕಃ ॥೬೫॥

---

೬೨. ಅಲ್ಲಿ ಆ ರಾತ್ರಿಯಲ್ಲಿ ವಿನೋದಕರವಾದ ಪ್ರೇಕ್ಷಣಾದಿಗಳ ದರ್ಶನ ದಿಂದ ಜಾಗರಣ ಮಾಡಿ ಮೂರನೆಯ ದಿನ ಎಂದರೆ ನಾಲ್ಕನೆಯ ದಿವಸ ಊರಿನ ಉತ್ತರದ ಕಡೆಯ ಬೀದಿಗೆ ರಥವನ್ನು ಎಳೆದು ನಿಲ್ಲಿಸಬೇಕು.

೬೩. ಹೀಗೆ ನಾಲ್ಕು ದಿನವೂ ನಡೆಯಿಸಿದರೆ ಸಾಂಗವಾಗಿ ಮಹಾಯಾತ್ರೆ ಯಾಗುವುದು. ನಾಲ್ಕನೆ ದಿನ ರಾತ್ರಿಯೂ ಅದ್ಭುತ ದೃಶ್ಯಗಳನ್ನು ಪ್ರದರ್ಶಿಸ ಬೇಕು. ಐದನೆಯದಿವಸ ಉದಯವಾಗುತ್ತಲೆ ಊರಿನ ಕೊನೆಯ ಬೀದಿಗೆಳೆದು ಆ ರಥದ ಮೇಲಿರುವ ಸ್ವಾಮಿಗೆ ವಿಧಿವಿಧಾನದಂತೆ ಪೂಜೆಯನ್ನು ನಡೆಯಿಸಿ ಆರನೆಯ ದಿನ ದೇವಾಲಯಕ್ಕೆ ತರಬೇಕು.

೬೪. ರಥಯಾತ್ರೆಯ ಪ್ರಸಂಗವನ್ನು ಹೇಳತೊಡಗಿ ರಥಸಪ್ತಮೀ ಉತ್ಸವ ವನ್ನು ಹೇಳಿದುದಾಯಿತು.

೬೫. ನಮ್ಮ ಸಮಸ್ತ ಪಾಪಗಳನ್ನು ನಾಶಮಾಡಬಲ್ಲುದೂ, ಪುಣ್ಯಪ್ರದವೂ ಆದ ಇನ್ನೊಂದು ವಿಚಾರವನ್ನು ಹೇಳುತ್ತೇನೆ. ತೃತೀಯೆಯಲ್ಲಿ ಗೌರಿಯ ಪೂಜೆ ಶ್ರೇಷ್ಠ. ಚತುರ್ಥಿಯಲ್ಲಿ ವಿನಾಯಕನನ್ನು ಪೂಜಿಸುವುದು ಶ್ರೇಷ್ಠ.

**ಪಂಚಮ್ಯಾಂ ಪಂಕಜಕರಾಂ ಪೂಜಯೇದ್ವಾ ಸರಸ್ವತೀಂ ।**
**ಷಷ್ಠ್ಯಾಂ ಶಕ್ತಿಧರಂ ಸ್ಕಂದಂ ಸಪ್ತಮ್ಯಾಂ ತು ದಿವಾಕರಂ ॥ ೬೬ ॥**

**ಅಷ್ಟಮ್ಯಾಂ ಚ ಚತುರ್ದಶ್ಯಾಂ ಸಂಪೂಜ್ಯಃ ಶಶಿಶೇಖರಃ ।**
**ನವಮ್ಯಾಂ ಪೂಜಯೇಚ್ಚಂಡೀಂ ಚಾಮುಂಡಾಂ ಮುಂಡಮಾಲಿನೀಂ ॥**

**ದಶಮ್ಯಾಮೃಷಯಃ ಶಾಂತಾಃ ಸರ್ವೇ ವ್ಯಾಸಪುರಸ್ಸರಾಃ ।**
**ಏಕಾದಶ್ಯಾಂ ಚಕ್ರಪಾಣಿಂ ದ್ವಾದಶ್ಯಾಂ ವಾ ಸಮರ್ಚಯೇತ್ ॥ ೬೮ ॥**

**ತ್ರಯೋದಶ್ಯಾಂ ತ್ರಿಣೇತ್ರೋದ್ಧವಹ್ನಿನಾ ಶಾಂತವಿಗ್ರಹಂ ।**
**ಸಾಧಾರಣೀ ತು ಸರ್ವೇಷಾಂ ಪೌರ್ಣಮಾಸೀ ತಿಥಿಃ ಸ್ಮೃತಾ ॥ ೬೯ ॥**

---

೬೬. ಪಂಚಮಿಯ ದಿನ ಪದ್ಮಹಸ್ತೆಯಾದ ಲಕ್ಷ್ಮೀದೇವಿಯನ್ನೋ ಅಥವಾ ಸರಸ್ವತಿಯನ್ನೋ ಪೂಜಿಸುವುದು ಶ್ರೇಷ್ಠ. ಷಷ್ಠಿಯಲ್ಲಿ ಶಕ್ತ್ಯಾಯುಧ ಧಾರಿಯಾದ ಸುಬ್ರಹ್ಮಣ್ಯಸ್ವಾಮಿಯ ಪೂಜೆಯೂ, ಸಪ್ತಮಿಯ ದಿನ ಸೂರ್ಯ ದೇವನನ್ನು ಪೂಜಿಸುವುದೂ ಶ್ರೇಷ್ಠ.

೬೭. ಅಷ್ಟಮಿಯ ದಿನವೂ ಚತುರ್ದಶಿಯ ದಿನವೂ ಚಂದ್ರಶೇಖರನನ್ನು ಅರ್ಚಿಸುವುದು ಶ್ರೇಷ್ಠ. ನವಮಿಯ ದಿನ ರುಂಡಮಾಲಾಧರೆಯಾದ ಚಾಮುಂಡಾಂಬೆಯನ್ನು ಪೂಜಿಸಬೇಕು.

೬೮. ದಶಮಿಯ ದಿನ ವ್ಯಾಸರೇ ಮುಂತಾದ ಶಾಂತಾತ್ಮರಾದ ಋಷಿ ವರ್ಯರನ್ನು ಪೂಜಿಸಬೇಕು. ಏಕಾದಶಿಯ ದಿನ ಅಥವಾ ದ್ವಾದಶಿಯ ದಿನ ಮಹಾವಿಷ್ಣುವನ್ನು ಪೂಜಿಸಬೇಕು.

೬೯. ತ್ರಯೋದಶಿಯ ದಿನ ಹಣೆಗಣ್ಣಿನ ಜ್ವಾಲೆಯಿಂದ ಕಾಮನನ್ನು ದಹಿಸಿ ಶಾಂತನಾದ ಶಿವನನ್ನು ಪೂಜಿಸಬೇಕು. ಪೂರ್ಣಿಮಾ ತಿಥಿಯು ಶಿವನನ್ನು ಪೂಜಿಸುವುದಕ್ಕೆ ಸರ್ವಸಧಾರಣವಾಗಿ ಶ್ರೇಷ್ಠವೆನಿಸಿದೆ.

ಆಂದೋಲಕೇ ಮದನಕೇ ರಥಯಾತ್ರಾಸು ಚೈವ ಹಿ ।
ವ್ಯುತ್ಕ್ರಮೇಣಾಪಿ ಕರ್ತವ್ಯಾ ತಿಥೀನಾಂ ಕಾರ್ಯಗೌರವಾತ್ ॥
ಯಾತ್ರಾ ವಾಸಂತಿಕೀ ಚೇಯಂ ಚಿತ್ತಸ್ವಾಸ್ಥ್ಯಕರೀ ಪರಾ ॥ ೨೦ ॥

ಸಮ್ಯಕ್ಸುಧಾಧವಲಿತೇ ಭವನೇ ಸುರಾಣಾ-
ಮಂತಸ್ಸುವಸ್ತ್ರಮಣಿಮೌಕ್ತಿಕದಾನಚಿತ್ರೇ ॥
ತಾಂಬೂಲಕಕ್ರಮುಕವಾರವಿಲಾಸಿನೀಭಿ-
ರ್ಯಾತ್ರಾಂ ವಿಧಾಯ ಭವತೀಹ ಸ ಭಾರತೇಶಃ ॥ ೨೧ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ದಮನಕಾನ್ದೋಲಕರಥಯಾತ್ರಾಮಹೋತ್ಸವ ವರ್ಣನಂ ನಾಮ ಚತುಸ್ತ್ರಿಂಶದುತ್ತರಶತತಮೋಽಧ್ಯಾಯಃ.

---

೨೦. ಆಂದೋಳನೋತ್ಸವ, ಮದನೋತ್ಸವ, ರಥೋತ್ಸವ ಮೊದಲಾದುವುಗಳನ್ನು ಏರ್ಪಡಿಸುವಾಗ ಕಾರ್ಯಗೌರವವಿದ್ದರೆ ಈ ತಿಥಿಗಳನ್ನು ಕಾಯದೆ ವ್ಯುತ್ಕ್ರಮದಿಂದಲಾದರೂ ಮಾಡಬಹುದು. ವಸಂತಋತುವಿನಲ್ಲಿ ರಥೋತ್ಸವ ಮಾಡಿಸುವುದು ಶ್ರೇಷ್ಠವೂ ಮನಶ್ಶಾಂತಿದಾಯಕವೂ ಆಗಿದೆ.

೨೧. ದೇವಾಲಯಕ್ಕೆಲ್ಲಾ ಅಂದವಾಗಿ ಸುಣ್ಣ ತೊಡೆಸಿ, ಒಳಗೆ ದೇವರಿಗೆ ಶ್ರೇಷ್ಠವಾದ ವಸ್ತ್ರಗಳು, ಮುತ್ತು, ರತ್ನ, ಇವುಗಳ ಆಭರಣಗಳು, ಮುಂತಾದ್ದನ್ನೆಲ್ಲಾ ನವೀನವಾಗಿ ಸಮರ್ಪಿಸಿ ಅಲಂಕಾರಮಾಡಿಸುವುದು, ಸರ್ವರಿಗೂ ವೀಳೆದೆಲೆ ಅಡಿಕೆಗಳನ್ನು ಕೊಡಿಸುವುದು, ವಾರಸ್ತ್ರೀಯರ ನರ್ತನಾದಿಗಳು, ಇವು ಅಂಗವಾಗಿರುವಂತೆ ಸ್ವಾಮಿಯ ರಥೋತ್ಸವವನ್ನು ಏರ್ಪಡಿಸಿದವನು ಭಾರತ ಭೂಮಿಗೆ ಅಧಿಪನೆನಿಸುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ದಮನಕೋತ್ಸವ ಆಂದೋಳನೋತ್ಸವ ರಥೋತ್ಸವ ವರ್ಣನೆಯೆಂಬ ನೂರಮೂವತ್ತ ನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣ
## ಉತ್ತರಪರ್ವಣಿ
## ಪಂಚತ್ರಿಂಶದುತ್ತರಶತತಮೋಽಧ್ಯಾಯಃ

॥ ಶ್ರೀಕೃಷ್ಣ ಉವಾಚ ॥

ಗೌರೀಂ ವಿವಾಹ್ಯ ಜಗ್ರಾಹ ಹರಃ ಪಾಶುಪತಂ ವ್ರತಂ ।
ಉಮಾಪತಿಃ ಪಶುಪತಿರ್ಧ್ಯಾನಾಸ್ತಕೋ ಬಭೂವ ಚ ॥ ೧ ॥

ಬ್ರಹ್ಮಾದಿಭಿಃ ಸಮಾಮಂತ್ರ್ಯ ವಿಬುಧೈಃ ಪುತ್ರಲಬ್ಧಯೇ ।
ಗೌರ್ಯಾ ಮನೋಽಭಿಲಷಿತಪೂರಣಾಯ ಪ್ರಹರ್ಷಿತೈಃ ॥ ೨ ॥

ಪ್ರಹಿತಃ ಕ್ಷೋಭಣಾರ್ಥಾಯ ಸಮರ್ಥ ಇತಿ ಮನ್ಮಥಃ ।
ತತೋ ಮಾರಃ ಸ್ಮರಃ ಕಾಮೋಪ್ಯಾಜಗಾಮ ತಮಾಶ್ರಮಂ ॥ ೩ ॥

---

### ನೂರಮೂವತ್ತೈದನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಪರಮೇಶ್ವರನು ಗೌರಿಯನ್ನು ವಿವಾಹವಾದ ಮೇಲೆ ಪಾಶುಪತವ್ರತಾಚರಣೆಗೆ ಆರಂಭಿಸಿದನು. ಉಮಾಪತಿಯಾದ ಪರಶಿವನು ಪಶುಪತಿಯು ಧ್ಯಾನಾಸಕ್ತನಾಗಿ ತಪಸ್ಸು ಮಾಡತೊಡಗಿದನು.

೨. ಬ್ರಹ್ಮಾದಿದೇವತೆಗಳೆಲ್ಲರೂ ಒಟ್ಟುಗೂಡಿ ಗೌರಿದೇವಿಗೆ ಅಪೇಕ್ಷಿತವಾದ ಪುತ್ರಪ್ರಾಪ್ತಿಯುಂಟಾಗುವುದಕ್ಕಾಗಿ ಶಿವನನ್ನು ಎಚ್ಚರಗೊಳಿಸಲು ಉತ್ಸಾಹದಿಂದ ಆಲೋಚಿಸಿದರು.

೩. ಧ್ಯಾನರೂಢನಾದ ಶಿವನ ಮನಸ್ಸನ್ನು ಚಂಚಲಗೊಳಿಸುವ ಕಾರ್ಯಕ್ಕೆ ಇವನೇ ಸಮರ್ಥನೆಂದು ನಂಬಿ ಮನ್ಮಥನನ್ನು ಕಳುಹಿಸಿದರು. ಮಾರ, ಸ್ಮರ, ಕಾಮ ಎಂಬ ನಾನಾ ನಾಮಗಳುಳ್ಳ ಆ ಮದನನು, ಶಿವನು ಧ್ಯಾನರೂಢನಾಗಿ ಕುಳಿತಿದ್ದ ಆಶ್ರಮಕ್ಕೆ ಬಂದನು.

ರತಿಪ್ರೀತಿಮದೋನ್ಮಾದವಸಂತಶ್ರೀ ಸಹಾಯವಾನ್ ।
ನಿಧಾನವಾರುಣೀದರ್ಪಶೃಂಗಾರೈಃ ಪರಿವಾರಿತಃ ॥ ೪ ॥

ಆಮ್ರಾಶೋಕವನೋತ್ತಂಸೋ ಮಾಲತೀಕೃತಶೇಖರಃ ।
ವೀಣಾಮೃದಂಗಸಂಗೀತಕೋಕಿಲಾಶೃಂಗದೂತಕಃ ॥ ೫ ॥

ಝುಲ್ಲರೀವಾದ್ಯಸಂಘುಷ್ಟಭಾಂಡಾಗಾರಿಕಲೇಖಕಃ ।
ಪಾನಮತ್ತಾಂಗನಾರೂಢೋ ಹಿಂದೋಲಾಶ್ಚರ್ಯಮಂತ್ರಿವಾನ್॥ ೬ ॥

ದಕ್ಷಿಣಾನಿಲಗಂಧಾಢ್ಯಃ ಕಟಾಕ್ಷೇಕ್ಷಿತ ವರ್ಷವಾನ್ ।
ಮಹಾರಾಜಾಧಿರಾಜೋ ವಾ ಸ್ಮರಃ ಪ್ರಾಪ್ತೋ ಹರಾಂತಿಕಂ ॥ ೭ ॥

ಸ ಪುಷ್ಪಚಾಪಮಾಕೃಷ್ಯ ಮದನೋನ್ಮಾದನಂ ಶರಮ್ ।
ಚಿಕ್ಷೇಪ ತ್ರಿಪುರಘ್ನಾಯ ಸಮಾಧೇರ್ಭಂಗಹೇತವೇ ॥ ೮ ॥

---

೪. ರತಿ, ಪ್ರೀತಿ, ಮದ, ಉನ್ಮಾದ, ವಸಂತ ಇವರುಗಳು ಅವನಿಗೆ ಸಹಾಯಕರಾಗಿ ಬಂದರು. ನಿಧಾನ, ವಾರುಣೀ, ದರ್ಪ, ಶೃಂಗಾರಗಳು ಅವನ ಪರಿವಾರದವರೆನಿಸಿ ಬಂದರು.

೫. ಆಗ ಅವನು ಮಾವಿನ ಚಿಗುರು, ಅಶೋಕಪಲ್ಲವ ಇವನ್ನು ಹೊಸದಾಗಿ ಕರ್ಣಾಭರಣವಾಗಿ ಮಾಡಿಕೊಂಡಿದ್ದನು. ಮಾಲತೀಪುಷ್ಪವನ್ನು ತಲೆಯಲ್ಲಿ ಧರಿಸಿದ್ದನು. ವೀಣಾಧ್ವನಿ, ಮೃದಂಗಧ್ವನಿ, ಸಂಗೀತ, ಕೋಕಿಲೆ ಇವೇ ಅವನ ದೂತರೆನಿಸಿದುವು.

೬-೭. ಝುಲ್ಲರೀಧ್ವನಿ ವಾದ್ಯಶಬ್ದಗಳೇ ಭಾಂಡಾರಿ ಮತ್ತು ಲೇಕಖರಾದರು. ಮದ್ಯಪಾನಮಾಡಿ ಮದವೇರಿದ ಸ್ತ್ರೀಯರು ರಥವಾಹನವಾದರು. ಆಶ್ಚರ್ಯಕರ ವಾದ ಹಿಂದೋಳ ಕ್ರೀಡಾನಿರತನೂ ಸುಗಂಧಯುಕ್ತನೂ ಆದ ದಕ್ಷಿಣಾನಿಲನು ಮಂತ್ರಿಯೆನಿಸಿದನು. ಕಟಾಕ್ಷವೀಕ್ಷಣೆಯೆಂಬುದೇ ವೃಷ್ಟಿಯೆನಿಸಿತು. ಈರೀತಿ ಸ್ಮರನೆಂಬ ರಾಜಾಧಿರಾಜನು ತನ್ನ ಪರಿವಾರ ಸಹಿತ ಶಿವನು ತಪಸ್ಸು ಮಾಡುತ್ತಿದ್ದಲ್ಲಿಗೆ ಬಂದನು.

೮. ತ್ರಿಪುರಾರಿಯಾದ ಪರಮೇಶ್ವರನ ಸಮಾಧಿಯೋಗವನ್ನು ಭಂಗ ಪಡಿಸುವುದಕ್ಕಾಗಿ ಆ ಪ್ರಕಾರ ಬಂದ ಮನ್ಮಥನು, ತನ್ನ ಧನುಸಿನ ಹೆದೆಯನ್ನೆಳೆದು ಮದನೋನ್ಮಾದವೆಂಬ ಬಾಣವನ್ನು ಹೂಡಿ ಶಿವನ ಮೇಲೆ ಪ್ರಯೋಗಿಸಿದನು.

**ಬುದ್ಧ್ವಾ ತಂ ತಸ್ಯ ಸಂಕಲ್ಪಂ ರುದ್ರಃ ಕ್ರೋಧಾಜ್ಜ್ವಲನ್ ರುಷಾ ।**
**ಲಾಲಟಾದ್ವಹ್ನಿಮುತ್ಸೃಜತ್ತೃತೀಯನಯನಾದ್ಧರಃ ॥ ೯ ॥**

**ಕಾಮೋ ವಿಲೋಕಿತಸ್ತೇನ ಭಸ್ಮೀಭೂತಶ್ಚ ತತ್ಕ್ಷಣಾತ್ ।**
**ದಗ್ಧಂ ದೃಷ್ಟ್ವಾ ಸ್ಮರಂ ಶೋಕಾದ್ರತಿಪ್ರೀತೀ ಸ್ಥಿತೇ ಸದಾ ॥ ೧೦ ॥**

**ಕರುಣಂ ವಿಲಪಂತ್ಯೌ ತೇ ಸರ್ವಮನ್ಯದ್ದಿಶಂ ಗತಂ ।**
**ತತಃ ಶೋಕಾರ್ತಹೃದಯಾ ಗೌರೀ ರುದ್ರಮುವಾಚ ಹ ॥ ೧೧ ॥**

**ಭಗವನ್ನಸ್ಮದರ್ಥೇ ತಂ ಕಾಮಂ ನಿರ್ದಗ್ಧವಾನಸಿ ।**
**ತೇನೈತೇ ಪಶ್ಯ ನಾರ್ಯೌ ತೇ ಕಾಮಸ್ಯ ರುದಿತಃ ಕಥಂ ॥ ೧೨ ॥**

---

೯. ಪರಮೇಶ್ವರನು ಅವನ ದುರುದ್ದೇಶವನ್ನು ತಿಳಿದು ಎಚ್ಚರಗೊಂಡನು. ಬಳಿಕ ಶಿವನು ತನ್ನ ಹಣೆಗಣ್ಣಿನಲ್ಲಿ ಅಗ್ನಿಯನ್ನು ನಿರ್ಮಿಸಿ, ಆ ಫಾಲನೇತ್ರದಿಂದ ಮನ್ಮಥನನ್ನು ಈಕ್ಷಿಸಲಾಗಿ ಮದನನು ಆ ಕ್ಷಣದಲ್ಲಿ ದಗ್ಧನಾಗಿ ಭಸ್ಮೀಭೂತನಾದನು.

೧೦. ಆ ರೀತಿ ಮನ್ಮಥನು ಉರಿದು ಬೂದಿಯಾದುದನ್ನು ನೋಡಿ ಅವನ ಪ್ರಿಯೆಯರಾದ ರತಿ, ಪ್ರೀತಿ ಇವರು ದುಃಖದಿಂದ ಹೃದಯವಿದ್ರಾವಕವಾಗುವಂತೆ ಗೋಳಾಡಿದರು. ಅವರು ಹಾಗೆ ವಿಲಪಿಸುವುದನ್ನು ನೋಡಿ ಉಳಿದುವೆಲ್ಲವೂ ದಿಕ್ಕುಪಾಲಾಗಿ ಹೋದುವು.

೧೧. ರತಿ, ಪ್ರೀತಿಯರಿಬ್ಬರೂ ಆರೀತಿ ಘೋರವಾಗಿ ರೋದಿಸುವುದನ್ನು ನೋಡಿ ಬಹು ವ್ಯಥೆಯಿಂದ ಕೂಡಿದ ಮನಸ್ಸುಳ್ಳ ಗೌರೀದೇವಿಯು ಪತಿಯಾದ ಶಿವನನ್ನು ಕುರಿತು ಇಂತೆಂದಳು.

೧೨. ಎಲೈ ಷಡ್ಗುಣೈಶ್ವರ್ಯಸಂಪನ್ನನೇ! ನಮ್ಮಿಬ್ಬರ ಸಮಾಗಮಕ್ಕೋಸ್ಕರವಾಗಿಯೇ ಅವನು ಹೀಗೆ ಮಾಡಿದನು. ನೀನು ಅವನನ್ನು ದಹಿಸಿಬಿಟ್ಟೆ. ಆ ಕಾರಣದಿಂದ ಆ ಕಾಮನ ಪ್ರಿಯೆಯರಿಬ್ಬರೂ ಹೀಗೆ ಗೋಳಾಡುತ್ತಿದ್ದಾರೆ. ನೋಡಿದೆಯಾ!

**ಕುರು ಪ್ರಸಾದಂ ದೇವೇಶ ರತಿಪ್ರೀತ್ಯೈ ವೃಷಧ್ವಜ ।**
**ಸಂಜೀವಯ ಸ್ಮರಂ ಶಂಭೋ ಮೂರ್ತಿಮಂತಂ ಪುನಃ ಕುರು ॥ ೧೩ ॥**

**ತಚ್ಛ್ರುತ್ವಾ ತು ಮಹಾದೇವೋ ಹೃಷ್ಟಃ ಪ್ರೋವಾಚ ಪಾರ್ವತೀಂ ।**
**ಉಪಪ್ಲುತಂ ಜಗತ್ಸರ್ವಂ ಮನ್ಮಥೇನ ಶರೀರಿಣಾ ॥ ೧೪ ॥**

**ಮಯಾ ದಗ್ಧಸ್ಯ ಕಾಮಸ್ಯ ಪುನರಾಗಮನಂ ಕುತಃ ।**
**ಕಿಂತು ತೇ ಮಾನಯನ್ವಾಕ್ಯಂ ಕರೋಮಿ ಸಫಲಂ ಪ್ರಿಯೇ ॥ ೧೫ ॥**

**ಅಸ್ಮಿನ್ವಸಂತಸಮಯೇ ಶುಕ್ಲಪಕ್ಷೇ ತ್ರಯೋದಶೀ ।**
**ಅಸ್ಯಾಂ ಮನೋಭವೋ ದೇವಿ ಭವಿಷ್ಯತಿ ಶರೀರವಾನ್ ॥ ೧೬ ॥**

**ಏತೇನ ಬೀಜಭೂತೇನ ಜಗದ್ವರ್ತಿಷ್ಯತೇಽಖಿಲಂ ।**
**ಏವಂ ವರಮಿಮಂ ದತ್ತ್ವಾ ಮನ್ಮಥಾಯ ಯುಧಿಷ್ಠಿರ ॥ ೧೭ ॥**

---

೧೩. ದೇವೇಶನಾದ ವೃಷಭಧ್ವಜನೇ! ಆ ರತಿ, ಪ್ರೀತಿ ಇವರಿಗೋಸ್ಕರವಾಗಿಯಾದರೂ ಅನುಗ್ರಹತೋರಿಸು. ಮನ್ಮಥನು ಪುನಃ ದೇಹವನ್ನು ಧರಿಸಿ ಬದುಕಿ ಬರುವಂತೆ ಮಾಡು ಎಂದು ಹೇಳಿದಳು.

೧೪. ಪಾರ್ವತಿಯು ಹೇಳಿದ ಈ ಮಾತನ್ನು ಕೇಳಿ ಮಹಾದೇವನು ಹರ್ಷಯುಕ್ತನಾಗಿ ಆಕೆಯನ್ನು ಕುರಿತು ಮನ್ಮಥನು ಸಶರೀರಿಯಾಗಿ ಇದ್ದುದರಿಂದ ಲೋಕವೆಲ್ಲಾ ಬಹು ತೊಂದರೆಗೆ ಈಡಾಗಿತ್ತು.

೧೫. ಅವನನ್ನು ಸುಟ್ಟುಹಾಕಿರುವಾಗ ಅವನು ಪುನಃ ಬದುಕುವುದೆಂತು? ಅವನು ಬರುವುದು ಹೇಗೆ? ಎಲೌ ಪ್ರಿಯೇ! ಆದರೂ ನಿನ್ನಲ್ಲಿ ಗೌರವಕ್ಕೋಸ್ಕರ ನಿನ್ನ ಪ್ರಾರ್ಥನೆಯನ್ನು ಸಫಲಮಾಡುವೆನು.

೧೬. ಎಲೌ ದೇವಿಯೇ! ಈ ವಸಂತಋತುವಿನಲ್ಲಿ ಶುಕ್ಲತ್ರಯೋದಶೀ ದಿನ ಈ ಮನ್ಮಥನು ಸಶರೀರಿಯಾಗುವನು.

೧೭. ಬೀಜಸ್ವರೂಪನಾದ ಅವನಿಂದ ಸಕಲ ಜಗತ್ತೂ ವರ್ಧಮಾನವಾಗುವುದು ಎಂದನು. ಅಯ್ಯಾ ಯುಧಿಷ್ಠಿರ! ಪಾರ್ವತೀ ಪ್ರಿಯನಾದ ಶಿವನು ಮನ್ಮಥನಿಗೆ ಈ ಪ್ರಕಾರವಾಗಿ ವರವನ್ನು ಕೊಟ್ಟು ಹಿಮವತ್ಪರ್ವತ ಶಿಖರವಾದ ಕೈಲಾಸಕ್ಕೆ ಹೋದನು.

**ಜಗಾಮ ಹಿಮವಚ್ಛೃಂಗಂ ಕೈಲಾಸಂ ಪಾರ್ವತೀಪ್ರಿಯಃ ।**
**ತದೇತತ್ಸರ್ವಮಾಖ್ಯಾತಂ ಸ್ಮರಸ್ಯ ಚರಿತಂ ನೃಪ ॥ ೧೮ ॥**

**ಪೂಜಾವಿಧಾನಮಪರಂ ಕಥಯಾಮಿ ಶೃಣುಷ್ವ ತತ್ ।**
**ಅಸ್ಯಾಂ ಸ್ನಾತ್ವಾ ತ್ರಯೋದಶ್ಯಾಮಶೋಕಾಖ್ಯಂ ನಗಂ ಲಿಖೇತ್ ॥**
**ಸಿಂಧೂರಜನಿತೈರಂಗೈರತಿಪ್ರೀತಿಸಮನ್ವಿತಂ ॥ ೧೯ ॥**

**ಕಾಮದೇವಂ ವಸಂತಂ ಚ ವಾಜಿವಕ್ತ್ರಂ ಝಷಧ್ವಜಂ ॥ ೨೦ ॥**

**ಸೌವರ್ಣಂ ವಾ ಮಹಾರಾಜ ವಾರ್ಕ್ಷ್ಯಂ ಚಿತ್ರಮಥಾಪಿ ವಾ ।**
**ಲೀಲಾವಿಲಾಸಗಮನಂ ಗರ್ವಿತಂ ಸಾಪ್ಸರೋಗಣಂ ॥ ೨೧ ॥**

---

೧೮. ಅಯ್ಯಾ ಭೂಪತಿಯೇ! ಈ ಪ್ರಕಾರವಾಗಿ ಮನ್ಮಥವೃತ್ತಾಂತವನ್ನು ಸಮಗ್ರವಾಗಿ ತಿಳಿಸಿದುದಾಯಿತು. ಇನ್ನು ಅವನ ಪೂಜಾವಿಧಾನವನ್ನು ಹೇಳುತ್ತೇನೆ ಅದನ್ನು ಕೇಳು.

೧೯. ಆ ಚೈತ್ರ ಶುಕ್ಲಪಕ್ಷದಲ್ಲಿ ಬರುವ ಅಶೋಕತ್ರಯೋದಶಿಯ ದಿನ ಸ್ನಾನಾದಿಗಳನ್ನು ನೆರವೇರಿಸಿ ಒಂದು ಅಶೋಕವೃಕ್ಷಾಕೃತಿಯನ್ನು ಲೇಖಿಸಬೇಕು.

೨೦. ಅದರ ಅಡಿಯಲ್ಲಿ ಸಿಂಧೂರ ವರ್ಣದಿಂದ ಶೋಭಿಸುವ ಅವಯವಪುಳ್ಳವರಾದ ರತಿ, ಪ್ರೀತಿ ಇವರ ಸಮೇತವಾಗಿರುವಂತೆಯು ಕುದುರೆಯಂತೆ ಮುಖ ಮೀನಧ್ವಜ ಇವು ಯುಕ್ತವಾಗಿರುವಂತೆ ಕಾಮದೇವಪ್ರತಿಮೆಯನ್ನೂ ವಸಂತ ಪ್ರತಿಮೆಯನ್ನೂ ಮಾಡಿಸಲು ಏರ್ಪಡಿಸಬೇಕು.

೨೧. ಅದನ್ನು ಸುವರ್ಣದಿಂದಾಗಲಿ ಮರದಿಂದಾಗಲಿ ಚಿತ್ರಯುಕ್ತವಾಗಿರುವಂತೆ ರಚಿಸಬೇಕು. ಗರ್ವದಿಂದಲೂ ಬೆಡಗಿನಿಂದಲೂ ಲೀಲೆಯಾಗಿ ಸಂಚರಿಸುವ ಅಪ್ಸರಸಮೂಹಗಳು ಜತೆಯಲ್ಲಿರುವಂತೆ ರಚಿಸಬೇಕು.

ಗಂಧರ್ವಗೀತವಾದಿತ್ರಪ್ರೇಕ್ಷಣೀಯಸಮಾಕುಲಂ ।
ನಂದ್ಯಾವರ್ತರತಿಕ್ರೀಡಾಪ್ರೀತಿವಿದ್ಯಾಧರೈರ್ಯುತಂ ॥ ೨೨ ॥

ಮಧ್ಯಾಹ್ನೇ ಪೂಜಯೇದ್ಭಕ್ತ್ಯಾ ಭಕ್ಷ್ಯೈರ್ಧೂಪೈಃ ಸ್ರಗಂಬರೈಃ ।
ಮಂತ್ರೇಣಾನೇನ ಕೌಂತೇಯ ನರೋ ನಾರ್ಯಾ ಸಮನ್ವಿತಃ ॥ ೨೩ ॥

ನಮೋ ವಾಮಾಯ ಕಾಮಾಯ ದೇವದೇವಾಯ ಮೂರ್ತಯೇ ।
ಬ್ರಹ್ಮವಿಷ್ಣುಶಿವೇಂದ್ರಾಣಾಂ ಮನಃಕ್ಷೋಭಕರಾಯ ವೈ ॥ ೨೪ ॥

ಕೃತ್ವೈವಮರ್ಚಯಿತ್ವಾ ತು ದೇವದೇವಂ ಮನೋಭವಂ ।
ತತಸ್ತಸ್ಯಾಗ್ರತೋ ದೇಯಾ ಮೋದಕಾ ಮುಖಮೋದಕಾಃ ॥ ೨೫ ॥

ನಾನಾಪ್ರಕಾರಾನ್ ಭಕ್ಷ್ಯಾಂಶ್ಚ ಕಾಮೋ ಮೇ ಪ್ರೀಯತಾಮಿತಿ ।
ತತೋ ವಿಸರ್ಜಯೇ ದ್ವಿಪ್ರಾನ್ ದತ್ವಾ ಯುಗ್ಮಂ ಸದಕ್ಷಿಣಂ ॥ ೨೬ ॥

---

೨೨. ಮತ್ತು ಗಂಧರ್ವರ ಸಂಗೀತ, ವಾದ್ಯ, ನಾಟ್ಯ ಮೊದಲಾದ ಮನೋಹರವಾದ ದೃಶ್ಯಗಳಿಂದ ಕೂಡಿರುವಂತೆಯೂ ರತಿ, ಪ್ರೀತಿ ಇವರ ಕ್ರೀಡಾರ್ಥವಾಗಿ ನಂದ್ಯಾವರ್ತಾದಿ ವ್ಯೂಹರಚನೆಯಿಂದ ಕ್ರೀಡಿಸುವ ವಿದ್ಯಾಧರರಿಂದ ಕೂಡಿರುವಂತೆಯೂ ರಚಿಸಬೇಕು.

೨೩. ಭಕ್ತಿಯುಕ್ತನಾದ ವ್ರತಿಯು ಪತ್ನಿಸಮೇತನಾಗಿ ಮಧ್ಯಾಹ್ನ ಕಾಲದಲ್ಲಿ ಆ ಪ್ರತಿಮೆಯನ್ನು ವಸ್ತ್ರ ಮಾಲ್ಯ ಧೂಪದೀಪಗಳಿಂದ ಪೂಜಿಸಿ ಭಕ್ಷ್ಯವನ್ನು ನೈವೇದ್ಯಮಾಡಿ ಈ ಮಂತ್ರಪೂರ್ವಕವಾಗಿ ನಮಿಸಬೇಕು.

೨೪. ಅಯ್ಯಾ ಯುಧಿಷ್ಠಿರನೇ ಕೇಳು ! " ದೇವದೇವ ಸುಂದರಕಾರ ಬ್ರಹ್ಮ ವಿಷ್ಣು ಶಿವ ಇಂದ್ರ ಮುಂತಾದವರ ಮನಸ್ಸನ್ನು ಕ್ಷೋಭೆಪಡಿಸಿದ ಕಾಮ ದೇವನೇ ! ನಿನಗೆ ನಮಸ್ಕಾರ" ಎಂದು ಹೇಳಬೇಕು.

೨೫-೨೬. ಈ ಪ್ರಕಾರ ದೇವದೇವನಾದ ಮನೋಭವನನ್ನು ಪೂಜಿಸಿ, ಪೂಜಾಫಲ. ಪ್ರಾಪ್ತಿಗಾಗಿ ಮೋದಕ ಮುಂತಾದ ನಾನಾವಿಧವಾದ ಭಕ್ಷ್ಯಗಳು ವಸ್ತ್ರಯುಗ್ಮ, ದಕ್ಷಿಣೆ, ಇವುಗಳ ಸಮೇತವಾಗಿ ಬ್ರಾಹ್ಮಣನಿಗೆ ಕೊಡಲು ಪ್ರತಿಮೆಯ ಸಮ್ಮುಖದಲ್ಲಿ ಉಪಾಯನದಾನಕ್ಕೆ ಸಿದ್ಧಪಡಿಸಿ " ಮನ್ಮಥನು ನನ್ನಲ್ಲಿ ಪ್ರಸನ್ನನಾಗಲಿ " ಎಂದು ಹೇಳಿ ದಾನಕೊಡಬೇಕು.

**ಸ್ವಪತಿಂ ಪೂಜಯೇನ್ನಾರೀ ವಸ್ತ್ರಮಾಲ್ಯವಿಭೂಷಣೈಃ |**
**ಕಾಮೋಽಯಮಿತಿ ಸಂಚಿಂತ್ಯ ಪ್ರಹೃಷ್ಟೇನಾಂತರಾತ್ಮನಾ　　|| ೨೭ ||**

**ಮನ್ಮಥಾಯತನೇ ತಸ್ಮಿನ್ಯಜಮಾನಃ ಸುಹೃದ್ವೃತಃ |**
**ರಾತ್ರೌ ಜಾಗರಣಂ ಕುರ್ಯಾತ್ಸುಖರಾತ್ರಿರ್ಯಥಾ ಭವೇತ್　　|| ೨೮ ||**

**ಕರ್ಪೂರಕುಂಕುಮಕ್ಷೋದಗಂಧತಾಂಬೂಲಸರ್ಜನೈಃ |**
**ನಾನಾಪ್ರಕಾರೈರ್ಭಕ್ಷ್ಯೈಶ್ಚ ಕುರ್ಯಾದ್ರಾತ್ರೌ ಮಹೋತ್ಸವಂ　　|| ೨೯ ||**

**ದೀಪಪ್ರಜ್ವಾಲನೈರ್ನೃತ್ಯೈಃ ಪ್ರೇಕ್ಷಣೈಃ ಪ್ರೇಕ್ಷಣೋತ್ಸವೈಃ |**
**ಏವಂ ಯಃ ಕುರುತೇ ಪಾರ್ಥ ವರ್ಷೇವರ್ಷೇ ಮಹೋತ್ಸವಂ　　||೩೦||**

---

೨೭. ಅನಂತರ ಆವಾಹಿತನಾದ ದೇವನನ್ನು ವಿಸರ್ಜಿಸಬೇಕು. ಬಳಿಕ ಗೃಹಿಣಿಯು ಹರ್ಷಯುಕ್ತವಾದ ಮನಸ್ಸಿನಿಂದ ತನ್ನ ಪತಿಯನ್ನೇ ಕಾಮದೇವನೆಂದು ಭಾವಿಸಿ ಪ್ರತಿಮಾಪೂಜೆ ಮಾಡಿದ ಬಳಿಯಲ್ಲೇ ಅವನನ್ನು ವಸ್ತ್ರ ಮಾಲ್ಯ ಭೂಷಣಾದಿಗಳಿಂದ ಪೂಜಿಸಬೇಕು.

೨೮. ಯಜಮಾನನು ತನ್ನ ಮಿತ್ರರು ಬಂಧುಗಳ ಸಮೇತ ಆ ಮನ್ಮಥ ಸಾನಿಧ್ಯದಲ್ಲಿ ಆ ರಾತ್ರಿಯು ಸುಖಕರವಾಗಿ ಕಳೆಯುವಂತೆ ಜಾಗರಣ ಮಾಡಬೇಕು.

೨೯. ಜಾಗರಣಾತ್ಪೂರ್ವ ನಾನಾಬಗೆಯಾದ ಭಕ್ಷ್ಯಭೋಜ್ಯಯುಕ್ತವಾಗಿ ಭೋಜನಮಾಡಿ ಪಚ್ಚಕರ್ಪೂರ ಕೇಸರಿ ಇವುಗಳ ಗಂಧಲೇಪನ,ತಾಂಬೂಲ ಮುಂತಾವುಗಳಿಂದ ಆನಂದಭರಿತನಾಗಿರಬೇಕು.

೩೦. ಅದಲ್ಲದೆ ದೀಪೋತ್ಸವದಿಂದಲೂ, ನರ್ತನಾದಿ ದರ್ಶನಾರ್ಹವಾದ ರಮ್ಯ ದೃಶ್ಯಗಳ ವೀಕ್ಷಣದಿಂದಲೂ ಆ ರಾತ್ರಿ ಜಾಗರಣಮಾಡಬೇಕು. ಅಯ್ಯಾ ಕುಂತೀಪುತ್ರನೇ ! ಈ ಪ್ರಕಾರ ವರ್ಷವರ್ಷವೂ ಈ ಮಹೋತ್ಸವವನ್ನು ಮಾಡಬೇಕು.

ವಸಂತಸಮಯೇ ಪ್ರಾಪ್ತೇ ಹೃಷ್ಟಸ್ತುಷ್ಟೋ ನೃಪಃ ಪುರೇ ।
ತಸ್ಯ ಸಂವತ್ಸರಂ ಯಾವಲ್ಲೋಕೋ ರೋಗೈರ್ವಿಮುಚ್ಯತೇ ॥ ೩೧ ॥

ಸುಭಿಕ್ಷಂ ಕ್ಷೇಮಮಾರೋಗ್ಯಂ ಯಶಃ ಶ್ರೀಃ ಸೌಖ್ಯಮುತ್ತಮಂ ।
ಕಾಮವರ್ಷೀ ಚ ಪರ್ಜನ್ಯಸ್ತಸ್ಮಿನ್ರಾಷ್ಟ್ರೇ ಪ್ರಜಾಯತೇ ॥ ೩೨ ॥

ತುಷ್ಯತೇ ಚ ಭೃಶಂ ದೇವೋ ದ್ವಾದಶಾರ್ಧಾರ್ಧಲೋಚನಃ ।
ತಥಾ ಕಾಮಶ್ಚ ವಿಷ್ಣುಶ್ಚ ವಸಂತಶ್ಚ ಪ್ರಜಾಪತಿಃ ॥ ೩೩ ॥

ಚಂದ್ರಸೂರ್ಯಾದಿಕಾಸ್ಸರ್ವೇ ಗ್ರಹಾ ಬ್ರಹ್ಮರ್ಷಯಸ್ತಥಾ ।
ಸರ್ವೇಽಪಿ ತಸ್ಯ ತುಷ್ಯಂತಿ ಯಕ್ಷಗಂಧರ್ವದಾನವಾಃ ॥ ೩೪ ॥

---

೩೧. ವಸಂತಕಾಲ ಪ್ರಾಪ್ತವಾಗುತ್ತಲೆ ಯಾವ ಮಾನವಗಾಗಲಿ ರಾಜನಾಗಲಿ ಸಂತೋಷದಿಂದ ತೃಪ್ತನಾಗಿ ಈ ಉತ್ಸವವನ್ನು ನಡೆಯಿಸುವನೋ ಅವನ ನಗರದಲ್ಲಿ ಸಮಸ್ತ ಪ್ರಜೆಗಳೂ ಆ ವರ್ಷವೆಲ್ಲಾ ರೋಗಾದ್ಯುಪದ್ರವಗಳಿಲ್ಲದೆ ಇರುತ್ತಾರೆ.

೩೨. ಅಲ್ಲದೆ ಆ ರಾಜ್ಯವೆಲ್ಲಾ ಸುಭಿಕ್ಷವಾಗಿ ಕ್ಷೇಮಾರೋಗ್ಯಯುಕ್ತವಾಗಿರುತ್ತದೆ. ಪ್ರಜೆಗಳೆಲ್ಲ ಯಶಸ್ಸನ್ನೂ ಸಂಪತ್ತನ್ನೂ ಉತ್ತಮವಾದ ಸುಖವನ್ನೂ ಪಡೆಯುವರು. ಆ ರಾಷ್ಟ್ರದಲ್ಲಿ ಯಾವ ಕಾಲದಲ್ಲಿ ಮಳೆ ಬೇಕೋ ಆ ಕಾಲದಲ್ಲಿ ಸುವೃಷ್ಟಿಯಾಗುವುದು.

೩೩. ಈ ಮದನೋತ್ಸವವನ್ನು ನಡೆಯಿಸುವುದರಿಂದ (ದ್ವಾದಶಾರ್ಧಾರ್ಧಲೋಚನ) ತ್ರಿಲೋಚನನಾದ ಪರಶಿವನು ಸಂಪೂರ್ಣವಾಗಿ ಸಂತೋಷಪಡುತ್ತಾನೆ. ಅದೇ ರೀತಿ ಕಾಮ, ವಿಷ್ಣು, ವಸಂತ, ಬ್ರಹ್ಮ ಇವರು ಚಂದ್ರಸೂರ್ಯಮುಂತಾದ ಸಮಸ್ತ ಗ್ರಹಗಳೂ.

೩೪. ಬ್ರಹ್ಮರ್ಷಿಗಳೂ ಎಲ್ಲರೂ ಈ ಉತ್ಸವಕರ್ತೃವಿನ ವಿಷಯದಲ್ಲಿ ಸಂತುಷ್ಟರಾಗುತ್ತಾರೆ. ವಿಶೇಷತಃ ಯಕ್ಷರು, ಗಂಧರ್ವರು, ದಾನವರು ಇವರುಗಳೂ.

**ಅಸುರಾ ಯಾತುಧಾನಾಶ್ಚ ಸುಪರ್ಣಾಃ ಪತಗಾ ನಗಾಃ ।**
**ತುಷ್ಟಾಃ ಪ್ರಯಚ್ಛಂತಿ ಸುಖಂ ತಸ್ಯ ಕರ್ತುರ್ನ ಸಂಶಯಃ ॥ ೩೫ ॥**

**ಚೈತ್ರೋತ್ಸವೇ ಸಕಲಲೋಕಮನೋನಿವಾಸಂ ।**
**ಕಾಮಂ ವಸನ್ತಮಲಯಾದ್ರಿಮರುತ್ಸಹಾಯಂ ॥**
**ರತ್ಯಾ ಸಹಾರ್ಚ್ಯ ಪುರುಷಃ ಪ್ರವರಾ ಚ ಯೋಷಿ- ।**
**ತ್ಸೌಭಾಗ್ಯರೂಪಸುತಸೌಖ್ಯಯುತಾ ಸದಾ ಸ್ಯಾತ್ ॥ ೩೬ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಮದನಮಹೋತ್ಸವ ವರ್ಣನಂ ನಾಮ ಪಂಚತ್ರಿಂಶದುತ್ತರ ಶತತಮೋಽಧ್ಯಾಯಃ.**



---

೩೫. ಮತ್ತು ಅಸುರರು, ಯಾತುಧಾನರು, ಗರುಡರು, ಆದಿತ್ಯರು, ಪರ್ವತಗಳು, ವೃಕ್ಷಗಳು ಮುಂತಾದ ಸರ್ವವೂ ಆ ವ್ರತಿಯುವಿಷಯದಲ್ಲಿ ಪ್ರೀತರೂ ತುಷ್ಟರೂ ಆಗಿ, ವ್ರತಕರ್ತೃವಿಗೆ ನಿಸ್ಸಂದೇಹವಾಗಿ ಸುಖಕೊಡುವರು.

೩೬. ಸಮಸ್ತ ಜನಗಳ ಮನಸ್ಸಿನಲ್ಲಿ ವಾಸಿಸತಕ್ಕವನೂ, ವಸಂತ ಮಂದಾನಿಲ ಮಲಯಾದ್ರಿಗಳ ಸಹಾಯದಿಂದ ಶೋಭಿಸುವವನೂ, ಆದ ಕಾಮ ದೇವನನ್ನು ರತಿಸಮೇತವಾಗಿ ಪೂಜಿಸಿದ ಮಾನವಶ್ರೇಷ್ಠರೂ ನಾರೀಮಣಿಯರೂ ಸುಂದರರೂಪ ಅತಿಶಯವಾದ ಸಂಪತ್ತು ಮಕ್ಕಳ ಸೌಖ್ಯ ಇವುಗಳನ್ನು ಸರ್ವದಾ ಪಡೆದು ಸುಖವಾಗಿರುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಮದನ ಮಹೋತ್ಸವ ವರ್ಣನೆಯೆಂಬ ನೂರಮೂವತ್ತೈದನೆಯ ಅಧ್ಯಾಯ ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣ
## ಉತ್ತರಪರ್ವಣಿ
## ಷಟ್ತ್ರಿಂಶದುತ್ತರಶತತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಭೂತಮಾತೇತಿ ಸಂಪ್ರಷ್ಟೇ ಗ್ರಾಮೇ ಗ್ರಾಮೇ ಪುರೇಪುರೇ ।
ಗಾಯನ್ನೃತ್ಯನ್ ಹಸನ್ ಲೋಕಃ ಸರ್ವತಃ ಪರಿಧಾವತಿ ॥ ೧ ॥

ಉನ್ಮತ್ತವತ್ಪ್ರಲಪತಿ ಕ್ಷಿತೌ ಪತತಿ ಮತ್ತವತ್ ।
ಕ್ರುದ್ಧವದ್ಧಾವತಿಪುರಾನ್ಮತ್ತವತ್ಕರ್ಷತೇ ಬಹಿಃ ॥ ೨ ॥

ಮುಖಾಂಗಭಂಗಾನ್ ಕುರುತೇ ಲೋಕೇ ವಾತಗೃಹೀತವತ್ ।
ಭೂತವದ್ಭಸ್ಮಗಾತ್ರಂ ತು ಕರ್ದಮಾನವಗಾಹತೇ ॥ ೩ ॥

---

## ನೂರಮೂವತ್ತಾರನೆಯ ಅಧ್ಯಾಯ

೧. ಯುಧಿಷ್ಠಿರನು ಪ್ರಶ್ನೆಮಾಡುತ್ತಾನೆ—ಪ್ರತಿಯೊಂದು ಗ್ರಾಮದಲ್ಲಿಯೂ ನಗರದಲ್ಲಿಯೂ ಭೂತಮಾತೆ ಎಂಬ ದೇವತೆಯ ಸಂತುಷ್ಟಿಗಾಗಿ ಜನರು ಸಂಗೀತ ಹಾಡುವುದು ನರ್ತನಮಾಡುವುದು ನಗುವುದು ಎಲ್ಲ ಕಡೆಯಲ್ಲೂ ಓಡಾಡುವುದು.

೨. ಹುಚ್ಚರಂತೆ ಪ್ರಲಾಪಿಸುವುದು, ಮದಿಸಿದವನಂತೆ ನೆಲದ ಮೇಲೆ ಬೀಳುವುದು, ಕೋಪಾವಿಷ್ಟರಾದಂತೆ ಓಡುವುದು, ಮತ್ತರಾದಂತೆ ಒಳಗಿದ್ದ ಜನರನ್ನು ಹೊರಕ್ಕೆ ಎಳೆಯುವುದು.

೩. ವಾತರೋಗ ಪೀಡಿತರಾದಂತೆ ಮುಖವಿಕಾರ ಅಂಗವಿಕಾರಾದಿಗಳನ್ನು ಮಾಡುವುದು ಭೂತಗಳಂತೆ ಮೈಗೆಲ್ಲಾ ಭಸ್ಮವನ್ನು ಲೇಪಿಸಿಕೊಳ್ಳುವುದು, ಕೆಸರಿನಲ್ಲಿ ಬಿದ್ದು ಹೊರಳಾಡುವುದು ಹೀಗೆಲ್ಲಾ ಮಾಡುವರು.

ಕಿಮೇಷ ಶಾಸ್ತ್ರನಿರ್ದಿಷ್ಟೋ ಮಾರ್ಗಃ ಕಿಮುತ ಲೌಕಿಕಃ ।
ಮುಹ್ಯತೇ ಮೇ ಮನಃ ಕೃಷ್ಣ ತ್ವಂ ತು ವಕ್ತುಮಿಹಾರ್ಹಸಿ ॥ ೪ ॥

॥ ಶ್ರೀ ಕೃಷ್ಣ ಉವಾಚ ॥

ಶೃಣು ಪಾರ್ಥ ಪ್ರವಕ್ಷ್ಯಾಮಿ ಯತ್ತೇ ಕಿಂಚಿನ್ಮನೋಗತಂ ।
ಆಸ್ತಿಕಃ ಶ್ರದ್ಧಧಾನಶ್ಚ ಭವತೀತಿ ಮತಿರ್ಮಮ ॥ ೫ ॥

ಪಾರ್ವತ್ಯಾ ಸಹಿತಃ ಪಾರ್ಥ ಮಂದರೇ ಚಾರುಕಂದರೇ ।
ಕ್ರೀಡನ್ನಾಸ್ತೇ ಮುದಾ ಯುಕ್ತೋ ದಿವ್ಯಕ್ರೀಡನಕೈರ್ಹರಃ ॥ ೬ ॥

ಹಂಸೋನ್ನತಗತಿಂ ಚಾರುಕುಂಭಭ್ರಾಜಿಕುಚದ್ವಯಂ ।
ಸಿಂಜತ್ಸದ್ರಶನಾಂ ಹೃಷ್ಟಾಂ ದೃಷ್ಟ್ವಾ ಗೌರೀಂ ಜಗದ್ಗುರುಃ ॥ ೭ ॥

---

೪. ಇದು ಶಾಸ್ತ್ರವಿಹಿತವಾದುದೇ ? ಅಥವಾ ಲೌಕಿಕಾಚರಣೆಯೋ ? ಎಂಬದಾಗಿ ನನ್ನ ಮನಸ್ಸು ಭ್ರಾಂತಿಹೊಂದಿದೆ. ಇದರ ತತ್ವಾಂಶವನ್ನು ತಿಳಿಸಲು ನೀನೇ ಶಕ್ತನು, ದಯೆಯಿಟ್ಟು ಹೇಳು ಎಂದು ಕೇಳಿದನು.

೫. ಶ್ರೀಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರ ಮಹಾರಾಜ ! ದೇವರಿದ್ದಾನೆ ಎಂಬ ವಿಷಯದಲ್ಲಿ ನೀನು ನಂಬಿಕೆಯುಳ್ಳವನೂ, ಶ್ರದ್ಧಾವಂತನೂ ಆಗಿರುವೆಯೆಂದು ನಾನು ಭಾವಿಸಿದೇನೆ. ನಿನ್ನ ಮನೋಗತವಾದ ಸಂಶಯ ವಿಚಾರದ ತತ್ವಾಂಶವನ್ನು ಸ್ವಲ್ಪಮಟ್ಟಿಗೆ ಹೇಳುತ್ತೇನೆ ಲಾಲಿಸು.

೬. ಅಯ್ಯಾ ಕುಂತೀಪುತ್ರ ! ಮಂದರಪರ್ವತದ ಸುಂದರವಾದ ಗುಹೆಯೊಂದರಲ್ಲಿ ಶಿವನು ಪಾರ್ವತಿಸಮೇತ ದಿವ್ಯ ಕ್ರೀಡಾಸಕ್ತನಾಗಿ ಸಂತೋಷವಾಗಿ ಇರುತ್ತಿದ್ದನು.

೭. ಹಂಸಪಕ್ಷಿಯಂತೆ ಠೀವಿಯಾದ ನಡಗೆ, ಕಲಶಗಳಂತೆ ಸುಂದರವಾಗಿ ಶೋಭಿಸುವ ಸ್ತನದ್ವಯ, ಝಣತ್ಕಾರ ಮಾಡುತ್ತಾ ಸುಂದರವಾಗಿ ಒಪ್ಪುತ್ತಿರುವ ಒಡ್ಯಾಣ, ಇವುಗಳಿಂದ ಕೂಡಿ ಹರ್ಷಯುಕ್ತಳಾಗಿದ್ದ (ಪಾರ್ವತಿ) ಗೌರೀದೇವಿಯನ್ನು ಒಂದುದಿನ ಪರಮೇಶ್ವರನು ನೋಡಿದನು.

ದಗ್ಧಕಾಮೋಽಪಿ ಚ ಹರಃ ಸಂದೀಪ್ತಮದನೋಽಭವತ್ ।
ನಿಃಸ್ಪೃತಾಂ ಕಾಮಯಾಮಾಸ ಮಹಾರ್ಹಶಯನೇ ಶಿವಃ ॥ ೮ ॥

ರತಸ್ಥಯೋಸ್ತಯೋರ್ಜಾತಂ ದಿವ್ಯಂ ವರ್ಷಶತಂ ಯದಾ ।
ತದಾ ದೇವೀಸಮುಚ್ಛ್ವಾಸನಿರೋಧಾನ್ನಿರ್ಗತಾ ಬಹಿಃ ॥ ೯ ॥

ಮೂತ್ರೋದಕಾತ್ಸಮುತ್ತಸ್ಥೌ ನಾರೀ ನಿರ್ದಾರಿತೋದರಾ ।
ಕೃಷ್ಣಾ ಕರಾಲವದನಾ ಪಿಂಗಾಕ್ಷಾ ಮುಕ್ತಮೂರ್ಧಜಾ ॥ ೧೦ ॥

ಕಪಾಲಮಾಲಾಭರಣಾ ಬದ್ಧಪಿಂಡೋರ್ಧ್ವಪಿಂಡಿಕಾ ।
ಖಟ್ವಾಂಗಕಂಕಾಲಧರಾ ಮುದ್ರಾಂಕಿತಕರಾ ಶಿವಾ ॥ ೧೧ ॥

---

೮. ಕಾಮನನ್ನು ತಾನೇ ಧ್ವಂಸಮಾಡಿದವನಾದರೂ ಆ ಶಿವನು ಮದನಾವಸ್ಥೆ ಉದ್ದೀಪನತೆ ಹೊಂದಿದವನಾಗಿ ಕಾಮಾಸಕ್ತಿರಹಿತೆಯಾದ ಆಕೆಯನ್ನು ಸೊಗಸಾದ ಶಯ್ಯೆಯ ಮೇಲೆ ಮಲಗಬೇಕೆಂದು ಅಪೇಕ್ಷೆಪಟ್ಟನು.

೯ ೧೦. ಬಳಿಕ ಅವರು ಸುರತಕ್ರೀಡೆಯಲ್ಲಿ ನಿರತರಾದರು. ದೇವಮಾನದ ಒಂದು ನೂರುವರ್ಷಗಳು ಕಳೆಯುತ್ತಾ ಬಂದಿತು. ದೇವಿಯು ಉಚ್ಛ್ವಾಸಯತಿಯನ್ನು ನಿರೋಧಮಾಡಿದುದರಿಂದ ಮೂತ್ರೋದಕದಿಂದ ಒಬ್ಬಳು ಸ್ತ್ರೀವ್ಯಕ್ತಿಯು ಉತ್ಪನ್ನೆಯಾಗಿ ಉದರವನ್ನು ಭೇಧಿಸಿಕೊಂಡು ಹೊರಗೆ ಬಂದು ನಿಂತಳು. ಅವಳ ಮುಖವು ಕಪ್ಪಗೆ ಭಯಂಕರವಾಗಿಯೂ ಕಣ್ಣುಗಳು ಕೆಂಪಗೂ ತಲೆಗೂದಲು ಕೆದರಿಕೊಂಡೂ ಇದ್ದವು.

೧೧. ರುಂಡಮಾಲಾಧಾರಿಣಿಯಾದ ಆಕೆಯು ತಲೆಗೂದಲ ಗಂಟನ್ನು ಮೇಲ್ಗಡೆಗೆ ಬಿಗಿಯಾಗಿ ಬಂಧಿಸಿದ್ದಳು. ಖಟ್ವಾಂಗವೆಂಬ ಆಯುಧವನ್ನೂ ಕಂಕಾಳವನ್ನೂ ಧರಿಸಿದ್ದಳು. ಆಕೆಯ ಕೈಯು ಮುದ್ರಾಯುಕ್ತವಾಗಿತ್ತು.

ವ್ಯಾಘ್ರಚರ್ಮಾಂಬರಧರಾ ರಣತ್ಕಿಂಕಿಣಿಮೇಖಲಾ ।
ಡಮಡ್ಡಮಡ್ಡಮರುಕಾ ಫೂತ್ಕಾರಾಪೂರಿತಾಂಬರಾ ॥ ೧೨ ॥

ತಸ್ಯಾಃ ಪಾರ್ಶ್ವಾನುಜಾಶ್ಚಾನ್ಯಾ ಗೀತವಾದ್ಯಲಯಾನುಗಾಃ ।
ಉತ್ತಾಲತಾಲಮಬಲಾ ನೃತ್ಯಂತಿ ಚ ಹಸಂತಿ ಚ ॥ ೧೩ ॥

ಕಪಾಲಖಟ್ವಾಂಗಧರಾ ಗಜಚರ್ಮಾವಗುಂಠಿತಾಃ ।
ತಥೈವ ಶಂಕರಾಜ್ಞಾತಸ್ತದ್ರೂಪಾಭರಣಃ ಪುಮಾನ್ ॥ ೧೪ ॥

ಅನುಗಮ್ಯಮಾನೋ ಬಹುಭಿರ್ಭೂತೈರತಿಭಯಂಕರೈಃ ।
ಸಿಂಹಶಾರ್ದೂಲವದನೈ ರದನೋಲ್ಲಿಖಿತಾಂಬರೈಃ ॥ ೧೫ ॥

---

೧೨. ವ್ಯಾಘ್ರಚರ್ಮವನ್ನೇ ಬಟ್ಟೆಯಾಗಿ ಧರಿಸಿ ಝಣಝಣಿಸುವ ಕಿರುಗೆಜ್ಜೆಯುಳ್ಳ ಒಡ್ಯಾಣವನ್ನು ಹಾಕಿಕೊಂಡಿದ್ದಳು. ಡಮರುಕ ವಾದ್ಯವನ್ನು ಹಿಡಿದು ಶಬ್ದಮಾಡುತ್ತಿದ್ದಳು. ಫೂತ್ಕಾರಶಬ್ದವು ಆಕಾಶವನ್ನೆಲ್ಲಾ ವ್ಯಾಪಿಸಿದ್ದಿತು.

೧೩. ಈ ಪ್ರಕಾರ ಇರುವ ಆಕೆಯಿಂದ ಹಲವರು ಉತ್ಪನ್ನರಾಗಿ ಆಕೆಯ ಅಕ್ಕಪಕ್ಕಗಳಲ್ಲಿ ಗೀತ ವಾದ್ಯಗಳ ಲಯಕ್ಕೆ ಅನುಸಾರವಾಗಿ ಹೆಜ್ಜೆಯಿಡುತ್ತಿದ್ದರು. ಅವರು ಉನ್ನತವಾಗಿ ಕೈಗಳನ್ನೆತ್ತಿ ತಾಳಹಾಕುತ್ತಲೂ ಕುಣಿಯುತ್ತಲೂ ನಗುತ್ತಲೂ ಇದ್ದರು.

೧೪. ಕಪಾಲವನ್ನೂ ಖಟ್ವಾಂಗವನ್ನೂ ಧರಿಸಿಕೊಂಡು ಆನೆಯ ಚರ್ಮವನ್ನು ಮುಸುಕು ಹಾಕಿಕೊಂಡವನಾಗಿ ಶಿವನಂತೆಯೇ ರೂಪಹೊಂದಿ ಅವನಂತೆಯೇ ಆಭರಣಗಳನ್ನು ಧರಿಸಿದ ಒಬ್ಬ ಪುರುಷನು.

೧೫. ಈಶ್ವರನಿಂದ ಉತ್ಪನ್ನನಾದನು. ಭಯಂಕರವಾದ ಅನೇಕ ಭೂತಗಳು ಅತನನ್ನು ಹಿಂಬಾಲಿಸಿ ಬರುತ್ತಿದ್ದುವು. ಅವು ಹುಲಿಗಳಂತೆಯೂ ಸಿಂಹಗಳಂತೆಯೂ ಮುಖವುಳ್ಳವೂ ಅಂತರಿಕ್ಷವನ್ನು ಬಗೆಯುವಂತಹ ಹಲ್ಲುಗಳುಳ್ಳವು ಆಗಿದ್ದುವು.

**ಏಕೀಭೂತೈಃ ಕ್ಷಣೇನೈವ ತೌ ಭವಾನೀಭವೋದ್ಭವೌ |**
**ದೃಷ್ಟ್ವಾ ಹೃಷ್ಟಮನಾ ದೇವಃ ಪ್ರಾಹ ದೇವೀಂ ಸುವಿಸ್ಮಿತಾಂ || ೧೬ ||**

**ಕಲ್ಯಾಣಿ ಪಶ್ಯ ಪಶ್ಯೇತೌ ಮತ್ತ್ವದಂಗಸಮುದ್ಭವೌ |**
**ಬೀಭತ್ಸಾದ್ಭುತಶೃಂಗಾರವರಾಯುಧವಿಧಾರಿಣೌ || ೧೭ ||**

**ಭ್ರಾತೃಭಾಂಡೌ ಯಥಾ ದೇವಿ ತದ್ವದೇತೌ ಮತೌ ಮಮ |**
**ನೃನಾರ್ಯೋರಂತರಂ ಕಿಂಚಿತ್ಸಾದೃಶ್ಯಾತ್ಪ್ರತಿಭಾಸಯೇತ್ || ೧೮ ||**

**ಭ್ರಾತೃಭಾಂಡಾ ಭೂತಮಾತಾ ತಥೈವೋದಕಸೇವಿಕಾ |**
**ಸಂಜ್ಞಾತ್ರಯಂ ತಯೋಃ ಕೃತ್ವಾ ತತಃ ಪ್ರಾದಾದ್ವರಂ ಹರಃ || ೧೯ ||**

**ಭುಕ್ತ್ವಾಹೋಪಗತಾಂ ಚೈತಾಂ ಜರತ್ತರುತಲೇ ಸ್ಥಿತಾಂ |**
**ಸೇವಯಿಷ್ಯಂತಿ ಯೇ ಭಕ್ತ್ಯಾ ಜಲಸಂಪೂರ್ಣಕಂಡುಕೈಃ || ೨೦ ||**

---

೧೬. ದೇವಿಯಿಂದ ಉತ್ಪನ್ನರಾದವರೂ ಶಿವನಿಂದ ಉತ್ಪನ್ನರಾದವರೂ ಎಲ್ಲರೂ ಪರಸ್ಪರ ಒಟ್ಟಿಗೆ ಕಲೆತರು. ಇದನ್ನು ನೋಡಿ ಹರ್ಷಗೊಂಡ ಮನಸ್ಸಿನಿಂದ ಶಿವನು ಆಶ್ಚರ್ಯಚಕಿತಳಾದ ದೇವಿಯನ್ನು ಕುರಿತು.

೧೭-೧೮. ಎಲೌ ಸರ್ವಮಂಗಳೇ! ನಿನ್ನ ದೇಹದಿಂದ ಉತ್ಪನ್ನರೂ ನನ್ನ ದೇಹದಿಂದ ಉತ್ಪನ್ನರೂ ಆಗಿ ನೋಟಕ್ಕೆ ಭೀಭತ್ಸವಾಗಿಯೂ ಅದ್ಭುತವಾಗಿಯೂ ಇದ್ದರು. ಶೃಂಗಾರವೆಂಬ ಶ್ರೇಷ್ಠವಾದ ಆಯುಧವನ್ನು ಧರಿಸಿದವರಾದ ಇವರು ಪರಸ್ಪರ ಸಹೋದರ ಸಹೋದರಿಯರಂತೆಯೇ ಎಂದು ನನ್ನ ಭಾವನೆ. ಹೋಲಿಕೆ ಇಬ್ಬರಲ್ಲೂ ಒಂದೇ ಆಗಿದ್ದರೂ ಇವರು ಪುರುಷ ಈಕೆ ಸ್ತ್ರೀ ಎಂಬುದು ವ್ಯಕ್ತವಾಗಿ ಕಾಣುತ್ತದೆ.

೧೯. ಶಿವನು ಆ ಸ್ತ್ರೀಯರ ಮತ್ತು ಪುರುಷರ ಗುಂಪುಗಳೆರಡರಲ್ಲಿಯೂ ಭ್ರಾತುಭಂಡಾರ ಭೂತಮಾತಾ ಉದಕಸೇವಿಕಾ ಎಂದು ಮೂರುಸಂಜ್ಞೆಗಳನ್ನು ಏರ್ಪಡಿಸಿ ಅವರಿಗೆ ವರಗಳನ್ನು ಕೊಟ್ಟನು.

೨೦. ಬೂರುಗದ ವೃಕ್ಷಮೂಲದಲ್ಲಿ ನೆಲಸಿ ಬಲಿಯಿಂದಲೂ ಪೂಜೆಯಿಂದಲೂ ತೃಪ್ತಿಹೊಂದುವ ಇವರಲ್ಲಿ ಭಕ್ತಿಯುಕ್ತರಾಗಿ ಜಲಪೂರ್ಣವಾದ ಕಂಡುಕ (ಕಂದಲು) ಗಳ ಸಮರ್ಪಣೆ ಮಾಡಬೇಕು.

**ಚಂದನೇನ ಸಮಾಲಭ್ಯ ಪುಷ್ಪಧೂಪೈರಥಾರ್ಚ್ಯ ತಾಂ ।**
**ಭೋಜಯೇತ್ಕ್ರಿಪ್ರಯಾ ಚೈವ ಕೃಶರಾಪೂಪಪಾಯಸೈಃ　　॥ ೨೧ ॥**

**ಯ ಏವಂ ಕುರುತೇ ದೇವಿ ಭಕ್ತಿಭಾವೇನ ಭಾವಿತಃ ।**
**ಸ ಪುತ್ರಪಶುವೃದ್ಧಿಂ ಚ ಶರೀರಾರೋಗ್ಯಮಾಪ್ನುಯಾತ್　　॥ ೨೨ ॥**

**ನ ಶಾಕಿನ್ಯೋ ಗೃಹೇ ತಸ್ಯ ನ ಪಿಶಾಚಾ ನ ರಾಕ್ಷಸಾಃ ।**
**ಪೀಡಾಂ ಕುರ್ವಂತಿ ಶಿಶವೋ ಯಾಂತಿ ವೃದ್ಧಿಂ ನಿರಾಮಯಾಃ　॥೨೩॥**

**॥ ಯುಧಿಷ್ಠಿರ ಉವಾಚ ॥**

**ಕದಾ ಪೂಜಾ ಪ್ರಕರ್ತವ್ಯಾ ಭೂತಮಾತುಃ ಸುಖಾರ್ಥಿಭಿಃ ।**
**ಪುರುಷೈಃ ಪುರುಷವ್ಯಾಘ್ರ ಯತ್ತನ್ಮೇ ವಕ್ತುಮರ್ಹಸಿ　　॥ ೨೪ ॥**

---

೨೧. ಗಂಧ ಪುಷ್ಪ ಧೂಪಾದಿಗಳನ್ನು ಸಮರ್ಪಿಸಿ, ಚಿಗುಳಿ, ಅಪೂಪ, ಪಾಯಸ, ಇವುಗಳನ್ನು ಭೋಜನಮಾಡಿಸಬೇಕು.

೨೨. ಭಕ್ತಿಯಿಂದ ಈ ಪ್ರಕಾರ ಸೇವೆಮಾಡಿದವನು ಪುತ್ರ, ಸಂಪತ್ತು, ಪಶುಸಮೃದ್ಧಿ, ದೇಹಾರೋಗ್ಯ, ಇವನ್ನು ಹೊಂದುತ್ತಾನೆ.

೨೩. ಅವನ ಮನೆಯಲ್ಲಿ ಶಾಕಿನೀಬಾಧೆ, ಪಿಶಾಚಿಬಾಧೆ, ರಾಕ್ಷಸಬಾಧೆ ಮುಂತಾದುವು ಯಾವುವೂ ಸಂಭವಿಸುವುದಿಲ್ಲ. ಅವನ ಮಕ್ಕಳು ರೋಗಾದಿಗಳಿಗೆ ಗುರಿಯಾಗದೆ ಸುಲಲಿತವಾಗಿ ಬೆಳೆಯುತ್ತಾರೆ ಎಂದನು.

೨೪. ಯುಧಿಷ್ಠಿರನು ಹೇಳುತ್ತಾನೆ—ಎಲೈ ಪುರುಷೋತ್ತಮನೆ! ಸುಖಾರ್ಥಿಗಳಾದ ಮಾನವರು ಈ ಭೂತಮಾತೃ ಪೂಜೆಯನ್ನು ಯಾವಾಗ ಮಾಡಬೇಕು? ಇದನ್ನು ತಿಳಿಸಲು ನೀನೇ ಬಲ್ಲವನು. ಕೃಪೆಮಾಡಿ ಹೇಳು ಎಂದನು.

|| ಶ್ರೀ ಕೃಷ್ಣ ಉವಾಚ ||

ಸರ್ವತ್ರೈಷಾ ಭಗವತೀ ಬಾಲಾನಾಂ ಹಿತಕಾರಿಣೀ |
ನಾಮಭೇದೈಃ ಕ್ರಿಯಾಭೇದೈಃ ಕಾಲಭೇದೈಶ್ಚ ಪೂಜ್ಯತೇ || ೨೫ ||

ಪ್ರತಿಪತ್ಪ್ರಭೃತಿ ಜ್ಯೇಷ್ಠೇ ಯಾವತ್ಪಂಚದಶೀ ತಿಥಿಃ |
ತಾವತ್ಪೂಜಾ ಪ್ರಕರ್ತವ್ಯಾ ಪ್ರೇರಣೈಃ ಪ್ರೇಕ್ಷಣೀಯಕೈಃ || ೨೬ ||

ವಿಕರ್ಮಫಲನಿರ್ದೇಶಃ ಪಾಂಡವಾನಾಂ ವಿಡಂಬನಂ |
ಪ್ರದೃಶ್ಯಂತೇ ಹಾಸ್ಯಪರೈರ್ನರೈರದ್ಭುತಚೇಷ್ಟಿತೈಃ || ೨೭ ||

ವಿಶ್ವಾಸ್ಯ ಧನಲೋಭೇನ ಸಂಧ್ಯಾಯಾಂ ನಿಹತಃ ಪಥಿ |
ಆರೋಹಣಂ ಚ ಶೂಲಾಗ್ರೇ ನ ಪಶ್ಯಂತಂ ಹಿ ಪಶ್ಯತಿ || ೨೮ ||

---

೨೫. ಶ್ರೀಕೃಷ್ಣನು ಹೇಳುತ್ತಾನೆ—ಎಲ್ಲ ಊರುಗಳಲ್ಲಿಯೂ ಮಕ್ಕಳಿಗೆ ಹಿತವುಂಟುಮಾಡತಕ್ಕ ಈ ಭೂತಮಾತೆಯು. ನಾನಾ ಕಾರ್ಯನಿರ್ವಾಹಕ್ಕೆ ಅವಶ್ಯಕವಾದ ಬೇರೆಬೇರೆ ಹೆಸರುಗಳಿಂದ ಬೇರೆಬೇರೆ ಕಾಲಗಳಲ್ಲಿ ಪೂಜಿಸಲ್ಪಡುತ್ತಾಳೆ.

೨೬. ಜ್ಯೇಷ್ಠಶುಕ್ಲ ಪ್ರತಿಪತ್ ಮೊದಲುಗೊಂಡು ಪೂರ್ಣಿಮಾ ಪರ್ಯಂತದ ದಿವಸಗಳಲ್ಲಿ ಊರಿನ ರಂಗಸ್ಥಳದಲ್ಲಿ ಪೇರಣೀವಿದ್ಯೆ ಮುಂತಾದ ಕೌಶಲ್ಯಗಳು. ಮುಂದೆ ಸೂಚಿಸುವ ಇತರ ಸುಂದರವಾದ ದೃಶ್ಯ ಇವುಗಳನ್ನು ಏರ್ಪಡಿಸಿ ಈ ದೇವತೆಯ ಹಬ್ಬವನ್ನು ಮಾಡಬೇಕು. (ಆ ಹಬ್ಬದಲ್ಲಿ ನಾನಾ ಪ್ರಾಂತಗಳಲ್ಲಿ ರೂಢಿಯಾಗಿ ಆಚರಿಸತಕ್ಕ ಕಾರ್ಯವನ್ನು ಮುಂದೆ ಸೂಚಿಸಿದೆ.)

೨೭. ಫಲವನ್ನು ಗುರಿಯಿಟ್ಟುಕೊಂಡು ಈ ಹಬ್ಬವನ್ನು ಮಾಡತಕ್ಕದ್ದಲ್ಲ ಆನಂದವೇ ಮುಖ್ಯ. ಸರಸವಾಗಿ ಮಾತನಾಡಬಲ್ಲ ಹಾಸ್ಯಪರರಾದ ಮನುಷ್ಯರು ಅದ್ಭುತವಾಗಿಯೂ ಚಮತ್ಕಾರಯುಕ್ತವಾಗಿಯೂ ಪಾಂಡವರ ಚರಿತ್ರೆಯನ್ನು ಅಭಿನಯಿಸುವುದು.

೨೮. ಮಾರ್ಗದಲ್ಲಿ ಸಿಡಿಯನ್ನು ಒಡ್ಡಿ ಅದರ ಮೇಲೆ ಮನುಷ್ಯನನ್ನು ಶೂಲಕ್ಕೇರಿಸಿದ ಹಾಗೆ ಸಂಜೆಯಲ್ಲಿ ತೋರಿಸಿ, ಅವನು ಸತ್ತಂತೆ ಅದೃಶ್ಯವಾಗಿ ಮಾಡಿ ಪ್ರೇಕ್ಷಕರಿಂದ ಧನವನ್ನು ಸೆಳೆಯುವುದು.

**ದೃಷ್ಟೋ ಭವದ್ಭಿಃ ಸಂಹೃಷ್ಟಃ ಪರಪಾರಾವಮರ್ಶಕಃ ।**
**ಛಿತ್ವಾ ಸ್ವಹಸ್ತ್ಯೈರ್ಯದ್ದತ್ತೋ ವಿಭುನಾ ಮುಖ್ಯಮೋದಕಃ ॥ ೨೯ ॥**

**ಶೀರ್ಣಸೂಕ್ಷ್ಮೇಣ ಪತ್ರೇಣ ಬಾಲಾ ಮಾಲಾನುಮೋದಿತಾಃ ।**
**ಮುಷ್ಕಭುಗ್ರಾಸಭಾರೂಢೋ ಮುಖಂ ಕೃತ್ವಾ ಚ ಪಶ್ಚಿಮೇ ॥ ೩೦ ॥**

**ಹೇ ಜನಾಃ ಕಿಂ ನ ಪಶ್ಯಧ್ವಂ ಸ್ವಾಮಿದ್ರೋಹಕರಂ ಪರಂ ।**
**ಕರಪತ್ರೈರ್ವಿದಾರ್ಯಂ ತಮುಚ್ಛಲಚ್ಛೋಣಿತಚ್ಛಟಂ ॥ ೩೧ ॥**

**ಚರೈಃ ಕಿಲಾಸ್ಯೈಃ ಸಂಪ್ರಾಪ್ತಃ ಸರ್ವೋದ್ವೇಗಕರಃ ಪರಂ ।**
**ದಂಡಪ್ರಹಾರಾಭಿಹತೋ ನೀಯತೇ ದಂಡಪಾಶಿಕೈಃ ॥ ೩೨ ॥**

---

೨೯. ಅನ್ಯರ ದೃಷ್ಟಿಯನ್ನು ವಿಮರ್ಶಿಸುತ್ತಾ ಆ ವಿಭುವು ತನ್ನ ಕೈಯ್ಯಾರ ಯಾವುದನ್ನು ಕತ್ತರಿಸಿ ಕೊಟ್ಟರೂ ಅದನ್ನೇ ಮುಖ್ಯವಾದ ಸೇವ್ಯ ವಸ್ತುವೆಂದು ಜನರು ಸಂತೋಷಿಸುವುದನ್ನು ನೋಡುವುದು.

೩೦. ಉದರಿದ ಸಣ್ಣ ಎಲೆಗಳಿಂದ ಮಾಲೆಯನ್ನು ಕಟ್ಟಿ ಧರಿಸಿ ಸಂತೋಷಿಸುವ ಬಾಲೆಯು ಮುಷ್ಕವನ್ನು ಭುಜಿಸುತ್ತಾ ಪಶ್ಚಿಮ ಮುಖವಾಗಿ ಕತ್ತೆಯ ಮೇಲೆ ಕುಳಿತಿರುವುದನ್ನು ನೋಡುವುದು.

೩೧. ಸ್ವಾಮಿದ್ರೋಹಿಯನ್ನು-ಖಡ್ಗದಿಂದ ಸೀಳಿ ರಕ್ತ ಚಿಮ್ಮುತ್ತಿರುವಂತೆ ಚರರು ಮಾಡುವುದು; ದಂಡಪಾಶುಕರು, ಕಿಲಾಸಕರು, ಎಲ್ಲರಿಗೂ ಉದ್ವೇಗವಾಗುವಂತೆ ದಂಡದಿಂದ ಪ್ರಹಾರ ಮಾಡುತ್ತಾ ಎಳೆದೊಯ್ಯುವುದು.

೩೨. ತನ್ನನ್ನು ನೋಡುವುದಕ್ಕಾಗಿ ಪ್ರೇಕ್ಷಕರು ಸುತ್ತಿಕೊಂಡುದರಿಂದ ಅವಮಾನಿತನಾಗಿ ಪಟಗುಟ್ಟುತ್ತಾ ಕ್ರೂರವಾದ ಮಲಿನ ದೃಷ್ಟಿಯುಳ್ಳ ಕಳ್ಳನನ್ನು ಹತೋಟಿಯಲ್ಲಿಟ್ಟು ಕರೆದೊಯ್ಯುವುದು.

ಪ್ರೇಕ್ಷಕೈರ್ನೇಷ್ಟಿತಃ ಸ್ತೇನೋ ರಟತ್ಯೇಷ ವಿಮುಂಡಿತಃ ।
ಸಂಯಮ್ಯ ನೀಯತೇಯಂ ತು ಮೂರ್ಖಃ ಕ್ರೌರ್ಯಾವಿಲೋಕ್ಷಣಃ ॥೩೩॥

ಸಿತಕೇಶಂ ಸಿತಶ್ಮಶ್ರು ಸಿತಾಂಬರಧರಂ ದ್ವಿಜಂ ।
ವಟಚೇಷ್ಟಾಚಪೇಟಾಭಿರ್ಹನ್ಯಮಾನಂ ನ ಪಶ್ಯತ ॥ ೩೪ ॥

ಗೃಹಾನ್ನಿಷ್ಕ್ರಮ್ಯ ತಾಂ ರಂಡಾ ವೃದ್ಧೋ ಭೂತ್ವಾಪ್ಯಸೌ ಸ್ತ್ರಿಯಾಃ ।
ಸ್ವಸ್ಯಾ ಅಸೌ ನ ಕುರುತೇ ಮೂಢೋ ಭರಣಪೋಷಣಂ ॥ ೩೫ ॥

ಭೈರವಾಭರಣೋತ್ತಾಲಾ ವ್ಯಾಲಯಜ್ಞೋಪನೀತಿನಃ ।
ಪ್ರದತ್ತ್ವಾ ತಾಂಡವಪದಾನ್ಪಶ್ಯಧ್ವಂ ಧ್ವಾಂತದೀಪಕಾನ್ ॥ ೩೬ ॥

ನಿರ್ವೇದಕೋಽಸ್ಯ ಹೃದಯೇ ನ ಕಿಂಚಿದಪಿ ತಿಷ್ಠತಿ ।
ಗೃಹೀತಂ ಯದನೇನೇದಂ ಬಾಲೇನಾಪಿ ಮಹಾವ್ರತಂ ॥ ೩೭ ॥

---

೩೩-೩೪. ತಲೆಯೂ ಗಡ್ಡವೂ ನರೆಬಂದಿರುವ ಬ್ರಾಹ್ಮಣನು ಶ್ವೇತವಸ್ತ್ರಗಳನ್ನು ಧರಿಸಿ ಹೋಗುತ್ತಿರುವಾಗ ಕುಹಕಿಗಳು ಚೇಷ್ಟೆಮಾಡಿ ಕೆಣಕಿ, ಅವನಿಗೆ ಪ್ರಹಾರಗಳನ್ನು ಕೊಟ್ಟು ಸಾಯಬಡಿಯುತ್ತಿರುವುದು.

೩೫. ಹೊಟ್ಟೆಗೆ ಅನ್ನ ಹಾಕಿ ತನ್ನ ಸ್ತ್ರೀಯನ್ನು ರಕ್ಷಿಸಲಾರದೆ ತನಗೆ ವಯಸ್ಸಾಗಿದ್ದರೂ ಅವಳನ್ನು ಮನೆಬಿಟ್ಟು ಹೊರಡು ಎಂದು ತಾನು ಹೇಳುವ ವೃದ್ಧನ ಚರ್ಯೆ

೩೬. ಭಯಂಕರವಾದ ಸರ್ಪವನ್ನೇ ಜನಿವಾರದಂತೆಯೂ ಆಭರಣಗಳಂತೆಯೂ ಧರಿಸಿ, ಉನ್ನತವಾಗಿರುವ ವ್ಯಕ್ತಿಯು ನರ್ತನ ಮಾಡುತ್ತಾ ಹೆಜ್ಜೆಯಿಟ್ಟರೆ ಕತ್ತಲೆಯಲ್ಲಿ ಅವನ ಕಣ್ಣು ದೀಪ ಸದೃಶವಾಗಿ ಕಾಣುವುದು.

೩೭. ಹೃದಯದಲ್ಲಿ ಸುಜ್ಞಾನಶೂನ್ಯನಾದವನು ವೈರಾಗ್ಯಯುಕ್ತನಂತೆ ಆಚರಿಸುವುದು; ತಕ್ಕಷ್ಟು ವಯಸ್ಸು ಸಾಲದ ಬಾಲಕನಿಗೆ ಅವನು ಮಹಾವ್ರತವನ್ನು ಉಪದೇಶಿಸುವ ವಿಡಂಬನ ದೃಶ್ಯ.

[illegible]ಶ್ಯಾಕಕೃಷ್ಣಾಂಗಂ ಶಬರಂ ಕಿಂ ನ ಪಶ್ಯತ ।
[illegible]ಕೋಟರಾಂತರಗತಾಂಶ್ಛಿತ್ವಾ ಚ ಶುಕಶಾವಕಾನ್ ॥ ೩೮ ॥

[illegible]ಹುಭಿಃ ಕೋಷ್ಠಕೀಕೃತ್ಯ ಶರೌಘೈಃ ಶಕಲೀಕೃತಂ ।
ವಿಮುಕ್ತಢಕ್ಕಾಹಂಕಾರಸುಪ್ರಹಾರಂ ನಿರೀಕ್ಷತ ॥ ೩೯ ॥

ಇಮಾಂ ಕೃಷ್ಣಾರ್ಧವದನಾಂ ಗೃಹೀತಾಂ ಸಿಂದುರಾರ್ಜಿತಾಂ ।
ವಿಮುಕ್ತಕೇಶಾಂ ನೃತ್ಯಂತೀಂ ಪಶ್ಯಧ್ವಂ ಯೋಗಿನೀಮಿವ ॥ ೪೦ ॥

ಗಂಭೀರತೂರ್ಯಧ್ವನಿನಾ ಪ್ರಬುದ್ಧಾಂ ವೃತ್ತತಾಂಡವಾಂ ।
ಏವಂ ಪ್ರೇಕ್ಷಣಕಂ ಕೃತ್ವಾ ನಯೋದ್ವೃಕ್ಷತಲೇ ಚ ತಾಂ ॥ ೪೧ ॥

---

೩೮. ವಾಯಸದಂತೆ ಕಪ್ಪಾದ ದೇಹವೂ, ಕೆಂಡದಂತಿರುವ ಕಣ್ಣೂ ಉಳ್ಳ ವ್ಯಾಧನೊಬ್ಬನು ಮರದ ಪೊಟರೆಗಳಲ್ಲಿರುವ ಗಿಣಿಗಳನ್ನೂ ಅವುಗಳ ಮರಿಗಳನ್ನೂ ಕುತ್ತಿಗೆ ಮುರಿದೂ.

೩೯. ಮತ್ತು ಬಾಣ ಸಮೂಹಗಳಿಂದ ಭೇದಿಸಿಯೂ ಸಣ್ಣ ಚೂರುಗಳಾಗಿ ಮಾಡಿ ಎಸೆಯುವ ದೃಶ್ಯ; ಆನಂದದಿಂದ ಢಕ್ಕಾವಾದ್ಯ ಬಾರಿಸುತ್ತಿರುವುದನ್ನು ಅಹಂಕಾರದಿಂದ ನಿಲ್ಲಿಸುವುದು.

೪೦. ಮುಖದ ಅರ್ಧಭಾಗಕ್ಕೆ ಕಪ್ಪು ಬಣ್ಣವನ್ನು ಇನ್ನರ್ಧಭಾಗಕ್ಕೆ ಸಿಂಧೂರವರ್ಣವನ್ನೂ ಬಳಿದುಕೊಂಡು ತಲೆಕೂದಲನ್ನು ಕೆದರಿಕೊಂಡು ಯೋಗಿಯಂತೆ ನರ್ತನ ಮಾಡುತ್ತಾ ಗಂಭೀರವಾದ ತೂರ್ಯಧ್ವನಿಯನ್ನು ಕೇಳಿ ಎಚ್ಚತ್ತು ವೃತ್ತಾಕೃತಿಯಲ್ಲಿ ತಾಂಡವನೃತ್ಯಮಾಡುವುದು.

೪೧. ಈ ಮುಂತಾದ ನಾನಾಪ್ರಕಾರದ ದೃಶ್ಯಗಳನ್ನು ಆ ಬೂರುಗದ ವೃಕ್ಷದ ತಲದಲ್ಲಿ ಏರ್ಪಡಿಸಿ ಅಲ್ಲಿಗೆ ಭೂತಮಾತೆಯ ಉತ್ಸವವನ್ನು ಬಿಜಮಾಡಿಸಬೇಕು.

ಏವಂ ಕೃತೇ ನ ದಾರಿದ್ರ್ಯಂ ನ ಚ ದುಃಖಂ ಭವೇನ್ನೃಣಾಂ ॥ ೪೨ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ಭೂತಮಾತ್ರುತ್ಸವ ವರ್ಣನಂ
ನಾಮ ಷಟ್ತ್ರಿಂಶದುತ್ತರಶತತಮೋಽಧ್ಯಾಯಃ.



---

೪೧. ಈರೀತಿ ಏರ್ಪಡಿಸಿದ ಮಾನವರಿಗೆ ದಾರಿದ್ರ್ಯ, ದುಃಖ ಇವು ಎಂದೂ ಸಂಭವಿಸುವುದಿಲ್ಲ.

ಇಲ್ಲಿಗೆ ಶ್ರೀಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ
ಭೂತಮಾತೆಯ ಉತ್ಸವ ವರ್ಣನೆಯೆಂಬ
ನೂರಮೂವತ್ತಾರನೆಯ ಅಧ್ಯಾಯವು ಮುಗಿದುದು.

|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣ
## ಉತ್ತರಪರ್ವಣಿ
## ಸಪ್ತತ್ರಿಂಶದುತ್ತರಶತತಮೋಽಧ್ಯಾಯಃ

|| ಶ್ರೀ ಕೃಷ್ಣ ಉವಾಚ ||

ಅಥಾತಃ ಸಂಪ್ರವಕ್ಷ್ಯಾಮಿ ಬಲಿರಕ್ಷಾವಿಧಿಂ ನೃಪ ।
ತಂ ಕೃಣ್ವೈಕಾಗ್ರಮನಸಾ ಸಮಾಸಾದ್ಗದಿತಂ ಮಯಾ || ೧ ||

ಪುರಾ ದೇವಾಸುರೇ ಯುದ್ಧೇ ದಾನವಾಃ ಸುರನಿರ್ಜಿತಾಃ ।
ಶುಕ್ರಂ ಬಲಿಂ ಪುರಃ ಕೃತ್ವಾ ಯಯುಃ ಶುಕ್ರ ಉವಾಚ ತಂ || ೨ ||

---

### ನೂರಮೂತ್ತೇಳನೆಯ ಅಧ್ಯಾಯ

೧. ಶ್ರೀಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಟಿರ ಮಹಾರಾಜನೇ ! ಈಗ ಬಲಿರಕ್ಷೆಯ ವಿಧಾನವನ್ನು ಸಂಕ್ಷೇಪವಾಗಿ ಹೇಳುತ್ತೇನೆ. ನಾನು ಹೇಳುವುದನ್ನು ಚಿತ್ತೈಕಾಗ್ರತೆಯಿಂದ ಕೇಳು.

೨. ಪೂರ್ವದಲ್ಲಿ ದೇವತೆಗಳಿಗೂ ರಾಕ್ಷಸರಿಗೂ ಯುದ್ಧ ನಡೆಯಿತಷ್ಟೆ. ಆಗ ರಾಕ್ಷಸರು ದೇವತೆಗಳಿಗೆ ಸೋತುಹೋಗಿ ಬಲಿಚಕ್ರವರ್ತಿಯ ನೇತೃತ್ವದಲ್ಲಿ ಶುಕ್ರಾಚಾರ್ಯರ ಸಮೀಪಕ್ಕೆ ಹೋದರು.

|| ಶುಕ್ರ ಉವಾಚ ||

ನ ವಿಷಾದಸ್ತ್ವಯಾ ಕಾರ್ಯಃ ಕಾರ್ಯಾಣಾಂ ಗತಿರೀದೃಶೀ ।
ದೈವಾದ್ಭವಂತಿ ಭೂತಾನಾಂ ಕಾಲೇ ಜಯಪರಾಜಯಃ || ೩ ||

ಸಂಧಾನಂ ಸಹ ಶಕ್ರೇಣ ಕ್ರಿಯತಾಮಯನದ್ವಯಂ ।
ಅಜೇಯಸ್ಸರ್ವಶತ್ರೂಣಾಂ ಕೃತಃ ಶಚ್ಯಾ ಶಚೀಪತಿಃ || ೪ ||

ರಕ್ಷಾಬಂಧಪ್ರಭಾವೇಣ ದಾನವೇಂದ್ರೋ ಜಿತೋ ಮಹಾನ್ ।
ವರ್ಷಮೇಕಂ ಪ್ರತೀಕ್ಷಸ್ವ ತತಃ ಶ್ರೇಯೋ ಭವಿಷ್ಯತಿ || ೫ ||

ಭಾರ್ಗವೇಣೇವಮುಕ್ತಾಸ್ತೇ ದಾನವಾ ವಿಗತಜ್ವರಾಃ ।
ತಸ್ಥುಃ ಕಾಲಂ ಪ್ರತೀಕ್ಷಂತೋ ಯಥೋಕ್ತಂ ಗುರುಣಾ ತಥಾ || ೬ ||

---

೩. ಅಯ್ಯಾ ಬಲಿರಾಜನೇ ! ನೀನು ವಿಷಾದಪಡಬೇಡ. ಲೋಕದಲ್ಲಿ ಕೆಲಸಗಳು ಆಗುವುದೇ ಹೀಗೆ. ನಮ್ಮ ನಿರೀಕ್ಷೆಯಂತೆ ನಡೆಯುವುದಿಲ್ಲ. ಪ್ರಾಣಿಗಳಿಗೆ ಅದೃಷ್ಟದ ಅನುಕೂಲಪ್ರತಿಕೂಲವಿದ್ದಹಾಗೆ ಆಯಾ ಕಾಲದಲ್ಲಿ ಜಯಪರಾಜಯಗಳು ಸಂಭವಿಸುತ್ತವೆ.

೪. ಇನ್ನು ಎರಡು ಅಯನಗಳ ಪರ್ಯಂತ ಇಂದ್ರನ ಸಂಗಡ ಸಂಧಿ ಮಾಡಿಕೋ. ಆ ಶಚೀದೇವಿಯ ಪುಣ್ಯಪ್ರಭಾವದಿಂದ ಆಕೆಯ ಪತಿಯಾದ ಇಂದ್ರನು ಸರ್ವಶತ್ರುಗಳಿಗೂ ಜಯಿಸಲು ಅಸಾಧ್ಯವಾಗುವಂತೆ ಮಾಡಲ್ಪಟ್ಟಿದ್ದಾನೆ.

೫. ಅವಳು ಕಂಕಣಧಾರಣೆ ಮಾಡಿಕೊಂಡುದರ ಮಹಿಮೆಯಿಂದ ಪ್ರಬಲನೂ ರಾಕ್ಷಸಾಧಿಪನೂ ಆದ ನಿನ್ನನ್ನು ಸೋಲಿಸಿದಾನೆ. ಇನ್ನು ಒಂದು ವರ್ಷದವರೆಗೆ ಸಮಯ ನಿರೀಕ್ಷೆಮಾಡಿಕೊಂಡಿರು. ಆ ಬಳಿಕ ಶ್ರೇಯಸ್ಸು ಪ್ರಾಪ್ತಿಯಾಗುವುದು ಎಂದನು.

೬. ಶುಕ್ರಾಚಾರ್ಯರು ಈ ಪ್ರಕಾರ ಹೇಳಿದುದನ್ನು ಕೇಳಿ ರಾಕ್ಷಸರು ಸಂತಾಪವನ್ನು ಶಮನ ಮಾಡಿಕೊಂಡು ಗುರುಗಳು ಹೇಳಿದಂತೆಯೇ ಕಾಲ ನಿರೀಕ್ಷಣೆ ಮಾಡುತ್ತಿದ್ದರು.

**ಏಷ ಪ್ರಭಾವೋ ರಕ್ಷಾಯಾಃ ಕಥಿತಸ್ತೇ ಯುಧಿಷ್ಠಿರ ।**
**ಜಯದಃ ಸುಖದಶ್ಚೈವ ಪುತ್ರಾರೋಗ್ಯಧನಪ್ರದಃ ॥ ೭ ॥**

**॥ ಯುಧಿಷ್ಠಿರ ಉವಾಚ ॥**
**ಕ್ರಿಯತೇ ಕೇನ ವಿಧಿನಾ ರಕ್ಷಾಬಂಧಃ ಸುರೋತ್ತಮ ।**
**ಕಸ್ಯಾಂ ತಿಥೌ ಕದಾ ದೇವ ಏತನ್ಮೇ ವಕ್ತುಮರ್ಹಸಿ ॥ ೮ ॥**

**ಯಥಾ ಯಥಾ ಹಿ ಭಗವಾನ್ವಿಚಿತ್ರಾಣಿ ಪ್ರಭಾಷತೇ ।**
**ತಥಾ ತಥಾ ನ ಮೇ ತೃಪ್ತಿರ್ಬಹ್ವರ್ಥಾಃ ಶೃಣ್ವತಃ ಕಥಾಃ ॥ ೯ ॥**

**॥ ಶ್ರೀ ಕೃಷ್ಣ ಉವಾಚ ॥**
**ಘನಾವೃತೇಽಮ್ಬರೇ ಪಾರ್ಥ ಶಾದ್ವಲೇ ಧರಣೀತಲೇ ।**
**ಸಂಪ್ರಾಪ್ತೇ ಶ್ರಾವಣೇ ಚೈವ ಪೌರ್ಣಮಾಸ್ಯಾಂ ದಿನೋದಯೇ ॥೧೦॥**

---

೭. ಅಯ್ಯಾ ಯುಧಿಷ್ಠಿರ! ರಕ್ಷಾಬಂಧನವು ಜಯಪ್ರದವೂ ಸುಖಪ್ರದವೂ ಪುತ್ರರು ಆರೋಗ್ಯ ಧನ ಇವನ್ನು ಕೊಡತಕ್ಕದ್ದು ಆಗಿದೆ. ಅದರ ಈ ಮಹಿಮೆಯನ್ನು ನಿನಗೆ ಹೇಳಿದನು ಎಂದನು.

೮. ಯುಧಿಷ್ಠಿರನು ಕೇಳುತ್ತಾನೆ—ಸ್ವಾಮಿ! ಸುರೋತ್ತಮನೆ! ವ್ರತಿಗಳಿಗೆ ರಕ್ಷಾಬಂಧನ ಮಾಡುವ ವಿಧಾನವಾವುದು? ಅದನ್ನು ಯಾವಾಗ ಮಾಡಬೇಕು. ಅದಕ್ಕೆ ಉಕ್ತವಾದ ತಿಥಿಯಾವುದು? ಇದೆಲ್ಲವನ್ನೂ ಹೇಳಬೇಕು ನೀನೇ ಅದಕ್ಕೆ ಶಕ್ತನು.

೯. ಷಡ್ಗುಣೈಶ್ವರ್ಯಸಂಪನ್ನನಾದ ನೀನು ವಿಚಿತ್ರ ವಿಷಯಗಳನ್ನು ಹೇಳುತ್ತಾ ಇದ್ದರೆ ಬಹು ಅರ್ಥವುಳ್ಳ ಆ ಕಥೆಯನ್ನು ಎಷ್ಟು ಕೇಳುತ್ತಾ ಇದ್ದರೂ ನನಗೆ ತೃಪ್ತಿಯಾಗುವುದಿಲ್ಲ ಎಂದನು.

೧೦. ಶ್ರೀಕೃಷ್ಣನು ಹೇಳುತ್ತಾನೆ—ಅಯ್ಯಾ ಕುಂತೀಪುತ್ರ! ಆಕಾಶದಲ್ಲಿ ಮೋಡಗಳು ದಟ್ಟವಾಗಿ ಕವಿದಿರುವುದೂ ಮತ್ತು ನೆಲವು ಸಸ್ಯಸಮೃದ್ಧಿಯಿಂದ ಶೋಭಿಸುತ್ತಿರುವುದೂ ಆದ ಶ್ರಾವಣಮಾಸದಲ್ಲಿ ಪೂರ್ಣಿಮೆ ಒದುವುದನ್ನು ನಿರೀಕ್ಷಿಸಬೇಕು.

ಸ್ನಾನಂ ಕುರ್ವೀತ ಮತಿಮಾಞ್ಛ್ರುತಿಸ್ಮೃತಿವಿಧಾನತಃ ।
ತತೋ ದೇವಾನ್ ಪಿತೄಂಶ್ಚೈವ ತರ್ಪಯೇತ್ಪರಮಾಂಭಸಾ ॥ ೧೧ ॥

ಉಪಾಕರ್ಮಾದಿವೇದೋಕ್ತಮೃಷೀಣಾಂ ಚೈವ ತರ್ಪಣಂ ।
ಕುರ್ಯುರ್ಶ್ಚ ಬ್ರಾಹ್ಮಣಾಃ ಶ್ರಾದ್ಧಂ ದೇವಮುದ್ದಿಶ್ಯ ಶಕ್ತಿತಃ ॥ ೧೨ ॥

ಶೂದ್ರಾಣಾಂ ಮಂತ್ರಸಹಿತಂ ಸ್ನಾನಂ ದಾನಂ ಚ ಶಸ್ಯತೇ ॥ ೧೩ ॥

ತತೋಽಪರಾಹ್ಣಸಮಯೇ ರಕ್ಷಾಪೋಟಲಿಕಾಃ ಶುಭಾಃ ।
ಕಾರಯೇಚ್ಚಾಕ್ಷತೈಃ ಶಸ್ತೈಃ ಸಿದ್ಧಾರ್ಥೈರ್ಹೇಮಭೂಷಿತಾಃ ॥ ೧೪ ॥

---

೧೧. ಆದಿನ ಪ್ರಾತಃಕಾಲ ಪ್ರಾಜ್ಞನಾದ ಬಾಹ್ಮಣೋತ್ತಮನು ಶ್ರುತಿ ಸ್ಮೃತಿಗಳಲ್ಲಿ ಉಕ್ತವಾಗಿರುವ ವಿಧಾನದಂತೆ ಕ್ರಮವಾಗಿ ಸ್ನಾನಮಾಡಬೇಕು. ನಿತ್ಯಕರ್ಮ, ದೇವಯಜ್ಞ ಪಿತೃಯಜ್ಞಾದಿಗಳನ್ನೂ.

೧೨. ಉಪಾಕರ್ಮ ಮೊದಲಾದ ವೇದೋಕ್ತಕರ್ಮವನ್ನೂ ಆಚರಿಸಿ ತದಂಗವಾದ ದೇವರ್ಷಿ ಪಿತೃವರ್ಗದವರಿಗೆ ಶ್ರೇಷ್ಠವಾದ ಜಲದಿಂದ ತರ್ಪಣ ವನ್ನು ಮಾಡಬೇಕು. ಕೆಲವರು ವಿಪ್ರರು ದೇವತೆಗಳನ್ನುದ್ದೇಶಿಸಿ ಯಥಾಶಕ್ತಿ ಶ್ರಾದ್ಧವನ್ನು ಮಾಡುವರು.

೧೩. ಶೂದ್ರರೂ ಆ ದಿನ ಸ್ನಾನಮಾಡಿ ಮಂತ್ರಪೂರ್ವಕವಾಗಿ ದಾನಾದಿ ಗಳನ್ನು ಕೊಡುವುದು ಪ್ರಶಸ್ತವಾದ ಕ್ರಮ.

೧೪. ಬಳಿಕ ಅಪರಾಹ್ನ ಸಮಯದಲ್ಲಿ ಪ್ರಶಸ್ತವಾದ ಅಕ್ಷತೆ, ಬಿಳಿಯ ಸಾಸುವೆ ಇವುಗಳನ್ನು ತೆಗೆದುಕೊಂಡು ವಿಚಿತ್ರವೂ ನಿರ್ಮಲವೂ ಆಗಿರುವ ಹತ್ತಿಯ ಅಥವಾ ರೇಶ್ಮೆಯ ಬಟ್ಟೆಯಲ್ಲಿ ಹಾಕಿ ಜರತಾರಿ ಎಳೆಗಳಿಂದ ಅಲಂಕರಿಸಿ ಶುಭಕರವಾದ ರಕ್ಷಾಪಟಲಕವನ್ನು ರಚಿಸಬೇಕು.

**ವಸ್ತ್ರೈರ್ವಿಚಿತ್ರೈಃ ಕಾರ್ಪಾಸೈಃ ಕ್ಷೌಮೈರ್ವಾ ಮಲವರ್ಜಿತೈಃ |**
**ವಿಚಿತ್ರತರೈರ್ಗ್ರಥಿತಾಃ ಸ್ಥಾಪಯೇದ್ಭಾಜನೋಪರಿ || ೧೫ ||**

**ಕಾರ್ಯಾ ಗೃಹಸ್ಯ ರಕ್ಷಾ ಗೋಮಯರಹಿತೈಃ ಸುವೃತ್ತಕುಂಡಕೈಃ |**
**ದೂರ್ವಾವರ್ಣಕಸಹಿತೈಃ ಸಕಲಾನಾಂ ದುಷ್ಕೃತೋಪಶಾಂತ್ಯರ್ಥೇ ||**

**ಉಪಲಿಪ್ತೇ ಗೃಹಮಧ್ಯೇ ಚತುಷ್ಕೋಪರಿ ನ್ಯಸೇಚ್ಛುಭಂ ಪೀಠಂ |**
**ತತ್ರೋಪವಿಶೇದ್ರಾಜಂ ಸಾಮಾತ್ಯಃ ಸಪುರೋಹಿತಃ ಸಸುಹೃತ್ ||೧೭||**

**ವೇಶ್ಯಾಜನೇನ ಸಹಿತೋ ಮಂಗಲಶಬ್ದೈಃ ಸುಹಸಿತೈಶ್ಚಿಹ್ನೈಃ |**
**ರಕ್ಷಾಬಂಧಃ ಕಾರ್ಯಃ ಶಾಂತಿಧ್ವನಿನಾ ನರೇಂದ್ರಸ್ಯ || ೧೮ ||**

**ದೇವದ್ವಿಜಾತಿಶಸ್ತಾ ಸುಸ್ತ್ರೀರರ್ಘೈಃ ಸಮರ್ಚಯೇತ್ಪ್ರಥಮಂ |**
**ತದನುಪುರೋಧಾ ನೃಪತಿಂ ರಕ್ಷಾಂ ಬಧ್ನೀತ ಮಂತ್ರೇಣ || ೧೯ ||**

---

೧೫-೧೬. ರೇಶ್ಮೆ ಜರತಾರಿಗಳಿಂದ ವಿಚಿತ್ರವಾಗಿ ಗ್ರಥನಮಾಡಿ (ಹೆಣೆದ) ದಾರವನ್ನು ಆ ಪಟಲಕದ ಪಾತ್ರೆಯ ಮೇಲೆ ಇರಿಸಬೇಕು. ಸಮಸ್ತ ದುಷ್ಕೃತಗಳ ಶಾಂತ್ಯರ್ಥವಾಗಿ ಗೋಮಯ ಸಂಪರ್ಕವಿಲ್ಲದ ದುಂಡಾದ ಕುಡಕಗಳಲ್ಲಿ ಗರಿಕೆ ವರ್ಣಕ ಇವುಗಳನ್ನಿರಿಸಿ ಗೃಹಕ್ಕೆ ರಕ್ಷೆಯನ್ನು ಏರ್ಪಡಿಸಬೇಕು.

೧೭-೧೮. ಮನೆಯನ್ನು ಸಾರಿಸಿ ಮಧ್ಯಭಾಗದಲ್ಲಿ ಹಸೆ ಜಗಲಿಯ ಮೇಲೆ ಶುಭಕರವಾದ ಪೀಠವನ್ನು ರಚಿಸಬೇಕು. ಅಲ್ಲಿ ಮಂತ್ರಿಗಳು, ಪುರೋಹಿತರು, ಸ್ನೇಹಿತರು, ವೇಶ್ಯಾಸ್ತ್ರೀಯರು ಎಲ್ಲರೂ ಇರುವಾಗ ರಾಜನು ಆ ಪೀಠದಲ್ಲಿ ಕುಳಿತುಕೊಳ್ಳಬೇಕು. ಮಂಗಳವಾದ್ಯಗಳು ಘೋರ್ಗರೆಯುತ್ತಿರುವಲ್ಲಿ ಪುರೋಹಿತರು ಶಾಂತಿಮಂತ್ರಪೂರ್ವಕವಾಗಿ ಹರ್ಷಯುಕ್ತನಾಗಿ ರಾಜನಿಗೆ ರಕ್ಷಾಬಂಧನ ಕಾರ್ಯವನ್ನು ನೇರವೇರಿಸತೊಡಗಬೇಕು.

೧೯. ಇದಕ್ಕೆ ಮೊದಲು ಅತಿಪ್ರಶಸ್ತವೆನಿಸುವಂತೆ ದೇವಪೂಜೆ, ಬ್ರಾಹ್ಮಣ ಸುವಾಸಿನೀಪೂಜೆ ಇವನ್ನು ಮಾಡಬೇಕು. ಬಳಿಕ ಪುರೋಹಿತನು ಈ ಮುಂದೆ ಸೂಚಿಸುವ ಅರ್ಥವುಳ್ಳ ಮಂತ್ರಪೂರ್ವಕವಾಗಿ ರಾಜನ ಮಣಿಕಟ್ಟಿನಲ್ಲಿ ರಕ್ಷಾಬಂಧನ ಮಾಡಬೇಕು.

ಯೇನ ಬದ್ಧೋ ಬಲೀರಾಜಾ ದಾನವೇಂದ್ರೋ ಮಹಾಬಲಃ ।
ತೇನ ತ್ವಾಮಭಿಬಧ್ನಾಮಿ ರಕ್ಷೇ ಮಾ ಚಲ ಮಾ ಚಲ ॥ ೨೦ ॥

ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈಃ ಶೂದ್ರೈಶ್ಚಾನ್ಯೈಶ್ಚ ಮಾನವೈಃ ।
ಕರ್ತವ್ಯೋರಕ್ಷಿಕಾಬಂಧಃ ದ್ವಿಜಾನ್ಸಂಪೂಜ್ಯ ಭಕ್ತಿತಃ ॥ ೨೧ ॥

ಅನೇನ ವಿಧಿನಾ ಯಸ್ತು ರಕ್ಷಿಕಾಬಂಧಮಾಚರೇತ್ ।
ಸ ಸರ್ವದೋಷರಹಿತಃ ಸುಖೀ ಸಂವತ್ಸರಂ ಭವೇತ್ ॥ ೨೨ ॥

ಯಃ ಶ್ರಾವಣೇ ಸ್ರವತಿ ಶೀತಜಲೇ ನರೇಂದ್ರ ।
ರಕ್ಷಾವಿಧಾನವಿಧಿಮಾಚರತೇ ಮನುಷ್ಯಃ ।

---

೨೦. ಈ ರಕ್ಷಾಬಂಧನ ಮಾಡಿಕೊಂಡುದರಿಂದ ಬಲಿರಾಜನು ಬಲಶಾಲಿಯಾಗಿ ದಾನವೇಂದ್ರನೆನಿಸಿದನು. ಆ ಕಾರಣದಿಂದ ನಿನಗೂ ರಕ್ಷಾಬಂಧನ ಮಾಡುವೆನು. ಎಲೈ ರಕ್ಷಾಸೂತ್ರವೇ ! ನೀನು ಅತ್ತಿತ್ತ ಚಲಿಸಬೇಡ ಇದು ಮಂತ್ರಾರ್ಥ.

೨೧. ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು, ಇತರ ಜನರು ಮುಂತಾದ ಎಲ್ಲರೂ ಬ್ರಾಹ್ಮಣನನ್ನು ಭಕ್ತಿಯಿಂದ ಪೂಜಿಸಿ ರಕ್ಷಾಬಂಧನ ಮಾಡಿಕೊಳ್ಳಬೇಕು.

೨೨. ಈ ವಿಧಿಪ್ರಕಾರ ಯಾರೂ ರಕ್ಷಾಬಂಧನ ಮಾಡಿಕೊಳ್ಳುವರೋ ಅವರಿಗೆ ಆ ವರ್ಷವೆಲ್ಲಾ ಸಮಸ್ತ ದುಷ್ಟಾರಿಷ್ಟದೋಷಗಳು ಪರಿಹಾರವಾಗಿ ಸುಖದಿಂದ ಇರುವರು.

೨೩. ಅಯ್ಯಾ ರಾಜನೆ ! ಶೀತವಾದ ಜಲವು ಸ್ರವಿಸುವ (ಜಲಸಮೃದ್ಧವಾದ) ಶ್ರಾವಣ ಮಾಸದಲ್ಲಿ ವಿಧಿವಿಧಾನದಂತೆ ರಕ್ಷಾಬಂಧನ ಕಾರ್ಯವನ್ನು

**ಆಸ್ತೇ ಸುಖೇನ ಪರಮೇಣ ರ ಸರ್ವಮೇಕಃ ।**
**ಪುತ್ರಪ್ರಪೌತ್ರಸಹಿತಃ ಸಸುಹೃದ್ವೃತಶ್ಚ ॥ ೨೩ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಶ್ರಾವಣ ಪೂರ್ಣಿಮಾ ರಕ್ಷಾಬಂಧನ ವಿಧಿವರ್ಣನಂ ನಾಮ ಸಪ್ತ ತ್ರಿಂಶದುತ್ತರ ಶತತಮೋಽಧ್ಯಾಯಃ.**



---

ಯಾವ ಮನುಷ್ಯನು ಆಚರಿಸುತ್ತಾನೆಯೋ ಆತನು ಪುತ್ರರು ಪೌತ್ರರು ಸ್ನೇಹಿತರ ಇವರುಗಳಿಂದ ಪರಿವೃತನಾಗಿ ಸರ್ವಕಾಲದಲ್ಲೂ ಪರಮಸುಖದಿಂದ ಇರುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ಕೃಷ್ಣಯುಧಿಷ್ಠಿರ ಸಂವಾದದೊಳಗೆ ಶ್ರಾವಣ ಪೂರ್ಣಿಮಾ ರಕ್ಷಾಬಂಧನವಿಧಿವರ್ಣನೆಯೆಂಬ ನೂರಮೂವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣ
## ಉತ್ತರಪರ್ವಣಿ
## ಅಷ್ಟತ್ರಿಂಶದುತ್ತರಶತತಮೋಽಧ್ಯಾಯಃ

॥ ಶ್ರೀ ಕೃಷ್ಣ ಉವಾಚ ॥

ಪುಣ್ಯಾ ಮಹಾನವಮ್ಯಸ್ತಿ ತಿಥೀನಾಂ ಪ್ರವರಾ ತಿಥಿಃ ।
ಸಾನುಷ್ಠೇಯಾ ಸುರೈಸ್ಸರ್ವೈಃ ಪ್ರಜಾಪಾಲೈರ್ವಿಶೇಷತಃ ॥ ೧ ॥

ಭವಾನುತ್ಥಾಪಯೇತ್ಪಾರ್ಥ ಸಂವತ್ಸರಸುಖಾಯ ವೈ ।
ಭೂತಪ್ರೇತಪಿಶಾಚಾನಾಂ ಪ್ರೀತ್ಯರ್ಥಂ ಚೋತ್ಸವಾಯ ವಾ ॥ ೨ ॥

---

## ನೂರಮೂವತ್ತೆಂಟನೆಯ ಅಧ್ಯಾಯ

೧. ಶ್ರೀಕೃಷ್ಣನು ಹೇಳುತ್ತಾನೆ—ತಿಥಿಗಳಲ್ಲಿ ಮಹಾನವಮಿಯೆಂಬುದು ಶ್ರೇಷ್ಠವೂ ಪುಣ್ಯಕರವೂ ಆಗಿದೆ. ಆ ತಿಥಿಯಲ್ಲಿ ಆಚರಿಸಬೇಕೆಂದು ಉತ್ತಮವಾಗಿರುವ ವ್ರತಾದಿಗಳನ್ನು ದೇವತೆಗಳೂ ಸಹ ಅನುಷ್ಠಾನಮಾಡತಕ್ಕದ್ದಾಗಿದೆ. ಸುಕೃತವಿಶೇಷದಿಂದ ರಾಜರಾದವರು ಅದನ್ನು ವಿಶೇಷರೀತಿಯಿಂದ ವೈಭವವಾಗಿ ಆಚರಿಸಬೇಕು.

೨. ಆಯ್ಯಾ ಕುಂತೀಪುತ್ರನೇ! ಸಂವತ್ಸರದಲ್ಲೆಲ್ಲಾ ಸುಖವಾಗಿರುವುದಕ್ಕಾಗಿಯೂ ಭೂತಪ್ರೇತ ಪಿಶಾಚಿಗಳ ಪ್ರೀತ್ಯರ್ಥವಾಗಿಯೋ ಅಥವಾ ಅವುಗಳ ಉತ್ಸವಾರ್ಥವಾಗಿಯೋ ನೀನೂ ಇದನ್ನು ಆಚರಿಸಬೇಕು ಎಂದನು.

**॥ ಯುಧಿಷ್ಠಿರ ಉವಾಚ ॥**

**ಕಸ್ಮಾತ್ಕಾಲಾತ್ಪ್ರವೃತ್ತೇಯಂ ನವಮೀ ಮಹಶಬ್ದಯುಕ್ ।**
**ಕಿಮಾದಾವುಪಪನ್ನೋಽಸ್ತಿ ಭಗವನ್ನವಮೀವಿಧಿಃ ॥ ೧ ॥**

**ಯಶೋದಾಗರ್ಭಸಂಭೂತೇರುತ ಯಾತ್ರಾ ಪ್ರವರ್ತತೇ ।**
**ಉತಾಹೋ ಪೂರ್ವಮೇವಾಸೀತ್ಕೃತತ್ರೇತಾಯುಗಾದಿಷು ॥ ೪ ॥**

**ಯದಸ್ಯಾಂ ಪ್ರಾಣಿನಃ ಕೇಚಿದ್ಧ್ನನ್ತೇ ಘಾತಯಂತಿ ಚ ।**
**ಹತಾನಾಂ ಪ್ರಾಣಿನಾಂ ತೇಷಾಂ ಕಾ ಗತಿಃ ಪಾರಲೌಕಿಕೀ ॥ ೩ ॥**

**ಸ್ವಯಂ ಘ್ನತಾಂ ಘಾತಯತಾಮನುಮೋದಯತಾಂ ತಥಾ ।**
**ಏತನ್ಮೇ ಸಂಶಯಂ ಪೂರ್ವಂ ವಕ್ತುಮರ್ಹಸಿ ಕೇಶವ ॥ ೬ ॥**

---

೧. ಯುಧಿಷ್ಠಿರನು ಹೇಳುತ್ತಾನೆ—ಷಡ್ಗುಣೈಶ್ವರ್ಯಸಂಪನ್ನನಾದ ದೇವನೆ ! ಈ ನವಮಿಯು ಮಹತ್‌ಶಬ್ದದಿಂದ ಕೂಡಿದ್ದಾಗಿ ಯಾವ ಕಾಲದಿಂದ ರೂಢಿಗೆ ಬಂದಿತು ? ನವಮೀ ವಿಧಿಯು ಆದಿಯಿಂದಲೂ ಉಪಪನ್ನವಾಗಿತ್ತೆ ?

೪. ಯಶೋದಾ ಗರ್ಭದಲ್ಲಿ ಹುಟ್ಟಿದಾಗಿನಿಂದ ಬಂತೇ ? ಅಥವಾ ಚೈತ್ರ ಯಾತ್ರೆಯಾದ ಬಳಿಕ ಬಂದಿತೇ ? ಅಥವಾ ಕೃತ ತ್ರೇತಾ ಮುಂತಾದ ಹಿಂದಿನ ಯುಗಗಳಲ್ಲಿಯೂ ಇದ್ದಿತೇ ?

೩. ಈ ಮಹಾನವಮಿಯಲ್ಲಿ ಕೆಲವು ಪ್ರಾಣಿಗಳನ್ನು ವಧೆಮಾಡುವರೆಂದು ತಿಳಿದುಬರುತ್ತದೆ. ಆ ರೀತಿ ಹತವಾದ ಆ ಪ್ರಾಣಿಗಳಿಗೆ ಪರಲೋಕದಲ್ಲಿ ಯಾವ ಗತಿ ಸಂಭವಿಸುವುದು.

೬. ಪ್ರಾಣಿಗಳನ್ನು ಕೈಯಾರ ಕೊಲ್ಲುವವರು, ಇತರರಿಗೆ ಅಜ್ಞೆಮಾಡಿ ಕೊಲ್ಲಿಸುವವರು, ಈ ಪ್ರಾಣಿವಧೆಯನ್ನು ಅನುಮೋದಿಸತಕ್ಕವರು, ಇವರಲ್ಲಿ ಯಾರಿಗೆ ಆ ವಧೆಯ ಫಲ ? ಎಂಬದಾಗಿ ಈ ಕರ್ಮದಲ್ಲಿ ಮಹಾಸಂಶಯವುಂಟಾಗಿದೆ. ಇದನ್ನು ವ್ಯವಸ್ಥೆಮಾಡಿ ಹೇಳುವುದಕ್ಕೆ ನೀನೇ ಸಮರ್ಥನು ಎಂದು ಹೇಳಿದನು.

॥ ಶ್ರೀ ಕೃಷ್ಣ ಉವಾಚ ॥

ಪಾರ್ಥ ಯಾ ಪರಮಾ ಶಕ್ತಿರನಂತಾ ಲೋಕವಿಶ್ರುತಾ ।
ಆದ್ಯಾ ಸರ್ವಗತಾ ಶುದ್ಧಾ ಭಾವಗಮ್ಯಾ ಮನೋಹರಾ ॥ ೭ ॥

ಆದ್ಯಾಷ್ಟಮೀ ಕಲಾಕಾಲೀ ದ್ವಿತೀಯಾ ಸರ್ವಮಂಗಳಾ ।
ಮಾಯಾ ಕಾತ್ಯಾಯನೀ ದುರ್ಗಾ ಚಾಮುಂಡಾ ಶಂಕರಪ್ರಿಯಾ॥ ೮ ॥

ಧ್ಯಾಯಂತಿ ಯಾಂ ಯೋಗರತಾಂ ಸಾ ದೇವೀ ಪರಮೇಶ್ವರೀ ।
ರೂಪಭೇದೈರ್ನಾಮಭೇದೈರ್ಭವಾನೀ ಪೂಜ್ಯತೇ ಶಿವಾ ॥ ೯ ॥

ಅಷ್ಟಮ್ಯಾಂ ತು ನವಮ್ಯಾಂ ತು ದೇವದಾನವರಾಕ್ಷಸೈಃ ।
ಗಂಧರ್ವೈರುರಗೈರ್ಯಕ್ಷೈಃ ಪೂಜ್ಯತೇ ಕಿನ್ನರೈರ್ನರೈಃ ॥ ೧೦ ॥

ಅನ್ಯೇಷ್ವಪಿ ಯುಗೇಷ್ವಾದೌ ಸೃಷ್ಟೇಃ ಪೂರ್ವಂ ಪ್ರದರ್ಶಿತಾ ।
ಪೂಜ್ಯತೇಯಂ ಪುರಾ ದೇವೀ ತೇಭ್ಯಃ ಪೂರ್ವತರೈಃ ಶುಭೈಃ · ॥ ೧೧ ॥

---

೭. ಶ್ರೀಕೃಷ್ಣನು ಹೇಳುತ್ತಾನೆ—ಅಯ್ಯಾ ಕುಂತೀಪುತ್ರನೇ! ಲೋಕ ವಿಖ್ಯಾತವೂ ಅನಂತವೂ ಶ್ರೇಷ್ಠವೂ ಆದ ಆದಿಯೆಂಬ ಮೊದಲನೆಯದು ಸರ್ವ ದಲ್ಲಿಯೂ ಸೇರಿಕೊಂಡುದೂ ಶುದ್ಧವೂ ಭಾವನೆಗೆ ಮಾತ್ರ ಒಳಪಡತಕ್ಕದ್ದೂ ಮನೋಹರವೂ ಆಗಿದೆ.

೮-೯. ಮೊದಲನೆಯದಾಗಿ ಅಷ್ಟಮಿಯಲ್ಲಿರುವ ಆ ಕಲೆಯನ್ನು ಕಾಲೀ ಎಂದೂ, ಎರಡನೆಯದನ್ನು ಸರ್ವಮಂಗಳೇ ಎಂದೂ, ಹೀಗೆಯೇ ಮಾಯಾ ಕಾತ್ಯಾಯನೀ, ದುರ್ಗಾ, ಚಾಮುಂಡಾ, ಶಂಕರಪ್ರಿಯಾ, ಭವಾನೀ, ಪರಮೇ ಶ್ವರೀ ಮುಂತಾದ ನಾನಾ ಹೆಸರುಗಳಿಂದಲೂ ನಾನಾ ರೂಪಗಳಿಂದಲೂ ಯೋಗ ಸ್ಥೆಯಾದ ಆ ಶಿವೆಯು ಧ್ಯಾನಿಸಲ್ಪಡುತ್ತಾಳೆ ಮತ್ತು ಪೂಜಿತೆಯಾಗುತ್ತಾಳೆ.

೧೦. ಈ ಅಷ್ಟಮಿ ನವಮಿಗಳಲ್ಲಿ ದೇವತೆಗಳು, ದಾನವರು, ರಾಕ್ಷಸರು, ಗಂಧರ್ವರು, ಉರುಗರು, ಯಕ್ಷರು, ಕಿನ್ನರರು, ಮಾನವರು, ಇವರುಗಳೆಲ್ಲರೂ ದೇವಿಯನ್ನು ವಿಶೇಷವಾಗಿ ಪೂಜಿಸುತ್ತಾರೆ.

೧೧. ಇದಕ್ಕಿಂತ ಹಿಂದಿನ ಇತರ ಯುಗಗಳಲ್ಲಿಯೂ ಸೃಷ್ಟಿಗಿಂತ ಪೂರ್ವ ದಲ್ಲಿಯೂ ಶುಭಲಕ್ಷಣರಾದ ಅತಿ ಪ್ರಾಚೀನವ್ಯಕ್ತಿಗಳು ಈ ದೇವಿಯನ್ನು ಈ ತಿಥಿ ಯಲ್ಲಿ ಆರಾಧಿಸಿದಾರೆ.

ಆಶ್ವಯುಜೇ ಶುಕ್ಲಪಕ್ಷೇ ಚ ಯಾಷ್ಟಮೀ ಮೂಲಸಂಯುತಾ ।
ಸಾ ಮಹಾನವಮೀ ನಾಮ ತ್ರೈಲೋಕ್ಯೇಽಪಿ ಸುದುರ್ಲ್ಲಭಾ ॥ ೧೨ ॥

ಕನ್ಯಾಗತೇ ಸವಿತರಿ ಶುಕ್ಲಪಕ್ಷೇಽಷ್ಟಮೀ ತು ಯಾ ।
ಮೂಲನಕ್ಷತ್ರಸಂಯುಕ್ತಾ ಸಾ ಮಹಾನವಮೀ ಸ್ಮೃತಾ ॥ ೧೩ ॥

ಅಷ್ಟಮ್ಯಾಂ ಚ ನವಮ್ಯಾಂ ಚ ಜಗನ್ಮಾತರಮಂಬಿಕಾಂ ।
ಪೂಜಯಿತ್ವಾಽಽಶ್ವಿನೇ ಮಾಸಿ ವಿಶೋಕೋ ಜಯತಿ ದ್ವಿಷಃ ॥ ೧೪ ॥

ಸಂತರ್ಜಯಂತೀ ಹುಂಕಾರೈಃ ಖಡ್ಗಾದಿಭಿರಹರ್ನಿಶಂ ।
ನವಮ್ಯಾಂ ಪೂಜಿತಾ ದೇವೀ ದದಾತಿ ನವಮಂ ಫಲಂ ॥ ೧೫ ॥

ಸಾ ಪುಣ್ಯಾ ಸಾ ಪವಿತ್ರಾ ಚ ಸಾ ಧರ್ಮಸುಖದಾಯಿನೀ ।
ತಸ್ಮಾತ್ಸದಾ ಪೂಜನೀಯಾ ಚಾಮುಂಡಾಮುಂಡಮಾಲಿನೀ ॥ ೧೬ ॥

---

೧೨. ಆಶ್ವಯುಜಮಾಸದಲ್ಲಿ ಶುಕ್ಲಪಕ್ಷದಲ್ಲಿ ಮೂಲಾನಕ್ಷತ್ರಯುಕ್ತವಾದ ಅಷ್ಟಮಿಯ ಮಾರನೆದಿನದ ನವಮಿಯು ಮಹಾನವಮಿಯೆಂದು ಹೆಸರುಳ್ಳದ್ದಾಗಿದೆ. ಮೂರುಲೋಕಗಳಲ್ಲಿಯೂ ಸರ್ವಶ್ರೇಷ್ಠವಾಗಿದೆ.

೧೩. ಸೂರ್ಯನು ಕನ್ಯಾರಾಶಿಗೆ ಬಂದಿರುವಾಗ ಶುಕ್ಲಪಕ್ಷದಲ್ಲಿ ಬರುವ ಅಷ್ಟಮಿಯು ಮೂಲಾನಕ್ಷತ್ರಯುಕ್ತವಾಗಿದ್ದರೆ ಆ ಮುಂದಿನ ನವಮಿಯು ಮಹಾನವಮಿಯೆನಿಸುವುದು ಎಂಬುದು ಒಂದುಮತ.

೧೪. ಆಶ್ವಯುಜಮಾಸದ ಶುಕ್ಲಪಕ್ಷದಲ್ಲಿ ಮೂಲಾನಕ್ಷತ್ರಯುಕ್ತವಾದ ಅಷ್ಟಮಿ ನವಮಿಗಳಲ್ಲಿ ಲೋಕಮಾತೆಯಾದ ಅಂಬಿಕೆಯನ್ನು ಪೂಜಿಸಿದ ಮಾನವನು ಶತ್ರುಗಳನ್ನೆಲ್ಲಾ ಗೆದ್ದು ದುಃಖರಹಿತನಾಗಿ ವಿರಾಜಿಸುತ್ತಾನೆ.

೧೫. ಖಡ್ಗ ಮೊದಲಾದವುಗಳನ್ನು ಧರಿಸಿ ಹುಂಕಾರ ಶಬ್ದಮಾಡುತ್ತಾ ಭಯಂಕರೆಯಾದ ದೇವಿಯನ್ನು ನವಮಿಯ ದಿವಸ ಹಗಲೂ ರಾತ್ರಿಯೂ ಪೂಜಿಸಿದರೆ ಆ ದೇವಿಯು ನವಫಲವನ್ನು ಕೊಡುವಳು.

೧೬. ಆ ದೇವಿಯು ಪುಣ್ಯಸ್ವರೂಪಿಣಿಯೂ ಪರಿಶುದ್ಧೆಯೂ ಎನಿಸಿ ಧರ್ಮವಿರುದ್ಧವಲ್ಲದ ಸುಖವನ್ನು ಕೊಡತಕ್ಕವಳು. ಆದುದರಿಂದ ರುಂಡಾಮಾಲಾಧಾರಿಣಿಯಾದ ಆ ಚಾಮುಂಡಾಂಬೆಯನ್ನು ಯಾವಾಗಲೂ ಪೂಜಿಸಬೇಕು.

ತಸ್ಯಾಂ ಯದ್ಯುಪಯುಜ್ಯಂತೇ ಪ್ರಾಣಿನೋ ಮಹಿಷಾದಯಃ ।
ಸರ್ವೇ ತೇ ಸ್ವರ್ಗತಿಂ ಯಾಂತಿ ಘ್ನತಾಂ ಪಾಪಂ ನ ವಿದ್ಯತೇ ॥ ೧೭ ॥

ನ ತಥಾ ಬಲಿದಾನೇನ ಪುಷ್ಪಧೂಪವಿಲೇಪನೈಃ ।
ಯಥಾ ಸಂತುಷ್ಯತೇ ಲೋಕೇ ಮಹಿಷೈರ್ವಿಂಧ್ಯವಾಸಿನೀ ॥ ೧೮ ॥

ಉದ್ದಿಶ್ಯ ದುರ್ಗಾಂ ಹನ್ಯಂತೇ ವಿಧಾನಾದ್ಯೇऽತ್ರ ಜಂತವಃ ।
ಸ್ವರ್ಗಂ ತೇ ಯಾಂತಿ ಕೌಂತೇಯ ಘಾತಯಂತೋऽಪಿ ಭಕ್ತಿತಃ ॥೧೯॥

ಭವಾನೀಪ್ರಾಂಗಣೇ ಪ್ರಾಣಾ ಯೇಷಾಂ ಯಾತಾ ಯುಧಿಷ್ಠಿರ ।
ತೇಷಾಂ ಸ್ವರ್ಗೇ ಧ್ರುವಂ ವಾಸೋ ವರಾಸ್ತ್ರೀಪ್ಸರಸಾಂ ಪ್ರಿಯಾಃ ॥

---

೧೭. ಆ ದೇವಿಯ ಪ್ರೀತ್ಯರ್ಥವಾಗಿ ಕೋಣ ಮುಂತಾದವುಗಳು ಬಲಿ ಸಮರ್ಪಣೆಗಾಗಿ ವಿನಿಯೋಗಿಸಲ್ಪಟ್ಟರೆ ಆ ಪ್ರಾಣಿಗಳಿಗೆ ಸ್ವರ್ಗಲೋಕ ಪ್ರಾಪ್ತಿಯಾಗುವುದು. ಅಲ್ಲದೆ ಹಾಗೆ ಬಲಿಕೊಟ್ಟವರಿಗೆ ಯಾವ ಪಾಪವೂ ಸಂಘಟಿಸುವುದಿಲ್ಲ.

೧೮. ವಿಂಧ್ಯವಾಸಿನಿಯಾದ ಆ ಚಾಮುಂಡಾಂಬೆಯು ಮಹಿಷಾದಿ ಪ್ರಾಣಿಗಳ ಬಲಿಸಮರ್ಪಣದಿಂದ ತೃಪ್ತಳಾಗುವ ಹಾಗೆ ಕೇವಲ ಗಂಧಪುಷ್ಪಧೂಪ ನೈವೇದ್ಯಾದಿಗಳಿಂದ ತೃಪ್ತಿಹೊಂದುವುದಿಲ್ಲ.

೧೯. ಎಲೈ ಧರ್ಮಜನೇ ! ದುರ್ಗಾದೇವಿಯನ್ನು ಉದ್ದೇಶಿಸಿ ವಿಧಿವಿಧಾನದಂತೆ ಬಲಿಯಾಗಿ ಸಮರ್ಪಿಸಲ್ಪಟ್ಟ ಜಂತುಗಳಿಗೂ, ಮತ್ತು ಅವುಗಳನ್ನು ಭಕ್ತಿಪುರಸ್ಸರವಾಗಿ ಬಲಿಕೊಟ್ಟವರಿಗೂ, ಸ್ವರ್ಗಲೋಕವು ಪ್ರಾಪ್ತವಾಗುತ್ತದೆ.

೨೦. ಅಯ್ಯಾ ಯುಧಿಷ್ಠಿರ ! ಭವಾನೀ ದೇವಾಲಯದ ಅಂಗಳದಲ್ಲಿ ಬಲಿಗಾಗಿ ಜೀವವನ್ನು ಸಮರ್ಪಿಸಿದ ಪ್ರಾಣಿಗಳಿಗೆ ಶಾಶ್ವತವಾದ ಸ್ವರ್ಗಲೋಕ ವಾಸವು ಲಭಿಸುವುದು. ಶ್ರೇಷ್ಠವಾದ ಆ ಪ್ರಾಣಿಗಳು ಅಪ್ಸರಸ್ತ್ರೀಯರಿಗೆ ಪ್ರಿಯಕರಗಳೆನಿಸುವುವು.

**ಮನ್ವಂತರೇಷು ಸರ್ವೇಷು ಕಲ್ಪೇಷು ಕುರುನಂದನ ।**
**ತೇಷು ಸರ್ವೇಷು ಚೈವಾಸೀನ್ನವಮೀಯಂ ಪುರಾರ್ಚಿತಾ ॥ ೨೧ ॥**

**ಪ್ರಸಿದ್ಧಾನಾದಿನಿಧನಾ ವರ್ಷೇವರ್ಷೇ ಯುಧಿಷ್ಠಿರ ।**
**ಭೂಯೋಭೂಯೋಽವತಾರೈಶ್ಚ ಭವಾನೀ ಪೂಜ್ಯತೇ ಸುರೈಃ ॥ ೨೨ ॥**

**ಅವತೀರ್ಣಾ ಭುವಿ ಸದಾ ನಿತ್ಯಂ ದೈತ್ಯನಿಬರ್ಹಿಣೀ ।**
**ಸ್ವರ್ಗಪಾತಾಲಮರ್ತ್ಯೇಷು ಕರೋತಿ ಸ್ಥಿತಿಪಾಲನಂ ॥ ೨೩ ॥**

**ಪುನಶ್ಚೈಷಾ ಮಹಾದೇವೀ ಯಶೋದಾಗರ್ಭಸಂಭವಾ ।**
**ಕಂಸಾಸುರಸ್ಯೋತ್ತಮಾಂಗೇ ಪಾದಂ ದತ್ವಾ ಗತಾಯುಷಃ ॥ ೨೪ ॥**

**ತತಃ ಪ್ರಭೃತಿ ಲೋಕೇಷು ಯಶೋದಾನಂದದಾಯಿನೀಂ ।**
**ವಿಂಧ್ಯಾಚಲೇ ಸ್ಥಾಪಯಿತ್ವಾ ಪುನಃ ಪೂಜಾ ಪ್ರವರ್ತಿತಾ ॥ ೨೫ ॥**

---

೨೧. ಅಯ್ಯಾ ಕುರುವಂಶೋದ್ಭವನೇ ! ಪ್ರಾಚೀನ ಕಾಲದಿಂದಲೂ ಸಮಸ್ತ ಮನ್ವಂತರಗಳಲ್ಲಿಯೂ ಸಮಸ್ತ ಕಲ್ಪಗಳಲ್ಲಿಯೂ ಈ ನವಮಿಯು ಪೂಜ್ಯವೆನಿಸಿಕೊಂಡಿದೆ.

೨೨. ಆದ್ಯಂತರಹಿತಳೂ, ಪ್ರಸಿದ್ಧಳೂ, ಆದ ಭವಾನಿಯು ವರ್ಷೇ ವರ್ಷೇ ಅವತಾರವನ್ನೆತ್ತುತ್ತ ದೇವತೆಗಳಿಂದ ಮತ್ತೆ ಪೂಜಿತೆಯಾಗುತ್ತಾಳೆ.

೨೩. ಆ ದೇವಿಯು ಹೀಗೆ ಅವತರಿಸಿ ದೈತ್ಯರನ್ನು ಧ್ವಂಸಮಾಡುತ್ತಾ ಸ್ವರ್ಗ ಮರ್ತ್ಯ ಪಾತಾಳ ಎಂಬ ಲೋಕತ್ರಯಗಳನ್ನೂ ಸುಸ್ಥಿತಿಯಲ್ಲಿ ರಕ್ಷಣೆ ಮಾಡುತ್ತಾಳೆ.

೨೪. ಈ ದೇವಿಯು ಯಶೋದೆಯ ಗರ್ಭದಲ್ಲಿ ಜನಿಸಿದಾಗ ಕಂಸಾಸುರನ ತಲೆಯನ್ನು ಮೆಟ್ಟಿ ಧ್ವಂಸಮಾಡಿಸಿದಳು.

೨೫. ಅದು ಮೊದಲುಗೊಂಡು ಲೋಕಗಳಿಗೆ ಯಶಃಪ್ರದೆಯೂ ಆನಂದ ದಾಯಿನಿಯೂ ಆದ ಈ ದೇವಿಯನ್ನು ವಿಂಧ್ಯಪರ್ವತದಲ್ಲಿ ಸ್ಥಾಪಿಸಿ ಪೂಜಿಸ ತೊಡಗಿದರು.

ಪೂರ್ವಪ್ರವೃದ್ಧೋಽಪಿ ಪುನರ್ಭಗಿನ್ಯಾ ಮಹಿಮಾ ಕೃತಃ ।
ಭುವಿ ಸರ್ವೋಪಕಾರಾಯ ಸರ್ವೋಪದ್ರವಶಾಂತಯೇ ॥ ೨೬ ॥

ಏವಂ ವಿಂಧ್ಯೋಪವಾಸಿನ್ಯಾ ನವರಾತ್ರೋಪವಾಸಿನಃ ।
ಏಕ ರಾತ್ರೇಣ ನಕ್ತೇನ ಸ್ವಶಕ್ತ್ಯಾಽಯಾಚಿತೇನ ವಾ ॥ ೨೭ ॥

ಯಜನ್ಯೈರ್ಯಾಜನ್ಯೈರ್ದೇವಾಃ ಸ್ಥಾನೇ ಸ್ಥಾನೇ ಪುರೇಪುರೇ ।
ಗೃಹೇ ಗೃಹೇ ಭಕ್ತಿಪರೈರ್ಗ್ರಾಮೇಗ್ರಾಮೇ ವನೇವನೇ ॥ ೨೮ ॥

ಸ್ನಾತೈಃ ಪ್ರಮುದಿತೈರ್ಹೃಷ್ಟೈರ್ಬ್ರಾಹ್ಮಣೈಃ ಕ್ಷತ್ರಿಯೈರ್ನೃಪೈಃ ।
ವೈಶ್ಯೈಃ ಶೂದ್ರೈರ್ಭಕ್ತಿ ಚಿತ್ತೈರ್ಮ್ಲೇಚ್ಛೈರನ್ಯೈಶ್ಚ ಮಾನವೈಃ ॥ ೨೯ ॥

---

೨೬. ಹಿಂದಿನ ಕಾಲದಲ್ಲಿ ತನ್ನ ಮಹಿಮೆಯನ್ನು ಸಮೃದ್ಧಿಯಾಗಿ ತೋರಿಸಿದ ದೇವಿಯು ಈಗ ಭೂಲೋಕದಲ್ಲಿ ಸಮಸ್ತ ಉಪದ್ರವಗಳೂ ಶಾಂತಿಯಾಗಿ ಸರ್ವರಿಗೂ ಉಪಕಾರವಾಗುವಂತೆ ತನ್ನ ಸಹೋದರಿಯ ಮಹಿಮೆ ತೋರುವಂತೆ ಮಾಡಿದಳು.

೨೭. ಈ ಪ್ರಕಾರ ವಿಂಧ್ಯವಾಸಿನಿಯ ಪ್ರೀತ್ಯರ್ಥವಾಗಿ ಒಂಬತ್ತು ರಾತ್ರಿಗಳಲ್ಲೂ ಉಪವಾಸ, ಇಲ್ಲವೇ ಒಂದು ರಾತ್ರಿ ಉಪವಾಸ ಅಥವಾ ನಕ್ತ ಭೋಜನ, ಅಯಾಚಿತವಾಗಿ ದೊರೆತ ಆಹಾರಸೇವನೆ ಈರೀತಿ ಶಕ್ತಿಯಿದ್ದಷ್ಟು ಮಟ್ಟಿಗೆ ಆರಾಧಿಸುವುದು.

೨೮. ತಾವೇ ಪೂಜಿಸುವುದು ಇತರರಿಂದ ಪೂಜೆಮಾಡಿಸುವುದು, ಈ ಕಾರ್ಯಗಳನ್ನು ಎಲ್ಲಾ ನಗರಗಳು ಗ್ರಾಮುಗಳು ಇವುಗಳಲ್ಲಿ ಮನೆಮನೆಗಳಲ್ಲಿಯೂ ಪ್ರತಿಯೊಂದು ವನಗಳಲ್ಲಿಯೂ ಆಚರಿಸಬೇಕು.

೨೯. ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು, ಮ್ಲೇಚ್ಛರು, ಮೊದಲಾದ ಸಕಲ ಮಾನವರೂ ಸ್ತ್ರೀಯರೂ ಸ್ನಾನಮಾಡಿ ಮನಸ್ಸಿನಲ್ಲಿ ಹರ್ಷಯುಕ್ತರಾಗಿ ಭಕ್ತಿಯಿಂದ ಕೂಡಿ ಆಚರಿಸಬೇಕಾದ ವಿಧಾನವನ್ನು ಹೇಳುತ್ತೇನೆ ಕೇಳು.

**ಸ್ತ್ರೀಭಿಶ್ಚ ಕುರುಶಾರ್ದೂಲ ತದ್ವಿಧಾನಮಿದಂ ಶೃಣು ।**
**ಜಯಾಭಿಲಾಷೀ ನೃಪತಿಃ ಪ್ರತಿಪತ್ಪ್ರಭೃತಿಕ್ರಮಾತ್ ॥ ೩೦ ॥**

**ಲೋಹಾಭಿಹಾರಿಕಂ ಕರ್ಮ ಕಾರಯೇದ್ಯಾವದಷ್ಟಮಿ ।**
**ಪ್ರಾಗುದಕ್ಪ್ರವಣೇ ದೇಶೇ ಪತಾಕಾಭಿರಲಂಕೃತಂ ॥ ೩೧ ॥**

**ಮಂಡಪಂ ಕಾರಯೇದ್ದಿವ್ಯಂ ನವಸಪ್ತಕರಂ ವರಂ ।**
**ಆಗ್ನೇಯ್ಯಾಂ ಕಾರಯೇತ್ಕುಂಡಂ ಹಸ್ತಮಾತ್ರಂ ಸುಶೋಭನಂ ॥ ೩೨ ॥**

**ಮೇಖಲಾತ್ರಯಸಂಯುಕ್ತಂ ಯೋನ್ಯಶ್ವತ್ಥದಲಾಭಯಾ ।**
**ರಾಜಚಿಹ್ನಾನಿ ಸರ್ವಾಣಿ ಶಸ್ತ್ರಾಣ್ಯಸ್ತ್ರಾಣಿ ಯಾನಿ ಚ ॥ ೩೩ ॥**

---

೩೦. ಜಯಶಾಲಿಯಾಗಬೇಕೆಂದು ಅಪೇಕ್ಷಿಸುವ ರಾಜನು ಆಶ್ವಯುಜ ಶುಕ್ಲಪ್ರತಿಪತ್ತು ಮೊದಲುಗೊಂಡು ಅಷ್ಟಮೀ ಪರ್ಯಂತ ಲೋಹಾಭಿಹಾರಿಕ ವೆಂಬ ಕರ್ಮವನ್ನು ಮಾಡಿಸಬೇಕು. (ಈ ಲೋಹಾಭಿಹಾರಿಕ ಕರ್ಮದ ವಿಧಾನವನ್ನು ಈ ಮುಂದೆ ಹೇಳಿದೆ.)

೩೧. ಪೂರ್ವಕ್ಕೂ ಉತ್ತರಕ್ಕೂ ಇಳಿಜಾರಾಗಿರುವ ಪ್ರದೇಶದಲ್ಲಿ ಒಂಬತ್ತು ಹಸ್ತ ಏಳುಹಸ್ತ ಪ್ರಮಾಣವುಳ್ಳ ಸೊಗಸಾದ ಮಂಟಪವನ್ನು ರಚಿಸಿ, ಅದನ್ನು ಪತಾಕೆಗಳಿಂದ ಅಲಂಕರಿಸಬೇಕು. ಅದರ ಆಗ್ನೇಯ ಮೂಲೆಯಲ್ಲಿ ಒಂದು ಹಸ್ತ ಪ್ರಮಾಣದ ಚತುರಸ್ರಕುಂಡವನ್ನು ಶುಭಲಕ್ಷಣಯುತವಾಗಿ ರಚಿಸಬೇಕು.

೩೨. ಅದಕ್ಕೆ ಮೂರು ಮೇಖಲೆಯನ್ನು ರಚಿಸಬೇಕು. ಅಭಯ ಪ್ರದವಾದ ಕುಂಡಯೋನಿಯನ್ನು ಅಶ್ವತ್ಥಪತ್ರಾಕೃತಿಯಾಗಿ ರಚಿಸಬೇಕು. ಬಳಿಕ ಆ ಕುಂಡದಲ್ಲಿ ಅಗ್ನಿಯನ್ನು ಪ್ರತಿಷ್ಠೆಮಾಡಬೇಕು.

೩೩. ಅಸ್ತ್ರಗಳು ಶಸ್ತ್ರಗಳು ಇತರ ರಾಜಮರ್ಯಾದೆಯ ವಸ್ತುಗಳು ಇವನ್ನು ತರಿಸಿ ಅವುಗಳನ್ನು ಆ ಮಂಟಪದಲ್ಲಿ ಅಧಿವಾಸಮಾಡಬೇಕು.

**ಆನೀಯ ಮಂಡಪೇ ತಾನಿ ಸರ್ವಾಣ್ಯೇವಾಧಿವಾಸಯೇತ್ ।**
**ತತಸ್ತು ಬ್ರಾಹ್ಮಣಃ ಸ್ನಾತಃ ಶುಕ್ಲಾಂಬರಧರಃ ಶುಚಿಃ ॥ ೩೪ ॥**

**ಓಂಕಾರಪೂರ್ವಕೈರ್ಮಂತ್ರೈಸ್ತಲ್ಲಿಂಗೈರ್ಜುಹುಯಾದ್ ಘೃತಂ ।**
**ಲೋಹನಾಮಾಭವತ್ಪೂರ್ವಂ ದಾನವಸ್ತು ಮಹಾಬಲಃ ॥ ೩೫ ॥**

**ಸ ದೈವೈಃ ಸಮರೇ ಕ್ರುದ್ಧೈರ್ಬಹುಧಾ ಶಕಲೀಕೃತಃ ।**
**ತದಂಗಸಂಭವಂ ಲೋಹಂ ಯತ್ಸರ್ವಂ ದೃಶ್ಯತೇ ಕ್ಷಿತೌ ॥ ೩೬ ॥**

**ಶಸ್ತ್ರಾಸ್ತ್ರಮಂತ್ರೈರ್ಹೋತವ್ಯಂ ಪಾಯಸಂ ಘೃತಸಂಯುತಂ ।**
**ಹುತಶೇಷಂ ತುರಂಗಾಣಾಂ ಗಜಾನಾಮುಪಹಾರಯೇತ್ ॥ ೩೭ ॥**

**ಲೋಹಾಭಿಹಾರಿಕಂ ಕರ್ಮ ತೇನೈತದೃಷಿಭಿಃ ಸ್ಮೃತಂ ।**
**ಬದ್ಧಪ್ರತಿಶರವ್ಯಂ ಚ ಗಜಾಶ್ವಸಮಲಂಕೃತಂ ॥ ೩೮ ॥**

೩೪. ಸ್ನಾನಮಾಡಿ ಶುಭ್ರವಾದ ಮಡಿವಸ್ತ್ರಗಳನ್ನು ಧರಿಸಿದ ಬ್ರಾಹ್ಮಣರು ಓಂಕಾರಪೂರ್ವಕವಾಗಿ ಆಯಾ ಆಯುಧಗಳಿಗೆ ಉಕ್ತವಾದಮಂತ್ರವನ್ನುಚ್ಚರಿಸುತ್ತಾ ಅದರ ಅಭಿಮಾನದೇವತೆಗೆ ಆಜ್ಯಾಹುತಿಗಳನ್ನು ಕೊಡಬೇಕು.

೩೫. ಪೂರ್ವಕಾಲದಲ್ಲಿ ಮಹಾಪರಾಕ್ರಮಿಯಾದ ಲೋಹಾಸುರನೆಂಬ ದಾನವನಿದ್ದನು. ಅವನು ಮಾಡುವ ಘಾತುಕಕೃತ್ಯಗಳಿಂದ ದೇವತೆಗಳಿಗೆ ಕೋಪಬಂದಿತು.

೩೬. ಅವರು ಯುದ್ಧದಲ್ಲಿ ಅವನ ದೇಹವನ್ನು ಭಿನ್ನಭಿನ್ನವಾಗಿ ಮಾಡಿದರು. ಅವನ ದೇಹದ ಚೂರುಗಳೇ ಈ ಲೋಕದಲ್ಲಿ ಲೋಹಗಳಾಗಿ ಕಾಣುತ್ತಿವೆ.

೩೭. ಶಸ್ತ್ರಮಂತ್ರಗಳನ್ನೂ ಅಸ್ತ್ರಮಂತ್ರಗಳನ್ನೂ ಉಚ್ಚರಿಸುತ್ತಾ ಘೃತಮಿಶ್ರವಾದ ಪಾಯಸದ ಆಹುತಿಯಿಂದ ಹೋಮಮಾಡಬೇಕು. ಹೋಮಮಾಡಿ ಉಳಿದುದನ್ನು ಸೇನೆಯ ಆನೆ ಕುದುರೆಗಳಿಗೆ ಉಪಹಾರವಾಗಿ ಕೋಡಬೇಕು.

೩೮. ಈ ಕರ್ಮವನ್ನೇ ಋಷಿವರ್ಯರು ಲೋಹಾಭಿಹಾರಿಕ ಕರ್ಮವೆನ್ನುವರು. ಧನುಸ್ಸು, ಶರ, ಖಡ್ಗ ಈ ಶಸ್ತ್ರಸಜ್ಜಿತರಾದ ಯೋಧರು ಆರೋಹಿಸಿದ ಆನೆ ಕುದುರೆಗಳನ್ನು ಅಲಂಕರಿಸಿ ನಂದಿವಾದ್ಯಘೋಷಸಮೇತ ಪ್ರತಿನಿತ್ಯವೂ ನಗರದ ಬೀದಿಗಳಲ್ಲೆಲ್ಲಾ ಮೆರವಣಿಗೆ ಮಾಡಿಸಬೇಕು.

ತ್ರೈಮಯೋನ್ನಗರೇ ನಿತ್ಯಂ ನಂದಿಘೋಷಪುರಸ್ಸರಂ ।
ಪ್ರತ್ಯಹಂ ನೃಪತಿಃ ಸ್ನಾತ್ವಾ ಸಂಪೂಜ್ಯ ಪಿತೃದೇವತಾಃ ॥ ೩೯ ॥

ಪೂಜಯೇದ್ರಾಜಚಿಹ್ನಾನಿ ಫಲಮಾಲ್ಯಾನುಲೇಪನೈಃ ।
ಹುತಶೇಷಂ ಪ್ರದಾತವ್ಯಮೌಪನಾಯನಿಕೇ ದ್ವಿಜೇ ॥ ೪೦ ॥

ತಸ್ಯಾಭಿಹರಣಾದ್ರಾಜ್ಞೋ ವಿಜಯಃ ಸಮುದಾಹೃತಃ ।
ಪೂಜಾಮಂತ್ರಾನ್ ಪ್ರವಕ್ಷ್ಯಾಮಿ ಪುರಾಣೋಕ್ತಾನಹಂ ತವ ॥ ೪೧ ॥

ಯೈಃ ಪೂಜಿತಾಃ ಪ್ರಯಚ್ಛಂತಿ ಕೀರ್ತಿಮಾಯುರ್ಯಶೋಬಲಂ ।
(ಪ್ರಾರ್ಥನಾ ಮಂತ್ರಾಃ)
ಯಥಾಂಬುದಶ್ಛಾದಯತಿ ಶಿವಾಯೇಮಾಂ ವಸುಂಧರಾಂ ॥ ೪೨ ॥

---

೩೯. ರಾಜನೂ ಸಹ ಸ್ನಾನಮಾಡಿ ನಿತ್ಯಕರ್ಮಾದಿಗಳನ್ನು ನೆರವೇರಿಸಿ ಪ್ರತಿದಿನವೂ ಪಿತೃದೇವತಾಪೂಜೆ ಮಾಡಬೇಕು.

೪೦. ಬಳಿಕ ರಾಜಚಿಹ್ನೆಗಳಾದ ವಸ್ತುಗಳನ್ನು ಗಂಧಮಾಲ್ಯಾದಿಗಳಿಂದಲೂ ಫಲನಿವೇದನಾದಿಗಳಿಂದಲೂ ಪೂಜಿಸಬೇಕು. ಹೋಮಮಾಡಿ ಉಳಿದ ಹವಿಶ್ಶೇಷವನ್ನು ಉಪನಯವಾದ ವಟುವಿಗೆ ಕೊಡಬೇಕು.

೪೧. ಈರೀತಿ ಬ್ರಹ್ಮಚಾರಿಯನ್ನು ಪೂಜಿಸಿ ಸತ್ಕರಿಸಿದರೆ ರಾಜನಿಗೆ ಜಯವು ಲಭಿಸುವುದು ಸಿದ್ಧ. ಆಯುಧಗಳನ್ನೂ ರಾಜಚಿಹ್ನೆಗಳನ್ನೂ ಪ್ರಾರ್ಥಿಸುವಾಗ ಹೇಳಬೇಕಾದ ಪುರಾಣೋಕ್ತವಾದ ಮಂತ್ರಗಳನ್ನು ಈಗ ನಾನು ನಿನಗೆ ಹೇಳುತ್ತೇನೆ.

೪೨. ಇನ್ನು ಯಾವುದಾದರೂ ಮಂತ್ರಹೇಳಿ ಪ್ರಾರ್ಥಿಸುವುದಕ್ಕಿಂತ ಯಥೋಕ್ತವಾದ ಈ ಮಂತ್ರಪೂರ್ವಕವಾಗಿ ಪ್ರಾರ್ಥನೆಮಾಡಿದರೆ ಕರ್ತೃವಿಗೆ ಕೀರ್ತಿ, ಆಯುರ್ವೃದ್ಧಿ, ಯಶಸ್ಸು, ಬಲ, ಇವು ನಿಸ್ಸಂಶಯವಾಗಿ ಲಭಿಸುತ್ತವೆ.

ತಥಾಚ್ಛಾದಯ ರಾಜಾನಂ ವಿಜಯಾರೋಗ್ಯವೃದ್ಧಯೇ ।
(ಇತಿ ಛತ್ರ ಪ್ರಾರ್ಥನಾ)
ಗಂಧರ್ವಕುಲಜಾತಸ್ತ್ವಂ ಮಾಭೂಯಾಃ ಕುಲದೂಷಕಃ ॥ ೪೩ ॥

ಬ್ರಹ್ಮಣಃ ಸತ್ಯವಾಕ್ಯೇನ ಸೋಮಸ್ಯ ವರುಣಸ್ಯ ಚ ।
ಪ್ರಭಾವಾಚ್ಚ ಹುತಾಶಸ್ಯ ವರ್ದ್ಧಸ್ವ ತ್ವಂ ತುರಂಗಮ ॥ ೪೪ ॥

ತೇಜಸಾ ಚೈವ ಸೂರ್ಯಸ್ಯ ಮುನೀನಾಂ ತಪಸಾ ಯಥಾ ।
ರುದ್ರಸ್ಯ ಬ್ರಹ್ಮಚರ್ಯೇಣ ಪವನಸ್ಯ ಬಲೇನ ಚ ॥ ೪೫ ॥

ಸ್ಮರ ತ್ವಂ ರಾಜಪುತ್ರೋಽಸಿ ಕೌಸ್ತುಭಂ ಚ ಮಣಿಂ ಸ್ಮರ ।
ಯಾಂ ಗತಿಂ ಬ್ರಹ್ಮಹಾ ಗಚ್ಛೇತ್ಪಿತೃಹಾ ಮಾತೃಹಾ ತಥಾ ॥ ೪೬ ॥

---

೪೩. ಛತ್ರಿಯನ್ನು ಪ್ರಾರ್ಥಿಸುವಾಗ "ಎಲೈ ಶ್ವೇತಚ್ಛತ್ರಾಭಿಮಾನ ದೇವತೆಯೇ! ಭೂಲೋಕದ ಶುಭೋದಯಕ್ಕಾಗಿ ಮೇಘವು ವಸುಂಧರೆಯನ್ನು ಆವರಿಸಿರುವಂತೆ ನೀನು ರಾಜನ ಜಯಲಾಭ ಆರೋಗ್ಯಲಾಭಗಳಿಗೆ ಅನುಕೂಲವಾದ ಆಚ್ಛಾದನವಾಗು" ಎಂಬುದಾಗಿ ಹೇಳಬೇಕು. ಇದು ಛತ್ರಪಾರ್ಥನಾ ಮಂತ್ರದ ಅರ್ಥ.

೪೪. ಅಶ್ವವನ್ನು ಪೂಜಿಸಿದ ಮೇಲೆ ಎಲೈ ತುರಗವೆ! ಗಂಧರ್ವಕುಲದಲ್ಲಿ ಜನಿಸಿದ ನೀನು ನಿನ್ನ ಕುಲಕ್ಕೆ ಕಳಂಕವನ್ನು ತರುವಂತೆ ಆಗಬೇಡ (ಮಹಾ ವೇಗಶಾಲಿಯಾಗು) ಬ್ರಹ್ಮನ ಸತ್ಯ ವಾಕ್ಯದಿಂದಲೂ, ಸೋಮ, ಅಗ್ನಿ, ವರುಣ ಇವರ ಅಂಶಪ್ರಭಾವದಿಂದಲೂ ನೀನು ವರ್ಧಿಸು.

೪೫. ಸೂರ್ಯನು ತೇಜೋವಿಶೇಷದಿಂದಲೂ, ಮುನಿಗಳು ತಪಶ್ಶಕ್ತಿಯಿಂದಲೂ, ರುದ್ರನು ಬ್ರಹ್ಮಚರ್ಯದಿಂದಲೂ, ವಾಯುವು ಶಕ್ತಿ (ರಭಸ) ದಿಂದಲೂ, ಕೂಡಿರುವಂತೆ ನೀನು ವೇಗಯುಕ್ತನಾಗು. ರಾಜನಿಗೆ ಪುತ್ರಪ್ರಾಯನೆಂಬುದನ್ನೂ ಕೌಸ್ತುಭಮಣಿಯನ್ನು ಧರಿಸಿರುವೆಯೆಂಬುದನ್ನೂ ನೆನಪಿನಲ್ಲಿಡು.

೪೬-೪೭. ಎಲೈ ತುರಗವೆ! ಬ್ರಹ್ಮಹತ್ಯಮಾಡಿದವನು, ಪಿತೃಘಾತಿ, ಮಾತೃಹತ್ಯಮಾಡಿದವನು, ಭೂಮಿಲಾಭಕ್ಕಾಗಿ ಸುಳ್ಳಾಡಿದವನು, ರಣದಲ್ಲಿ ಹಿಮ್ಮೆಟ್ಟಿದ ಕ್ಷತ್ರಿಯ, ಇವರೆಲ್ಲ ಸೂರ್ಯ, ಚಂದ್ರ, ಅಗ್ನಿ, ವಾಯು, ಇವರು

[illegible]ೋಽನೃತವಾದೀ ಚ ಕ್ಷತ್ರಿಯಶ್ಚ ಪರಾಙ್ಮುಖಃ |
[illegible]ಂದ್ರಮಸೌ ವಾಯುಃ ಪಾವಕಶ್ಚ ನ ಯತ್ರ ವೈ || ೪೭ ||

ಪ್ರಜೇಚ್ಛ್ವಾ ತಾಂ ಗತಿಂ ಕ್ಷಿಪ್ರಂ ತಚ್ಚ ಪಾಪಂ ಭವೇತ್ಕಿಲ |
ವಿಕೃತಿಂ ಯದಿ ಗಚ್ಛೇಸ್ತ್ವಂ ಯುದ್ಧೇಽಧ್ವನಿ ತುರಂಗಮ ||
ರಿಪೂನ್ವಿಜಿತ್ಯ ಸಮರೇ ಸಹ ಭರ್ತ್ರಾ ಸುಖೀ ಭವ || ೪೮ ||
(ಇತ್ಯಶ್ವ ಪ್ರಾರ್ಥನಾ ಮಂತ್ರಃ)

ಶಕ್ರಕೇತೋ ಮಹಾವೀರ್ಯ ಸುಪರ್ಣಸ್ತ್ವಯ್ಯುಪಸ್ಥಿತಃ |
ಪತತ್ರಿರಾಡ್ವೈನತೇಯಸ್ತಥಾ ನಾರಾಯಣಧ್ವಜಃ || ೪೯ ||

ಕಾಶ್ಯಪೇಯೋಽಮೃತೋ ಜ್ಞೇಯೋ ನಾಗಾರಿರ್ವಿಷ್ಣುವಾಹನಃ |
ಅಪ್ರಮೇಯೋ ದುರಾಧರ್ಷೋ ದೇವಶತ್ರುನಿಷೂದನಃ || ೫೦ ||

---

ಯಾರೂ ಇಲ್ಲದೆ ಇರುವ ಮಹಾಂಧಕಾರಮಯವಾದ ನರಕಲೋಕಕ್ಕೆ ಶೀಘ್ರವಾಗಿ ಹೋಗಿ, ಅಲ್ಲಿ ಯಾವ ಕ್ಲೇಶವನ್ನು ಅನುಭವಿಸುವರೆಂಬುದನ್ನು ಸ್ಮರಿಸಿಕೊ. ನೀನು ಯುದ್ಧದಲ್ಲಿಯಾಗಲಿ, ಮಾರ್ಗದ ಪ್ರಯಾಣದಲ್ಲಿಯಾಗಲಿ ಇಂತಹ ಮನೋವಿಕಾರ ಹೊಂದಿದೆಯಾದರೆ ಮೇಲೆ ಹೇಳಿದವರು ಹೊಂದುವ ದುರ್ಗತಿಯನ್ನು ಹೊಂದಬೇಕಾದೀತು.

೪೮. ಆದುದರಿಂದ ಎಲೈ ಅಶ್ವವೇ ! ಯುದ್ಧದಲ್ಲಿ ನಿನ್ನ ಯಜಮಾನನೊಡನೆ ಸಹಕರಿಸಿ, ಶತ್ರುಗಳನ್ನು ಜಯಿಸಿ ಸುಖವಾಗಿರು" ಎಂದು ಪ್ರಾರ್ಥಿಸಬೇಕು. ಇದು ಅಶ್ವ ಪ್ರಾರ್ಥನಾಮಂತ್ರದ ಅರ್ಥ.

೪೯. ಎಲೈ ಇಂದ್ರಧ್ವಜವೇ ! ವಿನತಾಪುತ್ರನೂ, ಪಕ್ಷಿರಾಜನೂ, ಮಹಾವಿಷ್ಣುವಿನ ಧ್ವಜಲ್ಲಿರುವವನೂ, ಮಹಾಬಲಶಾಲಿಯೂ ಎನಿಸಿದ, ಗರುಡನು ನಿನ್ನಲ್ಲಿದ್ದಾನೆ.

೫೦-೫೧. ಕಶ್ಯಪಪುತ್ರನೂ, ಅಮೃತಸ್ವರೂಪನೂ, ಸರ್ಪವೈರಿಯೂ, ವಿಷ್ಣುವಾಹನನೂ, ಅಪರಿಮಿತಶಕ್ತಿಯುಳ್ಳವನೂ, ಧನುರ್ಧರನೂ, ದೇವವೈರಿಗಳಾದ ರಾಕ್ಷಸಧ್ವಂಸಕನೂ ಆದ ಗರುಡನೇ ! ವಾಯುವೇಗವು ನಿನ್ನಲ್ಲಿ ಸಹಜವಾಗಿ ನೆಲಸಿದೆ. ಆಯುಧ, ಕವಚ, ಶಸ್ತ್ರ, ಇವುಗಳನ್ನು ಧರಿಸಿರುವ ಯೋಧರಾದ

ಗರುತ್ಮಾನ್ ಮಾರುತಗತಿಸ್ತ್ವಯಿ ಸನ್ನಿಹಿತಃ ಸ್ಥಿತಃ ।
ಶಸ್ತ್ರವರ್ಮಾಯುಧಾನ್ಯೋಧಾನ್ರಕ್ಷಾಸ್ಮಾಂಶ್ಚ ರಿಪೂನ್ದಹ ॥ ೫೧ ॥
(ಇತಿ ಧ್ವಜ ಪ್ರಾರ್ಥನಾ ಮಂತ್ರಃ)

ಕುಮುದೈರಾವಣೌ ಪದ್ಮಃ ಪುಷ್ಪದಂತೋಽಥ ವಾಮನಃ ।
ಸುಪ್ರತೀಕೋಂಜನೋ ನೀಲಃ ಏತೇಽಷ್ಟೌ ದೇವಯೋನಯಃ ॥ ೫೨ ॥

ಏತೇಷಾಂ ಪುತ್ರಪೌತ್ರಾಶ್ಚ ಬಲಾನ್ಯಷ್ಟೌ ಸಮಾಶ್ರಿತಾಃ ।
ಭದ್ರೋ ಮಂದ್ರೋ ಮೃಗಶ್ಚೈವ ಗಜಃ ಸಂಕೀರ್ಣ ಏವಚ ॥
ವನೇವನೇ ಪ್ರಸೂತಾಸ್ತೇ ಕರಿಯೋನಿಂ ಮಹಾಗಜಾಃ ॥ ೫೩ ॥

ಪಾಂತು ತ್ವಾಂ ವಸವೋ ರುದ್ರಾ ಆದಿತ್ಯಾಃ ಸಮರುದ್ಗಣಾಃ ।
ಭರ್ತಾರಂ ರಕ್ಷ ನಾಗೇಂದ್ರ ಸಮಯಂ ಪ್ರತಿಪಾಲಯನ್ ॥ ೫೪ ॥

---

ನಮ್ಮನ್ನು ರಕ್ಷಿಸು. ಶತ್ರುಗಳನ್ನು ಸುಟ್ಟುಬಿಡು. ಎಂಬದಾಗಿ ಧ್ವಜವನ್ನು ಪ್ರಾರ್ಥಿಸಬೇಕು. ಇದು ಧ್ವಜ ಪ್ರಾರ್ಥನಾಮಂತ್ರದ ಅರ್ಥ.

೫೨. ಕುಮುದ, ಐರಾವತ, ಪದ್ಮ, ಪುಷ್ಪದಂತ, ವಾಮನ, ಸುಪ್ರತೀಕ, ಅಂಜನ, ನೀಲ, ಎಂಬ ಈ ಎಂಟೂ ದೇವಯೋನಿಗಳಾದ ಗಜಗಳು.

೫೩. ಬಲಶಾಲಿಗಳಾದ ಇವುಗಳ ಮಕ್ಕಳು ಮೊಮ್ಮಕ್ಕಳು ಮುಂತಾದುವು ಭದ್ರ, ಮಂದ್ರ, ಮೃಗ, ಸಂಕೀರ್ಣ, ಎಂಬ ನಾನಾ ಜಾತಿಯವುಗಳಾಗಿ ಪ್ರತಿಯೊಂದು ಅರಣ್ಯದಲ್ಲೂ ಮಹಾಗಜಗಳೆನಿಸಿ ಓಡಾಡುತ್ತಿವೆ.

೫೪-೫೫. ಅಯ್ಯಾ ಗಜೇಂದ್ರನೇ ! ಅಷ್ಟವಸುಗಳು, ಏಕಾದಶರುದ್ರರು, ದ್ವಾದಶಾದಿತ್ಯರು, ಸಪ್ತಮರುತ್ತುಗಳು, ಇವರುಗಳು ನಿನ್ನನ್ನು ರಕ್ಷಿಸಲಿ. ಸಮಯಾನುಸಾರವಾಗಿ ವರ್ತಿಸುತ್ತಾ ಯಜಮಾನನನ್ನು ರಕ್ಷಿಸಿಕೊಂಡು, ಯುದ್ಧದಲ್ಲಿ ಆತನು ಜಯಹೊಂದುವಂತೆ ಮಾಡು. ಇತರ ಪ್ರಯಾಣಕಾರ್ಯದಲ್ಲಿಯೂ ಶುಭ

ಅವಾಪುರ್ಹಿ ಜಯಂ ಯುದ್ಧೇ ಗಮನೇ ಸ್ವಸ್ತಿ ನೋ ವ್ರಜ ।
ಶ್ರೀಸ್ತೇ ಸೋಮಾದ್ಬಲಂ ವಿಷ್ಣೋಸ್ತೇಜಃ ಸೂರ್ಯಾಜ್ಜವೋನಿಲಾತ್ ।
ಸ್ಥೈರ್ಯಂ ಮೇರೋರ್ಜಯಂ ರುದ್ರಾದ್ಯಶೋ ದೇವಾತ್ಪುರಂದರಾತ್

ಯುದ್ಧೇ ರಕ್ಷಂತು ನಾಗಾಸ್ತ್ವಾಂ ದಿಶಶ್ಚ ಸಹ ದೈವತೈಃ ।
ಅಶ್ವಿನೌ ಸಹ ಗಂಧರ್ವೈಃ ಪಾಂತು ತ್ವಾಂ ಸರ್ವತಃ ಸದಾ ॥ ೫೬ ॥

(ಇತಿ ಹಸ್ತಿ ಪ್ರಾರ್ಥನಾ ಮಂತ್ರಃ)

ಹುತಭುಗ್ವಸವೋ ರುದ್ರಾ ವಾಯುಃ ಸೋಮೋ ಮಹರ್ಷಯಃ ।
ನಾಗಕಿನ್ನರಗಂಧರ್ವಯಕ್ಷಭೂತಗಣಾಗ್ರಹಾಃ ॥ ೫೭ ॥

ಪ್ರಮಥಾಶ್ಚ ಸಹಾದಿತ್ಯೈರ್ಭೂತೇಶೋ ಮಾತೃಭಿಃ ಸಹ ।
ಶಕ್ರಸೇನಾಪತಿಃ ಸ್ಕಂದೋ ವರುಣಶ್ಚಾಶ್ರಿತಾಸ್ತ್ವಯಿ ॥ ೫೮ ॥

---

ಕರವಾಗುವಂತೆ ನಡೆದುಕೋ. ಸೋಮನಿಂದ ಸಂಪತ್ತು, ವಿಷ್ಣುವಿನ ಕೃಪೆಯಿಂದ ಶಕ್ತಿ, ಸೂರ್ಯನಿಂದ ತೇಜಸ್ಸು, ವಾಯುವಿನಿಂದ ವೇಗ, ಮೇರುಪರ್ವತದಿಂದ ಸ್ಥೈರ್ಯ, ರುದ್ರನಿಂದ ಜಯ, ಇಂದ್ರನಿಂದ ಯಶಸ್ಸು ಇವೆಲ್ಲಾ ಲಭಿಸಲಿ.

೫೬. ದಿಙ್ನಾಗಗಳು ನಿನ್ನನ್ನು ಯುದ್ಧದಲ್ಲಿ ರಕ್ಷಿಸಲಿ. ದೇವತೆಗಳೊಡಗೂಡಿದ ದಿಕ್ಪಾಲಕರೂ ಗಂಧರ್ವಸಮೇತರಾದ ಅಶ್ವಿನೀದೇವತೆಗಳೂ ನಿನ್ನನ್ನು ಎಲ್ಲಾ ಕಡೆಯಲ್ಲೂ ಸರ್ವದಾ ಕಾಪಾಡಲಿ.

೫೭-೫೮. ಎಲೈ ಪತಾಕೆಯೇ ! ಅಗ್ನಿ, ಅಷ್ಟವಸುಗಳು, ರುದ್ರರು, ವಾಯು, ಸೋಮ, ಮಹರ್ಷಿಗಳು, ನಾಗರು, ಕಿನ್ನರರು, ಗಂಧರ್ವರು, ಯಕ್ಷರು, ಭೂತಗಣಗಳು, ಪ್ರಮಥಗಣಗಳು, ಆದಿತ್ಯಾದಿ ನವಗ್ರಹಗಳು, ಭೂತೇಶ, ದೇವಸೇನಾನಿಯೆನಿಸಿ ಸಪ್ತಮಾತೃಸಮೇತನಾದ ಷಣ್ಮುಖ, ವರುಣ, ಇವರೆಲ್ಲಾ ನಿನ್ನಲ್ಲಿ ನೆಲಸಿ ನಮ್ಮ ಸಮಸ್ತ ಶತ್ರುಗಳನ್ನೂ ದಹಿಸಲಿ. ರಾಜನು ವಿಜಯಿಯಾಗಲಿ.

ಪ್ರದಹಂತು ರಿಪೂನ್ ಸರ್ವಾನ್ ರಾಜಾ ವಿಜಯಮೃಚ್ಛತು ।
ಯಾನಿ ಪ್ರಯುಕ್ತಾನ್ಯರಿಭಿರ್ದೂಷಣಾನಿ ಸಮಂತತಃ ॥ ೫೯ ॥

ಏತಾನಿ ಪರಶಸ್ತ್ರಾಣಾಂ ಹತಾನಿ ತವ ತೇಜಸಾ ।
ಕಾಲನೇಮಿವಧೇ ಯುದ್ಧೇ ಯುದ್ಧೇ ತ್ರಿಪುರಘಾತನೇ ॥ ೬೦ ॥

ಹಿರಣ್ಯಕಶಿಪೋರ್ಯುದ್ಧೇ ಯುದ್ಧೇ ದೇವಾಸುರೇ ತಥಾ ।
ಶೋಭಿತಾಸಿ ತಥೈವಾದ್ಯ ಶೋಭಯಾನಾಸ್ತು ಭೂಪತೇಃ ॥ ೬೧ ॥

ನೀಲಾಂ ಶ್ವೇತಾಮಿಮಾಂ ದೃಷ್ಟ್ವಾ ನಶ್ಯಂತ್ವದ್ಯ ನೃಪಾರಯಃ ।
ವ್ಯಾಧಿಭಿರ್ವಿವಿಧೈರ್ಘೋರೈಃ ಶಸ್ತ್ರೈಶ್ಚ ಯುಧಿ ನಿರ್ಜಿತಾಃ ॥ ೬೨ ॥

ಸದ್ಯಃ ಸ್ವಸ್ಥಾ ಭವಂತಿ ಸ್ಮ ತ್ವದ್ವಾತೇನಾಪಮಾರ್ಜಿತಾಃ । ॥ ೬೩ ॥

---

೫೯. ಒಂದುವೇಳೆ ಶತ್ರುಗಳು ಸರ್ವತ್ರ ದೂಷಣಕರವಾದ ವಿಧಾನವನ್ನು ಅನುಸರಿಸಿದ್ದ ಸಂದರ್ಭದಲ್ಲಿ, ನಿನ್ನ ತೇಜೋಮಹಿಮೆಯಿಂದ ಅವು ಶತ್ರುಪಕ್ಷದವರಿಗೆ ಬಾಧಕವಾಗಿ ಪರಿಣಮಿಸಿ ಅವರೇ ನಿಹತರಾಗಲಿ.

೬೦. ಕಾಲನೇಮಿಯನ್ನು ಧ್ವಂಸಮಾಡಲು ನಡೆಸಿದ ಯುದ್ಧದಲ್ಲಿಯೂ ತ್ರಿಪುರಾಸುರರೊಡನೆ ಮಾಡಿದ ಯುದ್ಧದಲ್ಲಿಯೂ ಈ ಪ್ರಕಾರವಾದ ನಿನ್ನ ಮಹಿಮೆಯು ಶೋಭಿಸಿದೆ.

೬೧. ಹಿರಣ್ಯ ಕಶಿಪುವಿನೊಡನೆ ಮಾಡಿದ ಯುದ್ಧದಲ್ಲಿಯೂ, ದೇವದಾನವರ ಯುದ್ಧದಲ್ಲಿಯೂ, ನೀನು ಯಾವಪ್ರಕಾರ ಬಹುವಾಗಿ ಶೋಭಿಸಿದೆಯೋ ಅದೇ ಪ್ರಕಾರ ಈ ಭೂಪತಿಗೂ ನಿನ್ನಿಂದ ಶೋಭಾಯಮಾನತೆಯುಂಟಾಗಲಿ.

೬೨. ನೀಲವರ್ಣವೂ ಬಿಳಿಯಬಣ್ಣವೂ ಆಗಿರುವ ನಿನ್ನನ್ನು ನೋಡಿ ರಾಜನ ಶತ್ರುಗಳು ನಾನಾವಿಧವಾದ ವ್ಯಾಧಿಗಳಿಂದಲೂ ಯುದ್ಧದಲ್ಲಿ ಭಯಂಕರವಾದ ಶಸ್ತ್ರಗಳಿಂದಲೂ ಈ ದಿನವೇ ನಾಶವಾಗಲಿ.

೬೩. ನಿನ್ನ ಚಲನದ ರಭಸದಿಂದ ಉತ್ಪನ್ನವಾದ ಜಂಝಾವಾತದಿಂದ ಶತ್ರುಗಳು ದೂಡಲ್ಪಟ್ಟು ಪರಾಜಿತರಾಗಿ ಕೂಡಲೆ ಸ್ವಸ್ಥಾನವನ್ನೈದುವರು.

**ಪೂತನಾ ರೇವತೀ ನಾಮ್ನಾ ಕಾಲರಾತ್ರೀತಿ ಯಾ ಸ್ಮೃತಾ ।**
**ದಹಂತ್ವಾಶು ರಿಪೂನ್ ಸರ್ವಾನ್ ಪತಾಕೇ ತ್ವಾಮುಪಾಗತಾಃ ॥ ೬೪ ॥**
**(ಇತಿ ಪತಾಕಾ ಪ್ರಾರ್ಥನಾ ಮಂತ್ರಃ)**

**ಅಸಿಶ್ಚ ರಿಪುಹಾ ಖಡ್ಗಸ್ತೀಕ್ಷ್ಣಕರ್ಮಾ ದುರಾಸದಃ ।**
**ಶ್ರೀಗರ್ಭೋ ವಿಜಯಶ್ಚೈವ ಧರ್ಮಧಾರಸ್ತಥೈವ ಚ ॥ ೬೫ ॥**

**ಇತ್ಯಷ್ಟೌ ತವ ನಾಮಾನಿ ಸ್ವಯಮುಕ್ತಾನಿ ವೇಧಸಾ ।**
**ನಕ್ಷತ್ರಂ ಕೃತ್ತಿಕಾ ತುಭ್ಯಂ ಗುರುರ್ದೇವೋ ಮಹೇಶ್ವರಃ ॥ ೬೬ ॥**

**ಹಿರಣ್ಯಂ ಚ ಶರೀರಂ ತೇ ಧಾತಾ ದೇವೋ ಜನಾರ್ದನಃ ।**
**ಪಿತಾ ಪಿತಾಮಹೋ ದೇವಸ್ತ್ವಂ ಮಾಂ ಪಾಲಯ ಸರ್ವದಾ ॥ ೬೭ ॥**
**(ಇತಿ ಖಡ್ಗ ಪ್ರಾರ್ಥನಾ ಮಂತ್ರಃ)**

---

೬೪. ಎಲೈ ಪತಾಕೆಯೇ ! ಪೂತನಾ, ರೇವತೀ, ಕಾಲರಾತ್ರೀ ಎಂಬ ದೇವತೆಗಳೆಲ್ಲಾ ನಿನ್ನಲ್ಲಿ ಸಾನ್ನಿಧ್ಯಹೊಂದಿ ಜಾಗ್ರತೆಯಲ್ಲಿಯೇ ಸಮಸ್ತ ಶತ್ರುಗಳನ್ನೂ ಸುಟ್ಟುಬಿಡಲಿ" ಎಂದು ಪ್ರಾರ್ಥಿಸಬೇಕು. ಇದು ಪತಾಕಾ ಪ್ರಾರ್ಥನಾ ಮಂತ್ರದ ಅರ್ಥ.

೬೫. ಖಡ್ಗವನ್ನು ಕುರಿತು ಹೇ ಖಡ್ಗಾಯುಧ! ಅಸಿ, ರಿಪುಹಾ, ಖಡ್ಗ, ತೀಕ್ಷ್ಣಕರ್ಮ, ದುರಾಸದ, ಶ್ರೀಗರ್ಭ, ವಿಜಯ, ಧರ್ಮಧಾರ, ಎಂಬ ಈ ಎಂಟೂ ನಿನ್ನ ನಾಮಗಳೆಂದು ಬ್ರಹ್ಮನು ಸಾಕ್ಷಾತ್ತಾಗಿ ಹೇಳಿದಾನೆ.

೬೬-೬೭. ನಿನಗೆ ಕೃತ್ತಿಕಾನಕ್ಷತ್ರವು ಎತ್ತಿದುದು. ಷಡ್ಗುಣೈಶ್ವರ್ಯಸಂಪನ್ನನಾದ ಮಹೇಶ್ವರನೇ ಗುರು. ನಿನ್ನ ಅಂಗಾಗವು ಸ್ವರ್ಣಮಯವಾದುದು. ಸ್ವಾಮಿಯಾದ ಜನಾರ್ದನನೇ ನಿನಗೆ ವಿಧಾಯಕನಾಗಿರುವನು. ಬ್ರಹ್ಮನೇ ನಿನ್ನ ಪಿತೃವೆನಿಸಿರುವನು. ಇಂಥ ನೀನು ನನ್ನನ್ನು ಸರ್ವದಾ ಕಾಪಾಡು'' ಎಂದು ಪ್ರಾರ್ಥಿಸಬೇಕು. ಇದು ಖಡ್ಗಪ್ರಾರ್ಥಾನಾ ಮಂತ್ರದ ಅರ್ಥ.

ಶರ್ಮಪ್ರದಸ್ತ್ವಂ ಸಮರೇ ವರ್ಮ ಸರ್ವಾಯಸೋ ಹ್ಯಸಿ ।
ರಕ್ಷ ಮಾಂ ರಕ್ಷಣೀಯೋಽಹಂ ತವ ವರ್ಮನ್ನಮೋಽಸ್ತುತೇ ॥ ೬೮ ॥
(ಇತಿ ವರ್ಮ ಪಾರ್ಥನಾ ಮಂತ್ರಃ)

ದುಂದುಭೇ ತ್ವಂ ಸಪತ್ನಾನಾಂ ಘೋಷಾದ್ಧೃದಯಕಂಪನ ।
ಭವ ಭೂಮಿಪ ಸೈನ್ಯಾನಾಂ ತಥಾ ವಿಜಯವರ್ಧನಃ ॥ ೬೯ ॥

ಯಥಾ ಜೀಮೂತಘೋಷೇಣ ಹೃಷ್ಯಂತಿ ವರವಾರಣಾಃ ।
ತಥಾಸ್ತು ತವ ಶಬ್ದೇನ ಹರ್ಷೋಽಸ್ಮಾಕಂ ಮುದಾವಹಃ ॥ ೭೦ ॥

ಯಥಾ ಜೀಮೂತಶಬ್ದೇನ ಸ್ತ್ರೀಣಾಂ ತ್ರಾಸೋಽಭಿಜಾಯತೇ ।
ತಥಾ ಚ ತವ ಶಬ್ದೇನ ತ್ರಸ್ಯಂತ್ವಸ್ಮದ್ದ್ವಿಷೋ ರಣೇ ॥ ೭೧ ॥
(ಇತಿ ದುಂದುಭಿ ಪ್ರಾರ್ಥನಾ ಮಂತ್ರಃ)

---

೬೮. ಅನಂತರ ಲೋಹಕವಚವನ್ನು ಕುರಿತು "ಎಲೈ ಕವಚವೇ ! ಯಾವದ್ವಿಶಿಷ್ಟವಾದ ನಿನ್ನ ರಚನೆಯೂ ಕಬ್ಬಿಣದಿಂದಲೇ ಆಗಿದೆ. ನಾನು ನಿನ್ನಿಂದ ರಕ್ಷಣೆಹೊಂದಲು ಅರ್ಹನಾಗಿದ್ದೇನೆ. ನೀನು ಯುದ್ಧಕಾಲದಲ್ಲಿ ನನ್ನನ್ನು ರಕ್ಷಿಸು, ನಿನಗೆ ನಮಸ್ಕಾರ" ಎಂದು ಪ್ರಾರ್ಥಿಸಬೇಕು. ಇದು ಕವಚ ಪ್ರಾರ್ಥನಾ ಮಂತ್ರ.

೬೯. ಅನಂತರ ಭೇರಿಯನ್ನು ಪ್ರಾರ್ಥಿಸತೊಡಗಿ "ಎಲೈ ದುಂದುಭಿಯೇ ! ದಾಯಾದರಂತೆ ಅಸೂಯಾವಿಶಿಷ್ಟರಾದ ಪರರಾಜರ ಸೈನ್ಯಗಳ ಹೃದಯವನ್ನು ನಿನ್ನ ಮಹಾಶಬ್ದದಿಂದ ಕಂಪನಗೊಳಿಸಿಸು. ಮತ್ತು ಈ :ರಾಜನ ಜಯವನ್ನು ಉತ್ತರೋತ್ತರ ಅಭಿವೃದ್ಧಿಪಡಿಸು.

೭೦. ಮೇಘ ಧ್ವನಿಯಿಂದ ಶ್ರೇಷ್ಠವಾದ ಗಜಗಳು ಸಂತೋಷಪಡುವಂತೆ ನಿನ್ನ ಮಹಾಧ್ವನಿಯಿಂದ ನನ್ನ ಮನಸ್ಸು ಸಂತೋಷಭರಿಗಿವಾಗಿದೆ.

೭೧. ಮೇಘಧ್ವನಿಯಿಂದ ಸ್ತ್ರೀಯರು ಹೇಗೆ ದಿಗಿಲುಪಡುವರೋ ಹಾಗೆ ನಿನ್ನ ಧ್ವನಿಯಿಂದ ನಮ್ಮ ಶತ್ರುಗಳನ್ನು ಯುದ್ಧದಲ್ಲಿ ಬಹಳ ತ್ರಾಸಪಡಿಸು" ಎಂದು ಪ್ರಾರ್ಥಿಸಬೇಕು. ಇದು ದುಂದುಭಿ ಪ್ರಾರ್ಥನಾಮಂತ್ರದ ಅರ್ಥ.

**ಸರ್ವಾಯುಧ ಮಹಾಮಾತ್ರ ಸರ್ವದೇವಾರಿಸೂದನ ।**
**ಚಾಪ ಮಾಂ ಸರ್ವದಾ ರಕ್ಷ ಸಾಕಂ ಸಾಯಕಸತ್ತಮೈಃ　　॥ ೭೨ ॥**
**(ಇತಿ ಚಾಪ ಪ್ರಾರ್ಥನಾ ಮಂತ್ರಃ)**

**ಪುಣ್ಯಸ್ತ್ವಂ ಶಂಖ ಪುಷ್ಪಾಣಾಂ ಮಂಗಲಾನಾಂ ಚ ಮಂಗಲಂ ।**
**ವಿಷ್ಣುನಾ ವಿಧೃತೋ ನಿತ್ಯಂ ಮನಃಶಾನ್ತಿಪ್ರದೋ ಭವ　　॥ ೭೩ ॥**
**(ಇತಿ ಶಂಖ ಪ್ರಾರ್ಥನಾ ಮಂತ್ರಃ)**

**ಶಶಾಂಕಕರಸಂಕಾಶ ಹಿಮಡಿಂಡೀರ ಪಾಂಡುರ ।**
**ಪ್ರೋತ್ಸಾರಯಾಶು ದುರಿತಂ ಚಾಮರಾಮರವಲ್ಲಭ　　॥ ೭೪ ॥**
**(ಇತಿ ಚಾಮರ ಪ್ರಾರ್ಥನಾ ಮಂತ್ರಃ)**

---

೭೨. ಅನಂತರ ಧನುಸ್ಸನ್ನು ಕುರಿತು—“ಸಮಸ್ತ ಆಯುಧಗಳಿಗೆ ಮಹಾಮಾತೃಸ್ವರೂಪಿಣಿಯೂ ಸಮಸ್ತರಾಕ್ಷಸರನ್ನು ಧ್ವಂಸಮಾಡತಕ್ಕದ್ದೂ ಆದ ಎಲೈ ಧನುಸ್ಸೇ ! ಶ್ರೇಷ್ಠವಾದ ಬಾಣಗಳಿಂದ ಸಮೇತನಾದ ನನ್ನನ್ನು ಸರ್ವದಾ ರಕ್ಷಿಸು” ಎಂದು ಪ್ರಾರ್ಥಿಸಬೇಕು. ಇದು ಧನುಃ ಪ್ರಾರ್ಥನಾಮಂತ್ರದ ಅರ್ಥ.

೭೩. ಅನಂತರ ಶಂಖವನ್ನು ಕುರಿತು—“ಎಲೈ ಶಂಖವೇ ! ನೀನು ವಸ್ತುಗಳಲ್ಲಿ ಅತಿಪುಣ್ಯಕರವೂ ಶುಭವಸ್ತುಗಳಲ್ಲಿ ಮಂಗಳಕರವೂ ಆಗಿರುವೆ. ವಿಷ್ಣುವು ನಿನ್ನನ್ನು ಸರ್ವದಾ ತನ್ನ ಹಸ್ತದಲ್ಲಿ ಧರಿಸಿದ್ದಾನೆ. ಇಂತಹ ಮಹಿಮೆಯುಳ್ಳ ನೀನು ನನಗೆ ಶಾಂತಿಯನ್ನು ಕರುಣಿಸು” ಎಂದು ಪ್ರಾರ್ಥಿಸಬೇಕು. ಇದು ಶಂಖ ಪ್ರಾರ್ಥನೆಯ ಮಂತ್ರ.

೭೪. ಅನಂತರ ಚಾಮರವನ್ನು ಕುರಿತು—“ಬೆಳದಿಂಗಳಂತೆ ಪ್ರಕಾಶಮಾನವೂ, ಮಂಜುಗೆಡ್ಡೆ, ಸಮುದ್ರದನೊರೆ, ಇವುಗಳಂತೆ ಶುಭ್ರವರ್ಣವೂ ಆದ ಚಾಮರವೇ ! ದೇವತೆಗಳಿಗೆ ಅತಿ ಪ್ರಿಯನಾದ ನೀನು ನಮ್ಮ ಪಾಪವನ್ನು ಜಾಗ್ರತೆ ಪರಿಹರಿಸು” ಎಂದು ಪ್ರಾರ್ಥಿಸಬೇಕು. ಇದು ಚಾಮರ ಪ್ರಾರ್ಥನೆಯ ಮಂತ್ರದ ಅರ್ಥ.

**ಸರ್ವಾಯುಧಾನಾಂ ಪ್ರಥಮಾ ನಿರ್ಮಿತಾಸಿ ಪಿನಾಕಿನಾ ।**
**ಶೂಲಾಯುಧಾದ್ವಿನಿಷ್ಕೃಷ್ಯ ಕೃತ್ವಾ ಮುಷ್ಟಿಪರಿಗ್ರಹಂ ॥ ೭೫ ॥**

**ಚಂಡಿಕಾಯಾಃ ಪ್ರದತ್ತಾಸಿ ಸರ್ವದುಷ್ಟನಿಬರ್ಹಿಣೀ ।**
**ತಥಾ ವಿಸ್ತಾರಿತಾ ಚಾಸಿ ದೇವಾನಾಂ ಪ್ರತಿಪಾದಿತಾ ॥ ೭೬ ॥**

**ಸರ್ವಸತ್ವಾಂಗಭೂತಾಸಿ ಸರ್ವಾಶುಭನಿವಾರಿಣಿ ।**
**ಛುರಿಕೇ ರಕ್ಷ ಮಾಂ ನಿತ್ಯಂ ಶಾಂತಿಂ ಯಚ್ಛ ನಮೋಽಸ್ತುತೇ ॥ ೭೭ ॥**
**(ಇತಿ ಚ್ಛುರಿಕಾ ಪ್ರಾರ್ಥನಾ ಮಂತ್ರಃ)**

**ಪ್ರೋತ್ಸಾರಣಾಯ ದುಷ್ಟಾನಾಂ ಸಾಧುಸಂಗ್ರಹಣಾಯ ಚ ।**
**ಬ್ರಹ್ಮಣಾ ನಿರ್ಮಿತಶ್ಚಾಸಿ ವ್ಯವಹಾರಪ್ರಸಿದ್ಧಯೇ ॥ ೭೮ ॥**

---

೭೫. ಬಳಿಕ ಛುರಿಕಾಯುಧವನ್ನು ಕುರಿತು—“ ಎಲೈ ಸುರಗಿಯೇ ! ಸಮಸ್ತ ಆಯುಧಗಳಲ್ಲಿ ಮೊದಲನೆಯದಾಗಿ ಈಶ್ವರನಿಂದ ನಿರ್ಮಿತವಾಗಿರುವೆ. ಶೂಲಾಯುಧವನ್ನೇ ಪರಿಮಿತಮಾಡಿ ಕೈಯ ಹಿಡಿಯಲ್ಲಿ ಹಿಡಿಯುವಂತೆ ಅಡಕ ಮಾಡಲ್ಪಟ್ಟಂತಿರುವೆ.

೭೬. ಸಮಸ್ತ ದುಷ್ಟರನ್ನು ಧ್ವಂಸಮಾಡತಕ್ಕದ್ದೂ, ಚಾಮುಂಡಾಂಬೆಯ ಅನುಗ್ರಹದಿಂದ ಕೊಡಲ್ಪಟ್ಟಿದೂ ಆಗಿ, ದೇವತೆಗಳಿಂದ ಪ್ರತಿಪಾದಿತವಾಗಿ, ವಿಸ್ತರಿಸಲ್ಪಟ್ಟುದಾಗಿದ್ದೀ.

೭೭. ಮತ್ತು ಸರ್ವಪ್ರಾಣಿಗಳೂ ಶಕ್ತಿಯನ್ನು ತೋರ್ಪಡಿಸುವುದಕ್ಕೆ ಪ್ರಧಾನವಾದ ಅಂಗವೆನ್ನಿಸಿದ್ದೀಯೆ, ಮತ್ತು ಸಮಸ್ತ ಅಶುಭಗಳನ್ನೂ ಹೋಗಲಾಡಿಸಬಲ್ಲೆ. ಇಂತಪ ನೀನು ನಿತ್ಯವೂ ನನ್ನನ್ನು ಅಪಾಯದಿಂದ ರಕ್ಷಿಸಿ ಮನಸ್ಸಿಗೆ ಶಾಂತಿಯನ್ನು ಕೊಡು. ನಿನಗೆ ನಮಸ್ಕಾರ” ಎಂದು ಹೇಳಬೇಕು. ಇದು ಸುರಗಿಯ ಪ್ರಾರ್ಥನೆಯ ಮಂತ್ರದ ಅರ್ಥ.

೭೮. ಬಳಿಕ ಕನಕದಂಡವನ್ನು ಕುರಿತು—“ದುಷ್ಟನಿರ್ಮೂಲನ, ಸಜ್ಜನ ರಕ್ಷಣೆ, ಈ ವ್ಯವಹಾರಸಾಧನವಾಗಿ ಬ್ರಹ್ಮನಿಂದ ನಿರ್ಮಿತವಾದ ಓ, ಹೇಮ ದಂಡವೇ !

**[redacted]ಶೋ ದೇಹಿ ಸುಖಂ ದೇಹಿ ಜಯದೋ ಭವ ಭೂಪತೇಃ ।**
**[redacted]ಡಯಾಶು ರಿಪೂರ್ ಸರ್ವಾನ್ ಹೇಮದಂಡ ನಮೋಽಸ್ತು ತೇ ॥೭೯॥**

**(ಇತಿ ಕನಕದಂಡ ಪ್ರಾರ್ಥನಾ ಮಂತ್ರಃ)**

**ವಿಜಯೋ ಜಯದೋ ಜೇತಾ ರಿಪುಘಾತೀ ಪ್ರಿಯಂಕರಃ ।**
**ದುಃಖಹಾ ಧರ್ಮದಃ ಶಾಂತಃ ಸರ್ವಾರಿಷ್ಟವಿನಾಶನಃ ॥ ೮೦ ॥**

**ಏತೇಷ್ಟೌ ಸನ್ನಿಧೌ ಯಸ್ಮಾತ್ತವ ಸಿಂಹಾ ಮಹಾಬಲಾ ।**
**ತೇನ ಸಿಂಹಾಸನೇತಿ ತ್ವಂ ವಿಪ್ರೈರ್ವೇದೇಷು ಗೀಯಸೇ ॥ ೮೧ ॥**

**ತ್ವಯಿ ಸ್ಥಿತಃ ಶಿವಃ ಸಾಕ್ಷಾತ್ತ್ವಯಿ ಶಕ್ರಃ ಸುರೇಶ್ವರಃ ।**
**ತ್ವಯಿ ಸ್ಥಿತೋ ಹರಿರ್ದೇವಸ್ತ್ವದರ್ಥಂ ತಪ್ಯತೇ ತಪಃ ॥ ೮೨ ॥**

---

೭೯. ನೀನು ಈ ರಾಜನಿಗೆ ಜಯಲಾಭವುಂಟುಮಾಡು. ಯಶಸ್ಸನ್ನೂ ಸುಖವನ್ನೂ ದಯಪಾಲಿಸು. ಶತ್ರುಗಳನ್ನೆಲ್ಲಾ ಜಾಗ್ರತೆ ಧ್ವಂಸಮಾಡು. ನಿನಗೆ ನಮಸ್ಕಾರ" ಎಂದು ಪ್ರಾರ್ಥಿಸಬೇಕು. ಇದು ಕನಕದಂಡವನ್ನು ಪ್ರಾರ್ಥಿಸುವ ಮಂತ್ರದ ಅರ್ಥ.

೮೦. ಅನಂತರ ಸಿಂಹಾಸನವನ್ನು ಪೂಜಿಸತೊಡಗಿ—" ಎಲೈ ಸಿಂಹ ಪೀಠವೇ! ವಿಜಯ, ಜಯದ, ಜೇತಾ, ರಿಪುಘಾತಿ, ಪ್ರಿಯಂಕರ, ದುಃಖಹಾ, ಧರ್ಮದ, ಶಾಂತ, ಸರ್ವರಿಷ್ಟ, ವಿನಾಶನ ಎಂಬ

೮೧. ಈ ಎಂಟೂ ಮಹಾಬಲಶಾಲಿಯಾದ ನಿನ್ನ ಸಿಂಹವ ಸಾನಿಧ್ಯ ದಿಂದ ಪ್ರಾಪ್ತವಾಗುವುವು. ಆದುದರಿಂದ ನಿನಗೆ ಸಿಂಹಾಸನವೆಂದು ಹೆಸರಾ ಯಿತು. ಎಂಬ ವೇದೋಕ್ತಿಯನ್ನು ಬ್ರಾಹ್ಮಣರು ಪಠಿಸುತ್ತಾರೆ.

೮೨. ಪರಮೇಶ್ವರನು ಸಾಕ್ಷಾತ್ತಾಗಿ ನಿನ್ನಲ್ಲಿ ನೆಲಸಿರುವನು. ದೇವಾಧಿಪ ನಾದ ದೇವೇಂದ್ರನೂ, ದೇವದೇವನಾದ ಶ್ರೀ ಮಹಾವಿಷ್ಣುಪರಮಾತ್ಮನೂ, ನಿನ್ನಲ್ಲಿಯೇ ಇರುವರು. ವೀರಾಗ್ರಣಿಗಳು ನಿನ್ನ ಪ್ರಾಪ್ತಿಗಾಗಿ ಮಹಾತಪಸ್ಸು ಗಳನ್ನೇ ಮಾಡುತ್ತಾರೆ.

**ನಮಸ್ತೇ ಸರ್ವತೋಭದ್ರ ಭದ್ರದೋ ಭವ ಭೂಪತೇಃ ।**
**ತ್ರೈಲೋಕ್ಯಜಯಸರ್ವಸ್ವ ಸಿಂಹಾಸನ ನಮೋಽಸ್ತು ತೇ ॥ ೮೩ ॥**
**(ಇತಿ ಸಿಂಹಾಸನ ಪ್ರಾರ್ಥನಾ ಮಂತ್ರಃ)**

**ಲೋಹಾಭಿಹಾರಿಕಂ ಕರ್ಮ ಕೃತ್ವೇದಂ ಮಂತ್ರ ಪೂರ್ವಕಂ ।**
**ಫಲನೈವೇದ್ಯಕುಸುಮೈರ್ಧೂಪದೀಪವಿಲೇಪನೈಃ ॥ ೮೪ ॥**

**ಅಷ್ಟಮ್ಯಾಂ ಧಾವನಂ ಕೃತ್ವಾ ಪೂರ್ವಾಹ್ಣೇ ಸ್ನಾನಮಾಚರೇತ್ ॥ ೮೫ ॥**

**ಅಥ ಗದ್ಯಂ**

**ದುರ್ಗಾಂ ಕಾಂಚನಮೂರ್ತಿಂ ರೌಪ್ಯಾಂ ವಾ ಪೈತ್ತಲೀಂ ವಾರ್ಕ್ಷೀಂ ಚೈತ್ರೀಂ ತಾಮ್ರೀಂ ವಾಧಿಭವತಃ ಕೃತ್ವಾ ದಾರುವಿಚಿತ್ರತೋರಣವಿನ್ಯಸ್ತಾಂ ಶೋಭನೇ ಸ್ಥಾನೇ ಪುರತೋ ವಿನ್ಯಸ್ತದೃಷ್ಟಾಂ ವಿಚಿತ್ರಗೃಹ**

---

೮೩. ಸರ್ವತೋಭದ್ರಸ್ವರೂಪವಾದ ಸಿಂಹಾಸನವೇ ! ನಿನಗೆ ನಮಸ್ಕಾರ. ರಾಜನಿಗೆ ಶುಭಪರಂಪರೆಯನ್ನುಂಟುಮಾಡು, ತ್ರಿಲೋಕಗಳನ್ನು ಜಯಿಸು ಇದಕ್ಕೆ ಮೂಲಾಧಾರಸ್ವರೂಪವಾದ ನಿನಗೆ ನಮಸ್ಕಾರ" ಎಂದು ಹೇಳಬೇಕು. ಇದು ಸಿಂಹಾಸನ ಪ್ರಾರ್ಥನಾ ಮಂತ್ರದ ಅರ್ಥ

೮೪-೮೫. ಈರೀತಿ ಮಂತ್ರಪುರಸ್ಸರವಾಗಿ ಲೋಹಾಭಿಹಾರಿಕಕರ್ಮವನ್ನು ಆಚರಿಸಿ, ಗಂಧಪುಷ್ಪ ಧೂಪಾದಿಗಳಿಂದ ಅರ್ಚಿಸಿ, ಫಲಗಳು ತಾಂಬೂಲ ಇವನ್ನು ಸಮರ್ಪಣೆಮಾಡಬೇಕು. ನವಮಿಯ ಹಿಂದಿನದಿನ ಎಂದರೆ ಅಷ್ಟಮಿಯ ಪೂರ್ವಾಹ್ನದಲ್ಲೇ ಈ ವ್ರತಾಂಗವಾಗಿ ವಿಧ್ಯುಕ್ತರೀತಿ ದಂತಧಾವನಾದಿಗಳನ್ನಾಚರಿಸಿ ಸ್ನಾನಮಾಡಬೇಕು.

(ಗದ್ಯ)—ಚಿನ್ನ, ಬೆಳ್ಳಿ, ಹಿತ್ತಾಳೆ, ತಾಮ್ರ, ವೃಕ್ಷ, ಚಿತ್ರಪ್ರತಿಕೃತಿ ಇವುಗಳಲ್ಲಿ ತನಗೆ ಅನುಕೂಲವಿರುವ ಪದಾರ್ಥದಿಂದ ದುರ್ಗಾಮೂರ್ತಿಯನ್ನು ನಿರ್ಮಿಸಬೇಕು. ಮನೆಯ ಮಧ್ಯಭಾಗದಲ್ಲಿ ವೇದಿಕೆಯನ್ನು ರಚಿಸಿ, ಅದರಲ್ಲಿ ಚಿತ್ರಕೆಲಸ

ಪೂಜ್ಯಗಾಂ ಸ್ನಾತಾಂ ಕುಂಕುಮಚಂದನಗಂಧೈಶ್ಚತುಸ್ಸಮ್ಯೈಶ್ಚೀರಪಟ್ಟೈ ಭೂಷಿತಗಾತ್ರಾಂ ದೇವೀಂ ಕುಸುಮೈರಭ್ಯರ್ಚ್ಯ ತಾಂ ಬಹುಭಿಃ ಪಠ್ಯಮಾಣ ಕೀರ್ತಿಸ್ತ್ರೈದ್ವಿಜನ ನೈರ್ಜನಿತಪರಿತೋಷೈರ್ದಿವಾನ್ವಿತೋ ನರೇಂದ್ರಃ ಸ್ವಯಂ ಪ್ರಯಚ್ಛೇತ್ಪುರೋಹಿತೈಃ ಸಾರ್ಧಂ ಬಿಲ್ವಪತ್ರೇಣಾರ್ಚನೇನ ಮಂತ್ರೇಣಾನೇನ ಭಗವತ್ಯೈ.

(ಇತ ಗದ್ಯಂ ಸಂಪೂರ್ಣಂ)

ಜಯಂತೀ ಮಂಗಲಾ ಕಾಲೀ ಭದ್ರಕಾಲೀ ಕಪಾಲಿನೀ ।
ದುರ್ಗಾ ಶಿವಾ ಕ್ಷಮಾ ಧಾತ್ರೀ ಸ್ವಾಹಾ ಸ್ವಧಾ ನಮೋಽಸ್ತು ತೇ ॥೮೬॥

ಅಮೃತೋದ್ಭವಃ ಶ್ರೀವೃಕ್ಷೋ ಮಹಾದೇವೀಪ್ರಿಯಃ ಸದಾ ।
ಬಿಲ್ವಪತ್ರಂ ಪ್ರಯಚ್ಛಾಮಿ ಪವಿತ್ರಂ ತೇ ಸುರೇಶ್ವರಿ ॥ ೮೭ ॥

---

ಯುಕ್ತವಾಗಿರುವಂತೆ ಮರದ ಮಂಟಪ ತೋರಣ ಇವುಗಳನ್ನು ಸಿದ್ಧಪಡಿಸಬೇಕು. ಅಲ್ಲಿ ಎದುರಿಗೆ ಸರಿಯಾಗಿ ದೃಷ್ಟಿಯಿರುವಂತೆ ಮೂರ್ತಿಯನ್ನು ಅದರಲ್ಲಿರಿಸಿ ಅಭಿಷೇಕಮಾಡಿ, ಕುಂಕುಮ, ಚಂದ್ರ, ಗಂಧ, ಇವುಗಳನ್ನು ಮೂರ್ತಿಯ ದೇಹಕ್ಕೆ ಲೇಪಿಸಿ, ಸುಂದರವಾಗುವಂತೆ ನಾರುವಸ್ತ್ರ, ರೇಶ್ಮೆ ಪೀತಾಂಬರ, ಮುಂತಾದುವುಗಳಿಂದ ಅಲಂಕರಿಸಬೇಕು. ಬಳಿಕ ಮನೋಹರವಾದ ಪುಷ್ಪ ಮಾಕೆಗಳಿಂದ ದೇವಿಯನ್ನು ಅರ್ಚಿಸಬೇಕು. ಆಗ ಬಹುಮಂದಿ ದ್ವಿಜರು ದೇವೀಮಹಾತ್ಮೇಯನ್ನು ಪಾರಾಯಣ ಮಾಡುತ್ತಿರುವಂತೆ ಏರ್ಪಡಿಸಿ, ಅವರೆಲ್ಲರನ್ನೂ ಸತ್ಕಾರಾದಿಗಳಿಂದ ಸಂತೋಷಪಡಿಸಬೇಕು. ಬಳಿಕ ರಾಜನು ಪುರೋಹಿತರನ್ನು ಪುರಸ್ಕರಿಸಿ ಈ ಮುಂದೆ ಹೇಳುವ ಅರ್ಥವುಳ್ಳ ಮಂತ್ರಪೂರ್ವಕವಾಗಿ ಬಿಲ್ವಪತ್ರೆಯನ್ನು ಅರ್ಚನೆಮಾಡಿ, ಶಿವಾನ್ವಿತವಾಗಿ ನ್ಯಾಸಮಾಡಬೇಕು.

೮೬-೮೭. "ಸರ್ವಮಂಗಳೆಯಾದ ಜಯಂತಿಯೇ ! ಕಾಲೀದೇವಿಯೇ ! ಕಪಾಲಧಾರಿಣಿಯೇ! ದುರ್ಗೆಯೇ! ಶಿವೇ ಕ್ಷಮಾಶೀಲೆ ಧಾತ್ರೀದೇವಿಯೇ! ಇಷ್ಟವಾದುದು ಎಲೌ ಸುರೇಶ್ವರಿಯೇ ! ಪವಿತ್ರತಮವಾದ ಆ ಬಿಲ್ವಪತ್ರವನ್ನು ನಿನ್ನ ಪಾದಗಳಲ್ಲಿ ಸಮರ್ಪಿಸುತ್ತೇನೆ. (ಇದು ಮಂತ್ರಾರ್ಥ).

**ದುರ್ಗಾ ಸಂಪೂಜನೀಯಾ ಚ ತದ್ದಿನಾದ್ದ್ರೋಣಪುಷ್ಪಯಾ ।**
**ಸಾ ಚಾಭೀಷ್ಟಾ ಸುರೇಶಾನ್ಯಾಸ್ತಥಾ ರೂಢವ್ರಣಾಯುತಃ ॥ ೮೮ ॥**

**ತತಃ ಖಡ್ಗಂ ನಮಸ್ಕೃತ್ಯ ಶತ್ರೂಣಾಂ ಮಾನಮರ್ದನಂ ।**
**ಇಚ್ಛೇತ್ಸ್ವವಿಜಯಂ ರಾಜ್ಯಂ ಸುಭಿಕ್ಷಂ ಚಾತ್ಮನೋ ನೃಪ ॥ ೮೯ ॥**

**ಪುನಃ ಪುನಃ ಪ್ರಣಮ್ಯಾಥ ಧ್ಯಾಯೇಚ್ಚ ಹೃದಯೇ ಶಿವಾಂ ।**
**ಮಹಿಷಘ್ನೀಂ ಬಹುಭುಜಾಂ ಕುಮಾರೀಂ ಸಿಂಹವಾಹಿನೀಂ ॥ ೯೦ ॥**

**ದಾನವಾಂಸ್ತರ್ಜಯಂತೀಂ ಚ ಖಡ್ಗೋದ್ಧತಕರಾಂ ಶುಭಾಂ ।**
**ಘಂಟಾಕ್ಷಸ್ರಗ್ಧರಾಂ ದುರ್ಗಾಂ ರಣಾರಂಭೇ ವ್ಯವಸ್ಥಿತಾಂ ॥ ೯೧ ॥**

**ತತೋ ಜಯಜಯಾಕಾರೈಃ ಸ್ತವಂ ಕುರ್ಯಾದಿಮಂ ತತಃ ॥ ೯೨ ॥**

---

೮೮. ಆಶ್ವಯುಜಶುಕ್ಲ ಅಷ್ಟಮಿಯ ದಿವಸ ದುರ್ಗೆಯನ್ನು ದ್ರೋಣಪುಷ್ಪ (ತುಂಬೆಹೂ) ಗಳಿಂದ ಪೂಜಿಸಬೇಕು. ಹೀಗೆ ಪೂಜಿಸಿದರೆ ಆ ದುರ್ಗೆಯು ಆ ರೂಢವ್ರಣಯುತನಾಗಿದ್ದ ಸುರೇಶನಾಗಲಿ, ಅನ್ಯರಾಗಲಿ, ಅವರಿಗೆ ಇಷ್ಟಾರ್ಥ ವನ್ನು ಕರುಣಿಸುವಳು.

೮೯. ಅನಂತರ ಶತ್ರುಗಳ ಅಭಿಮಾನವನ್ನಡಗಿಸುವ ಮಹಿಮೆಯುಳ್ಳ ಖಡ್ಗಕ್ಕೆ ರಾಜನು ನಮಸ್ಕಾರಮಾಡಿ, ನನಗೆ ಜಯವಾಗಲಿ, ನನ್ನ ರಾಜ್ಯವು ಸುಭಿಕ್ಷವಾಗಲಿ, ಎಂದು ಪ್ರಾರ್ಥಿಸಬೇಕು.

೯೦. ಬಳಿಕ ಶುಭಕರೆಯೂ ಮಹಿಷಮರ್ದಿನಿಯೂ ಬಹು ಸಂಖ್ಯೆಯ ಭುಜಗಳುಳ್ಳವಳೂ ಕುಮಾರೀಸ್ವರೂಪಿಣಿಯೂ ಸಿಂಹವಾಹನೆಯೂ

೯೧-೯೨. ತನ್ನ ಆರ್ಭಟದಿಂದಲೇ ರಾಕ್ಷಸರನ್ನು ದಿಗಲುಪಡಿಸುವಳೂ, ಪ್ರಹರಿಸುವುದಕ್ಕಾಗಿ ಖಡ್ಗವನ್ನೆತ್ತಿ ಸನ್ನದ್ಧೆಯಾಗಿರುವವಳೂ, ಘಂಟಾಮಾಲಿಕೆ ಜಪಮಾಲಿಕೆ ಇವನ್ನು ಧರಿಸಿರುವವಳೂ, ರಣಾರಂಭದಲ್ಲಿ ವ್ಯವಸ್ಥಿತವಾಗಿರು ವವಳೂ ಆದ ದುರ್ಗಾದೇವಿಯನ್ನು ಹೃದಯದಲ್ಲಿ ಮತ್ತೆ ನಮಸ್ಕರಿಸಿ, ಜಯ ಜಯಶಬ್ದ ಪೂರ್ವಕವಾಗಿ ಈ ಪ್ರಕಾರ ಸ್ತೋತ್ರಮಾಡಬೇಕು.

೯೩. ಶುಭಸ್ವರೂಪಿಣಿಯಾದ ಸರ್ವಮಂಗಳೇ! ಶಿವಜಾಯೆಯೇ! ಸಕಲ ಇಷ್ಟಾರ್ಥವನ್ನೂ ಸಾಧಿಸಿಕೊಡತಕ್ಕವಳೇ ! ಭಕ್ತರಕ್ಷಿಣಿಯೇ ! ಫಾಲನೇತ್ರ

**ಸರ್ವಮಂಗಲಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ ।**
**ಶರಣ್ಯೇ ತ್ರ್ಯಂಬಕೇ ಗೌರಿ ನಾರಾಯಣಿ ನಮೋಽಸ್ತು ತೇ ॥ ೯೩ ॥**

**ಕುಂಕುಮೇನ ಸಮಾಲಭ್ಧೇ ಚಂದನೇನ ವಿಲೇಪಿತೇ ।**
**ಬಿಲ್ವಪತ್ರಕೃತಾಮಾಲೇ ದುರ್ಗೇಽಹಂ ಶರಣಂ ಗತಃ ॥ ೯೪ ॥**

**ಕೃತ್ವೈವಮರ್ಚಾಂ ಕೌರವ್ಯ ಅಷ್ಟಮ್ಯಾಂ ಜಾಗರಂ ನಿಶಿ ।**
**ನಟನರ್ತನಗೀತೈಶ್ಚ ಕಾರಯೇತ್ತು ಮಹೋತ್ಸವಂ ॥ ೯೫ ॥**

**ಏವಂ ಹೃಷ್ಟೈರ್ನಿಶಾಂ ನೀತ್ವಾ ಪ್ರಭಾತೇ ಚಾರುಣೋದಯೇ ।**
**ಪಾತಯೇನ್ಮಹಿಷಾನ್ಮೇಷಾನಗ್ರತೋ ನತಕಂಧರಾನ್ ॥ ೯೬ ॥**

**ಶತಂ ಚಾಪಿ ಶತಾರ್ಧಂ ವಾ ತದರ್ಧಂ ವಾ ಯಥೇಚ್ಛಯಾ ।**
**ಸುರಾಸವಭೃತೈಃ ಕುಂಭೈಸ್ತರ್ಪಯೇತ್ಪರಮೇಶ್ವರೀಂ ॥ ೯೭ ॥**

---

ಯುಕ್ತಳೇ! ತ್ರಿನಯನಶೋಭಾಕರೇ! ಗೌರಿದೇವಿ, ನಾರಾಯಣಿ, ಇತ್ಯಾದಿ ನಾಮಾಂಕಿತೆಯೇ! ನಿನಗೆ ನಮಸ್ಕಾರ."

೯೪. ಕುಂಕುಮ ಕೇಸರಿ ಲೇಪನಮಾಡಿದ ಅಂಗವುಳ್ಳವಳೇ! ಚಂದನ ದಿಗ್ಧಾಂಗಿಯೇ! ಬಿಲ್ವಮಾಲಾಲಂಕೃತೆಯೇ! ದುರ್ಗಾದೇವಿಯೇ! ನಾನು ನಿನ್ನನ್ನು ಶರಣುಹೊಕ್ಕಿದ್ದೇನೆ. ಎಂದು ಹೇಳಬೇಕು.

೯೫. ಎಲೈ ಕುರುವಂಶೋತ್ಪನ್ನನೇ! ಕೇಳು ಆಶ್ವಯುಜ ಶುಕ್ಲಾಷ್ಟಮಿಯ ದಿವಸ ಈ ಪ್ರಕಾರವಾಗಿ ಅರ್ಚನೆಮಾಡಬೇಕಲ್ಲದೆ ಆ ದಿನ ರಾತ್ರಿ ಜಾಗರಣೆಯನ್ನು ಮಾಡಬೇಕು. ಜಾಗರಣೆಗೆ ನೆರವಾಗುವಂತೆ ನಟರ ನರ್ತನ ಸಂಗೀತ ಮುಂತಾದವುಗಳನ್ನು ಏರ್ಪಡಿಸಿ ದೊಡ್ಡ ಉತ್ಸವವನ್ನು ಮಾಡಬೇಕು.

೯೬-೯೭. ಈರೀತಿ ಹರ್ಷದಿಂದ ಆ ರಾತ್ರಿಯೆಲ್ಲಾ ಜಾಗರಣೆಮಾಡಿ, ಉಷಃಕಾಲದಲ್ಲಿ ಅರುಣೋದಯ ಸಮಯಕ್ಕೆ ಕೋಣಗಳು ಕುರಿಗಳು ಇವನ್ನು ತಂದು ದೇವಿಯ ಎದುರಿಗೆ ಅವುಗಳ ಕೊರಳನ್ನು ಬಾಗಿಸಿ ನಿಲ್ಲಿಸಿ, ಬಲಿಕೊಟ್ಟು ಸುರೆಯಿಂದ ಪೂರ್ಣವಾದ ಕುಂಭಗಳು ನೂರು, ಅಷ್ಟಿಲ್ಲದಿದ್ದರೆ ಐವತ್ತು, ಅದೂ ಸಾಗದಿದ್ದರೆ ಇಪ್ಪತ್ತೈದನ್ನಾದರೂ ನಿವೇದಿಸಿ, ಪರಮೇಶ್ವರಿಯನ್ನು ತುಷ್ಟಿ ಪಡಿಸಬೇಕು.

ಕಾಪಾಲಿಕೇಭ್ಯಸ್ತದ್ದೇಯಂ ದಾಸೀದಾಸಜನೈಸ್ತಥಾ ।
ವಿಭಜ್ಯ ಸರ್ವಂ ಕೌಂತೇಯ ಸುಹೃತ್ಸಂಬಂಧಿಬಂಧುಷು ॥ ೯೮ ॥

ತತೋಽಪರಾಹ್ನಸಮಯೇ ನವಮ್ಯಾಂ ಸ್ಯಂದನೇ ಸ್ಥಿತಾಂ ।
ಭವಾನೀಂ ಭ್ರಾಮಯೇದ್ರಾಷ್ಟ್ರೇ ಸ್ವಯಂ ರಾಜಾ ಸಸೈನ್ಯವಾನ್ ॥೯೯॥

ಸಹಸ್ರೈಃ ಪುರುಷೈರ್ವಾಪಿ ರಥಯುಕ್ತೈಃ ಸುಶಿಕ್ಷಿತೈಃ ।
ಶನೈಃಶನೈರಧಿಕಯಾ ದೀಪ್ತ್ಯಾ ಪ್ರಜ್ವಲದೀಪಕೈಃ ॥ ೧೦೦ ॥

ಆಕೃಷ್ಟಖಡ್ಗೈರ್ವೀರೈಶ್ಚ ಧಾತುರಕ್ತೈರ್ಗಜೈಸ್ತಥಾ ।
ನದದ್ಭಿಃ ಶಂಖಪಟಹೈರ್ನೃತ್ಯದ್ಭಿರ್ವಾರಯೌವತೈಃ ॥
ಅಲಂಕೃತಾಭಿರ್ನಾರೀಭಿರ್ಬಾಲಕೈಃ ಸುವಿಭೂಷಿತೈಃ ॥ ೧೦೧ ॥

---

೯೮. ಅಯ್ಯಾ ಕುಂತಿಪುತ್ರನೇ! ಬಳಿಕ ಆ ವಸ್ತುಗಳನ್ನು ಕಾಪಾಲಿಕರಿಗೆ ಕೊಡಬೇಕು. ತನ್ನ ಸಂಬಂಧಿಗಳು ಬಂಧುಗಳು ದಾಸದಾಸೀಜನಗಳು ಇವರಿಗೆ ಪ್ರಸಾದವನ್ನು ವಿನಿಯೋಗಿಸಬೇಕು.

೯೯. ನವಮಿಯದಿವಸ ಅಪರಾಹ್ಣದಲ್ಲಿ ರಾಜನು ಭವಾನೀದೇವಿಯನ್ನು ರಥಾರೋಹಣಮಾಡಿಸಿ ತನ್ನ ಪರಿವಾರದವರೆನಿಸಿ ಸುಶಿಕ್ಷಿತರಾದ ಸಾವಿರಾರು ಮಂದಿ ಸೇನಾಸಮೇತನಾಗಿ ಆ ರಾಷ್ಟ್ರದಲ್ಲೆಲ್ಲಾ ನಿಧಾನವಾಗಿ ಉತ್ಸವಮಾಡಬೇಕು.

೧೦೦. ಆ ಉತ್ಸವದಲ್ಲಿ ಬಹು ಪ್ರಕಾಶಮಾನವಾದ ದೀಪಗಳನ್ನು ಹಿಡಿದಿರಬೇಕು. ವೀರರು ಒರೆಯಿಂದ ಕತ್ತಿಯನ್ನು ಹಿರಿದು ಖಡ್ಗಪಾಣಿಗಳಾಗಿರಬೇಕು. ಆನೆಗಳಿಗೆ ಧಾತುವಸ್ತುಗಳಿಂದ ಕೆಂಪುಬಣ್ಣವನ್ನು ಚಿತ್ರಿಸಬೇಕು.

೧೦೧. ಒಂದುಕಡೆ ಶಂಖ, ಪಟಹ, ಮುಂತಾದವುಗಳ ಧ್ವನಿ, ಒಂದು ಕಡೆ ವಾರಸ್ತ್ರೀಯರ ನರ್ತನ, ನಾನಾಭೂಷಣಗಳಿಂದ ಅಲಂಕರಿಸಿಕೊಂಡ ಸ್ತ್ರೀಯರು ಬಾಲಕರು ಇವರ ಗುಂಪು ಒಂದುಕಡೆ, ಹೀಗೆ ಮೆರವಣಿಗೆಯು ವಿಜೃಂಭಣೆಯಿಂದ ಸಾಗಬೇಕು.

ಭೂತೇಭ್ಯಶ್ಚ ಬಲಿಂ ದದ್ಯಾನ್ಮಂತ್ರೇಣಾನೇನ ಸಾಮಿಷಂ ।
ಸರಕ್ತಂ ಸಜಲಂ ಸ್ನಾನಂ ಗಂಧಪುಷ್ಪಾಕ್ಷತೈರ್ಯುತಂ ॥ ೧೦೨ ॥

ತ್ರೀಂಸ್ತ್ರೀನ್ವಾರಾಂಸ್ತ್ರಿಶೂಲೇನ ದಿಗ್ವಿದಿಕ್ಷು ಕ್ಷಿಪೇದ್ಬಲಿಂ ।
ಬಲಿಂ ಗೃಹ್ಣಂತ್ವಿಮಂ ದೇವಾ ಆದಿತ್ಯಾ ವಸವಸ್ತಥಾ ॥ ೧೦೩ ॥

ಮರುತೋಽಥಾಶ್ವಿನೌ ರುದ್ರಾಃ ಸುಪರ್ಣಾಃ ಪನ್ನಗಾ ಗ್ರಹಾಃ ।
ಅಸುರಾ ಯಾತುಧಾನಾಶ್ಚ ಮಾತರಶ್ಚ ಪಿಶಾಚಕಾಃ ॥ ೧೦೪ ॥

ಶಾಕಿನ್ಯೋ ಯಕ್ಷ ವೇತಾಲಾ ಯೋಗಿನ್ಯಃ ಪೂತನಾಃ ಶಿವಾಃ ।
ಜೃಂಭಕಾಃ ಸಿದ್ಧಗಂಧರ್ವಾ ವ್ಯಾಲಾ ವಿದ್ಯಾಧರಾ ಧರಾಃ ॥ ೧೦೫ ॥

---

೧೦೨. ಅನಂತರ ಈ ಮುಂದೆಹೇಳುವ ಅರ್ಥವುಳ್ಳ ಮಂತ್ರಗಳಿಂದ ಭೂತಗಳಿಗೆ ಬಲಿಸಮರ್ಪಣೆಮಾಡಲು ಉದ್ದೇಶಿಸಿ, ಅವಕ್ಕೆ ಪ್ರೋಕ್ಷಣಸ್ನಾನ, ಗಂಧ, ಪುಷ್ಪ, ಅಕ್ಷತೆ ಇವುಗಳಿಂದ ಪೂಜಿಸಬೇಕು.

೧೦೩. ರಕ್ತ ಸಹಿತವಾದ ಮಾಂಸದ ಬಲಿಯನ್ನು ತ್ರಿಶೂಲದಿಂದ ಮೂರುಸಾರಿ ಬಡಿಸಿ, ಪೂರ್ವ ಮೊದಲಾದ ದಿಕ್ಕುಗಳಲ್ಲಿಯೂ ಆಗ್ನೇಯ ಮುಂತಾದ ವಿದಿಕ್ಕುಗಳಲ್ಲಿಯೂ ವಿಕ್ಷೇಪಣಮಾಡಬೇಕು. ಬಲಿಸಮರ್ಪಣಕಾಲದಲ್ಲಿ ಇಂದ್ರಾದಿ ದೇವತೆಗಳು, ದ್ವಾದಶಾದಿತ್ಯರು, ಏಕಾದಶರುದ್ರರು, ನವಗ್ರಹಗಳು, ಅಷ್ಟವಸುಗಳು.

೧೦೪. ಸಪ್ತಮರುತ್ತುಗಳು, ಅಶ್ವಿನೀದೇವತೆಗಳು, ಗರುಡರು, ನಾಗರು, ಅಸುರರು, ಯಾತುಧಾನರು, ಬ್ರಾಹ್ಮ್ಯಾದಿಸಪ್ತಮಾತೃಗಳು, ಪಿಶಾಚರು.

೧೦೫. ಶಾಕಿನಿಯರು, ಯಕ್ಷರು, ಭೇತಾಳರು, ಯೋಗಿನಿಯರು, ಪೂತನಿಯರು, ಶಿವೆಯರು, ಜೃಂಭಕಾಸ್ತ್ರ ದೇವತೆಗಳು, ಸಿದ್ಧರು, ಗಂಧರ್ವರು, ಉರಗರು, ವಿದ್ಯಾಧರರು, ದಿಕ್ಪಾಲಕರು, ಲೋಕಪಾಲರು, ವಿಘ್ನ ವಿನಾಯಕರು.

ದಿಕ್ಪಾಲಾ ಲೋಕಪಾಲಶ್ಚ ಯೇ ಚ ವಿಘ್ನವಿನಾಯಕಾಃ ।
ಜಗತಾಂ ಶಾನ್ತಿಕರ್ತಾರೋ ಬ್ರಹ್ಮಾದ್ಯಾಶ್ಚ ಮಹರ್ಷಯಃ ॥ ೧೦೬ ॥

ಸವಿಘ್ನಂ ಮಮ ಪಾಪಂ ತೇ ಶಾಮ್ಯಂತು ಪರಿಪಂಥಿನಃ ।
ಸೌಮ್ಯಾ ಭವಂತು ತೃಪ್ತಾಶ್ಚ ಭೂತಾಃ ಪ್ರೇತಾಃ ಸುಖಾವಹಾಃ॥೧೦೭॥

ಇತ್ಯೇವಂ ಭ್ರಾಮಯೇದ್ರಾಷ್ಟ್ರೇ ದುರ್ಗಾಂ ದೇವೀಂ ರಥೇ ಸ್ಥಿತಾಂ ।
ನರಯಾನೇನ ವಾ ಪಾರ್ಥ ತತೋಽವಿಘ್ನಂ ಸಮಾಪಯೇತ್ ॥೧೦೮॥

ಅಥೋತ್ಪನ್ನೇಷು ವಿಘ್ನೇಷು ಭೂತಶಾಂತಿಂ ಸಮಾಚರೇತ್ ।
ಯೇನ ವಿಘ್ನಾ ನ ಜಾಯಂತೇ ಯಾತ್ರಾ ಸಂಪೂರ್ಣತಾಂ ವ್ರಜೇತ್ ॥

ಏವಂ ಯೇ ಕುರ್ವತೇ ಯಾತ್ರಾಂ ರಾಜಾನೋಽನ್ಯೇಽಪಿ ಮಾನವಾಃ ।
ಮಹಾನವಮ್ಯಾಂ ನಂದಾಯಾಂ ಪುತ್ರಕಾ ಹೃಷ್ಟಮಾನಸಾಃ॥ ೧೧೦ ॥

---

೧೦೬. ಲೋಕಶಾಂತಿಕರ್ತಕರಾದ ಬ್ರಹ್ಮಾದಿಮಹರ್ಷಿಗಳು, ಇವರೆಲ್ಲರೂ ನನ್ನ ವಿಘ್ನಗಳನ್ನೂ ಪಾಪಗಳನ್ನೂ ಪರಿಹರಿಸಲಿ.

೧೦೭. ಶತ್ರುಗಳೆಲ್ಲಾ ಶಮನವಾಗಲಿ ಭೂತಪ್ರೇತಾದಿಗಳು ಈ ಬಲಿಯಿಂದ ತೃಪ್ತಿಹೊಂದಿ ಸುಖಪಟ್ಟು ಸೌಮ್ಯಸ್ವಭಾವ ಯುಕ್ತವಾಗಲಿ, ಎಂಬ ಅರ್ಥವುಳ್ಳ ಈ ಮಂತ್ರವನ್ನುಚ್ಚರಿಸುತ್ತಾ ಬಲಿಪ್ರದಾನಮಾಡಬೇಕು.

೧೦೮. ಅಯ್ಯಾ ಕುಂತೀಪುತ್ರನೇ ! ರಥಾರೂಢೆಯಾದ ದುರ್ಗೆಯ ರಥವನ್ನು ಈ ಪ್ರಕಾರ ಆ ಪಟ್ಟಣದ ಎಲ್ಲಾ ಕಡೆಯೂ ಎಳೆಯಬೇಕು. ಸಾಧ್ಯವಾದರೆ ರಾಷ್ಟ್ರದಲ್ಲೆಲ್ಲಾ ಈ ಉತ್ಸವ ನಡೆಸಬೇಕು. ಅಂತು ಉತ್ಸವವನ್ನು ನಿರ್ವಿಘ್ನವಾಗಿ ಮುಗಿಸಬೇಕು.

೧೦೯. ಒಂದುಪಕ್ಷ ವಿಘ್ನವುಂಟಾದರೆ ಆಗ ಶಾಂತಿಕರ್ಮವನ್ನು ನೆರವೇರಿಸಿ ಭೂತಗಳಿಗೆ ತೃಪ್ತಿಯನ್ನುಂಟುಮಾಡಬೇಕು. ಹೀಗೆಮಾಡಿದರೆ ವಿಘ್ನಗಳು ಪರಿಹಾರವಾಗಿ ಮುಂದಕ್ಕೆ ರಥೋತ್ಸವವು ನಿರ್ವಿಘ್ನವಾಗಿ ನೆರವೇರುವುದು.

೧೧೦-೧೧೧. ಅಯ್ಯಾ ರಾಜೇಂದ್ರನೇ ! ರಾಜರಾಗಲಿ, ಇತರ ಮಾನವರಾಗಲಿ, ಮಕ್ಕಳಾಗಲಿ ನಂದೆಯ ತಿಥಿಯಾದ ಮಹಾನವಮಿಯಲ್ಲಿ ರಥಯಾತ್ರೆ

**ತೇ ಸರ್ವೇ ಪಾಪನಿರ್ಮುಕ್ತಾ ಯಾಂತಿ ಭಾಗವತೀಂ ಪುರೀಂ ॥ ೧೧೧ ॥**

**ನ ತೇಷಾಂ ಶಾವಕೋಽನಾಗ್ನಿರ್ನ ಚರಾ ನ ವಿನಾಯಕಾಃ ।**
**ವಿಘ್ನಂ ಕುರ್ವಂತಿ ರಾಜೇಂದ್ರ ಯೇಷಾಂ ತುಷ್ಟಾ ಮಹೇಶ್ವರೀ॥೧೧೨॥**

**ನೀರುಜೋ ಸುಖಿನೋ ಭೋಗಭೋಕ್ತಾರೋ ಭಯವರ್ಜಿತಾಃ ।**
**ಭವಂತಿ ಭಕ್ತಾ ಪುರುಷಾಃ ಭಗವತ್ಯಾಃ ಕಿಮುಚ್ಯತೇ ॥ ೧೧೩ ॥**

**ಇತ್ಯೇಷ ತೇ ಸಮಾಖ್ಯಾತೋ ದುರ್ಗಾದೇವ್ಯಾ ಮಹೋತ್ಸವಃ ।**
**ಪಠತಾಂ ಶೃಣ್ವತಾಂ ಚೈವ ಸರ್ವಾಶುಭವಿನಾಶನಃ ॥ ೧೧೪ ॥**

**ಶೂಲಾಗ್ರಭಿನ್ನಮಹಿಷಾಸುರಪೃಷ್ಠವಿಷ್ಟಾ**
**ಮುಕ್ತಾತಖಡ್ಗರುಚಿರಾಂಗದಬಾಹುದಂಡಾಂ ।**

---

ಯನ್ನು ಮಾಡುವರೋ ಅವರು ತಮ್ಮ ಪರಿಹಾರಹೊಂದಿ ಸಂತುಷ್ಟಾಂತರಂಗರಾಗಿ ಭಗವತಿಯಾದ ದೇವಿಯ ಪುರವನ್ನು ಸೇರುತ್ತಾರೆ.

೧೧೨. ಆ ಪರಮೇಶ್ವರಿಯು ಯಾರಲ್ಲಿ ಸಂತುಷ್ಟಳಾಗುವಳೋ ಅವರಿಗೆ ಅಗ್ನಿಯಾಗಲಿ, ಶಾವಕನಾಗಲಿ, ಚೋರರಾಗಲಿ, ವಿಘ್ನವಿನಾಯಕರಾಗಲಿ, ಯಾವ ವಿಘ್ನವನ್ನುಂಟುಮಾಡುವುದಿಲ್ಲ.

೧೧೩. ಅಂತಹ ದೇವೀಭಕ್ತರಾದ ಪುರುಷರು ರೋಗರಹಿತರೂ ಸುಖಿಗಳೂ ಭೋಗಭಾಜರೂ ನಿರ್ಭೀತರೂ ಆಗಿರುತ್ತಾರೆ.

೧೧೪. ಅಯ್ಯಾ ವಿಭುವೇ ! ಮಹಾನವಮಿಯದಿನ ಆಚರಿಸತಕ್ಕ ದುರ್ಗಾದೇವಿಯ ಮಹೋತ್ಸವದ ವಿಚಾರವನ್ನು ನಿನಗೆ ತಿಳಿಸಿದ್ದಾಯಿತು. ಇದನ್ನು ಶ್ರವಣಮಾಡಿದವರ ಮತ್ತು ಪಠನಮಾಡಿದವರ ಸಮಸ್ತ ಅಶುಭಗಳೂ ಪರಿಹಾರವಾಗುವುವು.

೧೧೫. ತ್ರಿಶೂಲದ ಮೊನೆಯಿಂದ ಮಹಿಷಾಸುರನ ಪೃಷ್ಠಪ್ರದೇಶವನ್ನು ಭೇಧಿಸಿ ಒರೆಯಿಂದ ಹಿರಿದು ಹೊಡೆಯಲು ಎತ್ತಿದ ಖಡ್ಗದ ಪ್ರಕಾಶದಿಂದ ಕಾಂತಿಯುಕ್ತವೂ ಭುಜಕೀರ್ತಿಸಹಿತವೂ ಆದ ದೀರ್ಘಬಾಹುಪ್ರಕ್ಷೇಪವೂ ಮಹಾ

**ಅಭ್ಯರ್ಚ್ಯ ಪಂಚವದನಾನುಗತಾಂ ನವಮ್ಯಾಂ ।**
**ದುರ್ಗಾಂ ಸುದುರ್ಗಗಹನಾನಿ ತರಂತಿ ಮರ್ತ್ಯಾಃ ॥ ೧೧೫ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಮಹಾನವಮೀವ್ರತವರ್ಣನಂ ನಾಮಾಷ್ಟತ್ರಿಂಶದುತ್ತರ ಶತತಮೋಽಧ್ಯಾಯಃ.**



ನವಮಿಯಲ್ಲಿ ಪಂಚಮುಖಗಳಿಂದ ಅನುಗತಳೂ ಆದ ದುರ್ಗಾದೇವಿಯನ್ನು ಮಾನವರು ಪೂಜಿಸಿದರೆ ದುಸ್ಸಹವಾದ ಕಷ್ಟಗಳಿಂದ ಪಾರಾಗುತ್ತಾರೆ.

ಇಲ್ಲಿಗೆ ಶ್ರೀಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ನೂರ ಮೂವತ್ತೆಂಟನೆಯ ಅಧ್ಯಾಯ ಮುಗಿದುದು



॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣ

## ಉತ್ತರಪರ್ವಣಿ

## ಏಕೋನಚತ್ವಾರಿಂಶದುತ್ತರಶತತಮೋಽಧ್ಯಾಯಃ

---

॥ ಶ್ರೀ ಕೃಷ್ಣ ಉವಾಚ ॥

ಪುರಾ ದೇವಾಸುರೇ ಯುದ್ಧೇ ಬ್ರಹ್ಮಾದ್ಯೈರಮರೈರ್ನೃಪ ।
ವಿಜಯಾರ್ಥಂ ಮಹೇಂದ್ರಸ್ಯ ಧ್ವಜಯಷ್ಟಿಃ ಪ್ರತಿಷ್ಠಿತಾ ॥ ೧ ॥

ಮೇರೋರುಪರಿ ಸಂಸ್ಥಾಪ್ಯ ಸಿದ್ಧವಿದ್ಯಾಧರೋರಗೈಃ ।
ಸಾ ದೇವೀ ಹ್ಯರ್ಚಿತಾ ನಿತ್ಯಂ ಭೂಷಣೈರ್ಭೂಷಿತಾ ಸ್ವಕೈಃ ॥ ೨ ॥

---

## ನೂರಮೂವತ್ತಾರನೆಯ ಅಧ್ಯಾಯ

೧. ಶ್ರೀಕೃಷ್ಣನು ಹೇಳುತ್ತಾನೆ—ಅಯ್ಯಾ ಪ್ರಭುವೇ ! ಪೂರ್ವದಲ್ಲಿ ದೇವತೆಗಳಿಗೂ ರಾಕ್ಷಸರಿಗೂ ಯುದ್ಧ ನಡೆದಾಗ ಬ್ರಹ್ಮನೇ ಮೊದಲಾದ ದೇವತೆಗಳು ದೇವೇಂದ್ರನಿಗೆ ಜಯವು ಲಭಿಸುವುದಕ್ಕಾಗಿ ಧ್ವಜಯಷ್ಟಿ (ಸ್ತಂಭ) ಯನ್ನು ಪ್ರತಿಷ್ಠಿಸಿದರು.

೨-೩. ಅದು ಮೇರುಪರ್ವತದ ಮೇಲ್ಭಾಗದಲ್ಲಿ ಸ್ಥಾಪಿತವಾಗಿದ್ದಿತು. ಸಿದ್ಧರು, ವಿದ್ಯಾಧರರು, ಗಂಧರ್ವರು, ನಾಗರು ಇವರುಗಳೆಲ್ಲಾ ಶುಭ್ರವಾದ ಶ್ವೇತಚ್ಛತ್ರಿ, ಘಂಟೆಯಸರ, ಗಿರುಗೆಜ್ಜೆಯ ಕಟ್ಟುಗಳೆಂಬ ಬುದ್ಬುದ ಮುಂತಾದ ಸಹಜವಾದ ಆಭರಣಗಳಿಂದ ಭೂಷಿತೆಯಾದ ದೇವಿಯನ್ನು ಅಲ್ಲಿ ನಿತ್ಯವೂ ಪೂಜಿಸುತ್ತಿದ್ದರು. ಅದನ್ನು ನೋಡಿದ ಮಾತ್ರಕ್ಕೆ ಹಲವರು ದಾನವರು ಭೀತಿಯಿಂದ ನಷ್ಟರಾದರು. ಇನ್ನು ಕೆಲವರು ಯುದ್ಧದಲ್ಲಿ ಮಡಿದರು. ಕೆಲವರು

ಸ್ವಚ್ಛತ್ರಘಂಟಾಪಿಟಕೈಃ ಕಿಂಕಿಣೀಬದ್ಧಬುದ್ಬುದೈಃ ।
ತಾಂ ದೃಷ್ಟ್ವಾ ದಾನವಾ ನಷ್ಟಾ ಭಯಾದೇವ ರಣೇ ಹತಾಃ ॥
ಗತಾ ರಸಾತಲಂ ದೈತ್ಯಾ ದೇವಾಶ್ಚಾಪಿ ದಿವಿ ಸ್ಥಿತಾಃ ॥ ೩ ॥

ತತಃ ಪ್ರಭೃತಿ ತಾಂ ದಿವ್ಯಾಮಿಂದ್ರಯಷ್ಟಿಂ ಯಜಂತಿ ತೇ ।
ದೇವಾಃ ಸರ್ವೇ ಗಣಾಃ ಸರ್ವೇ ಹೃಷ್ಟಾಸ್ತುಷ್ಟಾ ಯುಧಿಷ್ಠಿರ ॥ ೪ ॥

ಅತಃ ಸ್ವರ್ಗಂ ಗತೋ ರಾಜಾ ಭೂರಿಪುಣ್ಯವಶಾದ್ವಸುಃ ।
ಇಂದ್ರಲೋಕೇ ಮಹಾಭಾಗೋ ವಸುದೇವೈಃ ಸುಪೂಜಿತಃ ॥ ೫ ॥

ತಸ್ಮೈ ದತ್ತಾ ಮಹೇಂದ್ರೇಣ ವಸುಯಷ್ಟಿಃ ಪ್ರಗೃಹ್ಯತಾಂ ।
ಪೂಜಯಿತ್ವಾ ಮಹಾಭಾಗ ಸರ್ವದೈತ್ಯಾಪನುತ್ತಯೇ ॥ ೬ ॥

ಅವತಾರ್ಯ ವರ್ಷಾಸಮಯೇ ಸರ್ವೈಃ ಸ್ವೈಃ ಪತಿಭಿಸ್ಸಹ ।
ಮಹ್ಯಾಂ ಸಂಪೂಜಯಾಮಾಸ ಚಕ್ರೇ ಚೇಂದ್ರಮಹಂ ವಸುಃ ॥ ೭ ॥

---

ದೈತ್ಯರು ಪಾತಾಳಕ್ಕೆ ಓಡಿದರು. ಆಗ ದೇವತೆಗಳು ಮತ್ತು ಸ್ವರ್ಗದಲ್ಲಿ ನಿರುಪಾಧಿಕರಾಗಿದ್ದರು.

೪. ಅದು ಮೊದಲುಗೊಂಡು ಆ ದಿವ್ಯವಾದ ಇಂದ್ರಯಷ್ಟಿಯನ್ನು ಅವರೆಲ್ಲರೂ ಪೂಜಿಸುತ್ತಿದ್ದರು. ಅಯ್ಯಾ ಯುಧಿಷ್ಠಿರ ! ಅದರಿಂದ ಎಲ್ಲ ದೇವತೆಗಳೂ ಎಲ್ಲ ಗಣಗಳೂ ಹರ್ಷಗೊಂಡು ಸಂತುಷ್ಟವಾದ ಮನಸುಳ್ಳವರಾದರು.

೫. ಹೀಗಿರುವಲ್ಲಿ ವಸುಮಹಾರಾಜನು ತಾನು ಸಂಪಾದಿಸಿದ ಸಮೃದ್ಧಿಯಾದ ಪುಣ್ಯವಶದಿಂದ ಸ್ವರ್ಗಕ್ಕೆಹೋದನು. ಮಹಾಭಾಗನಾದ ಆ ವಸುವನ್ನು ಇಂದ್ರಲೋಕದಲ್ಲಿ ದೇವತೆಗಳು ಸನ್ಮಾನಮಾಡಿದರು.

೬. ಮಹೇಂದ್ರನು ಆ ರಾಜನಿಗೆ ವಸುಯಷ್ಟಿಯನ್ನು ಬಹುಮಾನಿಸಲು ಅವನು ಅದನ್ನು ತೆಗೆದುಕೊಂಡು ಬಂದು ಸಮಸ್ತ ದೈತ್ಯರ ವಿನಾಶಾರ್ಥವಾಗಿ ಅದನ್ನು ಪೂಜಿಸುತ್ತಿದ್ದನು.

೭. ಆ ವಸುವು ವರ್ಷಾಕಾಲದಲ್ಲಿ ಭೂಮಿಗಿಳಿದು ಬಂದು, ಸಮಸ್ತ ರಾಜರೊಡಗೂಡಿ ಅದನ್ನು ಪೂಜಿಸಿ ಭೂಲೋಕದಲ್ಲಿ ಇಂದ್ರಮಹೋತ್ಸವವನ್ನಾಚರಿಸುತ್ತಿದ್ದನು.

**ಮಹೇನ ಮಘವಾ ಪ್ರೀತೋ ದದೌ ಪುಣ್ಯಂ ವಸೋರ್ವರಂ ॥ ೮ ॥**

**ಯೇಷು ದೇಶೇಷು ಮನುಜಾ ಭಕ್ತಿಭಾವಪುರಸ್ಸರಾಃ ।**
**ಪೂಜಯಿಷ್ಯಂತಿ ವರ್ಷಾಂತೇ ಮಯಾ ದತ್ತಂ ಮಹಾಧ್ವಜಂ ॥ ೯ ॥**

**ತೇಷು ದೇಶೇಷು ಮುದಿತಾಃ ಪ್ರಜಾ ರೋಗವಿವರ್ಜಿತಾಃ ।**
**ಪ್ರಭೂತಾನ್ನಾ ಧರ್ಮಯುಕ್ತಾ ವೃಷಮೇಧಾ ಮಹೋತ್ಸವಾಃ ॥೧೦॥**

**ಭವಿಷ್ಯಂತಿ ಸುವೇಷಾಶ್ಚ ಸುಭಾಷಾಶ್ಚ ಸುಭೂಷಣಾಃ ॥ ೧೧ ॥**

**ಶ್ರುತ್ವೈತದ್ವಚನಂ ರಾಜಾ ವಸುರ್ವಸುಮತಾಂ ವರಃ ।**
**ವಿಶೇಷೇಣ ತತಶ್ಚಕ್ರೇ ವರ್ಷೇವರ್ಷೇ ಮಹೋತ್ಸವಂ ॥ ೧೨ ॥**

---

೮. ಆ ಉತ್ಸವದಿಂದ ಇಂದ್ರನು ಸುಪ್ರೀತನಾಗಿ ವಸುವಿಗೆ ಪುಣ್ಯಕರವಾದ ಈ ವರವನ್ನು ಕೊಟ್ಟನು. "ನಾನು ಕೊಟ್ಟಿರುವ ಈ ಧ್ವಜವನ್ನು ಯಾವ ದೇಶದಲ್ಲಿ ಜನರು ಭಕ್ತಿಭಾವದಿಂದ ಕೂಡಿ ವರ್ಷಕಾಲದ ಅಂತ್ಯದಲ್ಲಿ

೯-೧೦. ಪೂಜಿಸಿ ಉತ್ಸವವನ್ನು ನಡೆಸುವರೋ ಆ ದೇಶದ ಜನಗಳು ರೋಗಾದ್ಯುಪದ್ರವಗಳಿಗೆ ಗುರಿಯಾಗದೆ ಸಂತೋಷಯುಕ್ತರೂ, ಧನಧಾನ್ಯ ಸಮೃದ್ಧಿಯುಳ್ಳವರೂ, ಧರ್ಮಕಾರ್ಯನಿರತರೂ, ಗೋಮೇಧಾದಿ ಯಜ್ಞೋತ್ಸವಗಳನ್ನು ನಡೆಸತಕ್ಕವರೂ ಆಗುವರು.

೧೧. ಅಲ್ಲದೆ ಶ್ಲಾಘ್ಯವಾದ ವೇಷಭಾಷೆಗಳುಳ್ಳವರೂ ಸಮೀಚೀನವಾದ ಭೂಷಣಯುಕ್ತರೂ ಆಗಿ ಶೋಭಿಸುವರು" ಎಂದನು.

೧೨. ವಸುಮಂತರಲ್ಲಿ ಶ್ರೇಷ್ಠರಾಜನಾದ ಆ ವಸುವು ಈ ಮಾತನ್ನು ಕೇಳಿ ಅದು ಮೊದಲುಗೊಂಡು ವರ್ಷವರ್ಷವೂ ವಿಶೇಷ ವೈಭವದಿಂದ ಇಂದ್ರಮಹೋತ್ಸವವನ್ನು ಮಾಡತೊಡಗಿದನು.

ಶ್ರವಣೇ ಸ್ಥಾಪಯೇದ್ಯಷ್ಟಿಂ ಸ್ನಾನವಸ್ತ್ರೈಃ ಸುಪೂಜಿತಾಂ ।
ದೈರ್ಘ್ಯೇಣ ವಿಂಶತಿಕರಾಂ ಸಾರದಾರುಮಯೀಂ ಶುಭಾಂ ॥ ೧೩ ॥

ಇಂದ್ರಸ್ಥಾನೇ ಪುರೋದ್ದಿಷ್ಟೇ ಇಂದ್ರಮಾತೃಕ ಸಂಜ್ಞಕೇ ।
ತಸ್ಮಿನ್ ಯಷ್ಟಿಂ ನೃಪೋ ಭೋಕ್ತಾ ಸ್ವಯಂ ಯತ್ನೇನ ಯೋಜಯೇತ್

ವಸ್ತ್ರೈರ್ವಿಚಿತ್ರೈಃ ಸಂವೀತಾಂ ಪಿಟಿಕಾಲಂಕೃತಾಂ ತಥಾ ।
ಪಿಟಿಕಾನಾಂ ಮಹಾರಾಜ ಕ್ರಮಂ ಚ ಕಥಯಾಮಿ ತೇ ॥ ೧೫ ॥

ಪ್ರಥಮಂ ಲೋಕಪಾಲಾಖ್ಯಂ ಚತುರಸ್ರಂ ಸಕರ್ಣಿಕಂ ।
ಯಮೇಂದ್ರಧನದೈರ್ಯುಕ್ತಂ ವರುಣೇನ ಸಮಂ ತತಃ ॥ ೧೬ ॥

ವೃತ್ತಂ ಖಂಡಾತ್ಮಕಂ ರಮ್ಯಂ ದ್ವಿತೀಯಂ ರಕ್ತಚೂರ್ಣಿತಂ ।
ತೃತೀಯಂ ಶ್ವೇತಕಂ ಚಿತ್ರಮಷ್ಟಾಸ್ರಂ ಪಿಟಕಂ ಶುಭಂ ॥ ೧೭ ॥

---

೧೩-೧೪. ಭೋಕ್ತೃವಾದ ರಾಜನು ಇಪ್ಪತ್ತು ಹಸ್ತ ಉದ್ದವುಳ್ಳದ್ದಾಗಿ ಟೊಳ್ಳು ಹುಳುಕು ಇವುಗಳಿಲ್ಲದೆ ಶ್ರೇಷ್ಠವಾದ ಮರದಿಂದ ನಿರ್ಮಿತವಾದ ಯಷ್ಟಿ (ಸ್ತಂಭವನ್ನು) ಯನ್ನು ಸಿದ್ಧಪಡಿಸಿ ಅದನ್ನು ಶ್ರವಣನಕ್ಷತ್ರದದಿನ ಪೂಜೆಮಾಡಲು ಉದ್ದೇಶಿಸಿ, ಅದಕ್ಕೆ ಸ್ನಾನಮಾಡಿಸಿ ವಸ್ತ್ರವನ್ನು ಹೊದ್ದಿಸಿ ಬಣ್ಣಬಣ್ಣದ ಬಟ್ಟೆಗಳಿಂದ ಪಿಟಿಕೆಗಳೇರ್ಪಡುವಂತೆ ಅಲಂಕರಿಸಿ, ಮುಂಚೆಯೇ ಗೊತ್ತುಮಾಡಿದ ಇಂದ್ರಮಾತೃಕ ಸಂಜ್ಞೆಯುಳ್ಳ ಆ ಇಂದ್ರಸ್ಥಾನದಲ್ಲಿ ಭಕ್ತಿಯಿಂದ ತಾನೇ ಪ್ರಯತ್ನಪಟ್ಟು ಸ್ಥಾಪಿಸಬೇಕು.

೧೫. ಅಯ್ಯಾ ಯುಧಿಷ್ಠಿರ ಮಹಾರಾಜ! ಪಿಟಿಕೆಗಳನ್ನು ಅಲಂಕರಿಸುವ ಕ್ರಮವನ್ನು ಹೇಳುತ್ತೇನೆ.

೧೬. ಯಷ್ಟಿಯ ಬುಡದಲ್ಲಿ ಚತುರಸ್ರಾಕಾರವಾಗಿಯೂ, ಮಧ್ಯೆ ಕರ್ಣಿಕಾಸಹಿತವಾಗಿಯೂ, ಇರುವಂತೆ ಪಿಟಕವನ್ನು ರಚಿಸಿ, ಸುತ್ತ ನಾಲ್ಕು ಕಡೆಯಲ್ಲೂ ಇಂದ್ರ, ಯಮ, ವರುಣ, ಕುಬೇರ ಇವರ ಮೂರ್ತಿಯನ್ನು ರಚಿಸಬೇಕು.

೧೭. ಬಳಿಕ ಎರಡನೆಯ ಭಾಗದ ಪಿಟಕವನ್ನು ರಮ್ಯವಾಗಿರುವಂತೆ ವೃತ್ತಾಕಾರವಾಗಿ ರಚಿಸಿ ಅದಕ್ಕೆ ಕೆಂಪುಬಣ್ಣದ ವಸ್ತ್ರವನ್ನು ಧರಿಸಬೇಕು.

**ಚತುರ್ಥಮಿಂದ್ರಗೋಪಾಲ ವೃತ್ತಂ ಮಾತೃಸಮಾವೃತಂ ।**
**ಪಂಚಮಂ ಚಾಷ್ಟಕೋಣಂ ತು ಶುಕ್ಲಂ ಧಾತುವಿಚಿತ್ರಿತಂ ॥ ೧೮ ॥**

**ಕೃಷ್ಣಕರ್ಣಿಕಯಾ ಷಷ್ಠಂ ವೃತ್ತಂ ಬುದ್ಬುದಶೋಭಿತಂ ।**
**ಸಪ್ತಮಂ ಚಾಷ್ಟಕೋಣಂ ತು ಶುಕ್ಲಂ ವಿದ್ಯಾಧರೈ ರ್ಯುತಂ ॥ ೧೯ ॥**

**ಅಷ್ಟಮಂ ಪಿಟಕಂ ವೃತ್ತಂ ವರತ್ರಾಸೂತ್ರವೇಷ್ಟಿತಂ ।**
**ನವಗ್ರಹಯುತಂ ದೀಪ್ತಂ ನವಮಂ ಚ ಸಚಂಡಿಕಂ ॥ ೨೦ ॥**

**ಬ್ರಹ್ಮವಿಷ್ಣ್ವೀಶಸಹಿತಂ ದಶಮಂ ಶಿವಸಂಸ್ಥಿತಂ ।**
**ಕೃಷ್ಣಮೇಕಾದಶಂ ವೃತ್ತಂ ಯಮಯುಕ್ತಂ ಯುಧಿಷ್ಠಿರ ॥ ೨೧ ॥**

---

ಮೂರನೆಯ ಭಾಗದ ಪಿಟಕವನ್ನು ಅಷ್ಟಕೋಣಾಕೃತಿಯಾಗಿ ಚಿತ್ರಯುಕ್ತವಾಗುವಂತೆ ರಚಿಸಿ, ಅದಕ್ಕೆ ಬಿಳಿಯವಸ್ತ್ರವನ್ನು ಹೊದ್ದಿಸಬೇಕು.

೧೮. ನಾಲ್ಕನೆಯ ಪಿಟಕವನ್ನು ಮತ್ತೆ ದುಂಡಾಗಿ ರಚಿಸಿ ಇಂದ್ರಗೋಪವರ್ಣದ ವಸ್ತ್ರವನ್ನು ಸುತ್ತಿ ಸುತ್ತಲೂ ಸಪ್ತಮಾತೃಕಾಗಣಗಳಿಂದ ಆವೃತವಾದಂತೆ ಮಾಡಬೇಕು. ಐದನೆಯ ಪಿಟಕವನ್ನು ಮತ್ತೆ ಅಷ್ಟಕೋಣಾಕೃತಿಯಾಗಿ ರಚಿಸಿ ಶುಭ್ರವಾದ ಧಾತುವಸ್ತ್ರಗಳು ಚಿತ್ರಿತವಾಗಿರುವಂತೆ ಮಾಡಬೇಕು.

೧೯. ಆರನೆಯ ಪಿಟಕವನ್ನು ಮತ್ತೆ ವೃತ್ತಾಕಾರವೂ ಕರ್ಣಿಕಾ ಸಹಿತವೂ ಆಗಿರುವಂತೆ ರಚಿಸಿ ಕೃಷ್ಣವರ್ಣಯುತವೂ ಬುದ್ಬುದಗಳಿಂದ ಶೋಭಿತವೂ ಆಗುವಂತೆ ಮಾಡಬೇಕು. ಏಳನೆಯ ಪಿಟಕವನ್ನು ಪುನಃ ಅಷ್ಟಕೋಣಾಕೃತಿಯಾಗಿ ರಚಿಸಿ ಶುಕ್ಲವರ್ಣದ ವಸ್ತ್ರವನ್ನು ಹೊದ್ದಿಸಿ ವಿದ್ಯಾಧರರಿಂದ ಆವೃತವಾಗಿರುವಂತೆ ಮಾಡಬೇಕು.

೨೦. ಎಂಟನೆಯ ಪಿಟಕವನ್ನು ಮತ್ತೆ ವೃತ್ತಾಕಾರವಾಗಿ ಮಾಡಿ ಸೂತ್ರವನ್ನು ಸುತ್ತಬೇಕು. ಒಂಬತ್ತನೆಯ ಪಿಟಕವನ್ನು ನವಗ್ರಹಗಳು, ಚಾಮುಂಡಾ ಇವರುಗಳಿಂದ ಯುಕ್ತವಾಗಿರುವಂತೆ ತೇಜೋಮಯವಾಗಿ ಮಾಡಬೇಕು,

೨೧. ಹತ್ತನೆಯ ಪಿಟಕದಲ್ಲಿ ಬ್ರಹ್ಮ ವಿಷ್ಣು ಮಹೇಶ್ವರ ಇವರುಗಳಿಂದ ಯುಕ್ತವಾಗಿರುವಂತೆ ಮಾಡಬೇಕು. ಹನ್ನೊಂದನೆಯ ಪಿಟಕವನ್ನು ವೃತ್ತಾಕಾರವೂ ಕೃಷ್ಣವರ್ಣವೂ ಆಗಿ, ಯಮನಿಂದ ಯುಕ್ತವಾಗಿರುವಂತೆ ರಚಿಸಬೇಕು.

ಛಾತ್ರಂ ದ್ವಾದಶಮಂ ಶುಕ್ಲಂ ಧ್ವಜದೀರ್ಘಂ ತ್ರಯೋದಶಂ ।
ಸಕುಶಂ ಪುಷ್ಪಸ್ರಗ್ದಾಮ ಘಂಟಾಚಾಮರಚರ್ಚಿತಂ ॥ ೨೨ ॥

ಬಂಧಯಿತ್ವಾ ಚಂದ್ರಪಾದೈ ರುಜ್ಜುಭಿಃ ಸ್ಥೂಣಿಕಾಂ ನರೈಃ ।
ಶನೈರುತ್ಥಾಪಯೇತ್ಪಾರ್ಥ ಹುತ್ವಾ ವೈಶ್ವಾನರಂ ದ್ವಿಜಾಃ ॥ ೨೩ ॥

ದಕ್ಷಿಣಾಭಿಶ್ಚ ಸಂಪೂಜ್ಯ ಗುಡಪಾಯಸಪೂಪಕೈಃ ।
ಕುರ್ಯಾನ್ಮಹೋತ್ಸವಂ ರಾಜಾ ದಿನಾನಿ ನವ ಸಪ್ತ ವಾ ॥ ೨೪ ॥

ಪ್ರೇಕ್ಷಣೀಯೈರ್ಮಹಾದಾನೈರ್ನಟಗೀತೈಃ ಕಥಾನಕೈಃ ।
ಚಕ್ರ ದೋಲಾಧರೋತ್ಸರ್ಗೈಃ ಕರ್ಕೇಟ್ಯೈರ್ಮಲ್ಲಯೋಧನೈಃ ॥ ೨೫ ॥

---

೨೨ ಹನ್ನೆರಡನೆಯ ಪಿಟಕವು ಶ್ವೇತಚ್ಛತ್ರಿಯಿಂದ ಸಹಿತವಾಗಿರುವಂತೆಯೂ ಹದಿಮೂರನೆಯ ಪಿಟಕದಲ್ಲಿ ನೀಳವಾದ ಧ್ವಜವನ್ನು ಪವಿತ್ರವಾದ ದರ್ಬೆ, ಪುಷ್ಪಮಾಲೆ ಘಂಟೆ ಚಾಮರ ಇವು ಯುಕ್ತವಾಗಿರುವಂತೆ ಮಾಡಿ ಕಟ್ಟಬೇಕು.

೨೩. ಬಳಿಕ ಅನೇಕ ಜನಗಳು ಸೇರಿ ಆ ಸ್ಥೂಣಿಕೆಯ(ಸ್ತಂಭ) ತುದಿಗೆ ಚಂದ್ರ ಕಿರಣ ಅದೃಶವಾದ ಬಿಳಿಯ ಹಗ್ಗವನ್ನು ಕಟ್ಟಿ ಎಳೆಯುತ್ತಾ ಆ ಸ್ಥೂಣಿಕೆಯನ್ನು ನಿಧಾನವಾಗಿ ಎತ್ತಿ ನಿಲ್ಲಿಸಬೇಕು (ಇದೇ ಕ್ರಮವು ಈಗಲೂ ಧರ್ಮಸ್ಥಳದ ದೇವಾಲಯದಲ್ಲಿ ಆಚರಣೆಯಲ್ಲಿವೆ).

೨೪. ಅನಂತರ ಅಗ್ನಿ ಪ್ರತಿಷ್ಠೆಮಾಡಿ ತತ್ಕರ್ಮಾಂಗವಾದ ಹೋಮಾದಿಗಳನ್ನು ನೆರವೇರಿಸಿ ಬ್ರಾಹ್ಮಣರಿಗೆ ಗುಡ, ಅಪೂಪ ಪಾಯಸ ಇವುಗಳನ್ನೂ ಇತರ ದಾನದಕ್ಷಿಣೆಗಳನ್ನೂ ಕೊಟ್ಟು ಸತ್ಕರಿಸಬೇಕು.

೨೫. ಪ್ರಭುಗಳು ಈ ಧ್ವಜಪೂಜಾಂಗವಾಗಿ ಏಳುದಿನ ಅಥವಾ ಒಂಭತ್ತು ದಿನಗಳವರೆಗೆ ದೊಡ್ಡ ನಟರ ದಾನಗಳು ನೃತ್ಯ ಗೀತಗಳು ಪ್ರೇಕ್ಷಣೀಯವಾದ ಕಥಾಭಿನಯ ತೊಟ್ಟಿಲು ತೂಗುಹಾಕಿದ ಚಕ್ರಚಲನೆ, ಜಟ್ಟಿಕಾಳಗ, ಮುಂತಾದವುಗಳಿಂದ ಮಹೋತ್ಸವವು ರಮ್ಯವಾಗಿರುವಂತೆ ಏರ್ಪಡಿಸಬೇಕು.

ವೇಶ್ಯಾಂಗನಾನರ್ತೈರ್ಹರ್ಷೈರ್ದ್ಯೂತಕ್ರೀಡಾಮಹೋತ್ಸವೈಃ ।
ಕರ್ಪೂರವಸ್ತ್ರದಾನೈಶ್ಚ ಸಂಮಾನೈಶ್ಚ ಪರಸ್ಪರಂ　　|| ೨೬ ||

ರಾತ್ರೌ ಪ್ರಜಾಗರಃ ಕಾರ್ಯೋ ರಕ್ಷಣಾಯ ಪ್ರಯತ್ನತಃ ।
ಕಾಕೋಲೂಕಕಪೋತಾನಾಂ ಯೇನ ಪಾತೋ ನ ವಿದ್ಯತೇ　　|| ೨೭ ||

ಕಾಕಾದ್ಭವತಿ ದುರ್ಭಿಕ್ಷಂ ಕೌಶಿಕಾನ್ಮ್ರಿಯತೇ ನೃಪಃ ।
ಕಪೋತಾಚ್ಚ ಪ್ರಜಾನಾಶಸ್ತತೋ ರಕ್ಷೇತ್ಸದೋದ್ಯತಃ　　|| ೨೮ ||

ಶೈಥಿಲ್ಯಾದ್ಗಿರಿಭಿಚ್ಛಕ್ರಃ ಪ್ರಮಾದಾನ್ನೀಯತೇ ಯದಿ ।
ತಸ್ಮಿನ್ದೇಶೇ ಸಮುತ್ಥಾನಮಿಂದ್ರಕೇತೋರ್ನ ಕಾರಯೇತ್　　|| ೨೯ ||

---

೨೬. ಇವಲ್ಲದೆ ಹರ್ಷಯುಕ್ತವಾಗಿ ವೇಶ್ಯಾಸ್ತ್ರೀಯರೊಡನೆ ಜೂಜು ಪಗಡೆ ಮುಂತಾದ ಆಟವಾಡುವುದು, ಸುಗಂಧದ್ರವ್ಯಗಳು ವಸ್ತ್ರ ಮುಂತಾದವನ್ನು ಕಳುಹಿಸಿ ಸನ್ಮಾನಿಸುವುದು ಮುಂತಾದುವುಗಳನ್ನು ಮಾಡಬಹುದು.

೨೭. ರಾತ್ರಿಯಲ್ಲಿ ಕಾಗೆ, ಗೂಬೆ, ಕಪೋತ ಇವುಗಳು ಅದಕ್ಕೆ ಸೋಕದಂತೆ ಎಚ್ಚರಿಕೆಯಿಂದ ನೋಡಿಕೊಳ್ಳುವುದಕ್ಕಾಗಿ ಪ್ರಯತ್ನದಿಂದ ಜಾಗರಣೆ ಮಾಡಬೇಕು.

೨೮. ಕಾಗೆಯು ಸ್ಪರ್ಶಮಾಡಿದರೆ ಆ ಪ್ರಾಂತಕ್ಕೆ ಕ್ಷಾಮ ಪ್ರಾಪ್ತಿಯಾಗುವುದು. ಗೂಬೆಯು ಸ್ಪರ್ಶಮಾಡಿದರೆ ಪ್ರಭುವಿಗೆ ಹಾನಿತಟ್ಟುವುದು. ಕಪೋತವು ಮುಟ್ಟಿದರೆ ಪ್ರಜೆಗಳಿಗೆ ಹಾನಿತಟ್ಟುವುದು. ಆದ್ದರಿಂದ ಅವುಗಳು ಮುಟ್ಟಿ ತೊಂದರೆಯಾಗದಂತೆ ಸದಾ ಜೋಪಾನವಾಗಿ ನೋಡಿಕೊಳ್ಳಬೇಕು.

೨೯. ಗೋತ್ರಭಿತ್ತಾದ ಆ ಶಕ್ರನ ಧ್ವಜವು ಪ್ರಮಾದವಶದಿಂದ ಭದ್ರವಾಗಿ ನಿಲ್ಲಿಸಲ್ಪಡದೆ ಬಾಡದಲ್ಲಿ ಸಡಿಲವಾಗಿ ಉರುಳಿದರೆ ಇನ್ನುಮುಂದೆ ಆ ದೇಶದಲ್ಲಿ ಇಂದ್ರಧ್ವಜಯಷ್ಟಿಸ್ಥಾಪನವನ್ನು ಮಾಡಬಾರದು.

ಯಾವತ್ತು ನೀಯತೇ ಸ್ಥಾನಾದನ್ಯಸ್ಮಾದ್ಯೆಂದ್ರತೋ ಧ್ವಜಃ ॥ ೩೦ ॥

ಇಂದ್ರಧ್ವಜಸಮುತ್ಥಾನಂ ಪ್ರಮಾದಾನ್ನ ಕೃತಂ ಯದಿ ।
ತತೋ ದ್ವಾದಶಮೇ ವರ್ಷೇ ಕರ್ತವ್ಯಂ ನಾಂತರೇ ಪುನಃ ॥ ೩೧ ॥

ಕಥಂಚಿದ್ಯದಿ ವಿಘ್ನಃ ಸ್ಯಾದ್ವಿಪಾಕಂ ಮೇ ನಿಬೋಧ ವೈ ।
ಛತ್ರಭಂಗೇ ಚ್ಛತ್ರಭಂಗೋ ಧ್ವಜೇ ರಾಷ್ಟ್ರಂ ವಿನಶ್ಯತಿ ॥ ೩೨ ॥

ಮಸ್ತಕೇ ಮಂತ್ರವಿಚ್ಛೇದೋ ಮುಖೇ ಮುಖ್ಯಬಲಕ್ಷಯಃ ।
ಬಾಹುದಂಡೇ ವದೇತ್ಪೀಡಾಂ ಜಠರೇ ಜಾಠರಂ ಭಯಂ ॥ ೩೩ ॥

ವರತ್ರಾಯಾಂ ಮಿತ್ರನಾಶಃ ಸ್ಥೂಣಿಕಾಸು ಪದಾತಯಃ ।
ಕ್ಷಯಂ ಗಚ್ಛಂತಿ ರಾಜೇಂದ್ರ ತಸ್ಮಾದ್ಯತ್ನಾತ್ಪುರಂದರಂ ॥ ೩೪ ॥

---

೩೦. ಇಂದ್ರಧ್ವಜಸ್ತಂಭವನ್ನು ಆ ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸಾಗಿಸಿ ಅದರ ಸಮುತ್ಥಾನಕಾರ್ಯವನ್ನು ಆ ವರ್ಷ ನಡೆಸದೆ ಪ್ರಮಾದವಶದಿಂದ ಬಿಟ್ಟುಬಿಟ್ಟದ್ದೇ ಆದರೆ ಅಲ್ಲಿಂದ ಮುಂದೆ ಹನ್ನೆರಡುವರ್ಷಕಾಲವಾದ ಮೇಲೆ ಮಾಡಬೇಕೇ ವಿನಾ ಮಧ್ಯೆ ಮಾಡಬಾರದು.

೩೧. ಹೇಗೂ ನಿರ್ವಹಿಸಲು ಆಗದ ಮಹಾವಿಘ್ನ ಸಂಭವಿಸಿದರೆ ಅದರ ಪರಿಣಾಮ ಫಲವನ್ನು ಹೇಳುವೆನು. ಆ ಸ್ತಂಭದ ಛತ್ರ ಭಂಗವಾದರೆ ಪ್ರಭುವಿನ ಛತ್ರವು ಭಂಗವಾದಂತೆ, ಅದರ ಧ್ವಜಸ್ಥಾನವು ಮುರಿದರೆ ರಾಜ್ಯಕ್ಕೆ ನಾಶಸಂಭವಿಸುವುದು.

೩೨. ಅದರ ಶಿರಸ್ಸಿನ ಭಾಗವು ಮುರಿದರೆ ರಾಜನ ಮಂತ್ರಾಲೋಚನಾ ರಹಸ್ಯವು ಭಂಗವಾಗಿ ಕಾರ್ಯನಾಶವಾಗುವುದು. ಮುಖಭಾಗವು ಘಾತಿತವಾದರೆ ರಾಜ್ಯದ ಮೂಲಬಲವು ನಶಿಸುವುದು. ಬಾಹುದಂಡ ಮುರಿದರೆ ರಾಷ್ಟ್ರಕ್ಕೆ ಪೀಡಾಕರವು. ಅದರ ಜಠರದ ಭಾಗ ಮುರಿದರೆ ರಾಜರಿಗೆ ಉದರರೋಗ ಪ್ರಾಪ್ತವಾಗುವುದು.

೩೪. ವರತ್ರಾಭಾಗವು ಮುರಿದರೆ ಮಿತ್ರರಿಗೆ ಹಾನಿ. ಸ್ಥೂಣಿಕೆಗಳು ಮುರಿದರೆ ಪದಾತಿ ಸೇನೆಗೆ ಹಾನಿ. ಅಯ್ಯಾ ರಾಜೇಂದ್ರನೆ ! ಈ ಕಾರಣದಿಂದ ಇಂದ್ರಧ್ವಜವನ್ನು ಪ್ರಯತ್ನದಿಂದ ಜೋಪಾನವಾಗಿ ಎತ್ತಿ ನಿಲ್ಲಿಸಬೇಕು.

**ಉತ್ಥಾಪ್ಯ ಪೂಜಯೇದ್ಭಕ್ತ್ಯಾ ದಿವಾರಾತ್ರಮತಂದ್ರಿತಃ ।**
**ಪ್ರಮಾದಾತ್ಪತಿತೇ ಭಗ್ನೇ ಗತೇ ಚೇಂದ್ರಧ್ವಜೇ ದ್ವಿಧಾ ॥ ೩೫ ॥**

**ಸೌವರ್ಣಂ ರೌಪ್ಯಕಂ ಕೃತ್ವಾ ಪೂರ್ಣಮುತ್ಥಾಪಯೇದ್ಧ್ವಜಂ ।**
**ಶಾಂತಿಕಂ ಪೌಷ್ಟಿಕಂ ಕೃತ್ವಾ ದ್ವಿಜೇಭ್ಯೋಽನ್ನಂ ಪ್ರದಾಪಯೇತ್ ॥೩೬॥**

**ತ್ರಪುಸೈಃ ಕರ್ಕಟೀಭಿಶ್ಚ ನಾಲಿಕೇರೈಃ ಕಪಿತ್ಥಕೈಃ ।**
**ಬೀಜಪೂರೈಃ ಸನಾರಂಗೈರ್ಭಕ್ಷ್ಯೈರನ್ನೈರ್ವಿವಿಧೈಸ್ತಥಾ ॥ ೩೭ ॥**

**ನೈವೇದ್ಯಾದಿಭಿರಭ್ಯರ್ಚ್ಯ ಮಂತ್ರೇಣಾನೇನ ತೋಷಯೇತ್ ।**
**ವಜ್ರಹಸ್ತ ಸುರಾರಿಘ್ನ ಬಹುನೇತ್ರ ಪುರಂದರ ॥**
**ಕ್ಷೇಮಾರ್ಥಂ ಸರ್ವಲೋಕಸ್ಯ ಪೂಜೇಯಂ ಪ್ರತಿಗೃಹ್ಯತಾಂ ॥ ೩೮ ॥**

---

೩೫. ಮತ್ತು ಅಹೋರಾತ್ರಿ ಜಾಗರೂಕತೆಯಿಂದ ರಕ್ಷಿಸುತ್ತಾ ಭಕ್ತಿ ಪೂರ್ವಕವಾಗಿ ಪೂಜಿಸಬೇಕು. ಇಂದ್ರಧ್ವಜವನ್ನು ಎತ್ತುವಾಗ ಪ್ರಮಾದವಶ ದಿಂದ ಕೆಳಗೆ ಬಿದ್ದು ಎರಡು ತುಂಡಾಗಬಹುದು.

೩೬. ಆಗ ಚಿನ್ನದಿಂದಲೋ ಬೆಳ್ಳಿಯಿಂದಲೋ ಸ್ತಂಭವನ್ನು ಮಾಡಿಸಿ ಪೂಜಿಸಿ ಪುನಃ ಧ್ವಜಸ್ತಂಭವನ್ನು ಬೇರೆ ನಿರ್ಮಿಸಿ ಎತ್ತಿ ನಿಲ್ಲಿಸಬೇಕು. ತದಂಗ ವಾಗಿ ಶಾಂತಿಕ ಪೌಷ್ಟಿಕ ಹೋಮವನ್ನು ನೆರವೇರಿಸಿ ಬಳಿಕ ಬ್ರಾಹ್ಮಣರಿಗೆ ಅನ್ನ ಸಂತರ್ಪಣೆಮಾಡಬೇಕು.

೩೭. ಈ ಸಂದರ್ಭದಲ್ಲಿ ತ್ರಪುಸ (?) ಕರ್ಕಟಿ (?) ತೆಂಗಿನಕಾಯಿ ಬೇಲದಹಣ್ಣು ಮಾದಲಹಣ್ಣು ಕಿತ್ತಲೆಹಣ್ಣು ಭಕ್ಷ್ಯಗಳು ನಾನಾಬಗೆಯ ಅನ್ನ ಗಳು ಇವುಗಳನ್ನು ನಿವೇದನಮಾಡಿ ಪೂಜಿಸಬೇಕು.

೩೮. ಅನಂತರ ಈ ಅರ್ಥವುಳ್ಳ ಮಂತ್ರಪೂರ್ವಕವಾಗಿ ಪ್ರಾರ್ಥನೆಮಾಡಿ ಪ್ರಸನ್ನಗೊಳಿಸಬೇಕು. "ವಜ್ರಾಯುಧವನ್ನು ಧರಿಸಿದ ಹಸ್ತವುಳ್ಳವನೂ, ದೇವ ಶತ್ರುಗಳಾದ ದೈತ್ಯರನ್ನು ಧ್ವಂಸಮಾಡಿದವನೂ, ಸಹಸ್ರಾಕ್ಷನೂ ಆದ ಪುರಂದರನೇ ! ಈ ಸಮಸ್ತ ಲೋಕಗಳಿಗೂ ಕ್ಷೇಮವನ್ನುಂಟುಮಾಡುವುದಕ್ಕಾಗಿ ಈ ಪೂಜೆಯನ್ನು ಸ್ವೀಕರಿಸು" (ಎಂದು ಪ್ರಾರ್ಥಿಸಬೇಕು.)

ಶ್ರವಣಾದ್ಭರಣೀಂ ಯಾವತ್ಪೂಜಾಂ ಕೃತ್ವಾ ವಿಧಾನತಃ ।
ರಾತ್ರೌ ವಿಸರ್ಜಯೇಚ್ಛಕ್ರಂ ಮಂತ್ರೇಣಾನೇನ ಪಾಂಡವ ॥ ೩೯ ॥

ಸಾರ್ಧಂ ಸುರಾಸುರಗಣೈಃ ಪುರಂದರಶತಕ್ರತೋ ।
ಉಪಹಾರಂ ಗೃಹೀತ್ವೈನಂ ಮಹೇಂದ್ರಧ್ವಜ ಗಮ್ಯತಾಂ ॥ ೪೦ ॥

ಏವಂ ಯಃ ಕುರುತೇ ಯಾತ್ರಾಮಿಂದ್ರಕೇತೋರ್ಯುಧಿಷ್ಠಿರ ।
ಪರ್ಜನ್ಯಃ ಕಾಮವರ್ಷೀ ಸ್ಯಾತ್ತಸ್ಮಿನ್ರಾಷ್ಟ್ರೇ ನ ಸಂಶಯಃ ॥ ೪೧ ॥

ಈತಯೋ ನ ಪ್ರವರ್ತಂತೇ ತಸ್ಮಾನ್ಮೃತ್ಯುಕೃತಂ ಭಯಂ ।
ವಿಜಿತ್ಯ ಶತ್ರೂನ್ಸಮರೇ ವಶೇ ಕೃತ್ವಾ ಮಹೀತಲಂ ॥
ಭುಕ್ತ್ವಾ ರಾಜ್ಯಂ ಚಿರಂ ಕಾಲಮಿಂದ್ರಲೋಕೇ ಮಹಿಯತೇ ॥ ೪೨ ॥

---

೩೯. ಎಲೈ ಪಾಂಡುಪುತ್ರನೇ ! ಶ್ರವಣನಕ್ಷತ್ರದಿಂದ ಆರಂಭಿಸಿ ಭರಣೀ ನಕ್ಷತ್ರದವರೆಗೆ ವಿಧಿಪ್ರಕಾರ ಶಕ್ರಪೂಜೆಯನ್ನು ನೆರವೇರಿಸಿ ಆ ರಾತ್ರಿ ಈ ಮಂತ್ರಪೂರ್ವಕವಾಗಿ ಶಕ್ರಧ್ವಜವನ್ನು ವಿಸರ್ಜನೆಮಾಡಬೇಕು.

೪೦. ಹಾಗೆ ವಿಸರ್ಜಿಸುವಾಗ "ಸುರರ ಮತ್ತು ಅಸುರರ ಗಣಸಮೇತನೂ ನೂರು ಅಶ್ವಮೇಧಗಳನ್ನು ಮಾಡಿದವನೂ ಆದ ಪುರಂದರನೇ ! ಮತ್ತು ಮಹೇಂದ್ರಧ್ವಜವೇ ! ನಾನು ಸಮರ್ಪಿಸಿದ ಈ ಉಪಹಾರವನ್ನು ಸ್ವೀಕರಿಸಿ ಯಥಾಸ್ಥಾನವನ್ನು ಸೇರು" ಎಂಬ ಅರ್ಥವುಳ್ಳ ಈ ಮಂತ್ರವನ್ನು ಹೇಳಬೇಕು.

೪೧. ಅಯ್ಯಾ ಯುಧಿಷ್ಠಿರ! ಯಾವ ರಾಜನು ಈ ಪ್ರಕಾರ ಇಂದ್ರಧ್ವಜ ಪೂಜಾಮಹೋತ್ಸವವನ್ನು ಮಾಡಿಸುತ್ತಾನೆಯೋ ಅವನ ರಾಜ್ಯದಲ್ಲಿ ಮಳೆಗಳು ಸಕಾಲದಲ್ಲಿ ಸಮೃದ್ಧಿಯಾಗಿ ಆಗುವುವು. ಇದಕ್ಕೆ ಸಂಶಯವಿಲ್ಲ. ಅಲ್ಲದೆ ಮೂಷಿಕಶಲಭ, ಶುಕ ಮೊದಲಾದ ಈತಿಬಾಧೆಗಳಾಗಲಿ. ಮೃತ್ಯುಕಾರಕವಾದ ರೋಗಾದ್ಯುಪದ್ರವಗಳಾಗಲಿ ಸಂಭವಿಸುವುದಿಲ್ಲ.

೪೨. ಅಲ್ಲದೆ ಆ ರಾಜನು ಯುದ್ಧದಲ್ಲಿ ಶತ್ರುಗಳನ್ನು ಜಯಿಸಿ ಅವರ ರಾಜ್ಯವನ್ನು ವಶಪಡಿಸಿಕೊಂಡು ಬಹುಕಾಲ ಅದನ್ನು ಅನುಭವಿಸಿ, ಬಳಿಕ ಇಂದ್ರಲೋಕಕ್ಕೆ ಹೋಗಿ ಅಲ್ಲಿ ಪೂಜಿತನಾಗುತ್ತಾನೆ.

ರಾಷ್ಟ್ರೇ ಪುರೇ ಚ ನಗರೇ ಸುರರಾಜಕೇತೋ-
ರ್ಯಾತ್ರೋತ್ಸವೋ ನೃಪಜನೈಃ ಕ್ರಿಯತೇ ಸಮೇತ್ಯ ।
ದುಷ್ಟೋಪಸರ್ಗಜನಿತಂ ಪರಚಕ್ರಜಂ ವಾ
ತಸ್ಮಿನ್ಭಯಂ ಭವತಿ ಪಾರ್ಥ ನ ಕಿಂಚಿದೇವ　　॥ ೪೩ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಶ್ರಿ ಕೃಷ್ಣಯುಧಿಷ್ಠಿರ
ಸಂವಾದೇ ಮಹೇಂದ್ರಧ್ವಜ ಮಹೋತ್ಸವ ವರ್ಣನಂ
ನಾಮೈಕೋನಚತ್ವಾರಿಂದುತ್ತರ
ಶತತಮೋಽಧ್ಯಾಯಃ.



---

೪೩. ಯಾವ ರಾಜನು ತನ್ನ ರಾಜ್ಯದ ಪ್ರಧಾನ ನಗರದಲ್ಲಿ ಇಂದ್ರಧ್ವಜಪೂಜಾಮಹೋತ್ಸವವನ್ನು ಮಾಡಿಸುವನೋ ಅವನ ರಾಷ್ಟ್ರದಲ್ಲಿ ದುಷ್ಟವಾದ ಪೀಡಾಭಯವಾಗಲಿ ಪರರಾಜಕರ್ತೃಕವಾದ ತೊಂದರೆಯಾಗಲಿ ಸ್ವಲ್ಪವೂ ಸಂಭವಿಸುವುದಿಲ್ಲ.

ಇಲ್ಲಿಗೆ ಶ್ರೀಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಮಹೇಂದ್ರ
ಧ್ವಜಮಹೋತ್ಸವ ವರ್ಣನೆಯೆಂಬ ನೂರಮೂವ
ತೊಂಭತ್ತನೆಯ ಅಧ್ಯಾಯ ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣ
## ಉತ್ತರಪರ್ವಣಿ
## ಚತ್ವಾರಿಂಶದುತ್ತರಶತತಮೋಽಧ್ಯಾಯಃ

॥ ಶ್ರೀಕೃಷ್ಣ ಉವಾಚ ॥

ಪುರಾ ವಾಮನರೂಪೇಣ ಯಾಚಯಿತ್ವಾ ಧರಾಮಿಮಾಂ ।
ಬಲಿಯಜ್ಞೇ ಹರಿಸ್ಸರ್ವಂ ಕ್ರಾಂತವಾನ್ವಿಕ್ರಮೈಸ್ತ್ರಿಭಿಃ ॥ ೧ ॥

ಇಂದ್ರಾಯ ದತ್ತವಾನ್ರಾಜ್ಯಂ ಬಲಿಂ ಪಾತಾಲವಾಸಿನಂ ।
ಕೃತ್ವಾ ದೈತ್ಯಪತೇರ್ವಾಸಮಹೋರಾತ್ರಂ ಪುನರ್ನೃಪ ॥ ೨ ॥

---

## ನೂರನಲವತ್ತನೆಯ ಅಧ್ಯಾಯ

೧. ಶ್ರೀಕೃಷ್ಣನು ಹೇಳುತ್ತಾನೆ—ಬಹು ಹಿಂದಿನಕಾಲದಲ್ಲಿ ಯಜ್ಞದೀಕ್ಷಿತನಾಗಿದ್ದ ಬಲಿಚಕ್ರವರ್ತಿಯ ಸಮೀಪಕ್ಕೆ ಶ್ರೀಮಹಾವಿಷ್ಣುವು ವಾಮನ ರೂಪದಿಂದ ಬಂದು ಮೂರುಹೆಜ್ಜೆ ಭೂಮಿಯನ್ನು ಯಾಚನೆಮಾಡಿದನು. ಬಲಿಯು ಅದನ್ನು ಧಾರೆಯೆರೆದು ಕೊಡುತ್ತಲೆ ಮೂರುಹೆಜ್ಜೆಗಳಲ್ಲಿ ಈ ಸಮಸ್ತ ಲೋಕಗಳನ್ನೂ ಆಕ್ರಮಿಸಿಕೊಂಡನು.

೨. ಅಯ್ಯಾ ರಾಜನೇ! ಹೀಗೆ ತಾನು ಆಕ್ರಮಿಸಿದ ರಾಜ್ಯವನ್ನು ಇಂದ್ರನಿಗೆಕೊಟ್ಟು ದೈತ್ಯರಾಜನಾದ ಬಲಿಚಕ್ರವರ್ತಿಯನ್ನು ಹಗಲು ರಾತ್ರಿ ಸರ್ವದಾ ಪಾತಾಳಲೋಕದಲ್ಲಿ ವಾಸವಾಗಿರಬೇಕೆಂದು ಏರ್ಪಡಿಸಿದನು.

**ಏಕಮೇವ ಹಿ ಭೋಗಾರ್ಥಂ ಬಲಿರಾಜ್ಯೇತಿಚಿಹ್ನಿತಂ ।**
**ಸರಹಸ್ಯಂ ತದೇತತ್ತೇ ಕಥಯಾಮಿ ನರೋತ್ತಮ ॥ ೩ ॥**

**ಕಾರ್ತಿಕೇ ಕೃಷ್ಣಪಕ್ಷಸ್ಯ ಪಂಚದಶ್ಯಾಂ ನಿಶಾಗಮೇ ।**
**ಯಥೇಷ್ಟಚೇಷ್ಟಾ ದೈತ್ಯಾನಾಂ ರಾಜ್ಯಂ ತೇಷಾಂ ಮಹಿತಲೇ ॥ ೪ ॥**

**॥ ಯುಧಿಷ್ಠಿರ ಉವಾಚ ॥**

**ನಿಶ್ಯೇಷೇಣ ಹೃಷಿಕೇಶ ಕೌಮುದೀಂ ಬ್ರೂಹಿ ಮೇ ಪ್ರಭೋ ।**
**ಕಿಮರ್ಥಂ ದೀಯತೇ ದಾನಂ ತಸ್ಯಾಂ ಕಾ ದೇವತಾ ಭವೇತ್ ॥ ೫ ॥**

**ಕಿಂಸ್ವಿತ್ತಸ್ಯೈ ಭವೇದ್ಧೇಯಂ ಕೇಭ್ಯೋ ದೇಯಂ ಜನಾರ್ದನ ।**
**ಪ್ರಹರ್ಷಃ ಕೋಽತ್ರ ನಿರ್ದಿಷ್ಟಃ ಕ್ರೀಡಾ ಕಾತ್ರ ಪ್ರಕೀರ್ತಿತಾ ॥ ೬ ॥**

---

೩. ಅಯ್ಯಾ ಮಾನವಶ್ರೇಷ್ಠನೇ ! ಮಾನವರ ಭೋಗಸಾಧನೆಗಾಗಿ ಆಚರಿಸಬೇಕಾದ ಬಲಿರಾಜ್ಯವೆಂಬ ಅಂಕಿತವುಳ್ಳ ಬಹು ಗೋಪ್ಯವಾದ ಒಂದು ವ್ರತವಿದೆ. ಭೋಗಪ್ರದವಾದ ಅದನ್ನು ನಿನಗೆ ಹೇಳುತ್ತೇನೆ.

೪. ಕಾರ್ತಿಕ ಕೃಷ್ಣಪಕ್ಷದ ಹದಿನೈದನೆಯ ತಿಥಿ (ಅಮಾವಾಸ್ಯೆ) ಯ ರಾತ್ರಿಯಲ್ಲಿ ಭೂಲೋಕವೆಲ್ಲಾ ಬಲಿಚಕ್ರವರ್ತಿ ಮತ್ತು ಅವನ ಕಡೆಯ ದೈತ್ಯರ ರಾಜ್ಯವೆನಿಸಿ ಆಗ ಅವರು ಇಲ್ಲಿ ಸ್ವೇಚ್ಛೆಯಾಗಿ ಸಂಚರಿಸುತ್ತಾ ತಮ್ಮ ಲೀಲಾ ವ್ಯಾಪಾರ ನಡೆಯಿಸುತ್ತಾರೆ ಎಂದನು.

೫. ಯುಧಿಷ್ಠಿರನು ಕೇಳುತ್ತಾನೆ—ಅಯ್ಯಾ ಹೃಷೀಕೇಶನೇ ! ನನಗೆ ಕೌಮುದೀ ಜಾಗರಮಹೋತ್ಸವವನ್ನು ಸಮಗ್ರವಾಗಿ ವಿವರಿಸು. ಆ ಮಹೋತ್ಸವದಲ್ಲಿ ಯಾವ ದೇವತೆಯನ್ನು ಆರಾಧಿಸಬೇಕು. ಆಗ ದಾನಮಾಡುವುದು ಏತಕ್ಕೆ ?

೬. ಆ ದೇವತಾಪ್ರೀತ್ಯರ್ಥವಾಗಿ ಏನನ್ನು ದಾನಮಾಡಬೇಕು ? ಆ ದಾನವನ್ನು ಯಾರಿಗೆ ಕೊಡಬೇಕು ? ಆ ಕೌಮುದೀ ಮಹೋತ್ಸವದಲ್ಲಿ ಯಾವ ಪ್ರಕಾರವಾಗಿ ಹರ್ಷಪಡಬಹುದೆಂದು ವಿಧಾಯಕವಿದೆ ? ಯಾವ ಆಟವಾಡಬೇಕೆಂದು ಹೇಳಿದೆ ? ಎಂದು ಕೇಳಿದನು.

॥ ಶ್ರೀಕೃಷ್ಣ ಉವಾಚ ॥
ಕಾರ್ತಿಕೇ ಕೃಷ್ಣಪಕ್ಷೇ ಚ ಚತುರ್ದಶ್ಯಾಂ ದಿನೋದಯೇ ।
ಅವಶ್ಯಮೇವ ಕರ್ತವ್ಯಂ ಸ್ನಾನಂ ನರಕಭೀರುಭಿಃ ॥ ೭ ॥

ಅಪಾಮಾರ್ಗಪಲ್ಲವಾನ್ಸ್ವಾ ಭ್ರಾಮಯೇನ್ಮಸ್ತಕೋಪರಿ ।
ಸೀತಾಲೋಷ್ಟಸಮಾಯುಕ್ತಸಕಂಟಕದಲಾನಿತ್ವಾನ್ ॥ ೮ ॥

ಹರ ಪಾಪಮಪಾಮಾರ್ಗ ಭ್ರಾಮ್ಯಮಾಣಂ ಪುನಃ ಪುನಃ ।
ಆಪದಂ ಕಿಲ್ಬಿಷಂ ಚಾಪಿ ಮಮಾಪಹರ ಸರ್ವಶಃ ॥
ಅಪಾಮಾರ್ಗ ನಮಸ್ತೇಽಸ್ತು ಶರೀರಂ ಮಮ ಶೋಧಯ ॥ ೯ ॥
(ಇತ್ಯಪಾಮಾರ್ಗಭ್ರಮಣಮಂತ್ರಃ)

ತತಶ್ಚ ತರ್ಪಣಂ ಕಾರ್ಯಂ ಧರ್ಮರಾಜಸ್ಯ ನಾಮಭಿಃ ।
ಯಮಾಯ ಧರ್ಮರಾಜಾಯ ಮೃತ್ಯವೇಚಾಂತಕಾಯ ಚ ॥
ವೈವಸ್ವತಾಯ ಕಾಲಾಯ ಸರ್ವಭೂತಕ್ಷಯಾಯ ಚ ॥ ೧೦ ॥

---

೭. ಶ್ರೀಕೃಷ್ಣನು ಹೇಳುತ್ತಾನೆ—ನರಕಭಯಗ್ರಸ್ತರಾದ ಜನರು ಕಾರ್ತಿಕ ಬಹುಳ ಚತುರ್ದಶಿಯದಿನ ಪ್ರಾತಃಕಾಲ ಅವಶ್ಯವಾಗಿ ವಿಧಿಪ್ರಕಾರ ಸ್ನಾನ ಕರ್ಮವನ್ನು ಆಚರಿಸಬೇಕು.

೮. ಹಾಗೆ ಸ್ನಾನಮಾಡುವಾಗ ಮುಳ್ಳು, ಎಲೆ, ಇವು ಸಮೇತವಾದ ಸೀತಾಲೋಷ್ಟವನ್ನಾಗಲಿ, ಉತ್ತರಣೆ (ಅಪಾಮಾರ್ಗ) ಚಿಗುರನ್ನಾಗಲಿ ತಲೆಯ ಮೇಲ್ಗಡೆ ಆಡಿಸಬೇಕು.

೯. ಹಾಗೆ ಆಡಿಸುವಾಗ "ಎಲೈ ಅಪಾಮಾರ್ಗವೇ ! ನೀನು ನನ್ನ ತಲೆಯ ಮೇಲೆ ಆಗಾಗ್ಗೆ ಸುತ್ತುತ್ತಾ ಅಲ್ಲಲ್ಲಿ ನನಗೆ ಒದಗಬಹುದಾದ ಆಪತ್ತುಗಳನ್ನೂ, ಮತ್ತು ನನ್ನಲ್ಲಿ ಸಂಘಟಿತವಾಗಿರುವ ಪಾಪಗಳನ್ನೂ ಪರಿಹರಿಸು. ನನ್ನ ಶರೀರ ವನ್ನು ಶೋಧಿಸಿ ಪರಿಶುದ್ಧಿ ಮಾಡು. ನಿನಗೆ ನಮಸ್ಕರಿಸುವೆನು" ಎಂಬ ಅರ್ಥವುಳ್ಳ ಮಂತ್ರವನ್ನು ಹೇಳಬೇಕು. (ಇದು ಅಪಮಾರ್ಗಭ್ರಮಣಮಂತ್ರ).

೧೦. ಆನಂತರ ಯಮಧರ್ಮರಾಯನಿಗೆ ಈ ಮುಂದಿನ ನಾಮೋಚ್ಚಾರಣ ಪೂರ್ವಕವಾಗಿ ಯಮಾಯನಮಃ, ಧರ್ಮರಾಜಾಯನಮಃ, ಮೃತ್ಯವೇನಮಃ, ಅಂತಕಾಯನಮಃ, ವೈವಸ್ವತಾಯನಮಃ, ಕಾಲಾಯನಮಃ, ಸರ್ವಭೂತ

**ನರಕಾಯ ಪ್ರದಾತವ್ಯೋ ದೀಪಃ ಸಂಪೂಜ್ಯ ದೇವತಾಃ ।**
**ತತಃ ಪ್ರದೋಷಸಮಯೇ ದೀಪಾನ್ದದ್ಯಾನ್ಮನೋರಮಾನ್ ॥ ೧೧ ॥**

**ಬ್ರಹ್ಮವಿಷ್ಣುಶಿವಾದೀನಾಂ ಭವನೇಷು ಮಠೇಷು ಚ ।**
**ಕೂಟಾಗಾರೇಷು ಚೈತ್ಯೇಷು ಸಭಾಸು ಚ ನದೀಷು ಚ ॥ ೧೨ ॥**

**ಪ್ರಾಕಾರೋದ್ಯಾನವಾಪೀಷು ಪ್ರತೋಲೀನಿಷ್ಕುಟೇಷು ಚ ।**
**ಸಿದ್ಧಾರ್ಹಬುದ್ಧಚಾಮುಂಡಾಭೈರವಾಯತನೇಷು ಚ ॥**
**ಮಂದುರಾಸು ವಿವಿಕ್ತಾಸು ಹಸ್ತಿಶಾಲಾಸು ಚೈವ ಹಿ ॥ ೧೩ ॥**

**ಏವಂ ಪ್ರಭಾತಸಮಯೇಽಮಾವಾಸ್ಯಾಯಾಂ ನರಾಧಿಪ ।**
**ಸ್ನಾತ್ವಾ ದೇವಾನ್ಪಿತೄನ್ಭಕ್ತ್ಯಾ ಸಂಪೂಜ್ಯಾಥ ಪ್ರಣಮ್ಯ ಚ ॥ ೧೪ ॥**

---

ಕ್ಷಯಾಯನಮಃ ಎಂದು ಪ್ರತಿನಾಮದ ಕೊನೆಯಲ್ಲಿಯೂ ಇದಂ ತೇ ತರ್ಪ ಯಾಮಿ ಎಂದು ಹೇಳಿ ತರ್ಪಣ ಕೊಡಬೇಕು.

೧೧-೧೨. ಹೀಗೆ ಈ ದೇವತೆಗಳನ್ನು ಪೂಜಿಸಿ ನರಕಪ್ರಾಪ್ತಿ ಭಯ ನಿವಾರಣಾರ್ಥವಾಗಿ ದೀಪವನ್ನು ದಾನಮಾಡಬೇಕು. ಪ್ರದೋಷಕಾಲದಲ್ಲಿ (ಸೂರ್ಯಾಸ್ತಮಯ ಸಮಯದಲ್ಲಿ) ಶಿವದೇವಾಲಯ, ವಿಷ್ಣುದೇವಾಲಯ, ಬ್ರಹ್ಮ ದೇವಾಲಯ, ಗುರುಮಠ, ಚೈತ್ಯಾಲಯ, ಕೂಟಾಗಾರ, ಸಭಾಭವನಗಳು, ನದೀ ಸೋಪಾನಗಳು ಇವುಗಳಲ್ಲಿ ಯಥೇಚ್ಛವಾಗಿ ದೀಪಗಳನ್ನು ಹತ್ತಿಸಿ ಮನೋಹರ ವಾಗುವಂತೆ ದೀಪೋತ್ಸವಮಾಡಬೇಕು.

೧೩. ದೇವಾಲಯದ ಪ್ರಾಕಾರ, ಉದ್ಯಾನ, ಭಾವಿ, ಮನೆಜಗಲಿ, ನಿಷ್ಕುಟ, ಸಿದ್ಧದೇವಾಲಯ, ಅರ್ಹದ್ದೇವಾಲಯ, (ಜೈನ) ಬುದ್ಧದೇವಾಲಯ, ಚಾಮುಂಡಿ ಮುಂತಾದ ದೇವೀ ದೇವಾಲಯಗಳು, ಭೈರವ ದೇವಾಲಯ, ಇವುಗಳಲ್ಲಿಯೂ ಕುದುರೆಯ ಲಾಯ, ವಿಜನವಾದ ಪ್ರದೇಶ, ಆನೆಯ ಲಾಯ ಮುಂತಾದ ಕಡೆ ಯಲ್ಲೂ ಅನೇಕ ದೀಪಗಳನ್ನು ಪತ್ತಿಸಿ ರಮ್ಯವಾಗುವಂತೆ ಮಾಡಬೇಕು.

೧೪. ಅಯ್ಯಾ ರಾಜನೇ ! ಅಮಾವಾಸ್ಯೆಯ ದಿನ ಪ್ರಾತಃಕಾಲ ಸ್ನಾನಾ ಹ್ನಿಕಾದಿಗಳನ್ನು ನೆರವೇರಿಸಿ ದೇವತೆಗಳನ್ನೂ ಪಿತೃಗಳನ್ನೂ ಭಕ್ತಿಯಿಂದ ಪೂಜಿಸಿ ನಮಸ್ಕರಿಸಿ.

ಕೃತ್ವಾ ತು ಪಾರ್ವಣಂ ಶ್ರಾದ್ಧಂ ದಧಿಕ್ಷೀರಘೃತಾದಿಭಿಃ ।
ಭೋಜ್ಯೈರ್ನಾನಾವಿಧೈರ್ವಿಪ್ರಾನ್ ಭೋಜಯಿತ್ವಾ ಕ್ಷಮಾಪ್ಯ ಚ ॥೧೫॥

ತತೋಽಪರಾಹ್ಣಸಮಯೇ ಘೋಷಯೇನ್ನಗರೇ ನೃಪಃ ।
ಅದ್ಯ ರಾಜ್ಯಂ ಬಲೇರ್ಲೋಕಾ ಯಥೇಷ್ಟಂ ಮೋದ್ಯತಾಮಿತಿ ॥ ೧೬ ॥

ಲೋಕಶ್ಚಾಪಿ ಪರೇ ಹೃಷ್ಯೇತ್ಸುಧಾಧವಲಿತಾಜಿರೇ ।
ವೃಕ್ಷಚಂದನಮಾಲಾಢ್ಯೈಶ್ಚರ್ಚಿತೇ ಚ ಗೃಹೇಗೃಹೇ ॥ ೧೭ ॥

ದ್ಯೂತ ಪಾನರತೋದ್ದೃಪ್ತನರನಾರೀಮನೋಹರೇ ।
ನೃತ್ಯವಾದಿತ್ರಸಂಘುಷ್ಟೇ ಸಂಪ್ರಜ್ವಲಿತ ದೀಪಿಕೇ ॥ ೧೮ ॥

ಅನ್ಯೋನ್ಯಪ್ರೀತಿಸಂಹೃಷ್ಟದತ್ತಲಾಭೇನ ವೈ ಜನೇ ।
ತಾಂಬೂಲಹೃಷ್ಟವದನೇ ಕುಂಕುಮಕ್ಷೋದಚರ್ಚಿತೇ ॥ ೧೯ ॥

---

೧೫. ಹಾಲು, ಮೊಸರು, ತುಪ್ಪ, ಇತರ ಭೋಜ್ಯವಸ್ತುಗಳು, ಇವುಗಳನ್ನು ಬಡಿಸಿ ಬ್ರಾಹ್ಮಣ ಭೋಜನಮಾಡಿ ಕ್ಷಮಾಪಣೆ ಕೇಳಿ ಪಾರ್ವಣಶ್ರಾದ್ಧವನ್ನು ನೆರವೇರಿಸಬೇಕು.

೧೬. ಆ ಬಳಿಕ ಅಪರಾಹ್ಣದಲ್ಲಿ ರಾಜನು ನಗರವೊಳಗೆ "ಈಗ ಇದು ಬಲಿಯ ರಾಜ್ಯವಾಗಿದೆ. ಜನರು ಯಥೇಚ್ಛವಾಗಿ ಸಂತೋಷಪಡಲಿ" ಎಂದು ಸಾರಬೇಕು. ಜನರೆಲ್ಲರೂ ಅತ್ಯಂತ ಸಂತೋಷಯುತರಾಗಿರಬೇಕು.

೧೭. ನಗರದಲ್ಲಿ ಎಲ್ಲೆಲ್ಲೂ ಕಟ್ಟಡದ ಗೋಡೆಗಳಿಗೆ ಸುಣ್ಣ ತೊಡೆದು ಶುಭ್ರವರ್ಣವಾಗಿರಬೇಕು. ಪ್ರತಿ ಮನೆಯಲ್ಲೂ ವೃಕ್ಷಸಾರ ಚಂದನಾದಿಗಳು ಇವುಗಳನ್ನು ಬಳಿದು ಮಾಲ್ಯಾದಿಗಳಿಂದ ಅಲಂಕರಿಸಬೇಕು.

೧೮. ಸ್ತ್ರೀಯರು ಪುರುಷರು ಎಲ್ಲರೂ ಹೃದಯಂಗಮವಾಗಿ ಶೃಂಗರಿಸಿಕೊಂಡು ಜೂಜು, ಪಾನಗೋಷ್ಠಿ, ನರ್ತನ ಇವುಗಳಲ್ಲಿ ತೊಡಗಬೇಕು. ನರ್ತನಗಳು ನಯನಮನೋಹರವಾಗಿರುವಂತೆಯೂ ವಾದ್ಯಗಳು ಕರ್ಣಾನಂದವಾಗುವಂತೆಯೂ ಸಾಗುತ್ತಿರಬೇಕು. ಎಲ್ಲೆಲ್ಲೂ ದೀಪೋತ್ಸವ ಮಾಡಿರಬೇಕು.

೧೯-೨೦. ಜನರು ಅನ್ಯೋನ್ಯ ಪ್ರೀತಿಗಾಗಿ ಸಂತೋಷದಿಂದ ಪರಸ್ಪರ ದ್ರವ್ಯಲಾಭವಾಗುವಂತೆ ಮಾಡಬೇಕು. ತಾಂಬೂಲ ಸೇವನೆಮಾಡಿ ಮುಖ

**ದುಕೂಲ ಪಟ್ಟನೇಪಥ್ಯೇ ಸ್ವರ್ಣಮಾಣಿಕ್ಯಭೂಷಿತೇ ।**
**ಅದ್ಭುತೋದ್ಭಟಶೃಂಗಾರಪ್ರದರ್ಶಿತಕುತೂಹಲೇ ॥ ೨೦ ॥**

**ಯುವತೀಜನಸಂಕೀರ್ಣವಸ್ತ್ರೋಜ್ಜ್ವಲವಿಹಾರಿಣಿ ।**
**ದೀಪಮಾಲಾಕುಲೇ ರಮ್ಯೇ ವಿಧ್ವಸ್ತಧ್ವಾಂತಸಂಚಯೇ ॥**
**ಪ್ರದೋಷೇ ದೋಷರಹಿತೇ ಶಸ್ತದೋಷಾಗಮೇ ಶುಭೇ ॥ ೨೧ ॥**

**ಶಶಿಪೂರ್ಣಮುಖಾಭಿಶ್ಚ ಕನ್ಯಾಭಿಃ ಕ್ಷಿಪ್ತತಂಡುಲಂ ।**
**ನೀರಾಜನಂ ಪ್ರಕರ್ತವ್ಯಂ ವೃಕ್ಷಶಾಖಾಸು ದೀಪಕೈಃ ॥ ೨೨ ॥**

**ಭ್ರಾಮ್ಯಮಾಣೋ ನತೋ ಮೂರ್ಧ್ನಿ ಮನುಜಾನಾಂ ಜನಾಧಿಪಃ ।**
**ವೃಕ್ಷಶಾಖಾಂತದೀಪಾನಾಂ ನಿರಸ್ತಾದ್ದರ್ಶನಾದ್ವ್ರಜೇತ್ ॥**
**ನೀರಾಜನಂ ತು ತೇನೇಹ ಪ್ರೋಚ್ಯತೇ ವಿಜಯಪ್ರದಂ ॥ ೨೩ ॥**

---

ವಿಕಾಸಯುಕ್ತವಾಗಿರಬೇಕು. ಕುಂಕುಮ ಕೇಸರಾದಿ ಸುಗಂಧ ದ್ರವ್ಯಗಳನ್ನು ಮೈಗೆ ಲೇಪಿಸಿ ಸ್ತ್ರೀಯರೂ ಪುರುಷರು ರೇಶ್ಮೆ ಜರತಾರಿ ವಸ್ತ್ರಗಳಿಂದ ಅಲಂಕರಿಸಿ ಕೊಂಡು ಕಾಂಚನ ರತ್ನಾಭರಣಗಳನ್ನು ಧರಿಸಿಕೊಂಡು ಅದ್ಭುತವಾಗಿಯೂ ಉದ್ಧಟವಾಗಿಯೂ ಶೃಂಗಾರರಸಾತಿಶಯ ತೋರಿಸಲು ಕುತೂಹಲಿಗಳಾಗಿರ ಬೇಕು.

೨೧. ಯುವತೀಜನಸಮೂಹವು ಉಜ್ವಲವಾಗಿ ವಸ್ತ್ರಗಳನ್ನು ಧರಿಸಿ ಕೋಟ್ಯಾನುಕೋಟಿ ದೀಪಗಳು ತೇಜೋವಿಶೇಷದಿಂದ ಅಂಧಕಾರವು ನಿರ್ನಾಮ ವಾಗುವಂತೆ ಮಾಡಬೇಕು. ರಜನೀಮುಖವೆಂಬ ಹೆಸರುಳ್ಳ ಪ್ರದೋಷ ಸಮ ಯವು ಯಾವಾಗಲೂ ದೋಷರಹಿತವೂ ಶುಭಕರವೂ ಪ್ರಶಸ್ತವೂ ಎನಿಸಿದೆ.

೨೨-೨೩. ಆ ಸಮಯದಲ್ಲಿ ಚಂದ್ರಮುಖಿಯರಾದ ಕನ್ಯೆಯರು ಮೆರವಣಿಗೆ ಯಾಗಿ ಬರುವ ಪ್ರಭುವಿನ ಮೇಲೆ ತಂಡುಲವನ್ನು ಎರಚಬೇಕು. ಮರಗಳ ಕೊಂಬೆಗಳಲ್ಲೆಲ್ಲಾ ದೀಪವು ಪ್ರಜ್ವಲಿಸುವಂತೆ ಮಾಡಿ ನೀರಾಜನ ಮಾಡುತ್ತಿರು ವಂತೆ ಕಾಣಿಸಬೇಕು. ಜನಗಳೆಲ್ಲರೂ ತಲೆಬಾಗಿ ನಮಸ್ಕರಿಸುತ್ತಿರಲು ರಾಜನು ಅವರಿಂದ ನಮಸ್ಕೃತನಾಗಿ ಊರಿನಲ್ಲಿ ಸಂಚರಿಸುತ್ತಾ ಮರದಕೊಂಬೆಗಳಲ್ಲಿ ಹತ್ತಿ ಸಿದ ದೀಪಗಳನ್ನೆಲ್ಲಾ ನಿರಸ್ತವಾಗುವವರೆಗೂ ಉತ್ಸವವನ್ನು ನೋಡುತ್ತಾ ಸುತ್ತಾ ಡಬೇಕು. ಇದೇ ಆ ರಾಜನಿಗೆ ವಿಜಯಪ್ರದವಾದ ನೀರಾಜನವೆನಿಸುವುದು.

ತಸ್ಮಾಜ್ಜನೇನ ಕರ್ತವ್ಯಂ ರಕ್ಷೋದೋಷಭಯಾಪಹಂ ।
ಯಾತ್ರಾವಿಹಾರಸಂಚಾರೇ ಜಯಜೀವೇತಿವಾದಿನಾ ॥ ೨೪ ॥

ಕ್ಷುದ್ರೋಪಸರ್ಗರಹಿತೇ ರಾಜಾಚೌರಭಯೋಜ್ಝಿತೇ ।
ಮಿತ್ರಸ್ವಜನಸಂಬಂಧಿಸುಹೃತ್ಪ್ರೇಮಾನುರಂಜಿತೇ ॥ ೨೫ ॥

ತತೋಽರ್ಧರಾತ್ರಸಮಯೇ ಸ್ವಯಂ ರಾಜಾ ವ್ರಜೇತ್ಪುರಂ ।
ಅವಲೋಕಯಿತುಂ ರಮ್ಯಂ ಪದ್ಭ್ಯಾಮೇವ ಶನೈಃಶನೈಃ ॥ ೨೬ ॥

ಮಹತಾ ತೂರ್ಯಘೋಷೇಣ ಜ್ವಲದ್ಭಿರ್ಹಸ್ತದೀಪಕೈಃ ।
ಕೃತಾಶೋಭಾಂ ಪುರೀಂ ಪಶ್ಯೇತ್ಕೃತರಕ್ಷಾಂ ಸ್ವಕೈರ್ನರೈಃ ॥ ೨೭ ॥

---

೨೪. ರಾಕ್ಷಸರ ಭಯಪರಿಹಾರವಾಗುವುದಕ್ಕಾಗಿ ಜನರೆಲ್ಲರೂ ಇದನ್ನು ಆಚರಿಸಬೇಕು. ಯಾತ್ರೆಯಲ್ಲಿ ವಿಹಾರಾರ್ಥವಾಗಿ ಸಂಚರಿಸುವಾಗ ಆಗಾಗ್ಗೆ ಜಯ ಜೀವ ಇತ್ಯಾದಿ ಶಬ್ದಗಳನ್ನು ಉದ್ಘೋಷಿಸಬೇಕು.

೨೫. ಹೀಗೆ ಮಾಡಿದರೆ ಕ್ಷುದ್ರವಾದ ಉಪಸರ್ಗಗಳಾಗಲಿ, ರಾಜಪೀಡ್ಯರವಾಗಲಿ, ಚೋರಾದಿಗಳ ಭಾಧೆಗಳಾಗಲಿ ಇರುವುದಿಲ್ಲ. ಸ್ನೇಹಿತರು, ನಂಟರು, ಇಷ್ಟರು ಇವರುಗಳು ಪ್ರೇಮದಿಂದಲೂ ಅನುರಾಗದಿಂದಲೂ ಸಂತೋಷಯುಕ್ತರಾಗಿ ಈ ಉತ್ಸವದಲ್ಲಿ ಭಾಗವಹಿಸಬೇಕು.

೨೬. ಅರ್ಧರಾತ್ರಿಯ ಸಮಯದಲ್ಲಿ ಪ್ರಜೆಗಳ ಆನಂದೋತ್ಸಾಹಗಳಿಂದ ರಮ್ಯವಾದ ಪುರವನ್ನು ನೋಡುವುದಕ್ಕಾಗಿ ರಾಜನು ಪಾದಚಾರಿಯಾಗಿ ಮೆಲ್ಲಗೆ ಸಾಗಬೇಕು.

೨೭. ನಾನಾವಿಧ ಮಂಗಳವಾದ್ಯಗಳು ಭೋರ್ಗರೆಯುತ್ತಿರಲು ಜಾಜ್ವಲ್ಯಮಾನವಾದ ಕೈದೀವಟಿಗೆಗಳನ್ನು ಹಿಡಿಸಿಕೊಂಡು ರಾಜನು ಸ್ವಕೀಯರಾದ ಅಂಗರಕ್ಷಕ ಜನರೊಡನೆ ಸಾಗುತ್ತಾ ಪಟ್ಟಣವು ಶೋಭಾಯಮಾನವಾಗಿರುವುದನ್ನು ನೋಡಬೇಕು.

ತಂ ದೃಷ್ಟ್ವಾ ಮಹದಾಶ್ಚರ್ಯಮೃದ್ಧಿಂ ಚೈವಾತ್ಮನಃ ಶುಭಾಂ ।
ಬಲಿರಾಜ್ಯಪ್ರಮೋದಂ ಚ ತತಃ ಸ್ವಗೃಹಮಾವ್ರಜೇತ್ ॥ ೨೮ ॥

ಏವಂ ಗತೇ ನಿಶಾರ್ಧೇ ತು ಜನೇ ನಿದ್ರಾರ್ಧಲೋಚನೇ ।
ತಾವನ್ನಗರನಾರೀಭಿಃ ಶೂರ್ಪಡಿಂಡಿಮವಾದನೈಃ ॥
ನಿಷ್ಕ್ರಾಮ್ಯತೇ ಪ್ರಹೃಷ್ಟಾಭಿರಲಕ್ಷ್ಮೀಃ ಸ್ವಗೃಹಾಂಗಣಾತ್ ॥ ೨೯ ॥

ತತಃ ಪ್ರಬುದ್ಧೇ ಸಕಲೇ ಜನೇ ಜಾತಮಹೋತ್ಸವೇ ।
ಮಾಲ್ಯದೀಪಕಹಸ್ತೇ ಚ ಸ್ನೇಹನಿರ್ಭರಲೋಚನೇ ॥ ೩೦ ॥

ವೇಶ್ಯಾ ವಿಲಾಸಿನೀ ಸಾರ್ಧಂ ಸ್ವಸ್ತಿ ಮಂಗಲಕಾರಿಣೀ ।
ಗೃಹಾದ್ಗೃಹಂ ವ್ರಜಂತೀ ಚ ಪಾದಾಭ್ಯಂಗಪ್ರದಾಯಿನೀ ॥ ೩೧ ॥

---

೨೮. ಅತ್ಯಾಶ್ಚರ್ಯಯುಕ್ತವೂ ಶುಭಾತಿಶಯವುಳ್ಳದೂ ಆದ ಬಲಿರಾಜ್ಯದ ಸಂತೋಷವನ್ನು ಕಣ್ಣುತುಂಬ ನೋಡಿ ಬಳಿಕ ತನ್ನ ನಿವಾಸವನ್ನು ಸೇರಬಹುದು.

೨೯. ಹೀಗೆ ಅರ್ಧರಾತ್ರಿ ಅತಿಕ್ರಮಿಸುತ್ತಾ ಬರುವ ವೇಳೆಗೆ ಜನರು ನಿದ್ದೆಯಿಂದ ಆರ್ದ್ರದೃಷ್ಟಿಯಾಗಬಹುದು. ನಗರಾಂತರಾಳದಲ್ಲಿ ಹರ್ಷಾತಿರೇಕಗೊಂಡ ವಾರನಾರಿಯರು ಶೂರ್ಪವನ್ನೇ ಡಿಂಡಿಮವಾದ್ಯವನ್ನಾಗಿ ಬಾರಿಸುತ್ತಾ ದರಿದ್ರಲಕ್ಷ್ಮಿಯನ್ನು ಮನೆಯ ಅಂಗಳದಿಂದ ಹೊರಡಿಸುತ್ತಾರೆ.

೩೦. ಆಗ ಜನರೆಲ್ಲಾ ಎಚ್ಚರಗೊಂಡು ಮಹೋತ್ಸವಾನಂದಭರಿತರಾಗುವರು. ಪುಷ್ಪಮಾಲಿಕಾ ದೀಪ ಇವುಗಳ ಸಮೇತ ಸ್ನೇಹಾತಿಶಯದ ನೋಟವುಳ್ಳವರಾದ ಹಲವರು ರಸಿಕರು.

೩೧. ಜೊತೆಗಿರುವ ವೇಶ್ಯೆಯರೊಡನೆ ಸ್ವಸ್ತಿವಾಚನದ ಗೀತವನ್ನು ಹಾಡುತ್ತಾ ಪ್ರತಿಯೊಂದು ಮನೆಗೂ ಹೋಗುವರು. ಆಗ ಗೃಹನಿವಾಸಿಗಳು ಅವರ ಕಾಲುಗಳನ್ನು ತೊಳೆಯುವರು.

**ಪಿಷ್ಟಕೋದ್ವರ್ತನಪರೇ ಗುರುಶುಶ್ರೂಷಣಾಕುಲೇ ।**
**ದ್ವಿಜಾಭಿವಾದನಪರೇ ಸುಖರಾಜ್ಯಾಭಿವೀಕ್ಷಣೇ ॥ ೩೨ ॥**

**ಸುವಾಸಿನೀಭ್ಯೋ ದಾನೇ ಚ ದೀಯಮಾನೇ ಯದೃಚ್ಛಯಾ ।**
**ಯಥಾಪ್ರಭಾತಸಮಯೇ ರಾಜಾರ್ಹಮಾನಯೇಜ್ಜನಂ ॥ ೩೩ ॥**

**ಸದ್ಭಾವೇನೈವ ಸಂತೋಷ್ಯಾ ದೇವಾಃ ಸತ್ಪುರುಷಾ ದ್ವಿಜಾಃ ।**
**ಇತರೇ ಚಾನ್ನಪಾನೇನ ವಾಕ್ಪ್ರದಾನೇನ ಪಂಡಿತಾಃ ॥ ೩೪ ॥**

**ವಸ್ತ್ರೈಸ್ತಾಂಬೂಲದಾನೈಶ್ಚ ಪುಷ್ಪಕರ್ಪೂರಕುಂಕುಮೈಃ ।**
**ಭಕ್ಷ್ಯೈರುಚ್ಚಾವಚೈರ್ಭೋಜ್ಯೈರಂತಃಪುರವಿಲಾಸಿನೀಃ ॥ ೩೫ ॥**

---

೩೨. ಹೆಸರುಹಿಟ್ಟು ಮುಂತಾದವುಗಳಿಂದ ಕಾಲು ಉಜ್ಜುವರು. ಗುರುವಿಗೆ ಮಾಡುವಂತೆ ಶುಶ್ರೂಷೆಮಾಡುವರು. ಕೆಲವರು ಬ್ರಾಹ್ಮಣರನ್ನು ಸತ್ಕರಿಸಿ ನಮಿಸುತ್ತಿರುವರು. ಹೀಗೆ ರಾಜ್ಯವು ಸೌಖ್ಯವಾಗಿರುವ ಈ ದೃಶ್ಯವನ್ನು ನೋಡಬಹುದು.

೩೩. ಆಗ ಮುತ್ತೈದೆಯರಿಗೆ ಸಮೃದ್ಧಿಯಾಗಿ ಮಂಗಳದ್ರವ್ಯ ಬಾಗಿನಗಳನ್ನು ಕೆಲವರು ಕೊಡುವರು. ಹೀಗೆ ಮಾಡುವುದರಲ್ಲಿ ಬೆಳಕು ಹರಿಯುವುದು. ಆಗ ರಾಜನು ಪೂಜಾರ್ಹರಾದ ಆ ಸ್ವಸ್ತಿಮಂಗಳಗೀತದವರನ್ನು ತನ್ನ ನಿವಾಸಕ್ಕೆ ಕರೆಯಿಸಬೇಕು.

೩೪. ದೇವರನ್ನೂ ಸತ್ಪುರುಷರಾದ ಬ್ರಾಹ್ಮಣರನ್ನೂ ಸದ್ಭಾವನೆಯಿಂದ ಗೌರವಿಸಿ ಸಂತೋಷಪಡಿಸಬೇಕು. ಇತರರಿಗೆ ಅನ್ನ ಪಾನ ಇವನ್ನು ಕೊಡಿಸಬೇಕು. ಎಲ್ಲರಲ್ಲಿಯೂ ಸವಿನುಡಿಗಳನ್ನೇ ಆಡಬೇಕು.

೪೫. ವಿದ್ವಾಂಸರಿಗೆ ಅವರ ಘನತೆಗೆ ಅರ್ಹವಾದ ವಸ್ತ್ರಾದಿಗಳು ತಾಂಬೂಲ ಇವುಗಳನ್ನು ಕೊಟ್ಟು ಸತ್ಕರಿಸಬೇಕು. ಅಂತಃಪುರದ ವಿಲಾಸಿನಿಯರಿಗೆ ಪುಷ್ಕಳವಾದ ಭೋಜನ, ಕೇಸರಿ, ಪಚ್ಚಕರ್ಪೂರಾದಿ ಸುಗಂಧದ್ರವ್ಯಗಳು, ಇವನ್ನು ಕೊಡಿಸಿ ಸಂತೋಷಪಡಿಸಬೇಕು.

ಗ್ರಾಮೈರ್ವಿಶಯದಾನೈಶ್ಚ ಸಾಮಂತನೃಪತೀನ್ಧನೈಃ ।
ಪದಾತೀನಂಗಸಂಲಗ್ನೈರ್ಗ್ರೈವೇಯಕಟಕೈಃ ಸ್ವಕೈಃ ॥ ೩೬ ॥

ಸ್ವಯಂ ರಾಜಾ ತೋಷಯೇತ್ಸ ಜನಾನ್ಭೃತ್ಯಾನ್ಪೃಥಕ್ಪೃಥಕ್ ।
ಯಥಾರ್ಹಂ ತೋಷಯಿತ್ವಾ ತು ತತೋ ಮಲ್ಲನಟಾನ್ಭಟಾನ್ ॥ ೩೭ ॥

ವೃಷಭಾನ್ಮಹಿಷಾಂಶ್ಚೈವ ಯುಧ್ಯಮಾನಾನ್ಪರೈಃ ಸಹ ।
ಗಜಾನಶ್ವಾಂಶ್ಚ ಯೋಧಾಂಶ್ಚ ಪದಾತೀನ್ಸಮಲಂಕೃತಾನ್ ॥ ೩೮ ॥

ಮಂಚಾರೂಢಃ ಸ್ವಯಂ ಪಶ್ಯೇನ್ನಟನರ್ತಕಚಾರಣಾನ್ ।
ಕ್ರುದ್ಧಾಪಯೇದಾನಯೇಚ್ಚ ಗೋಮಹಿಷ್ಯಾದಿಕಂ ತತಃ ॥ ೩೯ ॥

ದಿಷ್ಟ್ಯಾ ಕಾರ್ಯಂ ಪಯೋಜ್ಯೋತಿರುಕ್ತಿಪ್ರತ್ಯುಕ್ತಿಕಾ ವದೇತ್ ।
ತತೋಽಪರಾಹ್ಣಸಮಯೇ ಪೂರ್ವಸ್ಯಾಂ ದಿಶಿ ಭಾರತ ॥ ೪೦ ॥

---

೩೬. ಸಾಮಂತರಿಗೆ ಧನ ಗ್ರಾಮಾದಿಗಳನ್ನು ಬಹುಮಾನಿಸುವ ಮೂಲಕವೂ, ಸಮ್ಮುಖದ ಪದಾತಿವರ್ಗವದರಿಗೆ ತಾನು ಧರಿಸಿದ್ದ ಹಾರ ಕೈತೋಡ ಇವನ್ನು ಪಾರಿತೋಷಕವಾಗಿ ಕೊಡುವ ಮೂಲಕವೂ ತನ್ನ ಪ್ರಜೆಗಳನ್ನೂ ಪರಿವಾರವದರನ್ನೂ ತಾನೇ ಪ್ರತ್ಯೇಕಪ್ರತ್ಯೇಕವಾಗಿ ಬರಮಾಡಿ ಅವರವರಿಗೆ ಅರ್ಹವಾದ ಪಾರಿತೋಷಕದಾನದಿಂದಲೂ ಸಂತೋಷಪಡಿಸಬೇಕು.

೩೭-೩೮. ಬಳಿಕ ರಾಜನು ಮಂಚದ ಮೇಲೆ ಕುಳಿತು, ನಟರು ಚಮತ್ಕಾರವಾಗಿ ಧರಿಸುವ ವೇಷಗಳು, ಜಟ್ಟಿಗಳ ಮಲ್ಲಯುದ್ಧ, ಇತರರೊಡನೆ ಕಾಳಗ ಮಾಡುವ ಗೂಳಿಗಳು, ಕೋಣಗಳು, ಅಲಂಕರಿಸಿದ ಆನೆಗಳು, ವೇಷಭೂಷಣಯುತರಾದ ಅಶ್ವಸೇನಾ, ಪದಾತಿ ಸೇನಾವರ್ಗಗಳು, ನಟರು, ನರ್ತಕರು, ಚಾರಣರು, ಇವರು ಪ್ರದರ್ಶಿಸುವ ಚಮತ್ಕಾರದೃಶ್ಯಗಳು ಇವುಗಳನ್ನೆಲ್ಲಾ ಅವಲೋಕಿಸಬೇಕು.

೩೯. ರೇಗಿಸಿದ ವೃಷಭ ಮಹಿಷ ಮುಂತಾದವುಗಳನ್ನು ತಂದು ಅವು ಪರಸ್ಪರ ಉಗ್ರವಾಗಿ ನೋಡುತ್ತಿರುವುದನ್ನು ಬೆಂಕಿಗೆ ಪ್ರತಿಯಾಗಿ ಜಲವೆಂಬದಾಗಿ ಉಕ್ತಿಪ್ರತ್ಯುಕ್ತಿಗಳನ್ನು ಕೊಡುತ್ತಿರುವುದೆಂಬಂತೆ ಭಾವಿಸಬೇಕು.

೪೦-೪೧. ಅಯ್ಯಾ ಧರ್ಮಜನೆ ! ಕೇಳು ಆಮೇಲೆ ಅಪರಾಹ್ಣ ಸಮಯದಲ್ಲಿ ಮಾರ್ಗಪಾಲೀ ಎಂಬ ಕಲಶವನ್ನು ಪೂರ್ವದಿಕ್ಕಿನಲ್ಲಿ ಒಂದು ಮರದ

ಮಾರ್ಗಪಾಲೀಂ ಪ್ರಬಧ್ನೀಯಾತ್ತುಂಗಸ್ತಂಭೇಽಥ ಪಾದಪೇ ।
ಕುಶಕಾಶಮಯೀಂ ದಿವ್ಯಾಂ ಸಂಭವೇ ಬಹುಭಿರ್ವೃತಾಂ ॥ ೪೧ ॥

ಪೂಜಯಿತ್ವಾ ಗಜಾನ್ವಾಜೀನ್ವಾರ್ಧೇ ಯಾಮತ್ರಯೇ ಗತೇ ।
ಗಾವೋ ವೃಷಾಃ ಸಮಹಿಷಾ ಮಂಡಿತಾ ಘಂಟಿಕೋತ್ಕಟಾಃ ॥ ೪೨ ॥

ಕೃತೇ ಹೋಮೇ ದ್ವಿಜೇಂದ್ರೈಸ್ತು ಗೃಹ್ಣೀಯಾನ್ಮಾರ್ಗಪಾಲಿಕಾಂ ।
ರಾಷ್ಟ್ರಭೋಜ್ಯೇನ ಧಾರಾಭಿಃ ಸಹಸ್ರೇಣ ಶತೇನ ವಾ ॥ ೪೩ ॥

ಸ್ವಶಕ್ತ್ಯಪೇಕ್ಷಯಾ ವಾಪಿ ಗೃಹ್ಣೀಯಾದ್ವಾಮಭೋಜನೈಃ ।
ಮಾತುಃ ಕುಲಂ ಪಿತೃಕುಲಮಾತ್ಮಾನಂ ಸಹ ಬಂಧುಭಿಃ ॥ ೪೪ ॥

---

ಕೊಂಬೆಯ ಮೇಲೋ ಅಥವಾ ಎತ್ತರವಾದ ಕಂಭದ ಮೇಲೋ ಇರಿಸಿ ದರ್ಭೆ ಕಾಶೆಹುಲ್ಲು ಇವುಗಳಿಂದ ದೃಢವಾಗುವಂತೆ ನಿರ್ಮಿಸಿದ ಸರವೆಯಿಂದ ಅದನ್ನು ಭದ್ರವಾಗಿ ಕಟ್ಟಬೇಕು.

೪೨. ಮೂರನೆಯ ಜಾವ ಕಳೆದ ಮೇಲೆ ಆನೆ ಕುದುರೆ ಹಸು ಗೂಳಿ ಕೋಣ ಇವುಗಳ ಕೊರಳಿಗೆ ಘಂಟೆ ಮುಂತಾದವುಗಳನ್ನು ಕಟ್ಟಿ ಅಲಂಕರಿಸಿ ಪೂಜೆಮಾಡಬೇಕು.

೪೩. ಬ್ರಾಹ್ಮಣೋತ್ತಮರು ಮಂತ್ರವತ್ತಾಗಿ ಹೋಮಾದಿ ಕಾರ್ಯಗಳನ್ನು ನೆರವೇರಿಸಬೇಕು. ಬಳಿಕ ಒಬ್ಬನು ಮಾರ್ಗಪಾಲೀ ಕಲಶವನ್ನು ಸ್ತಂಭಸಮೇತ ವಾಗಿ ಎತ್ತಿ ಹಿಡಿದುಕೊಳ್ಳಬೇಕು.

೪೪. ರಾಷ್ಟ್ರಕ್ಕೆ ಸುಖವಾಗಲಿ ಎಂಬ ಉದ್ದೇಶದಿಂದ ನೂರುಧಾರೆಗಳು ಸಾವಿರಧಾರೆಗಳು ಅಥವಾ ತನಗೆ ಶಕ್ತಿಯಿದ್ದಷ್ಟು ಧಾರೆಗಳು ಸೋರುವಂತೆ ರಕ್ತ ಮಾಂಸಾದಿಗಳನ್ನು ಅದಕ್ಕೆ ಬಲಿಸಮರ್ಪಣೆ ಮಾಡಬೇಕು.

**ಸಂತಾರಯೇತ್ಸ ಸಕಲಂ ಮಾರ್ಗಪಾಲೀಂ ದದಾತಿ ಯಃ ।**
**ನೀರಾಜನಂ ಚ ತತ್ರೈವ ಕಾರ್ಯಂ ರಾಜ್ಞೋ ಜಯಪ್ರದಂ ॥ ೪೫ ॥**

**ಮಾರ್ಗಪಾಲೀತಲೇನೇತ್ಥಂ ಹಯಾ ಗಾವೋ ಗಜಾ ವೃಷಾಃ ।**
**ರಾಜಾನೋ ರಾಜಪುತ್ರಾಶ್ಚ ಬ್ರಾಹ್ಮಣಾಃ ಶೂದ್ರಜಾತಯಃ ॥ ೪೬ ॥**

**ಮಾರ್ಗಪಾಲೀಂ ಸಮುಲ್ಲಂಘ್ಯ ನೀರುಜಃ ಸ್ಯಾತ್ಸುಖೀ ಸದಾ ।**
**ಕೃತ್ವೈತತ್ಸರ್ವಮೇವೇಹ ರಾತ್ರೌ ದೈತ್ಯಪತೇರ್ಬಲೇಃ ॥ ೪೭ ॥**

**ಪೂಜಾಂ ಕುರ್ಯಾನ್ನರಃ ಸಾಕ್ಷಾದ್ಭೂಮೌ ಮಂಡಲಕೇ ಕೃತೇ ।**
**ಬಲಿಮಾಲಿಖ್ಯ ದೈತ್ಯೇಂದ್ರಂ ವರ್ಣಕೈಃ ಪಂಚರಂಗಕೈಃ ॥ ೪೮ ॥**

---

೪೫. ಹೀಗೆ ಮಾರ್ಗಪಾಲಿಯನ್ನು ಧರಿಸಿದವನು ತನ್ನ ಮಾತೃವಂಶದವರು, ತಾನು, ಇತರ ಬಂಧುಗಳು, ಎಲ್ಲರನ್ನೂ ನರಕದಿಂದ ಉದ್ಧರಿಸುತ್ತಾನೆ. ರಾಜನಿಗೆ ಜಯ ಪ್ರಾಪ್ತಿಯಾಗಲೆಂದು ಹಾರೈಸಿ ಅಲ್ಲಿಯೇ ನೀರಾಜನವನ್ನು ಮಾಡಬೇಕು. (ಗ್ರಾಮಾಂತರಗಳಲ್ಲಿ ಕಾರಹಬ್ಬದಲ್ಲಿ ಈರೀತಿ ಮಾಡುವ ರೂಢಿ ಈಗಲೂ ಕೆಲವು ಕಡೆ ಇದೆ.)

೪೬. ಶೃಂಗರಿಸಿ ಪೂಜಿಸಿ ನಿಲ್ಲಿಸಿದ್ದ ಆನೆ, ಕುದುರೆ, ಹಸು, ಗೂಳಿ, ಮುಂತಾದುವನ್ನು ಮಾರ್ಗಪಾಲಿಯ ತಲದಲ್ಲಿ ನುಗ್ಗಿಸಿ ಅದರ ಹಿಂದೆ ರಾಜರು ರಾಜಪುತ್ರರು ಎಲ್ಲರೂ ಸಾಗಬೇಕು.

೪೭. ಬ್ರಾಹ್ಮಣರು ಶೂದ್ರರು ಮುಂತಾದ ಎಲ್ಲರೂ ಮಾರ್ಗಪಾಲಿಯ ಸಮ್ಮುಖದಲ್ಲಿ ಹಾಯ್ದು ಹೋದರೆ ಸದಾ ಆರೋಗ ದೃಢಕಾಯರಾಗಿ ಸುಖಿಗಳಾಗುತ್ತಾರೆ.

೪೮. ಆ ದಿನ ರಾತ್ರಿ ಭೂಮಿಯಲ್ಲಿ ಮಂಡಲವನ್ನು ರಚಿಸಿ, ಅದರಲ್ಲಿ ದೈತ್ಯೇಂದ್ರನಾದ ಬಲಿಚಕ್ರವರ್ತಿಯನ್ನು ಪಂಚವರ್ಣಗಳಿಂದ ರಚಿಸಲು ಯತ್ನಿಸಿ.

ಸರ್ವಾಭರಣಸಂಪೂರ್ಣಂ ವಿಂಧ್ಯಾವಲ್ಯಾ ಸಹಾಸಿತಂ ।
ಕೂಷ್ಮಾಂಡಬಾಣಜಂಘೋರುಮುರದಾನವಸಂವೃತಂ ॥ ೪೯ ॥

ಸಂಪೂರ್ಣಹೃಷ್ಟವದನಂ ಕಿರೀಟೋತ್ಕಟಕುಂಡಲಂ ।
ದ್ವಿಭುಜಂ ದೈತ್ಯರಾಜಾನಂ ಕಾರಯಿತ್ವಾ ನೃಪಃ ಸ್ವಯಂ ॥ ೫೦ ॥

ಗೃಹಸ್ಯ ಮಧ್ಯೇ ಶಾಲಾಯಾಂ ವಿಶಾಲಾಯಾಂ ತತೋಽರ್ಚಯೇತ್ ।
ಭ್ರಾತೃಮಂತ್ರಿಜನೈಃ ಸಾರ್ಧಂ ಸಂತುಷ್ಟೋ ಬಂದಿಭಿಃ ಸ್ತುತಃ ॥ ೫೧ ॥

ಕಮಲೈಃ ಕುಮುದೈಃ ಪುಷ್ಪೈಃ ಕಲ್ಹಾರೈ ರಕ್ತಕೋತ್ಪಲೈಃ ।
ಗಂಧಧೂಪಾನ್ನನೈವೇದ್ಯೈರಕ್ಷತೈರ್ಗುಡಪೂಪಕೈಃ ॥ ೫೨ ॥

---

೪೯. ಕೂಷ್ಮಾಂಡ ಬಾಣ ಇವುಗಳಂತೆ ಜಂಘೆ ತೊಡೆ ಎದೆ ಇವನ್ನು ರಚಿಸಿ, ಪತ್ನಿಯಾದ ವಿಂಧ್ಯಾವಳಿಸಮೇತನಾಗಿರುವಂತೆಯೂ, ಪೀಠದಲ್ಲಿ ಕುಳಿತು ಸಮಸ್ತ ಆಭರಣಗಳನ್ನು ಧರಿಸಿರುವಂತೆಯೂ, ಸುತ್ತಲೂ ರಾಕ್ಷಸರಿಂದ ಆವರಿಸಲ್ಪಟ್ಟಿರುವಂತೆಯೂ ರಚಿಸಬೇಕು.

೫೦-೫೧. ರಾಜಚಿಹ್ನವಾದ ಕಿರೀಟ ಕುಂಡಲಗಳಿಂದ ಅಲಂಕೃತವಾಗಿ ತುಂಬಾ ಹರ್ಷಯುಕ್ತವಾದ ಮುಖ, ಮತ್ತು ಎರಡು ಭುಜಗಳು ಉಳ್ಳದಾಗಿ ಇರುವಂತೆ ದೈತ್ಯೇಂದ್ರನ ಪ್ರತಿಕೃತಿಯನ್ನು ಗೃಹದ ಮಧ್ಯದ ವಿಶಾಲವಾದ ಪಜಾರದಲ್ಲಿ ಇರಿಸಿ ಪೂಜೆಗೆ ಸಿದ್ಧಮಾಡಬೇಕು.

೫೨. ಬಳಿಕ ತನ್ನ ಸಹೋದರರು ಮಂತ್ರಿವರ್ಗದವರ ಸಮೇತ ರಾಜನು ಆ ಪಜಾರಕ್ಕೆ ಬಂದು, ವಂದಿಗಳು ಸ್ತುತಿಸುತ್ತಿರಲು ಕಮಲ, ಕನ್ನೈದಿಲೆ, ಕಲ್ಹಾರ, ಕೆಂಪುನ್ನೈದಿಲೆ, ಮುಂತಾದ ಪುಷ್ಪಗಳು, ಗಂಧ ಇವುಗಳಿಂದ ದೈತ್ಯೇಂದ್ರನನ್ನು ಪೂಜಿಸಿ, ಧೂಪದೀಪಾದಿಗಳನ್ನು ಸಮರ್ಪಿಸಿ, ಅನ್ನ, ಬೆಲ್ಲಹಾಕಿ ಮಾಡಿದ ಅಖಂಡವಾದ ಅಪೂಪಗಳು, ಮದ್ಯ, ಮಾಂಸ, ಸುರೇ, ಲೇಹ್ಯಮುಂತಾದುವು ಇವ ಇವನ್ನೆಲ್ಲ ನಿವೇದನಮಾಡಿ ಅದರ ಮೇಲೆ ಉರಿಯುತ್ತಿರುವ ದೀಪ ಬತ್ತಿಸಮೇತವಾಗಿ ಬಲಿಸಮರ್ಪಣೆ ಮಾಡಬೇಕು.

ಮದ್ಯಮಾಂಸಸುರಾಲೇಹ್ಯದೀಪವತ್ಯುಪಹಾರಕೈಃ ।
ಮಂತ್ರೇಣಾನೇನ ರಾಜೇಂದ್ರ ಸಮಂತ್ರೀ ಸಪುರೋಹಿತಃ ॥ ೫೩ ॥

ಬಲಿರಾಜ ನಮಸ್ತುಭ್ಯಂ ವಿರೋಚನಸುತ ಪ್ರಭೋ ।
ಭವಿಷ್ಯೇಂದ್ರಸುರಾರಾತೇ ಪೂಜೇಯಂ ಪ್ರತಿಗೃಹ್ಯತಾಂ ॥ ೫೪ ॥

ಏವಂ ಪೂಜಾಂ ನೃಪಃ ಕೃತ್ವಾ ರಾತ್ರೌ ಜಾಗರಣಂ ತತಃ ।
ಕಾರಯೇತ್ಪ್ರೇಕ್ಷಣೀಯಾದಿನಟಕ್ಷತ್ರಕಥಾನಕೈಃ ॥ ೫೫ ॥

ಲೋಕಶ್ಚಾಪಿ ಗೃಹಸ್ಯಾಂತೇ ಶಯ್ಯಾಯಾಂ ಶುಕ್ಲತಂಡುಲೈಃ ।
ಸಂಸ್ಥಾಪ್ಯ ಬಲಿರಾಜಾನಂ ಫಲೈಃ ಪುಷ್ಪೈಶ್ಚ ಪೂಜಯೇತ್ ॥ ೫೬ ॥

ಬಲಿಮುದ್ದಿಶ್ಯ ದೀಯಂತೇ ದಾನಾನಿ ಕುರುನಂದನ ।
ಯಾನಿ ತಾನ್ಯಕ್ಷಯಾಣ್ಯಾಹುರ್ಮಯೈವಂ ಸಂಪ್ರದರ್ಶಿತಂ ॥ ೫೭ ॥

---

೫೩-೫೪. ಬಳಿಕ ಮಂತ್ರಿ ಪುರೋಹಿತರು ಸಮೇತನಾಗಿ "ಬಲಿರಾಜನಮಸ್ತುಭ್ಯಂ ವಿರೋಚನಸುತ ಪ್ರಭೋ ಭವಿಷ್ಯೇಂದ್ರ ಸುರಾರುತೇ ಪೂಜೇಯಂ ಪ್ರತಿಗೃಹ್ಯತಾಂ'' ಎಂಬ ಮಂತ್ರವನ್ನು ಹೇಳಿ ಪ್ರಾರ್ಥಿಸಬೇಕು. (ವಿರೋಚನ ಪುತ್ರನಾದ ಬಲಿರಾಜನೇ! ಮುಂದೆ ಇಂದ್ರಪದವಿಗೆ ಬರತಕ್ಕವನೇ! ದೇವತೆಗಳ ಶತ್ರುವೇ ! ಈಗ ನಾನುಮಾಡಿದ ಪೂಜೆಯನ್ನು ಸ್ವೀಕರಿಸು. ಎಂದು ಆ ಮಂತ್ರದ ಅರ್ಥ.

೫೫. ರಾಜನು ಈರೀತಿ ಪೂಜಿಸಿದಮೇಲೆ ರಾತ್ರಿ ನಟವರ್ಗದವರು ಅಭಿನಯಿಸುವ ಕ್ಷತ್ರಿಯವೀರಕಥಾಪ್ರಸಂಗ ಮೊದಲಾದ ಪ್ರೇಕ್ಷಣೀಯ ದೃಶ್ಯಗಳ ದರ್ಶನ ಮುಂತಾದ ಕ್ರಮದಲ್ಲಿ ಜಾಗರಣೆಮಾಡಬೇಕು.

೫೬. ಸಾಮಾನ್ಯ ಜನರು ತಮ್ಮ ಮನೆಗಳಲ್ಲಿ ಶುಭ್ರವಾದ ಅಕ್ಕಿಯನ್ನು ಹರಡಿ, ಅದರಮೇಲೆ ದುಕೂಲ ಮುಂತಾದ್ದನ್ನು ಹಾಸಿದ ಶಯ್ಯೆಯಮೇಲೆ ಬಲೀಂದ್ರನನ್ನು ಕನ್ನಡಿಸಮೇತ ಕಲಶಾದಿಗಳಲ್ಲಿ ಆವಾಹಿಸಿ ಪುಷ್ಪಗಳಿಂದ ಪೂಜಿಸಿ ಫಲಗಳನ್ನು ನಿವೇದನ ಮಾಡಬೇಕು.

೫೭. ಅಯ್ಯಾ ಕುರುವಂಶೋತ್ಪನ್ನನೇ ! ಬಲಿರಾಜನ ಪ್ರೀತ್ಯರ್ಥವಾಗಿ ಅನೇಕ ದಾನಗಳನ್ನು ಕೊಡಬಹುದು. ಹಾಗೆ ಕೊಟ್ಟದ್ದರ ಫಲವು ಅಕ್ಷಯವಾಗುವುದು.

ಯದಸ್ಯಾಂ ದೀಯತೇ ದಾನಂ ಸ್ವಲ್ಪಂ ವಾ ಯದಿ ವಾ ಬಹು ।
ತದಕ್ಷಯಂ ಭವೇತ್ಸರ್ವಂ ವಿಷ್ಣೋಃ ಪ್ರೀತಿಕರಂ ಪರಂ ॥ ೫೮ ॥

ವಿಷ್ಣುನಾ ವಸುಧಾ ಲಬ್ಧಾ ಪ್ರೀತೇನ ಬಲಯೇ ಪುನಃ ।
ಉಪಕಾರಕರೋ ದತ್ತಶ್ಚಾಸುರಾಣಾಂ ಮಹೋತ್ಸವಃ ॥ ೫೯ ॥

ತತಃ ಪ್ರಭೃತಿ ರಾಜೇಂದ್ರ ಪ್ರವೃತ್ತಾ ಕೌಮುದೀ ಪುನಃ ।
ಸರ್ವೋಪದ್ರವವಿದ್ರಾವಿ ಸರ್ವವಿಘ್ನವಿನಾಶಿನೀ ॥ ೬೦ ॥

ಲೋಕಶೋಕಹರೀ ಕಾಮ್ಯಾ ಧನಪುಷ್ಟಿಸುಖಾವಹಾ ।
ಕುಶಬ್ದೇನ ಮಹೀ ಜ್ಞೇಯಾ ಮುದೀ ಹರ್ಷೇ ತತಃ ಪರಂ ॥ ೬೧ ॥

---

೫೮. ಬಲಿಪಾಡ್ಯಮಿಯಲ್ಲಿ ಮಾಡಿದ ದಾನಗಳು ಅಲ್ಪವಾಗಲಿ ಸಮೃದ್ಧಿಯಾಗಲಿ ಅವೆಲ್ಲವೂ ಅಕ್ಷಯವಾಗುವುದು. ಮತ್ತು ವಿಷ್ಣುವಿಗೆ ಪರಮಪ್ರೀತಿಕರಗಳು ಎನಿಸುವುವು.

೫೯. ಈ ದಾನದಿಂದ ಸುಪ್ರೀತನಾದ ವಿಷ್ಣುವು ಬಲಿರಾಜನಿಗೆ ಮತ್ತೆ ರಾಜ್ಯಲಾಭವನ್ನುಂಟುಮಾಡಿದನು. ಅಸುರರಿಗೆ ಉಪಕಾರಾರ್ಥವಾಗಿ ಈ ಮಹೋತ್ಸವವು ಕೊಡಲ್ಪಟ್ಟಿತು.

೬೦. ಅಯ್ಯಾ ರಾಜಶ್ರೇಷ್ಠನೇ ! ಅಂದು ಮೊದಲುಗೊಂಡು ಕೌಮುದೀ ಮಹೋತ್ಸವವು ಪುನಃ ಆಚರಿಸಲ್ಪಡುವಂತಾಯಿತು. ಇದು ಸಮಸ್ತ ರೋಗಾದ್ಯುಪದ್ರವಗಳನ್ನು ದೂರೀಕರಿಸತಕ್ಕದ್ದೂ ಸಮಸ್ತ ವಿಘ್ನಗಳನ್ನೂ ನಾಶಪಡಿಸತಕ್ಕದ್ದೂ ಆಗಿದೆ.

೬೧. ಮತ್ತು ಲೋಕದ ದುಃಖವನ್ನು ಹೋಗಲಾಡಿಸುವುದೂ ವ್ರತಿಗೆ ಅಭೀಷ್ಟವಾದ ಧನ ಪುಷ್ಟಿ ಮುಂತಾದುವನ್ನು ಕೊಡತಕ್ಕದ್ದೂ ಆಗಿದೆ. ಕು ಎಂದರೆ ಭೂಮಿಯೆಂದು ಅರ್ಥ. ಮುದಶಬ್ದವು ಹರ್ಷ ಎಂಬ ಅರ್ಥವನ್ನು ಕೊಡುವುದು.

ಧಾತುಜ್ಞೈರ್ನೈಗಮಜ್ಞೈಶ್ಚ ತೇನೈಷಾ ಕೌಮುದೀ ಸ್ಮೃತಾ ।
ಕೌ ಮೋದಂತೇ ಜನಾ ಯಸ್ಯಾಂ ನಾನಾಭಾವೈಃ ಪರಸ್ಪರಾಃ ॥ ೬೨ ॥

ಹೃಷ್ಟಾಸ್ತುಷ್ಟಾಃ ಸುಖಾಯತ್ತಾಸ್ತೇನೈಷಾ ಕೌಮುದೀ ಸ್ಮೃತಾ ।
ಕುಮುದಾನಿ ಬಲೇರ್ಯಸ್ಮಾದ್ದೀಯಂತೇಽಸ್ಯಾಂ ಯುಧಿಷ್ಠಿರ ॥ ೬೩ ॥

ಅರ್ಥಾರ್ಥೇ ಪಾರ್ಥ ಭೂಮೌ ಚ ತೇನೈಷಾ ಕೌಮುದೀ ಸ್ಮೃತಾ ।
ಏಕಮೇವಮಹೋರಾತ್ರಂ ವರ್ಷೇ ವರ್ಷೇ ವಿಶಾಂಪತೇ ॥ ೬೪ ॥

ದತ್ತಂ ದಾನವರಾಜಸ್ಯ ಆದರ್ಶಮಿವ ಭೂತಲೇ ।
ಯಃ ಕರೋತಿ ನೃಪೋ ರಾಷ್ಟ್ರೇ ತಸ್ಯ ವ್ಯಾಧಿಭಯಂ ಕುತಃ ॥ ೬೫ ॥

ಕುತ ಈತಿಭಯಂ ತತ್ರ ನಾಸ್ತಿ ಮೃತ್ಯುಕೃತಂ ಭಯಂ ।
ಸುಭಿಕ್ಷಂ ಕ್ಷೇಮಮಾರೋಗ್ಯಂ ಸರ್ವಸಂಪದ ಉತ್ತಮಾಃ ॥ ೬೬ ॥

---

೬೨. ಈರೀತಿ ತಿಳಿಯಬೇಕೆಂದು ವ್ಯಾಕರಣ ಶಾಸ್ತ್ರಜ್ಞರು ನಿಗಮನ ಮಾಡಿದ್ದಾರೆ. ಆದ್ದರಿಂದ ಭೂಲೋಕಕ್ಕೆ ಹರ್ಷಪ್ರದವಾದುದರಿಂದ ಇದು ಕಾಮುದೀ ಎನಿಸುವುದು.

೬೩. ಈ ಮಹೋತ್ಸವದಲ್ಲಿ ರಾಷ್ಟ್ರದ ನಾನಾಜನರು ಪರಸ್ಪರವಾಗಿ ನಾನಾಭಾವಗಳಿಂದ ಹರ್ಷಪಡುತ್ತಾ ಆನಂದಪರವಶರೂ ಸಂತುಷ್ಟರೂ ಸುಖಾನುಭವಿಗಳೂ ಆಗುತ್ತಾರೆಯಾದುದರಿಂದ ಇದಕ್ಕೆ ಕಾಮುದೀ ಎಂದು ಹೆಸರಾಯಿತು.

೬೪. ಅಯ್ಯಾ ಯುಧಿಷ್ಠಿರ! ದ್ರವ್ಯಲಾಭಾಪೇಕ್ಷಿಗಳು ಈ ಉತ್ಸವದಲ್ಲಿ ಬಲೀಂದ್ರನಿಗೆ ಭೂಲೋಕದಲ್ಲಿ ಕುಮುವಪುಷ್ಪಗಳನ್ನು ಸಮರ್ಪಿಸುವರು. ಆದ ಕಾರಣ ಇದನ್ನು ಕಾಮುದೀ ಎಂದು ಹೇಳುತ್ತಾರೆಂದು ಕೆಲವರ ಅಭಿಪ್ರಾಯ.

೬೫-೬೬. ಅಯ್ಯಾ ರಾಜನೇ! ದಾನವರಾಜನ ಸಂತೋಷಾರ್ಥವಾಗಿ ಪ್ರತಿವರ್ಷದಲ್ಲೂ ಬಂದು (ಅಹೋರಾತ್ರಿ) ದಿನ ಭೂಲೋಕವನ್ನು ಕನ್ನಡಿ ಹಿಡಿದಂತೆ ಯಾವ ರಾಜನು ಪ್ರಕಾಶಮಾನವಾಗಿ ಮಾಡುತ್ತಾನೆಯೋ ಅವನ ರಾಜ್ಯದಲ್ಲಿ ರೋಗಭಯವಾಗಲಿ, ಈತಿಭಾಧೆಗಳ ಭಯವಾಗಲಿ, ಮೃತ್ಯುಭಯವಾಗಲಿ ಸಂಭವಿಸುವುದಿಲ್ಲ. ಆ ರಾಜನ ರಾಷ್ಟ್ರದಲ್ಲಿ ಸುಭಿಕ್ಷ ಕುಶಲತೆ(ಕ್ಷೇಮ) ಆರೋಗ್ಯ ಉತ್ತಮವಾದ ಸರ್ವಸಂಪತ್ತು ಇವೆಲ್ಲ ನೆಲಸುವುವು.

ನೀರುಜಶ್ಚ ಜನಾಸರ್ವೇ ಸರ್ವೋಪದ್ರವವರ್ಜಿತಾಃ ।
ಕೌಮುದೀಕಾರಣಾದ್ರಾಜನ್ಭವತೀಹ ಮಹೀತಲೇ ॥ ೬೭ ॥

ಯೋ ಯಾದೃಶೇನ ಭಾವೇನ ತಿಷ್ಠತ್ಯಸ್ಯಾಂ ಯುಧಿಷ್ಠಿರ ।
ಹರ್ಷದೈನ್ಯಾದಿರೂಪೇಣ ತಸ್ಯ ವರ್ಷಂ ಪ್ರಯಾತಿ ಹಿ ॥ ೬೮ ॥

ರುದಿತೇ ರೋದಿತಿ ವರ್ಷಂ ಹೃಷ್ಟೋ ವರ್ಷಂ ಪ್ರಹೃಷ್ಯತಿ ।
ಭುಕ್ತ್ವಾ ಭೋಕ್ತಾ ಭವೇದ್ವರ್ಷಂ ಸ್ವಸ್ಥಃ ಸ್ವಸ್ಥೋ ಭವೇದಿತಿ ॥ ೬೯ ॥

ತಸ್ಮಾತ್ಪ್ರಹೃಷ್ಟೈಸ್ತುಷ್ಟೈಶ್ಚ ಕರ್ತವ್ಯಾ ಕೌಮುದೀ ನರೈಃ ।
ವೈಷ್ಣವೀ ದಾನವೀ ಚೇಯಂ ತಿಥಿಃ ಪೈತ್ರೀ ಯುಧಿಷ್ಠಿರ ॥ ೭೦ ॥

---

೬೭. ಎಲೈ ರಾಜನೇ ! ಕಾಮುದೀ ಮಹೋತ್ಸವವನ್ನು ಆಚರಿಸುವುದರಿಂದ ಭೂಮಂಡಲದ ಜನರೆಲ್ಲರೂ ನೀರೋಗಿಗಳೂ ಸಮಸ್ತ ಉಪದ್ರವರಹಿತರೂ ಆಗುತ್ತಾರೆ.

೬೮. ಅಯ್ಯಾ ಧರ್ಮರಾಜನೇ ! ಇಂತಹ ಮಹೋತ್ಸವದಲ್ಲಿ ಯಾರು ಹರ್ಷಭಾವದಿಂದ ವರ್ತಿಸುವರೋ ಅವರಿಗೆ ಆ ವರ್ಷವೆಲ್ಲ ಹರ್ಷದಿಂದ ಕಳೆಯುವುದು. ಯಾರು ದೈನ್ಯಭಾವದಿಂದ ವರ್ತಿಸುವರೋ ಅವರಿಗೆ ಆ ವರ್ಷದಲ್ಲೆಲ್ಲ ದೈನ್ಯತೆಯೇ ಉಂಟಾಗವುದು. ಆ ಉತ್ಸವದಲ್ಲಿ ಯಾರು ಯಾವ ಭಾವನೆಯಿಂದಿರುವರೋ ಅವರಿಗೆ ಅದೇ ಅನುಭವದಲ್ಲಿ ಆ ವರ್ಷ ಕಳೆಯುವುದು.

೬೯. ಈ ಶುಭದಿನದಲ್ಲಿ ರೋದಿಸುವವನು ಆ ವರ್ಷವೆಲ್ಲಾ ರೋದಿಸುತ್ತಿರಬೇಕಾಗುವುದು. ಆ ದಿನ ಹರ್ಷದಿಂದಿರುವವನಿಗೆ ಆ ವರ್ಷವೆಲ್ಲಾ ಹರ್ಷಪ್ರಾಪ್ತಿಯಾಗುವುದು. ಆ ದಿನ ಸುಖಭೋಜನ ಮಾಡಿದರೆ ಆ ವರ್ಷವೆಲ್ಲಾ ಸುಖಭೋಜನ ಲಭಿಸುವುದು. ಆ ದಿನ ಶಾಂತಚಿತ್ತದಿಂದಿದ್ದವನು ವರ್ಷವೆಲ್ಲಾ ಶಾಂತಚಿತ್ತದಿಂದಿರುವನು.

೭೦. ಈ ಕಾರಣದಿಂದ ಮಾನವರು ತುಂಬಾಹರ್ಷದಿಂದಲೂ ಸಂತುಷ್ಟಿಯಿಂದಲೂ ಈ ಮಹೋತ್ಸವವನ್ನು ಮಾಡಬೇಕು. ಈ ತಿಥಿಯು ವೈಷ್ಣವೀ ಎಂಬದಾಗಿಯೂ ದಾನವೀ ಎಂಬದಾಗಿಯೂ ಪೈತ್ರಿ ಯೆಂಬದಾಗಿಯೂ ಹೇಳಲ್ಪಡುವುದು.

**ಉಪಶಮಿತಮೇಘನಾದಂ**
**ಪ್ರಜ್ವಲಿತ ದಶಾನನಂ ರಮಿತರಾಮಂ ।**
**ರಾಮಾಯಣಮಿವ ಸುಭಗಂ**
**ದೀಪ ದಿನಂ ಹರತು ವೋ ದುರಿತಂ　　　॥ ೭೧ ॥**

**ಕೂಷ್ಮಾಂಡದಾನರಮ್ಯಂ**
**ಕುವಲಯಖಂಡೈಶ್ಚ ಧಾತುಕಾಭದ್ರಂ ।**
**ಶರದಿವ ಹರಿಗತನಿದ್ರಂ ।**
**ದೀಪದಿನಂ ಹರತು ವೋ ದುರಿತಂ　　　॥ ೭೨ ॥**

**ದೀಪೋತ್ಸವೇ ಜನಿತಸರ್ವಜನಪ್ರಮೋದಾಂ ।**
**ಕುರ್ವಂತಿ ಯೇ ಸುಮನಸೋ ಬಲಿರಾಜಪೂಜಾಂ ।**

---

೭೧. ಮೇಘನಾದನೆಂಬ ದೈತ್ಯನನ್ನು ಧ್ವಂಸಮಾಡಿದುದೂ ದಶಾನನ ಮುಖವನ್ನು ಜ್ವಾಲಾಯುತವನ್ನಾಗಿ ಮಾಡಿದುದೂ ಆದ ರಾಮಾಯಣದಂತೆ, ಮೇಘಧ್ವನಿ ಮುಚ್ಚಿಹೋಗುವಂತೆ ಮಹಾಶಬ್ದ ಮಾಡುವವರೂ, ದಶದಿಕ್ಕುಗಳಲ್ಲಿಯೂ ಜಾಜ್ವಲ್ಯಮಾನತೆಯಿಂದ ಪ್ರಕಾಶಿಸುವವರೂ ಆದ ಸುಂದರಸ್ತ್ರೀಯರ ಕ್ರೀಡೆಯಿಂದ ಯುಕ್ತವಾದ ಈ ಕೌಮುದೀ ದೀಪೋತ್ಸವದ ಶುಭದಿನವು ನಿಮ್ಮ ಪಾಪಗಳನ್ನೆಲ್ಲಾ ಪರಿಹರಿಸಲಿ.

೭೨. ಕೂಶ್ಮಾಂಡಭೇದನದಿಂದ ರಮ್ಯವೆನಿಸಿದುದೂ, ನೈದಿಲೆಯ ಸಮೃದ್ಧಿಯಿಂದಲೂ ಹಂಸಪಕ್ಷಿಗಳಿಂದಲೂ ಶುಭಕರವೆನಿಸಿದುದೂ, ಶಯನದಿಂದ ಉತ್ಥಾನ ಮಾಡಿದ ಮಹಾವಿಷ್ಣುವನ್ನುಳ್ಳದೂ ಆದ ಶರದೃತುವಿನಂತೆ, ಕೂಶ್ಮಾಂಡರಚಿತ ಬಲೀಂದ್ರಾಕೃತಿಯುಳ್ಳದ್ದಾಗಿ ಮನೋಹರವಾಗಿರುವುದೂ, ನಾನಾ ಭೂಖಂಡಗಳಲ್ಲಿ ಆಚರಿಸಲ್ಪಟ್ಟು ಮಂಗಳಕರವಾದುದೂ, ಧಾತುವಸ್ತುಗಳಿಂದ ಸುಂದರವಾದುದೂ, ಇಂದ್ರಪ್ರಾರ್ಥನೆಗಾಗಿ ಜಾಗರಿತವಾದುದೂ, ಆದ ಕೌಮುದೀ ಜಾಗರೋತ್ಸವದ ದಿನವು ನಿಮ್ಮ ಪಾಪವನ್ನು ಪರಿಹರಿಸಲಿ.

೭೩. ಎಲೈ ರಾಜೇಂದ್ರ ! ಸರ್ವಜನಾನಂದಕರವಾಗುವಂತಹ ಈ ದೀಪೋತ್ಸವದಲ್ಲಿ ದೇವತೆಗಳ ಮತ್ತು ಬಲಿರಾಜನ ಪೂಜೆಯನ್ನು ಯಾರು ನೆರ

ದಾನೋಪಭೋಗಸುಖವೃದ್ಧಿಶತಾಕುಲಾನಾಂ ।
ಹರ್ಷೇಣ ವರ್ಷಮಿಹ ಪಾರ್ಥಿವ ಯಾತಿ ತೇಷಾಂ ॥ ೭೩ ॥

ಇತಿ ಶ್ರೀಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ದೀಪಾಲಿಕೋತ್ಸವವರ್ಣನಂ ನಾಮ ಚತ್ವಾರಿಂಶದುತ್ತರ ಶತತಮೋಽಧ್ಯಾಯಃ.



---

ವೇರಿಸುವರೋ ಅವರಿಗೆ ಆ ವರ್ಷವೆಲ್ಲಾ ದಾನಕೊಡುವುದು, ಸುಖಾನುಭವ ಮಾಡುವುದು, ಸೌಖ್ಯವೃದ್ಧಿ, ಇವು ನೂರಾರುಗಟ್ಟಲೆ ಲಭಿಸಿ ಹರ್ಷದಿಂದ ಸಾಗುವುದು.

ಇಲ್ಲಿಗೆ ಶ್ರೀಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ದೀಪಾಲಿಕೋತ್ಸವ ವರ್ಣನೆಯೆಂಬ ನೂರನಲವತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣ
## ಉತ್ತರಪರ್ವಣಿ
## ಏಕಚತ್ವಾರಿಂಶದುತ್ತರಶತತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಕಥಯಸ್ವ ಮಹಾಭಾಗ ಸರ್ವಜ್ಞೋ ಹ್ಯಸಿ ಯಾದವ ।
ಸರ್ವಕಾಮಾಪ್ತಯೇ ಕೃತ್ಯಂ ಕಥಂ ಶಾಂತಿಕಪೌಷ್ಟಿಕಂ ॥ ೧ ॥

॥ ಶ್ರೀಕೃಷ್ಣ ಉವಾಚ ॥

ಶ್ರೀಕಾಮಃ ಶಾಂತಿಕಾಮೋ ವಾ ಗ್ರಹಯಜ್ಞಂ ಸಮಾರಭೇತ್ ।
ದೃಷ್ಟ್ಯಾಯುಃಪುಷ್ಟಿಕಾಮೋ ವಾ ತಥೈವಾಭಿಚರನ್ಪುನಃ ॥ ೨ ॥

---

### ನೂರನಲವತ್ತೊಂದನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಪೂಜ್ಯನಾದ ಯದುಶ್ರೇಷ್ಠನೇ ! ನೀನು ಸರ್ವಜ್ಞನಲ್ಲವೇ ? ಸಮಸ್ತ ಇಷ್ಟಾರ್ಥಗಳೂ ಲಭಿಸುವುದಕ್ಕಾಗಿ ಶಾಂತಿಕ ಪೌಷ್ಟಿಕ ಯಾಗವನ್ನು ಹೇಗೆ ಮಾಡಬೇಕೆಂಬುದನ್ನು ಹೇಳು ಎಂದನು.

೨. ಕೃಷ್ಣನು ಹೇಳುತ್ತಾನೆ—ಸಂಪತ್ತನ್ನಪೇಕ್ಷಿಸುವವನೂ ಶಾಂತಿಯನ್ನಪೇಕ್ಷಿಸುವವನೂ ಗ್ರಹಗಳ ಪ್ರೀತ್ಯರ್ಥವಾಗಿ ಯಜ್ಞಗಳನ್ನು ಮಾಡಬೇಕು. ನೇತ್ರಪಾಟವವನ್ನಪೇಕ್ಷಿಸುವವನೂ, ಆಯುಷ್ಕಾಮನೂ, ಪುಷ್ಟಿಕಾಮನಾದವನೂ, ಅದೇರೀತಿ ಗ್ರಹಾರಾಧನ ಮಾಡಬೇಕು.

ಸರ್ವಶಾಸ್ತ್ರಾಣ್ಯನುಕ್ರಮ್ಯ ಸಂಕ್ಷಿಪ್ಯ ಗ್ರಂಥವಿಸ್ತರಂ ।
ಗ್ರಹಶಾಂತಿಂ ಪ್ರವಕ್ಷ್ಯಾಮಿ ಪುರಾಣಶ್ರುತಿಭಾಷಿತಾಂ ॥ ೩ ॥

ಪುಣ್ಯೇಽಹ್ನಿ ವಿಪ್ರಕಥಿತೇ ಕೃತ್ವಾ ಬ್ರಾಹ್ಮಣವಾಚನಂ ।
ಗ್ರಹಾನ್ ಗ್ರಹಾಧಿದೇವಾಂಶ್ಚ ಸ್ಥಾಪ್ಯ ಹೋಮಂ ಸಮಾರಭೇತ್ ॥ ೪ ॥

ಗ್ರಹಯಜ್ಞಸ್ತ್ರಿಧಾ ಪ್ರೋಕ್ತಃ ಪುರಾಣಶ್ರುತಿಕೋವಿದೈಃ ।
ಪ್ರಥಮೋಽಯುತಹೋಮಃ ಸ್ಯಾಲ್ಲಕ್ಷಹೋಮಸ್ತತಃ ಪರಂ ॥ ೫ ॥

ತೃತೀಯಃ ಕೋಟಿಹೋಮಸ್ತು ಸರ್ವಕಾಮಫಲಪ್ರದಃ ।
ಅಯುತೇನಾಹುತೀನಾಂ ಚ ನವಗ್ರಹಮಖಃ ಸ್ಮೃತಃ ॥ ೬ ॥

---

೩. ಸಮಸ್ತ ಶಾಸ್ತ್ರಗಳನ್ನು ಅನುಕ್ರಮದಿಂದ ಶೋಧಿಸಿ, ವಿಸ್ತಾರವಾಗಿದ್ದ ಅಂಶವನ್ನು ಸಂಕ್ಷೇಪಿಸಿ, ಪುರಾಣ ಮತ್ತು ವೇದಗಳಲ್ಲಿ ಹೇಳಿರುವ ಪ್ರಕಾರ, ಗ್ರಹಶಾಂತಿ ವಿಧಾನವನ್ನು ಹೇಳುತ್ತೇನೆ.

೪. ವಿಪ್ರೋತ್ತಮರು ನಿಷ್ಕರ್ಷಿಸಿದ ಶುಭದಿನಗಳಲ್ಲಿ ಬ್ರಾಹ್ಮಣರಿಂದ ಸ್ವಸ್ತಿ ಪುಣ್ಯಾಹ ವಾಚನ ಮಾಡಿಸಿ, ಆದಿತ್ಯಾದಿ ಗ್ರಹಗಳನ್ನು ಅಧಿದೇವತಾ ಪ್ರತ್ಯಧಿ ದೇವತಾ ಸಹಿತ ಆವಾಹನ ಮಾಡಿ, ಗ್ರಹಯಜ್ಞದ ಹೋಮವನ್ನು ಆರಂಭಿಸಬೇಕು.

೫. ವೇದಜ್ಞರೂ ಪುರಾಣವೇತ್ತರೂ ಗ್ರಹಯಜ್ಞವನ್ನು ಮೂರು ವಿಧವೆಂದು ಹೇಳಿದಾರೆ. ಅದರಲ್ಲಿ ಅಯುತ(೧೦ ಸಾವಿರ) ಹೋಮವೆಂಬುದು, ಒಂದು, ಲಕ್ಷ ಹೋಮವೆಂಬುದು ಇನ್ನೊಂದು.

೬. ಸಮಸ್ತ ಇಷ್ಟಾರ್ಥಗಳನ್ನೂ ಕೊಡತಕ್ಕ ಕೋಟಿ ಹೋಮವು ಮೂರನೆಯದು. ಅಯುತ ಸಂಖ್ಯೆಯ ಆಹುತಿಯ ಹೋಮವನ್ನು ನವಗ್ರಮಖವೆಂದು ತಿಳಿಯಬೇಕು.

**ತಸ್ಯ ತಾವದ್ವಿಧಿಂ ವಕ್ಷ್ಯೇ ಪುರಾಣಶ್ರುತಿಭಾಷಿತಂ ।**
**ಗರ್ತಸ್ಯೋತ್ತರಪೂರ್ವೇಣ ವಿತಸ್ತಿದ್ವಯವಿಸ್ತೃತಾಂ　　॥ ೭ ॥**

**ಕುರ್ಯಾದ್ವಿಧಾನತೋ ವೇದಿಂ ವಿತಸ್ತ್ಯುಚ್ಛ್ರಯಸಂಯುತಾಂ ।**
**ಸಂಸ್ಥಾಪನಾಯ ದೇವಾನಾಂ ಚತುರಸ್ರಾಮುದಕ್ಪ್ಲವಾಂ　　॥ ೮ ॥**

**ಅಗ್ನಿಪ್ರಣಯನಂ ಕೃತ್ವಾ ತಸ್ಯಾಮಾವಾಹಯೇತ್ಸುರಾನ್ ।**
**ದೇವನಾಂ ತತ್ರ ಸಂಸ್ಥಾಪ್ಯಾ ವಿಂಶತಿರ್ದ್ವಾದಶಾಧಿಕಾ　　॥ ೯ ॥**

**ಸೂರ್ಯಃ ಸೋಮೋ ಮಹೀಪುತ್ರೋ ಬುಧೋ ಜೀವಃ ಸಿತೋರ್ಕಜಃ।**
**ರಾಹು ಕೇತುರಿತಿ ಪ್ರೋಕ್ತಾ ಗ್ರಹಾ ಲೋಕಹಿತಾವಹಾಃ　　॥ ೧೦ ॥**

---

೭. ಪುರಾಣದಲ್ಲೂ ವೇದಗಳಲ್ಲೂ ಹೇಳಿರುವ ಪ್ರಕಾರ ಗ್ರಹಯಜ್ಞದ ವಿಧಿಯನ್ನು ಹೇಳುತ್ತೇನೆ. ಉತ್ತರ ಮತ್ತು ಪೂರ್ವ ದಿಕ್ಕುಗಳಲ್ಲಿ ಎರಡು ವಿತಸ್ತಿ ಉದ್ದವೂ (ವಿಸ್ತಾರವು) ಉಳ್ಳ ಯಜ್ಞಕುಂಡವನ್ನು ಒಂದು ವಿತಸ್ತಿ ಎತ್ತರವಾಗಿರುವಂತೆ ರಚಿಸಬೇಕು. (ವಿತಸ್ತಿ—ಹನ್ನೆರಡು ಅಂಗುಲ)

೮. ಗ್ರಹದೇವತೆಗಳನ್ನು ಸ್ಥಾಪಿಸುವುದಕ್ಕಾಗಿ ಚಚ್ಚೌಕನಾಗಿಯೂ ಉತ್ತರ ದಿಕ್ಕಿಗೆ ಇಳಿಜಾರಾಗಿಯೂ ಇರುವಂತೆ ವಿಧಿಪ್ರಕಾರ ವೇದಿಕೆಯನ್ನು ನಿರ್ಮಿಸಬೇಕು. ಆ ವೇದಿಕೆಯು ಒಂದು ವಿತಸ್ತಿ ಎತ್ತರವಾಗಿರಬೇಕು.

೯. ಅಗ್ನಿಯನ್ನು ಪ್ರಣಯನ ಮಾಡಿ, ಅದರಲ್ಲಿ ದೇವತೆಗಳನ್ನು ಆವಾಹಿಸಬೇಕು. ಇಪ್ಪತ್ತು ದೇವತೆಗಳನ್ನೂ ಹನ್ನೆರಡು ಅಧಿಕ ದೇವತೆಗಳನ್ನು ಸ್ಥಾಪಿಸಬೇಕು.

೧೦. ಸೂರ್ಯ, ಚಂದ್ರ, ಅಂಗಾರಕ, ಬುಧ, ಬೃಹಸ್ಪತಿ, ಶುಕ್ರ, ಶನಿ, ರಾಹು, ಕೇತು, ಇವರು ಲೋಕಕ್ಕೆ ಹಿತವನ್ನುಂಟುಮಾಡುವ ನವಗ್ರಹಗಳಾಗಿದ್ದಾರೆ.

ತಾಮ್ರಕಾತ್ಸ್ಫಟಿಕಾದ್ರಕ್ತಚಂದನಾತ್ಸ್ವರ್ಣಜಾವುಭೌ ।
ರಜತಾದಾಯಸಾಚ್ಚೈವ ಗ್ರಹಾಃ ಕಾರ್ಯಾಃ ಕ್ರಮಾದಮೀ ॥ ೧೧ ॥

ಮಧ್ಯೇ ತು ಭಾಸ್ಕರಂ ವಿದ್ಯಾಲ್ಲೋಹಿತಂ ದಕ್ಷಿಣೇನ ತು ।
ಉತ್ತರೇಣ ಗುರುಂ ವಿದ್ಯಾದ್ಬುಧಂ ಪೂರ್ವೋತ್ತರೇಣ ತು ॥ ೧೨ ॥

ಪೂರ್ವೇಣ ಭಾರ್ಗವಂ ವಿದ್ಯಾತ್ಸೋಮಂ ದಕ್ಷಿಣಪೂರ್ವಕೇ ।
ಪಶ್ಚಿಮೋತ್ತರತಃ ಕೇತುಂ ಸ್ಥಾಪಯೇಚ್ಛುಕ್ಲತಂಡುಲೈಃ ॥ ೧೩ ॥

ರಾಜಾಮಾತ್ಯಾನ್ಮಹಾರಾಜ ತಂಡುಲೈಃ ಸ್ಥಾಪಯೇದಥ ।
ಭಾಸ್ಕರಸ್ಯೇಶ್ವರಂ ವಿದ್ಯಾದುಮಾಂ ಚ ಶಶಿನಸ್ತಥಾ ॥ ೧೪ ॥

---

೧೧. ಈ ಗ್ರಹಗಳ ಪ್ರತಿಮೆಯನ್ನು ಮಾಡಿಸುವುದಾದರೆ ಸೂರ್ಯಪ್ರತಿಮೆಗೆ ತಾಮ್ರ, ಚಂದ್ರ ಪ್ರತಿಮೆಗೆ ಸ್ಫಟಿಕ, ಅಂಗಾರಕ ಪ್ರತಿಮೆಗೆ ರಕ್ತಚಂದನ, ಬುಧ ಮತ್ತು ಬೃಹಸ್ಪತಿ ಈ ಎರಡು ಪ್ರತಿಮೆಗೂ ಚಿನ್ನ, ಶುಕ್ರ ಪ್ರತಿಮೆಗೆ ಬೆಳ್ಳಿ, ಶನೈಶ್ಚರ ಪ್ರತಿಮೆಗೆ ಕಬ್ಬಿಣ, ಇವುಗಳನ್ನು ಪಯೋಗಿಸಿ ಮಾಡಿಸಬೇಕು.

೧೨. ಅಯ್ಯಾ ಮಹಾರಾಜನೇ ! ಆ ವೇದಿಕೆಯ ಮಧ್ಯದಲ್ಲಿ ಸೂರ್ಯಗ್ರಹವನ್ನೂ, ದಕ್ಷಿಣ ದಿಕ್ಕಿನಲ್ಲಿ ಅಂಗಾರಕ ಗ್ರಹವನ್ನೂ, ಉತ್ತರ ದಿಕ್ಕಿನಲ್ಲಿ ಬೃಹಸ್ಪತಿಯನ್ನೂ, ಈಶಾನ್ಯ ದಿಕ್ಕಿನಲ್ಲಿ ಬುಧ ಗ್ರಹವನ್ನೂ ಸ್ಥಾಪಿಸಬೇಕು.

೧೩. ಪೂರ್ವದಿಕ್ಕಿನಲ್ಲಿ ಶುಕ್ರಗ್ರಹವನ್ನೂ, ಆಗ್ನೇಯ ದಿಕ್ಕಿನಲ್ಲಿ ಚಂದ್ರಗ್ರಹವನ್ನೂ, ವಾಯುವ್ಯದಲ್ಲಿ ಕೇತುಗ್ರಹವನ್ನೂ, ನೈಋತ್ಯದಲ್ಲಿ ರಾಹು ಗ್ರಹವನ್ನೂ, ಸ್ಥಾಪಿಸಬೇಕು.

೧೪. ಮೊದಲು ಶುಭ್ರವಾದ ಅಕ್ಕಿಯನ್ನು ಹರಡಿ, ಅದರ ಮೇಲೆ ಗ್ರಹರಾಜ (ಸೂರ್ಯ) ಅಮಾತ್ಯ (ಗುರು) ಮುಂತಾದ ಗ್ರಹಗಳನ್ನು ಸ್ಥಾಪಿಸಬೇಕು. ಭಾಸ್ಕರನನ್ನೇ ಪರಮೇಶ್ವರನೆಂದೂ, ಚಂದ್ರನನ್ನೇ ಪಾರ್ವತೀ ದೇವಿಯೆಂದೂ, ತಿಳಿಯಬೇಕು.

ಸ್ಕಂದಮಂಗಾರಕಸ್ಯಾಪಿ ಬುಧಸ್ಯ ಚ ತಥಾ ಹರಿಂ ।
ಬ್ರಹ್ಮಾಣಂ ಚ ಗುರೋರ್ವಿದ್ಯಾಚ್ಛುಕ್ರಸ್ಯಾಪಿ ಶಚೀಪತಿಂ ॥ ೧೫ ॥

ಶನೈಶ್ಚರಸ್ಯ ತು ಯಮಂ ರಾಹೋಃ ಕಾಲಂ ತಥೈವ ಚ ।
ಕೇತೋಸ್ತು ಚಿತ್ರಗುಪ್ತಂ ತು ಸರ್ವೇಷಾಮೇವ ದೇವತಾಃ ॥ ೧೬ ॥

ಅಗ್ನಿರಾಪಃ ಕ್ಷಿತಿರ್ವಿಷ್ಣುರಿಂದ್ರಃ ಸೌವರ್ಣದೇವತಾಃ ।
ಪ್ರಜಾಪತಿಶ್ಚ ಸೂರ್ಯಶ್ಚ ಬ್ರಹ್ಮಾ ಪ್ರತ್ಯಧಿದೇವತಾಃ ॥ ೧೭ ॥

ವಿನಾಯಕಂ ತಥಾ ದುರ್ಗಾಂ ವಾಯುಮಾಕಾಶಮೇವ ಚ ।
ಸಾವಿತ್ರೀಂ ಚ ತಥಾ ಲಕ್ಷ್ಮೀಮುಮಾಂ ಚ ಸಹಭರ್ತೃಕಾಂ ॥ ೧೮ ॥

ಆವಾಹಯೇದ್ವ್ಯಾಹೃತಿಭಿಸ್ತಥೈವಾಶ್ವಿಕುಮಾರಕೌ ।
ಸಂಸ್ಮರೇದ್ರಕ್ತಮಾದಿತ್ಯಮಂಗಾರಕಸಮನ್ವಿತಂ ॥ ೧೯ ॥

---

೧೫. ಅಂಗಾರಕನನ್ನು ಷಣ್ಮುಖನೆಂದೂ, ಬುಧನನ್ನು ಮಹಾವಿಷ್ಣುವೆಂದೂ, ಬೃಹಸ್ಪತಿಯನ್ನು ಬ್ರಹ್ಮನೆಂದೂ, ಶುಕ್ರನನ್ನು ಇಂದ್ರನೆಂದೂ ತಿಳಿಯಬೇಕು.

೧೬. ಶನೈಶ್ಚರನನ್ನು ಯಮನೆಂದೂ, ರಾಹುವನ್ನು ಕಾಲಸ್ವರೂಪನೆಂದೂ, ಕೇತುವನ್ನು ಚಿತ್ರಗುಪ್ತರೆಂದೂ, ಈ ಪ್ರಕಾರ ಗ್ರಹಗಳೆಲ್ಲಾ ನಾನಾ ದೇವತೆಗಳೆಂದು ಭಾವಿಸಬೇಕು.

೧೭. ಅಗ್ನಿ ಅಪ್ ಭೂಮಿ ಇವುಗಳಿಗೆ ಕ್ರಮವಾಗಿ ವಿಷ್ಣು ಇಂದ್ರ ಸೌವರ್ಣ ಎಂಬವರು ದೇವತೆಗಳು, ಪ್ರಜಾಪತಿ ಸೂರ್ಯ ಬ್ರಹ್ಮ ಇವರು ಪ್ರತ್ಯಧಿದೇವತೆಗಳು.

೧೮. ವಿನಾಯಕ ದುರ್ಗಾ ವಾಯು ಆಕಾಶ ಈ ದೇವತೆಗಳನ್ನೂ ಪತಿಸಮೇತರಾದ ಸಾವಿತ್ರೀ ಪಾರ್ವತೀ ಲಕ್ಷ್ಮಿ ಇವರುಗಳನ್ನೂ ಆವಾಹನಮಾಡಬೇಕು.

೧೯. ಅಶ್ವಿನೀದೇವತೆಗಳನ್ನು ವ್ಯಾಹೃತಿಮಂತ್ರಪುರಸ್ಸರವಾಗಿ ಆವಾಹಿಸಬೇಕು. (ಓ ಭೂಃ ಭುವಃ ಸುವಃ ಇವು ವ್ಯಾಹೃತಿ ಮಂತ್ರ.)

**ಸೋಮಶುಕ್ರೌ ಯಥಾಶ್ವೇತೌ ಬುಧಜೀವೌ ಚ ಪಿಂಗಲೌ ।**
**ಮಂದರಾಹೂ ತಥಾ ಕೃಷ್ಣೌ ಧೂಮ್ರಂ ಕೇತುಗುಣಂ ವಿದುಃ ॥ ೨೦ ॥**

**ಗ್ರಹವರ್ಣಾನಿ ದೇಯಾನಿ ವಾಸಾಂಸಿ ಕುಸುಮಾನಿ ಚ ।**
**ಗಂಧಾಶ್ಚ ಬಲಯಶ್ಚೈವ ಧೂಪಾ ಗುಗ್ಗುಲಪೂರ್ವಕಾಃ ॥ ೨೧ ॥**

**ಗುಡೌದನಂ ರವೇರ್ದದ್ಯಾತ್ಸೋಮಾಯ ಘೃತಪಾಯಸಂ ।**
**ಅಂಗಾರಕಾಯ ಸಂಯಾವಂ ಬುಧಾಯ ಕ್ಷೀರಷಿಷ್ಟಕಂ ॥ ೨೨ ॥**

**ದಧ್ಯನ್ನಂ ಗುರವೇ ದದ್ಯಾಚ್ಛುಕ್ರಾಯ ತು ಘೃತೌದನಂ ।**
**ಶನೈಶ್ಚರಾಯ ಕೃಶರಂ ಮೇಷಮಾಂಸಂ ತು ರಾಹವೇ ॥ ೨೩ ॥**

---

೨೦. ಚಂದ್ರನೂ ಶುಕ್ರನೂ ಬಿಳಿಯ ಬಣ್ಣವಾಗಿರುವರೆಂದೂ, ಬುಧ ಗುರು ಇಬ್ಬರೂ ಹೊಂಬಣ್ಣವಾಗಿರುವರೆಂದೂ, ಶನಿ ರಾಹು ಈ ಇಬ್ಬರೂ ಕೃಷ್ಣ ವರ್ಣವಾಗಿರುವರೆಂದೂ, ಕೇತುವು ಧೂಮ್ರವರ್ಣವಾಗಿರುವನೆಂದೂ ತಿಳಿಯ ಬೇಕು.

೨೧. ಗ್ರಹಗಳು ಯಾವ ವರ್ಣವೋ ಅವರಿಗೆ ಧರಿಸುವ ವಸ್ತ್ರವೂ ಅದೇ ಬಣ್ಣವಾಗಿರಬೇಕು. ಅವರಿಗೆ ಅದೇ ಬಣ್ಣದ ಪುಷ್ಪಗಳನ್ನೇ ಪೂಜಿಸಬೇಕು. ಮತ್ತು ಪುಷ್ಪ ಗಂಧ ಗುಗ್ಗುಲಧೂಪ ಪೂರ್ವಕವಾಗಿ ಬಲಿಗಳನ್ನು ಸಮರ್ಪಿಸ ಬೇಕು.

೨೨. ಸೂರ್ಯನಿಗೆ ಗುಡೌದನವನ್ನೂ, ಚಂದ್ರನಿಗೆ ಘೃತಸಹಿತವಾದ ಪಾಯಸವನ್ನೂ, ಅಂಗಾರಕಗ್ರಹಕ್ಕೆ ಸಜ್ಜಿಗೆಯನ್ನೂ, ಬುಧನಿಗೆ ಹಾಲು ಮಿಶ್ರವಾದ ಹಿಟ್ಟನ್ನೂ, ಗುರುವಿಗೆ ಮೊಸರು ಅನ್ನವನ್ನೂ, ಶುಕ್ರನಿಗೆ ಘೃತಾನ್ನ ವನ್ನೂ.

೨೩. ಶನೈಶ್ಚರನಿಗೆ ಎಳ್ಳುಹುಡಿ ಅನ್ನವನ್ನೂ, ರಾಹುವಿಗೆ ಕುರಿಮಾಂಸ ವನ್ನೂ, ಕೇತುವಿಗೆ ಬಣ್ಣಬಣ್ಣದ ಅನ್ನವನ್ನೂ, ಅದರ ಜತೆಗೆ ಸಮಸ್ತ ಭಕ್ಷ್ಯ ಗಳನ್ನೂ ನಿವೇದನ ಮಾಡಬೇಕು.

**ಚಿತ್ರೋದನಂ ಕೇತವೇ ಚ ಸರ್ವಾನ್ಭಕ್ಷ್ಯೈರಥಾರ್ಚಯೇತ್ ।**
**ಪ್ರಾಗುತ್ತರೇಣ ತಸ್ಮಾಚ್ಚ ದಧ್ಯಕ್ಷತವಿಭೂಷಿತಂ ॥ ೨೪ ॥**

**ಚೂತಪಲ್ಲವಸಂಪನ್ನಂ ಫಲವಸ್ತ್ರಯುಗಾನ್ವಿತಂ ।**
**ಪಂಚರತ್ನಸಮಾಯುಕ್ತಂ ಪಂಚಭಂಗಯುತಂ ತಥಾ ॥ ೨೫ ॥**

**ಸ್ಥಾಪಯೇದವ್ರಣಂ ಕುಂಭಂ ವರುಣಂ ತತ್ರ ವಿನ್ಯಸೇತ್ ।**
**ಗಂಗಾದ್ಯಾಃ ಸರಿತಃ ಸರ್ವಾಃ ಸಮುದ್ರಾಶ್ಚ ಸರಾಂಸಿ ಚ ॥ ೨೬ ॥**

**ಗಜಾಶ್ವರಥ್ಯಾವಲ್ಮೀಕಾತ್ಸಂಗಮಾದ್ಧ್ರದಗೋಕುಲಾತ್ ।**
**ಮೃದಮಾನೀಯ ರಾಜೇಂದ್ರ ಸರ್ವೌಷಧಿಜಲಾನ್ವಿತಾಂ ॥ ೨೭ ॥**

**ಸ್ನಾನಾರ್ಥಂ ವಿನ್ಯಸೇತ್ತತ್ರ ಯಜಮಾನಸ್ಯ ಧರ್ಮವಿತ್ ।**
**ಸರ್ವೇ ಸಮುದ್ರಾಃ ಸರಿತಃ ಸರಃ ಪ್ರಸ್ರವಣಾನಿ ಚ ॥ ೨೮ ॥**

---

೨೪. ವೇದಿಯ ಈಶಾನ್ಯದಿಕ್ಕಿನಲ್ಲಿ ಮಾವಿನ ಚಿಗುರಿನಿಂದ ಅಲಂಕೃತವಾದ ಕಲಶವನ್ನು ಇಟ್ಟು ಅದರಮೇಲೆ ತೆಂಗಿನಕಾಯಿ, ಒಂದು ಜತೆ ವಸ್ತ್ರ, ಇವನ್ನು ಇಡಬೇಕು.

೨೫. ಅದರೊಳಗೆ ಪಂಚರತ್ನವನ್ನು ಹಾಕಿ, ಪಂಚಭಂಗ(?) ಸಂಯುತವಾದ ಆ ಕಲಶದಲ್ಲಿ ವರುಣ ಪ್ರತಿಮೆಯನ್ನು ನ್ಯಾಸಮಾಡಿ ವರುಣನನ್ನು ಅವಾಹಿಸಬೇಕು.

೨೬. ಧರ್ಮಜ್ಞನಾದವನು ಅದರಲ್ಲಿ ಗಂಗಾ ಮುಂತಾದ ನದೀಜಲ ಸಮುದ್ರೋದಕ, ಸರೋವರ ತೀರ್ಥ, ಇವುಗಳಲ್ಲಿ ಸಾಧ್ಯವಾದುವನ್ನು ತಂದುಹಾಕಬೇಕು.

೨೭-೨೮. ಗಜಶಾಲೆ, ಅಶ್ವಶಾಲೆ, ಹುತ್ತ, ರಾಜಬೀದಿ, ನದೀಸಂಗಮ, ಮಡು, ಗೋಶಾಲೆ, ಇವುಗಳ ಮೃತ್ತಿಕೆಗಳನ್ನೂ ; ಮತ್ತು ಸಮಸ್ತ ಮೂಲಿಕೆಗಳನ್ನೂ ಆ ಕಲಶಕ್ಕೆ ಹಾಕಿ, ಯಜಮಾನನ ಸ್ನಾನಾರ್ಥವಾಗಿ ಸಿದ್ಧಮಾಡಬೇಕು.

ಆಯಾಂತು ಯಜಮಾನಸ್ಯ ದುರಿತಕ್ಷಯಕಾರಕಾಃ ।
ಏವಮಾವಾಹಯಿತ್ವಾ ತಾನ್ಸರ್ವಾನ್ಪ್ರತಿಸತ್ತಮ ॥ ೨೯ ॥

ಹೋಮಂ ಸಮಾರಭೇತ್ಸರ್ಪಿರ್ಯವವ್ರೀಹಿತಿಲಾದಿನಾ ।
ಅರ್ಕಃ ಪಲಾಶಖದಿರೌ ಹ್ಯಪಾಮಾರ್ಗೋಽಥ ಪಿಪ್ಪಲಃ ॥ ೩೦ ॥

ಉದುಂಬರಶಮೀದೂರ್ವಾಕುಶಾಶ್ಚ ಸಮಿಧಃ ಕ್ರಮಾತ್ ।
ಏಕೈಕಸ್ಯ ಚಾಷ್ಟಶತಮಷ್ಟಾವಿಂಶತಿ ವಾ ಪುನಃ ॥ ೩೧ ॥

ಹೋತವ್ಯಾ ಮಧುಸರ್ಪಿರ್ಭ್ಯಾಂ ದಧ್ನಾ ವಾ ಪಾಯಸೇನ ವಾ ।
ಪ್ರಾದೇಶಮಾತ್ರಾ ಋಜವೋ ವಿಶಾಖಾ ವಿಫಲಾಃ ಶುಭಾಃ ॥ ೩೨ ॥

ಕಲ್ಪ್ಯಂತೇ ಸಮಿಧಃ ಪ್ರಾಜ್ಞೈಃ ಸರ್ವಕರ್ಮಸು ಸರ್ವದಾ ।
ದೇವಾನಾಮಪಿ ಸರ್ವೇಷಾಮುಪಾಂಶುಪರಮಾರ್ಥವಿತ್ ॥ ೩೩ ॥

---

೨೯. ಎಲ್ಲಾ ಸಮುದ್ರಗಳು, ನದಿಗಳು, ಸರೋವರಗಳು, ಜಲಪಾತಗಳು, ಇವುಗಳ ಜಲಗಳೆಲ್ಲ ಈ ಕಲಶದಲ್ಲಿ ಬಂದು ನೆಲಸಿ ಯಜಮಾನನ ಪಾಪಗಳನ್ನು ಹೋಗಲಾಡಿಸುವವಾಗಲಿ ಎಂಬ ಅರ್ಥವುಳ್ಳ ಮಂತ್ರವನ್ನು ಹೇಳಿ ಅವುಗಳನ್ನೆಲ್ಲಾ ಅವಾಹಿಸಬೇಕು.

೩೦. ಘೃತ, ಯವ, ಭತ್ತ, ಎಳ್ಳು, ಈ ಧಾನ್ಯಗಳಿಂದಲೂ, ಎಕ್ಕ, ಮುತ್ತಗ, ಕಗ್ಗಲಿ, ಉತ್ತರಣೆ, ಅಶ್ವತ್ಥ,

೩೧-೩೨. ಅತ್ತಿ ಬನ್ನಿ ಇವುಗಳ ಸಮಿತ್ತು, ಗರಿಕೆಹುಲ್ಲು, ದರ್ಭೆ, ಈ ಒಂಭತ್ತು ವಸ್ತುಗಳನ್ನು ಕ್ರಮವಾಗಿ ಒಂಬತ್ತು ಗ್ರಹಗಳ ಹೋಮಗಳಲ್ಲಿ ಸಮಿತ್ತುಗಳಾಗಿ ಮಾಡಿಕೊಂಡು ಒಂದೊಂದು ಗ್ರಹಕ್ಕೂ ನೂರೆಂಟು ಅಥವಾ ಇಪ್ಪತ್ತೆಂಟು ಆಹುತಿಗಳನ್ನು ಹೋಮ ಮಾಡಬೇಕು. ಹೋಮಕ್ಕೆ ಜೇನುತುಪ್ಪ, ಘೃತ, ಇವುಗಳಿಂದಾಗಲಿ ಮೊಸರು, ಪಾಯಸ, ಇವುಗಳಿಂದಾಗಲಿ ಆಹುತಿ ಕೊಟ್ಟು ಹೋಮ ಮಾಡಬೇಕು.

೩೩. ಪ್ರಾಜ್ಞರು ಈ ಎಲ್ಲ ಕರ್ಮಗಳಲ್ಲಿಯೂ ಒಂದು ಚೋಟು ಉದ್ದವಾಗಿ ಡೊಂಕಿಲ್ಲದೆ ಸೇರವೂ ಕವಲು ಇಲ್ಲದೆಯೂ ಇರುವ ಸಮಿತ್ತುಗಳನ್ನು ಶುಭಕರವಾಗಿರುವಂತೆ ಏರ್ಪಡಿಸುತ್ತಾರೆ.

**ಸ್ವೇನ ಸ್ವೇನೈವ ಮಂತ್ರೇಣ ಹೋತವ್ಯಾಃ ಸಮಿಧಃ ಪೃಥಕ್ ।**
**ಆಕೃಷ್ಣೇನ ಇಮಂ ದೇವಾ ಅಗ್ನಿರ್ಮೂರ್ಧಾದಿವಃ ಕ್ರಮಾತ್ ॥೩೪॥**

**ಉದ್ಬುಧ್ಯಸ್ವೇತಿ ಬೋಧ್ಯಶ್ಚ ಯಥಾಸಂಖ್ಯಮುದಾಹೃತಾಃ ।**
**ಬೃಹಸ್ಪತೇ ಅತಿಯದಸ್ತಥೈವಾನ್ನಾತ್ಪರಿಸ್ನುತಃ ॥ ೩೫ ॥**

**ಶನ್ನೋದೇವೀತಿ ಚ ಕಯಾ ಕೇತುಂಕೃಣ್ವನ್ನಿತೀತಿ ಚ ।**
**ಹೋತವ್ಯಂ ಯದ್ವದಾಜ್ಯಂ ತು ಚರುಂ ಭಕ್ಷ್ಯಾಣಿ ವಾ ಪುನಃ ॥ ೩೬ ॥**

**ಮಂತ್ರೈರ್ದಶಾಹುತೀರ್ದತ್ವಾ ಹೋಮೋ ವ್ಯಾಹೃತಿಭಿಸ್ತತಃ ।**
**ಉದಙ್ಮುಖಾಃ ಪ್ರಾಙ್ಮುಖಾಶ್ಚ ಕುರ್ಯುರ್ಬ್ರಾಹ್ಮಣಪುಂಗವಾಃ ॥೩೭॥**

---

೩೪. 'ಉಪಾಂಶು' ಮಂತ್ರದ ಪರಮಾರ್ಥವನ್ನು ತಿಳಿದವನು ಎಲ್ಲ ಗ್ರಹಗಳಿಗೂ ಆಯಾ ಗ್ರಹಗಳ ಅಧಿದೇವತಾ ಪ್ರತ್ಯಧಿದೇವತಾ ಮಂತ್ರಗಳಿಂದ ಪ್ರತ್ಯೇಕಪ್ರತ್ಯೇಕವಾಗಿ ಸಮಿತ್ತುಗಳನ್ನು ಹೋಮಮಾಡಬೇಕು. "ಆಕೃಷ್ಣೇನರಜಸಾ" "ಇಮಂದೇವಾ" "ಅಗ್ನಿರ್ಮೂರ್ಧಾ ದಿವಃ ಕಕುತ್" ಈ ಮಂತ್ರಗಳನ್ನು ಕ್ರಮವಾಗಿ ಸೂರ್ಯ, ಚಂದ್ರ, ಅಂಗಾರಕ, ಈ ಗ್ರಹಗಳ ಆರಾಧನೆ ಮತ್ತು ಹೋಮಾದಿಗಳಲ್ಲಿ ಪಠಿಸಬೇಕು.

೩೫. "ಉದ್ಬುಧ್ಯಸ್ವಾಗ್ನೇ" ಎಂಬ ಮಂತ್ರವನ್ನು ಬುಧಗ್ರಹಾರಾಧನ ಹೋಮಾದಿಗಳಿಗೂ "ಬೃಹಸ್ಪತೇ ಅತಿಯದರ್ಯಃ" ಎಂಬ ಮಂತ್ರವನ್ನು ಗುರು ಗ್ರಹರಾಧನ ಹೋಮಾದಿಗಳಿಗೂ, 'ಅನ್ನಾತ್ಪರಿಸ್ನುತ' ಎಂಬ ಮಂತ್ರವನ್ನು ಶುಕ್ರಗ್ರಹ ಪೂಜಾಹೋಮಾದಿಗಳಿಗೂ.

೩೬. 'ಶಂನೋ ದೇವೀ' ಎಂಬ ಮಂತ್ರವನ್ನು ಶನಿಗ್ರಹ ಪೂಜಾ ಹೋಮಾದಿಗಳಿಗೂ 'ಕಯಾನಶ್ಚಿತ್ರ ಆಭುವತ್' ಎಂಬುವನ್ನು ರಾಹುಗ್ರಹ ಪೂಜಾಹೋಮಾದಿಗಳಿಗೂ "ಕೇತುಂ ಕೃಣ್ವನ್ನ ಕೇತವೇ" ಎಂಬ ಮಂತ್ರವನ್ನು ಕೇತುಗ್ರಹ ಪೂಜಾಹೋಮಾದಿಗಳಿಗೂ ಹೇಳಿ, ಆಜ್ಯ, ಚರು, ಭಕ್ಷ್ಯ, ಸಮಿತ್ತುಗಳ ಸಮೇತ ಹತ್ತು ಆಹುತಿಗಳನ್ನು ಕೊಡಬೇಕು.

೩೭. ಮಂತ್ರಜ್ಞರಾದ ಬ್ರಾಹ್ಮಣಶ್ರೇಷ್ಠರು ಉತ್ತರಾಭಿಮುಖವಾಗಿಯೋ ಪೂರ್ವಾಭಿಮುಖವಾಗಿಯೋ ಕುಳಿತು, ವ್ಯಾಹೃತಿ ಮಂತ್ರಪುರಸ್ಸರವಾಗಿ ಈ ಹೋಮಗಳನ್ನು ಮಾಡುವುದು ವಿಹಿತವಾದುದು. ಪ್ರತಿ ದೇವತೆಗೂ ಚರು ಹೋಮವನ್ನು ಪ್ರತ್ಯೇಕಪ್ರತ್ಯೇಕವಾಗಿ ಮಾಡಬೇಕು.

ಮಂತ್ರವಂತಸ್ತು ಕರ್ತವ್ಯಾಶ್ಚರವಃ ಪ್ರತಿದೈವತಂ ।
ಆಪ್ರೋರಾಜೇತಿ ರುದ್ರಸ್ಯ ಬಲಿಹೋಮಂ ಸಮಾರಭೇತ್ ॥ ೩೮ ॥

ಅಪ್ರೋ ಹಿಷ್ಟೇತ್ಯುಮಾಯಾಸ್ತು ಶ್ಯೇನೇತಿ ಸ್ವಾಮಿನಸ್ತಥಾ ।
ವಿಷ್ಣೋರಿದಂ ವಿಷ್ಣುರಿತಿ ಸ್ವಮಿಚ್ಛೇತಿ ಸ್ವಯಂಭುವಃ ॥ ೩೯ ॥

ಇಂದ್ರಾದಿದೇವತಾನಾಂ ತು ಇಂದ್ರಾಯ ಜುಹುಯಾತ್ಸ್ವನಃ ।
ನವಾ ಮಮಸ್ಯಾಯಂ ಗೌಶ್ಚೀತೇವಂ ಹೋಮಃ ಪ್ರಕೀರ್ತಿತಃ ॥ ೪೦ ॥

ಕಾಲಸ್ಯ ಬ್ರಹ್ಮಜಜ್ಞಾನಮಿತಿ ಮಂತ್ರಃ ಪ್ರಶಸ್ಯತೇ ।
ಚಿತ್ರಗುಪ್ತಸ್ಯ ವಾ ಜಾತ ಪೌರಾಣಿಕಾ ವಿದುರ್ಬುಧಾಃ ॥ ೪೧ ॥

---

೩೮. 'ಆಪ್ರೋರಾಜಾ' ಎಂಬ ಮಂತ್ರಪೂರ್ವಕವಾಗಿ ರುದ್ರ ಬಲಿ ಹೋಮವನ್ನು ಪ್ರಾರಂಭಿಸಬೇಕು. "ಆಪ್ರೋಹಿಷ್ಟಾ" ಎಂಬ ಮಂತ್ರದಿಂದ ಉಮಾದೇವೀ ಬಲಿ ಹೋಮವನ್ನು ಮಾಡಬೇಕು.

೩೯. "ಶ್ಯೇನಾ" ಎಂಬ ಮಂತ್ರದಿಂದ ಸ್ವಾಮಿಗೂ (ಕುಮಾರಸ್ವಾಮಿ) 'ಇದಂ ವಿಷ್ಣುರ್ವಿಚಕ್ರಮೇ' ಎಂಬ ಮಂತ್ರದಿಂದ ವಿಷ್ಣುವಿಗೂ, 'ಸ್ವಮಿಚ್ಛ' ಎಂಬ .ಮಂತ್ರದಿಂದ ಬ್ರಹ್ಮನಿಗೂ 'ಇಂದ್ರಪ್ರೋ' 'ಅಗ್ನಿಂದೂತಂ' "ಯಮಾಯಸೋಮಂ."

೪೦. ಇತ್ಯಾದಿ ಮಂತ್ರಗಳಿಂದ ಇಂದ್ರ, ಅಗ್ನಿ, ಯಮ, ಮೊದಲಾದ ದಿಕ್ಪಾಲಕರಿಗೂ ಆಹುತಿಗಳನ್ನು ಕೊಡಬೇಕು. 'ಆಯಂಗೌಃಪೃಶ್ನಿರಕ್ರಮೀತ್' ಎಂಬ ಮಂತ್ರದಿಂದ ಕಾಲಸಂಜ್ಞಕನಾದ ರಾಹುವಿಗೂ.

೪೧. 'ಬ್ರಹ್ಮಜಜ್ಞಾನಂ ಎಂಬ ಮಂತ್ರದಿಂದಚಿತ್ರಗುಪ್ತ ಸಂಜ್ಞಕನಾದ ಕೇತುವಿಗೂ ಆಹುತಿಕೊಡುವುದು ಪ್ರಶಸ್ತವೆಂಬದಾಗಿ ಪ್ರಾಜ್ಞರಾದ ಪೌರಾಣಿಕರು ಭಾವಿಸಿದ್ದಾರೆ.

" ಅಗ್ನಿಂ ದೂತಂ ವೃಣೀಮಹೇ " ಇತಿ ವಹ್ನೇರುದಾಹೃತಃ ।
ಇಂದ್ರಂ ಯಮಂ ವರುಣಮಿತ್ಯಯಂ ಮಂತ್ರಃ ಪ್ರಕೀರ್ತಿತಃ ॥ ೪೨ ॥

ಭೂಮೇ ಪೃಥಿವ್ಯಂತರಿಕ್ಷಮಿತಿ ವೇದೇಷು ಪಠ್ಯತೇ ।
" ಸಹಸ್ರಶೀರ್ಷಾಪುರುಷ " ಇತಿ ವಿಷ್ಣೋರುದಾಹೃತಃ ॥ ೪೩ ॥

ವರುಣಃ ಪವನಶ್ಚೈವ ಧನಾಧ್ಯಕ್ಷಸ್ತಥಾ ಶಿವಃ ।
ಬ್ರಹ್ಮಣಾಂ ಸಹಿತಃ ಶೇಷೋ ದಿಕ್ಪಾಲಾಃ ಪಾಂತು ತೇ ಸದಾ ॥ ೪೪ ॥

ಕೀರ್ತಿರ್ಲಕ್ಷ್ಮೀರ್ಧೃತಿರ್ಮೇಧಾಃ ಪುಷ್ಟಿಃ ಶ್ರದ್ಧಾ ಕ್ರಿಯಾ ಮತಿಃ ।
ಬುದ್ಧಿರ್ಲಜ್ಜಾ ಶಾಂತಿಪುಷ್ಟೀ ಕಾಂತಿಸ್ತುಷ್ಟಿಶ್ಚ ಮಾತರಃ ॥ ೪೫ ॥

ಏತಾಸ್ತ್ವಾಮಭಿಷಿಂಚಂತು ಧರ್ಮಪತ್ನ್ಯಃ ಸಮಾಗತಾಃ ।
ಆದಿತ್ಯಶ್ಚಂದ್ರಮಾ ಭೌಮೋ ಬುಧಜೀವಸಿತಾರ್ಕಜಾಃ ॥ ೪೬ ॥

---

೪೨. " ಅಗ್ನಿಂದೂತಂ ವೃಣೀಮಹೇ " ಎಂಬ ಮಂತ್ರವತ್ತಾಗಿ ಅಗ್ನಿಗೆ ಆಹುತಿಕೊಡುವುದು ಪ್ರಶಸ್ತ. ' ಇಂದ್ರ ಯಮಂ ವರುಣಂ ' ಎಂಬ ಮಂತ್ರವೂ ' ಭೂಮೇಃ ಪೃಥಿವ್ಯಂತರಿಕ್ಷಂ ' ಎಂಬ ಮಂತ್ರವೂ ಅಗ್ನಿಗೆ ಆಹುತಿಕೊಡುವಾಗ ಹೇಳತಕ್ಕದ್ದೆಂದು ವೇದಗಳಲ್ಲಿ ಉಕ್ತವಾಗಿದೆ.

೪೩. ' ಸಹಸ್ರ ಶೀರ್ಷಾ ಪುರುಷಃ ' ಎಂಬ ಮಂತ್ರವನ್ನು ವಿಷ್ಣುವಿಗೆ ಆಹುತಿ ಕೊಡುವಾಗ ಹೇಳಬೇಕು.

೪೪. ವರಣ, ವಾಯು, ಕುಬೇರ, ಈಶಾನ, ಮೊದಲಾದ ದಿಕ್ಪಾಲರೂ ; ಬ್ರಹ್ಮನೂ, ಆದಿಶೇಷನೂ, ನಿನ್ನನ್ನು ಸದಾ ರಕ್ಷಿಸಲಿ.

೪೫. ಕೀರ್ತಿ, ಲಕ್ಷ್ಮಿ, ಧೃತಿ, ಮೇಧಾ, ಪುಷ್ಟಿ, ಶ್ರದ್ಧಾ, ಕ್ರಿಯಾ, ಮತಿ, ಬುದ್ಧಿ, ಲಜ್ಜೆ, ಶಾಂತಿ, ಪೃಥ್ವೀ, ಕಾಂತಿ, ತುಷ್ಟಿ, ಮುಂತಾದ ಧರ್ಮಪತ್ನಿಯರೂ ಮಾತೃಗಳೂ ನಿನಗೆ ಅಭಿಷೇಕಮಾಡಲಿ.

೪೬ ೪೮. ಸೂರ್ಯ, ಚಂದ್ರ, ಅಂಗಾರಕ, ಬುಧ, ಗುರು, ಶುಕ್ರ, ಶನಿ, ರಾಹು, ಕೇತು, ಮುಂತಾದ ಗ್ರಹಗಳು ತೃಪ್ತರಾಗಿ ನಿನಗೆ ಅಭಿಷೇಕ ಮಾಡಲಿ. ದೇವತೆಗಳು, ದಾನವರು, ಗಂಧರ್ವರು, ಯಕ್ಷರು, ರಾಕ್ಷಸರು, ಪನ್ನಗರು,

ಗ್ರಹಾಸ್ತ್ವಾಮಭಿಷಿಂಚಂತು ರಾಹುಃ ಕೇತುಶ್ಚ ತರ್ಪಿತಾಃ ।
ದೇವದಾನವಗಂಧರ್ವಾ ಯಕ್ಷರಾಕ್ಷಸಪನ್ನಗಾಃ ॥ ೪೭ ॥

ಋಷಯೋ ಮನವೋ ಗಾವೋ ದೇವಮಾತರ ಏವ ಚ ।
ದೇವಪತ್ನ್ಯೋ ದ್ರುಮಾ ನಾಗಾ ದೈತ್ಯಾಶ್ಚಾಪ್ಸರಸಾಂ ಗಣಾಃ ॥ ೪೮ ॥

ಅಸ್ತ್ರಾಣಿ ಸರ್ವಶಸ್ತ್ರಾಣಿ ರಾಜಾನೋ ವಾಹನಾನಿ ಚ ।
ಔಷಧಾನಿ ಚ ರತ್ನಾನಿ ಕಾಲಸ್ಯಾವಯವಾಶ್ಚ ಯೇ ॥ ೪೯ ॥

ಸರಿತಃ ಸಾಗರಾಃ ಶೈಲಾಸ್ತೀರ್ಥಾನಿ ಜಲದಾ ನದಾಃ ।
ಏತೇ ತ್ವಾಮಭಿಷಿಂಚಂತು ಸರ್ವಕಾಮಾರ್ಥಸಿದ್ಧಯೇ ॥ ೫೦ ॥

ತತಃ ಶುಕ್ಲಾಂಬರಧರಃ ಶುಕ್ಲಗಂಧಾನುಲೇಪನಃ ।
ಸರ್ವಗಂಧಸಮಾಯುಕ್ತಃ ಸ್ನಾತಃ ಶ್ರದ್ಧಾಸಮನ್ವಿತಃ ॥ ೫೧ ॥

---

ಋಷಿಗಳು, ಮನುಗಳು, ಗೋವುಗಳು, ದೇವಮಾತೃಗಳು, ದೇವಪತ್ನಿಯರು, ವೃಕ್ಷಗಳು, ನಾಗರು, ದೈತ್ಯರು, ಅಪ್ಸರ ಸಮೂಹಗಳು.

೪೯. ಸಮಸ್ತ ಅಸ್ತ್ರಶಸ್ತ್ರಗಳು, ರಾಜರು, ವಾಹನಗಳು, ಓಷಧಿಗಳು, ರತ್ನಗಳು, ಕಾಲದ ಅವಯವಗಳಾದ ಸಂವತ್ಸರ, ಅಯನ, ಋತು, ಮಾಸ, ಪಕ್ಷಾದಿಗಳು.

೫೦. ನದಿಗಳು, ಸಮುದ್ರಗಳು, ಪರ್ವತಗಳು, ಪುಣ್ಯತೀರ್ಥಗಳು, ಮೇಘಗಳು, ನದಿಗಳು, ಇವೆಲ್ಲಾ ನಿನ್ನ ಇಷ್ಟಾರ್ಥಸಿದ್ಧಿಗೋಸ್ಕರ ನಿನಗೆ ಅಭಿಷೇಕಮಾಡಲಿ. ಎಂಬ ಅರ್ಥವುಳ್ಳ ಮಂತ್ರವನ್ನು ಹೇಳಿ ಆ ಕಲಶದ ಜಲದಿಂದ ಋತ್ವಿಕ್ ಪುರೋಹಿತರು ಯಜಮಾನನಿಗೆ ಪ್ರೋಕ್ಷಣಸ್ನಾನ ಮಾಡಿಸಬೇಕು.

೫೧. ಬಳಿಕ ಸರ್ವಸುಗಂಧವಸ್ತು ಮಿಶ್ರಿತವಾದ ಜಲದಿಂದ ಸ್ನಾನ ಮಾಡಿದ ಮೇಲೆ ಯಜಮಾನನು ಶುಭ್ರವಸ್ತ್ರವನ್ನು ಟ್ಟು, ಶ್ರೀಗಂಧವನ್ನು ತೊಡೆದುಕೊಂಡು, ಶ್ರದ್ಧಾಯುಕ್ತನಾಗಿ ಸಿದ್ಧಿಪ್ರದರೂ, ಸಮಾಧಾನಚಿತ್ತರೂ ಆದ ಋತ್ವಿಜರಿಗೂ, ಅವರ ಪತ್ನಿಯರಿಗೂ, ಪ್ರಯತ್ನದಿಂದ ದಕ್ಷಿಣೆ ಮುಂತಾದ್ದನ್ನು ಸಮರ್ಪಿಸಿ ವಿಧಿವಿಹಿತವಾಗಿ ಪೂಜಿಸಬೇಕು.

**ಯಜಮಾನಃ ಸಪತ್ನೀಕಾನ್ಸಿದ್ಧಿದಾಂಸ್ತಾನ್ಸಮಾಹಿತಾನ್ ।**
**ದಕ್ಷಿಣಾಭಿಃ ಪ್ರಯತ್ನೇನ ಪೂಜಯೇದ್ಗತವಿಸ್ಮಯಃ ॥ ೫೨ ॥**

**ಸೂರ್ಯಾಯ ಕಪಿಲಾಂ ಧೇನುಂ ದದ್ಯಾಚ್ಛಂಖಂ ತಥೇಂದವೇ ।**
**ರಕ್ತಂ ಧುರಂಧರಂ ದದ್ಯಾದ್ಭೌಮಾಯ ಕಕುದಾದಿಕಂ ॥ ೫೩ ॥**

**ಬುಧಾಯ ಜಾತರೂಪಂ ಚ ಗುರುವೇ ಪೀತವಾಸಸೀ ।**
**ಶ್ವೇತಾಶ್ವಂ ದೈತ್ಯಗುರುವೇ ಕೃಷ್ಣಾಂ ಗಾಮರ್ಕಸೂನವೇ ॥ ೫೪ ॥**

**ಆಯಸಂ ರಾಹವೇ ದತ್ಯಾತ್ಕೇತವೇ ಚ್ಛಾಗಮುತ್ತಮಂ ।**
**ಸುವರ್ಣೇನ ಸಮಾ ಕಾರ್ಯಾ ಯಜಮಾನೇನ ದಕ್ಷಿಣಾ ॥ ೫೫ ॥**

**ಸರ್ವೇಷಾಮಥ ವಾ ದದ್ಯಾದ್ಗುರುರ್ವಾ ಯೇನ ತುಷ್ಯತಿ ।**
**ಸುಮಂತ್ರೇಣ ಪ್ರದಾತವ್ಯಾಃ ಸರ್ವಾಃ ಸರ್ವಾರ್ಥದಕ್ಷಿಣಾಃ ॥ ೫೬ ॥**

---

೫೨ ಸೂರ್ಯಪ್ರೀತ್ಯರ್ಥವಾಗಿ ಕಪಿಲಾ ಹಸುವನ್ನೂ, ಚಂದ್ರಪ್ರೀತ್ಯರ್ಥವಾಗಿ ಶಂಖವನ್ನೂ, ಅಂಗಾರಕಪ್ರೀತ್ಯರ್ಥವಾಗಿ ಕೆಂಪುಬಣ್ಣದ ಎತ್ತು ಮುಂತಾದ ಭಾರ ಹೊರುವ ಪ್ರಾಣಿಯನ್ನೂ, ದಾನಕೊಡಬೇಕು.

೫೩. ಬುಧಗ್ರಹ ಪ್ರೀತ್ಯರ್ಥವಾಗಿ ಸ್ವರ್ಣವನ್ನೂ, ಬೃಹಸ್ಪತಿ ಗ್ರಹ ಪ್ರೀತಿಗಾಗಿ ಹಳದಿಬಣ್ಣದ ವಸ್ತ್ರವನ್ನೂ, ಶುಕ್ರಪ್ರೀತಿಗಾಗಿ ಬಿಳಿಯ ಕುದುರೆಯನ್ನೂ, ಶನಿಪ್ರೀತಿಗಾಗಿ ಕರಿಯ ಹಸು ಅಥವಾ ಕುದುರೆಯನ್ನೂ

೫೪-೫೫. ರಾಹು ಪ್ರೀತ್ಯರ್ಥವಾಗಿ ಕಬ್ಬಿಣದ ಪಾತ್ರೆಯನ್ನೂ ಕೇತು ಪ್ರೀತಿಗಾಗಿ ಮೇಕೆಯನ್ನೂ ದಾನ ಕೊಡಬೇಕು. ಹೀಗೆ ದಾನಮಾಡುವಾಗ ಯಜಮಾನನು ಸರ್ವರಿಗೂ ಸುವರ್ಣ ದಕ್ಷಿಣೆಯನ್ನು ಕೊಡಬೇಕು. ಗುರುವಿಗೆ ಮನಸ್ತುಷ್ಟಿಯಾಗುವಂತೆ ದಕ್ಷಿಣೆ ಕೊಡಬೇಕು.

೫೬. ದಾನವಸ್ತುವನ್ನೂ ದಕ್ಷಿಣೆಯನ್ನೂ ಮಂತ್ರಸಹಿತ ವಿಧಿವತ್ತಾಗಿ ಧಾರೆ ಎರೆದುಕೊಡಬೇಕು.

ಕಪಿಲೇ ಸರ್ವದೇವಾನಾಂ ಪೂಜನೀಯಾಸಿ ರೋಹಿಣೀ ।
ತೀರ್ಥದೇವಮಯೀ ಯಸ್ಮಾದತಃ ಶಾಂತಿಂ ಪ್ರಯಚ್ಛ ಮೇ ॥ ೫೭ ॥

ಪುಣ್ಯಸ್ತ್ವಂ ಶಂಖ ಪುಣ್ಯಾನಾಂ ಮಂಗಲಾನಾಂ ಚ ಮಂಗಲಂ ।
ವಿಷ್ಣುನಾ ವಿಧೃತೋ ನಿತ್ಯಮತಃ ಶಾಂತಿಂ ಪ್ರಯಚ್ಛ ಮೇ ॥ ೫೮ ॥

ಧರ್ಮ ಸ್ತ್ವಂ ವೃಷರೂಪೇಣ ಜಗದಾನಂದಕಾರಕಃ ।
ಅಷ್ಟಮೂರ್ತೇರಧಿಷ್ಠಾನಮತಃ ಶಾಂತಿಂ ಪ್ರಯಚ್ಛ ಮೇ ॥ ೫೯ ॥

ಹಿರಣ್ಯಗರ್ಭಗರ್ಭಸ್ಥಂ ಹೇಮ ಬೀಜಂ ವಿಭಾವಸೋಃ ।
ಅನಂತಪುಣ್ಯಫಲದಮತಃ ಶಾಂತಿಂ ಪ್ರಯಚ್ಛ ಮೇ ॥ ೬೦ ॥

---

೫೭. ಸೂರ್ಯಪ್ರೀತ್ಯರ್ಥವಾಗಿ ಗೋದಾನ ಕೊಡುವಾಗ ಹೇಳುವ ಮಂತ್ರದ ಅರ್ಥವಿದು. ವಯಸ್ಸಿನ ಪರಿಣಾಮದಲ್ಲಿ ರೋಹಿಣೀ ನಾಮಕವೂ, ಪುಣ್ಯತೀರ್ಥಸ್ವರೂಪಿಣಿಯೂ ಆದ ಕಪಿಲಧೇನುವೇ ! ನೀನು ಸಮಸ್ತ ದೇವತೆಗಳಿಂದಲೂ ಪೂಜಿತೆಯಾಗಿರುವ ಕಾರಣದಿಂದ ನನಗೂ ಶಾಂತಿಯನ್ನು ಕೊಡು.

೫೮. ಚಂದ್ರಪ್ರೀತಿಗಾಗಿ ಶಂಖದಾನ ಕೊಡುವಾಗ " ಎಲೈ ಶಂಖವೇ ! ನೀನು ಪುಣ್ಯಕರ ವಸ್ತುಗಳಲ್ಲಿ ಪುಣ್ಯತಮವೂ ಮಂಗಲ ವಸ್ತುಗಳಲ್ಲಿ ಮಂಗಲವೂ ಎನಿಸಿದ್ದೀ. ವಿಷ್ಣುವು ನಿನ್ನನ್ನು ನಿತ್ಯವೂ ಕೈಯಲ್ಲಿ ಧರಿಸಿದಾನೆ. ಇಂಥ ನೀನು ಶಾಂತಿಯನ್ನು ಕೊಡು ಎಂಬ ಅರ್ಥವುಳ್ಳ ಮೇಲಿನ ಮಂತ್ರವನ್ನು ಹೇಳಬೇಕು.

೫೯. ಅಂಗಾರಕಪ್ರೀತಿಗಾಗಿ ಕೆಂಪು ಎತ್ತನ್ನು ದಾನಕೊಡುವಾಗ ಎಲೈ ಧರ್ಮದೇವತೆಯೇ ! ನೀನು ವೃಷಭರೂಪದಿಂದ ಜಗತ್ತಿಗೆ ಆನಂದವುಂಟು ಮಾಡುತ್ತೀ. ಮತ್ತು ಶಿವನ ವಾಹನವಾಗಿದ್ದೀ. ಆದುದರಿಂದ ನನಗೆ ಶಾಂತಿಯನ್ನು ಕರುಣಿಸು. ಈ ಅರ್ಥವುಳ್ಳ ಮಂತ್ರವನ್ನು ಹೇಳಬೇಕು.

೬೦. ಬುಧಪ್ರೀತ್ಯರ್ಥವಾಗಿ ಸ್ವರ್ಣದಾನ ಕೊಡುವಾಗ " ಬ್ರಹ್ಮನ ಉದರಸ್ಥವೂ, ಸೂರ್ಯನಿಗೆ ಬೀಜಭೂತವೂ ಅಪರಿಮಿತ ಪುಣ್ಯಪ್ರದವೂ ಆದ ಸುವರ್ಣವೇ ! ನೀನು ನನಗೆ ಶಾಂತಿಯನ್ನು ಕರುಣಿಸು" ಎಂಬ ಅರ್ಥವುಳ್ಳ ಮಂತ್ರವನ್ನು ಹೇಳಬೇಕು.

**ಪೀತವಸ್ತ್ರಯುಗಂ ದದ್ಯಾದ್ವಾಸುದೇವಸ್ಯ ವಲ್ಲಭಂ ।**
**ಪ್ರದಾನಾತ್ತಸ್ಯ ಮೇ ವಿಷ್ಣುರತಃ ಶಾಂತಿಂ ಪ್ರಯಚ್ಛತು　　|| ೬೧ ||**

**ಕಪಿಲಸ್ತ್ವಶ್ವರೂಪೇಣ ಯಸ್ಮಾದಮೃತಸಂಭವಃ ।**
**ಚಂದ್ರಾರ್ಕವಾಹನೋ ನಿತ್ಯಮತಃ ಶಾಂತಿಂ ಪ್ರಯಚ್ಛ ಮೇ || ೬೨ ||**

**ಯಸ್ಮಾತ್ತ್ವಂ ಪೃಥಿವೀ ಸರ್ವಾ ಧೇನೋ ವೈ ಕೃಷ್ಣಸಂಜ್ಞಿತಾ ।**
**ಸರ್ವಪಾಪಹರಾ ನಿತ್ಯಮತಃ ಶಾಂತಿಂ ಪ್ರಯಚ್ಛ ಮೇ　　|| ೬೩ ||**

**ಯಸ್ಮಾದಾಯಸ ಕರ್ಮಾಣಿ ತವಾಧೀನಾನಿ ಸರ್ವದಾ ।**
**ಲಾಂಗಲಾನ್ಯಾಯುಧಾದೀನಿ ತಸ್ಮಾಚ್ಛಾಂತಿಂ ಪ್ರಯಚ್ಛ ಮೇ || ೬೪ ||**

---

೬೧. ಗುರುಪ್ರೀತ್ಯರ್ಥವಾಗಿ ಪೀತವಸ್ತ್ರದಾನಮಾಡುವಾಗ “ ವಾಸುದೇವನಿಗೆ ಬಹು ಪ್ರಿಯವಾದ ಈ ಪೀತವಸ್ತ್ರದ್ವಯವನ್ನು ಕೊಡುತ್ತೇನೆ. ಈ ದಾನದಿಂದ ನನಗೆ ಶಾಂತಿಯನ್ನುಂಟುಮಾಡು ” ಎಂಬ ಅರ್ಥವುಳ್ಳ ಈ ಮಂತ್ರವನ್ನು ಹೇಳಬೇಕು.

೬೨. ಶುಕ್ರಪ್ರೀತಿಗಾಗಿ ಶ್ವೇತಾಶ್ವವನ್ನು ದಾನಮಾಡುವಾಗ “ ಅಮೃತದಿಂದ ಉತ್ಪನ್ನವಾದ ಶ್ವೇತಾಶ್ವವೇ ! ನೀನು ಚಂದ್ರನಿಗೂ ಸೂರ್ಯನಿಗೂ ವಾಹನವಾಗಿದ್ದೀ. ಆದುದರಿಂದ ನನಗೂ ಶಾಂತಿಯನ್ನು ಕೊಡು ” ಎಂಬ ಅರ್ಥವುಳ್ಳ ಮಂತ್ರವನ್ನು ಹೇಳಬೇಕು.

೬೩. ಶನಿಪ್ರೀತಿಗಾಗಿ ಕರಿಯ ಹಸುವನ್ನು ದಾನಕೊಡುವಾಗ “ ಎಲೈ ಧೇನುವೇ ! ನೀನು ಸಮಸ್ತ ಪೃಥ್ವೀಸ್ವರೂಪವೂ ಕೃಷ್ಣಸಂಜ್ಞೆವುಳ್ಳದ್ದೂ ಆಗಿರುವೆ. ನಿತ್ಯವೂ ಸಮಸ್ತರ ಪಾಪವನ್ನೂ ಹೋಗಲಾಡಿಸುತ್ತೀ. ಆದುದರಿಂದ ನನಗೆ ಶಾಂತಿಯನ್ನು ಕರುಣಿಸು ” ಈ ಅರ್ಥದ ಮಂತ್ರವನ್ನು ಹೇಳಬೇಕು.

೬೪. ರಾಹುಪ್ರೀತಿಗಾಗಿ ಕಬ್ಬಿಣದ ವಸ್ತುವನ್ನು ದಾನ ಮಾಡುವಾಗ ಎಲೈ ಕಬ್ಬಿಣವೇ ! ಲೋಕದ ವ್ಯವಹಾರಕ್ಕೆ ಬೇಕಾದ ನೇಗಿಲು ಮುಂತಾದ್ದೆಲ್ಲಾ ನಿನ್ನಿಂದಲೇ ನಿರ್ಮಿತವಾಗಿ ಸಮಸ್ತ ಕಾರ್ಯಗಳು ನೆರವೇರುವುದೂ ನಿನ್ನ ಅಧೀನವಾಗಿದೆ. ಆದ್ದರಿಂದ ನೀನು ನನಗೆ ಶಾಂತಿಯನ್ನು ಕೊಡು ” ಎಂಬ ಅರ್ಥದ ಮಂತ್ರವನ್ನು ಹೇಳಬೇಕು.

**ಯಸ್ಮಾತ್ತ್ವಂ ಛಾಗ ಯಜ್ಞಾನಾಮಂಗತ್ವೇನ ವ್ಯವಸ್ಥಿತಃ ।**
**ಯೋನಿರ್ವಿಭಾವಸೋರ್ನಿತ್ಯಮತಃ ಶಾಂತಿಂ ಪ್ರಯಚ್ಛ ಮೇ ॥ ೬೫ ॥**

**ಗವಾಮಂಗೇಷು ತಿಷ್ಠಂತಿ ಭುವನಾನಿ ಚತುರ್ದಶ ।**
**ಯಸ್ಮಾತ್ತಸ್ಮಾಚ್ಛಿವಂ ಮೇ ಸ್ಯಾದಿಹ ಲೋಕೇ ಪರತ್ರ ಚ ॥ ೬೬ ॥**

**ಯಸ್ಮಾದಶೂನ್ಯಂ ಶಯನಂ ಕೇಶವಸ್ಯ ಶಿವಸ್ಯ ಚ ।**
**ಶಯ್ಯಾ ಮಮಾಪ್ಯಶೂನ್ಯಾಸ್ತು ತಥಾ ಜನ್ಮನಿ ಜನ್ಮನಿ ॥ ೬೭ ॥**

**ಯಥಾ ರತ್ನೇಷು ಸರ್ವೇಷು ಸರ್ವೇ ದೇವಾ ವ್ಯವಸ್ಥಿತಾಃ ।**
**ತಥಾ ಶಾಂತಿಂ ಪ್ರಯಚ್ಛಂತು ರತ್ನದಾನೇನ ಮೇ ಸುರಾಃ ॥ ೬೮ ॥**

---

೬೫. ಕೇತುಗ್ರಹಪ್ರೀತ್ಯರ್ಥವಾಗಿ ಆಡನ್ನು ದಾನ ಮಾಡುವಾಗ ಎಲೈ ಛಾಗವೇ! ಯಜ್ಞಕ್ಕೆ ನೀನು ಒಂದು ಪ್ರಧಾನಾಂಗವೆಂದು ನಿಷ್ಕರ್ಷೆಯಾಗಿದ್ದೀ. ನೀನು ನಿತ್ಯವಾಗಿ ವಿಭಾವಸುಯೋನಿ ಯೆನಿಸಿದ್ದೀ. ಆದ್ದರಿಂದ ನನಗೆ ಶಾಂತಿಯನ್ನು ಕೊಡು; ಎಂಬ ಅರ್ಥವುಳ್ಳ ಮಂತ್ರವನ್ನು ಹೇಳಬೇಕು.

೬೬. ಗೋವುಗಳ ದೇಹದಲ್ಲಿ ಹದಿನಾಲ್ಕು ಲೋಕಗಳೂ ಇವೆ. ಅದನ್ನು ದಾನ ಮಾಡುವೆನಾದ್ದರಿಂದ ಇಹಲೋಕದಲ್ಲೂ ಪರಲೋಕದಲ್ಲೂ ನನಗೆ ಮಂಗಳವುಂಟಾಗಲಿ ಎಂಬ ಅರ್ಥವುಳ್ಳ ಈ ಮಂತ್ರವನ್ನು ಗೋದಾನ ಮಾಡುವಾಗ ಹೇಳಬೇಕು.

೬೭. ನಾರಾಯಣನ ಶಯನವೂ ಪರಮೇಶ್ವರನ ಶಯನವೂ ಅವರ ಪತ್ನಿಯರಿಂದ ಶೂನ್ಯವಾಗದೆ. ಸದಾ ಪತ್ನೀಯುಕ್ತವಾಗಿ ಹೇಗೆ ಶೋಭಿಸುವುದೋ ಹಾಗೆಯೇ ಜನ್ಮಜನ್ಮಗಳಲ್ಲಿಯೂ ನನ್ನ ಶಯನವು ಪತ್ನೀಶೂನ್ಯವಾಗದೆ ಸಮೇತವಾಗಿರಲಿ. ಈ ಅರ್ಥದ ಮಂತ್ರವನ್ನು ಶಯ್ಯಾದಾನ ಕೊಡುವಾಗ ಹೇಳಬೇಕು.

೬೮. ಎಲ್ಲ ರತ್ನಗಳಲ್ಲಿಯೂ ಅನೇಕ ದೇವತೆಗಳಿರುವರೆಂದು ನಿಷ್ಕರ್ಷೆಯಾಗಿದೆ. ಇಂಥಾ ರತ್ನದಾನ ಮಾಡಿದುದರಿಂದ ದೇವತೆಗಳು ನನಗೆ ಶಾಂತಿಯನ್ನು ಕರುಣಿಸಲಿ ಎಂಬ ಅರ್ಥದ ಮಂತ್ರವನ್ನು ರತ್ನದಾನ ಕೊಡುವಾಗ ಹೇಳಬೇಕು.

**ಯಥಾ ಭೂಮಿಪ್ರದಾನಸ್ಯ ಕಲಾಂ ನಾರ್ಹಂತಿ ಷೋಡಶೀಂ ।**
**ದಾನಾನ್ಯನ್ಯಾನಿ ಮೇ ಶಾಂತಿಂ ಭೂಮಿದಾನಾದ್ಭವತ್ವಪಿ　　॥ ೬೯ ॥**

**ಏವಂ ಸಂಪೂಜಯೇದ್ಭಕ್ತ್ಯಾ ವಿತ್ತಶಾಠ್ಯವಿವರ್ಜಿತಃ ।**
**ವಸ್ತ್ರಕಾಂಚನರತ್ನೌಘೈರ್ಮಾಲ್ಯಗಂಧಾನುಲೇಪನೈಃ　　॥ ೭೦ ॥**

**ಗ್ರಹಸ್ವರೂಪಮತುಲಂ ಕಥ್ಯಮಾನಂ ನಿಬೋಧ ಮೇ ।**
**ಭಕ್ತಿಭಾವಪ್ರಸನ್ನಸ್ಯ ಕಥ್ಯಮಾನಂ ವಿರಾಜತೇ ॥**
**ಪದ್ಮಾಸನಃ ಪದ್ಮಕರಃ ಪದ್ಮಗರ್ಭಸಮದ್ಯುತಿಃ ।**
**ಸಪ್ತಾಶ್ವಃ ಸಪ್ತರಜ್ಜುಶ್ಚ ದ್ವಿಭುಜಃ ಸ್ಯಾತ್ಸದಾ ರವಿಃ　　॥ ೭೧ ॥**

---

೬೯. "ಇತರ ಯಾವ ದಾನಮಾಡಿದರೂ ಭೂದಾನದ ಪುಣ್ಯದ ಹದಿನಾರನೇ ಒಂದುಭಾಗಕ್ಕೂ ಸಮನಾಗುವುದಿಲ್ಲ. ಆದ್ದರಿಂದ ಈ ಭೂದಾನದಿಂದ ನನಗೆ ಶಾಂತಿಯನ್ನು ಕೊಡು" ಎಂಬ ಅರ್ಥದ ಮಂತ್ರವನ್ನು ಭೂದಾನ ಕೊಡುವಾಗ ಹೇಳಬೇಕು.

೭೦. ಸಮೃದ್ಧಿಯಾಗಿ ದ್ರವ್ಯಾನುಕೂಲವಿದ್ದರೂ ಜಿಪುಣತನ ಮಾಡದೆ ಈ ಪ್ರಕಾರ ನಾನಾ ದಾನಪುರಸ್ಸರವಾಗಿ ಎಂದರೆ ಭಕ್ತಿಯಿಂದ ವಸ್ತ್ರಗಳು, ಚಿನ್ನ, ರತ್ನ, ಆಭರಣ, ಹೂ, ಗಂಧ, ಮೊದಲಾದ ಸಾಮಗ್ರಿಗಳಿಂದ ಗ್ರಹಾಧಿಪನೂ, ಅಸದೃಶನಾದ ದೇವನೂ, ಆದ ಸೂರ್ಯನನ್ನು ಪೂಜಿಸಬೇಕು. ಗ್ರಹಸ್ವರೂಪರಾದ ದೇವರ ಪೂಜಾಕಾಲದಲ್ಲಿ ಪಠಿಸುವ ಸ್ತೋತ್ರಗಳನ್ನು ಹೇಳುವೆನು ಕೇಳು. ಭಕ್ತಿಭಾವದಿಂದ ಶರಣಾಗತನಾದವನಿಗೆ ನಾನು ಹೇಳುವುದು ಬಹು ಆನಂದಕರವಾಗುವುದು.

೭೧. ಸೂರ್ಯದೇವನು ಪದ್ಮವನ್ನೇ ಪೀಠವಾಗಿ ಮಾಡಿ ಕುಳಿತಿರುವನು. ಕೈಯಲ್ಲಿ ಪದ್ಮಗಳನ್ನು ಧರಿಸಿರುವನು. ಕಮಲದ ಅಂತರ್ಭಾಗಕ್ಕೆ ಸದೃಶವಾದ ಕಾಂತಿಯುಳ್ಳವನು. ಎರಡು ಭುಜಗಳುಳ್ಳವನು. ಏಳು ಕುದುರೆಗಳಿಗೂ ಕಟ್ಟಿದ ಏಳು ಹಗ್ಗಗಳನ್ನು ಹಿಡಿದವನೂ ಆಗಿದ್ದಾನೆ. (ಇದು ಸೂರ್ಯ ಪ್ರಾರ್ಥನೆ).

ಶ್ವೇತಃ ಶ್ವೇತಾಂಬರಧರೋ ದಶಾಶ್ವಃ ಶ್ವೇತಭೂಷಣಃ ।
ಗದಾಪಾಣಿರ್ದ್ವಿಬಾಹುಶ್ಚ ಕರ್ತವ್ಯೋ ವರದಃ ಶಶೀ ॥ ೭೨ ॥

ರಕ್ತಮಾಲ್ಯಾಂಬರಧರಃ ಕರ್ಣಿಕಾರಸಮದ್ಯುತಿಃ ।
ಖಡ್ಗಚರ್ಮಗದಾಪಾಣಿರ್ವಿಧೇಯೋ ಭೂಮಿನಂದನಃ ॥ ೭೩ ॥

ಪೀತಮಾಲ್ಯಾಂಬರಧರಃ ಪೀತಗಂಧಾನುಲೇಪನಃ ।
ಕಾಂಚನೇ ಚ ರಥೇ ದಿವ್ಯೇ ಶೋಭಮಾನೋ ಬುಧಃಸದಾ ॥ ೭೪ ॥

ದೇವದೈತ್ಯಗುರೂ ತದ್ವತ್ಪೀತಶ್ವೇತೌ ಚತುರ್ಭುಜೌ ।
ದಂಡಿನೌ ವರದೌ ಕಾಯೌ ಸಾಕ್ಷಸೂತ್ರಮಂಡಲೂ ॥ ೭೫ ॥

---

೭೨. ಶ್ವೇತವರ್ಣವುಳ್ಳವನೂ ಶ್ವೇತವಸ್ತ್ರವನ್ನು ಧರಿಸಿದವನೂ, ಹತ್ತು ಕುದುರೆಗಳುಳ್ಳವನೂ, ಬೆಳ್ಳಗೆ ಹೊಳೆಯುವ ಆಭರಣಗಳನ್ನು ಧರಿಸಿರುವವನೂ, ಕೈಯಲ್ಲಿ ಗದೆಯನ್ನು ಹಿಡಿದಿರುವವನೂ, ಎರಡು ಬಾಹುಗಳುಳ್ಳವನೂ, ಆದ ಚಂದ್ರನು ನಮಗೆ ವರವನ್ನು ಕರುಣಿಸುವನಾಗಲಿ. (ಇದು ಚಂದ್ರಪ್ರಾರ್ಥನೆ).

೭೩. ಕೆಂಪುಬಣ್ಣದ ಹೂ, ಕೆಂಪುವಸ್ತ್ರ, ಇವನ್ನು ಧರಿಸಿರುವವನೂ, ಕರ್ಣಿಕಾರ ಪುಷ್ಪದಂತೆ ಕಾಂತಿಯುಕ್ತನೂ, ಕತ್ತಿ, ಗುರಾಣಿ, ಗದೆ, ಇವುಗಳನ್ನು ಕೈಯಲ್ಲಿ ಧರಿಸಿರುವವನೂ, ವಿಧೇಯನೂ ಭೂಮಿಪುತ್ರನೂ ಆದ ಅಂಗಾರಕನು ಶೋಭಿಸುವನು. (ಇದು ಅಂಗಾರಕ ಪ್ರಾರ್ಥನೆ.)

೭೪. ಹಳದಿಯಬಣ್ಣದ ಹೂವು, ಹಳದಿಯವಸ್ತ್ರ, ಇವನ್ನು ಧರಿಸಿ, ಹಳದಿಯ ಗಂಧವನ್ನು ಲೇಪಿಸಿಕೊಂಡು, ದಿವ್ಯವಾದ ಚಿನ್ನದ ರಥವಲ್ಲಿ ಕುಳಿತಿರುವ ಬುಧನು ಶೋಭಿಸುವನು. (ಇದು ಬುಧಪ್ರಾರ್ಥನೆ.)

೭೫. "ದೇವಗುರುವಾದ ಬೃಹಸ್ಪತಿ, ದೈತ್ಯಗುರುವಾದ ಶುಕ್ರ ಇವರಿಬ್ಬರಲ್ಲಿ ಗುರುವು ಹಳದಿಯ ವಸ್ತ್ರವನ್ನೂ, ಶುಕ್ರನು ಬಿಳಿಯವಸ್ತ್ರವನ್ನೂ ಧರಿಸಿರುವರು. ಇವರು ನಾಲ್ಕು ಭುಜಗಳುಳ್ಳವರು ಜಪಮಾಲೆ, ದಂಡ, ಕಮಂಡಲು, ಇವನ್ನು ಧರಿಸಿರುವ ಇವರನ್ನು ಆರಾಧಿಸುವೆನು. ಇವರು ವರಪ್ರದರಾಗಲಿ" (ಇದು ಗುರು ಶುಕ್ರ ಪ್ರಾರ್ಥನೆ.)

**ಇಂದ್ರನೀಲದ್ಯುತಿಃ ಶೂಲೀ ವರದೋ ಗೃಧ್ರವಾಹನಃ ।**
**ಬಾಣಬಾಣಾಸನಧರಃ ಕರ್ತವ್ಯೋಽರ್ಕಸುತಃ ಸದಾ ॥ ೭೬ ॥**

**ಶಾರ್ದೂಲವದನಃ ಖಡ್ಗೀ ವರ್ಮೀ ಶೂಲೀ ವರಪ್ರದಃ ।**
**ನೀಲಸಿಂಹಾಸನಸ್ಥಶ್ಚ ರಾಹುರತ್ರ ಪ್ರಶಸ್ಯತೇ ॥ ೭೭ ॥**

**ಧೂಮ್ರಾ ದ್ವಿಬಾಹವಃ ಸರ್ವೇ ಗದಿನೋ ವಿಕೃತಾನನಾಃ ।**
**ಗೃಧ್ರಾಸನರತಾ ನಿತ್ಯಂ ಕೇತವಃ ಸ್ಯುರ್ವರಪ್ರದಾಃ ॥ ೭೮ ॥**

**ಸರ್ವೇ ಕಿರೀಟಿನಃ ಕಾರ್ಯಾ ಗ್ರಹಾ ಲೋಕಹಿತಾವಹಾಃ ।**
**ಸ್ವಾಂಗುಲೇನೋಚ್ಛ್ರಿತಾಃ ಸರ್ವೇ ಶತಮಷ್ಟೋತ್ತರಂ ತದಾ ॥ ೭೯ ॥**

**ಗ್ರಹಸ್ವರೂಪಮೇತತ್ತೇ ವ್ಯಾಖ್ಯಾತಂ ಪಾಂಡುನಂದನ ।**
**ವಿತ್ತಶಾಠ್ಯಂ ವಿನಾ ಪ್ರಯತ್ನೇನ ಪೂಜಾ ಕಾರ್ಯಾ ವಿಚಕ್ಷಣೈಃ ॥ ೮೦ ॥**

---

೭೬. ಇಂದ್ರನೀಲರತ್ನದಂತೆ ಪ್ರಕಾಶಮಾನನೂ, ಶೂಲಾಯುಧ ಧರಿಸಿದವನೂ, ಗೃಧ್ರವಾಹನನೂ, ಧನುರ್ಬಾಣಗಳನ್ನು ಧರಿಸಿದವನೂ, ಸೂರ್ಯಪುತ್ರನೂ, ಆದ ಶನೈಶ್ಚರನನ್ನು ಆರಾಧಿಸುವೆನು ವರಪ್ರದನಾಗಲಿ (ಇದು ಶನಿ ಪ್ರಾರ್ಥನೆ).

೭೭. ಹುಲಿಯಂತೆ ಮುಖವುಳ್ಳವನೂ ಖಡ್ಗ, ಕವಚ, ಶೂಲ, ಇವನ್ನು ಧರಿಸಿದವನೂ ನೀಲ ಸಿಂಹಾಸನದಲ್ಲಿ ಕುಳಿತು ಶೋಭಿಸುವನೂ ಆದ ರಾಹುವು ಪ್ರಸನ್ನನಾಗಲಿ.

೭೮. ಧೂಮ್ರ ವರ್ಣವುಳ್ಳವರೂ ಪ್ರತಿಯೊಬ್ಬರೂ ಎರಡೆರಡು ತೋಳುಗಳುಳ್ಳವರೂ, ಎಲ್ಲರೂ ಗದಾಯುಧವನ್ನು ಧರಿಸಿದವರೂ, ವಿಕಾರವಾದ ಮುಖವುಳ್ಳವರೂ, ಗೃಧ್ರ ಪೀಠದಲ್ಲಿ ಆಸಕ್ತರೂ ಆದ ಕೇತುಗಳನ್ನು ಆರಾಧಿಸುವೆನು ವರಪ್ರದರಾಗಲಿ. (ಇದು ಕೇತು ಪ್ರಾರ್ಥನೆ.)

೭೯. ಲೋಕಕ್ಕೆ ಹಿತಕಾರಿಗಳಾದ ಎಲ್ಲ ಗ್ರಹಗಳನ್ನೂ ಕಿರೀಟಯುಕ್ತವಾಗಿರುವಂತೆ ರಚಿಸಬೇಕು. ಪ್ರತಿಗ್ರಹಗಳೂ ಅವರ ಕೈ ಅಂಗುಲದ ಅಳತೆಯಲ್ಲಿ ನೂರೆಂಟು ಅಂಗುಲ ಪ್ರಮಾಣವುಳ್ಳವರು ಆಗಿರಬೇಕು.

೮೦. ಅಯ್ಯಾ ಪಾಂಡುಪುತ್ರನೇ! ಗ್ರಹಗಳ ಸ್ವರೂಪವನ್ನು ನಿನಗೆ ತಿಳಿಸಿದುದಾಯ್ತು. ವಿಚಕ್ಷಣರಾದವರು ಪ್ರಯತ್ನಪಟ್ಟು ಇವನ್ನೆಲ್ಲಾ ತಿಳಿದುಕೊಂಡು ಪೂಜಾದಿಗಳನ್ನು ನೆರವೇರಿಸಬೇಕು.

ವಿಧಿನಾ ಗ್ರಹಪೂಜಾಂ ಯೋऽನೇನ ತ್ವಾರಭತೇ ನರಃ ।
ಸರ್ವಾನ್ಕಾಮಾನವಾಪ್ನೋತಿ ಪ್ರೇತ್ಯ ಸ್ವರ್ಗೇ ಮಹೀಯತೇ ॥ ೮೧ ॥

ಯಸ್ತು ಪೀಡಾಕರೋ ನಿತ್ಯಂ ಮಾಲ್ಯವಿತ್ತಸ್ಯ ವಾ ಗ್ರಹಃ ।
ತಂ ತು ಯತ್ನೇನ ಸಂಪೂಜ್ಯ ಶೇಷಾನಪ್ಯರ್ಚಯೇದ್ಬುಧಃ ॥ ೮೨ ॥

ಗ್ರಹಾ ಗಾವೋ ನರೇಂದ್ರಾಶ್ಚ ಬ್ರಾಹ್ಮಣಾಶ್ಚ ವಿಶೇಷತಃ ।
ಪೂಜಿತಾಃ ಪೂಜಯಂತ್ಯೇತೇ ನಿರ್ದಹಂತ್ಯವಮಾನಿತಾಃ ॥ ೮೩ ॥

ತಸ್ಮಾನ್ನ ದಕ್ಷಿಣಾಹೀನಂ ಕರ್ತವ್ಯಂ ಭೂತಿಮಿಚ್ಛತಾ ।
ಸಂಪೂರ್ಣಾಯಾಂ ದಕ್ಷಿಣಾಯಾಂ ಯಸ್ಮಾದೇಕೋऽಪಿ ತುಷ್ಯತಿ॥೮೪॥

ಸದೈವಾऽಯುತಹೋಮೋऽಯಂ ನವಗ್ರಹಮುಖಃ ಸ್ಮೃತಃ ॥ ೮೫ ॥

---

೮೧. ಈ ವಿಧಾನದಂತೆ ಗ್ರಹಗಳನ್ನು ಪೂಜಿಸುವ ಮನುಷ್ಯನು ಇಹದಲ್ಲಿ ಸಮಸ್ತ ಇಷ್ಟಾರ್ಥಗಳನ್ನು ಹೊಂದಿ ಸ್ವರ್ಗಲೋಕಕ್ಕೆ ಹೋಗಿ ಅಲ್ಲಿಯೂ ಪೂಜಿತನಾಗುವನು.

೮೨. ಗ್ರಹಚಾರರೀತ್ಯಾ ಅರಿಷ್ಟಸ್ಥಾನಗತವಾದ ಯಾವ ಗ್ರಹವು ನಿತ್ಯವೂ ಕ್ರೂರವಾಗಿ ಪೀಡಿಸುವುದೋ ಅಂತಹ ಗ್ರಹದ ಪ್ರೀತ್ಯರ್ಥವಾಗಿ ವಿಶೇಷ ಆರಾಧನ ಜಪಾದಿಗಳನ್ನು ಪ್ರಯತ್ನಪಟ್ಟು ಮಾಡಬೇಕು. ಪ್ರಾಜ್ಞನಾದವನು ಅವುಗಳಿಗೆ ಮಾತ್ರ ಪೂಜೆಮಾಡದೆ ಅದರ ಜತೆಯಲ್ಲಿ ಮಿಕ್ಕಗ್ರಹಗಳಿಗೂ ಆರಾಧನೆ ಮಾಡಬೇಕು.

೮೩. ಗ್ರಹಗಳು ಗೋವುಗಳು ರಾಜರು ಬ್ರಾಹ್ಮಣರು ಇವರೆಲ್ಲ ತಮ್ಮನ್ನು ಪೂಜಿಸಿದವರನ್ನು ವಿಶೇಷ ಪ್ರಕಾರದಿಂದ ಆದರಿಸುವರು. ತಮ್ಮನ್ನು ಅಲಕ್ಷ್ಯ ಮಾಡಿದವರನ್ನು ಸುಟ್ಟುಬಿಡುತ್ತಾರೆ.

೮೪. ಆದಕಾರಣ ತನಗೆ ಶ್ರೇಯಸ್ಸಾಗಬೇಕೆಂದು ಅಪೇಕ್ಷಿಸುವವನು ಗ್ರಹಯಜ್ಞಾದಿಗಳಲ್ಲಿ ತಕ್ಕಷ್ಟು ದಕ್ಷಿಣೆಯಿಲ್ಲದೆ ಆ ಕೆಲಸ ಮಾಡಬಾರದು.

೮೫. ಸಮೃದ್ಧಿಯಾಗಿ ದಕ್ಷಿಣೆ ಕೊಟ್ಟರೆ ಒಬ್ಬನನ್ನಾದರೂ ತೃಪ್ತಿಪಡಿಸಿದಂತೆ ಆಗುವುದು. ಹತ್ತು ಸಾವಿರ ಆಹುತಿ ಹೋಮವು ನವಗ್ರಹ ಮುಖವೆನಿಸಿಕೊಳ್ಳುವುದು.

**ವಿವಾಹೋತ್ಸವಯಜ್ಞೇಷು ಪ್ರತಿಷ್ಠಾದಿಷು ಕರ್ಮಸು ।**
**ನಿರ್ವಿಘ್ನಾರ್ಥಂ ಮಹಾರಾಜ ತಥೋದ್ವೇಗಾದ್ಭುತೇಷು ಚ ॥ ೮೬ ॥**

**ಕಥಿತೋಽಯುತಹೋಮೋಽಯಂ ಲಕ್ಷಹೋಮಮತಃ ಶೃಣು ।**
**ಸರ್ವಕಾಮಾಪ್ತಯೇ ಯಸ್ಮಾಲ್ಲಕ್ಷಹೋಮಂ ವಿದುರ್ಬುಧಾಃ ॥ ೮೭ ॥**

**ಪಿತೄಣಾಂ ವಲ್ಲಭೋ ಯಸ್ಮಾದ್ಭುಕ್ತಿಮುಕ್ತಿಫಲಪ್ರದಃ ।**
**ಗ್ರಹತಾರಾಬಲಂ ಲಬ್ಧ್ವಾ ಕೃತ್ವಾ ಬ್ರಾಹ್ಮಣವಾಚನಂ ॥ ೮೮ ॥**

**ಗೃಹಸ್ಯೋತ್ತರಪೂರ್ವೇಣ ಮಂಡಪಂ ಕಾರಯೇದ್ಬುಧಃ ।**
**ರುದ್ರಾಯತನಭೂಮೌ ವಾ ಚತುರಸ್ರಮುದಙ್ಮುಖಂ ॥ ೮೯ ॥**

---

೮೬. ಅಯ್ಯಾ ರಾಜನೇ! ವಿವಾಹಮಹೋತ್ಸವ, ಯಜ್ಞ, ದೇವತಾ ಪ್ರತಿಷ್ಠೆ, ಇವುಗಳಲ್ಲೂ ಉದ್ವೇಗಪ್ರಾಪ್ತಿ, ಅದ್ಭುತ ದರ್ಶನ, ಈ ಸಂದರ್ಭಗಳಲ್ಲಿಯೂ, ನಿರ್ವಿಘ್ನತಾ ಸಿದ್ಧಿಗಾಗಿ ಈ ಅಯುತಹೋಮವನ್ನು ಮಾಡತಕ್ಕದ್ದೆಂದು ಹೇಳಿದೆ.

೮೭. ಲಕ್ಷಹೋಮ ಮಾಡಬೇಕಾದ ಸಂದರ್ಭವನ್ನು ಹೇಳುವೆನು ಕೇಳು. ಸಮಸ್ತ ಇಷ್ಟಾರ್ಥಗಳೂ ಸಿದ್ಧಿಯಾಗುವುದಕ್ಕಾಗಿ ಲಕ್ಷಹೋಮ ಮಾಡಿಸಬೇಕೆಂದೂ, ಇದು ಪಿತೃದೇವತೆಗಳಿಗೂ ಸಹ ಪ್ರಿಯವಾದುದೆಂದೂ, ಭೋಗಮೋಕ್ಷಪ್ರದವಾದುದೆಂದೂ, ಪ್ರಾಜ್ಞರು ಹೇಳುತ್ತಾರೆ.

೮೮. ಈ ಶಾಂತಿ ಹೋಮಕ್ಕೆ ಗ್ರಹಬಲ ನಕ್ಷತ್ರಬಲ ಇವು ಅನುಕೂಲವಾಗಿರುವ ಸಮಯ ನೋಡಿಕೊಂಡು, ಬ್ರಾಹ್ಮಣರಿಂದ ಸ್ವಸ್ತಿವಾಚನಮಾಡಿಸಿ ಮನೆಯ ಈಶಾನ್ಯ ಭಾಗವಲ್ಲಿಯಾಗಲಿ.

೮೯. ಶಿವದೇವಾಲಯದ ಪ್ರಾಕಾರದಲ್ಲಿಯಾಗಲಿ ಚಚ್ಚೌಕವಾಗಿಯೂ ಉತ್ತರಾಭಿಮುಖವಾಗಿಯೂ ಇರುವಂತೆ ಮಂಟಪವನ್ನು ರಚಿಸಬೇಕು.

ದಶಹಸ್ತಮಥಾಷ್ಟೌ ವಾ ಹಸ್ತಾನ್ಕುರ್ಯಾದ್ವಿಧಾನತಃ ।
ಪ್ರಾಗುದಕ್ಪ್ರವಣಾಂ ಭೂಮಿಂ ಕಾರಯೇದ್ಯತ್ನತೋ ನರಃ ॥ ೯೦ ॥

ಪ್ರಾಗುತ್ತರಂ ಸಮಾಸಾದ್ಯ ಪ್ರದೇಶಂ ಮಂಡಪಸ್ಯ ತು ।
ಶೋಭನಂ ಕಾರಯೇತ್ಕುಂಡಂ ಯಥಾವಲ್ಲಕ್ಷಣಾನ್ವಿತಂ ॥ ೯೧ ॥

ಮಾನಹೀನಂ ಚಾಪ್ರಶಸ್ತಮನೇಕಭಯದಂ ಭವೇತ್ ।
ಯಸ್ಮಾತ್ತಸ್ಮಾತ್ಸುಸಂಪೂರ್ಣಂ ಶಾಂತಿಕುಂಡಂ ವಿಧೀಯತೇ ॥ ೯೨ ॥

ಅಸ್ಮಾದ್ದಶಗುಣಃ ಪ್ರೋಕ್ತೋ ಲಕ್ಷಹೋಮೋ ಸ್ವಯಂಭುವಾ ।
ಆಹುತಿಭಿಃ ಪ್ರಯತ್ನೇನ ದಕ್ಷಿಣಾಭಿಸ್ತಥೈವ ಚ ॥ ೯೩ ॥

ದ್ವಿಹಸ್ತವಿಸ್ತೃತಂ ತದ್ವಚ್ಚತುರ್ಹಸ್ತಾಯುತಂ ಪುನಃ ।
ಲಕ್ಷಹೋಮೋ ಭವೇತ್ಕುಂಡಂ ಯೋನಿವಕ್ತ್ರಂ ತ್ರಿಮೇಖಲಂ ॥ ೯೪ ॥

---

೯೦. ಆ ಮಂಟಪವನ್ನು ವಿಧಿವಿಧಾನದಂತೆ ಹತ್ತುಹಸ್ತ ಅಥವಾ ಎಂಟು ಹಸ್ತ ಉದ್ದವೂ ಅಗಲವೂ ಇರುವಂತೆ ಮಾಡಬೇಕು. ಆ ಪ್ರದೇಶವು ಉತ್ತರಕ್ಕೋ ಪೂರ್ವಕ್ಕೋ ಇಳಿಜಾರಾಗಿರಬೇಕು.

೯೧ ಆ ಮಂಟಪದ ಈಶಾನ್ಯಭಾಗದಲ್ಲಿ ಶುಭಲಕ್ಷಣಯುತವಾದ ಕುಂಡವನ್ನು ರಚಿಸಬೇಕು. ಯಥೋಕ್ತವಾದ ಅಳತೆಯಲ್ಲಿ ಕುಂಡ ರಚನೆ ಮಾಡದೆ ಹೋದರೆ ಅದು ಪ್ರಶಸ್ತವಾಗುವುದಿಲ್ಲ.

೯೨. ಅಷ್ಟೇ ಅಲ್ಲದೆ ಅನೇಕ ಭಯಕ್ಕೆ ಕಾರಣವಾಗುವುದು. ಆದಕಾರಣ ಈ ಶಾಂತಿ ಹೋಮಕುಂಡವನ್ನು ಸಂಪೂರ್ಣ ವಿಧಿವಿಧಾನದಂತೆಯೇ ಮಾಡಬೇಕೆಂದು ಉಕ್ತವಾಗಿದೆ.

೯೩. ಲಕ್ಷಹೋಮದಲ್ಲಿ ಪ್ರಯತ್ನಪಟ್ಟು ಯಥೋಕ್ತ ಪ್ರಮಾಣದಲ್ಲಿ ಆಹುತಿಗಳನ್ನೂ ದಕ್ಷಿಣೆಗಳನ್ನೂ ಕೊಟ್ಟು, ಕಾರ್ಯ ನಡೆಸಿದರೆ ಹತ್ತುಪಾಲು ಹೆಚ್ಚು ಗುಣವುಂಟೆಂದು ಪರಮೇಶ್ವರನೇ ಹೇಳಿದ್ದಾನೆ.

೯೪. ಲಕ್ಷಹೋಮ ಮಾಡುವ ಸಂದರ್ಭದಲ್ಲಿ ಅಗ್ನಿ ಕುಂಡವನ್ನು ಮತ್ತೊಂದು ಹಸ್ತ ಪ್ರಮಾಣ ವಿಸ್ತರಿಸಿ ನಾಲ್ಕುಹಸ್ತ ಆಯವಿರುವಂತೆಯೂ ಮೂರು ಮೇಖಲೆಗಳಿರುವಂತೆಯೂ ಮುಖದಲ್ಲಿ ಕುಂಡಯೋನಿಯುಳ್ಳಂತೆಯೂ ರಚಿಸಬೇಕು.

**ಸಂಸ್ಥಾಪನಾಯ ದೇವಾನಾಂ ವಪ್ರತ್ರಯಸಮಾವೃತಂ ।**
**ದ್ವಿರಂಗುಲೋಚ್ಛ್ರಿತೋ ವಿಪ್ರಃ ಪ್ರಥಮಃ ಸಮುದಾಹೃತಃ　॥ ೯೫ ॥**

**ಅಂಗುಲೋಚ್ಛ್ರಯಸಂಯುಕ್ತಂ ವಪ್ರದ್ವಯಮಥೋಪರಿ ।**
**ದ್ವ್ಯಂಗುಲಸ್ತತ್ರ ವಿಸ್ತಾರಃ ಸರ್ವೇಷಾಂ ಕಥ್ಯತೇ ಬುಧೈಃ　॥ ೯೬ ॥**

**ದಶಾಂಗುಲೋಚ್ಛ್ರಿತಾ ಭಿತ್ತಿಃ ಸ್ಥಂಡಿಲಸ್ಯ ತಥೋಪರಿ ।**
**ತಸ್ಮಿನ್ನಾವಾಹಯೇದ್ದೇವಾನ್ಪೂರ್ವವತ್ಪುಷ್ಪತಂಡುಲೈಃ　॥ ೯೭ ॥**

**ಆದಿತ್ಯಾಭಿಮುಖಾಃ ಸರ್ವಾಃ ಸ್ಥಾಪ್ಯಾಃ ಪ್ರತ್ಯಧಿದೇವತಾಃ ।**
**ಸ್ಥಾಪನೀಯಾ ಮುನಿಶ್ರೇಷ್ಠಾ ನಾಂತರೇಣ ಪರಾಙ್ಮುಖಾಃ　॥ ೯೮ ॥**

**ಗುರುತ್ಮಾನಧಿಕಸ್ತತ್ರ ಸಂಪೂಜ್ಯಃ ಶ್ರೀಯಮಿಚ್ಛತಾ ।**
**ಸಮಪೀನಶರೀರಸ್ತು ವಾಹನಂ ಪರಮೇಷ್ಠಿನಃ　॥ ೯೯ ॥**

---

೯೫. ದೇವತೆಗಳನ್ನು ಸ್ಥಾಪನೆ ಮಾಡುವುದಕ್ಕೆ ವೇದಿಯನ್ನು ಮೂರು ವಪ್ರಗಳುಳ್ಳದ್ದಾಗಿ ರಚಿಸಬೇಕು. ಒಂದನೆಯ ವಪ್ರವು ಎರಡು ಅಂಗುಲ ಎತ್ತರ ವಿರಬೇಕು.

೯೬. ಎರಡನೆಯ ವಪ್ರವನ್ನು ಅದರ ಮೇಲೆ ಒಂದು ಅಂಗುಲ ಎತ್ತರ ವಿರುವಂತೆ ರಚಿಸಬೇಕು. ಎಲ್ಲ ವಪ್ರಗಳು ಎರಡೆರಡು ಅಗುಂಲ ಅಗಲವಿರ ಬೇಕೆಂದು ಪ್ರಾಜ್ಞರು ಹೇಳುತ್ತಾರೆ.

೯೭. ಅಗ್ನಿ ಪ್ರತಿಷ್ಠಾಪನ ಸ್ಥಳ (ಸ್ಥಂಡಿಲ) ದ ಮೇಲೆ ಆವರಣದ ಕಟ್ಟೆಯು ಹತ್ತು ಅಂಗುಲ ಎತ್ತರವಿರಬೇಕು. ಹೀಗೆ ರಚಿಸಿದ ಬಳಿಕ ಹಿಂದಿನಂತೆ ಕುಸು ಮಾಕ್ಷತೆಗಳನ್ನು ಹಿಡಿದು ಅವರಲ್ಲಿ ದೇವರುಗಳನ್ನು ಆವಾಹಿಸಬೇಕು.

೯೮. ಅಧಿದೇವತೆ ಪ್ರತ್ಯಧಿದೇವತೆಗಳನ್ನೆಲ್ಲಾ ಆದಿತ್ಯಾಭಿಮುಖವಾಗಿರು ವಂತೆ ಸ್ಥಾಪಿಸಬೇಕು. ಮುನಿಶ್ರೇಷ್ಠರು ಸೂರ್ಯನ ಹಿಮ್ಮುಖದಲ್ಲಿಯಾಗಲಿ ದೂರದಲ್ಲಿಯಾಗಲಿ ಸ್ಥಾಪಿಸುವುದಿಲ್ಲ.

೯೯. ತನಗೆ ಸಂಪತ್ತು ಪ್ರಾಪ್ತವಾಗಬೇಕೆಂದು ಇಚ್ಛಿಸುವವನು ಗರುಡ ನನ್ನು ವಿಶೇಷವಾಗಿ ಪೂಜಿಸಬೇಕು. ಗರುಡನನ್ನು ಪ್ರಾರ್ಥಿಸುವಾಗ "ದೇವಾ ! ನೀನು ಸಮಪೂ ಋಷ್ಣ ತಪೂ ಆದ ಶರೀರಯುಕ್ತನಾಗಿ ವಿಷ್ಣುವಾಹನ ಎನ್ನಿಸಿರುವೆ.

ವಿಷಪಾಪಹರೋ ನಿತ್ಯಮತಃ ಶಾಂತಿಂ ಪ್ರಯಚ್ಛ ಮೇ ।
ಪೂರ್ವವತ್ಕುಂಭಮಾಮಂತ್ರ್ಯ ತದ್ವದ್ಧೋಮಂ ಸಮಾಚರೇತ್ ॥೧೦೦॥

ಸಹಸ್ರಾಣಾಂ ಶತಂ ಹುತ್ವಾ ಸಮಿತ್ಸಂಖ್ಯಾದಿಕಂ ಪುನಃ ।
ಔದುಂಬರೀಮಥಾರ್ದ್ರಾಂ ಚ ವಕ್ರಕೋಟಿರವರ್ಜಿತಾಂ ॥ ೧೦೧ ॥

ಬಾಹುಮಾತ್ರಾಂ ಸ್ರುಚಂ ಕೃತ್ವಾ ತತಃ ಸ್ತಂಭದ್ವಯೋಪರಿ ।
ಘೃತಧಾರಾಂ ತಥಾ ಸಮ್ಯಗಗ್ನೇರುಪರಿ ಪಾತಯೇತ್ ॥ ೧೦೨ ॥

ಪಾಠಯೇತ್ಸೂಕ್ತಮಾಗ್ನೇಯಂ ವೈಷ್ಣವಂ ರೌದ್ರಮೈಂದವಂ ।
ಮಹಾವೈಶ್ವಾನರಂ ಸಾಮ ಜ್ಯೇಷ್ಠಸಾಮ ಚ ಪಾಠಯೇತ್ ॥ ೧೦೩ ॥

---

೧೦೦. ಯಾವಾಗಲೂ ವಿಷದ ತಾಪವನ್ನು ಹೋಗಲಾಡಿಸುವ ಮಹಾ ಮಹಿಮನಾಗಿದ್ದೀಯೇ. ಇಂಥ ನೀನು ನನಗೆ ಶಾಂತಿಯನ್ನು ಕರುಣಿಸು" ಎಂದು ಹೇಳಬೇಕು. ಹಿಂದಿನಂತೆ ಕಲಶವನ್ನು ಅಭಿಮಂತ್ರಿಸಿ ಆ ಮಂತ್ರವತ್ತಾಗಿಯೇ ಹೋಮವನ್ನು ಮಾಡಬೇಕು.

೧೦೧. ಹೀಗೆ ಒಂದುಲಕ್ಷ ಸಮಿತ್ತುಗಳನ್ನು ಹೋಮ ಮಾಡಬೇಕು. ಡೊಂಕು ಹುಳುಕು ಇಲ್ಲದಂತೆ ಶೋಧಿಸಿ ಸಿದ್ಧಮಾಡಿರುವ ಅತ್ತಿಯ ಸಮಿತ್ತನ್ನು ಹೋಮ ಮಾಡಬೇಕು.

೧೦೨. ಸ್ರುಕ್ಕನ್ನು ಒಂದು ಬಾಹು ಪ್ರಮಾಣದಷ್ಟು ಉದ್ದಮಾಡಿ ಎರಡು ಕಂಬಗಳ ಮೇಲೆ ಅಡ್ಡಲಾಗಿ ಕಟ್ಟಿರುವ ಮರದ ಮೇಲಿಟ್ಟು ಸ್ರುಕ್ಕನ್ನು ಹಿಡಿದು ಅವರಲ್ಲಿ ಹಾಕುವ ತುಪ್ಪದ ಧಾರೆಯು ಆಹುತಿಯು, ಜ್ವಲಿಸುವ ಹೋಮಾಗ್ನಿಯ ಮೇಲೆ ಸರಿಯಾಗಿ ಬೀಳುವಂತೆ ಮಾಡಬೇಕು.

೧೦೩. ಈ ಹೋಮಕಾಲದಲ್ಲಿ ಆಗ್ನೇಯಸೂಕ್ತ, ವಿಷ್ಣುಸೂಕ್ತ, ಇಂದು ಸಂಬಂಧವಾದ ಸೂಕ್ತ, ರುದ್ರಸೂಕ್ತ, ಮಹಾವೈಶ್ವಾನರ ಸಾಮ, ಜ್ಯೇಷ್ಠಸಾಮ ಇವುಗಳನ್ನು ಪಾರಾಯಣ ಮಾಡಿಸುತ್ತಿರಬೇಕು.

ಸ್ನಾನಂ ತು ಯಜಮಾನಸ್ಯ ಪೂರ್ವವನ್ಮಂತ್ರವಾಚನಂ ।
ದಾತವ್ಯಾ ಯಜಮಾನೇನ ಪೂರ್ವವದ್ದಕ್ಷಿಣಾ ಪೃಥಕ್ ॥ ೧೦೪ ॥

ಕಾಮಕ್ರೋಧವಿಹೀನೇನ ಋತ್ವಿಗ್ಭ್ಯಃ ಶಾಂತಚೇತಸಃ ।
ನವಗ್ರಹಮುಖೇ ವಿಪ್ರಾಶ್ಚತ್ವಾರೋ ವೇದವಾದಿನಃ ॥ ೧೦೫ ॥

ಅಥ ವಾ ಋತ್ವಿಜೌ ಶಾನ್ತೌ ದ್ವಾವೇವ ಶ್ರುತಿಕೋವಿದೌ ।
ಕಾರ್ಯಾವಯುತಹೋಮೇ ತು ನ ಪ್ರಸಜ್ಯೇತ ವಿಸ್ತರೇ ॥ ೧೦೬ ॥

ತದ್ವಚ್ಚ ದಶ ಚಾಷ್ಟೌ ವಾ ಲಕ್ಷಹೋಮೇಽಪಿ ಋತ್ವಿಜಃ ।
ಕರ್ತವ್ಯಾಃ ಶಕ್ತಿತಸ್ತದ್ವಚ್ಚತ್ವಾರೋ ವಾ ವಿಮತ್ಸರಾಃ ॥ ೧೦೭ ॥

---

೧೦೪. ಹಿಂದೆ ಹೇಳಿದ ಪ್ರಕಾರ ಮಂತ್ರಪಠನಪೂರ್ವಕವಾಗಿ ಯಜಮಾನನಿಗೆ ಪ್ರೋಕ್ಷಣಸ್ನಾನಾದಿಗಳನ್ನು ಮಾಡಿಸಬೇಕು. ಯಜಮಾನನು ಕಾಮಕ್ರೋಧಾದಿಗಳಿಲ್ಲದೆ ಶಾಂತಚಿತ್ತನಾಗಿ ಹಿಂದೆ ಹೇಳಿದಂತೆ ಋತ್ವಿಜರಿಗೆ ಪ್ರತ್ಯೇಕಪ್ರತ್ಯೇಕವಾಗಿ ದಕ್ಷಿಣೆಗಳನ್ನು ಕೊಡಬೇಕು.

೧೦೫. ನವಗ್ರಹ ಮುಖದಲ್ಲಿ ವೇದವಿದರೂ ಶಾಂತಚಿತ್ತರೂ ಆದ ನಾಲ್ಕು ಮಂದಿ ಋತ್ವಿಜರು ಇರಬೇಕು.

೧೦೬. ಮಹಾಮೇಧಾವಿಗಳೂ ಯಜ್ಞಕರ್ಮನಿಪುಣರೂ ಶಾಂತರೂ ಆದ ಇಬ್ಬರೇ ಋತ್ವಿಜರು ಇದ್ದು ಆಯುತಹೋಮದಲ್ಲಿ ಕಾರ್ಯನಿರ್ವಹಿಸಬಹುದು.

೧೦೭. ವಿಸ್ತಾರವಾಗಿ ಮಾಡತಕ್ಕ ಲಕ್ಷಹೋಮದಲ್ಲಿ ಹತ್ತುಮಂದಿ ಅಥವಾ ಎಂಟುಮಂದಿ ಋತ್ವಿಜರು ಸಾಮಾನ್ಯವಾಗಿ ಬೇಕಾಗುವರು. ಹಿಂದೆ ಹೇಳಿದಂತೆ ಮಹಾಮೇಧಾವಿಗಳೂ, ನಿರ್ಮತ್ಸರರೂ, ಹೊಂದಿಕೊಂಡು ಕೆಲಸಮಾಡುವ ಸ್ವಭಾವದರೂ ಆಗಿದ್ದರೆ ನಾಲ್ಕುಮಂದಿ ಇದ್ದುಕೊಂಡೇ ನಿರ್ವಹಿಸಬಹುದು.

ನವಗ್ರಹಮುಖೇ ಸರ್ವಂ ಲಕ್ಷಹೋಮೇ ದಶೋತ್ತರಂ ।
ದದ್ಯಾಚ್ಚ ಪಾಂಡವಶ್ರೇಷ್ಠ ಭೂಷಣಾನ್ಯಪಿ ಶಕ್ತಿತಃ ॥ ೧೦೮ ॥

ಶಯನಾನಿ ಚ ವಸ್ತ್ರಾಣಿ ಹೈಮಾನಿ ಕಟಕಾನಿ ಚ ।
ಕರ್ಣಾಂಗುಲೀಪವಿತ್ರಾಣಿ ಭಕ್ತಿಮಾನ್ ಪ್ರತಿಪಾದಯೇತ್ ॥ ೧೦೯ ॥

ನ ಕುರ್ಯಾದ್ದಕ್ಷಿಣಾಹೀನಂ ವಿತ್ತಶಾಠ್ಯೇನ ಮಾನವಃ ।
ಅದದಲ್ಲೋಭಮೋಹಾಭ್ಯಾಂ ಕುಲಕ್ಷಯಮವಾಪ್ನುಯಾತ್ ॥೧೧೦॥

ಅನ್ನದಾನಂ ಯಥಾಶಕ್ತ್ಯಾ ದಾತವ್ಯಂ ಭೂತಿಮಿಚ್ಛತಾ ।
ಅನ್ನಹೀನಂ ವ್ರತಂ ಯಸ್ಮಾದ್ದುರ್ಭಿಕ್ಷಫಲದಂ ಭವೇತ್ ॥ ೧೧೧ ॥

---

೧೦೮. ಅಯ್ಯಾ ಪಾಂಡವಶ್ರೇಷ್ಠನೇ! ನವಗ್ರಹಮುಖದಲ್ಲಿ, ಉಕ್ತವಾದ ಸರ್ವಮಂತ್ರಗಳಷ್ಟೇ ಆಹುತಿಯನ್ನೂ, ಲಕ್ಷಹೋಮದಲ್ಲಿ ಅದರ ಮೇಲೆ ಹತ್ತು ಆಹುತಿಗಳನ್ನೂ ಕೊಡಬೇಕು.

೧೦೯ ಭಕ್ತಿಯುತನಾದ ಯಜಮಾನನು ಋತ್ವಿಜರಿಗೆ ತನ್ನ ಶಕ್ತ್ಯನುಸಾರ ಚಿನ್ನದ ತೋಡಾ, ಕರ್ಣಕುಂಡಲ, ಪವಿತ್ರದ ಉಂಗುರ ಮುಂತಾದ ಭೂಷಣಗಳು, ವಸ್ತ್ರಗಳು, ಶಯ್ಯೆ, ಮುಂತಾದುವನ್ನು ಕೊಡಬೇಕು.

೧೧೦. ದ್ರವ್ಯಾನುಕೂಲವಿದ್ದರೂ ಯಜಮಾನನು ಜಿಪುಣತನದಿಂದ ಸರಿಯಾಗಿ ದಕ್ಷಿಣೆ ಕೊಡದೆ ಇಂಥಾ ಯಜ್ಞಗಳನ್ನು ಮಾಡಬಾರದು. ಲೋಭದಿಂದಲೋ ಅಜ್ಞಾನದಿಂದಲೋ ಹಾಗೆ ಕೊಡದೆಹೋದರೆ ಅವನ ಕುಲಕ್ಕೆ ಹಾನಿ ಸಂಭವಿಸುವುದು.

೧೧೧. ತನಗೆ ಶ್ರೇಯಸ್ಸಾಗಬೇಕೆಂದು ಆಶಿಸುವವನು ತನ್ನ ಶಕ್ತಿಯಿದ್ದಷ್ಟು ಜನಕ್ಕೆ ಅನ್ನದಾನಮಾಡಬೇಕು. ಅನ್ನದಾನಮಾಡದೆ ಕೇವಲ ವ್ರತಮಾಡಿದರೆ ದುರ್ಭಿಕ್ಷಪ್ರಾಪ್ತಿಯನ್ನುಂಟುಮಾಡುವುದು.

**ರಾಷ್ಟ್ರಂ ಹನ್ಯಾದಂಗಹೀನೋ ಮಂತ್ರಹೀನಸ್ತು ಋತ್ವಿಜಃ ।**
**ಅದಕ್ಷಿಣೋ ಯಜಮಾನಂ ನಾಸ್ತಿ ಯಜ್ಞಸಮೋ ರಿಪುಃ ॥ ೧೧೨ ॥**

**ನ ಚಾಪ್ಯಲ್ಪಧನಃ ಕುರ್ಯಾಲ್ಲಕ್ಷಹೋಮಂ ನರಃ ಕ್ವಚಿತ್ ।**
**ತಸ್ಮಾತ್ಪೀಡಾಕರೋ ನಿತ್ಯಂ ಯ ಏವ ಭವತಿ ಗ್ರಹಃ ॥ ೧೧೩ ॥**

**ತಮೇವ ಪೂಜಯೇದ್ಭಕ್ತ್ಯಾ ದ್ವೌ ವಾ ತ್ರೀನ್ ವಾ ಯಥಾವಿಧಿ ।**
**ಏಕಮಪ್ಯರ್ಚಯೇದ್ಭಕ್ತ್ಯಾ ಬ್ರಾಹ್ಮಣಂ ವೇದಪಾರಗಂ ॥ ೧೧೪ ॥**

**ದಕ್ಷಿಣಾಭಿಃ ಪ್ರಯತ್ನೇನ ಬಹೂನ್ವಾ ಬಹುವಿಸ್ತರವಾನ್ ।**
**ಲಕ್ಷಹೋಮಸ್ತು ಕರ್ತವ್ಯೋ ಯದಿ ವಿತ್ತಂ ಗೃಹೇ ಗೃಹೇ ॥ ೧೧೫ ॥**

---

೧೧೨. ಯಜ್ಞವು ಸಾಂಗವಾಗಿ ನೆರವೇರದೆ ತದಂಗವಾದ ಕರ್ಮಗಳು ಲೋಪವಾದರೆ ಯಜ್ಞ ನಡೆದ ಪ್ರಾಂತಕ್ಕೆ ಹಾನಿಸಂಭವಿಸುವುದು. ಯಜ್ಞದಲ್ಲಿ ಮಂತ್ರಗಳನ್ನು ಸ್ವರಸಹಿತವಾಗಿಯೂ ಕ್ರಮವಾಗಿಯೂ ಸಂಪೂರ್ಣವಾಗಿಯೂ ಉಚ್ಚರಿಸದೆ ಲೋಪಮಾಡಿದರೆ ಋತ್ವಿಜರಿಗೆ ಹಾನಿತಟ್ಟುವುದು, ಋತ್ವಿಜರ ಶ್ರಮಕ್ಕೆ ಅನುರೂಪವಾಗಿ ದಕ್ಷಿಣೆಕೊಡದೆ ತಪ್ಪಿದರೆ ಯಜಮಾನನಿಗೆ ಕೇಡಾಗುವುದು. ಆದ್ದರಿಂದ ಚೆನ್ನಾಗಿ ಯೋಚಿಸಿದರೆ ಸಮರ್ಪಕವಾದ ರೀತಿಯಲ್ಲಿ ನಡೆಯಿಸಲು ಕೈಯ್ಯಲ್ಲಿ ಆಗದೆ ಇದ್ದಾಗ, ಒಂದುವಿಧದಲ್ಲಿ ಅಂಥ ಯಜ್ಞಕರ್ಮಕ್ಕೆ ಸಮವಾದ ಶತ್ರುವೇ ಇಲ್ಲ ಎಂದು ಹೇಳಬೇಕು.

೧೧೩. ದ್ರವ್ಯಾನುಕೂಲ, ಜನಸಹಾಯ ಇವು ಇಲ್ಲದೆ, ಅಲ್ಪಧನವುಳ್ಳ ಮನುಷ್ಯನು ಲಕ್ಷಹೋಮದಂತಹ ಮಹಾಯಜ್ಞವನ್ನು ಮಾಡಲೇಬಾರದು. ಅಲ್ಪಧನವುಳ್ಳವನು ತನಗೆ ಯಾವ ಗ್ರಹವು ಕ್ರೂರವಾಗಿ ಪೀಡಾಕರವಾಗಿರುವುದೋ

೧೧೪. ಅಂತಹ ಗ್ರಹವನ್ನು ನಿತ್ಯವೂ ಪೂಜಿಸಬೇಕು. ಅಂತಹ ಗ್ರಹದ ಪ್ರೀತ್ಯರ್ಥವಾಗಿ ವಿಧಿವಿಧಾನದಂತೆ ವೇದಪಾರಂಗತರಾದ ಮೂವರು ವಿಪ್ರರನ್ನೋ ಇಬ್ಬರು ವಿಪ್ರರನ್ನೋ ಕೊನೆಗೆ ಒಬ್ಬ ವಿಪ್ರನನ್ನೋ ಭಕ್ತಿಯಿಂದ ಪೂಜಿಸಬೇಕು.

೧೧೫. ತುಂಬಾ ದ್ರವ್ಯಸಂಪತ್ತುಳ್ಳವನು ಪ್ರಯತ್ನಪಟ್ಟು ಸಮೃದ್ಧಿಯಾಗಿ ದಕ್ಷಿಣೆಕೊಟ್ಟು ಬಹುಮಂದಿ ವಿಪ್ರರನ್ನು ಪೂಜಿಸಿ ಲಕ್ಷಹೋಮಮಾಡಬೇಕು. ಹೀಗೆ ಮಾಡಿದರೆ ಪ್ರತಿಯೊಂದು ಮನೆಯಲ್ಲಿಯೂ ವಿತ್ತಸಮೃದ್ಧಿಯುಂಟಾಗುವುದು.

ಯತಃ ಸರ್ವಾನವಾಪ್ನೋತಿ ಕುರ್ವನ್ಕಾಮಾನ್ವಿಧಾನತಃ ।
ಪೂಜ್ಯತೇ ಶಿವಲೋಕೇ ಚ ವಸ್ವಾದಿತ್ಯಮರುದ್ಗಣೈಃ ॥ ೧೧೬ ॥

ಯಾವತ್ಕಲ್ಪಶತಾನ್ಯಷ್ಟಾವಥ ಮೋಕ್ಷಮವಾಪ್ನುಯಾತ್ ।
ಸಕಾಮೋ ಯಸ್ತ್ವಿಮಂ ಕುರ್ಯಾಲ್ಲಕ್ಷಹೋಮಂ ಯಥಾವಿಧಿ ॥ ೧೧೭ ॥

ಸ ತಂ ಕಾಮಮವಾಪ್ನೋತಿ ಪದಂ ಚಾನಂತ್ಯಮಶ್ನುತೇ ।
ಪುತ್ರಾರ್ಥೀ ಲಭತೇ ಪುತ್ರಂ ಧನಾರ್ಥೀ ಲಭತೇ ಧನಂ ॥ ೧೧೮ ॥

ಭಾರ್ಯಾರ್ಥೀ ಶೋಭನಾಂ ಭಾರ್ಯಾ ಕುಮಾರೀ ಚ ಶುಭಂ ಪತಿಂ ।
ಭ್ರಷ್ಟರಾಜ್ಯಸ್ತಥಾ ರಾಜ್ಯಂ ಶ್ರೀಕಾಮಃ ಶ್ರಿಯಮಾಪ್ನುಯಾತ್ ॥೧೧೯॥

ಯಂ ಯಂ ಪ್ರಾರ್ಥಯತೇ ಕಾಮಂ ತಂ ತಮಾಪ್ನೋತಿ ಪುಷ್ಕಲಂ ।
ನಿಷ್ಕಾಮಃ ಕುರುತೇ ಯಸ್ತು ಪರಂ ಬ್ರಹ್ಮ ಸ ಗಚ್ಛತಿ ॥ ೧೨೦ ॥

---

೧೧೬. ವಿಧಿವಿಧಾನದಂತೆ ಎಲ್ಲವನ್ನೂ ತಪ್ಪದೆ ಮಾಡಿದವನು ತನ್ನ ಇಷ್ಟಾರ್ಥಗಳನ್ನು ಹೊಂದುತ್ತಾನೆ. ಅಷ್ಟಲ್ಲದೆ ಶಿವಲೋಕವನ್ನು ಸೇರಿ ಚತುರ್ದಶ ಮನುಗಳು, ದ್ವಾದಶಾದಿತ್ಯರು, ಮರುದ್ಗಣಗಳು ಇವರೊಡನೆ ನೂರೆಂಟು ಕಲ್ಪ ಕಾಲ ಪೂಜಿತನಾಗುತ್ತಾನೆ. ಆಮೇಲೆ ಮೋಕ್ಷಹೊಂದುತ್ತಾನೆ.

೧೧೭. ಯಾವ ಫಲವನ್ನಾದರೂ ಕುರಿತುಕೊಂಡು ವಿಧಿಪ್ರಕಾರ ಲಕ್ಷ ಹೋಮ ಮಾಡಿದರೆ ಆ ಫಲವನ್ನು ನಿಜವಾಗಿ ಹೊಂದುತ್ತಾನೆ. ಅಲ್ಲದೆ ಶಾಶ್ವತ ವಾಗಿ ಪರಮಪದವನ್ನೂ ಹೊಂದುತ್ತಾನೆ.

೧೧೮-೧೧೯. ಪುತ್ರಾಪೇಕ್ಷೆಯಿಂದ ಇದನ್ನಾಚರಿಸಿದವನು ಪುತ್ರರನ್ನು ಪಡೆಯುವನು. ದ್ರವ್ಯಾಪೇಕ್ಷೆಯಿಂದ ಮಾಡಿದವನು ದ್ರವ್ಯವನ್ನು ಪಡೆಯು ವನು. ಸ್ತ್ರೀರತ್ನವನ್ನು ವಿವಾಹವಾಗಲು ಅಪೇಕ್ಷಿಸುವವನಿಗೆ ಶೋಭನಾಂಗಿ ಯಾದ ಸ್ತ್ರೀ ದೊರಕುವಳು. ಕನ್ಯಾವಿವಾಹೋದ್ದೇಶದಿಂದ ಇದನ್ನು ಮಾಡಿದರೆ ಆ ಕನ್ಯೆಗೆ ಶುಭಲಕ್ಷಣನಾದ ಪತಿ ಸಿಕ್ಕುವನು.

೧೨೦. ರಾಜ್ಯಭ್ರಷ್ಟನು ಇದನ್ನು ಮಾಡಿದರೆ ಪುನಃ ರಾಜ್ಯವನ್ನು ಹೊಂದುವನು. ಸಂಪತ್ತನ್ನಾಶಿಸುವವನು ಸಂಪತ್ತನ್ನು ಹೊಂದುವನು. ಇದರ

**ಶಾಂತಿಂ ನವಗ್ರಹಮಯೀಂ ದುರಿತೋಪಶಾಂತಿಂ ।**
**ರಾಜನ್ಕರೋತಿ ಬಹುನಾ ವಿಧಿವದ್ದ್ವಿಜೇಂದ್ರೈಃ ॥**
**ಕ್ಷೇಮಂ ಸುಭಿಕ್ಷಮತುಲಂ ಕುಲವೃದ್ಧಿಸಂಪತ್ ।**
**ತತ್ರಾಸ್ತಿ ಯತ್ರ ಕುರುತೇ ಬತ ಲಕ್ಷಹೋಮಂ ॥ ೧೨೧ ॥**

**ಇತಿ ಶ್ರೀಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣಯುಧಿಷ್ಠಿರ ಸಂವಾದೇ ನವಗ್ರಹಲಕ್ಷಹೋಮವಿಧಿವರ್ಣನಂ ನಾಮೈಕ ಚತ್ವಾರಿಂಶದುತ್ತರಶತತಮೋಽಧ್ಯಾಯಃ.**



---

ಕರ್ತನು ಯಾವಯಾವುದನ್ನು ಅಪೇಕ್ಷಿಸುತ್ತಾನೋ ಅದನ್ನು ಖಂಡಿತ ಹೊಂದುವನು. ನಿಷ್ಕಾಮನಾಗಿ ಇದನ್ನು ಮಾಡಿದರೆ ಅವನು ಪರಬ್ರಹ್ಮವನ್ನು ಹೊಂದುತ್ತಾನೆ.

೧೨೧. ಎಲೈ ಧರ್ಮರಾಜನೇ! ಸಮಸ್ತ ದುರಿತಗಳನ್ನು ಉಪಶಮನ ಮಾಡಬಲ್ಲದ್ದೂ, ನವಗ್ರಹಮಂತ್ರಾತ್ಮಕವೂ ಆದ ಲಕ್ಷಹೋಮವೆಂಬ ಶಾಂತಿ ಕರ್ಮವನ್ನು ಅನೇಕಜನ ಬ್ರಾಹ್ಮಣೋತ್ತಮರಿಂದ ವಿಧಿವಿಧಾನದಂತೆ ಯಾವ ದೇಶದಲ್ಲಿ ನಡೆಸಲಾಗುವುದೋ, ಆ ರಾಜ್ಯದಲ್ಲಿ ಕ್ಷೇಮಾಭಿವೃದ್ಧಿ ಅಸದೃಶವಾದ ಸುಭಿಕ್ಷ ಇವು ನೆಲಸಿ ಜನರಿಗೆ ಕುಲವೃದ್ಧಿ ಸಂಪತ್ತು ಇವು ಉಂಟಾಗುವುವು.

ಇಲ್ಲಿಗೆ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ನವಗ್ರಹ ಲಕ್ಷಹೋಮ ವಿಧಿವರ್ಣನೆಯೆಂಬ ನೂರನಲವತ್ತೊಂದನೆಯ ಅಧ್ಯಾಯ ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣ

## ಉತ್ತರಪರ್ವಣಿ

## ದ್ವಿಚತ್ವಾರಿಂಶದುತ್ತರಶತತಮೋಽಧ್ಯಾಯಃ

॥ ಶ್ರೀಕೃಷ್ಣ ಉವಾಚ ॥

ರಾಜಾ ಸಂವರಣಃ ಪೂರ್ವಂ ಪ್ರತಿಷ್ಠಾನೇ ಪುರೋತ್ತಮೇ ।
ಬಭೂವ ಸ ಮಹಾಭಾಗಃ ಶಾಸ್ತ್ರಾರ್ಥ ಕುಶಲೋ ಬಲೀ ॥ ೧ ॥

ಬ್ರಹ್ಮಣ್ಯಃ ಪಿತೃಭಕ್ತಶ್ಚ ದೇವಬ್ರಾಹ್ಮಣಪೂಜಕಃ ।
ತಸ್ಯಾಥ ಕುರ್ವತೋ ರಾಜ್ಯಂ ಸಮ್ಯಕ್ಪಾಲಯತಃ ಪ್ರಜಾಃ ॥ ೨ ॥

ಆಜಗಾಮ ಮಹಾಯೋಗೀ ಸನಕೋ ಬ್ರಹ್ಮಣಃ ಸುತಃ ।
ದತ್ವಾ ತಸ್ಯಾಸನಂ ರಾಜಾ ಪ್ರಣಮ್ಯ ಶಿರಸಾ ತಥಾ ॥ ೩ ॥

---

## ನೂರನಲವತ್ತೆರಡನೆಯ ಅಧ್ಯಾಯ

೧. ಶ್ರೀಕೃಷ್ಣನು ಹೇಳುತ್ತಾನೆ—ಶ್ರೇಷ್ಠವಾದ ಪ್ರತಿಷ್ಠಾನ ನಗರದಲ್ಲಿ ಬಹು ಹಿಂದಿನಕಾಲದಲ್ಲಿ ಸಂವರಣನೆಂಬ ರಾಜನಿದ್ದನು. ಆ ಪುಣ್ಯಾತ್ಮನು ಶಾಸ್ತ್ರಾರ್ಥಕುಶಲನೂ ತುಂಬಾ ಬಲಶಾಲಿಯೂ ಆಗಿದ್ದನು.

೨. ಮತ್ತು ಆತನು ಬ್ರಹ್ಮಜ್ಞಾನನಿಷ್ಠನೂ, ಮಾತಾಪಿತೃಗಳಲ್ಲಿ ಭಕ್ತಿಯುಳ್ಳವನೂ, ದೇವಬ್ರಾಹ್ಮಣರನ್ನು ಪೂಜಿಸತಕ್ಕವನೂ ಆಗಿದ್ದನು. ಅವನು ಪ್ರಜೆಗಳನ್ನು ಚೆನ್ನಾಗಿ ಪಾಲಿಸುತ್ತಾ ರಾಜ್ಯಭಾರಮಾಡುತ್ತಿದ್ದನು.

೩. ಹೀಗಿರುತ್ತಿರಲು ಬ್ರಹ್ಮನ ಮಾನಸಪುತ್ರನಾದ ಸನಕನೆಂಬ ಮಹಾಯೋಗಿಯು ಆತನ ನಗರಿಗೆ ಬಂದನು. ಈರೀತಿ ಬಂದ ಮಹಾತ್ಮನನ್ನು ಆ ರಾಜನು ಪೀಠದಲ್ಲಿ ಕುಳ್ಳಿರಿಸಿ ತಲೆಬಾಗಿ ನಮಸ್ಕರಿಸಿ, ಬಳಿಕ ಅರ್ಘ್ಯಪಾದ್ಯಾದಿಗಳನ್ನು ಸಮರ್ಪಿಸಿ ಪೂಜಿಸಿ, ತನ್ನ ಭಕ್ತಿಯನ್ನು ತೋರ್ಪಡಿಸಿದನು.

**ಪೂಜಯಿತ್ವಾರ್ಘ್ಯಪಾದ್ಯಾದ್ಯೈರಾತ್ಮಾನಂ ವಿನಿವೇದ್ಯ ಚ ।**
**ಇತಿಹಾಸಪುರಾಣೋಕ್ತಾಶ್ಚಕಾರ ವಿವಿಧಾಃ ಕಥಾಃ　　॥ ४ ॥**

**ರಾಜರ್ಷೀಣಾಂ ಪುರಾಣಾಂ ಚ ಚರಿತಾನಿ ಯಥಾರ್ಥವತ್ ।**
**ತತಃ ಕಥಾಂತರೇ ರಾಜಾ ಕಾರ್ಯಂ ಮನಸಿ ಸಂಸ್ಥಿತಂ　　॥ ೫ ॥**

**ಹಿತಾಯ ಪೃಥಿವೀಶಾನಾಂ ಜಗತಶ್ಚಾತ್ಮನಸ್ತಥಾ ।**
**ಪಪ್ರಚ್ಛ ವಿನಯೋಪೇತೋ ಯೋಗಾಚಾರ್ಯಂ ಮಹಾಮತಿಃ ॥ ೬ ॥**

**॥ ಸಂವರಣ ಉವಾಚ ॥**

**ಭಗವನ್ಮಹದುತ್ಪಾತಸಂಭವೇ ಭೂಪ್ರಕಂಪನೇ ।**
**ನಿರ್ಘಾತೇ ಪಾಂಸುವರ್ಷೇ ಚ ಗೃಹಭಂಗೇ ತಥೈವ ಚ　　॥ ೭ ॥**

**ಜನ್ಮನಕ್ಷತ್ರಪೀಡಾಸು ಅನಾವೃಷ್ಟಿಭಯೇಷು ಚ ।**
**ಜ್ವರೇಷು ಗ್ರಹಪೀಡಾಸು ದುರ್ಭಿಕ್ಷೇ ರಾಷ್ಟ್ರವಿಗ್ರಹೇ　　॥ ೮ ॥**

---

४. ಇದರಿಂದ ತುಷ್ಟನಾದ ಯೋಗಿಯು ಇತಿಹಾಸಪುರಾಣಗಳಲ್ಲಿ ಕಥಾರೂಪವಾಗಿ ಹೇಳಿರುವ ಹಿಂದಿನ ಕಾಲದ ರಾಜರ್ಷಿಗಳ ಚರಿತ್ರೆಗಳನ್ನೂ ಪಟ್ಟಣಗಳ ಚರಿತ್ರೆಗಳನ್ನು ಯಥಾಸ್ಥಿತವಾಗಿ ತಿಳಿಯುವಂತೆ ವಿಶದಗೊಳಿಸಿದನು.

೫-೬. ಮಹಾಮತಿಯಾದ ಆ ರಾಜನು ಲೋಕಕ್ಕೂ ರಾಜರುಗಳಿಗೂ ತನಗೂ ಹಿತವಾಗುವುದಕ್ಕೋಸ್ಕರ ಆ ಕಥಾಶ್ರವಣಾನಂತರ ತನ್ನ ಮನಸ್ಸಿನಲ್ಲಿ ಒಂದು ಕಾರ್ಯವನ್ನು ಚಿಂತಿಸಿ ವಿನಯಯುಕ್ತನಾಗಿ ಆ ಯೋಗಾಚಾರ್ಯನನ್ನು ಈ ರೀತಿಯಾಗಿ ಪ್ರಶ್ನಿಸಿದನು.

೭. ಸಂವರಣನು ಕೇಳುತ್ತಾನೆ—ಸ್ವಾಮಿ ದ್ವಿಜಶ್ರೇಷ್ಠರೇ ! ಭೂಕಂಪ, ಬರಸಿಡಿಲ ಹೊಡೆತ, ಧೂಳಿನ ವೃಷ್ಟಿ, ಮುಂತಾದ ಮಹಾದುಶ್ಶಕುನಗಳು ಪ್ರಾಪ್ತವಾದಾಗ ಯಾವಕಾರ್ಯ ಮಾಡಬೇಕು. ಮನೆಯು ಮುರಿದುಬೀಳುವುದು.

೮. ಜನ್ಮನಕ್ಷತ್ರದಲ್ಲಿ ಪೀಡೆಗಳೊದಗುವುದು, ಅನಾವೃಷ್ಟಿಭಯ, ಜ್ವರಪೀಡೆ, ಗ್ರಹಬಾಧೆಗಳು, ಕ್ಷಾಮಬಾಧೆ, ಪರರಾಷ್ಟ್ರದೊಡನೆ ಯುದ್ಧ.

ವ್ಯಾಧೀನಾಂ ಸಂಭವೇ ಜಾತೇ ಶರೀರೇ ಚಾತಿಪೀಡಿತೇ ।
ಕ್ಲೇಶೇ ಮಹತಿ ಚೋತ್ಪನ್ನೇ ಕಿಂ ಕರ್ತವ್ಯಂ ನರೋತ್ತಮೈಃ ॥ ೯ ॥

ಸ್ವರ್ಗಸ್ಯ ಸಾಧನಂ ಯಚ್ಚ ಕೀರ್ತಿದಂ ಧನದಂ ತಥಾ ।
ಪ್ರಬ್ರೂಹಿ ಮೇ ದ್ವಿಜಶ್ರೇಷ್ಠ ತಥಾರೋಗ್ಯಪ್ರದಂ ನೃಣಾಂ ॥ ೧೦ ॥

॥ ಸನತ್ಕುಮಾರ ಉವಾಚ ॥

ಶೃಣು ರಾಜನ್ಪ್ರವಕ್ಷ್ಯಾಮಿ ಶಾಂತಿಕರ್ಮ ಹ್ಯನುತ್ತಮಂ ।
ಕೋಟಿಹೋಮಾಖ್ಯಮತುಲಂ ಸರ್ವಕಾಮಫಲಪ್ರದಂ ॥ ೧೧ ॥

ಬ್ರಹ್ಮಹತ್ಯಾದಿಪಾಪಾನಿ ಯೇನ ನಶ್ಯಂತಿ ತತ್ಕ್ಷಣಾತ್ ।
ಉತ್ಪಾತಾಃ ಪ್ರಶಮಂ ಯಾಂತಿ ಮಹತ್ಸಂಪದ್ಯತೇ ಸುಖಂ ॥ ೧೨ ॥

---

೯. ಸಾಂಕ್ರಾಮಿಕ ವ್ಯಾಧಿ, ಶರೀರದಲ್ಲಿ ಅತಿಯಾಗಿ ವೇದನೆ, ಮೊದಲಾದ ಮಹಾ ಕ್ಲೇಶ ಪ್ರಾಪ್ತಿಯಾದಾಗಲೂ ಸತ್ಪುರುಷರು ಮಾಡಬೇಕಾದ ಕಾರ್ಯವಾವುದು ?

೧೦. ಮಾನವರಿಗೆ ಸ್ವರ್ಗಪ್ರಾಪ್ತಿಸಾಧನವೂ, ಕೀರ್ತಿದಾಯಕವೂ, ಐಶ್ವರ್ಯಪ್ರದವೂ, ಆರೋಗ್ಯದಾಯಕವೂ, ಆದ ಕಾರ್ಯಗಳಾವುವು ಎಂಬುದನ್ನು ಕೃಪೆಯಿಟ್ಟು ಹೇಳಬೇಕು ಎಂದನು.

೧೧ ಸನತ್ಕುಮಾರ ಮುನಿವರ್ಯರು ಹೇಳುತ್ತಾರೆ.—ಅಯ್ಯಾ ಪ್ರಭುವರ್ಯನೇ! ಅಂತಹ ಸಂದರ್ಭದಲ್ಲಿ ಆಚರಿಸಲು ಅತಿ ಪ್ರಶಸ್ತವೆನಿಸಿರುವುದೂ ಸಮಸ್ತ ಇಷ್ಟ ಕಾಮ್ಯಾರ್ಥ (ಫಲ) ಗಳನ್ನು ಕೊಡತಕ್ಕುದೂ ಆದ ಕೋಟಿಹೋಮವೆಂಬ ಹೆಸರುಳ್ಳ, ಶಾಂತಿಕರ್ಮವೊಂದನ್ನು ಹೇಳುತ್ತೇನೆ ಕೇಳು.

೧೨. ಈ ಶಾಂತಿಕರ್ಮವನ್ನಾಚರಿಸಿದರೆ ಬ್ರಹ್ಮಹತ್ಯ ಮೊದಲಾದ ಪಾಪಗಳು ಕೂಡಲೆ ನಾಶವಾಗುವುವು. ಮಹೋತ್ಪಾತಾದಿ ದುಷ್ಟಾರಿಷ್ಟಗಳು ಶಮನ ಹೊಂದುವುವು. ಅಲ್ಲದೆ ಮಹತ್ತಾದ ಸುಖವು ಲಭಿಸುವುದು.

**ವಿಧಾನಂ ತಸ್ಯ ವಕ್ಷ್ಯಾಮಿ ಶೃಣುಷ್ವೈಕಮನಾ ಭವ ।**
**ದೇವಾಗಾರೇ ನದೀತೀರೇ ವನೇ ವಾ ಭವನೇಽಪಿ ವಾ ॥ ೧೩ ॥**

**ಪರ್ವತೇ ವಾಪಿ ಕುರ್ವೀತ ಯ ಇಚ್ಛೇತ್ಕ್ಷೇಮಮಾತ್ಮನಃ ।**
**ಶುಭನಕ್ಷತ್ರಯೋಗೇ ಚ ವಾರೇ ಪೂರ್ವಗುಣಾನ್ವಿತೇ ॥ ೧೪ ॥**

**ಯಜಮಾನಸ್ಯಾನುಕೂಲ್ಯೇ ಕೋಟಿಹೋಮಂ ಸಮಾಚರೇತ್ ।**
**ಪೂಜಯಿತ್ವಾ ಪ್ರಯತ್ನೇನ ಬ್ರಾಹ್ಮಣಂ ವೇದಪಾರಗಂ ॥ ೧೫ ॥**

**ವಸ್ತ್ರೈರ್ವಿಭೂಷಣೈಶ್ಚೈವ ಗಂಧಮಾಲ್ಯಾನುಲೇಪನೈಃ ।**
**ಪ್ರಣಮ್ಯ ವಿಧಿವತ್ತಸ್ಮೈ ಆತ್ಮಾನಂ ವಿನಿವೇದಯೇತ್ ॥ ೧೬ ॥**

**ತ್ವಂ ನೋ ಗತಿಃ ಪಿತಾ ಮಾತಾ ತ್ವಂ ಗತಿಸ್ತ್ವಂ ಪರಾಯಣಃ ।**
**ತ್ವತ್ಪ್ರಸಾದೇನ ವಿಪ್ರರ್ಷೇ ಸರ್ವಂ ಮೇ ಸ್ಯಾನ್ಮನೋಗತಂ ॥ ೧೭ ॥**

---

೧೩. ಅದನ್ನು ಆಚರಿಸುವ ವಿಧಾನವನ್ನು ಹೇಳುತ್ತೇನೆ; ಚಿತ್ತೈಕಾಗ್ರತೆಯಿಂದ ಕೇಳು. ತನಗೆ ಕುಶಲವಾಗಬೇಕೆಂದು ಅಪೇಕ್ಷಿಸುವ ಕರ್ತನು ದೇವಾಲಯ, ನದಿಯತೀರ, ಪರಿಶುದ್ಧವಾದವನ, ಅಥವಾ ವಿಶಾಲವಾದ ದಿವ್ಯಭವನ, ಪರ್ವತ ಇಂತಹ ಪ್ರದೇಶಗಳಲ್ಲಿ ಈ ಶುಭಕಾರ್ಯವನ್ನು ನೆರವೇರಿಸಬೇಕು.

೧೪. ಈ ಕಾರ್ಯಕ್ಕೆ ಶುಭತಿಥಿ ಶುಭನಕ್ಷತ್ರ ಶುಭಯೋಗ ಶುಭಲಕ್ಷಣವಿಶಿಷ್ಟವಾಗಿರುವ ಶುಭವಾರ, ಚಂದ್ರತಾರಾಬಲ ಯುಕ್ತವಾಗಿರುವ ದಿನ ಒಳ್ಳೆಯದು.

೧೫. ಯಜಮಾನನಿಗೆ ಅನುಕೂಲವಾಗುವುದಕ್ಕಾಗಿ ಅವನಿಂದ ನಿಯುಕ್ತರಾದ ಋತ್ವಿಜರು ಕೋಟಿಹೋಮವನ್ನು ಮಾಡಬಹುದು. ವೇದಪಾರಂಗತರಾದ ಬ್ರಾಹ್ಮಣರನ್ನು ಪ್ರಯತ್ನದಿಂದ ಹುಡಿಕಿ ಈ ಕಾರ್ಯಕ್ಕೆ ಒಪ್ಪಿಸಬೇಕು.

೧೬. ಕಾರ್ಯಕ್ಕೆ ಮುಂಚೆ ವಸ್ತ್ರಾಭರಣಗಳು ಗಂಧ ಪುಷ್ಪ ಅನುಲೇಪನ ಮುಂತಾದುವನ್ನು ಸಮರ್ಪಿಸಿ, ವಿಧಿಪ್ರಕಾರ ಅವರನ್ನು ಪೂಜಿಸಿ ಮಂತ್ರಪೂರ್ವಕವಾಗಿ ತನ್ನ ದೇಹವನ್ನೇ ಆತನಿಗೆ ಸಮರ್ಪಿಸಬೇಕು.

೧೭-೧೮. ಸ್ವಾಮಿ ವಿಪ್ರಶ್ರೇಷ್ಠರಾದ ಋಷಿವರ್ಯರೆ! ನೀನೆನ್ನ ಮಾತಾಪಿತೃಸಮ, ನೀನೇ ಗತಿ, ನೀನೇ ನನ್ನ ಕ್ಷೇಮ ಚಿಂತನೆಯಲ್ಲಿ ಆಸಕ್ತರು, ನನ್ನ

ಆಪದ್ವಿನೋಶನಾಯ ಚ ಮೇ ಕುರು ಯಜ್ಞಮನುತ್ತಮಂ ।
ಕೋಟಿಹೋಮಾಖ್ಯಮತುಲಂ ಶಾಂತ್ಯರ್ಥಂ ಸಾರ್ವಕಾಮಿಕಂ ॥ ೧೮ ॥

ಪುರೋಹಿತಸ್ತತಃ ಪ್ರಾಜ್ಞಃ ಶುಕ್ಲಾಂಬರಧರಃ ಶುಚಿಃ ।
ಬ್ರಾಹ್ಮಣೈರ್ವೇದಸಂಪೃತ್ತೈಃ ಪುಣ್ಯೈರ್ಯುಕ್ತಃ ಸಮಾಹಿತೈಃ ॥ ೧೯ ॥

ಭೂಮಿಭಾಗೇ ಸಮೇ ಶುದ್ಧೇ ಪ್ರಾಗುದಕ್ಪ್ರವಣೇ ತಥಾ ।
ಪುಣ್ಯಾಹಂ ವಾಚಯೇತ್ಪೂರ್ವಂ ಕೃತ್ವಾ ವಿಪ್ರಾನ್ಸುಪೂಜಿತಾನ್ ॥ ೨೦ ॥

ತತಸ್ತು ಮಹಿತೈರ್ವಿಪ್ರೈಃ ಸೂತ್ರಯೇನ್ಮಂಡಪಂ ಶುಭಂ ।
ಉತ್ತಮಂ ಶತಹಸ್ತಂ ತು ತದರ್ಧೇನ ತು ಮಧ್ಯಮಂ ॥
ಜಘನ್ಯಂ ತು ತದರ್ಧೇನ ಶಕ್ತಿಕಾಲಾದ್ಯಪೇಕ್ಷಯಾ ॥ ೨೧ ॥

---

ಮನಸ್ಸಿನ ಇಷ್ಟಾರ್ಥಗಳು ಲಭಿಸುವಂತೆ ಅನುಗ್ರಹಮಾಡಿ, ಈಗ ಪ್ರಾಪ್ತವಾಗಿರುವ ಅರಿಷ್ಟನಿವಾರಣೆಗಾಗಿಯೂ, ಶಾಂತಿ ಪ್ರಾಪ್ತಿಗಾಗಿಯೂ, ಸರ್ವಕಾಮಪ್ರದವಾದ ಕೋಟಿಹೋಮ ಎಂಬ ಶ್ರೇಷ್ಠವಾದ ಈ ಯಜ್ಞವನ್ನು ನೆರವೇರಿಸಿ" ಎಂದು ಪ್ರಾರ್ಥಿಸಬೇಕು.

೧೯. ಅನಂತರ ಯಜಮಾನನು ಶುಭ್ರ ವಸ್ತ್ರಧಾರಿಯಾಗಿ ಪರಿಶುದ್ಧನೂ ಪ್ರಾಜ್ಞನೂ ಆದ ಪುರೋಹಿತ, ವೇದಸಂಪನ್ನರೂ ಪುಣ್ಯಶಾಲಿಗಳೂ ಸಮಾಹಿತ ಚಿತ್ತರೂ ಆದ ವಿಪ್ರೋತ್ತಮರು, ಇವರುಗಳೊಡಗೂಡಿ ಯಾಗಶಾಲಾಪ್ರವೇಶ ಮಾಡಬೇಕು.

೨೦. ಪೂರ್ವದಿಕ್ಕು ಉತ್ತರದಿಕ್ಕುಗಳಿಗೆ ಸ್ವಲ್ಪ ಇಳಿಜಾರಾಗಿರುವಂತೆ ಮಾಡಿ, ಸಮತಳವೂ ಪರಿಶುದ್ಧವೂ ಆದ ಪ್ರದೇಶದಲ್ಲಿ ಆ ಬ್ರಾಹ್ಮಣರನ್ನು ಕುಳ್ಳಿರಿಸಿ ಸತ್ಕರಿಸಿ, ಮೊದಲು ಸ್ವಸ್ತಿ ಪುಣ್ಯಾಹವಾಚನ ಮಾಡಿಸಬೇಕು.

೨೧. ಬಳಿಕ ಪೂಜ್ಯರಾದ ಆ ವಿಪ್ರರಿಂದ ಯಜ್ಞಮಂಟಪವನ್ನು ಸೂತ್ರೀಕರಿಸಬೇಕು. ಶತಹಸ್ತ ಪರಿಮಿತಿಯುಳ್ಳ ಯಜ್ಞಮಂಟಪವನ್ನು ಉತ್ತಮ ಶ್ರೇಣಿಯದೆಂದೂ, ಅದರ ಅರ್ಧ ಎಂದರೆ ಐವತ್ತು ಹಸ್ತ ಪರಿಮಿತಿಯುಳ್ಳದ್ದನ್ನು ಮಧ್ಯಮ ಶ್ರೇಣಿಯೆಂದೂ.

**ಮಧ್ಯೇ ತು ಮಂಡಪಸ್ಯಾಪಿ ಕುಂಡಂ ಕುರ್ಯಾದ್ವಿಚಕ್ಷಣಃ ।**
**ಅಷ್ಟಹಸ್ತಪ್ರಮಾಣೇನ ಆಯಾಮೇನ ತಥೈವ ಚ ॥ ೨೨ ॥**

**ಮೇಖಲಾತ್ರಿತಯಂ ತಸ್ಯ ದ್ವಾದಶಾಂಗುಲವಿಸ್ತೃತಂ ।**
**ತತ್ಪ್ರಮಾಣಾಂ ತಥಾ ಯೋನಿಂ ಕುರ್ವೀತ ಸುಸಮಾಹಿತಃ ॥ ೨೩ ॥**

**ಕುಂಡಸ್ಯ ಪೂರ್ವಭಾಗೇ ತು ವೇದಿಂ ಕುರ್ಯಾದ್ವಿಚಕ್ಷಣಃ ।**
**ಚತುರ್ಹಸ್ತಾಂ ಸಮಾಂ ಚೈವ ಹಸ್ತಮಾತ್ರೋಚ್ಛ್ರಿತೋ ನೃಪ ॥೨೪॥**

**ಸ್ಥಾನಂ ತತ್ಸರ್ವಭೂತಾನಾಂ ಕುರ್ಯಾದ್ಯತ್ನೇನ ಬುದ್ಧಿಮಾನ್ ॥೨೫॥**

**ಉಪಲಿಪ್ಯ ತತೋ ಭೂಮಿಂ ಮಂಡಪಸ್ಯ ಸಮೀಪತಃ ।**
**ವಿನ್ಯಸೇತ್ಕಲಶಾಂಸ್ತತ್ರ ಜಲಪೂರ್ಣಾಂಶ್ಚತುರ್ದಶ ॥ ೨೬ ॥**

---

೨೨. ಅದರ ಅರ್ಥ ಎಂದರೆ ಇಪ್ಪತ್ತೈದು ಹಸ್ತ ಪ್ರಮಾಣದ್ದನ್ನು ಅಧಮ ಶ್ರೇಣಿಯದೆಂದು ಹೇಳಬೇಕು. ಯಾಗಕರ್ತೃವಿನ ಶಕ್ತ್ಯನುಗುಣವಾಗಿಯೋ, ಅಥವಾ ಕಾಲ ದೇಶಾನುಗುಣವಾಗಿಯೋ, ಈ ಮಂಟಪವನ್ನು ಏರ್ಪಡಿಸಬೇಕು.

೨೩. ಪ್ರಾಜ್ಞನಾದ ಪುರೋಹಿತನು ಆ ಮಂಟಪದ ಮಧ್ಯದಲ್ಲಿ ಎಂಟು ಹಸ್ತಉದ್ದ ಅಷ್ಟೇ ಅಗಲ ಉಳ್ಳ ಕುಂಡವನ್ನು ರಚಿಸಬೇಕು. ಆ ಕುಂಡಕ್ಕೆ ಮೂರು ಮೇಖಲೆಗಳಿರಬೇಕು. ಅದು ಒಂದೊಂದೂ ಹನ್ನೆರಡು ಅಂಗುಲ ದಪ್ಪ (ಅಗಲ) ವಿರಬೇಕು.

೨೪. ಮೇಖಲೆಯ ಪ್ರಮಾಣಕ್ಕನುಗುಣವಾಗಿ ಕುಂಡಯೋನಿಯನ್ನು ಜಾಗರೂಕತೆಯಿಂದ ರಚಿಸಬೇಕು. ವಿಚಕ್ಷಣನಾದ ಪುರೋಹಿತನು ಕುಂಡದ ಪೂರ್ವಭಾಗದಲ್ಲಿ ವೇದಿಯನ್ನು ರಚಿಸಬೇಕು.

೨೫. ಆ ವೇದಿಯು ನಾಲ್ಕುಹಸ್ತ ಅಳತೆಯ ಸಮ ಚತುರಸ್ರವೂ, ಒಂದು ಹಸ್ತ ಎತ್ತರವೂ ಆಗಿರಬೇಕು. ಬುದ್ಧಿಶಾಲಿಯಾದವನು ಅದನ್ನು ಸರ್ವಭೂತ ಗಳಿಗೂ ಸ್ಥಾನವಾಗಿರುವುದೆಂದು ಭಾವಿಸಬೇಕು.

೨೬. ಮಂಟಪದ ಸಮೀಪದಲ್ಲಿ ನೆಲವನ್ನು ಚೆನ್ನಾಗಿ ಸಾರಿಸಿ, ಅಲ್ಲಿ ಜಲ ಪೂರ್ಣವಾದ ಹದಿನಾಲ್ಕು ಕಲಶಗಳನ್ನು ಇರಿಸಬೇಕು.

ಅಶ್ವತ್ಥಪ್ಲಕ್ಷಚೂತಾದ್ಯೈಃ ಪಲ್ಲವೈರುಪಶೋಭಿತಾನ್ ।
ವಿತಾನಮುಪರಿಷ್ಟಾಚ್ಚ ಮಂಡಪಸ್ಯ ಪ್ರಕಲ್ಪಯೇತ್ ॥ ೨೭ ॥

ಸ್ಥಾಪಯೇದ್ದಿಕ್ಷು ಸರ್ವಾಸು ತೋರಣಾನಿ ವಿಚಕ್ಷಣಃ ।
ಏವಂ ಸಂಭೃತಸಂಭಾರೈಃ ಪುರೋಧಾಃ ಸುಸಮಾಹಿತಃ ॥ ೨೮ ॥

ಪುಣ್ಯಾಹಜಯಘೋಷೇಣ ಹೋಮಕರ್ಮ ಸಮಾರಭೇತ್ ।
ಸ್ಥಾಪಯಿತ್ವಾ ಸುರಾನ್ವೇದ್ಯಾಂ ವಕ್ಷ್ಯಮಾಣಾನರಿಂದಮ ॥ ೨೯ ॥

ಬ್ರಹ್ಮಾಣಂ ಪೂರ್ವಭಾಗೇ ತು ಮಧ್ಯೇ ದೇವಂ ಜನಾರ್ದನಂ ।
ಪಶ್ಚಿಮೇ ತು ತಥಾ ರುದ್ರಂ ವಸೂನುತ್ತರತಸ್ತಥಾ ॥ ೩೦ ॥

---

೨೭. ಅವುಗಳನ್ನು ಮಾವು, ಅರಳಿ, ಬಸರಿ ಇವುಗಳ ಚಿಗರುಗಳಿಂದ ಅಲಂಕರಿಸಿ ಶೋಭಾಯಮಾನವಾಗುವಂತೆ ಮಾಡಬೇಕು. ಮತ್ತು ಮಂಟಪದ ಮೇಲುಗಡೆ ಚಾವಣಿಗೆ ಮೇಲ್ಕಟ್ಟನ್ನು ಕಲ್ಪಿಸಬೇಕು.

೨೮. ಅಲ್ಲದೆ ವಿಚಕ್ಷಣನಾದವನು ಮಂಪಟದ ಎಲ್ಲ ದಿಕ್ಕುಗಳಲ್ಲಿಯೂ ತೋರಣವನ್ನು ಕಟ್ಟಬೇಕು. ಈ ಪ್ರಕಾರ ಸಮಸ್ತ ಸಲಕರಣಗಳನ್ನೂ ಸಿದ್ಧಪಡಿಸಿ ಕೊಳ್ಳಬೇಕು.

೨೯. ಪುರೋಹಿತನು ಪುಣ್ಯಾಹವಾಚನ ಪುರಸ್ಸರವಾಗಿ ಜಯಘೋಷ ದೊಡನೆ ಹೋಮಕರ್ಮವನ್ನು ಆರಂಭಿಸಬೇಕು. ಅಯ್ಯಾ ಶತ್ರುಧ್ವಂಸಕ ನಾದ ರಾಜನೇ! ಆ ವೇದಿಯಲ್ಲಿ ಈ ಮುಂದೆ ಹೇಳುವ ದೇವತೆಗಳನ್ನು ಪ್ರತಿ ಷ್ಠಾಪನ ಮಾಡಬೇಕು.

೩೦. ಪೂರ್ವದಿಕ್ಕಿನಲ್ಲಿ ಬ್ರಹ್ಮ, ಮಧ್ಯದಲ್ಲಿ ವಿಷ್ಣು, ಪಶ್ಚಿಮದಲ್ಲಿ ರುದ್ರ, ಉತ್ತರದಿಕ್ಕಿನಲ್ಲಿ ವಸುಗಳು (ಈರೀತಿ ಸ್ಥಾಪಿಸಬೇಕು).

**ಐಶಾನ್ಯಾಂ ಚ ಗ್ರಹಾನ್ಸರ್ವಾನಾಗ್ನೇಯ್ಯಾಂ ಮರುತಸ್ತಥಾ ।**
**ವಾಯುಂ ಸೌಮ್ಯಾಂ ತಥೈಶಾನ್ಯಾಂ ಲೋಕಪಾಲಾನ್ಕ್ರಮೇಣ ಚ ॥**
**ಏವಂ ಸಂಸ್ಥಾಪ್ಯ ವಿಬುಧಾನ್ಯಥಾಸ್ಥಾನಂ ನೃಪೋತ್ತಮ । ॥ ೩೧ ॥**

**ಪೂಜಯೇದ್ವಿಧಿವದ್ವಸ್ತ್ರಗಂಧಮಾಲ್ಯಾನುಲೇಪನೈಃ ॥ ೩೨ ॥**

**ವೇದೋಕ್ತಮಂತ್ರೈಸ್ತಲ್ಲಿಂಗೈಃ ಪುರಾಣೋಕ್ತೈಃ ಪೃಥಕ್ಪೃಥಕ್ ।**
**ಆದಿತ್ಯಾ ವಸವೋ ರುದ್ರಾ ಲೋಕಪಾಲಾಸ್ತಥಾ ಗ್ರಹಾಃ ॥ ೩೩ ॥**

**ಬ್ರಹ್ಮಾ ಜನಾರ್ದನಶ್ಚೈವ ಶೂಲಪಾಣಿರ್ಭಗಾಕ್ಷಿಹಾ ।**
**ಅತ್ರ ಸನ್ನಿಹಿತಾಃ ಸರ್ವೇ ಭವಂತು ಸುಖಭಾಗಿನಃ ॥ ೩೪ ॥**

---

೩೧. ಈಶಾನ್ಯದಲ್ಲಿ ಆದಿತ್ಯಾದಿ ಸಮಸ್ತ ಗ್ರಹಗಳು, ಆಗ್ನೇಯದಲ್ಲಿ ಸಪ್ತ ಮರುತ್ತುಗಳು, ವಾಯುವ್ಯದಲ್ಲಿ ಸೌಮ್ಯರು, ಈಶಾನ್ಯದಲ್ಲಿ ಕ್ರಮವಾಗಿ ಲೋಕ ಪಾಲಕರು, ಹೀಗೆ ಸ್ಥಾಪಿಸಬೇಕು.

೩೨. ಅಯ್ಯಾ ರಾಜಶ್ರೇಷ್ಠನೇ! ಈ ರೀತಿ ದೇವತೆಗಳನ್ನು ಅವರವರ ಸ್ಥಾನವನ್ನತಿಕ್ರಮಿಸದಂತೆ ಸ್ಥಾಪಿಸಿ ವಿಧಿವಿಧಾನದಂತೆ ವಸ್ತ್ರ ಗಂಧ ಅನುಲೇಪನ ಪುಷ್ಪ ಮಾಲ್ಯಾದಿಗಳನ್ನು ಸಮರ್ಪಿಸಿ ಪೂಜಿಸಬೇಕು.

೩೩. ಆಯಾ ದೇವತೆಗಳಿಗೋಸ್ಕರವೇ ಪ್ರತ್ಯೇಕಪ್ರತ್ಯೇಕವಾಗಿ ಆ ದೇವತೆ ಗಳ ಲಿಂಗಸೂಚಕವಾಗಿ ಉಕ್ತವಾಗಿರುವ ವೇದೋಕ್ತಮಂತ್ರಗಳನ್ನೂ ಪುರಾ ಣೋಕ್ತ ಮಂತ್ರಗಳನ್ನೂ ಉಚ್ಚರಿಸಿ ದ್ವಾದಶಾದಿತ್ಯರು, ಅಷ್ಟವಸುಗಳು, ಏಕಾ ದಶರುದ್ರರು, ಅಷ್ಟದಿಕ್ಪಾಲಕರು.

೩೪. ನವಗ್ರಹಗಳು, ಬ್ರಹ್ಮ, ಜನಾರ್ದನನಾಮಕನಾದ ವಿಷ್ಣು, ದಕ್ಷ ಯಜ್ಞದಲ್ಲಿ ಭಗನೆಂಬ ಆದಿತ್ಯನ ನೇತ್ರವನ್ನು ಭೇದಿಸಿದ ಶೂಲಪಾಣಿಯಾದ ರುದ್ರ ಈ ಎಲ್ಲ ದೇವತೆಗಳೂ ಈ ಯಜ್ಞದಲ್ಲಿ ಸಾನ್ನಿಧ್ಯವನ್ನು ಕರುಣಿಸಿ.

ಪೂಜಾಂ ಗೃಹ್ಣಂತು ಸರ್ವೇತ್ರ ಮಯಾ ಭಕ್ತ್ಯೋಪಪಾದಿತಾಂ ।
ಕುರ್ವಂತು ಚ ಶುಭಂ ಸರ್ವೇ ಯಜ್ಞಕರ್ಮ ಸಮಾಹಿತಾಃ ॥ ೩೫ ॥

ಏವಂ ಸಂಪೂಜಯಿತ್ವಾ ತಾನ್ದೇವಾನ್ಯತ್ನೇನ ಶುದ್ಧಧೀಃ ।
ನೈವೇದ್ಯೈರ್ವಿವಿಧೈರ್ಭಕ್ಷ್ಯೈಃ ಫಲೈಃ ಪತ್ರೈಸ್ತಥೈವ ಚ ॥ ೩೬ ॥

ತತಸ್ತು ತೈರ್ದ್ವಿಜೈಃ ಸಾರ್ಧಂ ಕುಂಡಸ್ಯ ವಿಧಿಪೂರ್ವಕಂ ।
ಕುರ್ಯಾತ್ಸಂಸ್ಕಾರಕರಣಂ ಯಥೋಕ್ತಂ ವೇದಚಿಂತಕೈಃ ॥ ೩೭ ॥

ತತಃ ಸಮಾಹ್ವಯೇದ್ವಹ್ನಿಂ ನಾಮ್ನಾ ಖ್ಯಾತಂ ಘೃತಾರ್ಚಿಷಂ ।
ನಿಯೋಜಯೇದ್ದ್ವಿಜಾಂಸ್ತತ್ರ ಶತಸಂಖ್ಯಾನ್ನೃಪೋತ್ತಮ ॥
ಅಲಾಭೇ ತು ಬಹೂನಾಂ ಚ ಯಥಾಲಾಭಂ ನಿಯೋಜಯೇತ್ ॥೩೮॥

೩೫. ಈ ರಾಷ್ಟ್ರಸುಖಕ್ಕೆ ಭಾಗಿಗಳಾಗಿ ಪರಿಣಮಿಸಲಿ. ಇದಕ್ಕಾಗಿ ನಾನು ಭಕ್ತಿಪೂರ್ವಕವಾಗಿ ಸಲ್ಲಿಸುತ್ತಿರುವ ಪೂಜೆಯನ್ನು ಎಲ್ಲರೂ ಇಲ್ಲಿ ಸ್ವೀಕರಿಸುವರಾಗಲಿ. ಎಲ್ಲರೂ ಸಮಾಹಿತಚಿತ್ತರಾಗಿ ಈ ಯಜ್ಞಕರ್ಮದಲ್ಲಿ ವರ್ತಿಸಿ ಶುಭವನ್ನುಂಟುಮಾಡಲಿ.

೩೬. ಈ ಪ್ರಕಾರ ಪರಿಶುದ್ಧಚಿತ್ತದಿಂದ ಪ್ರಯತ್ನ ಪುರಸ್ಸರವಾಗಿ ಆ ದೇವತೆಗಳಿಗೆ ಅರ್ಘ್ಯ, ಪಾದ್ಯ, ಗಂಧ, ಪತ್ರ, ಪುಷ್ಪ, ಧೂಪ, ದೀಪಾದಿಗಳು ನಾನಾ ಭಕ್ಷ್ಯಗಳು, ಹಣ್ಣುಗಳು ಇವುಗಳನ್ನೆಲ್ಲಾ ಸಮರ್ಪಿಸಿ ಪೂಜಿಸಬೇಕು.

೩೭. ಅನಂತರ ವೇದಜ್ಞರಾದ ಆ ಬ್ರಾಹ್ಮಣೋತ್ತಮರೊಡಗೂಡಿ ವಿಧಿವಿಧಾನವಂತೆ ಯಜ್ಞಕುಂಡಕ್ಕೆ ಅವಶ್ಯವಾಗಿ ಮಾಡಬೇಕಾದ ಸಂಸ್ಕಾರಕಾರ್ಯಗಳನ್ನು ಯಥೋಕ್ತವಾಗಿ ನೆರವೇರಿಸಬೇಕು.

೩೮. ಅಯ್ಯಾ ರಾಜಶ್ರೇಷ್ಠನೇ! ಬಳಿಕ ಘೃತಾರ್ಚಿ ಎಂಬ ಹೆಸರಿನಿಂದ ಪ್ರಸಿದ್ಧನಾದ ಯಜ್ಞೇಶ್ವರನನ್ನು ಆಹ್ವಾನಿಸಬೇಕು. ಈ ಸಂದರ್ಭದಲ್ಲಿ ಅಗ್ನ್ಯಾಹ್ವಾನ ಮಂತ್ರ ಪಾರಾಯಣಕ್ಕೆ ನೂರುಮಂದಿ ಬ್ರಾಹ್ಮಣರನ್ನು ನೇಮಿಸಬೇಕು. ಅಷ್ಟುಮಂದಿ ಸಾಧ್ಯವಾಗದಿದ್ದರೆ ದೊರಕುವಷ್ಟು ಹೆಚ್ಚು ಜನರನ್ನು ನೇಮಿಸಬೇಕು.

**ವಿದ್ಯಾವೃದ್ಧಾನ್ವಯೋವೃದ್ಧಾನ್ಗೃಹಸ್ಥಾನ್ಸಂಯತೇಂದ್ರಿಯಾನ್ ।**
**ಸ್ವಕರ್ಮನಿಯತಾನ್ ಜ್ಞಾನಶೀಲಾನ್ ಶಾನ್ತಾನ್ದ್ವಿಜೋತ್ತಮಾನ್ ॥**
**ಚಿಂತಯೇತ್ತತ್ರ ದೇವೇಶಂ ಪಂಚಾಸ್ಯಂ ನೃಪ ಪಾವಕಂ ॥ ೩೯ ॥**

**ಮುಖಾನಿ ತಸ್ಯ ಚತ್ವಾರಿ ಸಪ್ತಜಿಹ್ವಾಶ್ಚ ಪಾರ್ಥಿವ ॥ ೪೦ ॥**

**ಏಕಜಿಹ್ವಮುಖೈಕಂ ತು ತತ್ಸ್ಮೃತಂ ಸರ್ವಕಾಮದಂ ।**
**ಧೂಮಾಯಮಾನೇನ ವೃಥಾ ಹೋತವ್ಯಂ ಜ್ವಲಿತೇಽನಲೇ ॥ ೪೧ ॥**

**ಋಗ್ಭಿಃ ಪೂರ್ವಮುಖೈರ್ಹೋಮೋ ಯಜುರ್ಭಿಶ್ಚೋತ್ತರಾಮುಖೈಃ**
**ಸಾಮಭಿಃ ಪಶ್ಚಿಮೇ ಕಾರ್ಯೋಽಥರ್ವಭಿರ್ದಕ್ಷಿಣಾಮುಖೈಃ ॥ ೪೨ ॥**

---

೩೯. ಆ ವಿಪ್ರೋತ್ತಮರು ತುಂಬ ವಿದ್ಯಾವಂತರೂ ವಯಸ್ಸಿನಲ್ಲಿ ಹಿರಿಯರೂ ಗ್ರಹಸ್ಥಾಶ್ರಮಿಗಳೂ ಜಿತೇಂದ್ರಿಯರೂ ಸ್ವಕರ್ಮಾನುಷ್ಠಾನನಿರತರೂ ಜ್ಞಾನಶೀಲರೂ ಶಾಂತರೂ ಆಗಿರಬೇಕು.

೪೦. ಅಯ್ಯಾ ರಾಜನೇ ! ಅವರು ಮೊದಲು ದೇವೇಶನೂ ಪಂಚಾಸ್ಯನೂ ಆದ ಪಾವಕನನ್ನು ಧ್ಯಾನಿಸಬೇಕು. ನಾಲ್ಕು ಮುಖಗಳೂ ಸಪ್ತಜಿಹ್ವೆಗಳೂ ಉಳ್ಳವನೆಂದು ಧ್ಯಾನಿಸಬೇಕೆಂಬುದು ಕೆಲವರ ಮತ.

೪೧. ಮುಖ್ಯವಾದ ಒಂದು ಜಿಹ್ವೆಯೇ ಸಮಸ್ತ ಇಷ್ಟಾರ್ಥಪ್ರದವಾದ್ದೆಂದು ಉಕ್ತವಾಗಿದೆ. ಧೂಮಯುಕ್ತವಾಗಿರುವಾಗ ಅಗ್ನಿಗೆ ಹೋಮಮಾಡಿದರೆ ವ್ಯರ್ಥ. ಅಗ್ನಿಯು ಪ್ರಜ್ವಲಿಸುವಂತೆ ಮಾಡಿ ಆ ಬಳಿಕವೇ ಹೋಮಮಾಡಬೇಕು.

೪೨. ಋಗ್ವೇದ ಮಂತ್ರಪುರಸ್ಸರವಾದ ಹೋಮಗಳನ್ನು ಪೂರ್ವದಿಗ್ಭಾಗದಲ್ಲಿಯೂ, ಯಜುರ್ವೇದ ಮಂತ್ರದ ಹೋಮಗಳನ್ನು ಉತ್ತರದಿಗ್ಭಾಗದಲ್ಲಿಯೂ, ಸಾಮವೇದ ಮಂತ್ರಪೂರ್ವಕವಾದ ಹೋಮಗಳನ್ನು ಪಶ್ಚಿಮದಿಗ್ಭಾಗದಲ್ಲಿಯೂ, ಅಥರ್ವವೇದ ಮಂತ್ರದ ಹೋಮಗಳನ್ನು ದಕ್ಷಿಣದಿಗ್ಭಾಗದಲ್ಲಿಯೂ ಮಾಡಬೇಕು.

ಆಘಾರಾವಾಜ್ಯಭಾಗೌ ತು ಪೂರ್ವಂ ಹುತ್ವಾ ವಿಚಕ್ಷಣಃ ।
ಪರಿತೋಽಥ ಪರಿಸ್ತೀರ್ಣೇ ಕಲ್ಪಿತೇ ಚ ತಥಾಸನೇ ॥ ೪೩ ॥

ಬ್ರಹ್ಮಾಣಂ ಪೂರ್ವಮುಪ್ಯೇತತ್ಸರ್ವಂ ಪಶ್ಚಾತ್ಸಮಾಚರೇತ್ ।
ಹೋಮೋ ವ್ಯಾಹೃತಿಭಿಶ್ಚೈವ ಸರ್ವಸ್ತತ್ರ ವಿಧೀಯತೇ ॥ ೪೪ ॥

ಪ್ರಣವಾದಿಭಿಸ್ತಲ್ಲಿಂಗೈಃ ಸ್ವಾಹಾಕಾರಾಂತಯೋಜಿತೈಃ ।
ಜುಹುಯಾತ್ಸರ್ವದೇವಾನಾಂ ವೇದ್ಯಾಂ ಯೇ ಚೋಪಕಲ್ಪಿತಾಃ॥೪೫॥

ಏವಂ ಪ್ರಕಲ್ಪಯೇದ್ಯಜ್ಞಂ ಕೋಟಿಹೋಮಾಖ್ಯಮುತ್ತಮಂ ।
ತಿಲಾಃ ಕೃಷ್ಣಾ ಘೃತಾಭ್ಯಕ್ತಾಃ ಕಿಂಚಿದ್ಯವಸಮನ್ವಿತಾಃ ॥ ೪೬ ॥

---

೪೩. ವಿಚಕ್ಷಣನಾದವನು ಸುತ್ತಲೂ ದರ್ಭೆಯಿಂದ ಪರಿಸ್ತರಣವನ್ನು ಕಲ್ಪಿಸಿ, ನೈಋತ್ಯದಿಂದ ಈಶಾನ್ಯಕ್ಕೆ, ವಾಯುವ್ಯದಿಂದ ಆಗ್ನೇಯಕ್ಕೆ, ಎರಡು ಆಘಾರಹೋಮಗಳ ಆಜ್ಯಭಾಗವನ್ನು ಹೋಮಪ್ರಾರಂಭದಲ್ಲಿಯೇ ಮಾಡಬೇಕು.

೪೪. ಪರಿಸ್ತರಣದ ಪಕ್ಕದಲ್ಲಿ ಬ್ರಹ್ಮನಿಗೆ ಆಸನವನ್ನು ಕಲ್ಪಿಸಿ ವಿಪ್ರೋತ್ತಮನನ್ನು ಬ್ರಹ್ಮತ್ವಕ್ಕಾಗಿ ಆ ಬ್ರಹ್ಮಾಸನದಲ್ಲಿ ಮೊದಲು ಕೂರಿಸಿ ಬಳಿಕ ಇವೆಲ್ಲ ಕಾರ್ಯಗಳನ್ನೂ ಮಾಡಬೇಕು.

೪೫. ಓಂಕಾರಪೂರ್ವಕವಾಗಿಯೂ ವ್ಯಾಹೃತಿಯುಕ್ತವಾಗಿಯೂ ಇರುವಂತೆ ಆಯಾ ದೇವತೆಗಳಿಗೆ ಗೊತ್ತಾದ ಮಂತ್ರದ ಕೊನೆಯಲ್ಲಿ ಸ್ವಾಹಾ ಶಬ್ದವನ್ನು ಸೇರಿಸಿ, ಕುಂಡದ ಸಮೀಪದ ವೇದಿಯಲ್ಲಿ ಆವಾಹನೆಮಾಡಿರುವ ಸಮಸ್ತ ದೇವತೆಗಳಿಗೂ ಆಜ್ಯಾಹುತಿಯನ್ನು ಕೊಡಬೇಕು.

೪೬. ಉತ್ತಮವಾದ ಕೋಟಿಹೋಮವೆಂಬ ಯಜ್ಞದಲ್ಲಿ ಮುಂದೆ ಸೂಚಿಸುವ ಪ್ರಕಾರ ಆಚರಿಸಬೇಕು. ತುಪ್ಪಮಿಶ್ರವಾದ ಕರಿಯ ಎಳ್ಳಿನೊಡನೆ ಸ್ವಲ್ಪ ಯವವನ್ನು ಸೇರಿಸಬೇಕು.

**ಹೋತವ್ಯಾಃ ಕೋಟಿಹೋಮೇ ತು ಸಮಿಧಶ್ಚ ಪಲಾಶಜಾಃ ।**
**ಪೂರ್ಣೇ ಪೂರ್ಣೇ ಸಹಸ್ರೇ ತು ದದ್ಯಾತ್ಪೂರ್ಣಾಹುತಿಂ ಶುಭಾಂ ।**
**ಪಂಚಮೇ ತನ್ಮುಖೇ ರಾಜನ್ಸರ್ವಕಾಮಾರ್ಥಸಿದ್ಧಯೇ || ೪೭ ||**

**ಪೂರ್ಣಾಹುತ್ಯಃ ಸಮಾಖ್ಯಾತಾಃ ಕೋಟಿಹೋಮೇ ನರಾಧಿಪ ।**
**ಸಹಸ್ರಾಣಿ ನೃಪಶ್ರೇಷ್ಠ ದಶ ಶಾಸ್ತ್ರವಿಶಾರದೈಃ || ೪೮ ||**

**ಪ್ರಾರಂಭದಿನಮಾರಭ್ಯ ಬ್ರಾಹ್ಮಣೈರ್ಬ್ರಹ್ಮವಾದಿಭಿಃ ।**
**ಭಾವ್ಯಂ ಸಯಜಮಾನೈಸ್ತು ಅಥವಾ ಸಪುರೋಹಿತೈಃ || ೪೯ ||**

**ಕ್ರೋಧಲೋಭಾದಯೋ ದೋಷಾ ವರ್ಜನೀಯಾಃ ಪ್ರಯತ್ನತಃ ।**
**ಯಜಮಾನೇನ ರಾಜೇಂದ್ರ ಸರ್ವಾನ್ಕಾಮಾನಭೀಪ್ಸತಾ || ೫೦ ||**

---

೪೭. ಆ ಮಿಶ್ರಣವನ್ನೂ ಮುತ್ತುಗದ ಸಮಿತ್ತುಗಳನ್ನೂ ಆಜ್ಯವನ್ನೂ ಪ್ರತಿಸಲವೂ ಆಹುತಿ ಕೊಡಬೇಕು. ಒಂದೊಂದು ಸಹಸ್ರ ಆಹುತಿ ಕೊಟ್ಟಾಗುತ್ತಲೆ ಒಂದೊಂದುಸಲ ಅಗ್ನಿಯ ಪಂಚಮುಖದಲ್ಲಿ ಶುಭಕರವಾದ ಪೂರ್ಣಾಹುತಿಯನ್ನು ಸಮರ್ಪಿಸಬೇಕು.

೪೮. ಎಲೈ ನರಾಧಿಪನೇ! ಈ ಪ್ರಕಾರ ಸಮರ್ಪಿಸುತ್ತಾ ಬಂದರೆ ಕೋಟಿಹೋಮದಲ್ಲಿ ಸಮಸ್ತ ಇಷ್ಟಾರ್ಥಸಿದ್ಧಿಪ್ರದವಾದ ಹತ್ತುಸಾವಿರ ಪೂರ್ಣಾಹುತಿಗಳನ್ನು ಅಗ್ನಿಯ ಪಂಚಮ ಮುಖದಲ್ಲಿ ಕೊಟ್ಟಹಾಗಾಗುವುದೆಂದು ಶಾಸ್ತ್ರಜ್ಞರು ನಿರ್ಣಯಿಸಿದ್ದಾರೆ.

೪೯. ಯಜ್ಞವು ಆರಂಭವಾದ ದಿನ ಮೊದಲ್ಗೊಂಡು ಬ್ರಹ್ಮವಾದಿಗಳಾದ ವಿಪ್ರೋತ್ತಮ (ಋತ್ವಿಜ) ರು, ಪುರೋಹಿತರು ಇವರೆಲ್ಲ ಯಜಮಾನನ ಜತೆಯಲ್ಲಿಯೇ ವಾಸಿಸಬೇಕು.

೫೦. ತನ್ನ ಸಮಸ್ತ ಇಷ್ಟಾರ್ಥಗಳೂ ನೆರವೇರಬೇಕೆಂದು ಆಶಿಸುವ ಯಜಮಾನನು ಯಜ್ಞದೀಕ್ಷೆ ವಹಿಸಿದ್ದಾಗ, ಕೋಪಾಟೋಪ, ಲೋಭ, ಮುಂತಾದ ದೋಷಗಳನ್ನು ಪ್ರಯತ್ನಪೂರ್ವಕವಾಗಿ ನಿರೋಧಮಾಡಿಕೊಂಡಿರಬೇಕು ಎಂದು ಹೇಳಿದನು.

|| ಸಂವರಣ ಉವಾಚ ||

ಬಹುತ್ವಾತ್ಕರ್ಮಣೋ ಬ್ರಹ್ಮನ್ಕೋಟಿಹೋಮಃ ಸುದುಷ್ಕರಃ ।
ಕಾಲೇನ ಮಹತಾ ಚೈವ ಶಕ್ಯಃ ಪ್ರಾಪ್ತುಂ ಕಥಂಚನ || ೫೧ ||

ನಿಯಮಾದ್ಬ್ರಹ್ಮಚರ್ಯಾದ್ವಾ ದುಷ್ಕರೋಹೀತಿ ಮೇ ಮತಿಃ ।
ನಿರೋಧೋಽತ್ರ ಬ್ರಾಹ್ಮಣಾನಾಂ ಭೂಶಯ್ಯಾದಿಷು ದುಷ್ಕರಃ ||೫೨||

ಕಾರ್ಯಾದ್ಗುರುತಯಾ ಯಸ್ಮಾತ್ಪರ್ವಕಾಲಾದ್ಯಪೇಕ್ಷಯಾ ।
ಏತದ್ವಿಜ್ಞಾಯತೇ ಬ್ರಹ್ಮನ್ಯದಿ ಶಾಸ್ತ್ರೇಷು ಕಥ್ಯತೇ ||
ಕೋಟಿಹೋಮಸ್ಯ ಸಂಕ್ಷೇಪಂ ವದ ಮೇ ಬ್ರಹ್ಮಸಂಭವ || ೫೩ ||

|| ಸನತ್ಕುಮಾರ ಉವಾಚ ||

ಶತಾನನೋ ದಶಮುಖೋ ದ್ವಿಮುಖೈಕಮುಖಸ್ತಥಾ ।
ಚತುರ್ವಿಧೋ ಮಹಾರಾಜ ಕೋಟಿಹೋಮೋ ವಿಧೀಯತೇ || ೫೪ ||

---

೫೧. ಸಂವರಣನು ಪ್ರಶ್ನಿಸುತ್ತಾನೆ—ಎಲೈ ಬ್ರಹ್ಮಪುತ್ರನೇ! ಯಜ್ಞಾಂಗವಾಗಿ ಮಾಡಬೇಕಾದ ಕರ್ಮಗಳು ಅಪಾರವಾಗಿರುವುದರಿಂದ ಕೋಟಿಹೋಮ ಮಾಡುವುದು ಬಹು ದುಸ್ಸಾಧ್ಯವು. ಅಲ್ಲದೆ ತುಂಬಾ ದಿನ ಹಿಡಿಯುವುದು. ಆದ್ದರಿಂದ ಅದನ್ನು ಸುಲಭದಲ್ಲಿ ಮಾಡಿ ಮುಗಿಸುವ ಕ್ರಮ ಬೇರೆ ಇಲ್ಲವೆ?

೫೨. ಇದರ ನಿಯಮವನ್ನನುಸರಿಸುವುದೂ ಕಷ್ಟ. ಅಷ್ಟುದಿನ ಪರ್ಯಂತ ಬ್ರಹ್ಮಚರ್ಯಸಂರಕ್ಷಣೆಯೂ ದುಷ್ಕರವೆಂದು ನನ್ನ ಭಾವನೆ. ಅಲ್ಲದೆ ಅಷ್ಟು ಮಂದಿ ಬ್ರಾಹ್ಮಣರಿಗೂ ವಿಶ್ರಾಂತಿ ಸ್ಥಳ ಅವರಿಗೆ ಶಯನಾಸ್ತರಣಾದಿಗಳು ಇವನ್ನೊದಗಿಸಿ ತಡೆಯುವುದು ಕಷ್ಟ.

೫೩. ಅಮಾವಾಸ್ಯಾ ಸಂಕ್ರಮಣ ಮುಂತಾದ ಪರ್ವಕಾಲಗಳಲ್ಲಂತೂ ಗುರುತರವಾದ ಬಹುಕಾರ್ಯಗಳು ನಡೆಯಬೇಕಾದ್ದರಿಂದ ಇನ್ನೂ ಕಷ್ಟ. ಎಲೈ ಬ್ರಹ್ಮಮಾನಸಪುತ್ರನೇ! ಶಾಸ್ತ್ರದಲ್ಲಿ ಇವೆಲ್ಲಾ ವಿಶದವಾಗಿ ಉಕ್ತವಾಗಿರಬಹುದು. ಆದಾಗ್ಯೂ ಕೋಟಿಹೋಮದ ಸಂಕ್ಷೇಪವಿಧಾನವನ್ನು ಈಗ ನೀನು ನನಗೆ ತಿಳಿಸು ಎಂದನು.

೫೪. ಸನತ್ಕುಮಾರಮುನಿವರ್ಯರು ಹೇಳುತ್ತಾರೆ—ಎಲೈ ರಾಜನೇ! ಶತಮುಖ, ದಶಮುಖ, ದ್ವಿಮುಖ, ಏಕಮುಖ ಎಂಬದಾಗಿ ಕೋಟಿಹೋಮದಲ್ಲಿ ನಾಲ್ಕು ಪ್ರಕಾರಗಳಿವೆ.

**ಕಾರ್ಯಸ್ಯ ಗುರುತಾಂ ಜ್ಞಾತ್ವಾ ನೈವ ಕುರ್ಯಾದಪರ್ವಣಿ ।**
**ಯಥಾ ಸಂಕ್ಷೇಪತಃ ಕಾರ್ಯಃ ಕೋಟಿಹೋಮಸ್ತಥಾ ಶೃಣು　॥ ೫೫ ॥**

**ಕೃತ್ವಾ ಕುಂಡಶತಂ ದಿವ್ಯಂ ಯಥೋಕ್ತಂ ಹಸ್ತಸಂಮಿತಂ ।**
**ಏಕೈಕಸ್ಮಿಂಸ್ತತಃ ಕುಂಡೇ ಶತಂ ವಿಪ್ರಾನ್ನಿಯೋಜಯೇತ್　॥ ೫೬ ॥**

**ಸದ್ಯಃ ಪಕ್ಷೇ ತು ವಿಪ್ರಾಣಾಂ ಸಹಸ್ರಂ ಪರಿಕೀರ್ತಿತಂ ।**
**ಏಕಸ್ಥಾನಪ್ರಣೀತೇಽಗ್ನೌ ಸರ್ವತಃ ಪರಿಭಾವಿತೇ　॥ ೫೭ ॥**

**ಹೋಮಂ ಕುರ್ಯುರ್ದ್ವಿಜಾಃ ಸರ್ವೇ ಕುಂಡೇ ಕುಂಡೇ ಯಥೋದಿತಂ**
**ಯಥಾ ಕುಂಡಬಹುತ್ವೇಽಪಿ ರಾಜಸೂಯೇ ಮಹಾಕ್ರತೌ　॥ ೫೮ ॥**

---

೫೫. ಈ ಕಾರ್ಯದ ಮಹತ್ವವನ್ನು ತಿಳಿದವನು ಇದನ್ನು ಅಕಾಲದಲ್ಲಿ ಮಾಡಬಾರದು. ಕೋಟಿಹೋಮವನ್ನು ಸಂಕ್ಷೇಪವಾಗಿ ಮಾಡಬಹುದಾದ ಕ್ರಮವನ್ನು ಈಗ ಹೇಳುವೆನು ಕೇಳು.

೫೬. ಶಾಸ್ತ್ರದಲ್ಲಿ ಹೇಳಿರುವ ಪ್ರಕಾರ ಒಂದೊಂದು ಹಸ್ತಪ್ರಮಾಣ ಚತುರಸ್ರವುಳ್ಳದ್ದೂ, ಶ್ರೇಷ್ಠವಾದ ಲಕ್ಷಣಯುಕ್ತವೂ, ಆದ ನೂರು ಕುಂಡಗಳನ್ನು ರಚಿಸಬೇಕು. ಆ ಒಂದೊಂದು ಕುಂಡಕ್ಕೆ ಒಬ್ಬೊಬ್ಬನಂತೆ ತತ್ಕಾಲಕ್ಕೆ ನೂರು ಮಂದಿ ಋತ್ವಿಜರನ್ನು ಗೊತ್ತುಮಾಡಬೇಕು.

೫೭. ಪಕ್ಷಾಂತರ ರೀತ್ಯಾ ಸಾವಿರಮಂದಿ ವಿಪ್ರರನ್ನು ಸದ್ಯಃ ನೇಮಿಸಬೇಕೆಂದು ಉಕ್ತವಾಗಿದೆ. ಒಂದೇ ಜಾಗದಲ್ಲಿ ಅಗ್ನಿಯನ್ನು ಮಥಿಸಿ ನಿರ್ಮಿಸಿದರೂ ಸರ್ವ ಕುಂಡಗಳಲ್ಲೂ ಅದೇ ಅಗ್ನಿ ಇದೆಯೆಂದು ಭಾವಿಸಬೇಕು.

೫೮. ಎಲ್ಲ ವಿಪ್ರರೂ ಪ್ರತಿ ಕುಂಡದಲ್ಲಿಯೂ ಶಾಸ್ತ್ರೋಕ್ತರೀತಿಯಿಂದ ಹೋಮಮಾಡಬೇಕು. ರಾಜಸೂಯವೆಂಬ ಮಹಾಯಾಗದಲ್ಲಿ ಕುಂಡಗಳು ಅನೇಕವಾಗಿ ರಚಿತವಾಗಿದ್ದರೂ ಅವುಗಳಲ್ಲಿ ಅಗ್ನಿಗಳನ್ನು ಅನೇಕಶಃ ಪ್ರತಿಷ್ಠಿಸಿರುವುದಿಲ್ಲ.

ನ ಚ ವಹ್ನಿಬಹುತ್ವಂ ಸ್ಯಾತ್ತತ್ರ ಯಜ್ಞೇ ವಿಧೀಯತೇ ।
ತಥಾ ಕುಂಡಶತೇऽಪ್ಯತ್ರ ಘೃತಾರ್ಚಿಷಿ ವಿತಾನಿತೇ ॥ ೫೯ ॥

ಏಕ ಏವ ಭವೇದ್ಯಜ್ಞಃ ಕೋಟಿಹೋಮೋ ನ ಸಂಶಯಃ ।
ಏವಂ ಯತ್ಕ್ರಿಯತೇ ಕ್ಷಿಪ್ರಂ ವ್ಯಾಕುಲೈಃ ಕಾರ್ಯಗೌರವಾತ್ ॥
ಶತಾನನಃ ಸ ವಿಜ್ಞೇಯಃ ಕೋಟಿಹೋಮೋ ನ ಸಂಶಯಃ ॥ ೬೦ ॥

ಸ್ವಲ್ಪೈರಹೋಭಿಃ ಕಾರ್ಯಃ ಸ್ಯಾದ್ವರ್ಷಾಕಾಲಾದಿಕೇऽಪಿ ವಾ ।
ತದಾ ದಶಗುಣಃ ಕಾರ್ಯಃ ಕೋಟಿಹೋಮೋ ವಿಜಾನತಾ ॥ ೬೧ ॥

ವಿಪ್ರಾಣಾಂ ದ್ವೇ ಶತೇ ತತ್ರ ಸುವಿಭಜ್ಯ ನಿಯೋಜಯೇತ್ ।
ತೇऽಪಿ ವಿಜ್ಞಾನಶೀಲಾಃ ಸ್ಯುರ್ವ್ರತವಂತೋ ಜಿತೇಂದ್ರಿಯಾಃ ॥೬೨॥

---

೫೯. ಆ ಯಜ್ಞದಲ್ಲಿ ಆರೀತಿಯೇ ಮಾಡತಕ್ಕದ್ದೆಂದು ವಿಧಿಯಿದೆ. ಅದೇರೀತಿ ಇಲ್ಲಿಯೂ ಅಗ್ನಿವಿತಾನಿತವಾದ ನೂರು ಕುಂಡಗಳು ಪ್ರತ್ಯೇಕವಾಗಿ ರಚಿತವಾಗಿದ್ದರೂ ಕೋಟಿಹೋಮವೆಂಬುದು ಒಂದು ಯಜ್ಞವೆಂದೇ ವ್ಯವಹರಿಸಲ್ಪಡುವುದರಲ್ಲಿ ಸಂಶಯವಿಲ್ಲ.

೬೦. ವಿಸ್ತಾರವಾದ ಕೋಟಿಹೋಮದ ಕಾರ್ಯಗಳು ಬಹು ಅಗಾಧವೆಂಬದಾಗಿ ವ್ಯಾಕುಲಿತಚಿತ್ತರು ಶೀಘ್ರದಲ್ಲಿ ನೆರವೇರಿಸಬಹುದಾದ ಈ ಕ್ರಮವನ್ನು ಶತಾನನಕೋಟಿಹೋಮವೆಂದು ಹೇಳುವರು.

೬೧. ವರ್ಷರ್ತು ಮುಂತಾದ ಕಾಲದಲ್ಲಿ ಆರಂಭಿಸಿ ಸ್ವಲ್ಪ ದಿನಗಳಲ್ಲಿಯೇ ಮುಗಿಸುವುದಾದರೆ ಪ್ರಾಜ್ಞರು ಮೇಲೆ ಹೇಳಿದುದರ ದಶಗುಣವಾಗಿ ಕುಂಡವನ್ನೂ ವಿಪ್ರರನ್ನೂ ಏರ್ಪಡಿಸಿ, ಕೋಟಿಹೋಮವನ್ನು ಮಾಡಬೇಕು.

೬೨. ಅಂಥ ಸಂದರ್ಭದಲ್ಲಿ ಇನ್ನೂರುಮಂದಿ ವಿಪ್ರರನ್ನು ಪ್ರತ್ಯೇಕವಾಗಿ ಗೊತ್ತುಮಾಡಬೇಕು. ಆ ವಿಪ್ರರು ವ್ರತನಿಯಮಾಸಕ್ತರೂ ಜಿತೇಂದ್ರಿಯರೂ ವಿಜ್ಞಾನಚತುರರೂ ಆಗಿರಬೇಕು.

**ಭೂಪ ಕುಂಡದ್ವಯಂ ಕೃತ್ವಾ ವಿಭಜ್ಯ ಚ ವಿಭಾವಸುಂ ।**
**ಹೋಮಂ ಕುರ್ಯುರ್ದ್ವಿಜಾ ಭೂಯಃ ಸಂಸ್ಕೃತ್ಯ ವಿಧಿಪೂರ್ವಕಂ ॥೬೩॥**

**ಶತಂ ತತ್ರ ನಿಯೋಜ್ಯಂ ಸ್ಯಾದ್ವಿಪ್ರಾಣಾಂ ಪ್ರವಿಭಜ್ಯ ವೈ ।**
**ಮಾಸೇ ವಾಥ ದ್ವಿಮಾಸೇ ವಾ ಯಥಾಕಾಲೇ ಹ್ಯುಪಸ್ಥಿತೇ ॥ ೬೪ ॥**

**ಏವಂ ಚ ದ್ವಿಮುಖಂ ಕಾರ್ಯಃ ಕೋಟಿಹೋಮೋ ವಿಚಕ್ಷಣೈಃ ॥ ೬೫ ॥**

**ಯದಾ ತು ಸ್ವೇಚ್ಛಯಾ ಯಜ್ಞಂ ಯಜಮಾನಸಃಮಾಪಯೇತ್ ।**
**ಕಾಲೇನ ಬಹುಧಾ ರಾಜಂಸ್ತದಾ ಚೈಕಮುಖೋ ಭವೇತ್ ॥ ೬೬ ॥**

**ಏಕಕುಂಡಸ್ಥಿತೋ ವಹ್ನಿರೇಕಚಿತ್ತೈಃ ಸಮಾಹಿತೈಃ ।**
**ಯಥಾಲಾಭಸ್ಥಿತೈರ್ವಿಪ್ರೈರ್ಜ್ಞಾನಶೀಲೈರ್ವಿಚಕ್ಷಣೈಃ ॥ ೬೭ ॥**

---

೬೩. ಅಯ್ಯಾ ಭೂಪನೇ ! ಎರಡು ಕುಂಡವನ್ನು ರಚಿಸಿ, ಅಗ್ನಿಯನ್ನು ಎರಡಾಗಿ ವಿಭಾಗಿಸಿ, ಅಗ್ನಿಗೆ ಆವಶ್ಯಕಗಳಾದ ಸಂಸ್ಕಾರವನ್ನು ವಿಧಿವತ್ತಾಗಿ ಮಾಡಿದ ಮೇಲೆ, ಬ್ರಾಹ್ಮಣರು ಹೋಮಕಾರ್ಯವನ್ನು ನೆರವೇರಿಸಬೇಕು.

೬೪-೬೫. ಈ ಸಂದರ್ಭದಲ್ಲಿ ನೂರುಮಂದಿ ಬ್ರಾಹ್ಮಣರನ್ನು ಎರಡು ಗುಂಪಾಗಿ ಮಾಡಿ, ಈ ಕಾರ್ಯದಲ್ಲಿ ನಿಯೋಗಿಸಬೇಕು. ವಿಚಕ್ಷಣರಾದವರು ಒಂದು ತಿಂಗಳಲ್ಲಿಯೋ ಎರಡು ತಿಂಗಳಲ್ಲಿಯೋ ಅಥವಾ ಯಥಾಕಾಲದಲ್ಲಿಯೋ ಈ ಪ್ರಕಾರ ಎರಡು ಗುಂಪಿನ ವಿಪ್ರರ ಮುಖಾಂತರವಾಗಿ ಕೋಟಿಹೋಮವನ್ನು ನೆರವೇರಿಸಬೇಕು.

೬೬-೬೭. ಎಲೈ ರಾಜನೇ ! ಏಕಮುಖ ಕೋಟಿಹೋಮಯಜ್ಞವು ಬಹು ದಿನ ನಡೆಯಬೇಕಾಗುವುದು. ಒಂದೇ ಕುಂಡದಲ್ಲಿ ಅಗ್ನಿಯನ್ನು ಪ್ರತಿಷ್ಠಿಸಿ, ಚಿತ್ತೈಕಾಗ್ರತೆಯುಳ್ಳವರೂ ಶಾಂತಚಿತ್ತರೂ ಜ್ಞಾನಶೀಲರೂ ವಿತರಣಪರರೂ ಆಗಿರುವಂಥ ವಿಪ್ರರು ದೊರೆತಷ್ಟು ಮಂದಿಯ ಸಹಾಯದಿಂದ ಈ ಕಾರ್ಯವನ್ನು ಮಾಡಿಸಬೇಕು.

**ನ ಸಂಖ್ಯಾನಿಯಮಶ್ಚಾತ್ರ ಬ್ರಾಹ್ಮಣಾನಾಂ ನರೋತ್ತಮ ।**
**ನ ಕಾಲನಿಯಮಶ್ಚೈವ ಸ್ವೇಚ್ಛಾಯಜ್ಞಃ ಸ ಉಚ್ಯತೇ ॥ ೬೮ ॥**

**ಆವೃತ್ತ್ಯಾ ಸರ್ವಕಾಮಸ್ಯ ಚಾತುರ್ಮಾಸ್ಯಾನುಕರ್ಮವತ್ ।**
**ತದಪ್ರಸಕ್ತೌ ಕರ್ತವ್ಯೋ ಯಜ್ಞೋಽಯಂ ಸಾರ್ವಕಾಲಿಕಃ ॥ ೬೯ ॥**

**ಅಯಮೇಕಮುಖೋ ರಾಜನ್ಕಾಲೇನ ಬಹುನಾ ಭವೇತ್ ।**
**ಬಹುವಿಘ್ನಶ್ಚ ಕಾಲೇನ ತಸ್ಮಾತ್ಸಂಕ್ಷೇಪಮಾಚರೇತ್ ॥ ೭೦ ॥**

**ಯತೋ ಹಿ ಚಿತ್ತವಿತ್ತಾದ್ಯಮಾಯುಶ್ಚೈವಾಸ್ಥಿರಂ ಸದಾ ।**
**ಅತಃ ಸಂಕ್ಷೇಪತಃ ಕಾರ್ಯಂ ಧರ್ಮಕಾರ್ಯಂ ಪ್ರಶಸ್ಯತೇ ॥ ೭೧ ॥**

---

೬೮. ಅಯ್ಯಾ ರಾಜೋತ್ತಮನೇ! ಈ ಸಂದರ್ಭದಲ್ಲಿ ಇಷ್ಟೇ ಜನಗಳಾಗಬೇಕೆಂಬ ಸಂಖ್ಯಾನಿಯಮವಾಗಲಿ, ಇಷ್ಟೇ ದಿನಗಳಲ್ಲಿ ಮುಗಿಸಬೇಕೆಂಬ ಕಾಲನಿಯಮವಾಗಲಿ, ಇಲ್ಲವಾದುದರಿಂದ ಇದನ್ನು ಸ್ವೇಚ್ಛಾಯಜ್ಞವೆಂದು ಹೇಳಬೇಕು.

೬೯. ಸಮಸ್ತ ಇಷ್ಟಾರ್ಥಗಳ ಪ್ರಾಪ್ತಿಗಾಗಿ ಮಾಡುವುದಾದರೆ ಇದು ಚಾತುರ್ಮಾಸದಲ್ಲಿ ಮಾಡುವ ಕರ್ಮವಾಗಿದೆ. ಹಾಗಿಲ್ಲದ ಪಕ್ಷದಲ್ಲಿ ಯಾವಾಗ ಬೇಕಾದರೂ ಎಂದರೆ ಸರ್ವಕಾಲದಲ್ಲೂ ಮಾಡಬಹುದು.

೭೦. ಎಲೈ ರಾಜನೇ! ಬಹುದಿನದವರೆಗೆ ನಡೆಯಿಸಿ ಮಾಡುವ ಹೋಮವು ಏಕ ಮುಖಯಜ್ಞವೆನಿಸುವುದು. ಹೀಗೆ ಬಹುದಿನಗಳು ನಡೆಸಬೇಕಾದ ಸಂದರ್ಭದಲ್ಲಿ ಮಧ್ಯೆ ಏನಾದರೂ ಅನಿವಾರ್ಯಗಳು, ವಿಘ್ನಗಳು, ಬಹಳವಾಗಿ ಒದಗಿ, ಯಜ್ಞವು ಅರ್ಧಾಂತವಾಗಬಹುದು. ಆದುದರಿಂದ ಯಜ್ಞವು ಸ್ವಲ್ಪ ದಿವಸಗಳಲ್ಲಿಯೇ ಮುಗಿಯುವಂತೆ ಏರ್ಪಾಡು ಮಾಡಿಸಬೇಕು.

೭೧ ಕರ್ತನ ಚಿತ್ತವು ಚಂಚಲವಾದುದು, ವಿತ್ತ ಮುಂತಾದ ಅನುಕೂಲಗಳು ಸ್ಥಿರವಾಗಿರತಕ್ಕವಲ್ಲ ಆಯುಃಪರಿಮಿತಿಯನ್ನು ಕಂಡವರಿಲ್ಲ. ಆದ್ದರಿಂದ ಇಂಥ ಮಹಾಕಾರ್ಯವನ್ನು ದೀರ್ಘಕಾಲ ನಡೆಸುವುದಕ್ಕಿಂತ ಶುಭಕಾರ್ಯವನ್ನೂ ಧರ್ಮಕಾರ್ಯವನ್ನೂ ಶೀಘ್ರವಲ್ಲಿ ಮುಗಿಸುವುದೇ ಪ್ರಶಸ್ತವಾದುದು.

ತತಃ ಸಮಾಪ್ತೇ ಯಜ್ಞೇ ತು ಕಾರಯೇತ್ಸುಮಹೋತ್ಸವಂ ।
ಶಂಖತೂರ್ಯನಿನಾದೇನ ಬ್ರಹ್ಮಘೋಷಸ್ವನೇನ ಚ ॥ ೭೨ ॥

ತತಸ್ತು ದೀಕ್ಷಯೇದ್ವಿಪ್ರಾನ್ ಹೋತ್ಯಾಂಶ್ಚ ಶ್ರದ್ಧಯಾನ್ವಿತಃ ।
ನಿಷ್ಕೈಶ್ಚ ಕಂಕಣೈಶ್ಚೈವ ಕುಂಡಲೈರ್ವಿವಿಧೈರ್ನೃಪ ॥ ೭೩ ॥

ಗೋಶತಂ ಚೈವ ದಾತವ್ಯಮಶ್ವಾನಾಂ ಚ ಶತಂ ತದಾ ।
ಸಹಸ್ರಂ ಚ ಸುವರ್ಣಸ್ಯ ಸರ್ವೇಷಾಮಪಿ ದಾಪಯೇತ್ ॥ ೭೪ ॥

ಗ್ರಾಮೈರ್ಗಜೈರಥೈರಶ್ವೈಃ ಪೂಜಯೇಚ್ಚ ಪುರೋಹಿತಂ ।
ದೀನಾನ್ಧಕೃಪಣಾನ್ಸರ್ವಾನ್ವಸ್ತ್ರೈರ್ದ್ಯೈಶ್ಚಾಪಿ ಪೂಜಯೇತ್ ॥ ೭೫ ॥

---

೭೨. ಯಜ್ಞವು ಸಾಂಗವಾಗಿ ನೆರವೇರಿದ ದಿನ ವಾದ್ಯಘೋಷ, ಶಂಖ ಧ್ವನಿ, ವೇದಪಾರಾಯಣ ಧ್ವನಿ ಇವುಗಳಿಂದ ಯುಕ್ತವಾಗಿರುವಂತೆ ಮಹೋತ್ಸವ ವನ್ನು ಏರ್ಪಡಿಸಬೇಕು.

೭೩. ಯಜ್ಞದೀಕ್ಷಾವ್ರತಧಾರಣ ಮಾಡಿದವನು ಬಳಿಕ ಶ್ರದ್ಧೆಯಿಂದ ಕೂಡಿ, ವಿಪ್ರರಿಗೂ ಹೋತಾರರಿಗೂ ವಿವಿಧವಾದ ರತ್ನಕಟಕಗಳು, ಕುಂಡಲ ಗಳು, ಸುವರ್ಣ ನಿಷ್ಕಗಳು (ನಾಣ್ಯಗಳು) ಇವನ್ನು ಕೊಡಬೇಕು.

೭೪. ಅಷ್ಟೇ ಅಲ್ಲದೆ ನೂರುಗಟ್ಟಲೆ ಗೋವುಗಳನ್ನು ನೂರುಗಟ್ಟಲೆಯಾಗಿ ಕುದುರೆಗಳನ್ನೂ ಅವರಿಗೆ ಅರ್ಪಿಸಬೇಕು. ಉಳಿದ ಸಮಸ್ತ ವಿಪ್ರರಿಗೂ ಸಾವಿರ ಸುವರ್ಣ ನಾಣ್ಯಗಳ ದಕ್ಷಿಣೆಯನ್ನು ಕೊಡಬೇಕು.

೭೫. ಪುರೋಹಿತರಿಗೆ ಸರ್ವಮಾನ್ಯಗ್ರಾಮ, ಆನೆ, ಕುದುರೆ, ರಥ ಮುಂತಾದುವನ್ನೂ ವಸ್ತ್ರಭೂಷಣಾದಿ ಸಹಿತ ಸಮರ್ಪಿಸಿ ಸತ್ಕರಿಸಬೇಕು. ದೀನರು, ಕುರುಡರು ಮುಂತಾದವರಿಗೆ ವಸ್ತ್ರಗಳು ದಕ್ಷಿಣೆ ಮುಂತಾದುವುಗಳನ್ನು ಕೊಟ್ಟು ಸತ್ಕರಿಸಬೇಕು.

ತತಶ್ಚಾವಭೃತಂ ಸ್ನಾಯಾತ್ತೈರ್ಘಟೈಃ ಪೂರ್ವಕಲ್ಪಿತೈಃ ।
ಲಕ್ಷಹೋಮೋಕ್ತಮಂತ್ರೇಣ ಸದಾ ವಿಜಯಕಾರಿಣಾ ॥ ೭೬ ॥

ಏವಂ ಸಮಾಪಯೇದ್ಯಸ್ತು ಕೋಟಿಹೋಮಮಖಂ ಶುಭಂ ।
ತಸ್ಯಾರೋಗ್ಯಂ ವಿತ್ತಪುತ್ರರಾಷ್ಟ್ರವೃದ್ಧಿಸ್ತಥೈವ ಚ ॥ ೭೭ ॥

ಸರ್ವಪಾಪಕ್ಷಯಶ್ಚೈವ ಜಾಯತೇ ನೃಪಸತ್ತಮ ।
ಅನಾವೃಷ್ಟಿಭಯಂ ಚೈವ ಉತ್ಪಾತಭಯಮೇವ ಚ ॥ ೭೮ ॥

ದುರ್ಭಿಕ್ಷಂ ಗ್ರಹಪೀಡಾ ಚ ಪ್ರಶಮಂ ಯಾತಿ ಭೂತಲೇ ।
ಏತತ್ಪುಣ್ಯಂ ಪಾಪಹರಂ ಸರ್ವಕಾಮಫಲಪ್ರದಂ ॥
ಸನತ್ಕುಮಾರಮುನಿನಾ ಪಾರ್ಥಿವಾಯ ನಿವೇದಿತಂ ॥ ೭೯ ॥

---

೭೬. ಮೊದಲು ಸ್ಥಾಪಿಸಿ ಪೂಜಿಸಿದ್ದ ಕಲಶೋದಕದಿಂದ, ಲಕ್ಷಹೋಮ ಕಾಲದಲ್ಲಿ ಪಠಿಸಿದಂತೆಯೇ ಸದಾ ಜಯಪ್ರದಗಳಾದ ಮಂತ್ರೋಚ್ಚಾರಣ ಪೂರ್ವಕವಾಗಿ ಯಜಮಾನನು ಅವಭೃಥಸ್ನಾನವನ್ನು ಮಾಡಬೇಕು.

೭೭. ಶುಭಕರವಾದ ಕೋಟಿಹೋಮವೆಂಬ ಯಜ್ಞವನ್ನು ಈ ಪ್ರಕಾರ ಯಾವನು ವಿಧಿಪ್ರಕಾರ ಸಾಂಗವಾಗಿ ಮುಗಿಸುವನೋ ಅವನಿಗೆ ಆರೋಗ್ಯಲಾಭ, ವಿತ್ತಪ್ರಾಪ್ತಿ, ಸುಪುತ್ರಾವಾಪ್ತಿ, ರಾಷ್ಟ್ರವೃದ್ಧಿ, ಇವು ಉಂಟಾಗುವುವು.

೭೮. ಅಲ್ಲದೆ ಆತನಿಗೆ ಯಾವುದಾದರೂ ಪಾಪಗಳು ಸಂಘಟಿಸಿದ್ದರೆ ಅವೆಲ್ಲಾ ನಾಶವಾಗುತ್ತವೆ. ಅವನ ರಾಜ್ಯದಲ್ಲಿ ಸಂಭವಿಸಿದ ಅನಾವೃಷ್ಟಿ ಭೀತಿಯೂ, ದುಶ್ಶಕುನಭಯವೂ, ಕ್ಷಾಮಭಯವೂ, ಗ್ರಹಗಳಿಂದ ಸಂಭವಿಸುವ ಪೀಡೆಯೂ ಶಮನವಾಗುವುವು.

೭೯. ಪುಣ್ಯಕರವೂ ಪಾಪಪರಿಹಾರಕವೂ ಸಮಸ್ತ ಇಷ್ಟಾರ್ಥಗಳನ್ನು ಕೊಡತಕ್ಕುದೂ ಆದ ಈ ಕೋಟಿಹೋಮ ವಿಧಾನವನ್ನು ಸನತ್ಕುಮಾರ ಮುನಿವರ್ಯರು ಈಪ್ರಕಾರ ನಿರೂಪಿಸಿದರು.

**ಸರ್ವೋಪಸರ್ಗಶಮನಂ ಭವನೇ ವನೇ ವಾ ।**
**ಯೇ ಕಾರಯಂತಿ ಮನುಜಾ ನೃಪ ಕೋಟಿಹೋಮಂ ॥**
**ಭೋಗಾನವಾಪ್ಯ ಮನಸೋಽಭಿಮತಾನ್ಪ್ರಕಾಮಂ ।**
**ತೇ ಯಾಂತಿ ಶಕ್ರಸದನಂ ಸುವಿಶುದ್ಧಸತ್ತ್ವಾಃ ॥ ೮೦ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಕೋಟಿಹೋಮ ವಿಧಿವರ್ಣನಂ ನಾಮ ದ್ವಿಚತ್ವಾರಿಂಶದುತ್ತರಶತತಮೋಽಧ್ಯಾಯಃ.**



೮೦. ಎಲೈ ರಾಜನೇ! ಕಾಡಿನಲ್ಲಿಯಾಗಲಿ ಊರಿನಲ್ಲಿಯಾಗಲಿ ಸಂಭವಿಸುವ ಸಮಸ್ತ ಉಪಸರ್ಗಗಳನ್ನು ಶಮನಮಾಡತಕ್ಕ ಈ ಕೋಟಿಹೋಮವನ್ನು ಯಾರು ಮಾಡಿಸುತ್ತಾರೋ ಅವರು ತಮ್ಮ ಮನಸ್ಸಿಗೆ ಇಷ್ಟವಾದ ಭೋಗಗಳನ್ನು ಸಮೃದ್ಧಿಯಾಗಿ ಅನುಭವಿಸಿ ಶುದ್ಧಸತ್ತ್ವವುಳ್ಳವರಾಗಿ ಇಂದ್ರಲೋಕವನ್ನು ಪಡೆಯುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದದಲ್ಲಿ ಕೋಟಿಹೋಮವಿಧಿವರ್ಣನೆಯೆಂಬ ನೂರನಲವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣ
## ಉತ್ತರಪರ್ವಣಿ
## ತ್ರಿಚತ್ವಾರಿಂಶದುತ್ತರಶತತಮೋಽಧ್ಯಾಯಃ

॥ ಶ್ರೀ ಕೃಷ್ಣ ಉವಾಚ ॥

ಮಹಾಶಾಂತಿಂ ಪ್ರವಕ್ಷ್ಯಾಮಿ ಮಹಾದೇವೇನ ಭಾಷಿತಾಂ ।
ಪಾರ್ಥಿವಾನಾಂ ಹಿತಾರ್ಥಾಯ ಮಹಾದುಸ್ತರತಾರಿಣೀಂ ॥ ೧ ॥

ನೃಪಾಭಿಷೇಕೇ ಸಾ ಕಾರ್ಯಾ ಯಾತ್ರಾಕಾಲೇ ನೃಪಸ್ಯ ತು ।
ದುಃಸ್ವಪ್ನೇ ದುರ್ನಿಮಿತ್ತೇ ಚ ಗ್ರಹವೈಗುಣ್ಯಸಂಭವೇ ॥ ೨ ॥

---

### ನೂರನಲತ್ತಮೂರನೆಯ ಅಧ್ಯಾಯ

೧. ಕೃಷ್ಣನು ಹೇಳುತ್ತಾನೆ—ರಾಜಶ್ರೇಷ್ಠರಿಗೆ ಹಿತವಾಗಲೆಂಬ ಉದ್ದೇಶದಿಂದಲೂ, ಪ್ರಾಪ್ತವಾದ ಮಹಾಕಷ್ಟಗಳನ್ನು ಪರಿಹರಿಸಿಕೊಳ್ಳುವುದಕ್ಕಾಗಿಯೂ, ಆಚರಿಸಬೇಕಾದ ಮಹಾಶಾಂತಿ ಕ್ರಮವನ್ನು ಮಹಾದೇವನು ನಿರೂಪಿಸಿರುವನು ಅದನ್ನು ಈಗ ವಿವರಿಸುತ್ತೇನೆ.

೨. ರಾಜರ ಪಟ್ಟಾಭಿಷೇಕಕಾಲದಲ್ಲಿ ಈ ಮಹಾಶಾಂತಿ ಕ್ರಮವನ್ನು ಮಾಡಬಹುದು. ಅವರು ಮಹಾಯಾತ್ರೆ ಹೊರಡುವಾಗಲೂ ತಮಗೆ ದುಸ್ವಪ್ನ ದುಶ್ಶಕುನಗಳು ಸಂಭವಿಸಿದಾಗಲೂ ಆದಿತ್ಯಾದಿ ಗ್ರಹಗಳು ಜನ್ಮರಾಶಿ ಜನ್ಮಲಗ್ನ ಅರಿಷ್ಟಸ್ಥಾನ ಇವುಗಳಲ್ಲಿರುವಾಗಲೂ ಇದನ್ನು ಮಾಡಬೇಕು.

**ವಿದ್ಯುದುಲ್ಕಾನಿಪಾತೇ ಚ ಜನ್ಮರ್ಕ್ಷೇ ಗ್ರಹದೈವತೇ ।**
**ಕೇತೂದಯೇ ಚ ಸಂಜಾತೇ ನಿರ್ಘಾತೇ ಕ್ಷಿತಿಕಂಪನೇ ॥ ೩ ॥**

**ಪ್ರಸೂತೌ ಮೂಲಗಂಡಾಂತೇ ಯಮಲಸ್ಯ ತು ಸಂಭವೇ ।**
**ಛತ್ರಾಣಾಂ ಚ ಧ್ವಜಾನಾಂ ಚ ಸ್ವಸ್ಥಾನಾತ್ಪತನೇ ಭುವಿ ॥**
**ಕಾಕೋಲೂಕಕಪೋತಾನಾಂ ಪ್ರವೇಶೇ ವೇಶ್ಮನಸ್ತಥಾ ॥ ೪ ॥**

**ಕ್ರೂರಗ್ರಹಾಣಾಂ ವಕ್ರತ್ವೇ ಜನ್ಮಾದಿಷು ವಿಶೇಷತಃ ।**
**ಜನ್ಮನಿ ದ್ವಾದಶೇ ಚೈವ ಚತುರ್ಥೇ ವಾಷ್ಟಮೆ ತಥಾ ॥ ೫ ॥**

**ಯದಾ ಸ್ಯುರ್ಗುರುಮಂದಾಽಽರಾಃ ಸೂರ್ಯಶ್ಚೈವ ವಿಶೇಷತಃ ।**
**ಯುದ್ಧೇ ಗ್ರಹಾಣಾಂ ಸರ್ವೇಷಾಂ ಸೂರ್ಯಶೀತಾಂಶುಕೀಲಕೇ ॥ ೬ ॥**

---

೩. ಇದಲ್ಲದೆ ಶಿಡಿಲು, ಉಲ್ಕಾಪಾತಾದಿ ಮಹೋತ್ಪಾತ ದರ್ಶನ, ಧೂಮಕೇತು ದರ್ಶನ, ಕ್ರೂರಗ್ರಹದೇವತೆಗಳು ಜನ್ಮರಾಶಿಯಲ್ಲಿ ಅಥವಾ ಜನ್ಮನಕ್ಷತ್ರದಲ್ಲಿ ಸಂಚರಿಸುವುದು, ಭೂಕಂಪ, ಈ ಸಂದರ್ಭಗಳಲ್ಲಿ ಸಹ ಇದನ್ನು ಮಾಡಬೇಕು.

೪. ಮತ್ತು ಮೂಲಾನಕ್ಷತ್ರದಲ್ಲಿ ಮಕ್ಕಳು ಹುಟ್ಟುವುದು. ಗಂಡ ಅತಿಗಂಡ ಎಂಬ ಯೋಗಗಳಲ್ಲಿ ಶಿಶು ಜನನವಾಗುವುದು. ಅವಳಿಮಕ್ಕಳು ಜನಿಸುವುದು. ಛತ್ರಿ, ಚಾಮರಾದಿ ರಾಜಚಿಹ್ನೆಗಳು ಅವುಗಳ ಸ್ವಸ್ಥಾನದಿಂದ ಮುರಿದು ನೆಲಕ್ಕೆ ಉರುಳುವುದು. ಕಾಗೆ, ಗೂಬೆ, ಕಪೋತ ಮುಂತಾದುವು ಮನೆಯೊಳಗೆ ಪ್ರವೇಶಿಸುವುದು.

೫. ಇಂಥ ಸಂದರ್ಭಗಳಲ್ಲಿಯೂ, ಕ್ರೂರಗ್ರಹಗಳು ಜನ್ಮರಾಶಿ ಮುಂತಾದಕಡೆ ವಕ್ರಗತಿಯುಳ್ಳವರಾಗುವುದು. ಸೂರ್ಯ, ಗುರು, ಶನಿ, ಅಂಗಾರಕ ಮುಂತಾದ ಮಹಾಗ್ರಹಗಳು ಜನ್ಮ, ದ್ವಾದಶ, ಅಷ್ಟಮ, ಅರ್ಧಾಷ್ಟಮ, (ಚತುರ್ಥ) ಸ್ಥಾನಗಳಲ್ಲಿರುವುದು ಇಂಥ ಸನ್ನಿವೇಶಗಳಲ್ಲಿಯೂ.

೬. ಗ್ರಹ ಯುದ್ಧ ಸಂಭವಿಸುವಕಾಲ, ಸೂರ್ಯಚಂದ್ರರಿಗೆ ಕೀಲಕ ಯೋಗ ಪ್ರಾಪ್ತಿಯಾಗುವುದು ಇಂಥ ಕಾಲಗಳಲ್ಲಿಯೂ ಇದನ್ನು ಮಾಡತಕ್ಕದ್ದು ಯುಕ್ತ.

**ವಸ್ತ್ರಾಯುಧಗವಾಶ್ವೇಷು ಮಣಿಕೇಶವಿನಾಶನೇ ।**
**ಯದ್ಯಗ್ರೇ ಪರಿದೃಶ್ಯೇತ ರಾತ್ರಾವಿಂದ್ರಧನುಸ್ತಥಾ ॥ ೭ ॥**

**ವೇಶ್ಮನಷ್ಟ ತುಲಾಭಂಗೇ ಗರ್ಭೇಷ್ವಶ್ವತರೀಷು ಚ ।**
**ರವೀಂದ್ವೋರುಪರಾಗೇಷು ಮಹಾಶಾನ್ತಿಃ ಪ್ರಶಸ್ಯತೇ ॥ ೮ ॥**

**ಸರ್ವಾಣಿ ದುರ್ನಿಮಿತ್ತಾನಿ ಪ್ರಶಮಂ ಯಾಂತಿ ಸರ್ವದಾ ।**
**ತಾಂ ಕುರ್ಯುರ್ಬ್ರಾಹ್ಮಣಾಃ ಪಂಚ ಕುಲಶೀಲಸಮನ್ವಿತಾಃ ॥ ೯ ॥**

**ಚತುರ್ವೇದಾಸ್ತ್ರಿವೇದಾಶ್ಚ ದ್ವಿವೇದಾಶ್ಚಾಪಿ ಪಾಂಡವ ।**
**ಅಥರ್ವಣಾ ವಿಶೇಷೇಣ ಬಹ್ವೃಚಾ ಯಜುಸಂಯುತಾಃ ॥ ೧೦ ॥**

---

೭. ತಾವು ಧರಿಸುವ ವಸ್ತ್ರಗಳು ಆಯುಧಗಳು ನಷ್ಟವಾಗುವುದು, ಗೋವು ಅಶ್ವ ಇವುಗಳಿಗೆ ಮಣಿಯೂ ಕೇಶವೂ ನಾಶವಾಗುವಿಕೆ, ರಾತ್ರಿಯವೇಳೆ ಕಾಮನ ಬಿಲ್ಲು ಕಾಣಿಸುವಿಕೆ.

೮. ಮನೆ ಕುಸಿದುಬೀಳುವುದು, ತೊಲೆಗಳು ಮುರಿದುಕೊಳ್ಳುವುದು, ಕುದುರೆಗಳು ಗರ್ಭವಾದಾಗ ಸೂರ್ಯ ಚಂದ್ರಗ್ರಹಣ ಸಂಭವಿಸುವುದು, ಈ ಕಾಲಗಳಲ್ಲಿ ಮಹಾಶಾಂತಿಕರ್ಮಮಾಡುವುದು ಪ್ರಶಸ್ತವಾದುದು.

೯. ಇಂಥ ಸಂದರ್ಭಗಳಲ್ಲಿ ಈ ಶಾಂತಿಕರ್ಮವನ್ನು ಮಾಡಿದರೆ ತತ್ಕಾಲದಲ್ಲಿ ಒದಗಿದ್ದ ದುರ್ನಿಮಿತ್ತಗಳು ಕೂಡಲೆ ಶಮನವಾಗುವುದಲ್ಲದೆ ಮುಂದೆ ಅವು ಉಂಟಾಗದ ಹಾಗೆ ಆಗುವುದು.

೧೦. ಎಲೈ ಧರ್ಮರಾಜನೆ! ಸತ್ಕುಲಪ್ರಸೂತರೂ, ಶೀಲಸಂಪನ್ನರೂ, ಎನಿಸಿ ನಾಲ್ಕುವೇದಗಳನ್ನು ಬಲ್ಲವರೂ, ಮೂರುವೇದಗಳನ್ನು ಬಲ್ಲವರೂ, ಕೊನೆಯಪಕ್ಷ ಎರಡುವೇದಗಳನ್ನು ಬಲ್ಲವರೂ ವಿಶೇಷತಃ ಅಥರ್ವಣವೇದವನ್ನು ಬಲ್ಲವರೂ ಆದ ಐದುಮಂದಿ ಈ ಕರ್ಮವನ್ನು ನಿರ್ವಹಿಸಬೇಕು.

**ಶುಚಯಃ ಶ್ರುತಸಂಪನ್ನಾ ಜಪಹೋಮಪರಾಯಣಾಃ ।**
**ಕೃಚ್ಛ್ರಪಾರಾಕನಕ್ತಾದ್ಯೈಃ ಕೃತಕಾಯವಿಶೋಧನಾಃ ॥ ೧೧ ॥**

**ಪೂರ್ವಮಾರಾಧ್ಯ ಮಂತ್ರೈಸ್ತು ಪ್ರಾರಭೇತ ಕ್ರಿಯಾಂ ತತಃ ।**
**ದಶದ್ವಾದಶಹಸ್ತಂ ವಾ ಮಂಡಪಂ ಕಾರಯೇಚ್ಛುಭಂ ॥ ೧೨ ॥**

**ತನ್ಮಧ್ಯೇ ವೇದಿಕಾಂ ಕುರ್ಯಾಚ್ಚತುರ್ಹಸ್ತಪ್ರಮಾಣತಃ ।**
**ಆಗ್ನೇಯ್ಯಾಂ ಕಾರಯೇತ್ಕುಂಡಂ ಹಸ್ತಮಾತ್ರಂ ಸುಶೋಭನಂ ॥೧೩॥**

**ಮೇಖಲಾತ್ರಯಸಂಯುಕ್ತಂ ಯೋನ್ಯಾ ಚಾಪಿ ವಿಭೂಷಿತಂ ।**
**ಬದ್ಧಚಂದನಮಾಲಂ ಚ ತೋರಣಾಲಂಕೃತಂ ತಥಾ ॥ ೧೪ ॥**

---

೧೧. ಶುಚಿರ್ಭೂತರೂ ಶ್ರೌತಸ್ಮಾರ್ತ ಕರ್ಮಾನುಷ್ಠಾನಪರರೂ, ಯಜುರ್ವೇದವನ್ನು ಚನ್ನಾಗಿ ಅಧ್ಯಯನ ಮಾಡಿದ ಬಹ್ವೃಚರೂ, ಜಪಹೋಮಗಳಲ್ಲಿ ಆಸಕ್ತರೂ ಕೃಚ್ಛ್ರ, ಪರಾಕ, ನಕ್ತ, ಮುಂತಾದ ನಿಯಮಾನುಷ್ಠಾನದಿಂದ ಶರೀರವನ್ನು ಶೋಷಿಸಿರತಕ್ಕವರೂ.

೧೨. ಇಂತಹ ವಿಪ್ರರನ್ನು ಪ್ರಥಮತಃ ಮಂತ್ರವತ್ತಾಗಿ ಪೂಜಿಸಿ, ಸತ್ಕರಿಸಿ ಆಮೇಲೆ ಯಜ್ಞಕಾರ್ಯವನ್ನು ಆರಂಭಿಸಬೇಕು. ಹತ್ತುಹಸ್ತ ಹನ್ನೆರಡುಹಸ್ತ ಪ್ರಮಾಣವುಳ್ಳ ಮಂಟಪವೊಂದನ್ನು ಈ ಶಾಂತಿ ಹೋಮಾರ್ಥವಾಗಿ ರಚಿಸಬೇಕು.

೧೩. ಅದರ ಮಧ್ಯೆ ನಾಲ್ಕುಹಸ್ತ ಪ್ರಮಾಣವುಳ್ಳ ವೇದಿಕೆಯನ್ನು ರಚಿಸಬೇಕು. ವೇದಿಕೆಯ ಆಗ್ನೇಯ ದಿಗ್ಭಾಗದಲ್ಲಿ ಒಂದು ಹಸ್ತಪ್ರಮಾಣವುಳ್ಳ ಚತುರಸ್ರವಾದ ಕುಂಡವನ್ನು ಶುಭಕರವಾಗುವಂತೆ ರಚಿಸಬೇಕು.

೧೪. ಆ ಕುಂಡದ ಸುತ್ತಲೂ ಶುಭಕರವಾದ ಮೂರು ಮೇಖಲೆಗಳನ್ನು ರಚಿಸಬೇಕು. ಮುಂಭಾಗದಲ್ಲಿ ಅಲಂಕೃತವಾಗಿರುವಂತೆ ಕುಂಡಯೋನಿಯನ್ನು ರಚಿಸಬೇಕು. ಮಂಟಪದ ನಾಲ್ಕುಕಡೆಯೂ ತೋರಣಗಳನ್ನೂ ಸುಗಂಧಯುಕ್ತವಾದ ಹೂ ಮಾಲೆಯನ್ನು ಕಟ್ಟಿ ಅಲಂಕರಿಸಬೇಕು.

ಗೋಮಯೇನೋಪಲಿಪ್ತೇ ಚ ಮಂಡಪೇ ತು ದ್ವಿಜಾತಯಃ ।
ಶುಕ್ಲಾಂಬರಧರಾಃ ಸ್ನಾತಾಃ ಶುಕ್ಲಮಾಲ್ಯಾನುಲೇಪನಾಃ ॥ ೧೫ ॥

ತತಶ್ಚ ಪಂಚ ಕಲಶಾಂಸ್ತಸ್ಯಾಂ ವೇದ್ಯಾಂ ನಿಯೋಜಯೇತ್ ।
ಆಗ್ನೇಯಾದಿಷು ಕೋಣೇಷು ಪಂಚಮಂ ಮಧ್ಯಮಸ್ತಥಾ ॥ ೧೬ ॥

ಅಷ್ಟಾಸ್ರಾಲಂಕೃತೇ ಪದ್ಮೇ ಚೂತಪಲ್ಲವಶೋಭಿತೇ ।
ಬ್ರಹ್ಮಕೂರ್ಚವಿಧಾನೇನ ಪಂಚಗವ್ಯಂ ತು ಕಾರಯೇತ್ ॥ ೧೭ ॥

ಓಷಧೀಃ ಪಂಚರತ್ನಾನಿ ರೋಚನಾಂ ಚಂದನಂ ತಥಾ ।
ಸಿದ್ಧಾರ್ಥಕಾಙ್ಛಮೀದೂರ್ವಾಃ ಕುಶಾನ್ವ್ರೀಹಿಯವಾಂಸ್ತಥಾ ॥೧೮॥

ಅಪಾಮಾರ್ಗಂ ಫಲವತೀಂ ನ್ಯಗ್ರೋಧೋದುಂಬರೌ ತಥಾ ।
ಪ್ಲಕ್ಷಾಶ್ವತ್ಥಕಪಿತ್ಥಾಂಶ್ಚ ಪ್ರಿಯಂಗುಚೂತಪಲ್ಲವಾನ್ ॥ ೧೯ ॥

---

೧೫. ಸ್ನಾನಾಹ್ನಿಕಾದಿಗಳನ್ನು ನೇರವೇರಿಸಿ, ಶುಭ್ರವಸ್ತ್ರವನ್ನುಟ್ಟು ಶ್ರೀಗಂಧ, ಬಿಳಿಯ ಪುಷ್ಪಾದಿಗಳನ್ನು ಧರಿಸಿದ ಬ್ರಾಹ್ಮಣರು ಯಾಗಮಂಟಪವನ್ನು ಪ್ರವೇಶಿಸಬೇಕು. ಇದಕ್ಕೆ ಮುಂಚೆ ಆ ಮಂಟಪದ ನೆಲವನ್ನು ಸಾರಿಸಿ ರಂಗವಲ್ಲ್ಯಾದಿಗಳನ್ನು ಹಾಕಿರಬೇಕು.

೧೬. ಅಲ್ಲಿ ವೇದಿಕೆಯ ಆಗ್ನೇಯ, ನೈಋತ್ಯ, ಈಶಾನ್ಯ, ವಾಯವ್ಯ, ಈ ದಿಕ್ಕುಗಳಲ್ಲಿ, ನಾಲ್ಕುಕಲಶಗಳನ್ನು ಇರಿಸಬೇಕು. ಮಧ್ಯದಲ್ಲಿ ಅಷ್ಟದಳ ಪದ್ಮವನ್ನು ರಚಿಸಿ, ಅದರ ಮೇಲೆ ಐದನೆಯ ಕಲಶವನ್ನು ಇಡಬೇಕು.

೧೭. ಅದನ್ನು ಮಾವಿನ ಚಿಗುರು, ಮುಂತಾದುವುಗಳಿಂದ ಅಲಂಕರಿಸಿ ಬ್ರಹ್ಮಕೂರ್ಚ ವಿಧಿಪ್ರಕಾರ ಪಂಚಗವ್ಯ ಮೇಳನವನ್ನು ಮಾಡಬೇಕು

೧೮. ಆ ಕಲಶದೊಳಗೆ ಯಥೋಕ್ತವಾದ ಮೂಲಿಕೆಗಳು, ಪಂಚರತ್ನ, ಗೋರೋಚನ, ಗಂಧ, ಬಿಳಿಯಸಾಸುವೆ, ಬನ್ನಿಯಪತ್ರೆ, ಗರಿಕೆಹುಲ್ಲು, ದರ್ಭೆ, ಭತ್ತ, ಜವೆಗೋಧಿ, ಇವನ್ನು ಹಾಕಬೇಕು.

೧೯. ಅಲ್ಲದೆ ಆಲ, ಅತ್ತಿ, ಬಸರಿ, ಅರಳಿ, ಬೇಲ, ಪ್ರಿಯಂಗು, ಮಾವು, ಇವುಗಳ ಪಲ್ಲವಗಳು, ಉತ್ತರಣೆಯ ಗೊನೆ ಇವನ್ನೂ.

**ಹಸ್ತಿದಂತಮೃದಂ ಚೈವ ಕೋಣಕುಂಭೇಷು ನಿಕ್ಷಿಪೇತ್ ।**
**ಪುಣ್ಯತೀರ್ಥೋದಕಾನ್ನಂ ಚ ಧಾನ್ಯಂ ಗವ್ಯಂ ಚ ಮಧ್ಯಮೇ ॥ ೨೦ ॥**

**ಕೂರ್ಚಂವಾಚಮಿತೀದಂ ಚ ವಹ್ನಿಕುಂಭಾಭಿಮಂತ್ರಣಂ ।**
**ಆಶುಃಶಿಶಾನೋಮಂತ್ರೇಣ ಮಂತ್ರಣಂ ವಾಯುಗೋಚರೇ ॥ ೨೧ ॥**

**ಈಶಾವಾಸ್ಯಂ ಚತುರ್ಥಸ್ಯ ಕುಂಭಸ್ಯ ಚಾಭಿಮಂತ್ರಣಂ ।**
**ಮಧ್ಯಮೇ ಜಪಿತವ್ಯಾಸ್ತು ರುದ್ರಕುಂಭೇ ಭವೋದ್ಭವಾಃ ॥ ೨೨ ॥**

**ಗಂಧಪುಷ್ಪಾಕ್ಷತೈರ್ವಸ್ತ್ರೈರ್ನೈವೇದ್ಯೈರ್ಘೃತಪಾಚಿತೈಃ ।**
**ಫಲೈಶ್ಚ ನಾರಿಕೇಲಂದ್ಯೈರ್ದೀಪಕೈಃ ಕುಂಭಪೂಜನಂ ॥ ೨೩ ॥**

---

೨೦- ಮತ್ತು ಆನೆಯ ದಂತದಿಂದ ಮೀಟಿದ ಮಣ್ಣನ್ನು ಅದರಲ್ಲಿ ಹಾಕಬೇಕು. ಆಗ್ನೇಯ ಮೊದಲಾದ ಕೋಣದಲ್ಲಿಟ್ಟಿರುವ ನಾಲ್ಕು ಕಲಶ ಗಳೊಳಗೆ ಪುಣ್ಯತೀರ್ಥ, ಧಾನ್ಯ, ಪಂಚಗವ್ಯ, ಇವುಗಳನ್ನೂ ಮಧ್ಯಮ ಕಲಶದಲ್ಲಿ ಕೂರ್ಚವನ್ನೂ ಹಾಕಬೇಕು.

೨೧. "ವಾಚನಮಿತಿ" "ಇದಂ ವಿಷ್ಣು" ಈ ಮಂತ್ರಗಳಿಂದ ಆಗ್ನೇಯ ನೈಋತ್ಯ ಕೋಣದ ಕಲಶಗಳನ್ನೂ, "ಆಶುಃಶಿಶಾನ" ಎಂಬ ಮಂತ್ರದಿಂದ ವಾಯುವ್ಯ ಕೋಣಕಲಶವನ್ನೂ, ಈ ಶಾವಾಸ್ಯೋಪನಿಷತ್ತಿನ ಮಂತ್ರದಿಂದ ಈಶಾನ್ಯ ಕೋಣದ ಕಲಶವನ್ನೂ, ಅಭಿಮಂತ್ರಿಸಬೇಕು.

೨೨ ಮಧ್ಯದಲ್ಲಿರುವ ರುದ್ರಕುಂಭವನ್ನು ಭವೋದ್ಭವಾಯನಮಃ ಎಂಬ ಮಂತ್ರದಿಂದ ಅಭಿಮಂತ್ರಿಸಬೇಕು.

೨೩. ಹೀಗೆ ಅಭಿಮಂತ್ರಿಸಿದನಂತರ ವಸ್ತ್ರ, ಗಂಧ, ಅಕ್ಷತೆ, ಪುಷ್ಪ, ಧೂಪ, ದೀಪ, ತುಪ್ಪದಿಂದ ಮಾಡಿದ ಭಕ್ಷ್ಯ, ತೆಂಗಿನಕಾಯಿಗಳ ನೈವೇದ್ಯ, ಮುಂತಾದುವುಗಳಿಂದ ಆ ಕಲಶಗಳನ್ನು ಪೂಜಿಸಬೇಕು.

ಸ್ವಸ್ತಿವಾಚನಕಂ ಚೈವ ಕಾರಯೇತ್ತದನಂತರಂ ।
ಕ್ರಮೇಣಾನೇನ ಶನಕೈರಗ್ನಿಕಾರ್ಯಂ ಪ್ರಯೋಜಯೇತ್ ॥ ೨೪ ॥

ಅಗ್ನಿಂದೂತಮಿತಿ ಹ್ಯಗ್ನಿಂ ಪೂರ್ವಮೇವ ನಿಧಾಪಯೇತ್ ।
ಹಿರಣ್ಯಗರ್ಭಃಸಮಿತಿ ಬ್ರಹ್ಮಾಸನನಿಯೋಜನಂ ॥ ೨೫ ॥

ಕಪೋತಸುಪ್ರಣೀತೇನ ಮಂತ್ರೇಣ ವಿನಿಶೇಷಯೇತ್ ।
ಕೃತ್ವಾ ಚಾವರಣಂ ವಹ್ನೇರ್ಾಜ್ಯಸಂಸ್ಕಾರಮೇವ ಚ ॥ ೨೬ ॥

ಅಥ ಚಾಸಾದಯೇದ್ದ್ರವ್ಯಂ ಯಥಾವತ್ಸಪ್ರಯೋಜನಂ ।
ತತಃ ಪುರುಷಸೂಕ್ತೇನ ಪಾಯಸಶ್ರಪಣಂ ಭವೇತ್ ॥ ೨೭ ॥

---

೨೪. ಬಳಿಕ ಬ್ರಾಹ್ಮಣರಿಂದ ಸ್ವಸ್ತಿವಾಚನವನ್ನು ಮಾಡಿಸಬೇಕು. ಅನಂತರ ಇದೇ ಮಂತ್ರಕ್ರಮದಿಂದ ಅರ್ಚಿಸಿ, ಸಾವಕಾಶವಾಗಿ ಅಗ್ನಿಕಾರ್ಯವನ್ನು ಆರಂಭಮಾಡಬೇಕು.

೨೫. 'ಅಗ್ನಿಂದೂತಂವೃಣೀಮಹೆ' ಎಂಬ ಮಂತ್ರದಿಂದ ಪ್ರಥಮತಃ ಅಗ್ನಿಯನ್ನು ಪ್ರತಿಷ್ಠಿಸಬೇಕು. 'ಹಿರಣ್ಯಗರ್ಭಸ್ಸಮವರ್ತತ' ಎಂಬ ಮಂತ್ರದಿಂದ ಬ್ರಹ್ಮಾಸನವನ್ನು ರಚಿಸಬೇಕು.

೨೬. "ಕಪೋತಸುಪ್ರಣೀತಾ" ಎಂಬ ಮಂತ್ರದಿಂದ ವಿಶೇಷವಾಗಿ ಅಗ್ನಿಗೆ ಆವರಣವನ್ನು ಕಲ್ಪಿಸಬೇಕು. ಬಳಿಕ ಆಜ್ಯವನ್ನು ಮಂತ್ರವತ್ತಾಗಿ ಸಂಸ್ಕಾರ ಮಾಡಬೇಕು.

೨೭. ಮತ್ತು ಅಗ್ನಿಯ ಸಮೀಪದಲ್ಲಿ ಹೋಮಕ್ಕೆ ಬೇಕಾದ ಪ್ರೋಕ್ಷಣ ಪಾತ್ರೆ, ಪೂರ್ಣಪಾತ್ರೆ, ಆಜ್ಯಸ್ಥಾಲಿ, ಸ್ರುಕ್, ಸ್ರುವ, ಇಧ್ಮ, ಬರ್ಹಿ, ಮೊದಲಾದ ಹೋಮೋಪಯುಕ್ತ ದ್ರವ್ಯಗಳನ್ನೂ ಪಾತ್ರೆಗಳನ್ನೂ ಯಥಾವತ್ತಾಗಿ ಆಸಾದನಮಾಡಬೇಕು.

ಅಭಿಘಾರ್ಯೋರ್ಥ ಸಂಸಿದ್ಧಂ ತಥಾ ಸಂಸ್ಥಾಪಯೇದ್ಭುವಿ ।
ಅಷ್ಟಾದಶಪ್ರಮಾಣೇಧ್ಮಾರ್ ದದ್ಯಾದಥ ಶಮೀಮಯಾನ್ ॥ ೨೮ ॥

ಪಾಲಾಶೀಃ ಸಮಿಧಃ ಸಪ್ತ ತಥಾ ಸಪ್ತೇತಿ ದಾಪಯೇತ್ ।
ಆಘಾರಾವಾಜ್ಯಭಾಗೌ ತು ಹುತ್ವಾ ಪೂರ್ವಕ್ರಮೇಣ ತು ॥ ೨೯ ॥

ಜುಹುಯಾದಾಹುತೀಃ ಸಪ್ತ ಜಾತವೇದಸ ಇತ್ಯೃಚಾ ।
ಸ್ಥಾಲೀಪಾಕಸ್ಯ ಜುಹುಯಾತ್ಪುನರ್ವೈ ಜಾತವೇದಸಾ ॥ ೩೦ ॥

ತರತ್ಸಮಂದೀಸೂಕ್ತೇನ ಚತಸ್ರೋ ಜುಹುಯಾತ್ಪುನಃ ।
ಯಮಾಯೇತಿ ಚ ಸಪ್ತಾನ್ಯಾ ಸ್ವಾಹಾಂತಾ ಜುಹುಯಾತ್ತತಃ ॥ ೩೧ ॥

---

೨೮. ಬಳಿಕ ಪುರುಷಸೂಕ್ತಮಂತ್ರದಿಂದ ಅಗ್ನಿಯಲ್ಲಿ ಪಾಯಸವನ್ನು ಪಾಕಮಾಡಬೇಕು. ಪಾಯಸವು ಪಕ್ವವಾದ ಮೇಲೆ ಅದನ್ನು ಅಗ್ನಿಯಿಂದ ತೆಗೆದು ಅಭಿಘಾರಮಾಡಿ ನೆಲದ ಮೇಲೆ ಇರಿಸಬೇಕು. ಬಳಿಕ ಕ್ಲುಪ್ತವಾದ ಹದಿನೆಂಟು ಅಂಗುಲ ಪ್ರಮಾಣವುಳ್ಳ ಹಾಗೆ ಸಿದ್ಧಮಾಡಿದ ಇಧ್ಮಗಳಿಗೆ ಅಭಿಘಾರಮಾಡಿ ಅದನ್ನು ಅಗ್ನಿಯಲ್ಲಿ ಪ್ರಕ್ಷೇಪಣೆಮಾಡಬೇಕು.

೨೯. ಈ ಇಧ್ಮವು ಏಳು ಬನ್ನಿಯ ಸಮಿತ್ತೋ, ಏಳು ಮುತ್ತುಗದ ಸಮಿತ್ತೋ ಆಗಿರಬಹುದು. ಇದಕ್ಕೆ ಪೂರ್ವಭಾವಿಯಾಗಿ ಹಿಂದೆ ಹೇಳಿದ ಕ್ರಮದಂತೆ ಎರಡು ಆಘಾ ಹೋಮಗಳ ಮೂಲಕ ಆಜ್ಯಭಾಗಾಹುತಿಯನ್ನು ಸಲ್ಲಿಸಿರಬೇಕು.

೩೦. 'ಜಾತವೇದಸೇ' ಎಂಬ ಮಂತ್ರಪೂರ್ವಕವಾಗಿ ಏಳು ಆಹುತಿಗಳನ್ನು ಸಮರ್ಪಿಸಬೇಕು. ಆ ಅಗ್ನಿಯಲ್ಲಿ ಪಾಕಮಾಡಿ ಸಿದ್ಧಮಾಡಿದ ಸ್ಥಾಲೀಪಾಕ ಚರುವಿನ ಆಹುತಿಗಳನ್ನೇ ಮತ್ತೆ ಮತ್ತೆ ಸಮರ್ಪಿಸಬೇಕು.

೩೧. ಬಳಿಕ "ತರತ್ಸಮಂ ದೀದಾವತಿ" ಎಂಬ ನಾಲ್ಕು ಪವಮಾನ ಸೂಕ್ತಗಳಿಂದ ಮತ್ತೆ ಆಹುತಿಗಳನ್ನು ಕೊಡಬೇಕು. ಬಳಿಕ ಸ್ವಾಹಾಕಾರವೇ ಕಡೆಯಲ್ಲಿ ಉಳ್ಳ 'ಯಮಾಯಸೋಮಂ' ಎಂಬ ಮಂತ್ರಪೂರ್ವಕವಾಗಿ ಜೇರೆ ಏಳು ಆಹುತಿಗಳನ್ನು ಕೊಡಬೇಕು.

ಇದಂವಿಷ್ಣುಸ್ತತಃ ಸಪ್ತ ಜುಹುಯಾದಾಹುತೀರ್ನೃಪ ।
ನಕ್ಷತ್ರೇಭ್ಯಸ್ತತಃಸ್ವಾಹಾ ಸಪ್ತವಿಂಶದಥಾಹುತೀಃ ॥ ೩೨ ॥

ಯತ್ಕರ್ಮಣೇತಿ ಜುಹುಯಾತ್ತತಃ ಸ್ವಿಷ್ಟಕೃತಂ ಪುನಃ ।
ಗ್ರಹಹೋಮಸ್ತತಃ ಕಾರ್ಯಸ್ತಿಲೈರಾಜ್ಯಪರಿಪ್ಲುತೈಃ ॥ ೩೩ ॥

ಪ್ರಾಯಶ್ಚಿತ್ತಂ ತತೋ ಹುತ್ವಾ ಹೋಮಕರ್ಮ ಸಮಾಪಯೇತ್ ।
ತತಸ್ತು ತೂರ್ಯನಿರ್ಘೋಷೈಃ ಕಾಹಲಾಶಂಖನಿಸ್ವನೈಃ ॥ ೩೪ ॥

ಯಜಮಾನಸ್ಯ ಕರ್ತವ್ಯೋ ಹ್ಯಭಿಷೇಕೋ ದ್ವಿಜೋತ್ತಮೈಃ ।
ಕಾಶ್ಮರ್ಯವೃಕ್ಷಸಂಭೂತೇ ಭದ್ರೇ ಭದ್ರಾಸನೇ ಸ್ಥಿತಂ ॥ ೩೫ ॥

---

೩೨. ಅಯ್ಯಾ ರಾಜನೇ! 'ಇದಂ ವಿಷ್ಣುಃ' ಎಂಬ ಮಂತ್ರಪೂರ್ವಕವಾಗಿ ಏಳು ಆಹುತಿಗಳನ್ನು ಕೊಡಬೇಕು. ಆ ಬಳಿಕ ಇಪ್ಪತ್ತೇಳು ನಕ್ಷತ್ರಗಳ ನಾಮಗಳ ಕೊನೆಯಲ್ಲಿ ಸ್ವಾಹಾಯುತವಾಗಿರುವಂತೆ ಉಚ್ಚರಿಸಿ ಇಪ್ಪತ್ತೇಳು ಆಹುತಿಗಳನ್ನು ಕೊಡಬೇಕು.

೩೩. "ಯದಸ್ಯ ಕರ್ಮಣಃ" ಎಂಬ ಮಂತ್ರಪೂರ್ವಕವಾಗಿ ಸ್ವಿಷ್ಟಕೃತ್ ಹೋಮದ ಆಹುತಿಗಳನ್ನು ಕೊಡಬೇಕು. ಬಳಿಕ ಘೃತಮಿಶ್ರವಾದ ತಿಲವನ್ನು ಗ್ರಹಗಳ ಪ್ರೀತ್ಯರ್ಥವಾಗಿ ಹೋಮ ಮಾಡಬೇಕು.

೩೪. ಆ ಬಳಿಕ ಸರ್ವಪ್ರಾಯಶ್ಚಿತ್ತಾರ್ಥವಾಗಿ "ಯದ್ದೇವಾದಿ" ಮಂತ್ರಗಳಿಂದ ಆಹುತಿಕೊಟ್ಟು ಹೋಮಕರ್ಮವನ್ನು ಸಾಂಗವಾಗಿ ಪೂರೈಸಬೇಕು.

೩೫-೩೬. ಹೋಮಾದಿಗಳು ಮುಗಿದ ಮೇಲೆ ಮಂಗಳವಾದ್ಯ ಕಹಳೆ ಶಂಖ ಭೇರಿ ಇವು ಮೊಳಗುತ್ತಿರುವಲ್ಲಿ ಆ ದ್ವಿಜೋತ್ತಮರು ಯಜಮಾನನನ್ನು ವೇದಿಯ ಮಧ್ಯವಲ್ಲಿ ಕಾಶ್ಮರ್ಯವೃಕ್ಷದ ಹಲಗೆಯಿಂದ ಮಾಡಿದ ಶುಭಕರವಾದ ಭದ್ರಪೀಠದಲ್ಲಿ ಕುಳ್ಳಿರಿಸಿ ದುರ್ನಿಮಿತ್ತಶಾಂತ್ಯರ್ಥವಾಗಿ ಪೂಜಿಸಿದ್ದ ಆ ಐದು ಕಲಶಗಳ ಜಲ

**ವೇದಿಮಧ್ಯಗತಂ ಕೃತ್ವಾ ದುರ್ನಿಮಿತ್ತಪ್ರಶಾಂತಯೇ ।**
**ಪಂಚಭಿಃ ಕಲಶೈಃ ಪೂರ್ಣೈರ್ಮಂತ್ರೈರೇಭಿರ್ಯಥಾಕ್ರಮಂ ॥ ೩೬ ॥**

**ಸಹಸ್ರಾಕ್ಷೇಣ ಪ್ರಥಮಂ ತತಶ್ಚೈವ ಶತಾಯುಷಾ ।**
**ಸಜೋಷಸಾ ಚ ಇಂದ್ರೇತಿ ವಿಶ್ವಾನೀತ್ಯೃಗ್ಭಿರೇವ ಚ ॥ ೩೭ ॥**

**ಋತಮಸ್ಮೀತಿ ಚ ತತಃ ಸ್ನಾಪಯೇಯುಃ ಸಮಾಹಿತಾಃ ।**
**ತತೋ ದಿಶಾಂ ಬಲಿಂ ದದ್ಯಾದ್ವಿಚಿತ್ರಾನ್ನಸಮಾಯುತಂ ॥ ೩೮ ॥**

**ನಮೋಽಸ್ತು ಸರ್ವಭೂತೇಭ್ಯೋ ಇತಿ ಮಂತ್ರಮುದಾಹರನ್ ।**
**ಸ್ನಾತಸ್ಯ ಬ್ರಾಹ್ಮಣಾಃ ಸರ್ವೇ ಪಠೇಯುಃ ಶಾನ್ತಿಮುತ್ತಮಾಂ ॥೩೯॥**

**ಶಾಂತಿತೋಯೇನ ಧಾರಾಂ ಚ ಪಾತಯಿತ್ವಾ ಸಮಂತತಃ ।**
**ಪುಣ್ಯಾಹವಾಚನಂ ಕೃತ್ವಾ ಶಾಂತಿಕರ್ಮ ಸಮಾಪಯೇತ್ ॥ ೪೦ ॥**

---

ದಿಂದ ಅನುಕ್ರಮವಾಗಿ ಹೇಳುವ ಮಂತ್ರಪೂರ್ವಕವಾಗಿ ಅಭಿಷೇಕಮಾಡಲು ಸಿದ್ಧರಾಗಬೇಕು.

೩೭. "ಸಹಸ್ರಾಕ್ಷಃ" ಎಂಬ ಮಂತ್ರದಿಂದ ಪ್ರಥಮ ಕಲಶೋದಕವನ್ನೂ, ಬಳಿಕ "ಶತಾಯುಷಾ" ಎಂಬ ಮಂತ್ರದಿಂದ ದ್ವಿತೀಯ ಕಲಶೋದಕವನ್ನೂ, "ಸಜೋಷಸಾ" ಇಂದ್ರ "ವಿಶ್ವಾನಿನೋ" "ಋತಮಸ್ತ" ಎಂಬ ಮಂತ್ರಗಳಿಂದ ಮಿಕ್ಕ ಕಲಶ ಜಲಗಳನ್ನೂ ಸಮಾಹಿತಚಿತ್ತರಾಗಿ ಅಭಿಷೇಕಮಾಡಬೇಕು.

೩೮. ಅನಂತರ "ನಮೋಸ್ತು ಸರ್ವಭೂತೇಭ್ಯಃ" ಎಂಬ ಮಂತ್ರ ಪೂರ್ವಕವಾಗಿ ನಾನಾಬಗೆಯ ಅನ್ನಗಳಿಂದ ಯುಕ್ತವಾದ ಬಲಿಗಳನ್ನು ಎಂಟು ದಿಕ್ಕುಗಳಲ್ಲಿ ಸಮರ್ಪಣೆಮಾಡಬೇಕು.

೩೯. ಬಳಿಕ ಸ್ನಾನಮಾಡಿದ ಯಜಮಾನನ ಸುತ್ತ ಬ್ರಾಹ್ಮಣರು ಅಭಿ ಮಂತ್ರಿತವಾದ ಶಾಂತ್ಯುದಕವನ್ನು ಧಾರಾಕಾರವಾಗಿ ಹನಿಸುತ್ತ ಉತ್ತಮವಾದ ಈ ಶಾಂತಿಮಂತ್ರವನ್ನು ಉಚ್ಚರಿಸಬೇಕು.

೪೦. ಬಳಿಕ ಪುನಃ ಪುಣ್ಯಾಹವಾಚನವನ್ನು ಮಾಡಿ ಮಾರ್ಜನಮಾಡಿ ಈ ಶಾಂತಿಕರ್ಮವನ್ನು ಸಾಂಗವಾಗಿ ಮುಗಿಸಬೇಕು.

**ಕ್ಷಿತಿಂ ಹಿರಣ್ಯಂ ವಾಸಾಂಸಿ ಶಯನಾನ್ಯಾಸನಾನಿ ಚ ।**
**ವಿಪ್ರೇಭ್ಯೋ ದಕ್ಷಿಣಾಂ ದದ್ಯಾದ್ಯಥಾಶಕ್ತ್ಯಾ ವಿಮತ್ಸರಃ ॥ ೪೧ ॥**

**ದೀನಾನಾಥವಿಶಿಷ್ಟೇಭ್ಯಃ ಶ್ರೋತ್ರಿಯೇಭ್ಯಶ್ಚ ದಾಪಯೇತ್ ।**
**ಭೋಜನಂ ಶೋಭನಂ ದತ್ವಾ ತತಸ್ಸರ್ವಂ ಪ್ರಸಿದ್ಧ್ಯತಿ ॥ ೪೨ ॥**

**ಆಯುಶ್ಚ ಲಭತೇ ದೀರ್ಘಂ ಶತ್ರೂನ್ವಿಜಯತೇ ಕ್ಷಣಾತ್ ।**
**ದುರ್ಗಾಣಿ ಚಾಸ್ಯ ಸಿದ್ಧ್ಯಂತಿ ಪುತ್ರಾಂಶ್ಚ ಲಭತೇ ಶುಭಾನ್ ॥ ೪೩ ॥**

**ಯಥಾ ಶಸ್ತ್ರಪ್ರಹಾರಾಣಾಂ ಕವಚಂ ವಾರಣಂ ಭವೇತ್ ।**
**ತಥಾ ದೈವೋಪಘಾತಾನಾಂ ಶಾನ್ತಿರ್ಭವತಿ ವಾರಣಂ ॥ ೪೪ ॥**

**ಅಹಿಂಸಕಸ್ಯ ದಾಂತಸ್ಯ ಧರ್ಮಾರ್ಜಿತಧನಸ್ಯ ಚ ।**
**ದಯಾದಾಕ್ಷಿಣ್ಯಯುಕ್ತಸ್ಯ ಸರ್ವೇ ಸಾನುಗ್ರಹಾ ಗ್ರಹಾಃ ॥ ೪೫ ॥**

---

೪೧. ಈ ಶಾಂತಿಕರ್ಮದ ಸಾದ್ಗುಣ್ಯಾರ್ಥವಾಗಿ ಭೂದಾನ, ವಸ್ತ್ರದಾನ, ಹಿರಣ್ಯದಾನ, ಶಯ್ಯಾದಾನ, ಪೀಠದಾನ, ಮುಂತಾದ ದಾನಗಳನ್ನು ತನ್ನ ಶಕ್ತಿಯಿದ್ದಷ್ಟು ಮಟ್ಟಿಗೆ ಶ್ರೋತ್ರಿಯರಾದ ಬ್ರಾಹ್ಮಣರಿಗೆ ಕೊಡಬೇಕು.

೪೨. ಇನ್ನಿತರ ಬ್ರಾಹ್ಮಣರಿಗೂ ದೀನರಿಗೂ ಅನಾಥರಿಗೂ ನಿರ್ಮತ್ಸರತೆಯಿಂದ ಯಥಾಶಕ್ತಿ ದಕ್ಷಿಣಾದ್ರವ್ಯವನ್ನು ಕೊಡಬೇಕು. ಬಳಿಕ ಶೋಭಾಕರವಾದ ಸಂತರ್ಪಣೆಮಾಡಿದರೆ ಇದರಿಂದ ಸಕಲ ಇಷ್ಟವೂ ಸಿದ್ಧಿಸುವುದು.

೪೩. ಈ ಪ್ರಕಾರ ಮಾಡಿದರೆ ದೀರ್ಘಾಯುಸ್ಸುಂಟಾಗುವುದಲ್ಲದೆ ಕ್ಷಣದೊಳಗೆ ಶತ್ರುಗಳನ್ನು ಗೆಲ್ಲುವ ಸಾಮರ್ಥ್ಯ ಲಭಿಸುವುದು. ಪ್ರಭುಗಳಿಗೆ ದುರ್ಗಗಳು ಕೈವಶವಾಗುತ್ತವೆ. ಮತ್ತು ಶುಭಲಕ್ಷಣರಾದ ಪುತ್ರರು ಜನಿಸುವರು.

೪೪. ದೇಹದಲ್ಲಿ ಧರಿಸಿರುವ ಲೋಹಕವಚವು ಶಸ್ತ್ರಗಳ ಪ್ರಹಾರದಿಂದ ಮೈಗೆ ಪೆಟ್ಟು ತಗಲದಂತೆ ಹೇಗೆರಕ್ಷಿಸುವುದೋ ಹಾಗೆ ದುರದೃಷ್ಟವಶದಿಂದ ಪ್ರಾಪ್ತವಾಗುವ ಆಘಾತಗಳನ್ನು ಈ ಶಾಂತಿಕರ್ಮವು ನಿವಾರಣಮಾಡುವುದು.

೪೫. ಪ್ರಾಣಿಮಾತ್ರವನ್ನು ಹಿಂಸೆಮಾಡದೆ ಇರುವವನು, ಬಹಿರಿಂದ್ರಿಯಗಳನ್ನು ನಿಗ್ರಹಿಸಿರುವವನು, ಧರ್ಮಮಾರ್ಗದಿಂದ ಧನವನ್ನು ಸಂಪಾದನೆಮಾಡಿದವನು, ದಯದಾಕ್ಷಿಣ್ಯಯುಕ್ತನಾಗಿ ನಡೆದುಕೊಳ್ಳುವವನು, ಇಂಥವರಿಗೆ ಎಲ್ಲಾ ಗ್ರಹಗಳೂ ಅನುಗ್ರಹತೋರಿಸುತ್ತಾರೆ.

ಅರ್ಥಾನ್ಸಮರ್ಥಯತಿ ವರ್ದ್ಧಯತೇ ಚ ಧರ್ಮಂ ।
ಕಾಮಂ ಪ್ರಸಾಧಯತಿ ತಸ್ಯ ಪಿನಷ್ಟಿ ಪಾಪಂ ।
ಯಃ ಕಾರಯೇತ್ಸಕಲದೋಷಹರೀಂ ಸಮರ್ಥಾಂ ॥
ಶಾಂತಿಂ ಪ್ರಶಾಂತಹೃದಯಃ ಪುರುಷಃ ಸದೈವ ॥ ೪೬ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಮಹಾಶಾಂತಿ ವಿಧಿವರ್ಣನಂ ನಾಮ ತ್ರಿಚತ್ವಾರಿಂಶದುತ್ತರಶತತಮೋಽಧ್ಯಾಯಃ.



---

೪೬. ಮಾನವರ ಸಕಲ ದೋಷಗಳನ್ನೂ ಪರಿಹಾರಮಾಡಲು ಸಮರ್ಥವಾದ ಈ ಶಾಂತಿಹೋಮಕರ್ಮವನ್ನು ಪ್ರಶಾಂತಮನಸ್ಸಿನಿಂದ ಆಚರಿಸುವ ಮಾನವನಿಗೆಸರ್ವದಾ ಅವನ ಇಷ್ಟಾರ್ಥಗಳೆಲ್ಲವೂ ನೆರವೇರುವುವು. ಧರ್ಮವನ್ನು ಅಭಿವೃದ್ಧಿಪಡಿಸುವುದು. ಶತ್ರುಗಳೆಲ್ಲರನ್ನೂ ನಾಶಪಡಿಸುವುದು. ಅಲ್ಲದೆ ಅವನ ಪಾಪವೆಲ್ಲವೂ ಧ್ವಂಸವಾಗುವುದು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಮಹಾಶಾಂತಿ ವಿಧಿ ವರ್ಣನೆಯೆಂಬ ನೂರನಲವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣ

## ಉತ್ತರಪರ್ವಣಿ

## ಚತುಶ್ಚತ್ವಾರಿಂಶದುತ್ತರಶತತಮೋಽಧ್ಯಾಯಃ

---

॥ ಯುಧಿಷ್ಠಿರ ಉವಾಚ ॥

**ಶಾಂತಿಂ ಕಥಯ ದೇವೇಶ ಗಣನಾಥಸ್ಯ ಮೇ ವಿಭೋ ।**
**ಯಾಂ ಕೃತ್ವಾ ಸರ್ವದುರ್ಗಾಣಿ ತರತೇ ಮಾನವೋಽಖಿಲಃ ॥ ೧ ॥**

॥ ಶ್ರೀ ಕೃಷ್ಣ ಉವಾಚ ॥

**ಶಾಂತಿಂ ವಕ್ಷ್ಯಾಮಿ ರಾಜೇಂದ್ರ ಗಣನಾಥಪ್ರಿಯಾಂ ಪರಾಂ ।**
**ಯಸ್ಯಾ ಆಚರಣೇನೈವ ಸರ್ವಾರಿಷ್ಟಕ್ಷಯೋ ಭವೇತ್ ॥ ೨ ॥**

---

## ನೂರನಲವತ್ತನಾಲ್ಕನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಎಲೈ ವಿಭುವಾದ ದೇವೇಶನೇ ! ಮಾನವನು ತನಗೆ ಒದಗುವ ಸಮಸ್ತ ಕಷ್ಟಗಳಿಂದ ಪಾರಾಗಲು ಆಚರಿಸತಕ್ಕದ್ದೂ ಗಣನಾಥಪ್ರಿಯವೂ ಆದ ಶಾಂತಿಕರ್ಮವನ್ನು ನನಗೆ ಹೇಳು ಎಂದನು.

೨. ಶ್ರೀಕೃಷ್ಣನು ಹೇಳುತ್ತಾನೆ—ಅಯ್ಯಾ ರಾಜಶ್ರೇಷ್ಠನೇ ! ಗಣಪತಿ ಪ್ರೀತಿಕರವೂ ಶ್ರೇಷ್ಠವೂ ಆದ ಶಾಂತಿವಿಧಾನವನ್ನು ಹೇಳುತ್ತೇನೆ. ಅದನ್ನು ಆಚರಿಸಿದವರಿಗೆ ಸಮಸ್ತ ಅರಿಷ್ಟಗಳೂ ನಾಶವಾಗುವುವು.

**ವಿನಾಯಕಂ ಕರ್ಮವಿಘ್ನಸಿಧ್ಯರ್ಥಂ ವಿನಿಬೋಧತ ।**
**ಸ್ವಪ್ನೇಽವಗಾಹತೇಽತ್ಯರ್ಥಂ ಜಲಂ ಮುಂಡಾಂಶ್ಚ ಪಶ್ಯತಿ ॥ ೩ ॥**

**ಕಾಷಾಯವಾಸಸಶ್ಚೈವ ಕ್ರವ್ಯಾದಾನಧಿರೋಹತಿ ।**
**ಅಪಮೂರ್ಧೈಃ ಶವೈ ರುದ್ರೈಃ ಸಹೈಕತ್ರ ಚ ತಿಷ್ಠತಿ ॥ ೪ ॥**

**ವ್ರಜನ್ನಪಿ ತಥಾತ್ಮಾನಂ ಮನ್ಯತೇನುಗತಂ ಪರೈಃ ।**
**ವಿಮನಾ ವಿಫಲಾರಂಭಃ ಸಂಸೀದತ್ಯನಿಮಿತ್ತತಃ ॥ ೫ ॥**

---

೩, ಪ್ರಾರಂಭಿಸಿದ ಕರ್ಮಗಳು ನಿರ್ವಿಘ್ನವಾಗಿ ಸಿದ್ಧಿಸುವುದಕ್ಕೆ ವಿನಾಯಕನ ಕೃಪೆಯೇ ಮುಖ್ಯ ಕಾರಣ. ಅವನಿಗೆ ಕೋಪವುಂಟಾದರೆ ಕಾರ್ಯ ಸಿದ್ಧಿಯಾಗುವುದಿಲ್ಲ. ಅವನ ಕೋಪರೂಪವಾದ ಪ್ರತಿಬಂಧಕವಿದೆಯೆಂದು ಭಾವಿಸುವುದಕ್ಕೆ ಬೇಕಾದ ಸೂಚನೆಗಳನ್ನು ಹೇಳುತ್ತೇನೆ ಕೇಳು. ಕಾರ್ಯಸಿದ್ಧಿಗೆ ಪ್ರತಿಬಂಧಕವುಳ್ಳ ಮನುಷ್ಯನು ಅಗಾಧ ಜಲವನ್ನು ಕಾಣುತ್ತಿರುವ ಹಾಗೂ ಅದರಲ್ಲಿ ತಾನು ಮುಳುಗಿದ ಹಾಗೂ ಸ್ವಪ್ನಕಾಣುವನು. ಅಥವಾ ಸ್ವಪ್ನದಲ್ಲಿ ಸಂನ್ಯಾಸಿಯನ್ನೋ ತಲೆಯಿಲ್ಲದ ಮುಂಡವನ್ನೋ ಕಾಣುವನು.

೪. ಆ ಸನ್ಯಾಸಿಯು ಕಾಷಾಯ ವಸ್ತ್ರಧಾರಿಯಾಗಿ ಕಾಣಿಸಿಕೊಳ್ಳುವನು. ಮತ್ತು ತಾನು ಮಾಂಸಾಹಾರಿಯಾದ ಕ್ರೂರಮೃಗಾರೂಢನಾಗಿದ್ದೇನೆಂದು ನೋಡುತ್ತಾನೆ. ಶಿರಸ್ಸಿಲ್ಲದ ಭಯಂಕರವಾದ ಹೆಣಗಳೊಡನೆ ತಾನೂ ಸೇರಿ ಎಲ್ಲಾ ಒಂದೇಕಡೆ ಇದ್ದಹಾಗೆ ಸ್ವಪ್ನ ಕಾಣುವನು.

೫. ಮತ್ತು ಜಾಗ್ರತ್ಕಾಲದಲ್ಲಿ ಇತರರು ಹೋಗುತ್ತಿರುವಾಗ ತನ್ನಲ್ಲಿ ಗಮನವಿಲ್ಲದೆ ಏಕತ್ರಸ್ಥಿತಿ ಇರುತ್ತಿದ್ದರೂ ತಾನೂ ಹೋಗುತ್ತಿದೇನೆ ಎಂಬ ಭ್ರಾಂತಿಯುಳ್ಳವನಾಗುತ್ತಾನೆ. ಈ ಹಿಂದೆ ಹೇಳಿದ ದುಸ್ವಪ್ನಾದಿ ಸೂಚಕೆಗಳಿರುವವನು ಯಾವ ಕಾರ್ಯಾರಂಭಮಾಡಿದರೂ ಅದರ ಫಲವು ಲಭಿಸದೆ ಮನಸ್ಸು ಕುಗ್ಗಿದವನಾಗಿ ನಿಮಿತ್ತವಿಲ್ಲದೆ ವ್ಯಥೆಪಡುತ್ತಾನೆ.

ತೇನೋಪಸೃಷ್ಟೋ ಲಭತೇ ನ ರಾಜ್ಯಂ ರಾಜನಂದನಃ ।
ಕುಮಾರೀ ನ ಚ ಭರ್ತಾರಮಪತ್ಯಂ ಗರ್ಭಿಣೀ ತಥಾ ॥ ೬ ॥

ಆಚಾರ್ಯತ್ವಂ ಶ್ರೋತ್ರಿಯಶ್ಚ ನ ಶಿಷ್ಯೋಽಧ್ಯಾಪನಂ ತಥಾ ।
ವಣಿಗ್ಲಾಭಂ ನ ಚಾಪ್ನೋತಿ ನ ಕೃಷಿಂ ಚ ಕೃಷೀವಲಃ ॥ ೭ ॥

ಸ್ನಪನಂ ತಸ್ಯ ಕರ್ತವ್ಯಂ ಪುಣ್ಯೇಽಹ್ನಿ ವಿಧಿಪೂರ್ವಕಂ ।
ಗೌರಸರ್ಷಪಕಲ್ಕೇನ ಸಾಜ್ಯೇನೋತ್ಸಾದಿತಸ್ಯ ತು ॥ ೮ ॥

ಸುಗಂಧಕುಂಕುಮಾಲಿಪ್ತಶರೀರಶಿರಸಸ್ತಥಾ ।
ಭದ್ರಾಸನೋಪವಿಷ್ಟಸ್ಯ ಸ್ವಸ್ತಿ ವಾಚ್ಯ ದ್ವಿಜಾಞ್ಛುಭಾನ್ ॥ ೯ ॥

೬. ಆ ಗಣೇಶನ ಕೋಪಕ್ಕೆ ಪಾತ್ರನಾದವನು ರಾಜಪುತ್ರನಾದರೂ ರಾಜ್ಯವನ್ನು ಪಡೆಯಲಾರನು. ಗಣೇಶನ ಕೋಪಪಾತ್ರಳಾದ ಕನ್ನಿಕೆಯು ಯೋಗ್ಯನಾದ ಪತಿಯನ್ನು ಹೊಂದುವುದಿಲ್ಲ. ಹಾಗೆ ಕೋಪಕ್ಕೆ ಗುರಿಯಾದ ಗರ್ಭಿಣಿಯು ಜೀವತ್ಪುತ್ರನನ್ನು ಪಡೆಯುವುದಿಲ್ಲ.

೭. ಹಾಗೆಯೇ ಶಾಸ್ತ್ರಾಧ್ಯಯನಮಾಡಿದ ಶ್ರೋತ್ರಿಯಬ್ರಾಹ್ಮಣನು ಆಚಾರ್ಯತ್ವವನ್ನು ಎಂದರೆ ಅಧ್ಯಾಪಕ ಪದವಿಯನ್ನು ಹೊಂದುವುದಿಲ್ಲ. ಹೀಗೆ ಈ ವಿನಾಯಕನ ಕೋಪಕ್ಕೆ ಗುರಿಯಾದ ವಿದ್ಯಾರ್ಥಿಗೆ ಅಧ್ಯಯನ ಫಲವು ಪ್ರಾಪ್ತವಾಗುವುದಿಲ್ಲ. ವ್ಯಾಪಾರಿಗೆ ತನ್ನ ವ್ಯಾಪಾರಕ್ಕನುರೂಪವಾದ ಲಾಭವು ಬರುವುದಿಲ್ಲ. ವ್ಯವಸಾಯಗಾರನಿಗೆ ಕೃಷಿಯು ಫಲಪ್ರದವಾಗುವುದಿಲ್ಲ.

೮. ಈರೀತಿ ಗಣೇಶನ ಅಪ್ರಸನ್ನತೆಯಿಂದ ಕಾರ್ಯಸಿದ್ಧಿಸದೆ ಇರುವಾಗ, ಅವನ ಕೋಪವು ಶಾಂತಿಯಾಗುವುದಕ್ಕೂ, ಅವನ ಪ್ರಸಾದ ಸಂಪಾದನೆಗಾಗಿಯೂ, ಬಿಳಿಯ ಸಾಸುವೆಯ ಪುಡಿಯನ್ನು ತುಪ್ಪದಲ್ಲಿ ಕಲಸಿ ಸುವಾಸನಾಯುಕ್ತವಾದ ಕುಂಕುಮಕೇಸರಿಯನ್ನು ಸೇರಿಸಬೇಕು.

೯. ಒಂದು ಶುಭಕರವಾದ ದಿನ, ವಿಧಿಪೂರ್ವಕವಾಗಿ ಅದನ್ನು ಗಣೇಶನ ಶಿರಸ್ಸಿಗೂ ದೇಹಕ್ಕೂ ಲೇಪನಮಾಡಿ ಸ್ನಪನ(ಅಭಿಷೇಕ) ಮಾಡಿಸಬೇಕು. ಹೀಗೆ ಅಭಿಷೇಕಮಾಡುವಾಗ ಶ್ರೀಗಣೇಶನನ್ನು ಭದ್ರಾಸನದಲ್ಲಿ ಸ್ಥಾಪಿಸಿ, ಆ ಸ್ವಾಮಿಯ ಸಮ್ಮುಖದಲ್ಲಿ ಸದಾಚಾರಸಂಪನ್ನರೂ ಶುಭಲಕ್ಷಣರೂ ಆದ ವಿಪ್ರೋತ್ತಮರಿಂದ ಸ್ವಸ್ತಿವಾಚನಮಂತ್ರವನ್ನು ಹೇಳಿಸಬೇಕು.

**ಅಶ್ವಸ್ಥಾನಾದ್ಗಜಸ್ಥಾನಾದ್ವಲ್ಮೀಕಾತ್ಸಂಗಮಾದ್ಧ್ರದಾತ್ ।**
**ಮೃತ್ತಿಕಾಂ ರೋಚನಾಂ ಗಂಧಾನ್ಗುಗ್ಗುಲಂ ಚಾಪ್ಸು ನಿಕ್ಷಿಪೇತ್ ॥**
**ಯದಾ ಹೃತಾ ಹ್ಯೇಕವರ್ಣೈರ್ಮನುಭಿಃ ಕಲಶೈರ್ಹ್ರದಾತ್ ॥ ೧೦ ॥**

**ಚರ್ಮಣ್ಯಾನಡುಹೇ ರಕ್ತೇ ಸ್ಥಾಪ್ಯ ಭದ್ರಾಸನಂ ತಥಾ ॥ ೧೧ ॥**

**ಸಹಸ್ರಾಕ್ಷಂ ಶತಧಾರಮೃಷಿಭಿಃ ಪಾವನಂ ಕೃತಂ ।**
**ತೇ ನ ತ್ವಾಮಭಿಷಿಂಚಾಮಿ ಪಾವಮಾನ್ಯಃ ಪುನಂತು ಮೇ ॥ ೧೨ ॥**

**ಭಗಂ ತೇ ವರಣೋ ರಾಜಾ ಭಗಂ ಸೂರ್ಯೋ ಬೃಹಸ್ಪತಿಃ ।**
**ಭಗಮಿಂದ್ರಶ್ಚ ವಾಯುಶ್ಚ ಭಗಂ ಸಪ್ತರ್ಷಯೋ ದದುಃ ॥ ೧೩ ॥**

---

೧೦. ಕುದುರೆಯ ಲಾಯ, ಗಜಶಾಲೆ, ಹುತ್ತ, ನದಿಯ ಸಂಗಮಸ್ಥಳ, ಮಡು, ಈ ಪ್ರದೇಶಗಳ ಮೃತ್ತಿಕೆಯನ್ನೂ, ಗೋರೋಚನ, ಗಂಧ, ಗುಗ್ಗುಲ, ಇವುಗಳನ್ನೂ ಅಭಿಷೇಕ ಕಲಶದ ಜಲದಲ್ಲಿ ಹಾಕಬೇಕು.

೧೧. ಅಭಿಷೇಕಾರ್ಥವಾಗಿ ನಾಲ್ಕು ಕಲಶಗಳೂ ಒಂದೇಬಣ್ಣ, ಒಂದೇ ಆಕಾರವುಳ್ಳದ್ದಾಗಿರಬೇಕು. ಅವುಗಳಲ್ಲಿ ನದಿಯ ಮಡುವಿನ ಜಲಗಳನ್ನು ಮಂತ್ರ ವತ್ತಾಗಿ ತುಂಬಿ ತಂದಿರಬೇಕು. ಕೆಂಪಾದ ಎತ್ತಿನ ಚರ್ಮವನ್ನು ಹಾಸಿ ಅದರ ಮೇಲೆ ಭದ್ರಾಸನವನ್ನು ಇರಿಸಿ, ಶ್ರೀಗಣೇಶನನ್ನು ಭದ್ರಾಸನದಲ್ಲಿ ಸ್ಥಾಪಿಸಬೇಕು.

೧೨. "ಸಹಸ್ರಾಕ್ಷಂ ಶತಧಾರಂ ಋಷಿಭಿಃ ಪಾವನಂ ಕೃತಂ । ತೇನತ್ವಾ ಮಭಿಷಿಂಚಾಮಿ ಪಾವಮಾನ್ಯಃ ಪುನಂತುಮೇ ॥" ಎಂಬ ಮಂತ್ರವನ್ನು ಹೇಳಿ ಕಲಶಜಲವನ್ನು ಅಭಿಷೇಕಮಾಡಬೇಕು. ಋಷಿವಚನವಾದ ವೇದಮಂತ್ರ ದಿಂದ ಅಭಿಮಂತ್ರಿಸಿ ಪವಿತ್ರವಾದ ಸಹಸ್ರ ರಂಧ್ರದಿಂದಲಬ ಅನೇಕ ಧಾರೆಯಾಗಿ ಬೀಳುವ ಈ ಜಲದಿಂದ ನಿನಗೆ ಅಭಿಷೇಕಮಾಡುವೆನು. ಈ ಪವಿತ್ರ ಜಲಗಳು ನನ್ನನ್ನು ಪವಿತ್ರಮಾಡಲಿ. (ಇದು ಈ ಮಂತ್ರದ ಅರ್ಥ.)

೧೩. ಭಗಂತೇ ರಾಜಾ ವರುಣೋ ............ ಎಂಬ ಮಂತ್ರದಿಂದಲೂ ಅಭಿಷೇಕಮಾಡಬೇಕು. ವರುಣ ರಾಜನು, ಸೂರ್ಯ, ಬೃಹಸ್ಪತಿ, ಇಂದ್ರ, ವಾಯು, ಸಪ್ತರ್ಷಿಗಳು ಇವರೆಲ್ಲರೂ ನಿನಗೆ ಷಡ್ಗುಣೈಶ್ವರ್ಯಗಳನ್ನು ಕೊಡುವರಾಗಲಿ. (ಇದು ಮಂತ್ರಾರ್ಥ).

ಯತ್ತೇ ಕೇಶೇಷು ದೌರ್ಭಾಗ್ಯಂ ಸೀಮಂತೇ ಯಚ್ಚ ಮೂರ್ಧನಿ ।
ಲಲಾಟೇ ಕರ್ಣಯೋರಕ್ಷ್ಣೋರಾಪಸ್ತದ್ ಘ್ನಂತು ತೇ ಸದಾ ॥ ೧೪ ॥

ಸ್ನಾತಸ್ಯ ಸಾರ್ಷಪಂ ತೈಲಂ ಸ್ರುವೇಣೌದುಂಬರೇಣ ಚ ।
ಜುಹುಯಾನ್ಮೂರ್ಧನಿ ಕುಶಾನ್ಸವ್ಯೇನ ಪರಿಗೃಹ್ಯ ಚ ॥ ೧೫ ॥

ಮಿತಶ್ಚ ಸಂಮಿತಶ್ಚೈವ ತಥಾ ಸಾಲಕಟಂಕಟೌ ।
ಕೂಷ್ಮಾಂಡೋ ರಾಜಪುತ್ರಶ್ಚ ಅಂತೇ ಸ್ವಾಹಾಸಮನ್ವಿತೈಃ ॥ ೧೬ ॥

ನಾಮಭಿರ್ಬಲಿಮಂತ್ರೈಶ್ಚ ನಮಸ್ಕಾರಸಮನ್ವಿತೈಃ ।
ದದ್ಯಾಚ್ಚತುಷ್ಪಥೇ ಶೂರ್ಪೇ ಕುಶಾನಾಸ್ತೀರ್ಯ ಸರ್ವಶಃ ॥ ೧೭ ॥

---

೧೪. ನಿನ್ನ ಕೇಶ, ಬೈತಲೆ, ಶಿರಸ್ಸು, ಲಲಾಟ, ಕಿವಿಗಳು, ನೇತ್ರಗಳು, ಇವುಗಳಲ್ಲಿರುವ ದುರ್ಲಕ್ಷಣಗಳನ್ನು ಈ ಜಲವು ಸರ್ವದಾ ಪರಿಹಾರಮಾಡಲಿ. ಎಂಬ ಅರ್ಥವುಳ್ಳ ಈ ಮಂತ್ರದಿಂದಲೂ ಅಭಿಷೇಕಮಾಡಬೇಕು.

೧೫. ಈ ಪ್ರಕಾರ ಸ್ವಾಮಿಗೆ ಅಭಿಷೇಕಮಾಡಿದ ಮೇಲೆ ಅಗ್ನಿಯನ್ನು ಹುತಮಾಡಿ ಅತ್ತಿಯ ಮರದಿಂದ ಮಾಡಿದ ಸ್ರುವದಲ್ಲಿ ಸಾಸುವೆಯ ಎಣ್ಣೆಯನ್ನು ತುಂಬಿ ಆ ಸ್ರುವವನ್ನು ಬಲಗೈಯಿಂದ ಹಿಡಿದುಕೊಂಡು ಸ್ರುವದ ಮೇಲೆ ದರ್ಭೆಗಳನ್ನು ಇಟ್ಟು ಹೋಮಮಾಡಬೇಕು. (ಆಹುತಿ ಕೊಡಬೇಕು.)

೧೬. ಮಿತ, ಸಮ್ಮಿತ, ಸಾಲಕ, ಟಂಕಟ, ಕೂಷ್ಮಾಂಡ, ರಾಜಪುತ್ರ, ಈ ನಾಮಗಳ ಕೊನೆಯಲ್ಲಿ " ಸ್ವಾಹಾ " ಎಂಬ ಪದವನ್ನು ಸೇರಿಸಿ ಹೋಮ ಮಾಡಬೇಕು ಎಂದರೆ " ಮಿತಾಯಸ್ವಾಹಾ " ಎಂದು ಹೇಳಿ ಹೋಮ ಮಾಡಬೇಕು.

೧೭. ಈ ಹಿಂದೆ ಹೇಳಿದ ನಾಮಪದಗಳ ಮೇಲೆ " ನಮಃ " ಎಂಬ ಪದವನ್ನು ಜೋಡಿಸಿ ನಾಲ್ಕುದಾರಿ ಕೂಡಿದ ಸ್ಥಳ (ಚತುಷ್ಪಥ) ದಲ್ಲಿ ಒಂದು ಮೊರದಲ್ಲಿ ದರ್ಭೆಗಳನ್ನು ಹಾಸಿ ಈ ಬಲಿಮಂತ್ರವನ್ನು ಹೇಳಿ ಸುತ್ತಲೂ ಬಲಿಪ್ರದಾನ ಮಾಡಬೇಕು. ಎಂದರೆ " ಮಿತಾಯನಮಃ " ಎಂದು ಉಚ್ಚರಿಸಿ ಬಲಿಪ್ರದಾನ ಮಾಡಬೇಕು.

**ಕೃತಾಕೃತಾಂಸ್ತಂಡುಲಾಂಶ್ಚ ಪಲಲೌದನಮೇವ ಚ ।**
**ಮತ್ಸ್ಯಾನ್ಪಕ್ವಾಂಸ್ತಥೈವಾಮಾನ್ಮಾಂಸಮೇತಾವದೇವತು ॥ ೧೮ ॥**

**ಪುಷ್ಪಂ ಚಿತ್ರಂ ಸುಗಂಧಂ ಚ ಸುರಾಂ ಚ ತ್ರಿವಿಧಾಮಪಿ ।**
**ಮೂಲಕಂ ಪೂರಿಕಾಪೂಪಂ ತಥೈವೋಂಡೇರಕಸ್ರಜಂ ॥ ೧೯ ॥**

**ದೂರ್ವಾಂ ಸರ್ಷಪಪುಷ್ಪಾಣಾಂ ದತ್ವಾರ್ಘ್ಯಂ ಪೂರ್ಣಮಂಜಲಿಂ ।**
**ವಿನಾಯಕಸ್ಯ ಜನನೀಮುಪತಿಷ್ಠೇತ್ತತೋಽಂಬಿಕಾಂ ॥ ೨೦ ॥**

**ರೂಪಂ ದೇಹಿ ಯಶೋ ದೇಹಿ ಭಗಂ ಭವತಿ ದೇಹಿ ಮೇ ।**
**ಪುತ್ರಾರ್ ದೇಹಿ ಧನಂ ದೇಹಿ ಸರ್ವಕಾಮಾಂಶ್ಚ ದೇಹಿ ಮೇ ॥ ೨೧ ॥**

---

೧೮. ಬಲಿಸಮರ್ಪಣೆಗೆ ಕೃತ್ರಿಮಾಕೃತ್ರಿಮ ತಂಡುಲ, ಮಾಂಸ, ಅನ್ನ, ಅಪಕ್ವವಾದ ಮೀನು, ಹುರಿದ ಮೀನು, ಮಾಂಸದ ವಾಸನೆ ಬಣ್ಣವುಳ್ಳ ಹೂವು ಗಳು, ಇವನ್ನು ಉಪಯೋಗಿಸಬೇಕು.

೧೯. ಮತ್ತು ಸುಂಗಧವುಳ್ಳ ಧೂಪ, ಪೇಷ್ಟಿಕಾದಿ ಮೂರು ಬಗೆಯ ಮದ್ಯಗಳು ಮೂಲಂಗಿ, ಮುಂತಾದ ಗೆಡ್ಡೆ, ಪೂರಿ, ದೋಸೆ, ಒಡೆಯ ಸರ, ಇವನ್ನೆಲ್ಲಾ ಬಲಿಸಮರ್ಪಣೆಗೆ ಉಪಯೋಗಿಸಬೇಕು.

೨೦. ಅನಂತರ ಗರಿಕೆ, ಸಾಸುವೆ, ಹೂ ಇವುಗಳನ್ನು ಸೇರಿಸಿ ಅಂಜಲಿ ಯಿಂದ ಅರ್ಘ್ಯ ಕೊಟ್ಟು ಬಳಿಕ ವಿನಾಯಕನ ಜನನಿಯಾದ ಪಾರ್ವತಿಯನ್ನೂ ಪೂಜಿಸಬೇಕು.

೨೧. ಹಾಗೆ ಪೂಜಿಸಿ " ರೂಪಂದೇಹಿ............ಈ ಮಂತ್ರವನ್ನು ಹೇಳಿ ಪ್ರಾರ್ಥಿಸಬೇಕು. ಎಲೌ ದೇವಿಯೇ ! ನೀನು ನನಗೆ ಸೌಂದರ್ಯ, ಜಯ, ಐಶ್ವರ್ಯ, ಪುತ್ರರು, ಮಿತ್ರಾದಿಗಳು, ಸರ್ವಾಭೀಷ್ಟಸಿದ್ಧಿ ಇವನ್ನು ದಯಪಾಲಿಸು. (ಇದು ಮಂತ್ರದ ಅರ್ಥ.)

ತತಃ ಶುಕ್ಲಾಂಬರಧರಃ ಶುಕ್ಲಮಾಲ್ಯಾನುಲೇಪನಃ ।
ಭೋಜಯೇದ್ಬ್ರಾಹ್ಮಣಾನ್ದದ್ಯಾದ್ವಸ್ತ್ರಯುಗ್ಮಂ ಗುರೋರಪಿ ॥ ೨೨ ॥

ಏವಂ ವಿನಾಯಕಂ ಪೂಜ್ಯ ಗ್ರಹಾಂಶ್ಚೈವ ವಿಧಾನತಃ ।
ಕರ್ಮಣಾಂ ಫಲಮಾಪ್ನೋತಿ ಶ್ರಿಯಮಾಪ್ನೋತಿ ಚೋತ್ತಮಾಂ ॥
ಆದಿತ್ಯಸ್ಯ ಸದಾ ಪೂಜಾಂ ತಿಲಕಂ ಸ್ವಾಮಿನಸ್ತಥಾ ॥ ೨೩ ॥

ಮಹಾಗಣಗತೇಶ್ಚೈವ ಕುರ್ವನ್ಸಿದ್ಧಿಮವಾಪ್ನುಯಾತ್ ॥ ೨೪ ॥

ಶ್ವೇತಾರ್ಕಸ್ಯ ತು ಯೋ ಮೂಲೇ ಮಹಾಗಣಪತಿಃ ಕೃತಃ ।
ಸರ್ವಲಕ್ಷಣಸಂಪೂರ್ಣಃ ಸೋಽಪಿ ಸಿದ್ಧಿಕರಃ ಸ್ಮೃತಃ ॥ ೨೫ ॥

ಸಂಜಪ್ಯತೇ ಶುಚೌ ದೇಶೇ ವಿಘ್ನಂ ನಾತ್ರ ಹಿ ದೇಹಿನಃ ।
ಪರಮಂ ಪೂಜಯೇನ್ನಿತ್ಯಂ ಗಂಧಮಾಲ್ಯಸ್ರಗಾದಿಭಿಃ ॥ ೨೬ ॥

---

೨೨. ಅನಂತರ ಬಿಳಿಯ ಬಟ್ಟೆಯನ್ನುಟ್ಟು ಬಿಳಿಯ ಪುಷ್ಪಮಾಲೆಯನ್ನು ಧರಿಸಿದವನಾಗಿ, ಬ್ರಾಹ್ಮಣರಿಗೆ ಭೋಜನ ಮಾಡಿಸಿ, ಗುರುವಿಗೆ ಒಂದುಜತೆ ವಸ್ತ್ರವನ್ನು ಕೊಡಬೇಕು.

೨೩. ಈರೀತಿ ಶಾಸ್ತ್ರಪ್ರಕಾರವಾಗಿ ವಿನಾಯಕನನ್ನೂ ನವಗ್ರಹಗಳನ್ನೂ ಪೂಜೆಮಾಡಿದವನು ಆ ಕರ್ಮಕ್ಕೆ ಯಥೋಕ್ತವಾಗಿ ಸಂಪೂರ್ಣ ಫಲವನ್ನು ಪಡೆಯುವನಲ್ಲದೆ ನಿರತಿಶಯವಾದ ಸಂಪತ್ತನ್ನೂ ಹೊಂದುವನು.

೨೪. ಸದಾ ಸೂರ್ಯಾರಾಧನೆಯನ್ನು ಮಾಡುವವನು, ಕುಮಾರಸ್ವಾಮಿಗೆ ಸ್ವರ್ಣನಿರ್ಮಿತವಾದ ತಿಲಕವನ್ನು ಸಮರ್ಪಿಸುವನು, ಮಹಾಗಣಪತಿಯ ಪೂಜೆಯನ್ನು ಯಥೋಕ್ತವಾಗಿ ಮಾಡುವವನು, ಇವರು ಸರ್ವಕಾರ್ಯಗಳಲ್ಲೂ ಸಿದ್ಧಿಯನ್ನು ಪಡೆಯುತ್ತಾರೆ.

೨೫. ಬಿಳಿಯ ಎಕ್ಕದ ಗಿಡದ ಬೇರಿನಲ್ಲಿ ಸರ್ವಲಕ್ಷಣಸಮಗ್ರವಾಗಿ ಉತ್ಪನ್ನವಾದ ಅರ್ಕಗಣಪತಿಯನ್ನು ಪೂಜಿಸಿದವನಿಗೆ ಸರ್ವಕಾರ್ಯಗಳೂ ಸಿದ್ಧಿಸುವುವೆಂದು ಹೇಳಿದೆ.

೨೬. ಪರಿಶುದ್ಧವಾದ ಪ್ರದೇಶದಲ್ಲಿ ಕುಳಿತು ಈ ಗಣಪತಿ ಮಂತ್ರವನ್ನು ಜಪಮಾಡಿದ ವ್ಯಕ್ತಿಗೆ ವಿಘ್ನಗಳ ಸುಳಿವೇ ಇರುವುದಿಲ್ಲ.

**ಕ್ಷೀಣಭಾಗ್ಯೋಽಪಿ ಪುರುಷಃ ಪೂಜಿತಶ್ಚ ನರೇಶ್ವರಃ ।**
**ಸರ್ವಸಿದ್ಧಿಮವಾಪ್ನೋತಿ ಜಯೀ ಭವತಿ ಸರ್ವದಾ　　॥ ೨೭ ॥**

**ಇತಿ ಶ್ರೀಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣಯುಧಿಷ್ಠಿರ ಸಂವಾದೇ ಗಣನಾಥಶಾಂತಿವಿಧಿವರ್ಣನಂ ನಾಮ ಚತುಶ್ಚತ್ವಾರಿಂಶದುತ್ತರಶತತಮೋಽಧ್ಯಾಯಃ.**



---

೨೭. ಆ ಮಹಾಮಹಿಮನನ್ನು ನಿತ್ಯವೂ ಗಂಧಪುಷ್ಪಾದಿಗಳಿಂದ ಪೂಜಿಸಿದಾತನು ದರಿದ್ರನಾಗಿದ್ದರೂ ರಾಜರಿಂದ ಪುಜಿಸಲ್ಪಡಲು ಅರ್ಹನೆನಿಸುವನು. ಅಂಥವನು ಸಮಸ್ತ ಸಿದ್ಧಿಗಳನ್ನೂ ಪಡೆದು ಸರ್ವದಾ ಜಯಶಾಲಿಯೆನಿಸುತ್ತಾನೆ.

ಇಲ್ಲಿಗೆ ಶ್ರೀಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಗಣನಾಥ ಶಾಂತಿವರ್ಣನೆಯೆಂಬ ನೂರನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣ
## ಉತ್ತರಪರ್ವಣಿ
## ಪಂಚಚತ್ವಾರಿಂಶದುತ್ತರಶತತಮೋಽಧ್ಯಾಯಃ

॥ ಶ್ರೀ ಕೃಷ್ಣ ಉವಾಚ ॥

ಅಗ್ನಿಹೋತ್ರೇ ಸುಖಾಸೀನಂ ಗರ್ಗಃ ಪೃಚ್ಛತಿ ಕೌಶಿಕಂ ।
ಬಂಧನೇ ಸನ್ನಿರೋಧೇಂಗವ್ಯಾಧೀನಾಂ ಸಂಪ್ರಪೀಡನೇ ॥ ೧ ॥

ಕಥಂ ಮೋಕ್ಷೋ ಭವೇತ್ತಸ್ಯ ಸಾಧ್ಯಾಸಾಧ್ಯಂ ಬ್ರವೀಹಿ ಮೇ ।
ಗರ್ಗೇಣ ಕೌಶಿಕಃ ಪೃಷ್ಟ ಇದಂ ವಚನಮಬ್ರವೀತ್ ॥ ೨ ॥

---

## ನೂರನಲವತ್ತೈದನೆಯ ಅಧ್ಯಾಯ

೧. ಶ್ರೀಕೃಷ್ಣನು ಹೇಳುತ್ತಾನೆ—ಒಂದಾನೊಂದು ದಿನ ಯಜ್ಞಶಾಲೆಯಲ್ಲಿ ಸುಖವಾಗಿ ಕುಳಿತಿರುವ ಕೌಶಿಕನನ್ನು ಕುರಿತು ಗರ್ಗನೆಂಬ ಋಷಿಯು ಇಂತೆಂದನು. " ಸ್ವಾಮಿ ! ಮಾನವನಿಗೆ ಬಂಧನ ಪ್ರಾಪ್ತಿಯಾದಾಗಲೂ ಅವಯುವಗಳು ಹಿಡಿದುಕೊಂಡಿರುವಾಗಲೂ, ವ್ಯಾಧಿಯಿಂದ ಪೀಡಿತನಾಗಿರುವಾಗಲೂ ಅವನ ಕರ್ತವ್ಯವೇನು ?

೨. ಅವನು ಆ ತೊಂದರೆಗಳಿಂದ ಹೇಗೆ ಬಿಡುಗಡೆ ಹೊಂದುವನು ? ಅವುಗಳಲ್ಲಿ ವಿಮೋಚನೆಗೆ ಸಾಧ್ಯವಾಗುವುದಾವುದು ? ಯಾವುದು ಅಸಾಧ್ಯ ? ಎಂಬುದನ್ನು ನನಗೆ ತಿಳಿಸು '' ಎಂದು ಗರ್ಗನು ಹೀಗೆ ಪ್ರಶ್ನಿಸಲಾಗಿ ಕೌಶಿಕ ಮುನಿಯು ಹೇಳುತ್ತಾನೆ.

**ಆಧಾನೇ ಜನ್ಮನಕ್ಷತ್ರೇ ನೈಧನಪ್ರತ್ಯಯೋಷು ಚ ।**
**ವ್ಯಾಧಿರುತ್ಪದ್ಯತೇ ಯಸ್ಯ ಕ್ಲೇಶಾಯ ಮರಣಾಯ ಚ　　　|| ೩ ||**

**ಕೃತ್ತಿಕಾಸು ಯದಾ ಕಶ್ಚಿದ್ವ್ಯಾಧಿಂ ಸಂಪ್ರತಿಪದ್ಯತೇ ।**
**ನವರಾತ್ರಂ ಭವೇತ್ಪೀಡಾ ತ್ರಿರಾತ್ರಂ ರೋಹಿಣೀಷು ಚ　　　|| ೪ ||**

**ಮೃಗಶೀರ್ಷೇ ಪಂಚರಾತ್ರಂ ಆರ್ದ್ರಾ ಪ್ರಾಣವಿಯೋಜಿನೀ ।**
**ಪುನರ್ವಸೌ ಚ ಪುಷ್ಯೇ ಚ ಸಪ್ತರಾತ್ರಂ ವಿಧೀಯತೇ　　　|| ೫ ||**

**ನವರಾತ್ರಂ ತಥಾಶ್ಲೇಷಾ ಶ್ಮಶಾನಾನ್ತಂ ಮಘಾಸು ಚ ।**
**ದ್ವೌ ಮಾಸೌ ಫಾಲ್ಗುನೀ ಚೈವ ಉತ್ತರಾಸು ತ್ರಿಪಕ್ಷಕಂ　　　|| ೬ ||**

---

೩. ಮಾನವನ ಜನ್ಮತಾರೆ, ನೈಧನತಾರೆ, ಪ್ರತ್ಯಕ್‌ತಾರೆ ಈ ದಿನಗಳಲ್ಲಿ ಈ ಕ್ಲೇಶಬಂಧನಾದಿಗಳು ಪ್ರಾರಂಭವಾದರೆ ಆ ವ್ಯಕ್ತಿಗೆ ಬಲವಾದ ವ್ಯಾಧಿ ಸಂಭವಿಸುವುದು. ಅದು ಬಹು ಕ್ಲೇಶಪಡಿಸುವುದು. ಕೆಲವುವೇಳೆ ಮರಣದಲ್ಲಿ ಪರ್ಯವಸಾನವಾಗಬಹುದು.

೪. ಅಶ್ವಿನಿಯಲ್ಲಿ ಪ್ರಾರಂಭವಾದರೆ ಕ್ಲೇಶ. ಭರಣಿಯಲ್ಲಾದರೆ ಮರಣ ಎಂದು ಒಂದು ಮತ. ಕೃತ್ತಿಕಾ ನಕ್ಷತ್ರದಲ್ಲಿ ಇದು ಪ್ರಾರಂಭವಾದರೆ ವ್ಯಾಧಿ ಪೀಡಿತನಾಗುತ್ತಾನೆ. ಆ ವ್ಯಾಧಿಯು ಒಂಬತ್ತುದಿನಗಳು ಉಲ್ಬಣವಾಗಿರುವುದು. ರೋಹಿಣೀ ನಕ್ಷತ್ರದಲ್ಲಾದರೆ ಮೂರುರಾತ್ರಿ ಕಳೆಯುವವರೆಗೆ ಬಹುವಾಗಿ ಪೀಡಿಸುವುದು.

೫. ಮೃಗಶಿರಾ ನಕ್ಷತ್ರದಲ್ಲಾದರೆ ಐದುರಾತ್ರಿಗಳವರೆಗೆ ಪೀಡಾಕರ, ಆರ್ದ್ರಾ ನಕ್ಷತ್ರದಲ್ಲಿ ಆರಂಭವಾದರೆ ಪ್ರಾಣವನ್ನೇ ತೆಗೆಯುವುದು. ಪುನರ್ವಸು ನಕ್ಷತ್ರದಲ್ಲೋ ಪುಷ್ಯ ನಕ್ಷತ್ರದಲ್ಲೋ ಆದರೆ ಏಳುರಾತ್ರಿ ಕಳೆಯುವವರೆಗೆ ಪೀಡಾಕರವೆಂದು ವಿಧಾಯಕವಿದೆ.

೬. ಆಶ್ಲೇಷಾ ನಕ್ಷತ್ರವಾದರೆ ಒಂಬತ್ತುದಿನಗಳು ಪೀಡೆ. ಮಘಾ ನಕ್ಷತ್ರದಲ್ಲಿ ಆದರೆ ಜೀವಾವಧಿ ಪೀಡೆ. ಪುಬ್ಬಾ ನಕ್ಷತ್ರವಾದರೆ ಎರಡು ತಿಂಗಳು ಕ್ರೂರ. ಉತ್ತರಾ ನಕ್ಷತ್ರವಾದರೆ ಮೂರುಪಕ್ಷಗಳು ಎಂದರೆ ಒಂದೂವರೆತಿಂಗಳು ಕಾಡಿಸುವುದು.

ಹಸ್ತೇ ಚ ತನು ದೃಶ್ಯೇತ ಚಿತ್ರಾಯಾಂ ತ್ವರ್ಧಮಾಸಕಂ ॥ ೭ ॥

ಮಾಸದ್ವಯಂ ತಥಾ ಸ್ವಾತೌ ವಿಶಾಖಾ ವಿಂಶತಿರ್ದಿನಾಃ ।
ಮೈತ್ರೇ ಚೈವ ದಶಾಹಂ ತು ಜ್ಯೇಷ್ಠಾ ಚೈವಾರ್ಧಮಾಸಿಕಾ ॥ ೮ ॥

ಮೂಲೇನ ಜಾಯತೇ ಮೋಕ್ಷಶ್ಚಾಷಾಢಾಸು ತ್ರಿಪಂಚಕಂ ।
ಉತ್ತರಾದಿನವಿಂಶತ್ಯಾ ದ್ವೌ ಮಾಸೌ ಶ್ರವಣೇನ ತು ॥ ೯ ॥

ಧನಿಷ್ಠಾಯಾಮರ್ಧಮಾಸಂ ವಾರುಣೇ ತು ದಶಾಹಕೈಃ ।
ನವ ಭಾದ್ರಪದಾಖ್ಯಾಸು ಉತ್ತರಾಸು ತ್ರಿಪಂಚಕಂ ॥ ೧೦ ॥

ರೇವತೀ ದಶರಾತ್ರಂ ತು ಅಹೋರಾತ್ರಂ ತಥಾಶ್ವಿನೀ ।
ಪ್ರಾಣೈರ್ವಿಯೋಜಯೇನ್ನಿತ್ಯಂ ಗರ್ಗ ನಾಸ್ತ್ಯತ್ರ ಸಂಶಯಃ ॥ ೧೧ ॥

---

೭. ಹಸ್ತ ನಕ್ಷತ್ರವಾದರೆ ಬಹುಸೂಕ್ಷ್ಮವಾಗಿ ಪೀಡಿಸುವುದು. ಚಿತ್ರಾ ನಕ್ಷತ್ರವಾದರೆ ಅರ್ಧತಿಂಗಳು ಪೀಡೆ ಎನ್ನುವರು.

೮. ಸ್ವಾತಿ ನಕ್ಷತ್ರದಲ್ಲಿ ಆರಂಭವಾದರೆ ಎರಡು ತಿಂಗಳು ತೊಂದರೆ. ವಿಶಾಖಾ ನಕ್ಷತ್ರವಾದರೆ ಇಪ್ಪತ್ತು ದಿನಗಳು ಕಠಿಣ. ಮೈತ್ರಸಂಜ್ಞಕನಾದ ಅನೂರಾಧ ನಕ್ಷತ್ರವಾದರೆ ಹತ್ತುದಿನಗಳು ಕ್ರೂರ. ಜ್ಯೇಷ್ಠ ನಕ್ಷತ್ರವಾದರೆ ಅರ್ಧ ತಿಂಗಳು ಕಾಲಪೀಡೆ.

೯. ಮೂಲಾ ನಕ್ಷತ್ರವಾದರೆ ಬೇಗನೇ ಶರೀರತ್ಯಾಗ. ಪೂರ್ವಾಷಾಢ ನಕ್ಷತ್ರವಾದರೆ ಹದಿನೈದು ದಿನಗಳು ಕಠಿಣ. ಉತ್ತರಾಷಾಢವಾದರೆ ಇಪ್ಪತ್ತು ದಿನಗಳು ಕಳೆಯಬೇಕು. ಶ್ರವಣ ನಕ್ಷತ್ರವಾದರೆ ಎರಡುತಿಂಗಳು ಕಾಡಿಸುವುದು.

೧೦. ಧನಿಷ್ಠಾ ನಕ್ಷತ್ರವಾದರೆ ಅರ್ಧತಿಂಗಳು ಕಠಿಣ. ವಾರುಣಾಂಕಿತ ವಾದ ಶತತಾರಾನಕ್ಷತ್ರವಾದರೆ ಹತ್ತುದಿನಗಳು ಕ್ರೂರ. ಪೂರ್ವಾಭಾದ್ರಾ ನಕ್ಷತ್ರ ವಾದರೆ ಒಂಬತ್ತುದಿನ ಕಠಿಣ. ಉತ್ತರಾಭಾದ್ರಾನಕ್ಷತ್ರವಾದರೆ ಹದಿನೈದುದಿನ ಕ್ರೂರ.

೧೧. ರೇವತೀ ನಕ್ಷತ್ರವಾದರೆ ಹತ್ತುದಿನಗಳು ಕ್ರೂರ. ಅಶ್ವಿನೀ ನಕ್ಷತ್ರ ವಾದರೆ ಒಂದು ಹಗಲು ಒಂದು ರಾತ್ರಿ ಈ ಅವಕಾಶದಲ್ಲಿ ವಿಯೋಗ ಸಂಭವಿಸು ವುದು. ಅಯ್ಯಾ ಗರ್ಗನೇ! ಇದರಲ್ಲಿ ಸಂಶಯವಿಲ್ಲ ಎಂದನು.

**ಕೌಶಿಕೇನ ಸಮಾದಿಷ್ಟೋ ನಕ್ಷತ್ರವ್ಯಾಧಿ ಸಂಭವಃ |**
**ದೈವಜ್ಞೇನಾಪಿ ಜ್ಞಾತವ್ಯಂ ನಕ್ಷತ್ರಮಥ ಜನ್ಮನಾ || ೧೨ ||**

**ಕ್ಷೀರವೃಕ್ಷಸ್ಯ ಸಮಿಧೋ ಜುಹುಯಾದಶ್ವದೈವತೇ |**
**ತಿಲಾನ್ಮಧುಪ್ಲುತಾನ್ಯಾಮ್ಯೇ ಯವಮೇವಾಗ್ನಿದೈವತೇ || ೧೩ ||**

**ಪ್ರಾಜಾಪತ್ಯೇ ತು ಜುಹುಯಾದ್ಭೋಗ್ಯಬೀಜಕರಂ ಬಕಂ |**
**ಸೌಮ್ಯೇ ಪ್ರಿಯಂಗವೋ ರೌದ್ರೇ ಸರ್ಪಿರ್ಮಾಂಸಸಮನ್ವಿತಂ || ೧೪ ||**

**ಆದಿತ್ಯೇ ಚ ಪ್ರಯತ್ನೇನ ಘೃತಾಕ್ತಾಃ ಸಿತತಂಡುಲಾಃ |**
**ಪಯಸಾ ಸರ್ಪಿಷಾ ಸಾಕಂ ಬೃಹಸ್ಪತ್ಯಧಿದೈವತೇ || ೧೫ ||**

---

೧೨. ಯಾವ ನಕ್ಷತ್ರದಲ್ಲಿ ವ್ಯಾಧಿ ಸಂಭವಿಸಿದರೆ ಏನಾಗುವುದೆಂಬುದನ್ನು ಈ ಪ್ರಕಾರ ಕೌಶಿಕರಿಂದ ಗರ್ಗನು ತಿಳಿದನು. ಇದರ ವಿಚಾರವನ್ನು ಇನ್ನೂ ವಿವರವಾಗಿ ದೈವಜ್ಞರಿಂದ ತಿಳಿಯಬೇಕು.

೧೩. ಅಶ್ವದೇವತಾಕವಾದ ಅಶ್ವಿನೀ ನಕ್ಷತ್ರದ ಶಾಂತಿಗಾಗಿ ಕ್ಷೀರವೃಕ್ಷದ ಸಮಿತ್ತುಗಳನ್ನು ಹೋಮಮಾಡಬೇಕು. ಯಮದೇವತಾಕವಾದ ಭರಣೀ ನಕ್ಷತ್ರ ಶಾಂತಿಗಾಗಿ ಜೇನುತುಪ್ಪ ಮಿಶ್ರವಾದ ತಿಲವನ್ನು ಹೋಮಮಾಡಬೇಕು. ಅಗ್ನಿದೇವತಾಕವಾದ ಕೃತ್ತಿಕಾ ನಕ್ಷತ್ರಶಾಂತಿಗಾಗಿ ಯವಧಾನ್ಯವನ್ನು ಹೋಮಮಾಡಬೇಕು.

೧೪. ಪ್ರಜಾಪತಿ ದೇವತಾಕವಾದ ರೋಹಿಣೀ ನಕ್ಷತ್ರಶಾಂತಿಯಾಗಿ ಭೋಗಸಾಧನವಾಗಬೇಕಾದರೆ ಬಕಪುಷ್ಪವನ್ನು ಹೋಮಮಾಡಬೇಕು. ಸೋಮದೇವತಾಕವಾದ ಮೃಗಶಿರಾ ನಕ್ಷತ್ರಶಾಂತ್ಯರ್ಥವಾಗಿ ಪ್ರಿಯಂಗು (ನವಣೆ) ವನ್ನು ಹೋಮಮಾಡಬೇಕು. ರುದ್ರದೇವತಾಕವಾದ ಆರ್ದ್ರಾ ನಕ್ಷತ್ರಶಾಂತಿಗಾಗಿ ತುಪ್ಪ, ಮಾಂಸ, ಇವುಗಳನ್ನು ಹೋಮಮಾಡಬೇಕು.

೧೫. ಅದಿತಿ ದೇವತಾಕವಾದ ಪುನರ್ವಸು ನಕ್ಷತ್ರಶಾಂತಿಗಾಗಿ ತುಪ್ಪ, ತೊಳೆದ ಅಕ್ಕಿ, ಇವುಗಳನ್ನೂ ಬೃಹಸ್ಪತಿದೇವತಾಕವಾದ ಪುಷ್ಯ ನಕ್ಷತ್ರಶಾಂತಿಗಾಗಿ ಹಾಲು, ತುಪ್ಪ ಇವುಗಳ ಮಿಶ್ರವನ್ನೂ ಹೋಮಮಾಡಬೇಕು.

**ಗ್ರಾಮ್ಯೋಷಧ್ಯೈರ್ವಟಪತ್ರೈಃ ಸರ್ಪಿಃ ಸರ್ಪಾಧಿದೈವತೇ ।**
**ಹೋಮಃ ಪ್ರೋಕ್ತಃ ಪ್ರಿಯಂಗೂನಾಂ ನಕ್ಷತ್ರೇ ಯಾಮದೈವತೇ ॥**

**ಸಾವಿತ್ರೇ ದಧಿಹೋಮೋತ್ರ ತ್ವಾಷ್ಟ್ರೇ ಚಿತ್ರೌದನಂ ಹವಿಃ ॥ ೧೭ ॥**

**ಯವಾನ್ಸಹಾ ಜ್ಯಾನ್ವಾಯೌ ಚ ಇಂದ್ರಾಗ್ನ್ಯೌ ತು ಪಯೋದನಂ ।**
**ಮೈತ್ರೇಚಾಥ ಹವಿಷ್ಯಾನ್ನಂ ಚೈಂದ್ರೇ ಚಣಕಮಿಶ್ರಿತಂ ॥ ೧೮ ॥**

**ನೈಋತ್ಯೇ ತಿಲಹೋಮಃ ಸ್ಯಾದವ್ಯಕ್ತೇ ಚ ಹುತಾಶನೇ ।**
**ಅಬ್ದೈವತ್ಯೇ ಶಾಲಿಬೀಜೈರ್ವೈಶ್ವದೇವಂ ತು ಕಾರಯೇತ್ ॥ ೧೯ ॥**

---

೧೬. ಸರ್ಪದೇವತಾಕವಾದ ಆಶ್ಲೇಷಾ ನಕ್ಷತ್ರಶಾಂತಿಗಾಗಿ ಗ್ರಾಮೌಷಧಿ ಯೆನಿಸುವ ಆಲದೆಲೆಯಲ್ಲಿ ತುಪ್ಪವನ್ನು ಹೋಮಮಾಡಬೇಕೆಂದು ಹೇಳಿದೆ. ಯಮ ಲೋಕಗತಪಿತೃದೇವತಾಕವಾದ ಮೂಲಾ ನಕ್ಷತ್ರಶಾಂತಿಗಾಗಿ ಪ್ರಿಯಂಗು ವನ್ನು ಹೋಮಮಾಡಬೇಕು.

೧೭. ಸವಿತೃದೇವತಾಕವಾದ ಹಸ್ತ ನಕ್ಷತ್ರಶಾಂತಿಗಾಗಿ ದಧಿಹೋಮ ಮಾಡಬೇಕು. ತ್ವಷ್ಟೃದೇವತಾಕವಾದ ಚಿತ್ತಾ ನಕ್ಷತ್ರದ ಶಾಂತಿಗಾಗಿ ಚಿತ್ರಾನ್ನ ವನ್ನು ಹೋಮಮಾಡಬೇಕು.

೧೮. ವಾಯುದೇವತಾಕವಾದ ಸ್ವಾತೀ ನಕ್ಷತ್ರಶಾಂತಿಗಾಗಿ ಆಜ್ಯಸಹಿತ ಯವವನ್ನೂ, ಇಂದ್ರಾಗ್ನಿದೇವತಾಕವಾದ ವಿಶಾಖಾ ನಕ್ಷತ್ರಶಾಂತಿಗಾಗಿ ಹಾಲು ಅನ್ನವನ್ನೂ, ಮಿತ್ರದೇವತಾಕವಾದ ಅನೂರಾಧಾ ನಕ್ಷತ್ರಶಾಂತಿಗೆ ಹವಿಷ್ಯಾನ್ನ ವನ್ನೂ, ಇಂದ್ರದೇವತಾಕವಾದ ಜ್ಯೇಷ್ಠಾ ನಕ್ಷತ್ರಶಾಂತಿಗೆ ಕಡಲೆಕಾಳು ಮಿಶ್ರ ವಾದ ಹವಿಸ್ಸನ್ನೂ ಹೋಮಮಾಡಬೇಕು.

೧೯. ನೈಋತ್ಯದೇವತಾಕವಾದ ಮೂಲಾ ನಕ್ಷತ್ರಶಾಂತಿಗಾಗಿ ಅವ್ಯಕ್ತ ವಾಗಿ ತಿಲಹೋಮವನ್ನು ಮಾಡಬೇಕು. ಜಲದೇವತಾಕವಾದ ಪೂರ್ವಾಷಾಢ ನಕ್ಷತ್ರಕ್ಕೆ ಶಾಲಿಬೀಜ (ತಂಡುಲ) ದಿಂದ ವೈಶ್ವದೇವ ಕರ್ಮವನ್ನು ಮಾಡಿಸ ಬೇಕು.

**ರಕ್ತಾಶ್ಚ ತಂಡುಲಾಶ್ಚೈವ ಹೋತವ್ಯಾ ವಿಷ್ಣುದೈವತೇ ।**
**ವಾರುಣೇ ಪಾರಿಜಾತಾನಾಂ ಪುಷ್ಪಾಣಾಂ ಹೋಮ ಇಷ್ಯತೇ ॥ ೨೦ ॥**

**ವಾಸವೇ ಚ ಪ್ರಿಯಂಗೂನಾಂ ಪುಷ್ಪಾಣಾಂ ಹೋಮ ಇಷ್ಯತೇ ।**
**ಆಜೈಕಪಾದೇ ನಕ್ಷತ್ರೇ ಪ್ರಾಜಾಪತ್ಯೇ ತು ತತ್ಸಮಂ ॥**
**ಅಹಿರ್ಬುಧ್ನ್ಯೇ ತು ನಕ್ಷತ್ರೇ ವೈಶ್ವದೇವಂ ತು ಕಾರಯೇತ್ ॥ ೨೧ ॥**

**ಪೌಷೇ ಫಲಾನ್ಯಖಂಡಾನಿ ಜಹುಯಾದಷ್ಟೋತ್ತರಂ ಶತಂ ॥ ೨೨ ॥**

**ಸಾವಿತ್ರೀ ಹೋಮಮೇಕಂ ತು ಬ್ರಹ್ಮಾಭಿಹಿತವಾನ್ಪುರಾ ।**
**ಸರ್ವಜ್ವರಪ್ರಶಮನಂ ಸದ್ಯೋ ಜ್ವರಹರಂ ಪರಂ ॥ ೨೩ ॥**

**ಇತಿ ಶ್ರೀಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣಯುಧಿಷ್ಠಿರ ಸಂವಾದೇ ನಕ್ಷತ್ರ ಹೋಮವಿಧಿವರ್ಣನಂ ನಾಮ ಪಂಚಚತ್ವಾರಿಂಶದುತ್ತರಶತತಮೋಽಧ್ಯಾಯಃ.**

---

೨೦. ವಿಷ್ಣುದೇವತಾಕವಾದ ಶ್ರವಣ ನಕ್ಷತ್ರಶಾಂತಿಗೆ ಕೆಂಪು ಅಕ್ಕಿಯನ್ನು ಹೋಮಮಾಡಬೇಕು. ವಸುದೇವತಾಕವಾದ ಧನಿಷ್ಠಾ ನಕ್ಷತ್ರಕ್ಕೆ ಪ್ರಿಯಂಗು ಪುಷ್ಪವನ್ನು ಆಜ್ಯಸಹಿತ ಹೋಮಮಾಡಬೇಕು. ವರುಣ ದೇವತಾಕವಾದ ಶತಭಿಷಾ ನಕ್ಷತ್ರಶಾಂತಿಗೆ ಪಾರಿಜಾತ ಪುಷ್ಪವನ್ನು ಹೋಮಮಾಡಬೇಕು.

೨೧. ಆಜೈಕಪಾದದೇವತಾಕವಾದ ಪೂರ್ವಾಭಾದ್ರಾ ನಕ್ಷತ್ರಶಾಂತಿಯನ್ನು ರೋಹಿಣೀ ನಕ್ಷತ್ರ ಶಾಂತಿಯಂತೆಯೇ ಮಾಡಬೇಕು. ಅಹಿರ್ಬುಧ್ನ್ಯಸಂಜ್ಞಕವಾದ ಉತ್ತರಾಭಾದ್ರಾ ನಕ್ಷತ್ರಶಾಂತಿಯಲ್ಲೂ ವೈಶ್ವದೇವವನ್ನು ಮಾಡಬೇಕು.

೨೨. ಪೂಷಾದೇವತಾಕವಾದ ರೇವತೀ ನಕ್ಷತ್ರಶಾಂತಿಗೆ ಉಂಡೆಯಾದ ನೂರೆಂಟು ಫಲಗಳನ್ನು ಹೋಮಮಾಡಬೇಕು.

೨೩. ಸರ್ವವಿಧವಾದ ಜ್ವರವು ಶಮನವಾಗುವುದಕ್ಕೂ ಕೂಡಲೆ ಜ್ವರವು ನಿಂತುಹೋಗುವುದಕ್ಕೂ, ಉತ್ತಮವೂ ಪ್ರಸಿದ್ಧವೂ ಆದ ಸಾವಿತ್ರೀಹೋಮವನ್ನು ಆಚರಿಸಬೇಕೆಂದು ಪೂರ್ವದಲ್ಲಿ ಬ್ರಹ್ಮನೇ ವಿಧಾಯಕಮಾಡಿದಾನೆ.

ಇಲ್ಲಿಗೆ ಶ್ರೀಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ನಕ್ಷತ್ರಹೋಮ ವಿಧಿ ವರ್ಣನೆಯೆಂಬ ನೂರನಲವತ್ತೈದನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

## ಅಥ ಶ್ರೀ ಭವಿಷ್ಯೇ ಮಹಾಪುರಾಣ

### ಉತ್ತರಪರ್ವಣಿ

## ಷಟ್ಚತ್ವಾರಿಂಶದುತ್ತರಶತತಮೋಽಧ್ಯಾಯಃ

॥ ಶ್ರೀ ವಸಿಷ್ಠ ಉವಾಚ ॥

ಅಥಾನ್ಯದಪಿ ತೇ ವಚ್ಮಿ ವ್ರತಂ ರಾಜನ್ಮಹಾಫಲಂ ।
ಅಪರಾಧಶತಂ ಯೇನ ಕ್ಷಯಂ ಯಾತಿ ಶೃಣುಷ್ವ ತತ್ ॥ ೧ ॥

॥ ಇಕ್ಷ್ವಾಕುರುವಾಚ ॥

ಕಿಂ ವ್ರತಂ ತನ್ಮಮಾಚಕ್ಷ್ವ ಕೋಽಪರಾಧಸ್ತು ತಂ ವದ ।
ಕಃ ಪೂಜ್ಯತೇ ಚ ವೈ ತಸ್ಮಿನ್ಕದಾ ವಾ ಕ್ರಿಯತೇ ನರೈಃ ॥ ೨ ॥

---

### ನೂರನಲವತ್ತಾರನೆಯ ಅಧ್ಯಾಯ

೧. ವಸಿಷ್ಠ ಮುನಿವರ್ಯರು ಹೇಳುತ್ತಾರೆ—ಎಲೈ ರಾಜನೇ ! ನಾವು ನೂರಾರು ಅಪರಾಧಗಳನ್ನು ಆಚರಿಸಿದಾಗ್ಯೂ ಅವೆಲ್ಲವನ್ನೂ ಹೋಗಲಾಡಿಸಿ ಮಹಾಫಲವನ್ನು ಕೊಡತಕ್ಕ ಮತ್ತೊಂದು ವ್ರತವಿದೆ. ಅದನ್ನು ಹೇಳುತ್ತೇನೆ ಕೇಳು ಎಂದರು.

೨. ಇಕ್ಷ್ವಾಕು ಹೇಳುತ್ತಾನೆ—“ ಸ್ವಾಮೀ ಪೂಜ್ಯರೇ ! ಸಾಮಾನ್ಯವಾಗಿ ನಾವು ಆಚರಿಸುವ ಅಪರಾಧಗಳಾವುವು ? ಅದನ್ನು ಪರಿಹರಿಸುವ ವ್ರತದ ಹೆಸರೇನು ? ಆ ವ್ರತದಲ್ಲಿ ಯಾವದೇವರನ್ನು ಪೂಜಿಸಬೇಕು ? ಯಾವಾಗ ಆ ವ್ರತ ಮಾಡಬೇಕು ? ಎಂಬುದನ್ನು ಕೃಪೆಮಾಡಿ ಹೇಳಬೇಕು.” ಎಂದನು.

॥ ಶ್ರೀ ವಸಿಷ್ಠ ಉವಾಚ ॥
ಶೃಣು ರಾಜನ್ಮಹಾಬಾಹೋ ಅಪರಾಧಶತವ್ರತಂ ।
ಯೇನಾನುಷ್ಠಿತಮಾತ್ರೇಣ ಕಾಮಮೋಕ್ಷೌ ಲಭೇತ ನಾ ॥ ೩ ॥

ಪ್ರಾಯಶ್ಚಿತ್ತಾನ್ಯಶೇಷಾಣಿ ಸರ್ವಪಾಪಾಪನುತ್ತಯೇ ।
ಕೃತಾನ್ಯಪ್ಯಕೃತಾನಿ ಸ್ಯುರಿತಿ ಹೋವಾಚ ಪದ್ಮಜಃ ॥ ೪ ॥

ಪಾಪಂ ಗುರುತರಂ ಚಾಪಿ ದಹ್ಯತೇ ತೂಲರಾಶಿವತ್ ।
ಅಪರಾಧಶತಂ ರಾಜರ್ ಶೃಣುಷ್ವ ಗದತೋ ಮಮ ॥ ೫ ॥

ನ ಕರೋತಿ ನರೋ ಮೋಹಾದ್ವ್ರತಮೇತದ್ದಿನೇ ದಿನೇ ।
ಅನಾಶ್ರಮಿತ್ವಂ ಪ್ರಥಮೋಽನಗ್ನಿತಾ ವ್ರತಹೀನತಾ ॥ ೬ ॥

---

೩. ವಸಿಷ್ಠ ಮುನಿವರ್ಯರು ಹೇಳುತ್ತಾರೆ—ಅಯ್ಯಾ ಮಹಾಬಾಹುವೆನಿಸಿದ ರಾಜನೇ ! ಅಪರಾಧಶತವ್ರತವೆಂಬ ವ್ರತವನ್ನು ಆಚರಿಸಿದರೆ ಮನುಷ್ಯನು ತನ್ನ ಇಷ್ಟಾರ್ಥಗಳನ್ನೂ ಮತ್ತು ಮೋಕ್ಷವನ್ನೂ ಸಹ ಪಡೆಯುತ್ತಾನೆ.

೪. ಎಲ್ಲ ವಿಧವಾದ ಪಾಪಗಳ ಪರಿಹಾರಕ್ಕಾಗಿ ಸಮಸ್ತ ಪ್ರಾಯಶ್ಚಿತ್ತಗಳನ್ನು ಮಾಡಿಕೊಂಡಾಗ್ಯೂ ಈ ವ್ರತಾಚರಣೆ ಮಾಡದೆ ಹೋದರೆ ಆ ಪ್ರಾಯಶ್ಚಿತ್ತಮಾಡಿಕೊಂಡರೂ ಫಲವಾಗುವುದಿಲ್ಲ. ಎಂಬದಾಗಿ ಬ್ರಹ್ಮನು ಹೇಳಿದ್ದಾನೆ.

೫. ಎಲೈ ರಾಜನೇ ! ಹತ್ತಿಯ ರಾಶಿಗೆ ಒಂದು ಕಿಡಿ ಸೋಕಿದರೆ ಹೇಗೆ ಕ್ಷಣಮಾತ್ರದಲ್ಲಿ ದಹಿಸಿಹೋಗುವುದೋ ಹಾಗೆ ಒಂದು ವ್ರತಮಾಡಿದರೆ ಸಮಸ್ತ ಪಾಪವನ್ನೂ ಧ್ವಂಸಮಾಡುವ ಮಹಿಮಾವಿಶಿಷ್ಟವಾದ ಅಪರಾಧ ಶತವ್ರತವನ್ನು ಹೇಳುವೆನು ಕೇಳು.

೬. ಮಾನವರು ಮೋಹದಿಂದ ಈ ವ್ರತವನ್ನು ದಿನೇದಿನೇ ಮಾಡತಕ್ಕದ್ದಲ್ಲ. ಒಂದು ವರ್ಣದಲ್ಲಿ ಜನ್ಮವೆತ್ತಿದ ಮೇಲೆ ಉಪನಯನಾದಿ ಸಂಸ್ಕಾರಪೂರ್ವಕವಾಗಿ ಬ್ರಹ್ಮಚರ್ಯ ಮೊದಲಾದ ಆಶ್ರಮವನ್ನು ವಹಿಸದಿರುವುದು ಒಂದನೇ ಅಪರಾಧ. ಆಶ್ರಮಿಯಾಗಿದ್ದೂ ಅದಕ್ಕೆ ಉಕ್ತವಾದರೀತಿ ಅಗ್ನಿ ಪರಿಚರ್ಯೆ ಮಾಡದೆ ವ್ರತಹೀನನಾಗುವುದು.

**ಅದಾತೃತ್ವಮಶೌಚಂ ಚ ನಿರ್ದಯತ್ವಂ ಸ್ಪೃಹಾಲುತಾ |**
**ಅಕ್ಷಾಂತಿರ್ಜನಪೀಡಾ ಚ ಮಾಯಿತ್ವಂ ಚಾಪ್ಯಮಂಗಲಂ || ೭ ||**

**ಕ್ಷತವ್ರತತ್ವಂ ನಾಸ್ತಿಕ್ಯಂ ವೇದನಿಂದಾ ಕಠೋರತಾ |**
**ಅಸತ್ಯತಾ ಹಿಂಸಕತ್ವಂ ಸ್ತೈನ್ಯಮಿಂದ್ರಿಯವಿಪ್ಲವಃ || ೮ ||**

**ಮನಸೋಽನಿಗ್ರಹಶ್ಚೈವ ಕ್ರೋಧ ಈರ್ಷ್ಯಾಥ ಮತ್ಸರಃ |**
**ದಂಭಃ ಶಾಠ್ಯಂ ಚ ಧೌರ್ತ್ಯಂ ಚ ಕಟುಕೋಕ್ತಿಃ ಪ್ರಮಾದತಾ || ೯ ||**

**ಭಾರ್ಯಾಮಾತೃಸುತಾದೀನಾಂ ತ್ಯಾಗಶ್ಚಾಪೂಜ್ಯಪೂಜನಂ |**
**ಶ್ರಾದ್ಧಹಾನಿರ್ಜಪತ್ಯಾಗಃ ಪಂಚಯಜ್ಞವಿವರ್ಜನಂ || ೧೦ ||**

---

೭. ದಾನಕೊಡದೆ ಇರುವುದು, ಶುಚಿಯಾಗಿಲ್ಲದಿರುವುದು, ಪ್ರಾಣಿಗಳಲ್ಲಿ ದಯೆತೋರಿಸದೆ ನಿಷ್ಕರುಣೆಯಿಂದಿರುವುದು, ಕಂಡದ್ದಕ್ಕೆಲ್ಲಾ ಆಶೆ ಪಡುವುದು, ಕ್ಷಮಾಗುಣವಿಲ್ಲದಿರುವುದು, ಜನರನ್ನು ಚಿತ್ರಹಿಂಸೆ ಮಾಡುವುದು, ಮೋಸ ಪಡಿಸುವುದು, ಅಶ್ಲೀಲವಾದ ಮಾತನಾಡುವುದು, ಅಶ್ಲೀಲವಾದ ನಡವಳಿಕೆ.

೮. ವ್ರತಭಂಗ ಮಾಡುವುದು, ದೇವರಿದ್ದಾನೆ ಎಂಬ ಪ್ರಮಾಣ್ಯವನ್ನು ಒಪ್ಪದಿರುವುದು, ವೇದವನ್ನು ನಿಂದಿಸುವುದು, ಕ್ರೂರತನದಿಂದ ವರ್ತಿಸುವುದು, ಸುಳ್ಳಾಡುವುದು, ಪ್ರಾಣಿಹಿಂಸೆ ಮಾಡುವುದು, ಕಳ್ಳತನಮಾಡುವುದು.

೯. ಇಂದ್ರಿಯಗಳನ್ನು ಸ್ವೇಚ್ಛೆಯಾಗಿ ಉಪಯೋಗಿಸುವುದು, ಮನೋನಿಗ್ರಹ ಮಾಡಲಾರದುದು, ಕೋಪಾಟೋಪ, ಈರ್ಷ್ಯಾಸೂಯೆಪಡುವುದು, ಡಂಭಮಾಡುವುದು, ನೀಚತನದಿಂದ ವರ್ತಿಸುವುದು, ಧೂರ್ತತನ ತೋರಿಸುವುದು, ದುರ್ಭಾಷೆಯಾಡುವುದು, ಅವಧಾನವಿಡದೆ ಅಲಕ್ಷ್ಯದಿಂದಿರುವುದು.

೧೦. ಹೆಂಡತಿ, ಮಗಳು, ತಾಯಿ, ಮುಂತಾದ ಸಮೀಪಬಂಧುಗಳನ್ನು ವರ್ಜ್ಯಮಾಡುವುದು, ಪೂಜಾರ್ಹರಲ್ಲದವರನ್ನು ಪೂಜಿಸುವುದು, ಶ್ರಾದ್ಧಕರ್ಮವನ್ನು ಬಿಟ್ಟುಬಿಡುವುದು, ಜಪಮಾಡುವುದನ್ನು ಬಿಡುವುದು, ದೇವ, ಋಷಿ, ಪಿತೃ, ಭೂತ, ಮನುಷ್ಯ, ಇವರ ಪ್ರೀತ್ಯರ್ಥವಾಗಿ ಮಾಡಬೇಕಾದ ಪಂಚಯಜ್ಞಗಳನ್ನು ಮಾಡದೆ ತಪ್ಪುವುದು.

**ಸಂಧ್ಯಾತರ್ಪಣಹೋಮಾನಾಂ ಹಾನಿರಗ್ನೇಃ ಪ್ರಣಾಶನಂ ।**
**ಅನೃತೌ ಮೈಥುನಂ ಪಾರ್ಥ ಪರ್ವಣ್ಯಪಿ ಚ ಮೈಥುನಂ　　॥ ೧೧ ॥**

**ಪೈಶುನ್ಯಂ ಪರದಾರೇಷು ದಾನಂ ವೇಶ್ಯಾಭಿಗಾಮಿತಾ ।**
**ಅಪಾತ್ರದಾನಂ ಚಾಲ್ಪಂ ಚ ಮೂಲಿಕಾಕುಲಿಭಕ್ಷಣಂ　　॥ ೧೨ ॥**

**ಅಂತ್ಯಜಾಗಮನಂ ಮಾತೃತ್ಯಾಗಃ ಪಿತೃವಿವರ್ಜನಂ ।**
**ಪಿತ್ರೋರಭಕ್ತಿರ್ವಾದಶ್ಚ ಪುರಾಣಸ್ಮೃತಿವರ್ಜನಂ　　॥ ೧೩ ॥**

**ಅಭಕ್ಷ್ಯಭೋಜನಂ ಚಾಪಿ ಪತಿದ್ರೋಹೋಽವಿಚಾರತಾ ।**
**ಕೃಷಿಕರ್ಮಕ್ರಿಯಾವಾಹಂ ಭಾರ್ಯಾಸಂಗ್ರಹಕಾರಿತಾ　　॥ ೧೪ ॥**

---

೧೧. ಸಂಧ್ಯಾವಂದನೆ, ತರ್ಪಣ, ಔಪಾಸನ ಹೋಮಾದಿಗಳನ್ನು ಮಾಡದೆಹೋಗುವುದು, ಅಗ್ನಿಯನ್ನು ರಕ್ಷಿಸದೆ ನಷ್ಟಪಡಿಸುವುದು, ಬಹಿಸ್ಥೆಯಾದ ಷೋಡಶದ ದಿನದ ಮೇಲೆ ಸ್ತ್ರೀಸಂಗಮಾಡುವುದು, ದರ್ಶ ಪೂರ್ಣಿಮಾಸಾದಿಪರ್ವದಿನಗಳಲ್ಲಿ ಸ್ತ್ರೀಸಂಗಮಾಡುವುದು.

೧೨. ಚಾಡಿಕೋರತನ, ಪರಸ್ತ್ರೀಯರಿಗೆ ತಾನೇ ಸಾಕ್ಷಾತ್ತಾಗಿ ಕೊಡಹೋಗುವುದು, ವೇಶ್ಯಾಗಮನಮಾಡುವುದು, ಅನರ್ಹರಾದವರಿಗೆ ದಾನ ಕೊಡುವುದು, ಕೇವಲ ಅಲ್ಪವನ್ನು ದಾನಕೊಡುವುದು, ಆಕುಲಕ್ಕೆ ಗುರಿಯಾಗಿ ಮೂಲಿಕಾದಿಗಳನ್ನು ತಿನ್ನುವುದು.

೧೩. ಚಂಡಾಲ ಸ್ತ್ರೀಸಂಗಮಾಡುವುದು, ತಾಯಿಯನ್ನು ಹೊಡೆದು ಅಟ್ಟುವುದು, ತಂದೆಯನ್ನು ಓಡಿಸುವುದು, ಮಾತಾಪಿತೃ ಭಕ್ತಿಹೀನತೆ, ಅವರೊಡನೆ ವಾಗ್ವಾದ ಮಾಡುವುದು, ಸ್ಮೃತಿ ಪುರಾಣವನ್ನು ಕೇಳಲು ಅಸಹ್ಯಪಟ್ಟು ಬಿಟ್ಟಿರುವುದು.

೧೪. ತಿನ್ನಬಾರದುದನ್ನು ತಿನ್ನುವುದು, ಪತ್ನಿಯು ಪತಿಗೆ ಮೋಸ ಮಾಡುವುದು, ವಿಚಾರವಿಹೀನತೆಯಿಂದ ವರ್ತಿಸುವುದು, ವ್ಯವಸಾಯಕಾರ್ಯಗಳಲ್ಲಿ ವಾಹನವಾಗುವುದು, ಹೆಂಡತಿಯನ್ನು ದ್ರವ್ಯ ಸಂಪಾದನೆ ಮಾಡಲು ಬಿಡುವುದು,

ಇಂದ್ರಿಯಾಜಯಮಾಯಿತ್ವಂ ವಿದ್ಯಾವಿಸ್ಮರಣಂ ತಥಾ ।
ಶಾಸ್ತ್ರತ್ಯಾಗ ಋಣಂ ಚಿತ್ರಕರ್ಮ ಚಾನಂಗಧಾವನಂ ॥ ೧೫ ॥

ಭಾರ್ಯಾಪುತ್ರಸುತಾದೀನಾಂ ವಿಕ್ರಯಃ ಪಶುಮೈಥುನಂ ।
ಇಂಧನಾರ್ಥಂ ದ್ರುಮಚ್ಛೇದೋ ಬಿಲೇ ವಾರ್ಯಾದಿಪೂರಣಂ ॥ ೧೬ ॥

ತಡಾಗಾಗಮನೇ ವೃತ್ತಂ ವಿದ್ಯಾವಿಕ್ರಯಕಾರಿತಾ ।
ವೃತ್ತಿಲೋಪೋ ಮಹೀಪಾಲ ಯಾಚಕತ್ವಂ ಕುಮಿತ್ರತಾ ॥ ೧೭ ॥

ಸ್ತ್ರೀವಧೋ ಗೋವಧಶ್ಚೈವ ಪೌರೋಹಿತ್ಯಂ ಸುಹೃದ್ವಧಃ ।
ಭ್ರೂಣಹತ್ಯಾ ಪರಾನ್ನಂ ಚ ಶೂದ್ರಾನ್ನಸ್ಯ ನಿಷೇವಣಂ ॥ ೧೮ ॥

---

೧೫. ಇಂದ್ರಿಯಗಳನ್ನು ಜಯಿಸಲಾರದೆ ಮೋಸಮಾಡುವುದು, ಕಲಿತ ವಿದ್ಯೆಯನ್ನು ಮರೆತು ಬಿಡುವುದು, ಶಾಸ್ತ್ರಾನುಸರಣಮಾಡದೆ ಅಲಕ್ಷ್ಯಮಾಡುವುದು, ಸಾಲ ಮಾಡುವುದು. ಚಿತ್ರಕೆಲಸಮಾಡುವುದು, ಮನ್ಮಥಾವೇಶದಿಂದ ಓಡಿಹೋಗುವುದು.

೧೬. ಹೆಂಡತಿ, ಮಗ, ಮಗಳು, ಇವರನ್ನು ವಿಕ್ರಯಿಸುವುದು, ಪಶುಗಳೊಡನೆ ಸಂಗಮ ಮಾಡವುದು, ಸೌದೆಗಾಗಿ ಮರಕಡಿಯುವುದು, ಬಿಲಗಳಲ್ಲಿ ನೀರು ಹೊಗೆ ಮುಂತಾದುವನ್ನು ನುಗ್ಗಿಸುವುದು.

೧೭. ಕೆಲಸವಿಲ್ಲದೆ ಕೆರೆಕೊಳಗಳಿಗೆ ಹೋಗಿ ನೋಡುತ್ತಾ ಕುಳಿತುಕೊಳ್ಳುವುದು, ಕಲಿತ ವಿದ್ಯೆಯನ್ನು ಮಾರಿಕೊಳ್ಳುವುದು, ಜೀವನ ನಿರ್ವಾಹದಲ್ಲಿ ಲೋಪ, ಕಂಡಕಂಡವರಲ್ಲೆಲ್ಲಾ ಭಿಕ್ಷೆ ಬೇಡುವುದು, ಕಪಟ ಸ್ನೇಹದಿಂದಿರುವುದು.

೧೮. ಸ್ತ್ರೀಯನ್ನು ಕೊಲ್ಲುವುದು, ಗೋಹತ್ಯ, ಮಿತ್ರಹತ್ಯ, ಪೌರೋಹಿತ್ಯ ಮಾಡಿಸುವುದು, ಭ್ರೂಣಹತ್ಯ, ಪರಾನ್ನಭೋಜನ, ಶೂದ್ರಾನ್ನ ಸೇವನ,

**ಶೂದ್ರಸ್ಯ ಚಾಗ್ನಿಕರ್ಮತ್ವಮವಿಧಿತ್ವಂ ಕುಪುತ್ರತಾ ।**
**ವಿದ್ವದ್ಭ್ಯೋ ಯಾಚಕತ್ವಂ ಹಿ ವಾಚಾಟತ್ವಂ ಪ್ರತಿಗ್ರಹಃ ॥ ೧೯ ॥**

**ಶ್ರೌತಸಂಸ್ಕಾರಹೀನತ್ವಮಾರ್ತತ್ರಾಣವಿವರ್ಜನಂ ।**
**ಬ್ರಹ್ಮಹತ್ಯಾಸುರಾಪಾನಂ ರುಕ್ಮಸ್ತೈನ್ಯಮತಃ ಪರಂ ॥ ೨೦ ॥**

**ಗುರುದಾರಾಭಿಗಾಮಿತ್ವಂ ಸಂಯೋಗಶ್ಚಾಪಿ ತೈಃ ಸಹಃ ।**
**ಅಪರಾಧಶತಂ ತ್ವೇತತ್ಕಥಿತಂ ತೇ ಮಯಾऽನಘ ॥ ೨೧ ॥**

**ಅನ್ಯೇऽಪಿ ವಿವಿಧಾಃ ಸಂತಿ ಪ್ರೋಕ್ತಾಃ ಪ್ರಾಧಾನ್ಯತಸ್ತ್ವಿಮಾ ।**
**ಯದಿ ವಕ್ತ್ರಸಹಸ್ರಾಣಿ ವಕ್ತ್ರೇ ಜಿಹ್ವಾಶತಾನಿ ಚ ॥ ೨೨ ॥**

**ತಥಾಪ್ಯೇತೇ ನ ಶಕ್ಯಂತೇ ವಕ್ತುಂ ಯಸ್ಮಾದನಂತಕಾಃ ।**
**ಅಪರಾಧಸಹಸ್ರಾಣಿ ಲಕ್ಷಕೋಟಿ ಶತಾನಿ ಚ ॥ ೨೩ ॥**

---

೧೯. ಶೂದ್ರರಿಂದ ಅಗ್ನಿಕಾರ್ಯ ಮಾಡಿಸುವುದು, ವಿಧಿವಿಹಿತದಂತೆ ನಡೆಯದೆ ಇರುವುದು, ದುಷ್ಪುತ್ರರನ್ನು ಪಡೆದಿರುವುದು, ವಿದ್ವಾಂಸರನ್ನು ದಾರಿದ್ರ್ಯದಲ್ಲಿ ಕೆಡವಿ ಯಾಚನೆ ಮಾಡಿಸುವುದು, ಕೇವಲಮಾತಿನಿಂದ ಮರುಳು ಮಾಡುವುದು, ಸಿಕ್ಕಿದ ದಾನಕ್ಕೆಲ್ಲಾ ಕೈಯೊಡ್ಡುವುದು,

೨೦. ವಿಪ್ರನು ಶ್ರೌತಸ್ಮಾರ್ತ ಸಂಸ್ಕಾರಗಳನ್ನು ಮಾಡಿಕೊಳ್ಳದೆ ಇರುವುದು, ಕಷ್ಟಕ್ಕೆ ಸಿಕ್ಕಿದವರನ್ನು ರಕ್ಷಿಸದೆ ಹೊಡೆದು ಓಡಿಸುವುದು, ಬ್ರಾಹ್ಮಣನನ್ನು ವಧೆಮಾಡುವುದು, ಹೆಂಡಕುಡಿಯುವುದು, ಚಿನ್ನವನ್ನು ಕದಿಯುವುದು.

೨೧. ಗುರುಪತ್ನಿಯಲ್ಲಿ ಸಲಿಗೆಯಾಗಿರುವುದು, ಅವರೊಡನೆ ಸುಖಿಸುವುದು, ಇವೇ ಶತಾಪರಾಧಗಳು ಎಂಬುದನ್ನು ವಿವರಿಸಿದೇನೆ.

೨೨-೨೩. ಇನ್ನೂ ಎಷ್ಟೋ ಬಗೆಯ ಪಾತಕಗಳು ಇವೆ. ಮುಖ್ಯವಾದವುಗಳನ್ನು ಮಾತ್ರ ಇಲ್ಲಿ ಸೂಚಿಸಿದೆ. ಸಾವಿರ ಬಾಯಿಗಳಿದ್ದು ಒಂದೊಂದು ಬಾಯಿಯಲ್ಲೂ ನೂರುನೂರು ನಾಲಗೆಗಳಿದ್ದರೂ ಅಪರಿಮಿತವಾದ ಈ ಅಪರಾಧಗಳನ್ನು ಹೇಳಿ ಮುಗಿಸಲು ಆಗುವುದಿಲ್ಲ. ಹೀಗೆ ಅಪರಾಧಗಳು ಸಾವಿರಗಟ್ಟಲೆ ಲಕ್ಷಗಟ್ಟಲೆ ಕೋಟಿಗಟ್ಟಲೆಯಾಗಿ ಇವೆ.

ನಶ್ಯಂತಿ ತತ್ಕ್ಷಣಾನ್ನೂನಂ ಸತ್ಯೇಶಸ್ಯಾನುಪೂಜನಾತ್ ।
ಪೂಜ್ಯತೇ ಭಗವಾನತ್ರ ವ್ರತಕೃತ್ಯೇऽಪರಾಜಿತೇ ॥ ೨೪ ॥

ಧ್ವಜೇ ಸತ್ಯೇ ಸ್ಥಿತಶ್ಚಾಯಂ ಲಕ್ಷ್ಮ್ಯಾ ಸಹ ಜಗತ್ಪತಿಃ ।
ವಾಸುದೇವಸ್ತತಃ ಪೂರ್ವಂ ನೃಸಿಂಹೋ ದಕ್ಷಿಣೇಸ್ಥಿತಃ ॥ ೨೫ ॥

ಕಪಿಲಃ ಪ್ರಾಕ್ಷ್ಚಿಮಾಸ್ಯೇ ತು ವಾರಾಹಶ್ಚೋತ್ತರೇ ಸ್ಥಿತಃ ।
ಊರ್ಧ್ವವಕ್ತ್ರೇऽಚ್ಯುತೋ ಜ್ಞೇಯ ಏತದ್ವೈ ಬ್ರಹ್ಮಪಂಚಕಂ ॥೨೬॥

ತಂ ಸತ್ಯೇಶಂ ಸ್ಥಿತಂ ರಾಜನ್ಪೂಜಯೇಚ್ಚ ಸದೈವ ಹಿ ।
ಕ್ಷೀರೋದಯೋರ್ಧಚಂದ್ರಸ್ಥಪದ್ಮ ಕರ್ಣಿಕಸಂಸ್ಥಿತಂ ॥ ೨೭ ॥

ಪದ್ಮ ಕೌಮೋದಕೀ ಶಂಖಚಕ್ರಾಯುಧ ವಿಧಾರಣಂ ।
ವಾಮೇ ಚಾಧಸ್ತಥಾ ದಕ್ಷೇ ಊರ್ಧ್ವೇ ಪಶ್ಚಾದಧೋ ನೃಪ ॥ ೨೮ ॥

---

೨೪. ಇವು ಎಷ್ಟೇ ಇದ್ದರೂ ಸತ್ಯೇಶನನ್ನು ಪೂಜೆಮಾಡುವುದರಿಂದ ತತಕ್ಷಣದಲ್ಲಿ ಅವೆಲ್ಲವೂ ಸತ್ಯವಾಗಿ ನಾಶಹೊಂದುತ್ತವೆ. ಷಡ್ಗುಣೈಶ್ವರ್ಯಸಂಪನ್ನನೂ ಭಗವಂತನೂ ಜಗತ್ಪತಿಯೂ ಲಕ್ಷ್ಮೀಸಮೇತನೂ ಆದ ಸತ್ಯನಾರಾಯಣನು ಈ ವ್ರತದಲ್ಲಿ ಅಪರಾಜಿತವೆಂಬ ಧ್ವಜದಲ್ಲಿ ಪೂಜಿತನಾಗಿರುತ್ತಾನೆ.

೨೫–೨೬. ಅದರ ಪೂರ್ವಮುಖದಲ್ಲಿ ವಾಸುದೇವನೂ, ದಕ್ಷಿಣಮುಖದಲ್ಲಿ ನರಸಿಂಹನೂ, ಪಶ್ಚಿಮಮುಖದಲ್ಲಿ ಕಪಿಲನೂ, ಉತ್ತರಮುಖದಲ್ಲಿ ವರಾಹಮೂರ್ತಿಯೂ ಉರ್ಧ್ವಮುಖದಲ್ಲಿ ಅಚ್ಯುತನೂ ಇರುವರು. ಇದೇ ಬ್ರಹ್ಮಪಂಚಕವೆನಿಸುವುದು.

೨೭. ಎಲೈ ರಾಜನೇ! ಈ ಪ್ರಕಾರ ಅಲ್ಲಿ ಸತ್ಯನಾರಾಯಣನಿರುವನೆಂದು ತಿಳಿದು ಸದಾ ಕಾಲದಲ್ಲಿ ಪೂಜಿಸಬೇಕು. ಅವನು ಕ್ಷೀರಸಮುದ್ರದಲ್ಲಿ ಜನಿಸಿದ ಅರ್ಧ ಚಂದ್ರಯುಕ್ತನಾಗಿ ಕಮಲ ಪುಷ್ಪದ ಮೇಲೆ ನಿಂತಿರುವವನೂ ಆಗಿ, ಪದ್ಮಯುಕ್ತನೂ ಶಂಖಚಕ್ರಗದಾದ್ಯಾಯುಧಗಳಿಂದ ಶೋಭಿತನೂ ಆಗಿರುವನು.

೨೮. ಎಲೈ ರಾಜನೇ! ಎಡಹಸ್ತವನ್ನು ವರಕೊಡುವುದಕ್ಕಾಗಿ ಅಧೋಮುಖವಾಗಿಯೂ ಬಲಹಸ್ತವನ್ನು ಅಭಯಪ್ರದಾನಕ್ಕಾಗಿ ಮೇಲುಮುಖವಾಗಿಯೂ ಮಾಡಿಕೊಂಡಿರುವನು.

**ಪಾದಾಧಸ್ತಾದ್ವಿನಿಷ್ಕ್ರಾಂತಾ ಗಂಗಾ ಪೂತಾ ಸದಾ ನೃಭಿಃ ।**
**ಶಕ್ತ್ಯಷ್ಟಕಂ ತಥಾ ಚಾನ್ಯತ್ತನ್ನಾಮಾನಿ ಚ ಮೇ ಶೃಣು ॥ ೨೯ ॥**

**ಜಯಾ ಚ ವಿಜಯಾ ಚೈವ ಜಯಂತೀ ಪಾಪನಾಶಿನೀ ।**
**ಉನ್ಮೀಲಿನೀ ವಂಜುಲೀ ಚ ತ್ರಿಸ್ಪೃಶಾಥ ವಿವರ್ಧನಾ ॥ ೩೦ ॥**

**ಏತಾಭಿಃ ಶಕ್ತಿಭಿರ್ಯುಕ್ತಂ ಲೋಕದಿಕ್ಪಾಲವರ್ಜಿತಂ ।**
**ಶುಕ್ಲಾಂಬರಧರಂ ಸೌಮ್ಯಂ ಪ್ರಹೃಷ್ಟವದನಂ ಶಿವಂ ॥ ೩೧ ॥**

**ಸರ್ವಾಭರಣಶೋಭಾಢ್ಯಂ ಭುಕ್ತಿಮುಕ್ತಿಪ್ರದ ಹರಿಂ ।**
**ಪೂಜಯೇಚ್ಚ ಪ್ರಯತ್ನೇನ ವಿಧಿನಾ ಯೇನ ತಂ ಶೃಣು ॥ ೩೨ ॥**

**ಮಾರ್ಗಶೀರ್ಷಾದಿಮಾಸೇಷು ದ್ವಾದಶಸ್ವಪಿ ಸರ್ವದಾ ।**
**ದ್ವಾದಶ್ಯಾಮಪ್ಯಮಾಯಾಂ ವಾ ಅಷ್ಟಮ್ಯಾಂ ಚ ಸಿತಾಸಿತೇ ॥ ೩೩ ॥**

---

೨೯. ಸರ್ವದಾ ಪರಮಪಾವನೆಯೆನಿಸಿದ ಗಂಗೆಯು ಈತನ ಪಾದ ಮೂಲದಿಂದ ಉದ್ಭವಿಸುತ್ತಿರುವಳು. ಮತ್ತು ಅಲ್ಲಿ ಅಷ್ಟಶಕ್ತಿಗಳು ಬೇರೆ ಇರುವರು. ಅವರ ಹೆಸರುಗಳನ್ನು ಹೇಳುವೆನು ಕೇಳು.

೩೦. ಜಯಾ, ವಿಜಯಾ, ಜಯಂತೀ, ಪಾಪನಾಶಿನೀ, ಉನ್ಮೀಲಿನೀ ವಂಜುಲೀ, ತಿಸ್ಪೃಶಾ, ವಿವರ್ಧನಾ ಎಂಬ ಇವರೇ ಅಷ್ಟಶಕ್ತಿಯರು.

೩೧. ಇಲ್ಲಿ ಸ್ವಾಮಿಯು ಈ ಅಷ್ಟಶಕ್ತಿಯರಿಂದ ಕೂಡಿರುವನು. ಇಂದ್ರಾದಿ ಲೋಕಪಾಲಕ ಸಹಿತನಾಗಿಲ್ಲ ಮತ್ತು ಶುಭ್ರವಸ್ತ್ರವನ್ನು ಧರಿಸಿ ಸೌಮ್ಯನಾಗಿ ಹರ್ಷಯುಕ್ತವಾದ ಮುಖದಿಂದ ಕೂಡಿದವನೂ, ಮಂಗಳಕರನೂ ಆಗಿರುವನು.

೩೨, ಅಲ್ಲದೆ ಸಮಸ್ತ ಆಭರಣಗಳನ್ನು ಧರಿಸಿ ಶೋಭಿಸುತ್ತಿರುವವನೂ, ಭುಕ್ತಿಯನ್ನೂ ಮುಕ್ತಿಯನ್ನೂ ಕೊಡಲು ಸಮರ್ಥನೂ ಆದ ಈ ಶ್ರೀಹರಿಯನ್ನು ಪ್ರಯತ್ನಪಟ್ಟು ಪೂಜಿಸಬೇಕು. ಪೂಜಿಸಬೇಕಾದ ವಿಧಾನವನ್ನು ಹೇಳುವೆನು ಕೇಳು.

೩೩. ಮಾರ್ಗಶಿರಮಾಸದಿಂದ ಆರಂಭಿಸಿ ಹನ್ನೆರಡು ತಿಂಗಳಲ್ಲಿಯೂ ದ್ವಾದಶಿಯಲ್ಲಿ, ಅಮಾವಾಸ್ಯೆಯಲ್ಲಿ, ಶುಕ್ಲಾಷ್ಟಮಿ ಕೃಷ್ಣಪಕ್ಷದ ಅಷ್ಟಮಿ ಇವುಗಳಲ್ಲಿ ಈ ವ್ರತಮಾಡಬೇಕು.

ಕೃತೋಪವಾಸಃ ಶುದ್ಧಾತ್ಮಾ ಕುರ್ಯಾದ್ವ್ರತಮತಂದ್ರಿತಃ ।
ಪಕ್ಷಯೋರುಭಯೋರೇವಂ ಪೂಜಯೇಽಹಂ ಜನಾರ್ದನಂ ॥ ೩೪ ॥

ಏವಂ ತು ನಿಯಮಂ ಕೃತ್ವಾ ದಂತಧಾವನಪೂರ್ವಕಂ ।
ಗಚ್ಛೇತ್ತತಸ್ತಡಾಗೇ ವಾ ಪುಷ್ಕರಿಣ್ಯಾಂ ಗೃಹೇಽಪಿ ವಾ ॥ ೩೫ ॥

ಸ್ನಾತ್ವಾ ತು ನೈತ್ಯಕಂ ಕರ್ಮ ಕೃತ್ವಾ ನೈಮಿತ್ತಿಕಂ ತತಃ ।
ಕುರ್ಯಾತ್ಸರ್ವಂ ಪ್ರಯತ್ನೇನ ಯಥಾವದನುಪೂರ್ವಶಃ ॥ ೩೬ ॥

ಸೌವರ್ಣಂ ಕಾರಯೇದ್ದೇವಂ ಪೂರ್ವೋಕ್ತಂ ಸತ್ಯರೂಪಿಣಂ ।
ಶಕ್ತ್ಯಷ್ಟಕಯುತಂ ಲಕ್ಷ್ಮ್ಯಾ ಯುಕ್ತಂ ಪದ್ಮಾಸನಸ್ಥಯಾ ॥ ೩೭ ॥

ಸುವರ್ಣಪಲಮಾನೇನ ಕಾರ್ಯಮೇತತ್ಸವಿಸ್ತರಮ್ ।
ದುಗ್ಧಕುಂಭೋಪರಿಷ್ಟಾತ್ತು ಸ್ವರ್ಣಪದ್ಮಂ ಪ್ರಕಲ್ಪಯೇತ್ ॥ ೩೮ ॥

---

೩೪. ಆ ದಿನದಲ್ಲಿ ಪರಿಶುದ್ಧಚಿತ್ತದಿಂದ ಕೂಡಿ ಉಪವಾಸದಿಂದಿದ್ದು ನಿರಾತಂಕವಾಗಿ ಈ ವ್ರತವನ್ನು ಆಚರಿಸಬೇಕು.

೩೫. ವ್ರತಿಯಾದವನು ಪ್ರತಿತಿಂಗಳ ಎರಡುಪಕ್ಷದಲ್ಲೂ ಇದೇ ಪ್ರಕಾರ ಜನಾರ್ದನನನ್ನು ಪೂಜಿಸುವೆನು ಎಂಬದಾಗಿ ನಿಶ್ಚಯಿಸಿಕೊಂಡು ವಿಧಿಪ್ರಕಾರ ದಂತಧಾವನಾದಿಗಳನ್ನು ಮಾಡಿಕೊಳ್ಳಬೇಕು. ಬಳಿಕ ತಟಾಕ, ನದಿ, ಪುಷ್ಕರಿಣಿ ಮುಂತಾದ ಜಲಾಶಯಗಳಿಗೆ ಹೋಗಿ ಸ್ನಾನಮಾಡಬೇಕು. ಅದಕ್ಕೆ ಅವಕಾಶವಿಲ್ಲದಿದ್ದರೆ ಮನೆಯಲ್ಲೇ ಆದರೂ ಸ್ನಾನಮಾಡಬೇಕು.

೩೬-೩೭. ಸ್ನಾನಾನಂತರ ನಿತ್ಯಕರ್ಮಾದಿಗಳನ್ನು ನೆರವೇರಿಸಿ ಬಳಿಕ ನೈಮಿತ್ತಿಕ ಕರ್ಮವನ್ನು ಆಚರಿಸುವುದಕ್ಕಾಗಿ ಹಿಂದೆ ಹೇಳಿರುವಂತೆ ಯಥಾವತ್ತಾಗಿ ಪ್ರಯತ್ನದಿಂದ ಕ್ರಮವಾಗಿ ಅಷ್ಟಶಕ್ತಿಯರಿಂದಲೂ ಕಮಲಾಸನೆಯಾದ ಲಕ್ಷ್ಮಿಯಿಂದಲೂ ಸಹಿತನಾಗಿರುವಂತೆ ಸತ್ಯನಾರಾಯಣನ ಪ್ರತಿಮೆಯನ್ನು ಸ್ವರ್ಣನಿಂದ ಮಾಡಿಸಿರಬೇಕು.

೩೮. ಈ ಪ್ರತಿಮೆಯನ್ನು ಒಂದುಪಲತೂಕ ಸುವರ್ಣದಿಂದ ಸ್ಫುಟವಾಗಿರುವಂತೆ ಮಾಡಿಸಬೇಕು. ದುಗ್ಧೋಧಿಯ ಮೇಲೆ ಚಿನ್ನದ ಪದ್ಮವನ್ನು ರಚಿಸಬೇಕು.

**ತತ್ಕರ್ಣಿಕಾಗತಂ ದೇವಂ ಶಕ್ತಿವೃಂದಸಮನ್ವಿತಂ ।**
**ಪೂಜಯೇದ್ವಿಧಿವತ್ಪಶ್ಚಾದ್ಗುರುಮಂತ್ರಪ್ರಚೋದಿತಃ　　॥ ೩೯ ॥**

**ಶುದ್ಧಶುಕ್ಲಾಂಬರಧರೋ ಮಂತ್ರ ಸಂಭಾರಸಂಸ್ಥಿತಃ ।**
**ದೇವ ಕ್ಷೀರಸಮುದ್ರೇಽಸ್ಮಿನ್ಸ್ಫುರತ್ತೇ ಚಂದ್ರೇ ಚ ಪುಷ್ಕರೇ ॥**
**ತತ್ರ ತ್ವಂ ಸತ್ಯಯಾ ಸಾರ್ಧಂ ಸತ್ಯೇಶ ಭವ ಸನ್ನಿಧೌ　　॥ ೪೦ ॥**

**ಓಂ ಕ್ಷೀರಸಾಗರಕಲ್ಲೋಲೇ ಸ್ನಾಹಿ ಪಾಪನಿಷೂದನ ।**
**ಅನೇನ ಭೂತಭವ್ಯೇನ ದತ್ತೇನ ಜಲಬಿಂದುನಾ　　॥ ೪೧ ॥**

**ಹರಸ್ವ ಸರ್ವಂ ದುರಿತಂ ಮಮ ನಾಥ ಜನಾರ್ದನ ।**
**ವಸ್ತ್ರದಾನೇನ ಶುಭ್ರೇಣ ಸತ್ಯೇಶ ಕುರು ಮೇ ಶುಭಂ　　॥ ೪೨ ॥**

---

೩೯. ಅದರ ಕರ್ಣಿಕಾಪ್ರದೇಶದಲ್ಲಿ ಅಷ್ಟಶಕ್ತಿಸಮೇತನೂ ಲಕ್ಷ್ಮೀಸಮೇತನೂ ಆಗಿರುವಂತೆ ರಚಿಸಿದ ನಾರಾಯಣನ ಪ್ರತಿಮೆಯನ್ನು ಗುರುಮುಖದಿಂದ ಉಕ್ತವಾದ ಮಂತ್ರ ಚೋದಿತನಾಗಿ ವಿಧಿಪ್ರಕಾರ ಪೂಜಿಸಲು ಪ್ರಾರಂಭಿಸಬೇಕು.

೪೦. ಸ್ವಾಮಿಯನ್ನು ಆವಾಹನ ಮಾಡುವಾಗ "ಶುದ್ಧಶುಕ್ಲಾಂಬರಧರೋ'' ಎಂಬ ಮಂತ್ರವನ್ನು ಹೇಳಬೇಕು. ಶುಭ್ರವಾದ ಬಿಳಿಯವಸ್ತ್ರವನ್ನು ಧರಿಸಿರುವನೂ ಮಂತ್ರಸಮೂಹದಲ್ಲಿ ನೆಲಸಿರುವವನೂ ಆಕಾಶದಲ್ಲಿ ಪೂರ್ಣಚಂದ್ರನು ಶೋಭಿಸುವಂತೆ ಈ ಕ್ಷೀರಸಮುದ್ರದಲ್ಲಿ ಪ್ರಕಾಶಿಸುವನೂ ಸತ್ಯೇಶನೇ! ನೀನು ಸತ್ಯಭಾಮಾರೂಪಿನ ಲಕ್ಷ್ಮೀಸಮೇತನಾಗಿ ಈ ಪ್ರತಿಮೆಯಲ್ಲಿ ಸಾನ್ನಿಧ್ಯವನ್ನು ಮಾಡು ಎಂಬ ಅರ್ಥದ ಮಂತ್ರದಿಂದ ಆವಾಹನಮಾಡಬೇಕು.

೪೧. ಕ್ಷೀರಸಮುದ್ರದ ಅಲೆಯಲ್ಲಿ ಅವಗಾಹನಮಾಡುವ ಜನಾರ್ದನನೇ! ಈಗ ನಾನು ಸಮರ್ಪಿಸುವ ಭೂತಭವ್ಯವಾದ ಜಲಬಿಂದುವಿನಿಂದ ನನ್ನ ಸಮಸ್ತ ಪಾಪವನ್ನೂ ಪರಿಹಾರಮಾಡು ಎಂಬ ಅರ್ಥವುಳ್ಳ 'ಕ್ಷೀರಸಾಗರಕಲ್ಲೋಲೇ' ಎಂಬ ಮಂತ್ರದಿಂದ ಶುದ್ಧೋದಕಸ್ನಾನಮಾಡಿಸಬೇಕು.

೪೨. 'ಎಲೈ ಸತ್ಯೇಶನೇ! ಈ ಶುಭ್ರವಸ್ತ್ರವನ್ನು ಸಮರ್ಪಣ ಮಾಡುತ್ತೇನೆ. ನನಗೆ ಶುಭವನ್ನುಂಟುಮಾಡು' ಎಂಬ ಅರ್ಥದ ಈ ಮಂತ್ರದಿಂದ ವಸ್ತ್ರವನ್ನು ಸಮರ್ಪಿಸಬೇಕು.

**ಯಜ್ಞೇ ಯೋಗೇ ತಥಾ ಸಾಂಖ್ಯೇ ಪವಿತ್ರಸ್ತ್ವಂ ಸದೋಚ್ಯಸೇ ।**
**ಯಜ್ಞೋಪವೀತದಾನೇನ ಕುರು ಮಾಂ ಸರ್ವಪಾವನಂ ॥ ೪೩ ॥**

**ವಿಲಿಪ್ತಂ ಕರ್ಮಣಾ ಸರ್ವಂ ಸತ್ಯಂ ಸತ್ಯಂ ನ ಕೇನಚಿತ್ ।**
**ಮಮ ಚಂದನಲಿಪ್ತಾಂಗಃ ಸರ್ವಲೇಪಾಪಹೋ ಭವ ॥ ೪೪ ॥**

**ಸತ್ಯನಾಥ ನಮಸ್ತುಭ್ಯಂ ಮೂರ್ತಾಮೂರ್ತಸ್ವರೂಪಿಣೇ ।**
**ವಾಸುದೇವ ನೃಸಿಂಹಾಖ್ಯ ಕಪಿಲಾದಿವ್ಯಭೂಧರ ॥ ೪೫ ॥**

**ವಾರಾಹಾಚ್ಯುತ ಯಜ್ಞೇಶ ಲಕ್ಷ್ಮೀಕಾಂತ ನೃಪೇಶ್ವರ ।**
**ಪಶುಂ ಪುತ್ರಂ ಚ ಮೇ ದೇಹಿ ಪಾಪಶತ್ರೋ ನಿರಂಜನ ॥ ೪೬ ॥**

---

೪೩. ಯಜ್ಞ, ಯೋಗ, ಸಾಂಖ್ಯಾದಿಗಳಲ್ಲಿ ನೀನು ಸದಾ ಪರಿಶುದ್ಧನೆಂದು ಉಕ್ತನಾಗಿದ್ದೀ. ನಾನು ಸಮರ್ಪಿಸುವ ಈ ಉಪವೀತದಿಂದ ನನ್ನನ್ನು ಸರ್ವ ಪ್ರಕಾರದಿಂದಲೂ ಪಾವನಮಾಡು. ಈ ಅರ್ಥವುಳ್ಳ ಮಂತ್ರಪೂರ್ವಕವಾಗಿ ಉಪವೀತವನ್ನು ಸಮರ್ಪಿಸಬೇಕು.

೪೪. ಲೋಕದ ಸಮಸ್ತವ್ಯಕ್ತಿಗಳೂ ತಮ್ಮ ಪ್ರಾರಬ್ಧಕರ್ಮಲೇಪವನ್ನು ಸತ್ಯವಾಗಿ ಹೊಂದಿವೆ. ಅದಿಲ್ಲದವನು ಯಾವನೂ ಇಲ್ಲ. ನಾನು ನಿನಗೆ ಸಮರ್ಪಿಸುವ ಶ್ರೀಗಂಧವನ್ನು ಅಂಗಗಳಿಗೆ ಲೇಪನಮಾಡಿಕೊಂಡು ನನ್ನ ಪಾಪಲೇಪವನ್ನು ಹೋಗಲಾಡಿಸು ಎಂಬರ್ಥದ ಮಂತ್ರದಿಂದ ಗಂಧವನ್ನು ಸಮರ್ಪಿಸಬೇಕು.

೪೫. ಮೂರ್ತಸ್ವರೂಪನೂ ಅಮೂರ್ತಸ್ವರೂಪನೂ ಆದ ಸತ್ಯನಾಥನೇ ! ವಸುದೇವಪುತ್ರನೇ ! ನೃಸಿಂಹನೆಂಬ ಹೆಸರುಳ್ಳವನೇ ! ಕಪಿಲನಾಮಕನೇ ! ದಿವ್ಯವಾದ ಭೂಮಿಯನ್ನು ಧರಿಸಿದ

೪೬. ವರಾಹಸ್ವರೂಪನೇ ! ಅಚ್ಯುತನೇ ! ಯಜ್ಞಾಧಿಪನೇ ! ಲಕ್ಷ್ಮೀಕಾಂತನೇ ! ರಾಜಾಧಿರಾಜನೇ ! ಪಾಪಶತ್ರುವೇ ! ನಿರಂಜನನೇ !

**ಸಂಕರ್ಷಣ ಮಹಾವೀರ್ಯ ಸರ್ವೇಶಾಮಿತವಿಕ್ರಮ ।**
**ಅನಿರುದ್ಧೇಂದ್ರಗೋವಿಂದ ಧೃತಚಕ್ರ ನಮೋಽಸ್ತುತೇ ॥ ४೭ ॥**
**(ಇತಿ ಪೂಜಾಮಂತ್ರಃ)**

**ಕೃಷ್ಣಕೃಷ್ಣ ಪ್ರಭೋ ರಾಮರಾಮ ಕೃಷ್ಣ ವಿಭೋ ಹರೇ ।**
**ತ್ರಾಹಿ ಮಾಂ ಸರ್ವದುಃಖೇಭ್ಯೋ ರಮಯಾ ಸಹ ಮಾಧವ ॥ ४೮ ॥**

**ಪೂಜಾ ಚೇಯಂ ಮಯಾ ದತ್ತಾ ಪಿತಾಮಹ ಜಗದ್ಗುರೋ ।**
**ಗೃಹಾಣ ಜಗದೀಶಾನ ನಾರಾಯಣ ನಮೋಽಸ್ತು ತೇ ॥ ४೯ ॥**

**ಧನಂ ಗುಪ್ತಂ ಮಹೀಪಾಲ ಸರ್ವಪಾಪಾಪನುತ್ತಯೇ ।**
**ಏಕಸ್ಯೈವ ತು ವಿಪ್ರಸ್ಯ ಯಾವದ್ವರ್ಷಂ ಸಮರ್ಪಯೇತ್ ॥ ೫೦ ॥**

---

४೭. "ಸಂಕರ್ಷಣ ನಾಮಕನೇ! ಮಹಾಬಲಶಾಲಿಯೇ! ಸರ್ವೇಶನೇ! ಅಮಿತವಿಕ್ರಮನೇ! ಅನಿರುದ್ಧನಾಮಕನೇ! ಇಂದ್ರಸದೃಶನೇ! ಗೋವಿಂದನೇ! ಚಕ್ರಾಯುಧಧಾರಿಯೇ! ನಿನಗೆ ನಮಸ್ಕರಿಸುವೆನು. ನನಗೆ ಪಶುಸಮೃದ್ಧಿಯನ್ನೂ ಪುತ್ರಸಮೃದ್ಧಿಯನ್ನೂ ಕರುಣಿಸು" ಎಂಬದಾಗಿ ಪ್ರಾರ್ಥಿಸಬೇಕು. ಇದು ಪೂಜಾಮಂತ್ರ.

४೮. "ರಮಾಸಹಿತನಾದ ಮಾಧವನೇ! ಪ್ರಭುವಾದ ಕೃಷ್ಣನೇ! ಹರಿಸ್ವರೂಪನಾದ ರಾಮನೇ! ನನ್ನನ್ನು ಸಮಸ್ತ ದುಃಖಗಳಿಂದಲೂ ಉದ್ಧಾರ ಮಾಡಿ ರಕ್ಷಿಸು.

४೯. ಜಗದ್ಗುರುವೇ! ಪಿತಾಮಹನೇ! ಜಗದೀಶನಾದ ನಾರಾಯಣನೇ! ನಾನು ಮಾಡಿದ ಈ ಪೂಜೆಯನ್ನು ಸ್ವೀಕರಿಸು. ನಿನಗೆ ನಮಸ್ಕಾರ" ಎಂದು ಪ್ರಾರ್ಥಿಸಬೇಕು.

೫೦. ಅಯ್ಯಾ ರಾಜನೇ! ಕೇಳು. ಸಮಸ್ತ ಪಾಪಗಳ ಪರಿಹಾರಾರ್ಥವಾಗಿ ವರ್ಷ ಪೂರೈಸುವವರೆಗೂ ದಿನಪ್ರತಿಯಲ್ಲೂ ಒಬ್ಬೊಬ್ಬ ಬ್ರಾಹ್ಮಣನಿಗೆ ಗುಪ್ತವಾದ ಧನಧಾನ್ಯವನ್ನು ಸಮರ್ಪಿಸಬೇಕು.

ದಾನಂ ದದ್ಯಾನ್ಮಹಾರಾಜ ಹ್ಯಶಕ್ತ್ಯಾ ತದಭಾವತಃ ।
ಪಕ್ಷೇ ಪಕ್ಷೇ ಪ್ರಕರ್ತವ್ಯಂ ವ್ರತಮೇತನ್ಮಹತ್ತರಂ ॥ ೫೧ ॥

ಸಂವತ್ಸರೇ ತತಃ ಪೂರ್ಣೇ ಕುರ್ಯಾದುದ್ಯಾಪನಂ ಬುಧಃ ।
ಪೂರ್ವವತ್ಪೂಜಯೇದ್ದೇವಂ ಬಹುಸಂಭಾರವಿಸ್ತರೈಃ ॥ ೫೨ ॥

ಅನುಜ್ಞಾಂ ಪ್ರಾರ್ಥಯೇದ್ವಿಪ್ರಾನ್ಪಾಪಧ್ವಂಸೋ ಮಮಾಸ್ತು ವೈ ।
ಪಾಪಧ್ವಂಸೋಽಸ್ತು ಸತತಂ ತವೇತಿ ಚ ದ್ವಿಜೋ ವದೇತ್ ॥ ೫೩ ॥

ತತಃ ಸರ್ವಂ ಬ್ರಾಹ್ಮಣಾಯ ಸಮರ್ಪ್ಯ ಚ ಕ್ಷಮಾಪಯೇತ್ ।
ಅಸ್ಮಿನ್ವ್ರತೇ ಕೃತೇ ರಾಜನ್ಭವೇದ್ಬಹುಫಲೋದಯಃ ॥ ೫೪ ॥

ಯತ್ಫಲಂ ಸರ್ವವೇದೇಷು ಸರ್ವತೀರ್ಥೇಷು ಯತ್ಫಲಂ ।
ತತ್ಫಲಂ ಕೋಟಿಗುಣಿತಂ ವ್ರತಸ್ಯಾಸ್ಯ ನಿಷೇವಣಾತ್ ॥ ೫೫ ॥

---

೫೧. ಅದನ್ನು ನಡೆಸಲು ದೇಹಶಕ್ತಿ ಸಾಲದಿದ್ದರೂ ಅಥವಾ ಧನಾಭಾವವೇ ಆಗಿದ್ದರೂ ಪ್ರತಿಪಕ್ಷದಲ್ಲೂ ಈ ಮಹಾವ್ರತವನ್ನು ಮಾಡಬೇಕು. ಪ್ರಾಜ್ಞನಾದವನು ಒಂದುವರ್ಷ ಆಚರಿಸಿದ ಮೇಲೆ ಉಧ್ಯಾಪನೆ ಮಾಡಬೇಕು.

೫೨. ಆಗ ಹಿಂದೆ ಹೇಳಿದ ರೀತಿ ಮಹಾ (ಸಂಭಾರ) ಸಲಕರಣೆಯಿಂದ ಸಂಪಾದಿಸಿದ ವಸ್ತುಗಳನ್ನು ವಿಪ್ರರಿಗೆ ಅರ್ಪಿಸಿ ಪೂಜಿಸಬೇಕು.

೫೩. ಈ ಪೂಜೆಯಿಂದ ನನ್ನ ಪಾಪವೆಲ್ಲಾ ಧ್ವಂಸವಾಗುವಂತೆ ಅನುಗ್ರಹಿಸಿ ಎಂಬದಾಗಿ ವಿಪ್ರರನ್ನು ಕೇಳಿಕೊಳ್ಳಬೇಕು. ದಾನಪರಿಗ್ರಹಿಸಿದಾಗ ವಿಪ್ರನು " ಸಂತತವಾಗಿ ನಿನ್ನ ಪಾಪವೆಲ್ಲವೂ ಧ್ವಂಸವಾಗಲಿ " ಎಂಬದಾಗಿ ಪ್ರತಿವಚನ ಹೇಳಬೇಕು.

೫೪. ಬ್ರಾಹ್ಮಣನಿಗೆ ಸಮರ್ಪಿಸಿದ ಅನಂತರ ಕ್ಷಮಾಪ್ರಾರ್ಥನೆ ಮಾಡಬೇಕು. ಎಲೈ ರಾಜನೇ ! ಈ ಪ್ರಕಾರ ಸಾಂಗವಾಗಿ ವ್ರತಮಾಡಿದ್ದೇ ಆದರೆ ವ್ರತಿಯು ಬಹು ಪ್ರಕಾರವಾದ ಫಲೋದಯವುಳ್ಳವನಾಗುವನು.

೫೫. ಸಮಸ್ತ ವೇದಗಳನ್ನು ಅಧ್ಯಯನ ಮಾಡಿದರೆ ಬರುವ ಸಾಮಾನ್ಯವಾದ ಫಲವೂ, ಸಮಸ್ತ ಪುಣ್ಯಕ್ಷೇತ್ರಗಳಲ್ಲಿ ಸ್ನಾನಮಾಡಿದರೆ ಬರುವ ಸಾಮಾನ್ಯ ಫಲವೂ, ಈ ವ್ರತವನ್ನು ಆಚರಿಸುವುದರಿಂದ ಕೋಟಿಗುಣ ಅಧಿಕವಾಗಿ ಬರುವುದು.

**ಇಹಲೋಕೇ ಧನಂ ಧಾನ್ಯಂ ಪುತ್ರಮಿತ್ರಸುಖಾಂದಿಕಂ ।**
**ಪ್ರಾಪ್ನೋತಿ ಪುರುಷಃ ಸಮ್ಯಗ್ವಿದ್ಯಾರೋಗ್ಯಕಲಾಯುಧಂ ॥ ೫೬ ॥**

**ಧರ್ಮಮರ್ಥಂ ಚ ಕಾಮಂ ಚ ಮೋಕ್ಷಂ ಚ ನೃಪಸತ್ತಮ ।**
**ಲಭತೇ ನಾತ್ರ ಸಂದೇಹೋ ಬ್ರಹ್ಮಣೋ ವಚನಂ ಯಥಾ ॥ ೫೭ ॥**

**ಯಃ ಪಠೇಚ್ಛೃಣುಯಾದ್ವಾಪಿ ಸರ್ವಪಾಪೈಃ ಪ್ರಮುಚ್ಯತೇ ।**
**ಯಃ ಕುರ್ಯಾತ್ಪುನರೇತದ್ಧಿ ಸೋಽನಂತಫಲಭಾಗ್ಭವೇತ್ ॥ ೫೮ ॥**

**ಅಶಕ್ತಸ್ತು ತಥಾ ಶಕ್ತೋ ವಿತ್ತಶಾಠ್ಯವಿವರ್ಜಿತಃ ।**
**ವ್ರತಂ ಕುರ್ವನ್ನರೋ ಭಕ್ತ್ಯಾ ಲಭತೇ ಶಾಶ್ವತಂ ಪದಂ ॥ ೫೯ ॥**

---

೫೬. ಇದನ್ನು ಆಚರಿಸಿದವನಿಗೆ ಇಹಲೋಕದಲ್ಲಿ ಧನ, ಧಾನ್ಯ, ಪುತ್ರರು, ಮಿತ್ರರು, ಇವರ ಸುಖವೂ, ವಿದ್ಯಾ, ಆರೋಗ್ಯ, ಕಲಾಕೌಶಲ್ಯಾದಿಗಳೂ, ಅಭಿವೃದ್ಧಿಯಾಗುವುವು.

೫೭. ಅಯ್ಯಾ ರಾಜಶ್ರೇಷ್ಠನೇ! ಈ ವ್ರತದಿಂದ ಧರ್ಮಾರ್ಥಕಾಮ ಮೋಕ್ಷಗಳೆಂಬ ಚತುರ್ವಿಧಫಲಗಳೂ ಲಭಿಸುತ್ತವೆ. ಇದರಲ್ಲಿ ಸಂಶಯವಿಲ್ಲ ವೆಂದು ಬ್ರಹ್ಮನೇ ಹೇಳಿದ್ದಾನೆ.

೫೮. ಈ ವ್ರತಮಹಾತ್ಮೆಯನ್ನು ಓದಿದವನೂ, ಶ್ರವಣಮಾಡಿದವನೂ, ಸಮಸ್ತ ಪಾಪಗಳಿಂದ ಬಿಡುಗಡೆ ಹೊಂದುತ್ತಾನೆ. ಒಂದು ವರ್ಷ ಆಚರಿಸಿ ಆಯಿತೆಂದು ಬಿಟ್ಟುಬಿಡದೆ ಪುನಃ ಇದೇ ವ್ರತವನ್ನು ಮಾಡಿದವನು ಅನಂತಹಾದ ಫಲಕ್ಕೆ ಭಾಗಿಯಾಗುತ್ತಾನೆ.

೫೯. ಅನುಕೂಲವಿದ್ದರೂ ಕಾಟಾಚಾರಕ್ಕಾಗಿ ಮಾಡದೆ ಅಶಕ್ತನಾಗಲಿ ಶಕ್ತನಾಗಲಿ ಸರಿಯಾಗಿ ವ್ರತಾಚರಣ ಮಾಡಿದರೆ ಶಾಶ್ವತವಾಗಿ ಪದವಿಯನ್ನು ಪಡೆಯುತ್ತಾನೆ.

ಕೃತೇ ವೈ ಕ್ರಿಯಮಾಣೇ ತು ಕರ್ತಾ ಫಲಮವಾಪ್ನುಯಾತ್ ।
ಅಪರಾಧಶತಾಘೌಘಂ ವ್ರತೇನಾನೇನ ನಾಶಯೇತ್ ॥ ೬೦ ॥

ಇತಿ ಶ್ರೀಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ಅಪರಾಧಶತವ್ರತ ವರ್ಣನಂ ನಾಮ ಷಟ್ಚತ್ವಾರಿಂಶದುತ್ತರಶತತಮೋಽಧ್ಯಾಯಃ.



೬೦. ನೂರಾರು ಅಪರಾಧಗಳನ್ನು ಮತ್ತು ನಾನಾ ಪಾಪಗಳ ಸಮೂಹಗಳನ್ನು ಹಿಂದೆ ಆಚರಿಸಿದ್ದರೂ ಮುಂದೆ ಆಚರಿಸುವುದಾದರೂ ಅಪರಾಧಶತ ವ್ರತಾಚರಣ ಪ್ರಭಾವದಿಂದ ಅವೆಲ್ಲವೂ ನಾಶಹೊಂದುವುವು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಅಪರಾಧಶತವ್ರತ ವರ್ಣನೆಯೆಂಬ ನೂರನಲವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೆ

## ಉತ್ತರಪರ್ವಣಿ

## ಸಪ್ತಚತ್ವಾರಿಂಶದುತ್ತರಶತತಮೋಽಧ್ಯಾಯಃ

॥ ಶ್ರೀಕೃಷ್ಣ ಉವಾಚ ॥

ಶ್ವೇತದ್ವೀಪೇ ಸುಖಾಸೀನಂ ದೇವದೇವಂ ಜಗತ್ಪ್ರಭುಂ ।
ವಾಸುದೇವಂ ಜಗನ್ನಾಥಂ ಸ್ಥಿತಿಸಂಯಮಕಾರಕಂ ॥ ೧ ॥

ಪರಾವರಾಣಾಂ ಸ್ರಷ್ಟಾರಂ ಪುರಾಣಂ ಪರಮವ್ಯಯಂ ।
ಆದಿದೇವಂ ಜಗನ್ನಾಥಂ ಜಗತಃ ಕಾರಣಾತ್ಮಕಂ ॥ ೨ ॥

ಪ್ರಣಿಪತ್ಯ ಮಹಾದೇವಂ ಚರಾಚರಗುರುಂ ಹರಿಂ ।
ಲಕ್ಷ್ಮೀಃ ಪ್ರೋವಾಚ ರಾಜೇಂದ್ರ ಪಾದಸಂವಾಹನೇ ಸ್ಥಿತಾ ॥ ೩ ॥

---

### ನೂರನಲವತ್ತೇಳನೆಯ ಅಧ್ಯಾಯ

೧-೩. ಶ್ರೀಕೃಷ್ಣನು ಹೇಳುತ್ತಾನೆ—ಎಲೈ ರಾಜೇಂದ್ರನೇ! ದೇವದೇವನೂ ಜಗತ್ಪ್ರಭುವೂ ವಾಸುದೇವನೂ ಲೋಕೇಶನೂ ಸ್ಥಿತಿ, ಸಂಯಮ, ಇವನ್ನು ಮಾಡತಕ್ಕವನೂ, ಚರಾಚರವಸ್ತುಗಳನ್ನು ಸೃಷ್ಟಿಮಾಡತಕ್ಕವನೂ ಪುರಾತನನೂ ಶ್ರೇಷ್ಠನೂ, ನಾಶರಹಿತನೂ, ಆದಿದೇವನೂ, ಜಗನ್ನಾಥನೂ, ಜಗತ್ತಿಗೆ ಕಾರಣನೂ, ಚರಾಚರವಸ್ತುಗಳಿಗೆ ಗುರುವೂ, ಆದ ಶ್ರೀಹರಿಯು ಒಂದಾನೊಂದುದಿನ ಶ್ವೇತದ್ವೀಪದಲ್ಲಿ ಸುಖವಾಗಿ ಕುಳಿತಿರುವಾಗ ಲಕ್ಷ್ಮಿಯು ನಮಸ್ಕಾರಮಾಡಿ ಆತನ ಪಾದಗಳನ್ನು ಒತ್ತುತ್ತಾ ಕುಳಿತುಕೊಂಡು ಈ ಪ್ರಕಾರ ಎಂದಳು.

ಭಗವರ್ ದೇವದೇವೇಶ ಭಕ್ತಾನಾಮನುಕಂಪಕ ।
ಪ್ರಷ್ಟವ್ಯಂ ಕಿಂಚಿದಿಚ್ಛಾಮಿ ಪ್ರಷ್ಟುಂ ಪ್ರಶ್ನವಿದಾಂ ವರ ॥ ೪ ॥

ಪ್ರಕುರುಷ್ವ ಮಹಾಭಾಗ ದಯಾಂ ಕೃತ್ವಾ ಮಮೋಪರಿ ।
ವ್ರತಂ ಕಿಂಚಿತ್ಕಥಯ ಮೇ ರೂಪಸೌಭಾಗ್ಯದಾಯಕಂ ॥ ೫ ॥

ಉತ್ತಮಂ ಸರ್ವವರ್ಣಾನಾಂ ವ್ರತಾನಾಮಪಿ ಚೋತ್ತಮಂ ।
ಕೃತೇನ ಯೇನ ದೇವೇಶ ಸರ್ವತೀರ್ಥಫಲಂ ಲಭೇತ್ ॥ ೬ ॥

॥ ವಿಷ್ಣುರುವಾಚ ॥

ಗೃಹಸ್ಥಾಶ್ರಮಾಣಾಂ ಚ ವರ್ಣಾನಾಂ ಬ್ರಾಹ್ಮಣೋ ಯಥಾ ।
ಯಥಾ ನದೀಷು ಸರ್ವಾಸು ಜಾಹ್ನವೀ ಲೋಕವಿಶ್ರುತಾ ॥ ೭ ॥

---

೪. ಎಲೈ ದೇವದೇವನೇ! ಭಕ್ತರಲ್ಲಿ ಕೃಪೆಮಾಡತಕ್ಕವನೇ! ಪ್ರಶ್ನಜ್ಞರಲ್ಲಿ ಶ್ರೇಷ್ಠನೇ! ಒಂದು ಸ್ವಲ್ಪ ವಿಚಾರವನ್ನು ಅವಶ್ಯವಾಗಿ ಪ್ರಶ್ನೆಮಾಡಬೇಕೆಂದಿದೇನೆ.

೫. "ಪೂಜ್ಯನಾದ ಸ್ವಾಮಿಯೇ! ಸಮಸ್ತವರ್ಣದವರೂ ಆಚರಿಸಬಹುದಾದುದೂ, ವ್ರತಮಾಡಿದವನಿಗೆ ರೂಪಸೌಭಾಗ್ಯಗಳನ್ನು ಕೊಡತಕ್ಕದ್ದೂ, ವ್ರತಗಳಲ್ಲೆಲ್ಲಾ ಉತ್ತಮವೆನಿಸಿದುದೂ ಆದ ಒಂದು ವ್ರತವನ್ನು ನನ್ನಲ್ಲಿ ಕೃಪೆಮಾಡಿ ಹೇಳಬೇಕು.

೬. ಅದನ್ನು ಆಚರಿಸಿದರೆ ಸಮಸ್ತ ಪುಣ್ಯತೀರ್ಥಗಳ ಯಾತ್ರೆಮಾಡಿದ ಫಲವು ಲಭಿಸುವಂತಿರಬೇಕು. ಅಂತಹ ವ್ರತವಾವುದೆಂಬುದನ್ನು ಹೇಳು" ಎಂದು ಕೇಳಿಕೊಂಡಳು.

೭. ವಿಷ್ಣುವು ಹೇಳುತ್ತಾನೆ—ಚಾತುರ್ವರ್ಣ್ಯಗಳಲ್ಲಿ ಬ್ರಾಹ್ಮಣನು ಹೇಗೆ ಶ್ರೇಷ್ಠನೋ ಆಶ್ರಮಗಳಲ್ಲಿ ಗೃಹಸ್ಥಾಶ್ರಮ ಹೇಗೆ ಶ್ರೇಷ್ಠವೋ ಸಮಸ್ತ ನದೀವೃಂದದಲ್ಲಿ ಲೋಕಪ್ರಸಿದ್ಧಳಾದ ಗಂಗೆ ಹೇಗೆ ಶ್ರೇಷ್ಠಳೋ,

ಪ್ರದಾನಾಮುಧಧಿಃ ಶ್ರೇಷ್ಠೋ ದೇವಾನಾಂ ವಿಷ್ಣುರುತ್ತಮಃ ।
ಸ್ತ್ರೀಣಾಂ ದೇವೀ ಯಥಾ ಲಕ್ಷ್ಮೀಸ್ತಥೇದಂ ವ್ರತಮುತ್ತಮಂ ॥ ೮ ॥

ನ ಗಂಗಾ ನ ಕುರುಕ್ಷೇತ್ರಂ ನ ಕಾಶೀ ನ ಚ ಪುಷ್ಕರಂ ।
ಪಾವನಾನಿ ಮಹಾಭಾಗೇ ಯಥೇದಂ ವ್ರತಮುತ್ತಮಂ ॥ ೯ ॥

ಗೌರ್ಯಾ ದೇವ್ಯಾ ಕೃತಂ ಪೂರ್ವಂ ಶಂಕರೇಣ ಮಹಾತ್ಮನಾ ।
ರಾಮೇಣ ಸೀತಯಾ ಸಾರ್ಧಂ ರಾಜ್ಯಂ ಪ್ರಾಪ್ಯ ಕೃತಂ ಪುರಾ ॥ ೧೦ ॥

ದಮಯಂತೀವಿಯೋಗೇನ ನಲೇನ ತು ತಥಾ ಕೃತಂ ।
ಕೃಷ್ಣಯಾ ಸಹಿತೈಃ ಪಾರ್ಥ ಪಾಂಡವೈರ್ವನವಾಸಿಭಿಃ ॥ ೧೧ ॥

ಕೃತಮೇತದ್ವ್ರತಂ ಭದ್ರೇ ಸ್ವರ್ಗಮೋಕ್ಷಪ್ರದಾಯಕಂ ।
ರಂಭಯಾ ಮೇನಯಾ ವಾಪಿ ಪೌಲೋಮ್ಯಾ ಸತ್ಯಭಾಮಯಾ ॥ ೧೨ ॥

---

೮. ಮಡುಗಳಲ್ಲಿ ಸಮುದ್ರ ಹೇಗೆ ಶ್ರೇಷ್ಠವೋ, ದೇವತೆಗಳಲ್ಲಿ ಪರಮ ಪುರುಷನಾದ ವಿಷ್ಣು ಹೇಗೆ ಶ್ರೇಷ್ಠನೋ, ಸ್ತ್ರೀಯರಲ್ಲಿ ಲಕ್ಷ್ಮಿ ಹೇಗೆ ಶ್ರೇಷ್ಠಳೋ, ಆ ಪ್ರಕಾರ ಈ ಕಾಂಚನಪುರಿವ್ರತವು ವ್ರತಗಳಲ್ಲೆಲ್ಲಾ ಉತ್ತಮವಾದ ವ್ರತ.

೯. ಎಲೌ ಮಹಾಭಾಗೆ! ಈ ವ್ರತದ ಉತ್ತಮತೆಗೆ ಗಂಗೆಯ ಪವಿತ್ರತೆಯೂ ಸಮವಲ್ಲ, ಕುರುಕ್ಷೇತ್ರ ದರ್ಶನವೂ ಇದರ ಸಮಾನ ಪವಿತ್ರವಲ್ಲ, ಕಾಶೀಯಾತ್ರೆಯೂ ಇದರಷ್ಟು ಶ್ರೇಷ್ಠವಲ್ಲ. ಪುಷ್ಕರಕ್ಷೇತ್ರವಾಸವೂ ಇದರ ಸಮಾನ ಪವಿತ್ರವಲ್ಲ.

೧೦. ಬಹು ಹಿಂದಿನಕಾಲದಲ್ಲಿ ಶಂಕರನು ಗೌರೀದೇವಿ ಸಮೇತನಾಗಿ ಈ ವ್ರತವನ್ನು ಮಾಡಿದನು. ಸೀತಾಸಮೇತನಾದ ಶ್ರೀರಾಮನು ಈ ವ್ರತವನ್ನಾಚರಿಸಿ ರಾಜ್ಯವನ್ನು ಪಡೆದನು.

೧೧. ದಮಯಂತಿಯ ಅಗಲಿಕೆಯುಂಟಾದಾಗ ನಳನು ಈ ವ್ರತವನ್ನಾಚರಿಸಿ ಮತ್ತೆ ಅವಳನ್ನು ಪಡೆದನು. ಅರಣ್ಯವಾಸ ಕಾಲದಲ್ಲಿ ಪಾಂಡವರು ದ್ರೌಪದೀ ಸಮೇತ ಸ್ವರ್ಗಲೋಕ ಮೋಕ್ಷಪದವಾದ ಈ ವ್ರತವನ್ನು ಮಾಡಿದರು.

೧೨-೧೩. ಎಲೌ ಮಂಗಳಸ್ವರೂಪಿಯೇ ! ರಂಭೆ, ಮೇನಕೆ, ಪೌಲೋಮಿ, ಸತ್ಯಭಾಮೆ, ಶಾಂಡಿಲಿ, ಅರುಂಧತಿ, ಊರ್ವಶಿ, ದೇವದತ್ತೆ, ಇವರುಗಳು

ಶಾಂಡಿಲ್ಯಾ ಚ್ಯಾಪರುಂದತ್ಯಾ ಉರ್ವಶ್ಯಾ ದೇವದತ್ತಯಾ ।
ಕೃತಂ ವ್ರತಮಿದಂ ಭದ್ರಂ ಸೌಭಾಗ್ಯ ಸುಖಕಾಮ್ಯಯಾ ॥ ೧೩ ॥

ಪಾತಾಲೇ ನಾಗಕನ್ಯಾಭಿಃ ಕೃತಮೇತತ್ಸುಶೋಭನಂ ।
ಗಾಯತ್ರ್ಯಾ ಚ ಸರಸ್ವತ್ಯಾ ಸಾವಿತ್ರ್ಯಾ ಬ್ರಹ್ಮಭಾರ್ಯಯಾ ॥ ೧೪ ॥

ಅನ್ಯಾಭಿಃ ಸರ್ವನಾರೀಭಿಃ ಸರ್ವಕಾಮಫಲೇಪ್ಸುಭಿಃ ।
ತಸ್ಮಾತ್ತೇಽಹಂ ಪ್ರವಕ್ಷ್ಯಾಮಿ ಸರ್ವಪಾಪಪ್ರಣಾಶನಂ ॥ ೧೫ ॥

ವಸುಪ್ರೀತಿಕರಂ ರಮ್ಯಂ ವ್ರತಾನಾಂ ಪರಮಂ ಶೃಣು ।
ಬ್ರಹ್ಮಹಾ ಮುಚ್ಯತೇ ಪಾಪಾತ್ಸುರಾಪೋ ವಸುಹಾರಕಂ ॥ ೧೬ ॥

---

ಸುಖ ಸೌಖ್ಯ ಭಾಗ್ಯ ಇವು ಪ್ರಾಪ್ತಿಯಾಗಬೇಕೆಂಬ ಅಪೇಕ್ಷೆಯಿಂದ ಈ ವ್ರತವನ್ನು ಆಚರಿಸಿದರು.

೧೪. ಪಾತಾಳಲೋಕದ ನಾಗಕನ್ಯೆಯರೂ ಶುಭಕರವಾದ ಈ ವ್ರತವನ್ನು ಆಚರಿಸಿದ್ದಾರೆ. ಬ್ರಹ್ಮಪತ್ನಿಯಾದ ಸಾವಿತ್ರಿ, ಗಾಯತ್ರಿ, ಸರಸ್ವತಿ ಇವರೂ ಇತರ ಸಮಸ್ತ ನಾರೀಮಣಿಯರೂ ತಮ್ಮ ಇಷ್ಟಾರ್ಥ ಪ್ರಾಪ್ತಿಯಾಗಲೆಂಬ ಆಶೆಯಿಂದ ಈ ವ್ರತವನ್ನಾಚರಿಸಿದರು.

೧೫. ಸಮಸ್ತ ಪಾಪಗಳನ್ನೂ ಹೋಗಲಾಡಿಸತಕ್ಕದ್ದೂ, ವಸುಗಳಿಗೆ ಮನಃಪ್ರಿಯವಾದುದೂ, ವ್ರತಗಳಲ್ಲೆಲ್ಲಾ ಶ್ರೇಷ್ಠವೆನಿಸಿದುದೂ ಆದ ಈ ವ್ರತವನ್ನು ನಿನಗೆ ಹೇಳುವೆನು ಕೇಳು.

೧೬. ಬ್ರಹ್ಮಹತ್ಯ ಮಾಡಿದವನು, ಮದ್ಯಪಾನ ಮಾಡಿದವನು, ಸ್ವರ್ಣವನ್ನು ಅಪಹರಿಸಿದವನು, ಗುರುಪತ್ನಿಯನ್ನು ಆಕ್ರಮಿಸಿದವನು, ಇವರ ಸಹವಾಸಿ ಈ ಪಂಚಮಹಾಪಾತಕಿಗಳು ಈ ವ್ರತಾಚರಣೆಮಾಡಿದರೆ ಆ ಪಾಪದಿಂದ ವಿಮುಕ್ತರಾಗುವರು.

**ಗುರುಭಾರ್ಯಾಭಿಗಾಮೀ ಚ ಹ್ಯೇತೇಷಾಂ ಸಂಗಮೀ ಚ ಯಃ ।**
**ಮಾನಕೂಟಂ ತುಲಾಕೂಟಂ ಕನ್ಯಾವೃತ್ತಿರ್ಗವಾಂ ವ್ರತೀ ॥ ೧೭ ॥**

**ಅಗಮ್ಯಾಗಮನೋ ಯಸ್ತು ಮಾಂಸಾಶೀ ವೃಷಲೀಪತಿಃ ।**
**ಕುಂಡಾಗ್ನಿಭೋಜೀ ಯಸ್ತು ಸ್ಯಾದ್ಭೂಮಿಹರ್ತಾ ತಥೈವ ಚ ॥ ೧೮ ॥**

**ಏಭಿಃ ಸರ್ವೈರ್ಮಹಾಪಾಪೈರ್ಮುಚ್ಯತೇ ನಾತ್ರಸಂಶಯಃ ।**
**ಏಭಿಃ ಸ್ಯಾನ್ನರನಾರೀಭಿಃ ಕರ್ತವ್ಯಂ ವ್ರತಮುತ್ತಮಂ ॥ ೧೯ ॥**

**ಅತಸ್ತೇಽಹಂ ವಿಧಿಂ ವಕ್ಷ್ಯೇ ವಿಧಾನಮವಧಾರಯ ।**
**ಕಾಂಚನಾಖ್ಯಾ ಪುರೀನಾಮವ್ರತಂ ತ್ರೈಲೋಕ್ಯವಿಶ್ರುತಂ ॥ ೨೦ ॥**

**ಯಃ ಕರೋತಿ ನರೋ ದೇವಿ ನಾರೀ ವಾ ಭಕ್ತಿಸಂಯುತಾ ।**
**ತಸ್ಯ ಪುತ್ರಾಶ್ಚ ಪೌತ್ರಾಶ್ಚ ಜಾಯತೇ ವಿಪುಲಂ ಧನಂ ॥ ೨೧ ॥**

---

೧೭. ಮಾನಕೂಟಂ, ತುಲಾಕೂಟಂ, ಕನ್ಯಾವೃತ್ತಿ, ಗೋವೃತ್ತಿ, ಅಗಮ್ಯಾಗಮನ, ಮಾಂಸಸೇವನ, ವೃಷಲೀಸಂಗ ಎಂಬ ಈ ಮಹಾಪಾಪಗಳು ಸಹ ಇದರಿಂದ ನಾಶವಾಗುವುವು.

೧೮. ಕುಂಡಾಗ್ನಿಯಲ್ಲಿ ಪಾಕಮಾಡುವುದು, ಭೂಮಿಯನ್ನು ಹರಣ ಮಾಡುವುದು, ಮುಂತಾದ ಮಹಾಪಾಪ ಸಂಘಟಿಸಿದ್ದರೂ ಈ ವ್ರತವನ್ನಾಚರಿ ಸಿದರೆ ಆ ಪಾಪಗಳಿಂದ ಬಿಡುಗಡೆಹೊಂದುವುದರಲ್ಲಿ ಸಂಶಯವಿಲ್ಲ.

೧೯. ಆ ಪ್ರಕಾರವಾದ ಪಾಪಸಂಘಟನೆ ಹೊಂದಿದ ಸ್ತ್ರೀಯಾಗಲಿ ಪುರುಷ ನಾಗಲಿ ಉತ್ತಮವಾದ ಈ ವ್ರತವನ್ನು ಆಚರಿಸುವಬೇಕಾದ್ದು ಅವರ ಕರ್ತವ್ಯ ವಾಗಿದೆ.

೨೦. ಆದುದರಿಂದ ಈ ವ್ರತವನ್ನು ಆಚರಿಸುವ ವಿಧಾನವನ್ನು ಹೇಳು ತ್ತೇನೆ ಅದನ್ನು ಗಮನವಿಟ್ಟು ಕೇಳು. ಕಾಂಚನಪುರಿಯೆಂಬ ವ್ರತವು ಮೂರು ಲೋಕಗಳಲ್ಲಿ ಪ್ರಸಿದ್ಧವಾದುದು.

೨೧. ಪುರುಷನಾಗಲಿ ಸ್ತ್ರೀಯಾಗಲಿ ಇದನ್ನು ಭಕ್ತಿಯಿಂದ ಆಚರಿಸಿದರೆ ಅವರಿಗೆ ಮಕ್ಕಳೂ ಮಮ್ಮಕ್ಕಳೂ ಜನಿಸುವರಲ್ಲದೆ ಸಂಪದಭಿವೃದ್ಧಿಯೂ ಉಂಟಾಗುವುದು.

ತಸ್ಮಿನ್ಮಾಸೇ ಚ ಕರ್ತವ್ಯಂ ವ್ರತಮೇತಚ್ಚ ಸುಂದರಿ ।
ತಸ್ಮಿನ್ಮಾಸೇ ಚ ಕರ್ತವ್ಯಾ ಕಾಂಚನಾಖ್ಯಾ ಪುರೀ ಶುಭಾ ॥ ೨೨ ॥

ಶುಕ್ಲಕೃಷ್ಣತೃತೀಯಾಯಾಮೇಕಾದಶ್ಯಾಂ ಚ ಪೂರ್ಣಿಮಾ ।
ಸಂಕ್ರಾಂತಿರ್ವಾ ಮಹಾಭಾಗೇ ಕುಹೂರ್ವಾ ಚಾಷ್ಟಮಿೀ ತಿಥಿಃ ॥೨೩॥

ಪರ್ವಸ್ವನ್ಯೇಷು ಸರ್ವೇಷು ದಾತವ್ಯಾ ಕಾಂಚನೀ ಪುರೀ ।
ವ್ರತೀ ಸ್ನಾತ್ವಾ ತು ಪೂರ್ವಾಹ್ಣೇ ನದ್ಯಾದೌ ವಿಮಲೇ ಜಲೇ ॥ ೨೪ ॥

ಮೃತ್ತಿಕಾಲಂಭನಂ ಕಾರ್ಯಂ ಮಂತ್ರೇಣಾನೇನ ಸುವ್ರತೇ ।
ಉದ್ಧೃತಾಸಿ ಯಥಾಪೂರ್ವಂ ವಿಷ್ಣುನಾ ಕ್ರೋಡರೂಪಿಣಾ ॥ ೨೫ ॥

ಲೋಕಾನಾಮುಪಕಾರಾರ್ಥಂ ವಂದನಾತ್ಸಿದ್ಧಕಾಮದಾ ।
ತಸ್ಮಾತ್ತ್ವಂ ವಂದಿತಾ ಪಾಪಂ ಹರ ಮೇಽನೇಕಜನ್ಮಜಂ ॥ ೨೬ ॥

(ಇತಿ ಮೃತ್ತಿಕಾ ಮಂತ್ರಃ)

---

೨೨. ಎಲೌ ಸುಂದರಿ! ಯಾವ ಮಾಸದಲ್ಲಿ ಈ ವ್ರತವನ್ನು ಮಾಡಬೇಕೆಂದು ತೋರುವುದೋ ಆ ಮಾಸದಲ್ಲಿ ಕಾಂಚನಪುರಿಯನ್ನು ರಚಿಸಬೇಕು.

೨೩. ಭಾದ್ರಮಾಸದ ಶುಕ್ಲತೃತೀಯೆ, ಕೃಷ್ಣತೃತೀಯೆ, ಏಕಾದಶೀ, ಪೂರ್ಣಿಮಾ, ಸಂಕ್ರಮಣ, ಕುಹೂಯೋಗ, ಅಷ್ಟಮಿ, ಈ ತಿಥಿಗಳಲ್ಲಿಯೂ,

೨೪. ಇತರವಾದ ಎಲ್ಲಾ ಪರ್ವಕಾಲಗಳಲ್ಲಿಯೂ ಸಹ ವ್ರತಮಾಡಿ, ಕಾಂಚನಪುರೀ ದಾನಮಾಡಬೇಕು. ಈ ವ್ರತಮಾಡತಕ್ಕ ವ್ಯಕ್ತಿಯು ಪ್ರಾತಃ ಕಾಲದಲ್ಲಿ ನದೀ, ಪುಷ್ಕರ, ಮುಂತಾದ್ದರ ಪವಿತ್ರ ಜಲದಲ್ಲಿ ಒಂದುಸಾರಿ ಸ್ನಾನ ಮಾಡಬೇಕು.

೨೫-೨೬. ಎಲೌ ಸುವ್ರತೇ ! ಬಳಿಕ (ಉದ್ಧೃತಾಸಿಯಥಾಪೂರ್ವಂ....) ಈ ಮಂತ್ರವನ್ನು ಉಚ್ಚರಿಸುತ್ತಾ ದೇಹಕ್ಕೆ ಮೃತ್ತಿಕಾಲೇಪನಮಾಡಿಕೊಳ್ಳಬೇಕು. ಮಹಾವರಾಹರೂಪಿಯಾದ ವಿಷ್ಣುಪರಮಾತ್ಮನಿಂದ ಲೋಕಗಳಿಗೆ ಹಿತವಾಗುವುದಕ್ಕಾಗಿ ಪೂರ್ವದಲ್ಲಿ ನೀನು ಜಲದಿಂದ ಉದ್ಧೃತಳಾದೆ. ಆದ್ದರಿಂದ ನಿನಗೆ ನಾನು ವಂದಿಸುವೆನು. ಈ ವಂದನೆಯನ್ನು ಸ್ವೀಕರಿಸಿ ನನ್ನ ಕಾರ್ಯಸಿದ್ಧಿಯಾಗುವಂತೆ ಮಾಡು. ಮತ್ತು ನಾನು ಅನೇಕ ಜನ್ಮಗಳಿಂದ ಆಚರಿಸಿದ ಪಾಪಗಳನ್ನು ಹೋಗಲಾಡಿಸು " ಇದು ಮೃತ್ತಿಕಾವಂದನ ಮಂತ್ರದ ಅರ್ಥ.

ಆಪಸ್ತು ವಿಷ್ಣುಯೋನಿರ್ಹಿ ವಿಷ್ಣುನಾ ನಿರ್ಮಿತಾಃ ಸ್ವಯಂ ।
ಸಾನ್ನಿಧ್ಯಂ ತೀರ್ಥಸಹಿತಂ ಕರ್ತವ್ಯಂ ಮಮ ಸಾಪ್ರತಂ ॥ ೨೭ ॥

(ಇತ್ಯಮ್ಮಂತ್ರಃ)

ಅನೇನ ವಿಧಿನಾ ಸ್ನಾತ್ವಾ ಯಜಮಾನಃ ಸಮಾಹಿತಃ ।
ಗೃಹಮಾಗಮ್ಯ ಶುದ್ಧಾತ್ಮಾನಾಲಪೇ ಪಿಶುನಾಂಸ್ತ್ವರಾತ್ ॥ ೨೮ ॥

ಪಾಂಖಂಡಿನೋ ವಿಕರ್ಮಸ್ಥಾ ಧೂರ್ತಾಂಶ್ಚ ಕಿತವಾ ಶಠಾ ।
ಪ್ರಕ್ಷಾಳ್ಯ ಪಾಣಿವದನಂ ಕುರ್ಯಾತ್ತ್ವಾಚಮನಂ ತತಃ ॥ ೨೯ ॥

ಉಪವಾಸಸ್ಯ ನಿಯಮಂ ಕುರ್ಯಾನ್ನಕ್ತಸ್ಯ ವಾ ಪುನಃ ।
ಶಂಖಪ್ರವರಮಾದಾಯ ಹೇಮಯುಕ್ತಂ ಜಲೈರ್ಭೃತಂ ॥ ೩೦ ॥

---

೨೭. ಜಲವು ವಿಶ್ವಯೋನಿಯಾದುದು. ವಿಷ್ಣುವಿನಿಂದಲೇ ಸಾಕ್ಷಾತ್ತಾಗಿ ನಿರ್ಮಿತವಾಗಿದೆ. ಸದ್ಯಃ ನೀನು ಪುಣ್ಯತೀರ್ಥಗಳ ಸಹಿತಳಾಗಿ ನನಗಾಗಿ ಇಲ್ಲಿ ಸಾನಿಧ್ಯವನ್ನು ಕಲ್ಪಿಸು. (ಎಂದು ಜಲವನ್ನು ಪ್ರಾರ್ಥಿಸಬೇಕು.) ಇದು ಜಲ ಪ್ರಾರ್ಥನಾ ಮಂತ್ರ.

೨೮. ಯಜಮಾನನು ಶಾಂತಚಿತ್ತದಿಂದ ಈ ವಿಧಾನಪೂರ್ವಕ ಸ್ನಾನ ಮಾಡಿ, ಪರಿಶುದ್ಧಾತ್ಮನಾಗಿ ಬೇಗ ಮನೆಗೆ ಬಂದು ಧೂರ್ತರು ನೀಚರು ಕರ್ಮ ಭ್ರಷ್ಟರು ಪಾಷಂಡಿಗಳು ಚಾಡಿಕೋರರು ಮೋಸಗಾರರು ಮುಂತಾದವರೊಡನೆ ಮಾತನ್ನಾಡದೆ ನಿಯಮದಿಂದ ಇರಬೇಕು.

೨೯. ಮನೆಗೆ ಬಂದ ಮೇಲೆ ಕೈಕಾಲು ತೊಳೆದುಕೊಂಡು ಬಾಯಿ ಮುಕ್ಕಳಿಸಿ ಬಳಿಕ ಶುದ್ಧಾಚಮನ ಮಾಡಬೇಕು.

೩೦. ಆ ದಿನ ನಕ್ತಭೋಜನ ಮಾಡುವೆನೆಂದೋ ಸಾಧ್ಯವಾದರೆ ಉಪ ವಾಸವನ್ನೇ ಮಾಡುವೆನೆಂದೋ ನಿಯಮಮಾಡಿಕೊಳ್ಳಬೇಕು. ಜಲಪೂರ್ಣವೂ ಶ್ರೇಷ್ಠವೂ ಆದ ಶಂಖವನ್ನು ತೆಗೆದುಕೊಂಡು ಅದರಲ್ಲಿ ಸುವರ್ಣವನ್ನು ಹಾಕ ಬೇಕು.

ದ್ವಾಶಾಕ್ಷರಮಂತ್ರೇಣ ತಜ್ಜಲಂ ಚಾಭಿಮಂತ್ರಯೇತ್ ।
ಪಿಬೇತ್ತ್ರೋಂಯಂ ಗೃಹೇ ಗತ್ವಾ ಹರಿರಿತ್ಯಕ್ಷರಂ ಜಪೇತ್ ॥ ೩೦ ॥

ಶಮೀವೃಕ್ಷಮಯೀ ವೇದೀ ಚತುಃಸ್ತಂಭಸಮನ್ವಿತಾ ।
ಚತುರ್ಹಸ್ತಪ್ರಮಾಣೇನ ಕಾರ್ಯಾ ಚೈವ ಸುಶೋಭನಾ ॥ ೩೧ ॥

ವಸ್ತ್ರೇಣಾವೇಷ್ಟಿತಾಃ ಸ್ತಂಭಾವಿತಾನವರಮಂಡಿತಾಃ ।
ಪುಷ್ಪಮಾಲಾನ್ವಿತಾಃ ಕಾರ್ಯಾಃ ದಿವ್ಯಧೂಪಾಧಿವಾಸಿತಾಃ ॥ ೩೨ ॥

ಮಧ್ಯೇ ತು ಮಂಡಲಂ ಕಾರ್ಯಂ ಪದ್ಮಾಖ್ಯಂ ವರ್ಣಕೈಃ ಶುಭೈಃ ।
ಯೇನ ದೃಷ್ಟೇನ ದೇವೇಶಿ ಸರ್ವಪಾಪಕ್ಷಯೋ ಭವೇತ್ ॥
ಮಂಡಲಸ್ಯ ತು ಮಧ್ಯೇ ವೈ ಭದ್ರಪೀಠಂ ಸುಶೋಭನಂ ॥ ೩೪ ॥

---

೩೦. ಹನ್ನೆರಡು ಅಕ್ಷರವುಳ್ಳ "ಓನ್ನಮೋ ಭಗವತೇ ವಾಸುದೇವಾಯ" ಎಂಬ ಮಂತ್ರದಿಂದ ಆ ಶಂಖಜಲವನ್ನು ಅಭಿಮಂತ್ರಿಸಬೇಕು. ಬಳಿಕ ಆ ಜಲವನ್ನು ಪಾನಮಾಡಬೇಕು. ಅನಂತರ ಮನೆಯಲ್ಲಿ ಕುಳಿತು ಹರಿನಾಮ ಮಂತ್ರವನ್ನು ಜಪಮಾಡಬೇಕು.

೩೧. ನಾಲ್ಕು ಹಸ್ತಪ್ರಮಾಣವುಳ್ಳ ಒಂದು ವೇದಿಯನ್ನು ಶುಭಕರವಾಗುವಂತೆ ರಚಿಸಿ ಅದರ ನಾಲ್ಕು ಕಡೆ ಶಮೀಸ್ತಂಭಯುತವಾಗಿ ಮಾಡಬೇಕು.

೩೨. ಆ ಸ್ತಂಭಗಳಿಗೆ ಅಲಂಕಾರವಾಗುವಂತೆ ವಸ್ತ್ರಗಳನ್ನು ಸುತ್ತಬೇಕು. ಮೇಲುಗಡೆ ಶೋಭಿಸುವಂತೆ ಚಪ್ಪರ ಮೇಲ್ಕಟ್ಟನ್ನು ರಚಿಸಿ ಅಲಕರಿಸಬೇಕು. ಹೂವಿನ ಮಾಲಿಕೆಗಳಿಂದ ಶೃಂಗರಿಸಿ ದಿವ್ಯಧೂಪಗಳಿಂದ ಸುವಾಸನಾಮಯವಾಗಿ ಮಾಡಬೇಕು.

೩೪. ವೇದಿಯ ಮಧ್ಯಭಾಗದಲ್ಲಿ ಶುಭಕರವಾದ ಬಣ್ಣಗಳಿಂದ ಪದ್ಮಾಕೃತಿಯಾದ ಮಂಡಲವನ್ನು ರಚಿಸಬೇಕು. ಎಲೌ ದೇವೇಶ್ವರಿ! ಅದನ್ನು ನೋಡಿದೊಡನೆ ವೀಕ್ಷಕರ ಸಮಸ್ತ ಪಾಪಗಳೂ ಪರಿಹಾರವಾಗುತ್ತವೆ. ಆ ಮಂಡಲದ ಮಧ್ಯದಲ್ಲಿ ಶುಭಕರವಾದ ಭದ್ರಪೀಠವನ್ನು ಇರಿಸಬೇಕು.

ಆಸನಂ ತತ್ರ ವಿನ್ಯಸ್ಯ ಕೋಮಲಂ ವಸ್ತ್ರವೇಷ್ಟಿತಂ ।
ತಸ್ಯೋಪರಿ ನ್ಯಸೇದ್ದೇವಂ ಲಕ್ಷ್ಮ್ಯಾ ಯುಕ್ತಂ ಜನಾರ್ದನಂ ॥ ೩೫ ॥

ಅಗ್ರೇ ತು ಕಲಶಃ ಕಾರ್ಯೋ ಜಲಪೂರ್ಣಃ ಸುಶೋಭನಃ ।
ಕ್ಷೀರಸಾಗರನಾಮಾ ಸ ಕಲ್ಪಿತವ್ಯಃ ಪ್ರಯತ್ನತಃ ॥ ೩೬ ॥

ಪಂಚರತ್ನಸಮಾಯುಕ್ತಂ ವಸ್ತ್ರೇಣಾವೇಷ್ಟಯೇದ್ಧಸಂ ।
ಕುಂಭಂ ಪ್ರಪೂರ್ಣಮುದಕೈಸ್ತಸ್ಯೋಪರಿ ನ್ಯಸೇದ್ಬುಧಃ ॥ ೩೭ ॥

ತಸ್ಯೋಪರಿಷ್ಟಾತ್ಸಂಸ್ಥಾಪ್ಯ ಕಾಂಚನಾಖ್ಯಾಂ ಪುರೀಂ ಶುಭಾಂ ।
ಚತುಷ್ಪಲಾ ಹ್ಯುತ್ತಮಾ ಸ್ಯಾದ್ದ್ವಿಪಲಾ ಮಧ್ಯಮಾ ಸ್ಮೃತಾ ॥ ೩೮ ॥

ಸಾಮಾನ್ಯೈಕಪಲಾ ಕಾರ್ಯಾ ಕಲಶೈಸ್ತು ಸುಮನ್ವಿತಾ ।
ಮೋದಕಾನ್ ಸ್ಥಾಪಯೇದ್ದಿವ್ಯಾನ್ಸಮಂತಾತ್ಸುಂದರಾಕೃತೀನ್ ॥ ೩೯ ॥

---

೩೫. ಆ ಭದ್ರಪೀಠದ ಮೇಲೆ ಮೃದುವಾದ ರೇಷ್ಮೆಯ ವಸ್ತ್ರವನ್ನು ಹಾಸಿ ಲಕ್ಷ್ಮೀಸಮೇತ ಜನಾರ್ದನದೇವನ ಮೂರ್ತಿಯನ್ನು ಆ ಪೀಠದ ಮೇಲೆ ಇರಿಸಬೇಕು.

೩೬. ದೇವಮೂರ್ತಿಯ ಸಮ್ಮುಖದಲ್ಲಿ ಶುಭಕರವಾಗಿಯೂ ಜಲಪೂರ್ಣವಾಗಿಯೂ ಇರುವ ಕ್ಷೀರಸಾಗರ ನಾಮಕವಾದ ಕಲಶವನ್ನು ಸ್ಥಾಪಿಸಬೇಕು.

೩೭. ಆ ಕಲಶದೊಳಗೆ ಪಂಚರತ್ನವನ್ನು ಹಾಕಿ ಆ ಕಲಶದ ಸುತ್ತ ವಸ್ತ್ರವನ್ನು ಸುತ್ತಬೇಕು. ಪ್ರಾಜ್ಞನಾದವನು ಜಲಪೂರ್ಣವಾದ ಬೇರೊಂದು ಕಲಶವನ್ನು ಆ ಕಲಶದ ಮೇಲೆ ಇರಿಸಬೇಕು.

೩೮. ಅದರ ಮೇಲುಭಾಗದಲ್ಲಿ ಶುಭಕರವಾಗಿ ರಚಿಸಿರುವ ಕಾಂಚನಪುರಿಯನ್ನು ಇರಿಸಬೇಕು. ಆ ಕಾಂಚನಪುರಿಯನ್ನು ನಾಲ್ಕುಪಲ ತೂಕವುಳ್ಳದ್ದನ್ನು ಮಾಡಿಸುವುದು ಉತ್ತಮಪಕ್ಷ. ಎರಡುಪಲ ತೂಕವುಳ್ಳದ್ದು ಮಧ್ಯಮಪಕ್ಷ. ಒಂದುಪಲ ತೂಕವುಳ್ಳದ್ದು ಸಾಮಾನ್ಯ.

೩೯. ಇವುಗಳಲ್ಲಿ ತನಗೆ ಸಾಧ್ಯವಾದ ಯಾವುದಾದರೊಂದು ಪ್ರಮಾಣದಲ್ಲಿ ಮಾಡಿಸಿ ಕಲಶದ ಮೇಲ್ಭಾಗದಲ್ಲಿರಿಸಿ, ಅದರ ಸುತ್ತಲೂ ಸುಂದರವಾದ ಆಕೃತಿಯುಳ್ಳ ಮೋದಕಗಳನ್ನು ಇರಿಸಬೇಕು.

ತದಗ್ರೇ ಕದಲೀಸ್ತಂಭೈಸ್ತೋರಣಂ ಪರಿಕಲ್ಪಯೇತ್ ।
ಚಾತುಶ್ಚರಣಿಕಾಂಸ್ತತ್ರ ವಿಪ್ರಾನಾವಾಹ್ಯ ಸುಂದರಿ ॥ ೪೦ ॥

ಪ್ರತಿಷ್ಠಾಂ ಕಾರಯೇತ್ತಸ್ಯ ವೇದಮಂತ್ರೈಃ ಸುಶೋಭನೈಃ ।
ತಸ್ಯಾ ಮಧ್ಯೇ ನ್ಯಸೇದ್ವಿಷ್ಣುಂ ಹೈಮಂ ಲಕ್ಷ್ಮ್ಯಾ ಸಮನ್ವಿತಂ ॥ ೪೧ ॥

ನೇತ್ರೇ ರತ್ನಮಯೇ ಕಾರ್ಯೇ ದಶನಾ ವಜ್ರಭೂಷಿತಾಃ ।
ಮುಕ್ತಾಫಲಮಯಂ ತಸ್ಯ ಭೂಷಣಂ ಪರಿಕಲ್ಪಯೇತ್ ॥ ೪೨ ॥

ಅಂಗಂ ಸ್ವರ್ಣಮಯಂ ಕಾರ್ಯಂ ಶಂಖಚಕ್ರಗದಾಯುಧಂ ।
ಪಂಚಾಮೃತೇನ ದೇವೇಶಂ ಸ್ನಾಪ್ಯ ನಾರಾಯಣಂ ವಿಭುಂ ॥ ೪೩ ॥

---

೪೦. ಆ ಪೀಠದ ಮುಂಭಾಗದಲ್ಲಿ ಬಾಳೆಯ ಕಂಭಗಳನ್ನೂ ಮಾವಿನೆಲೆ ತೋರಣಗಳನ್ನೂ ಕಟ್ಟಬೇಕು. ಎಲೌ ಸುಂದರಿಯೇ! ನಾಲ್ಕು ಪಾದಗಳಲ್ಲೂ ನಾಲ್ಕುವೇದಪಾರಾಯಣಕ್ಕಾಗಿ ವಿಪ್ರರನ್ನು ಆವಾಹನೆ ಮಾಡಬೇಕು.

೪೧. ಮಂಗಳಕರವಾದ ವೇದಘೋಷಗಳಾಗುತ್ತಿರುವಾಗ ಆ ಕಾಂಚನ ಪುರೀ ಪ್ರತಿಷ್ಠಾಕಾರ್ಯವನ್ನು ಮಾಡಬೇಕು. ಅದರ ಮಧ್ಯ ಚಿನ್ನದಿಂದ ನಿರ್ಮಿತವಾದ ಲಕ್ಷ್ಮೀಸಹಿತ ನಾರಾಯಣನ ಪ್ರತಿಮೆಯನ್ನು ನ್ಯಾಸಮಾಡಬೇಕು.

೪೨. ಆ ಮೂರ್ತಿಯ ನೇತ್ರದ್ವಯವನ್ನು ರತ್ನದಿಂದಲೂ, ದಂತಗಳನ್ನು ವಜ್ರದಿಂದಲೂ ನಿರ್ಮಿಸಿರಬೇಕು. ಮೈಮೇಲೆ ಮುತ್ತಿನ ಆಭರಣಗಳನ್ನು ಧರಿಸಿ ಅಲಂಕರಿಸಬೇಕು.

೪೩. ದೇವಮೂರ್ತಿಯ ಅವಯುವಗಳಿಗೆ ಸ್ವರ್ಣಕವಚವನ್ನು ಧರಿಸಬೇಕು. ಶಂಖ ಚಕ್ರ ಗದೆ ಮುಂತಾದ ಆಯುಧಸಹಿತವಾದ ಸ್ವರ್ಣಹಸ್ತಗಳಿರಬೇಕು.

**ತಮೇವ ಗಂಧಪುಷ್ಪಾದ್ಯೈರ್ಮಂತ್ರಮುಚ್ಚಾರ್ಯ ಪೂಜಯೇತ್ ।**
**ಬ್ರಾಹ್ಮಣೋ ವೈದಿಕೈರ್ಮಂತ್ರೈಃ ಪೂಜಯೇನ್ಮಧುಸೂದನಂ ॥ ४४ ॥**

**ಶೇಷಾ ವರ್ಣಾಃ ಪುರಾಣೋಕ್ತೈಸ್ತ್ವಂಗ ಶೃಣುಷ್ವ ಮಮ ಪ್ರಿಯೇ ।**
**ವಾಸುದೇವಾಯ ಪಾದೌ ತು ಗುಲ್ಫೌ ಸಂಕರ್ಷಣಾಯ ಚ ॥ ४೫ ॥**

**ತ್ರೈಲೋಕ್ಯಜನಕಾಯೇತಿ ಜಾನುನೀ ಪೂಜಯೇದ್ಧರೇಃ ।**
**ತ್ರೈಲೋಕ್ಯನಾಥಾಯ ಗುಹ್ಯೇ ಜ್ಞಾನಮಯಾಯ ವೈ ಕಟಿಂ ॥ ४೬ ॥**

**ದಾಮೋದರಾಯೇತ್ಯುದರಂ ಹೃದಯಂ ವಿಶ್ವರೂಪಿಣೇ ।**
**ನಿತ್ಯಂ ಹಿ ಪೂಜಯೇದ್ದೇವಿ ಉರಃ ಶ್ರೀವತ್ಸಧಾರಿಣೇ ॥ ४೭ ॥**

**ಕಂಠಂ ಕೌಸ್ತುಭನಾಥಾಯ ಆಸ್ಯಂ ಯಜ್ಞಮುಖಾಯ ಚ ।**
**ದೈತ್ಯಾಂತಕಾರಿಣೇ ಬಾಹೂ ಸ್ವೈರ್ನಾಮಭಿರಾಯುಧಾನಿ ಚ ॥ ४೮ ॥**

---

೪೪. ಹೀಗೆ ಸಿದ್ಧವಾದ ಲಕ್ಷ್ಮೀನಾರಾಯಣ ಪ್ರತಿಮೆಗೆ ಮಂತ್ರವತ್ತಾಗಿ ಪಂಚಾಮೃತವನ್ನು ಅಭಿಷೇಕಮಾಡಿ ವಸ್ತ್ರ ಗಂಧ ಪುಷ್ಪ ಮುಂತಾದುವುಗಳನ್ನು ಸಮರ್ಪಿಸಬೇಕು. ಪೂಜಾಕಾಲದಲ್ಲಿ ವಿಪ್ರನು ವೇದ ಮಂತ್ರಗಳಿಂದಲೂ ಇತರರು ಪುರಾಣೋಕ್ತ ಮಂತ್ರಗಳಿಂದಲೂ ಸಹ ಪೂಜಿಸಬೇಕು.

೪೫. ಪ್ರಿಯೇ! ಅಂಗಪೂಜಾ ಮಂತ್ರಗಳನ್ನು ಹೇಳುವೆನು ಕೇಳು. ವಾಸುದೇವಾಯನಮಃ ಪಾದೌಪೂಜಯಾಮಿ ಸಂಕರ್ಷಣಾಯನಮಃ ಗುಲ್ಫೌ ಪೂಜಯಾಮಿ ಎಂದು ಆ ಅವಯವಕ್ಕೆ ಪೂಜೆಮಾಡಬೇಕು.

೪೬, ತ್ರೈಲೋಕ್ಯನಾಥಾಯನಮಃ ಗುಹ್ಯಂಪೂಜಯಾಮಿ ಜ್ಞಾನಮಯಾಯನಮಃ ಕಟಿಂ ಪೂಜಯಾಮಿ ಎಂದು ಆಯಾ ಅವಯವಗಳಿಗೆ ಪೂಜೆ ಮಾಡಬೇಕು.

೪೭. ದಾಮೋದರಾಯನಮಃ ಉದರಂ ಪೂಜಯಾಮಿ, ವಿಶ್ವರೂಪಿಣೇ ನಮಃ ಹೃದಯಂಪೂಜಯಾಮಿ ಶ್ರೀವತ್ಸಧಾರಿಣೇನಮಃ ಉರಃಪೂಜಯಾಮಿ.

೪೮. ಕೌಸ್ತುಭನಾಥಾಯನಮಃ ಕಂಠಂಪೂಜಯಾಮಿ ಯಜ್ಞಮುಖಾಯನಮಃ ಆಸ್ಯಂಪೂಜಯಾಮಿ ದೈತ್ಯಾಂತಕಾಯನಮಃ ಬಾಹೂಪೂಜಯಾಮಿ ಎಂದು ಪೂಜಿಸಬೇಕು. ಬಾಹುಪೂಜೆಯಲ್ಲಿ ಆಯಾ ಬಾಹುವಿನಲ್ಲಿ ಧರಿಸಿರುವ ಆಯುಧಸಮೇತವಾಗಿ ಉಚ್ಚರಿಸಿ ಪೂಜಿಸಬೇಕು.

ಶಿರಃ ಸರ್ವಾತ್ಮನೇ ದೇವಿ ದೇವದೇವಸ್ಯ ಪೂಜಯೇತ್ ।
ಶ್ರಿಯಂ ಪ್ರಪೂಜಯೇದ್ದೇವೀಂ ದೇವ್ಯಾ ಮಂತ್ರೈಃ ಪೃಥಗ್ವಿಧೈಃ ॥೪೯॥

ಇಂದ್ರಾದಿಲೋಕಪಾಲಾನಾಂ ಪೂಜಾ ಕಾರ್ಯಾ ಯಥಾಕ್ರಮಂ ।
ನವಗ್ರಹಾಣಾಂ ಹೋಮಶ್ಚ ಕರ್ತವ್ಯೋ ವಿಘ್ನನಾಶನಃ ॥ ೫೦ ॥

ಪೂಜಾ ಗಣಪತೇಃ ಕಾರ್ಯಾ ತಥಾ ಹೋಮೋ ವಿಧಾನತಃ ।
ಅಗ್ರೇ ನೈವೇದ್ಯಮತುಲಂ ದಾಪಯೇದ್ಘೃತಪಾಚಿತಂ ॥ ೫೧ ॥

ಪಾಯಸಂ ಘೃತಪೂರಾಂಶ್ಚ ಮೋದಕಾನ್ಪೂರಿಕಾಸ್ತಥಾ ।
ಸೋಹಾಲಿಕಾದಿನೈವೇದ್ಯಂ ಫೇಣಿಕಾಃ ಶರ್ಕರಾಸ್ತಥಾ ॥ ೫೨ ॥

ದೇಶಕಾಲೋದ್ಭವಾನ್ಯೇವ ಫಲಾನಿ ವಿನಿವೇದಯೇತ್ ।
ದೀಪಾನ್ದಶ ದಿಶೋ ದದ್ಯಾತ್ಪಾರ್ಥಿವಾರ್ ರಕ್ತವರ್ತಿಕಾರ್ ॥ ೫೩ ॥

---

೪೯. ಸರ್ವಾತ್ಮನೇನಮಃ ಶಿರಃಪೂಜಯಾಮಿ ಎಂದು ಈರೀತಿ ದೇವದೇವನಾದ ನಾರಾಯಣಸ್ವಾಮಿಯ ಸರ್ವಾಂಗಗಳನ್ನೂ ಪೂಜಿಸಬೇಕು.

೫೦. ದೇವೀಪೂಜೆಗಾಗಿ ಉಕ್ತವಾದ ಪ್ರತ್ಯೇಕ ಮಂತ್ರಗಳಿಂದ ವಿಷ್ಣುಸಮೀಪಸ್ಥೆಯಾದ ಲಕ್ಷ್ಮೀದೇವಿಯನ್ನು ಪೂಜಿಸಬೇಕು. ಬಳಿಕ ಕ್ರಮವಾಗಿ ಇಂದ್ರ ಮೊದಲಾದ ಲೋಕಪಾಲಕರು, ನವಗ್ರಹಗಳು, ಇವರ ಪೂಜೆಯನ್ನು ಮಾಡಬೇಕು. ಸರ್ವವಿಘ್ನಪರಿಹಾರಾರ್ಥವಾಗಿ ನವಗ್ರಹ ಹೋಮವನ್ನು ಮಾಡಬೇಕು.

೫೧. ವಿಘ್ನನಾಶಕನಾದ ಗಣಪತಿಯ ಪೂಜೆಯನ್ನು ಪ್ರಥಮದಲ್ಲೇ ಮಾಡಿರಬೇಕಲ್ಲದೆ ವಿಧವಿಧಾನದಂತೆ ಹೋಮವನ್ನೂ ಮಾಡಬೇಕು. ಬಳಿಕ ಸ್ವಾಮಿಯ ಸಮ್ಮುಖದಲ್ಲಿ ಘೃತಪಕ್ವಮಾಡಿದ ಭಕ್ಷ್ಯವನ್ನೂ.

೫೨. ಪಾಯಸ, ಘೃತಸಹಿತವಾದ ಅಪೂಪ, ಮೋದಕ, ಪೂರಿ, ಸೋಹಾಲಕಾಭಕ್ಷ್ಯ, ಫೇಣಿ, ಸಕ್ಕರೆ ಇವುಗಳನ್ನೂ.

೫೩. ತತ್ತದ್ದೇಶದಲ್ಲಿ ಬೆಳೆಯುವುದಾಗಿ ಆ ಮಾಸದಲ್ಲಿ ದೊರೆಯತಕ್ಕವಾದ ಫಲಗಳು ಇವೆಲ್ಲವನ್ನೂ ಇರಿಸಿ ನಿವೇದನ ಮಾಡಬೇಕು. ಹತ್ತುದಿಕ್ಕುಗಳ

**ಏತೇನ ತು ವಿಶಾಲಾಕ್ಷಿ ಮೂಲಮಂತ್ರೇಣ ದಾಪಯೇತ್ ।**
**ಪುಷ್ಪಮಾಲಾನ್ವಿತಾನ್ ಕೃತ್ವಾ ಚಂದನೇನ ವಿಭೂಷಿತಾನ್ ॥ ೫೪ ॥**

**ಅಭಿಮಂತ್ರ್ಯ ಪ್ರಯತ್ನೇನ ವಿಷ್ಣುಸ್ತವಕವಾಚಕೈಃ ।**
**ಸಹಸ್ರಶೀರ್ಷಾದಿಭಿರ್ಮಂತ್ರೈರ್ಜಪದ್ಭಿರ್ಬ್ರಾಹ್ಮಣೋತ್ತಮೈಃ ॥ ೫೫ ॥**

**ಷೋಡಶಾಥ ಸಪತ್ನೀಕಾನ್ಪೂಜಯೇಚ್ಚ ಯಥಾವಿಧಿ ।**
**ಭೂಷಯೇಚ್ಚ ಶುಭೈರ್ವಸ್ತ್ರೈಸ್ತಥಾಲಂಕರಣಾದಿಭಿಃ ॥ ೫೬ ॥**

**ವಿಷ್ಣುಂ ಮತ್ವಾ ದ್ವಿಜಃ ಪೂಜ್ಯೋ ಲಕ್ಷ್ಮೀಂ ಮತ್ವಾ ಚ ಬ್ರಾಹ್ಮಣೀಂ ।**
**ಛತ್ರಂ ಚೋಪಾನಹಂ ಚೈವ ಅಂಗುಲ್ಯಾಭರಣಂ ತಥಾ ॥ ೫೭ ॥**

---

ಲ್ಲಿಯೂ ಕೆಂಪುಬತ್ತಿಗಳನ್ನು ಹಾಕಿದ ಮಣ್ಣಿನ ಹಣತೆಗಳಲ್ಲಿ ದೀಪವನ್ನು ಹತ್ತಿಸಿ ಇರಿಸಬೇಕು.

೫೪-೫೫. ಎಲೌ ವಿಶಾಲಾಕ್ಷಿಯೇ! ಒಟ್ಟಿನಲ್ಲಿ ಎಲ್ಲವನ್ನೂ ಮೂಲ ಮಂತ್ರ ಪುರಸ್ಸರವಾಗಿ ಸಮರ್ಪಿಸಬೇಕು. ಈ ಪೂಜಾಕಾಲದಲ್ಲಿ ವಿಷ್ಣುಸ್ತೋತ್ರ ಪಾರಾಯಣಮಾಡತಕ್ಕವರಿಗೆ ಮೈಗೆ ಗಂಧವನ್ನು ಲೇಪಿಸಿ ಕೊರಳಿಗೆ ಪುಷ್ಪಮಾಲೆ ಯನ್ನು ಹಾಕಿ ಅವರನ್ನು ಮಂತ್ರಪಾರಾಯಣ ಮಾಡುತ್ತಿರುವಂತೆ ಏರ್ಪಡಿಸಿ "ಸಹಸ್ರಶೀರ್ಷಾಪುರುಷಃ" ಮೊದಲಾದ ಮಂತ್ರಗಳನ್ನು ಪಠಿಸುತ್ತಿರುವಂತೆ ಮಾಡಬೇಕು.

೫೬. ಈ ಸಂದರ್ಭದಲ್ಲಿ ಹದಿನಾರುಮಂದಿ ಬ್ರಾಹ್ಮಣೋತ್ತಮರನ್ನು ಅವರ ಪತ್ನಿಸಮೇತ ವಿಧಿಪ್ರಕಾರ ಪೂಜಿಸಿ, ಶುಭ್ರವಾದ ವಸ್ತ್ರಗಳು ಆಭರಣ ಇವುಗಳ ದಾನದಿಂದ ಅಲಂಕರಿಸಬೇಕು.

೫೭. ಆ ಬ್ರಾಹ್ಮಣೋತ್ತಮರನ್ನೇ ವಿಷ್ಣುವೆಂದೂ ಆ ವಿಪ್ರಪತ್ನಿಯರನ್ನೇ ಲಕ್ಷ್ಮಿಯೆಂದು ಭಾವಿಸಬೇಕು. ಆ ವಿಪ್ರರಿಗೆ ಛತ್ರಿ ಪಾದುಕೆ ಉಂಗುರ ಮುಂತಾದವುಗಳು.

ಫಲಾನಿ ಸಪ್ತ ಧಾನ್ಯಾನಿ ಭೋಜನಂ ಚ ಯದೀಪ್ಸಿತಂ ।
ದಾತವ್ಯಂ ಚ ಸಭಾರ್ಯಾಯ ಕೃಷ್ಣೋ ಮೇ ಪ್ರೀಯತಾಮಿತಿ ॥ ೫೮ ॥

ಶಯ್ಯಾಂ ಸೋಪಸ್ಕರಾಂ ಚೈವ ವಸ್ತ್ರೇಣಾಚ್ಛಾದ್ಯ ಯತ್ನತಃ ।
ತಥಾ ಪ್ರಕಲ್ಪಯೇದ್ವಿತ್ತಶಕ್ತ್ಯಾ ಚ ಸುಂದರೀ ಯಥಾ ॥ ೫೯ ॥

ವ್ರತೇ ಪೂರ್ಣೇ ಚ ಗೌರ್ದೇಯಾ ಸರ್ವೋಪಸ್ಕರಸಂಯುತಾ ।
ಪುರೀಂ ಘಟಾಪಯೇತ್ಪೂರ್ವಂ ವಸ್ತ್ರೇಣಾಚ್ಛಾದ್ಯ ಯತ್ನತಃ ॥
ಯಥಾ ಕುರ್ಯಾತ್ಪ್ರಯಾಸೇನ ಯಥಾ ಕರ್ತಾ ನ ಪಶ್ಯತಿ ॥ ೬೦ ॥

ದೀಪಾಂಸ್ತು ದೀಪಿತಾಂಸ್ತತ್ರ ಆನಯೇದ್ಯಜ್ಞಮಂಡಪಂ ।
ಶ್ವೇತವಸ್ತ್ರೇಣ ನೇತ್ರೇ ತು ಯಜಮಾನಸ್ಯ ಚ ಪ್ರಿಯೇ ॥ ೬೧ ॥

---

೫೮. ಹಣ್ಣುಗಳು, ಸಪ್ತಧಾನ್ಯಗಳು, ಅವರಿಗೆ ಇಷ್ಟವಾದ ಭೋಜನ ವಸ್ತುಗಳು, ಮುಂತಾದುವನ್ನೆಲ್ಲಾ ಕೊಡಬೇಕು. ಹಾಗೆ ಕೊಡುವಾಗ ಈ ದಾನದಿಂದ ಕೃಷ್ಣಪರಮಾತ್ಮನು ನನ್ನ ವಿಷಯದಲ್ಲಿ ಸುಪ್ರೀತನಾಗಲಿ ಎಂಬ ದಾಗಿ ಹೇಳಬೇಕು.

೫೯. ಎಲೌ ಸುಂದರೀ ಕೇಳು! ಇಷ್ಟು ಮಾತ್ರವೆಂದು ಭಾವಿಸದೆ ತನಗೆ ಅನುಕೂಲವಿದ್ದಷ್ಟರಲ್ಲಿ ಪ್ರಯತ್ನಪಟ್ಟು ಆ ದಂಪತಿಗಳಿಗೆ ಗೃಹಸೋಪಸ್ಕರ ವಸ್ತುಗಳನ್ನೂ ಹಾಸಿಗೆಹೊದ್ದಿಕೆಗಳನ್ನೂ ಕೊಡುವುದು ಉತ್ತಮ.

೬೦. ವ್ರತವು ಸಂಪೂರ್ಣವಾಗುತ್ತಲೆ ಹಾಲುಕರೆಯುವ ಪಾತ್ರೆ ವಸ್ತ್ರ ಇವುಗಳ ಸಮೇತ ಕರುಸಹಿತವಾದ ಹಸುವನ್ನು ದಾನಕೊಡುವುದಕ್ಕೆ ಸಿದ್ಧಪಡಿಸಿ ಅದಕ್ಕಿಂತ ಮೊದಲು ಕಾಂಚನ ಪುರಿಯನ್ನೂ ಕಲಶವನ್ನೂ ಯಜಮಾನನಿಗೆ ಗೋಚರವಾಗದಂತೆ ವಸ್ತ್ರದಿಂದ ಮುಚ್ಚಿ ಮರೆಮಾಡಿರಬೇಕು.

೬೧-೬೨. ಬಳಿಕ ಪ್ರಜ್ವಲಿಸುತ್ತಿರುವ ದೀಪಗಳನ್ನು ಯಜ್ಞಮಂಟಪಕ್ಕೆ ತರ ಬೇಕು. ಎಲೌ ಪ್ರಾಜ್ಞಳೆ! ವೇದಾಧ್ಯಯನ ಸಂಪನ್ನನೂ ಶಾಸ್ತ್ರಜ್ಞನೂ ಸಮಸ್ತ

**ಶ್ರುತವಾಞ್ಶಾಸ್ತ್ರವಿತ್ಪ್ರಾಜ್ಞಃ ಕೃತಸರ್ವಾಘಸಂಕ್ಷಯಃ ।**
**ಆಬಧ್ಯ ನೇತ್ರೇ ಸುಪ್ರಾಜ್ಞೇ ಆಚಾರ್ಯಸ್ತ್ವಿಮಿದಂ ವದೇತ್ ॥ ೬೨ ॥**

**ಸರ್ವಕಾಮಪ್ರದಾಂ ಪಶ್ಯ ಕಾಂಚನಾಖ್ಯಾಂ ಪುರೀಮಿಮಾಂ ।**
**ವರವಸ್ತ್ರಯುತಾಂ ರಮ್ಯಾಂ ದುಃಖದೌರ್ಭಾಗ್ಯನಾಶಿನೀಂ ॥ ೬೩ ॥**

**ಏವಮುಕ್ತೋ ಮಹಾಭಾಗ ಪಟಿಮುನ್ಮುಚ್ಯ ನೇತ್ರಯೋಃ ।**
**ಪುಷ್ಪಾಂಜಲಿಂ ಗುರೌ ಕ್ಷಿಪ್ತ್ವಾ ಸ ಪಶ್ಯೇತ್ತಾಂ ಪುರೀಂ ಶುಭಾಂ ॥೬೪॥**

**ದೃಷ್ಟ್ವಾ ತಾಂ ನಗರೀಂ ದೇವಿ ಯಜಮಾನಃ ಸಮಾಹಿತಃ ।**
**ಸೌವರ್ಣಂ ಪಾತ್ರಮಾದಾಯ ರೌಪ್ಯಂ ತಾಮ್ರಮಥಾಪಿ ವಾ ॥ ೬೫ ॥**

**ಅಥ ವಾ ಶಂಖಮಾದಾಯ ಪಾತ್ರಾಲಾಭೇ ತು ಸುಂದರಿ ।**
**ಪಂಚರತ್ನಂ ಕ್ಷಿಪೇತ್ಪಾತ್ರೇ ಜಲಂ ಗಾಂಗಂ ತಥಾಫಲಂ ॥ ೬೬ ॥**

---

ಪಾಪಗಳನ್ನು ಪರಿಹರಿಸಿಕೊಂಡವನೂ ಆದ ಆಚಾರ್ಯನು ಯಜಮಾನನ ನೇತ್ರಗಳೆರಡೂ ಮುಚ್ಚುವಂತೆ ಬಿಳಿಯವಸ್ತ್ರದಿಂದ ಕಟ್ಟಬೇಕು.

೬೩. " ದುಃಖ ದೌರ್ಭಗ್ಯಗಳನ್ನು ಹೋಗಲಾಡಿಸಿ ಸಮಸ್ತ ಇಷ್ಟಾರ್ಥಗಳನ್ನು ಕೊಡತಕ್ಕದ್ದೂ, ಶ್ರೇಷ್ಠವಾದ ವಸ್ತ್ರದಿಂದ ಅಲಂಕರಿಸಲ್ಪಟ್ಟು ರಮ್ಯವೂ ಆಗಿರುವ ಈ ಕಾಂಚನಪುರಿಯನ್ನು ನೋಡು " ಎಂಬ ಅರ್ಥವುಳ್ಳ ಶ್ಲೋಕರೂಪವಾದ ಈ ಮಂತ್ರವನ್ನು ಅನಂತರ ಹೇಳಬೇಕು.

೬೪. ಹೀಗೆ ಹೇಳಿ ಆ ಪೂಜ್ಯನು ಯಜಮಾನನ ಕಣ್ಣಿಗೆ ಕಟ್ಟಿದ್ದ ಬಟ್ಟೆಯನ್ನು ಬಿಚ್ಚಬೇಕು.

೬೫. ಎಲೌ ದೇವಿ ! ಆಗ ಯಜಮಾನನು ಗುರುವಿಗೆ ಪುಷ್ಪಾಂಜಲಿಯನ್ನು ಸಮರ್ಪಿಸಿ ಶುಭಕರವಾದ ಆ ಕಾಂಚನಪುರಿಯನ್ನು ಸಮಾಹಿತಚಿತ್ತದಿಂದ ನೋಡಬೇಕು.

೬೬. ಎಲೌ ಸುಂದರಿ! ಚಿನ್ನದ ಬೆಳ್ಳಿಯ ಅಥವಾ ತಾಮ್ರದ ಪಾತ್ರೆಯನ್ನೋ ಯಾವುದೂ ಸಿಕ್ಕದಿದ್ದರೆ ಶಂಖವನ್ನೋ ತೆಗೆದುಕೊಳ್ಳಬೇಕು. ಆ ಪಾತ್ರೆಯಲ್ಲಿ ಅಥವಾ ಶಂಖದಲ್ಲಿ ಪಂಚರತ್ನಗಳು, ಗಂಗಾಜಲ, ಫಲ, ಇವನ್ನು ಹಾಕಬೇಕು.

**ಸಿದ್ಧಾರ್ಥಮಕ್ಷತಾಃ ಪೂರ್ವಂ ರೋಚನಾ ದಧಿ ವಾ ಪುನಃ ।**
**ತತಶ್ಚಾರ್ಘ್ಯಂ ಪ್ರದಾತವ್ಯಂ ಕೃಷ್ಣಾಯ ಪ್ರಭವಿಷ್ಣವೇ ॥ ೬೭ ॥**

**ಲಕ್ಷ್ಮೀನಾರಾಯಣೌ ದೇವೌ ಸರ್ವಕಾಮಫಲಪ್ರದೌ ।**
**ರುಕ್ಮಪುರ್ಯಾಃ ಪ್ರದಾನೇನ ಪ್ರೀಯೇತಾಂ ವಾಂಛಿತಂ ಮಮ ॥ ೬೮ ॥**

**ನಾರಾಯಣ ಹೃಷಿಕೇಶ ಜ್ಞಾನಜ್ಞೇಯ ನಿರಂಜನ ।**
**ಲಕ್ಷ್ಮೀಕಾಂತ ಜಗನ್ನಾಥ ಗೃಹಾಣಾರ್ಘ್ಯಂ ನಮೋಽಸ್ತುತೇ ॥ ೬೯ ॥**
**(ಇತ್ಯರ್ಘ ಮಂತ್ರಃ)**

**ಏವಮರ್ಘ್ಯಂ ತತೋ ದತ್ವಾ ವಿಷ್ಣವೇ ಪ್ರಭವಿಷ್ಣವೇ ।**
**ದೇವ್ಯಾಸ್ತ್ವರ್ಘ್ಯಂ ಪ್ರದಾತವ್ಯಂ ಭಕ್ತಿಯುಕ್ತೇನ ಚೇತಸಾ ॥ ೭೦ ॥**

---

೬೭. ಕೈಯಲ್ಲಿ ಬಿಳೀಸಾಸುವೆ ಅಕ್ಷತೆ ಇವುಗಳನ್ನು ಇಟ್ಟುಕೊಂಡು ಮೊದಲುಸಲ ಶ್ರೀಕೃಷ್ಣಪರಮಾತ್ಮನಿಗೆ ಪುನರರ್ಘ್ಯಪ್ರದಾನ ಮಾಡಬೇಕು. ಗೋರೋಚನವನ್ನಾಗಲಿ ಮೊಸರನ್ನಾಗಲಿ ಇಟ್ಟುಕೊಂಡು ಇನ್ನೊಂದುಸಲ ಪ್ರಭುವಾದ ಕೃಷ್ಣನಿಗೆ ಪುನರರ್ಘ್ಯಕೊಡಬೇಕು.

೬೮. ಅರ್ಘ್ಯಪ್ರದಾನ ಮಾಡುವಾಗ, "ಸಮಸ್ತ ಇಷ್ಟಾರ್ಥಗಳನ್ನು ಕೊಡ ತಕ್ಕದ್ದಾದ ಈ ಕಾಂಚನಪುರೀ ದಾನದಿಂದ ಷಡ್ಗುಣೈಶ್ವರ್ಯಯುಕ್ತರಾದ ಲಕ್ಷ್ಮೀ ನಾರಾಯಣರು ಸುಪ್ರೀತರಾಗಿ ನನ್ನ ಇಷ್ಟಾರ್ಥಗಳನ್ನು ಕರುಣಿಸುವರಾಗಲಿ" ಎಂಬ ಅರ್ಥವುಳ್ಳ ಮಂತ್ರವನ್ನು ಹೇಳಿ, ಉಕ್ತವಾದ ವಸ್ತುಗಳನ್ನು ಕೈಯಲ್ಲಿ ಇಟ್ಟುಕೊಂಡು ಈ ಕಾರ್ಯ ಮಾಡಬೇಕು.

೬೯. ಎರಡನೆಯಸಲ ಅರ್ಘ್ಯಕೊಡುವಾಗ "ಹೃಷೀಕೇಶನೂ ಜ್ಞಾನಗೋಚರನೂ ನಿರ್ಲೇಪನೂ ಲಕ್ಷ್ಮೀಪತಿಯೂ ಜಗನ್ನಾಥನೂ ಎನಿಸಿದ ನಾರಾಯಣನೇ! ನಾನು ಸಮರ್ಪಿಸುವ ಈ ಅರ್ಘ್ಯವನ್ನು ಸ್ವೀಕರಿಸು ನಿನಗೆ ನಮಸ್ಕಾರ" ಎಂಬ ಅರ್ಥವುಳ್ಳ ಮಂತ್ರವನ್ನು ಹೇಳಿ ಅರ್ಘ್ಯಪ್ರದಾನ ಮಾಡಬೇಕು. ಅರ್ಘ್ಯಪ್ರದಾನ ಮಂತ್ರವಾಯಿತು.

೭೦. ಪ್ರಭವಿಷ್ಣುವಾದ ನಾರಾಯಣನಿಗೆ ಈ ಪ್ರಕಾರ ಅರ್ಘ್ಯಪ್ರದಾನ ಮಾಡಿದ ಮೇಲೆ ಮನಸ್ಸಿನಲ್ಲಿ ಭಕ್ತಿಯುಕ್ತನಾಗಿ ಲಕ್ಷ್ಮೀದೇವಿಗೂ ಅರ್ಘ್ಯವನ್ನು ಸಮರ್ಪಿಸಬೇಕು.

**ಜಾನುಭ್ಯಾಮವನಿಂ ಗತ್ವಾ ಮಂತ್ರಮೇತಮುದೀರಯೇತ್ ।**
**ಬ್ರಹ್ಮಣಾ ಪೂಜಿತಾ ದೇವೀ ವಿಷ್ಣುನಾ ಶಂಕರೇಣ ಚ ॥ ೭೧ ॥**

**ಪಾರ್ವತ್ಯಾ ಪೂಜಿತಾ ಲಕ್ಷ್ಮೀಃ ಸ್ಕಂದವೈಶ್ರವಣೇನ ಚ ।**
**ಮಯಾ ಚ ಪೂಜಿತಾ ದೇವಿ ಧರ್ಮಸ್ಯ ವಿಜಿಗೀಷಯಾ ॥ ೭೨ ॥**

**ಸೌಭಾಗ್ಯಂ ದೇಹಿ ಮೇ ಪುತ್ರಾನ್ಧನಂ ಪೌತ್ರಾಂಶ್ಚ ಪೂಜಿತಾ ।**
**ಗೃಹಾಣಾರ್ಘ್ಯಂ ಮಯಾ ದತ್ತಂ ದೇವಿ ಸೌಖ್ಯಂ ಪ್ರಯಚ್ಛ ಮೇ ॥**

**ಯ ಏವಂ ಪುರತೋ ದತ್ವಾ ಪೂರ್ವೋಕ್ತವಿಧಿನಾ ಏವ ।**
**ರಾತ್ರೌ ಜಾಗರಣಂ ಕುರ್ಯಾದ್ಭಕ್ತಿಯುಕ್ತೇನ ಚೇತಸಾ ॥ ೭೪ ॥**

**ಗೀತನೃತ್ಯವಿನೋದೇನ ಉಪಾಖ್ಯಾನೈಶ್ಚ ವೈಷ್ಣವೈಃ ।**
**ಯೇನ ಕೇನ ವಿನೋದೇನ ನಿದ್ರಾ ನೈವ ಪ್ರಜಾಯತೇ ॥ ೭೫ ॥**

---

೭೧-೭೨. ಲಕ್ಷ್ಮೀದೇವಿಗೆ ಅರ್ಘ್ಯವನ್ನು ಸಮರ್ಪಣಮಾಡುವಾಗ ಎರಡು ಮಂಡಿಗಳನ್ನು ನೆಲದ ಮೇಲೆ ಊರಿಕೊಂಡು " ಬ್ರಹ್ಮ ವಿಷ್ಣು ಈಶ್ವರ ಪಾರ್ವತಿ ಷಣ್ಮುಖ ಕುಬೇರ ಮುಂತಾದ ಮಹಾಮಹಿಮರಿಂದ ಪೂಜೆಮಾಡಿಸಿ ಕೊಳ್ಳತಕ್ಕ ದೇವಿಯೇ ! ಧರ್ಮಕ್ಕೆ ಜಯವುಂಟಾಗಲೆಂದು ನಾನು ನಿನ್ನನ್ನು ಪೂಜಿಸಿದೇನೆ.

೭೩. ನನಗೆ ಧನವನ್ನೂ ಸುಪುತ್ರರನ್ನೂ ಸ್ತುತ್ಯರಾದ ಪೌತ್ರರನ್ನೂ ಸೌಭಾಗ್ಯವನ್ನೂ ಕೊಡು. ನಾನು ಸಮರ್ಪಿಸುವ ಅರ್ಘ್ಯವನ್ನು ಸ್ವೀಕರಿಸು. ನನಗೆ ಸೌಖ್ಯವನ್ನು ಕೊಡು " ಎಂಬ ಅರ್ಥವುಳ್ಳ ಮಂತ್ರಗಳನ್ನು ಹೇಳಿ ಅರ್ಘ್ಯ ಕೊಡಬೇಕು.

೭೪. ತಾನು ಅರ್ಚಿಸಿದ ಸ್ವಾಮಿಯ ಸಮ್ಮುಖದಲ್ಲಿ ಈ ಪ್ರಕಾರ ಅರ್ಘ್ಯವನ್ನು ಕೊಟ್ಟು ಭಕ್ತಿಯುಕ್ತವಾದ ಚಿತ್ತವುಳ್ಳವರಾಗಿ ಆ ರಾತ್ರಿ ಜಾಗರಣ ಮಾಡಬೇಕು.

೭೫. ಆ ರಾತ್ರಿ ಸಂಗೀತ ನಾಟ್ಯ ಮುಂತಾದ ವಿನೋದಗಳಿಂದಲೋ ವಿಷ್ಣುವಿನ ಉಪಾಖ್ಯಾನ ಶ್ರವಣದಿಂದಲೋ ಮತ್ತೆಯಾವುದಾದರೂ ವಿನೋದ ಪ್ರಸಂಗದಿಂದಲೋ ಸ್ವಲ್ಪವೂ ನಿದ್ದೆ ಬಾರದಂತೆ ಚಟುವಟಿಕೆಯಿಂದ ವರ್ತಿಸಬೇಕು.

**ಉನ್ನಿದ್ರೋ ಜಾಗೃಯಾದ್ಯಸ್ತು ಶತಯಜ್ಞಫಲಂ ಲಭೇತ್ ।**
**ಪ್ರಭಾತೇ ವಿಮಲೇ ಸ್ನಾತ್ವಾ ಸಂಪೂಜ್ಯ ಪಿತೃದೇವತಾಃ ॥ ೭೬ ॥**

**ಬ್ರಾಹ್ಮಣಾಂಶ್ಚ ಸಪತ್ನೀಕಾನ್ಪರಿಧಾಪ್ಯಾನುಭೋಜಯೇತ್ ।**
**ದಕ್ಷಿಣಾಶ್ಚ ಯಥಾಶಕ್ತ್ಯಾ ಪ್ರದಾಯ ಚ ಕ್ಷಮಾಪಯೇತ್ ॥ ೭೭ ॥**

**ದೀನಾಂಧಬಧಿರಾರ್ ಪಂಗೂನ್ಸರ್ವಾಂಸ್ತಾನ್ಪರಿತೋಷಯೇತ್ ।**
**ಪಶ್ಚಾತ್ಪಾರಣಕಂ ಕಾರ್ಯಮುಪವಾಸೀ ಭವೇದ್ಯದಿ ॥ ೭೮ ॥**

**ಮಧುರಂ ಪಯಸಾ ಯುಕ್ತಂ ಸುಹೃದ್ಭಿರ್ಬಾಂಧವೈಃ ಸಹ ।**
**ಏವಮೇತದ್ವ್ರತಂ ಕಾರ್ಯಮೇಕಾದಶ್ಯಾಂ ಶುಚಿಸ್ಮಿತೇ ॥ ೭೯ ॥**

**ಶುಕ್ಲಾಯಾಮಥ ಕೃಷ್ಣಾಯಾಂ ತೃತೀಯಾಯಾಂ ತಥಾ ತಿಥೌ ।**
**ಸಂಕ್ರಾಂತಿವಾಸರೇ ವಾಪಿ ವ್ಯತೀಪಾತೇ ಚ ವೈಧೃತೌ ॥ ೮೦ ॥**

---

೭೬. ಹೀಗೆ ಸ್ವಲ್ಪವೂ ನಿದ್ದೆ ಮಾಡದೆ ಜಾಗರಣಮಾಡಿದವನಿಗೆ ನೂರು ಯಜ್ಞಗಳನ್ನು ಆಚರಿಸಿದಷ್ಟು ಫಲವು ಲಭಿಸುವುದು. ಬೆಳಗಾದೊಡನೆ ಶುದ್ಧೋದಕದಲ್ಲಿ ಸ್ನಾನಮಾಡಿ, ಅಹ್ನಿಕಾದಿಗಳನ್ನೂ ದೇವರ್ಷಿಪಿತೃಕರ್ಮಾದಿಗಳನ್ನೂ ನೆರವೇರಿಸಬೇಕು.

೭೭. ಬಳಿಕ ಯಥಾಶಕ್ತಿ ಭಕ್ಷ್ಯಾದಿಗಳನ್ನು ಮಾಡಿಸಿ, ಆ ಬ್ರಾಹ್ಮಣ ದಂಪತಿಗಳನ್ನು ಕರೆದು ಭೋಜನಮಾಡಿಸಿ, ಶಕ್ತಿಯಿದ್ದಷ್ಟು ದಕ್ಷಿಣೆಯನ್ನು ಕೊಟ್ಟು ಕ್ಷಮಾಪ್ರಾರ್ಥನೆ ಮಾಡಿಕೊಳ್ಳಬೇಕು.

೭೮. ಅನಂತರ ದೀನರು ಕುರುಡರು ಹೆಳವರು ಕಿವುಡರು ಮುಂತಾದವರಿಗೆ ಬೇಕಾದುದನ್ನು ದಾನಮಾಡಿ ಸಂತೋಷಪಡಿಸುವುದಲ್ಲದೆ ವ್ರತಾಂಗವಾಗಿ ಆದಿನ ಉಪವಾಸಮಾಡಿದ್ದಲ್ಲಿ ಬಳಿಕ ಪಾರಣೆಯನ್ನು ನೇರವೇರಿಸಬೇಕು.

೭೯. ಆ ಪಾರಣೆಯಲ್ಲಿ ಮಿತ್ರರು ಬಂಧುಗಳು ಇವರೊಡನೆ ಹಾಲು ಮತ್ತು ಇತರ ಮಧುರವಸ್ತುಗಳನ್ನೇ ಆಹಾರವಾಗಿ ಸೇವಿಸಬೇಕು. ಈ ಪ್ರಕಾರ ಜ್ಯೇಷ್ಠ ಶುಕ್ಲೈಕಾದಶಿಯಲ್ಲಿ ಈ ವ್ರತವನ್ನು ಮಾಡಬೇಕು.

೮೦-೮೧. ಎಲೌ ಸುಂದರಿ! ಆ ದಿನವಲ್ಲದೆ ಇದ್ದರೆ ಶುಕ್ಲ ತೃತೀಯಾ, ಕೃಷ್ಣ ತೃತಿಯಾಗಳಲ್ಲಿಯಾಗಲಿ, ಸಂಕ್ರಮಣ, ವ್ಯತೀಪಾತ, ವೈಧೃತಿ, ಇವುಗಳಲ್ಲಿ

ಯದಾವಾ ಜಾಯತೇ ವಿತ್ತಂ ಚಿತ್ತಂ ಚ ವರವರ್ಣಿನಿ ।
ಗೌರಾನೀಯ ಪ್ರದಾತವ್ಯಾ ಕೃಷ್ಣೋ ಮೇ ಪ್ರೀಯತಾಮಿತಿ ॥ ೮೧ ॥

ಏವಂ ಕೃತೇ ಚ ಯತ್ಪುಣ್ಯಂ ತನ್ನ ಶಕ್ಯಂ ನಿವೇದಿತುಂ ।
ಅಪಿ ವರ್ಷಸಹಸ್ರೇಣ ಕುಲಲಕ್ಷಶತೈರಪಿ ॥ ೮೨ ॥

ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನಿ ಚ ।
ಬ್ರಹ್ಮಲೋಕಂ ಸಮಾಸಾದ್ಯ ಬ್ರಹ್ಮಣಾ ಪ್ರತಿಮೋದ್ಯತೇ ॥ ೮೩ ॥

ಬ್ರಹ್ಮಲೋಕಾದ್ರುದ್ರಲೋಕಂ ತತ್ಪರಂ ವಿಷ್ಣುಸನ್ನಿಧೌ ।
ಇಂದ್ರಾದಿಲೋಕಪಾಲಾನಾಂ ವ್ರತೀ ಲೋಕಮವಾಪ್ನುಯಾತ್ ॥೮೪॥

ತತೋ ಭುಕ್ತ್ವಾ ಶುಚಿಃ ಶ್ರೀಮಾನ್ಭೋಗಾಂಸ್ತ್ರೈಲೋಕ್ಯಸುಂದರಿ ।
ಚಕ್ರವರ್ತೀ ಭವೇದ್ಭೂಮೌ ಬ್ರಹ್ಮಣೋ ವೈಷ್ಣವಸ್ತಥಾ ॥ ೮೫ ॥

---

ಯಾವುದಾದರೂ ಸೇರಿದದಿವಸವಾಗಲಿ ಅಥವಾ ದ್ರವ್ಯಾನುಕೂಲ ಪೊದಗಿ ವ್ರತ ಮಾಡಬೇಕೆಂದು ಮನಸ್ಸಿಗೆ ತೋರಿದದಿವಸವಾಗಲಿ ಈ ವ್ರತವನ್ನು ಮಾಡಿ,ವ್ರತವು ಸಾಂಗವಾಗುವುದಕ್ಕಾಗಿ ಒಂದು ಹಸುವನ್ನು ತಂದು " ಕೃಷ್ಣನು ನನ್ನ ವಿಷಯ ದಲ್ಲಿ ಸುಪ್ರೀತನಾಗಲಿ " ಎಂದು ಹೇಳಿ ಆ ಗೋವನ್ನು ದಾನಮಾಡಬೇಕು.

೮೨-೮೩. ಈ ಪ್ರಕಾರ ವ್ರತವನ್ನು ಮಾಡಿದವನಿಗೆ ಲಭಿಸುವ ಪುಣ್ಯವು ಇಷ್ಟೆಂದು ಪರಿಮಿತಿಮಾಡಿ ಹೇಳಲು ಸಾಧ್ಯವಿಲ್ಲ. ಈ ವ್ರತಿಯು ತನ್ನ ವಂಶದ ನೂರುಲಕ್ಷ ವ್ಯಕ್ತಿಗಳೊಡನೆ ಸಾವಿರದ ನೂರುಕೋಟಿ ಕಲ್ಪಗಳ ಪರ್ಯಂತ ಬ್ರಹ್ಮಲೋಕದಲ್ಲಿ ಬ್ರಹ್ಮನ ಜತೆಯಲ್ಲಿ ಆನಂದದಿಂದ ವಾಸಮಾಡುತ್ತಾನೆ. ಬಳಿಕ ಬ್ರಹ್ಮಲೋಕದಿಂದ ಹೊರಟು ರುದ್ರಲೋಕವನ್ನು ಸೇರಿ ಅಲ್ಲಿ ವಾಸಿಸಿದ ಮೇಲೆ ವಿಷ್ಣುಲೋಕಕ್ಕೆ ಹೋಗಿ ವಿಷ್ಣುವಿನ ಸಾನ್ನಿಧ್ಯದಲ್ಲಿ ವಾಸಿಸುತ್ತಾನೆ.

೮೪-೮೫. ಆ ಬಳಿಕ ಇಂದ್ರ ಮೊದಲಾದ ಲೋಕಪಾಲಕರ ಲೋಕವನ್ನು ಪಡೆಯುತ್ತಾನೆ. ಎಲೌ ತ್ರಿಲೋಕಸುಂದರಿ! ಅಲ್ಲಿ ಪರಿಶುದ್ಧನೂ ಸಂಪನ್ನು ಕ್ತನೂ ಆಗಿ ನಾನಾ ಭೋಗಗಳನ್ನು ಅನುಭವಿಸಿ ಬಳಿಕ ಭೂಲೋಕದಲ್ಲಿ ಜನಿಸಿ ಚಕ್ರವರ್ತಿಯಾಗುವನು ಅಥವಾ ವಿಷ್ಣುಭಕ್ತನಾದ ಬ್ರಾಹ್ಮಣೋತ್ತಮನಾಗು ವನು.

ಯ ಇದಂ ಶೃಣುಯಾನ್ನಿತ್ಯಂ ವಾಚ್ಯಮಾನಂ ಸಮಂತತಃ ।
ಕುಲಸಪ್ತಕಮುದ್ಧೃತ್ಯ ವೈಷ್ಣವಂ ಲೋಕಮಾಪ್ನುಯಾತ್ ॥ ೮೬ ॥

ತ್ವಯಾ ಕಾಂಚನಪುರ್ಯಾಖ್ಯಂ ವ್ರತಮೇತತ್ಕೃತಂ ಪುರಾ ।
ತೇನ ಪುಣ್ಯೇನ ಲಬ್ಧೋಽಹಂ ಭರ್ತಾ ತ್ರೈಲೋಕ್ಯಪೂಜಿತಃ ॥ ೮೭ ॥

ಇತಿ ಶ್ರಿಭವಿಷ್ಯೇಮಹಾಪುರಾಣ ಉತ್ತರಪರ್ವಣಿ ಶ್ರಿಲಕ್ಷ್ಮೀವಿಷ್ಣು ಸಂವಾದೇ ಕಾಂಚನಪುರೀ ವ್ರತವರ್ಣನಂ ನಾಮ ಸಪ್ತಚತ್ವಾರಿಂಶದುತ್ತರಶತತಮೋಽಧ್ಯಾಯಃ.



೮೬. ಈ ವ್ರತಮಹಿಮೆಯನ್ನು ವಾಚನಮಾಡುವಾಗ ಯಾವನು· ಭಕ್ತಿಯಿಂದ ಶ್ರವಣಮಾಡುವನೋ ಆವನು ತನ್ನ ಕಡೆಯುವರು ಏಳು ತಲೆಮಾರಿನವರನ್ನು ಉದ್ಧಾರಮಾಡುವನಲ್ಲದೆ ವಿಷ್ಣುಲೋಕವನ್ನು ಪಡೆಯುವನು.

೮೭. ಎಲೌ ಸುಂದರಿ! ನೀನೂ ಪೂರ್ವದಲ್ಲಿ ಈ ಕಾಂಚನಪುರೀ ವ್ರತವನ್ನು ಆಚರಿಸಿದ್ದೆ ಆ ಪುಣ್ಯದಿಂದ ತ್ರಿಲೋಕ ಪೂಜಿತನಾದ ನಾನು ನಿನಗೆ ಪತಿಯಾಗಿ ದೊರೆತೆನು ಎಂದು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಲಕ್ಷ್ಮೀವಿಷ್ಣು ಇವರ ಸಂವಾದದೊಳಗೆ ಕಾಂಚನಪುರೀ ವ್ರತವರ್ಣನೆಯೆಂಬ ನೂರನಲವತ್ತೇಳಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣ

## ಉತ್ತರಪರ್ವಣಿ

## ಅಷ್ಟಚತ್ವಾರಿಂಶದುತ್ತರಶತತಮೋಽಧ್ಯಾಯಃ

### (ಅಥ ಕನ್ಯಾದಾನಂ)

॥ ಶ್ರೀ ಕೃಷ್ಣ ಉವಾಚ ॥

ಬ್ರಹ್ಮದೇಯಾಂ ತು ಯಃ ಕನ್ಯಾಮಲಂಕೃತ್ಯ ಪ್ರಯಚ್ಛತಿ ।
ಸಪ್ತಪೂರ್ವಾನ್ಭವಿಷ್ಯಾಂಶ್ಚ ಸ್ವಕುಲೇ ಸಪ್ತಮಾನವಾನ್ ॥ ೧ ॥

ತೇನ ಕನ್ಯಾಪ್ರದಾನೇನ ಸ ತಾರಯತ್ಯಸಂಶಯಂ ।
ಲೋಕಾನಾಪ್ನೋತಿ ಚ ತಥಾ ದಕ್ಷಸ್ಯೈವ ಪ್ರಜಾಪತೇಃ ॥ ೨ ॥

---

### ನೂರನಲವತ್ತೆಂಟನೆಯ ಅಧ್ಯಾಯ

೧-೨. ಶ್ರೀ ಕೃಷ್ಣನು ಹೇಳುತ್ತಾನೆ—ಬ್ರಾಹ್ಮಣನಿಗೆ ಕನ್ಯೆಯನ್ನು ಮದುವೆ ಮಾಡಿಕೊಡಲು ಅರ್ಹವಾದ ವಯಸ್ಸಾಗುತ್ತಲೇ ಕನ್ಯಾಪಿತನು ವಸ್ತ್ರಾಭರಣಾದ್ಯಲಂಕಾರ ಸಮೇತಳಾದ ಕನ್ಯೆಯನ್ನು ಸರಿಯಾದ ವರನಿಗೆ ದಾನ ಮಾಡಬೇಕು. ಈರೀತಿ ಕನ್ಯಾದಾನಮಾಡಿದುದರಿಂದ ತನ್ನ ವಂಶದಲ್ಲಿ ತನಗಿಂತ ಹಿಂದಿನ ಏಳು ತಲೆಮಾರಿನವರು ತನ್ನ ಮುಂದಿನ ಏಳು ತಲೆಮಾರಿನವರು ಇವರನ್ನೆಲ್ಲಾ ಭವಸಾಗರದಿಂದ ದಾಟಿಸುತ್ತಾನೆ. ಅಲ್ಲದೆ ಅವನಿಗೆ ದಕ್ಷಪ್ರಜಾಪತಿಲೋಕ ಪ್ರಾಪ್ತಿಯಾಗುವುದು.

ಪ್ರಾಜಾಪತ್ಯೇನ ವಿಧಿನಾ ಆತ್ಮಾನಂ ಚ ಸಮುದ್ಧರೇತ್ ।
ಮಹತ್ಪುಣ್ಯಮವಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ॥ ೩ ॥

ಭೂ ಗವಾಶ್ವಪ್ರದಾನಾನಿ ಗಜದಾನಂ ತಥೈವ ಚ ।
ದತ್ವಾ ತು ವರ್ಣಹೀನಾಯ ಘೋರೇ ತಮಸಿ ಮಜ್ಜತಿ ॥ ೪ ॥

ಬಹುವರ್ಷಸಹಸ್ರಾಣಿ ಪುರೀಷಂ ಕಾಕಮಶ್ನುತೇ ।
ಶುಕ್ಲೇನ ದತ್ವಾ ಕನ್ಯಾಂ ಚ ಘೋರಂ ನರಕಮಾಪ್ನುಯಾತ್ ॥ ೫ ॥

ಬಹೂನ್ಯಬ್ದಸಹಸ್ರಾಣಿ ತಥಾ ಅಶುಚಿಭುಙ್‌ನರಃ ।
ಸವರ್ಣಾಂ ಚ ಸವರ್ಣೇಭ್ಯೋ ದದ್ಯಾತ್ಕನ್ಯಾಂ ಯಥಾವಿಧಿ ॥ ೬ ॥

---

೩. ಪ್ರಾಜಾಪತ್ಯ ವಿಧಾನದಿಂದ ತನ್ನನ್ನು ತಾನು ಉದ್ಧರಿಸಿಕೊಳ್ಳಬೇಕು. ಹೀಗೆ ಮಾಡಿದವನಿಗೆ ತುಂಬಾ ಪುಣ್ಯವು ಲಭಿಸುವುದಲ್ಲದೆ ಅವನು ಸ್ವರ್ಗವನ್ನು ಪಡೆಯುವನು.

೪. ಗಜದಾನ, ಅಶ್ವದಾನ, ಗೋದಾನ, ಭೂದಾನ ಮೊದಲಾದ ಮಹಾ ದಾನಗಳನ್ನು ಪ್ರತಿಗ್ರಹಮಾಡಲು ಯೋಗ್ಯನಲ್ಲದ ಹೀನವ್ಯಕ್ತಿಗೆ ದಾನಕೊಟ್ಟರೆ ಆ ದಾನಿಯು ಘೋರವಾದ ಅಂಧತಮಸ್ಸಿನಲ್ಲಿ ಬಿದ್ದಿರಬೇಕಾಗುವುದು.

೫. ಅಲ್ಲಿ ಬಹು ವರ್ಷಗಳವರೆಗೆ ಕಾಗೆಯ ಅಮೇಧ್ಯವನ್ನು ಸೇವಿಸಿ ಕೊಂಡಿರಬೇಕಾಗುವುದು. ಶುಕ್ಲಯುಕ್ತವಾದ (ತೊನ್ನು ಹಿಡಿದ) ಕನ್ಯೆಯನ್ನು ದಾನಮಾಡಿದವನು ಘೋರವಾದ ನರಕವನ್ನು ಹೊಂದುತ್ತಾನೆ.

೬. ಹಾಗೆ ನರಕಹೊಂದಿ ಅಲ್ಲಿ ಅನೇಕ ಸಾವಿರ ವರ್ಷಗಳವರೆಗೆ ಅಶುಚಿ ವಸ್ತುಗಳನ್ನೇ ತಿನ್ನುತ್ತಿರಬೇಕಾಗುವುದು. ಒಂದು ವರ್ಣದ ಕನ್ಯೆಯನ್ನು ಸವರ್ಣದವನಾದ ವರನಿಗೆ ವಿಧಿವಿಧಾನದಂತೆ ದಾನಕೊಡಬೇಕು. ಉತ್ತಮ ವರ್ಣದವನಿಗೆ ಕೊಡುವುದರಿಂದ ದ್ವಿಗುಣವಾದ ಫಲ ಲಾಭವಾಗುವುದು. ಕನ್ಯೆಯ ವರ್ಣಕ್ಕಿಂತ ಹೀನಜಾತಿಯ ವರನಿಗೆ ಕೊಡುವುದರಿಂದ ಫಲ ಲೇಶವೂ ಇಲ್ಲ.

**ದತ್ತ್ವಾ ಚಾಧಿಕವರ್ಣಾಯ ದ್ವಿಗುಣಂ ನಿರ್ಗುಣಂ ತಥಾ ।**
**ದ್ವಿಜಪುತ್ರಮನಾಥಂ ವಾ ಸಂಸ್ಕುರ್ಯಾದ್ಯಶ್ಚ ಕರ್ಮಭಿಃ　　॥ ೭ ॥**

**ಚೂಡೋಪನಯನಾದ್ಯೈಶ್ಚ ಸೋऽಶ್ವಮೇಧಫಲಂ ಲಭೇತ್ ।**
**ಅನಾಥಾಂ ಕನ್ಯಕಾಂ ದತ್ವಾ ನಾಕಲೋಕೇ ಮಹೀಯತೇ　　॥ ೮ ॥**

**ಕನ್ಯಯಾ ಸಹ ದತ್ತಂ ಚ ಸುವರ್ಣಂ ವಹ್ನಿಮೂಲಕಂ ।**
**ಸಕಲಂ ದ್ವಿಗುಣಂ ತಸ್ಯ ಫಲಮುಕ್ತಂ ಪುರಾತನೈಃ　　॥ ೯ ॥**

**ಕನ್ಯಾದಾನಾದವಾಪ್ನೋತಿ ದಕ್ಷಲೋಕಂ ನರೋತ್ತಮ ।**
**ವಿಷ್ಣುಪೂಜಾಸಮಂ ಪುಣ್ಯಂ ತತ್ಕನ್ಯಾಪೂಜಯಾ ಭವೇತ್　　॥ ೧೦ ॥**

**ವಿಮಾನಮಾಹೃತ್ಯ ಮನೋಭಿರಾಮಂ ।**
**ಸುರಾಂಗನಾಗೀತವಿಲಾಸಹೃದ್ಯಂ ॥**

---

೭. ಬ್ರಾಹ್ಮಣವರ್ಣದಲ್ಲಿ ಜನಿಸಿ ಅನಾಥನಾಗಿದ್ದ ಹುಡುಗನಿಗೆ ಬ್ರಾಹ್ಮಣ ವರ್ಣೋಚಿತವಾದ ಚೂಡಾಕರ್ಮ, ಉಪನಯನ ಮುಂತಾದ ಸಂಸ್ಕಾರಕರ್ಮಗಳನ್ನು ನೆರವೇರಿಸಿದರೆ ಕರ್ತನಿಗೆ ಅಶ್ವಮೇಧಯಜ್ಞ ಮಾಡಿದಷ್ಟು ಫಲ ಲಭಿಸುವುದು.

೮. ಹಾಗೆಯೇ ಅನಾಥೆಯಾದ ಕನ್ಯೆಗೆ ಸವರ್ಣ ವರನನ್ನು ಗೊತ್ತು ಮಾಡಿ ಕನ್ಯಾದಾನ ಮಾಡಿದರೆ ಅವನು ಸ್ವರ್ಗಲೋಕದಲ್ಲಿ ಪೂಜಿತನಾಗುತ್ತಾನೆ.

೯. ಅಗ್ನಿಸಾಕ್ಷಿಯಾಗಿ ಕನ್ಯಾದಾನಮಾಡುವಾಗ ಕನ್ಯೆಗೆ ಧರಿಸಿರುವ ಆಭರಣರೂಪವಾದ ಸ್ವರ್ಣದಾನವನ್ನೂ ಮಾಡುವುದರಿಂದ ಅದಕ್ಕೆ ಎರಡರಷ್ಟು ಫಲವಿದೆಯೆಂದು ಪುರಾತನ ಮಹರ್ಷಿಗಳು ಹೇಳಿದ್ದಾರೆ.

೧೦-೧೧. ಎಲೈ ಮಾನವಶ್ರೇಷ್ಠನೇ! ಕನ್ಯಾದಾನ ಮಾಡಿದವನು ದಕ್ಷಬ್ರಹ್ಮನ ಲೋಕವನ್ನು ಪಡೆಯುವನು. ದಾನಮಾಡುವಾಗ ಆ ಕನ್ಯೆಗೆ ಪೂಜೆ ಮಾಡಿದರೆ ವಿಷ್ಣುವಿನ ಪೂಜೆಮಾಡಿದುದಕ್ಕೆ ಸಮನಾದ ಪುಣ್ಯವು ಬರುವುದು.

ಪ್ರಾಪ್ನೋತಿ ಲೋಕಂ ತ್ರಿದಶೋತ್ತಮಾನಾಂ ।
ಕನ್ಯಾಪ್ರದಾನಾನ್ನ ವಿಚಾರಣೇತಿ ॥ ೧೧ ॥

ಇತಿ ಶ್ರೀಭವಿಷ್ಯೇಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ಕನ್ಯಾಪ್ರದಾನವರ್ಣನಂ ನಾಮಾಷ್ಟಚತ್ವಾರಿಂಶದುತ್ತರ ಶತತಮೋಽಧ್ಯಾಯಃ.



---

ಕನ್ಯಾದಾನ ಮಾಡಿದ ಮಹನೀಯನು ದೇವಸ್ತ್ರೀಯರ ವಿಲಾಸಯುಕ್ತವಾದ ನರ್ತನ ಗಾನಗಳಿಂದ ಆನಂದಮಯವೂ, ನಯನಮನೋಹರವೂ, ಆದ ವಿಮಾನವನ್ನೇರಿ, ಶ್ರೇಷ್ಠವಾದ ದೇವಲೋಕವನ್ನು ಪಡೆಯುತ್ತಾನೆ. ಇದಕ್ಕೆ ಸಂಶಯವಿಲ್ಲ.

ಇಲ್ಲಿಗೆ ಶ್ರೀಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಕನ್ಯಾದಾನ ಮಹಿಮಾ ವರ್ಣನೆಯೆಂಬ ನೂರನಲವತ್ತೆಂಟನೆಯ ಅಧ್ಯಾಯವು ಮುಗಿದುದು.



|| ಶ್ರೀ ||

---

# ಅಥ ಶ್ರೀ ಭವಿಷ್ಯೇ ಮಹಾಪುರಾಣ

## ಉತ್ತರಪರ್ವಣಿ

## ಏಕೋನಪಂಚಾಶದುತ್ತರಶತತಮೋಽಧ್ಯಾಯಃ

---

|| ಶ್ರೀಕೃಷ್ಣ ಉವಾಚ ||

**ಬ್ರಾಹ್ಮಣಾ ದೈವತಂ ಭೂಮೌ ಬ್ರಾಹ್ಮಣಾ ದಿವಿ ದೈವತಂ |**
**ಬ್ರಾಹ್ಮಣೇಭ್ಯಃ ಪರಂ ನಾಸ್ತಿ ನಾಸ್ತಿ ಭೂತಂ ಜಗತ್ರಯೇ || ೧ ||**

**ಅದೇವಂ ದೈವತಂ ಕುರ್ಯುಃ ಕುರ್ಯುರ್ದೇವಮದೈವತಂ |**
**ಬ್ರಾಹ್ಮಣಾ ಹಿ ಮಹಾಭಾಗಾಃ ಪೂಜ್ಯಂತೇ ಸತತಂ ದ್ವಿಜಾಃ || ೨ ||**

---

### ನೂರನಲವತ್ತೊಂಭತ್ತನೆಯ ಅಧ್ಯಾಯ

೧. ಶ್ರೀಕೃಷ್ಣನು ಹೇಳುತ್ತಾನೆ—ಬ್ರಾಹ್ಮಣರು ಭೂಲೋಕದಲ್ಲಿಯೂ ದೇವಸ್ವರೂಪರು. ಸ್ವರ್ಗದಲ್ಲಿಯೂ ದೇವಸ್ವರೂಪರು. ಬ್ರಾಹ್ಮಣರಿಗಿಂತ ಉತ್ಕೃಷ್ಟನಾದ ವ್ಯಕ್ತಿಯು ಮೂರು ಲೋಕದಲ್ಲಿ ಎಲ್ಲಿ ಹುಡುಕಿದರೂ ಖಂಡಿತವಾಗಿ ಇಲ್ಲ.

೨. ಅವರು ದೇವರಾಗಿಲ್ಲದಿದ್ದ (ಶಿಲಾ ಕಲಶ ವೃಕ್ಷ ಮುಂತಾದುವುಗಳನ್ನು) ಮಂತ್ರವತ್ತಾಗಿ ಪ್ರಾಣಪ್ರತಿಷ್ಠಾದಿಗಳನ್ನು ಮಾಡಿ ದೇವರನ್ನಾಗಿ ಮಾಡುವರು (ಈ ವಿಚಾರದಲ್ಲಿ "ಅಶ್ಮಾಪಿ ಯಾತಿ ದೇವತ್ವಂ ಮಹದ್ಭಿಃ ಸುಪ್ರತಿಷ್ಠಿತಃ" ಎಂಬ ಶ್ಲೋಕವೂ; " ಪ್ರತಿಮಾಯಾಂತು ಸಾನ್ನಿಧ್ಯಂ ಅರ್ಚಕಸ್ಯ ತಪೋ ಬಲಾತ್ '' ಎಂಬ ಉಕ್ತಿಯೂ ಸರಿಯಾದ ವಾಕ್ಯಗಳಾಗಿವೆ) ಸಲಕ್ಷಣವಾಗಿಲ್ಲದಿದ್ದುದನ್ನು ಅಜ್ಞರು ದೇವರೆಂದು ಭಾವಿಸಿ ಪೂಜಿಸುತ್ತಿದ್ದಲ್ಲಿ ಅದು ಲಕ್ಷಣಯುಕ್ತವಾಗಿಲ್ಲವೆಂದು ತಿಳಿಸಿ ದೇವತ್ವಹೀನವನ್ನಾಗಿ ಮಾಡುವರು.

**ಬ್ರಾಹ್ಮಣೇಭ್ಯಃ ಸಮುತ್ಪನ್ನಾ ದೇವಾಃ ಪೂರ್ವಮಿತಿ ಸ್ಮೃತಿಃ ।**
**ಬ್ರಾಹ್ಮಣೇಭ್ಯೋ ಜಗತ್ಸರ್ವಂ ತಸ್ಮಾತ್ಪೂಜ್ಯತಮಾ ದ್ವಿಜಾಃ ॥ ೩ ॥**

**ಯೇಷಾಮಶ್ನಂತಿ ವಕ್ತ್ರೇಣ ದೇವತಾಃ ಪಿತರಸ್ತಥಾ ।**
**ಋಷಯಶ್ಚ ತಥಾ ನಾಗಾಃ ಕಿಂ ಭೂತಮಧಿಕಂತತಃ ॥ ೪ ॥**

**ಯದ್ದೈವ ಮನುಜೋ ಭಕ್ತ್ಯಾ ಬ್ರಾಹ್ಮಣೇಭ್ಯಃ ಪ್ರಯಚ್ಛತಿ ।**
**ತದ್ದೈವಾಪ್ನೋತಿ ಧರ್ಮಜ್ಞ ಬಹುಜನ್ಮನಿ ಜನ್ಮನಿ ॥ ೫ ॥**

**ತಾಲವೃಂತಾನಿಲೇನೈವ ಶ್ರಾಂತಸಂವಾಹನೇನ ಚ ।**
**ಉತ್ಸಾದನೇನ ಗಾತ್ರಾಣಾಂ ಕಥಾ ವ್ಯಂಜನಕರ್ಮಣಾ ॥ ೬ ॥**

---

೩. ಇಂಥ ಪೂಜ್ಯರಾದ ವಿಪ್ರರು ಯಾವಾಗಲೂ ಪೂಜಿತರಾಗುತ್ತಾರೆ. ಪೂರ್ವದಲ್ಲಿ ದೇವರೂ ಸಮಸ್ತ ಜಗತ್ತೂ ಬ್ರಾಹ್ಮಣರಿಂದ ಉತ್ಪನ್ನವಾಯಿತೆಂದು ಸ್ಮೃತಿಯಲ್ಲಿ ಉಕ್ತವಾಗಿದೆ. ಆದ್ದರಿಂದ ದ್ವಿಜರು ಅತ್ಯಂತ ಪೂಜ್ಯರೆನಿಸುವರು.

೪. ಬ್ರಾಹ್ಮಣರಿಗೆ ಭೋಜನ ಮಾಡಿಸಿದರೆ ದೇವರು, ಪಿತೃಗಳು, ಋಷಿಗಳು, ನಾಗರು, ಎಲ್ಲರೂ ತೃಪ್ತರಾಗುತ್ತಾರೆ. ಎಂದರೆ ಬ್ರಾಹ್ಮಣರ ಮುಖದಿಂದ ಅವರು ಆಹಾರವನ್ನು ಸ್ವೀಕರಿಸಿದಂತೆ ಆಯಿತು. ಅದಕ್ಕಿಂತ ಹೆಚ್ಚಿನದು ಇನ್ನಾವುದು ಬೇಕು?

೫. ಧರ್ಮಜ್ಞನಾದ ಮಾನವನು ಭಕ್ತಿಪುರಸ್ಸರವಾಗಿ ಬ್ರಾಹ್ಮಣರಿಗೆ ಯಾವುದನ್ನಾದರೂ ಅಲ್ಪ ಪ್ರಮಾಣದಲ್ಲಿ ದಾನಮಾಡಿದರೆ ಮುಂದೆ ಜನ್ಮಜನ್ಮದಲ್ಲಿಯೂ ಅದನ್ನು ಬಹು ಪ್ರಮಾಣದಿಂದ ಹೊಂದುವನು.

೬. ಸೆಕೆಯಾದವರಿಗೆ ಬೀಸಣಿಗೆಯಿಂದ ಬೀಸುವುದು, ನಡೆದು ಬಳಲಿದವರಿಗೆ ಕಾಲು ಹಿಸುಕುವುದು, ಅವಯವಗಳನ್ನು ಉತ್ಸಾದನ (ಮರ್ದನ) ಮಾಡುವುದು.

**ಪಾದಶೌಚಪ್ರದಾನೇನ ಪಾದಯೋಃ ಸೇಚನೇನ ಚ ।**
**ಪರಿಚರ್ಯ ಯಥಾ ಕಾಮಮೇಕೇನೈವ ದ್ವಿಜೋತ್ತಮ      ॥ ೭ ॥**

**ಅನಿಷ್ಟ್ವಾಪಿ ಸಮಾಪ್ನೋತಿ ಸ್ವರ್ಗಲೋಕಂ ಚ ಶಾಶ್ವತಂ ।**
**ಬ್ರಾಹ್ಮಣಾನಾಂ ಶುಭಂ ಕೃತ್ವಾ ನಾಕಲೋಕೇ ಮಹೀಯತೇ  ॥ ೮ ॥**

**ಯದ್ಬ್ರಾಹ್ಮಣಾಸ್ತುಷ್ಟಿಮಂತೋ ವದಂತಿ ಪ್ರತ್ಯಕ್ಷದೇವೇಷು ಪರೋಕ್ಷದೇವಾಃ ।**
**ತದ್ವೈ ಶುಭಂ ತಸ್ಯ ನರಸ್ಯ ನೂನಂ ಭವೇದತಸ್ತಾನ್ಸತತಂ ನಿಷೇವೇತ್ ॥**

**ಇತಿ ಶ್ರೀಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ಬ್ರಾಹ್ಮಣ ಶುಶ್ರೂಷಾ ವಿಧಿವರ್ಣನಂ ನಾಮೈಕೋನ ಪಂಚಾಶದುತ್ತರ ಶತತಮೋಽಧ್ಯಾಯಃ.**

---

೭. ಮತ್ತು ಇತರ ಉಪಚಾರ ಕಾರ್ಯಗಳು ಪಾದಗಳ, ಧೂಳುಗಳನ್ನು ಒರಸುವುದು, ಪಾದಯುಗ್ಮಗಳನ್ನು ಜಲಸೇಚನ ಮಾಡುವುದು, ಮುಂತಾದವುಗಳಲ್ಲಿ ಯಾವುದಾದರೂ ಒಂದನ್ನು ಆಚರಿಸುವ ಮೂಲಕ ಮನಃಪೂರ್ತಿಯಾಗಿ ಪರಿಚರ್ಯೆ ಮಾಡಿದರೆ ಸಾಕು.

೮. ಅವನು ಯಜ್ಞಾದಿಗಳನ್ನು ಮಾಡದೆ ಇದ್ದಾಗ್ಯೂ ಶಾಶ್ವತವಾಗಿ ಸ್ವರ್ಗಲೋಕವನ್ನು ಹೊಂದುತ್ತಾನೆ. ಶುಭಕರವಾದ ಕಾರ್ಯಗಳನ್ನು ಮಾಡಿ ಬ್ರಾಹ್ಮಣರಿಗೆ ಉಪಚಾರಮಾಡುವವನು ಸ್ವರ್ಗಲೋಕದಲ್ಲಿ ಪೂಜಿತನಾಗುತ್ತಾನೆ.

೯. ಪರೋಕ್ಷದೇವತಾ ಸ್ವರೂಪರೆನಿಸಿದ ಬ್ರಾಹ್ಮಣರು, ಉಪಚಾರಾದಿಗಳಿಂದ ತೃಪ್ತಿಹೊಂದಿ, ಪ್ರತ್ಯಕ್ಷ ದೇವರ ಎಂದರೆ ನಾವು ಅರ್ಚಿಸಿದ ಪ್ರತಿಮಾದಿಗಳ ಸನ್ನಿಧಿಯಲ್ಲಿ ಕುಳಿತು ಉಪಚಾರಕರ್ತೃವಿಗೆ ಶುಭವಾಗಲಿ ಎಂದು ಹೇಳಿದರೆ ಆ ಮನುಷ್ಯನಿಗೆ ನಿಶ್ಚಯವಾಗಿ ಅವರ ವಚನದಂತೆ ಫಲಿಸುವುದು. ಆದುದರಿಂದ ಸದ್ಬ್ರಾಹ್ಮಣರನ್ನು ಯಾವಾಗಲೂ ಸೇವೆಮಾಡಬೇಕು.

ಇಲ್ಲಿಗೆ ಶ್ರೀಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಬ್ರಾಹ್ಮಣ ಶುಶ್ರೂಷಾ ವಿಧಿವರ್ಣನೆಯೆಂಬ ನೂರನಲವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣ
## ಉತ್ತರಪರ್ವಣಿ
## ಪಂಚಾಶದುತ್ತರಶತತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಯುಷ್ಮದ್ವಾಕ್ಯಾಮೃತಮಿದಂ ಹ್ಯಹಂ ಶೃಣ್ವನ್ ಜನಾರ್ದನ ।
ನ ತೃಪ್ತಿಮಧಿಗಚ್ಛಾಮಿ ಜಾತಂ ಕೌತೂಹಲಂ ಹಿ ಮೇ ॥ ೧ ॥

ಗೋಪತಿಃ ಕಿಲ ಗೋವಿಂದಸ್ತ್ರಿಷು ಲೋಕೇಷು ವಿಶ್ರುತಃ ।
ಗೋವೃಷಸ್ಯ ಪ್ರದಾನೇನ ತ್ರೈಲೋಕ್ಯಮಭಿನಂದತಿ ॥ ೨ ॥

ತಸ್ಮಾದ್ಗೋವೃಷಕಲ್ಪಸ್ಯ ವಿಧಾನಂ ಕಥಯಾಚ್ಯುತ ॥ ೩ ॥

---

## ನೂರಐವತ್ತನೆಯ ಅಧ್ಯಾಯ

೧-೩. ಯುಧಿಷ್ಠಿರನು ಶ್ರೀಕೃಷ್ಣನನ್ನು ಕುರಿತು ಪ್ರಶ್ನೆಮಾಡುತ್ತಾನೆ—ಎಲೈ ಜನಾರ್ದನ ! ಅಮೃತಮಯವಾದ ನಿನ್ನ ವಾಕ್ಯಗಳನ್ನು ಎಷ್ಟುಕೇಳಿದರೂ ನನಗೆ ತೃಪ್ತಿಯಿಲ್ಲ. ಇನ್ನೂ ಕೇಳಬೇಕೆಂಬ ಕುತೂಹಲವೇ ಹೆಚ್ಚುತ್ತಿದೆ. ಗೋವಿಂದನೇ ಗೋವುಗಳಿಗೆಲ್ಲಾ ಅಧಿಪತಿಯೆಂದು ಮೂರುಲೋಕಗಳಲ್ಲಿಯೂ ಪ್ರಸಿದ್ಧನಾಗಿರುವನು. ಗೋವುಗಳಲ್ಲಿ ಶ್ರೇಷ್ಠವಾದ ಗೂಳಿಯನ್ನು(ವೃಷಭವನ್ನು) ದಾನಮಾಡುವುದರಿಂದ ಈ ಗೋವಿಂದನು ಮೂರುಲೋಕಗಳನ್ನೂ ಸಂತೋಷಪಡಿಸುತ್ತಾನೆ. ಎಲೈ ದೇವನೇ ! ಈ ಗೋವೃಷಕಲ್ಪದ ವಿಧಾನವನ್ನು ನನಗೆ ಹೇಳು ಎಂದನು.

॥ ಶ್ರೀಕೃಷ್ಣ ಉವಾಚ ॥
ವೃಷದಾನಫಲಂ ಪುಣ್ಯಂ ಶೃಣುಷ್ವ ಕಥಯಾಮಿ ತೇ ।
ಪವಿತ್ರಂ ಪಾವನಂ ಚೈವ ಸರ್ವದಾನೋತ್ತಮಂ ತಥಾ ॥ ೪ ॥

ದಶಧೇನುಸಮೋಽನಡ್ವಾನೇಕಶ್ಚೈವ ಧುರಂಧರಃ ।
ದಶಧೇನುಪ್ರದಾನಾದ್ಧಿ ಸ ಏವೈಕೋ ವಿಶಿಷ್ಯತೇ ॥ ೫ ॥

ವೋಢಾ ಚ ಚಾರುಪೃಷ್ಠಾಂಗೋ ಹ್ಯರೋಗಃ ಪಾಂಡುನಂದನ ।
ಯುವಾ ಭದ್ರಃ ಸುಶೀಲಶ್ಚ ಸರ್ವದೋಷವಿವರ್ಜಿತಃ ॥ ೬ ॥

ಧುರಂಧರಃ ಸ್ಥಾಪಯತೇ ಏಕ ಏವ ಕುಲಂ ಮಹತ್ ।
ತ್ರಾತಾ ಭವತಿ ಸಂಸಾರಾನ್ನಾತ್ರ ಕಾರ್ಯಾ ವಿಚಾರಣಾ ॥ ೭ ॥

---

೪. ಶ್ರೀಕೃಷ್ಣನು ಹೇಳುತ್ತಾನೆ—ಓ ಯುಧಿಷ್ಠಿರ ! ಪುಣ್ಯಕರವಾದ ಈ ವೃಷಭದಾನವನ್ನು ಮಾಡುವುದರಿಂದುಂಟಾಗುವ ಫಲವನ್ನು ಹೇಳುವೆನು ಕೇಳು ಈ ವೃಷಭದಾನವು ತುಂಬಾ ಪವಿತ್ರವೂ ಎಲ್ಲಾ ದಾನಗಳಿಗಿಂತ ಉತ್ತಮವೂ ಪಾವನವೂ ಆಗಿರುವುದು.

೫. ಭಾರವನ್ನು ಹೊರಲು ಸಮರ್ಥವಾದ ಒಂದು ಹೋರಿಯು ಹತ್ತು ಹಸುಗಳಿಗೆ ಸಮಾನವಾದುದು. ಹತ್ತು ಹಸುಗಳನ್ನು ದಾನಮಾಡುವುದರಿಂದ ಉಂಟಾಗುವ ಫಲಕ್ಕಿಂತ, ಒಂದು ಎತ್ತನ್ನು ದಾನಮಾಡುವುದರಿಂದ ಹೆಚ್ಚು ಫಲವುಂಟಾಗುವುದು.

೬-೭. ಓ ಪಾಂಡುನಂದನ ! ಭಾರವನ್ನು ಎಳೆಯಲು ಸಮರ್ಥವೂ, ಮನೋಹರವಾದ ಬೆನ್ನು ಮುಂತಾದ ಅವಯವಗಳಿಂದ ಯುಕ್ತವಾದುದೂ, ರೋಗ ದೋಷಾದಿಗಳಿಲ್ಲದುದೂ, ಒಳ್ಳೆಯ ಗುಣವುಳ್ಳುದೂ ಆಗಿರುವ ಒಂದೇ ಒಂದು ಪ್ರಾಯದ ಎತ್ತು, ದಾನಮಾಡುವವನ ದೊಡ್ಡ ವಂಶವನ್ನು ಉದ್ಧರಿಸುವುದು, ಅಲ್ಲದೆ ಅವನನ್ನೂ ಸಂಸಾರದಿಂದ ಮುಕ್ತನನ್ನಾಗಿ ಮಾಡುತ್ತದೆ. ಇದರಲ್ಲಿ ಸಂದೇಹವಿಲ್ಲ.

ಅಲಂಕೃತ್ಯ ವೃಷಂ ಶಾನ್ತಂ ಪುಣ್ಯೇಹ್ನಿ ಸಮುಪಸ್ಥಿತೇ ।
ರೌಪ್ಯಲಾಂಗೂಲಸಂಯುಕ್ತಂ ಬ್ರಾಹ್ಮಣಾಯ ನಿವೇದಯೇತ್ ॥ ೮ ॥

ಮಂತ್ರೇಣಾನೇನ ರಾಜೇಂದ್ರ ತಂ ಶೃಣುಷ್ವ ವದಾಮಿ ತೇ ।
ಧರ್ಮಸ್ತ್ವಂ ವೃಷರೂಪೇಣ ಜಗದಾನಂದಕಾರಕ ॥ ೯ ॥

ಅಷ್ಟಮೂರ್ತೇರಧಿಷ್ಠಾನಮತಃ ಪಾಹಿ ಸನಾತನ ।
ದತ್ತ್ವೈವಂ ದಕ್ಷಿಣಾಯುಕ್ತಂ ಪ್ರಣಿಪತ್ಯ ವಿಸರ್ಜಯೇತ್ ॥ ೧೦ ॥

ಸಪ್ತಜನ್ಮಕೃತಂ ಪಾಪಂ ವಾಙ್ಮನಃಕಾಯಕರ್ಮಜಂ ।
ತತ್ಸರ್ವಂ ವಿಲಯಂ ಯಾತಿ ಗೋದಾನಸುಕೃತೇನ ಚ ॥ ೧೧ ॥

---

೮. ಶಾಂತವಾದ ಸ್ವಭಾವವುಳ್ಳ ವೃಷಭದ ಕೊಂಬು, ಗೊರಸು, ಬಾಲ, ಇತ್ಯಾದಿಗಳಿಗೆ ಮನೋಹರವಾಗಿ ಬೆಳ್ಳಿಯ ಆಭರಣಗಳಿಂದ ಅಲಂಕರಿಸಿ, ಶುಭ ದಿವಸದಲ್ಲಿ ಆ ವೃಷಭವನ್ನು ಬ್ರಾಹ್ಮಣನಿಗೆ ದಾನಮಾಡಬೇಕು.

೯-೧೦. ಓ ರಾಜೇಂದ್ರ! ದಾನಮಾಡುವಾಗ "ಎಲೈ ವೃಷಭರಾಜನೇ! ನೀನು ಧರ್ಮಸ್ವರೂಪನು. ವೃಷಭರೂಪವನ್ನು ಧರಿಸಿ ಪ್ರಪಂಚಕ್ಕೆಲ್ಲಾ ಆನಂದ ವನ್ನುಂಟುಮಾಡುತಿದ್ದೀಯೆ. ಅಲ್ಲದೆ ಅಷ್ಟಮೂರ್ತಿಯೆನಿಸಿದ ಅಂದರೆ "ನೀರು, ಅಗ್ನಿ, ಯಜಮಾನ, ಸೂರ್ಯ, ಚಂದ್ರ, ವಾಯು, ಆಕಾಶ, ಪೃಥಿವೀ" ಈ ಎಂಟು ಮೂರ್ತಿಗಳುಳ್ಳ ಪರಮೇಶ್ವರನಿಗೆ ವಾಹನವಾಗಿರುವೆ. ಎಲೈ ಪುರಾತನವಾದ ವೃಷಭರಾಜನೇ! ನಮ್ಮನ್ನು ಕಾಪಾಡು" ಎಂಬ ಅರ್ಥವುಳ್ಳ ಮಂತ್ರ ವನ್ನು ಹೇಳಿ, ತನ್ನ ಶಕ್ತ್ಯನುಸಾರವಾಗಿ ದಕ್ಷಿಣೆಯಿಟ್ಟು ಆ ವೃಷಭವನ್ನು ಬ್ರಾಹ್ಮಣನಿಗೆ ದಾನಕೊಟ್ಟು ನಮಸ್ಕಾರಮಾಡಿ ಆ ವೃಷಭಸಮೇತ ಕಳುಹಿಸಬೇಕು.

೧೧. ಗೋದಾನ ಮಾಡುವುದರ ಪುಣ್ಯವಿಶೇಷದಿಂದ ಏಳು ಜನ್ಮಗಳಲ್ಲಿ ಮನೋ (ಮನಸ್ಸು) ವಾಕ್ (ಮಾತುಗಳು) ಕಾಯ (ಶರೀರ) ಮತ್ತು ಕರ್ಮ ಇವುಗಳಿಂದ ಆಚರಿಸಿದ ಪಾಪಗಳೆಲ್ಲವೂ ನಾಶವಾಗುವುವು.

**ಯಾನಂ ವೃಷಭಸಂಯುಕ್ತಂ ದೀಪ್ಯಮಾನಂ ಸುಶೋಭಿತಂ ।**
**ಆರುಹ್ಯ ಕಾಮಗಂ ದಿವ್ಯಂ ಸ್ವರ್ಲೋಕಮಧಿರೋಹತಿ ॥ ೧೨ ॥**

**ಯಾವಂತಿ ತಸ್ಯರೋಮಾಣಿ ಗೋವೃಷಸ್ಯ ಮಹೀಪತೇ ।**
**ತಾವದ್ವರ್ಷಸಹಸ್ರಾಣಿ ಗವಾಂ ಲೋಕೇ ಮಹೀಯತೇ ॥ ೧೩ ॥**

**ಗೋಲೋಕಾದವತೀರ್ಣಸ್ತು ಇಹಲೋಕೇ ದ್ವಿಜೋತ್ತಮಃ ।**
**ಯಜ್ಞಯಾಜೀ ಮಹಾತೇಜಾಃ ಸರ್ವಬ್ರಾಹ್ಮಣಪೂಜಿತಃ ॥ ೧೪ ॥**

**ತ್ವಯೋಕ್ತಂ ವೈ ಮಹಾರಾಜ ಕಸ್ಯ ದೇಯೋ ವೃಷೋತ್ತಮಃ ।**
**ತದಪ್ಯಹಂ ತೇ ವಕ್ಷ್ಯಾಮಿ ಪ್ರಾಪ್ತಂ ತ್ರಾಣಪದಂ ನೃಣಾಂ ॥ ೧೫ ॥**

**ಯೇಷಾಂ ಸದಾ ವೈ ಶ್ರುತಿಪೂರ್ಣಕರ್ಣಾ ।**
**ಜಿತೇಂದ್ರಿಯಾಃ ಪ್ರಾಣಿವಧೇ ನಿವೃತ್ತಾಃ ॥**

---

೧೨. ಅಲ್ಲದೆ ಅವರು ಚನ್ನಾಗಿ ಅಲಂಕರಿಸಲ್ಪಟ್ಟ ವೃಷಭದಿಂದ ಯುಕ್ತವಾಗಿ ಪ್ರಜ್ವಲಿಸುತ್ತಾ ಸ್ವೇಚ್ಛೆಯಾಗಿ ಸಂಚರಿಸುವ ಸಾಮರ್ಥ್ಯವುಳ್ಳ ದಿವ್ಯ ವಿಮಾನದ ಮೇಲೆ ಕುಳಿತು ಸ್ವರ್ಗಲೋಕವನ್ನೈದುವನು.

೧೩. ದಾನಮಾಡಿದ ವೃಷಭರಾಜನ ಮೈಮೇಲೆ ಎಷ್ಟು ರೋಮಗಳಿವೆಯೋ ಅಷ್ಟು ಸಾವಿರ ವರ್ಷಗಳವರೆಗೆ ದಾನಿಯು ಗೋಲೋಕದಲ್ಲಿ ಪೂಜ್ಯನಾಗುತ್ತಾನೆ.

೧೪. ಎಲೈ ಧರ್ಮಜನೇ! ಅಲ್ಲಿಯ ವಾಸಮುಗಿದ ಅನಂತರ ಈ ಭೂಲೋಕದಲ್ಲಿ ಮಹಾತೇಜಸ್ವಿಯಾದ ಬ್ರಾಹ್ಮಣೋತ್ತಮನೆನಿಸಿ ಸಕಲಬ್ರಾಹ್ಮಣರಿಂದಲೂ ಪೂಜ್ಯನಾಗಿ ಸದಾ ಯಜ್ಞಯಾಗಾದಿ ಕರ್ಮನಿರತನಾಗುವನು.

೧೫. ಓ ಮಹಾರಾಜ! ಈ ವೃಷಭರಾಜನನ್ನು ಯಾರಿಗೆ ದಾನಮಾಡಬೇಕು. ಪ್ರತಿಗ್ರಹಮಾಡಲು ಯೋಗ್ಯರಾರು ಎಂದು ಪ್ರಶ್ನೆಮಾಡಿದೆಯಷ್ಟೆ ವೃಷಭಶ್ರೇಷ್ಠನನ್ನು ಸ್ವೀಕರಿಸಿ ರಕ್ಷಣೆಮಾಡಲು ಯೋಗ್ಯರಾದ ಮಾನವರಾರೆಂಬುದನ್ನು ನಿನಗೆ ತಿಳಿಸುವೆನು ಕೇಳು.

೧೬. ಸದಾ ವೇದಾಧ್ಯಯನ, ಅಧ್ಯಾಪನ, ಮತ್ತು ಪಾರಾಯಣ ರೂಪವಾಗಿ ಯಾವಾಗಲೂ ವೇದಘೋಷವನ್ನು ಕೇಳುವವರೂ, ಜಿತೇಂದ್ರಿಯರೂ,

ಪ್ರತಿಗ್ರಹೇ ಸಂಕುಚಿತಾ ಗೃಹಸ್ಥಾಃ ।
ತೇ ಬ್ರಾಹ್ಮಣಾಸ್ತಾರಯಿತುಂ ಸಮರ್ಥಾಃ ॥ ೧೬ ॥

ಗಾತ್ರೇ ದೃಢಂ ಭಾರಸಹಂ ಸುಪುಷ್ಟಂ ।
ಸುಶೃಂಗಿಣಂ ಸರ್ವಗುಣೋಪಪನ್ನಂ ॥
ದತ್ತ್ವರ್ಷಭಂ ಗೋದಶಕೇನ ತುಲ್ಯಂ ।
ಸತ್ಯಂ ಭವಂತಿ ಭುವಿ ತತ್ಫಲಭಾಗಿನಸ್ತೇ ॥ ೧೭ ॥

ಇತಿ ಶ್ರಿಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರ ಸಂವಾದೇ ವೃಷದಾನ ವಿಧಿವರ್ಣನಂ ನಾಮ ಪಂಚಾಶದುತ್ತರ ಶತತಮೋಽಧ್ಯಾಯಃ.



ಪ್ರಾಣಿಹಿಂಸಾಕಾರ್ಯದಲ್ಲಿ ಎಂದೂ ಮನಸ್ಸು ಒಗ್ಗದವರೂ, ಪ್ರತಿಗ್ರಹಮಾಡುವುದಕ್ಕೆ ಅಂಜುವವರೂ ಗೃಹಸ್ಥರೂ ಆದ ಬ್ರಾಹ್ಮಣರು ಈ ವೃಷಭರಾಜನನ್ನು ಸ್ವೀಕರಿಸಿ ರಕ್ಷಣೆಮಾಡಲು ಸಮರ್ಥರೆನಿಸುವರು.

೧೭. ಪುಷ್ಟವಾಗಿ ದೃಢವಾದ ಶರೀರದಿಂದ ಕೂಡಿದುದೂ, ಭಾರವನ್ನು ಹೊರಲು ಸಮರ್ಥವಾದುದೂ, ಒಳ್ಳೆಯ ಕೊಂಬುಗಳಿಂದ ಕೂಡಿದುದೂ, ಸಕಲ ಗುಣಯುಕ್ತವೂ ಆಗಿರುವ ಒಂದು ವೃಷಭವು ಹತ್ತು ಹಸುಗಳಿಗೆ ಸಮಾನವಾದುದು. ಇಂತಹ ಒಂದು ವೃಷಭವನ್ನು ದಾನಮಾಡಿದರೆ ಹತ್ತು ಹಸುಗಳನ್ನು ದಾನಮಾಡುವುದರಿಂದ ಪಡೆಯಬಹುದಾದ ಪುಣ್ಯಕ್ಕೆ ಸಮಾನವಾದ ಪುಣ್ಯವು ಮಾನವರಿಗೆ ಸತ್ಯವಾಗಿ ಲಭಿಸುವುದು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀಕೃಷ್ಣಯುಧಿಷ್ಠಿರ ಸಂವಾದದಲ್ಲಿ ವೃಷಭದಾನ ವಿಧಿವರ್ಣನೆಯೆಂಬ ನೂರೈವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣ

## ಉತ್ತರಪರ್ವಣಿ

## ಏಕಪಂಚಾಶದುತ್ತರಶತತಮೋऽಧ್ಯಾಯಃ

(ಅಥ ವಿವಿಧದಾನಾನಿ)

॥ ಶ್ರೀ ಯುಧಿಷ್ಠಿರ ಉವಾಚ ॥

**ಶ್ರುತಃ ಪುರಾಣವಿಷಯಸ್ತ್ವತ್ಪ್ರಸಾದಾನ್ಮಯಾऽಚ್ಯುತ ।**
**ಸಂಸಾರಾಸಾರತಾಂ ಜ್ಞಾತ್ವಾ ಶ್ರುತಶ್ಚ ವ್ರತವಿಸ್ತರಃ ॥ ೧ ॥**

**ಭೂಯಶ್ಚ ಶ್ರೋತುಮಿಚ್ಛಾಮಿ ದಾನಮಾಹಾತ್ಮ್ಯಮುತ್ತಮಂ ।**
**ಕಿಂ ದೀಯತೇ ಕದಾ ಕೃಷ್ಣ ಕೇನೋಪಾಯೇನ ಶಂಸ ಮೇ ॥ ೨ ॥**

**ನಹಿ ದಾನಾತ್ಪರತರಮನ್ಯದಸ್ತೀತಿ ಮೇ ಮತಿಃ ।**
**ಧನಂ ಧನವತಾಂ ಕಿಂಚಿದಹಾರ್ಯಂ ರಾಜತಸ್ಕರೈಃ ॥ ೩ ॥**

---

### ನೂರಐವತ್ತೊಂದನೆಯ ಅಧ್ಯಾಯ

೧-೨. ಪುನಃ ಯುಧಿಷ್ಠಿರನು ಶ್ರೀಕೃಷ್ಣನನ್ನು ಪ್ರಶ್ನೆ ಮಾಡುತ್ತಾನೆ—ಎಲೈ ಅಚ್ಯುತನೆ! ನಿನ್ನ ಅನುಗ್ರಹದಿಂದ ಪುರಾಣವಿಷಯಗಳೆಲ್ಲಾ ತಿಳಿದುವು. ಅಲ್ಲದೆ ಸಂಸಾರದ ನಶ್ವರತ್ವವನ್ನೂ ನಿಸ್ಸಾರತೆಯನ್ನೂ ತಿಳಿದು ಈ ಸಂಸಾರದಲ್ಲಿ ಆಚರಿಸಬೇಕಾದ ವ್ರತಗಳೂ ವಿಸ್ತಾರವಾಗಿಯೇ ತಿಳಿದಂತಾಯಿತು. ಆದರೆ ಶ್ರೇಷ್ಠವಾದ ದಾನಗಳ ಮಹಿಮೆಯನ್ನು ತಿಳಿಯಬೇಕೆಂಬ ಕುತೂಹಲವುಂಟಾಗಿದೆ. ಯಾವ ದಾನಗಳನ್ನು ಯಾವಾಗ ಯಾವರೀತಿ ಯಾರಿಗೆ ಕೊಡಬೇಕೆಂಬುದನ್ನು ತಿಳಿಸು?

೩. ದಾನಕ್ಕಿಂತಲೂ ಉತ್ಕೃಷ್ಟವಾದುದು ಬೇರೆ ಯಾವುದೂ ಇಲ್ಲವೆಂದು ನನಗೆ ತೋರುವುದು. ದೇವ! ಸದಾ ದಾನಶೀಲರಾಗಿರುವ ಹಣಗಾರರಿಗೆ ರಾಜವಿಪ್ಲವವಾಗಲಿ ಚೋರಬಾಧೆಯಾಗಲಿ ಸಂಭವಿಸಲಾರದು.

|| ಶ್ರೀಕೃಷ್ಣ ಉವಾಚ ||

ಅನಿಶ್ಚಿತಂ ನಿಧಾನಂ ಯದಪ್ರಯುಕ್ತಂ ಚ ವರ್ಧತೇ ।
ಅನೀತಂ ಯಾತಿ ಚಾಧ್ವಾನಂ ಧನಂ ವಿಪ್ರಕರಾರ್ಪಿತಂ || ೪ ||

ಕಿಂ ಕಾಯೇನ ಸುಪುಷ್ಟೇನ ಬಲಿನಾ ಚಿರಜೀವಿನಾ ।
ಯನ್ನ ಸತ್ತ್ವೋಪಕಾರಾಯ ತಜ್ಜೀವಿತಮನರ್ಥಕಂ || ೫ ||

ಗ್ರಾಸಾದರ್ಧಮಪಿ ಗ್ರಾಸಮರ್ಥಿಭ್ಯಃ ಕಿಂ ನ ದೀಯತೇ ।
ಇಚ್ಛಾನುರೂಪೋ ವಿಭವಃ ಕದಾ ಕಸ್ಯ ಭವಿಷ್ಯತಿ || ೬ ||

ಏಕಸ್ಮಿನ್ನಪ್ಯತಿಕ್ರಾಂತೇ ದಿನೇ ದಾನವಿವರ್ಜಿತೇ ।
ದಸ್ಯುಭಿರ್ಮುಷಿತಸ್ಯೇವ ದಿವಾರಾತ್ರೌ ಚ ಶೋಚತಿ || ೭ ||

---

೪. ಶ್ರೀ ಕೃಷ್ಣನು ಹೇಳುತ್ತಾನೆ— ಯೋಗ್ಯನಾದ ಬ್ರಾಹ್ಮಣನಿಗೆ ಮಾಡಿದ ದಾನವು ಎಲ್ಲಾ ಫಲಪ್ರಾಪ್ತಿಗೂ ಮೂಲಕಾರಣ. ಇದರಲ್ಲಿ ಸಂಶಯವಿಲ್ಲ. ಇದು ಮತ್ತೊಬ್ಬರ ಪ್ರೇರಣೆಯಿಲ್ಲದೆ ಇದ್ದರೂ ತಾನೇ ಅಭಿವೃದ್ಧಿಹೊಂದುವುದು ಅವಿನೀತನಾದವನನ್ನು ಸಹ ಸರಿಯಾದ ಮಾರ್ಗಕ್ಕೆ ತರುತ್ತದೆ.

೫. ಕೊಬ್ಬಿದ ಶರೀರದಿಂದ ಕೂಡಿ ನಾನೇ ಬಲಶಾಲಿಯೆಂದು ಮೆರೆಯುತ್ತಾ ಬಹಳಕಾಲ ಬದುಕಿದರೆ ಏನು ಸಾರ್ಥಕ? ಪ್ರಾಣಿಗಳಿಗೆ ಉಪಕಾರ ಮಾಡದ ಮಾನವನ ಜೀವಿಕೆಯು ನಿಷ್ಪ್ರಯೋಜನ.

೬. ತನಗೆ ತಿನ್ನುವುದಕ್ಕಿಲ್ಲ ನಾನೇನು ದಾನಮಾಡಲಿ ಎಂದು ಸುಮ್ಮನಿರದೆ ತಾನು ತಿನ್ನುವ ಒಂದು ತುತ್ತಿನಲ್ಲೇ ಅರ್ಧಭಾಗವನ್ನು ದಾನಮಾಡಬೇಕು. ಮಾನವನಿಗೆ ತನ್ನ ಆಶೆ ಪೂರ್ಣವಾಗುವಷ್ಟು ಐಶ್ವರ್ಯವು ಯಾವಾಗ ತಾನೇ ಬರುವುದು. ಆದುದರಿಂದ ತನ್ನಲ್ಲಿದ್ದುದರಲ್ಲೇ ಸ್ವಲ್ಪಭಾಗವನ್ನು ಯಾಚಕರಿಗೆ ಅವಶ್ಯವಾಗಿ ದಾನಮಾಡಬೇಕು.

೭. ದಾನಮಾಡದೆ ಇರುವ ಲೋಭಿಯು ತನ್ನ ಸಂಪಾದನೆ ಎಲ್ಲವನ್ನೂ ಸಂಗ್ರಹಮಾಡುತ್ತಾ ಇದ್ದಾಗ ಕಳ್ಳರು ಬಂದು ಅವನ ದ್ರವ್ಯವನ್ನೆಲ್ಲಾ ಲೂಟಿಮಾಡಿಕೊಂಡು ಹೋದಾಗ "ಅಯ್ಯೋ! ನಾನು ಒಂದು ದಿನವಾದರೂ ದಾನಮಾಡದೆ ಹೋದೆನಲ್ಲಾ! ಎಲ್ಲವನ್ನೂ ಅನ್ಯಾಯವಾಗಿ ಕಳ್ಳರು ಲೂಟಿಮಾಡಿದರು" ಎಂದು ಹಗಲು ರಾತ್ರಿ ಯೋಚಿಸುತ್ತಾನೆ.

**ಯಸ್ಯ ತ್ರಿವರ್ಗಶೂನ್ಯಾನಿ ದಿನಾನ್ಯಾಯಾಂತಿ ಯಾಂತಿ ಚ |**
**ಸ ಲೋಹಕಾರಭಸ್ತ್ರೇವ ಶ್ವಸನ್ನಪಿ ನ ಜೀವತಿ || ೮ ||**

**ಯೈರ್ನ ದತ್ತಂ ನ ಚ ಹುತಂ ನ ತೀರ್ಥೇ ಮರಣಂ ಕೃತಂ |**
**ಹಿರಣ್ಯಮನ್ನಮುದಕಂ ಬ್ರಾಹ್ಮಣೇಭ್ಯೋ ನ ಚಾರ್ಪಿತಂ || ೯ ||**

**ದೀನಾ ನಿರಶನಾ ರೂಕ್ಷಾಃ ಕಪಾಲಾಂ ಕಿತಪಾಣಯಃ |**
**ತೇ ದೃಶ್ಯಂತೇ ಮಹಾರಾಜ ಜಾಯಮಾನಾಃ ಪುನಃ ಪುನಃ || ೧೦ ||**

**ಆಯಾಸಶತಲಬ್ಧಸ್ಯ ಪ್ರಾಣೇಭ್ಯೋऽಪಿ ಗರೀಯಸಃ |**
**ಗತಿರೇಕೈವ ವಿತ್ತಸ್ಯ ದಾನಮನ್ಯಾ ವಿಪತ್ತಯಃ || ೧೧ ||**

---

೮. ಧರ್ಮ ಅರ್ಥ ಕಾಮಗಳೆಂಬ ತ್ರಿವರ್ಗವನ್ನು ಸಂಪಾದಿಸದೆ ಕೇವಲ ದಿನಗಳನ್ನು ಕಳೆಯುವ ಮಾನವನು ಕಮ್ಮಾರನ ತಿದಿಯಂತೆ (ಚರ್ಮದ ಚೀಲ) ಶ್ವಾಸವಾಡುತ್ತಿದ್ದರೂ ಬದುಕುತ್ತಿದ್ದ ಕೂಟವಲ್ಲ. ಧರ್ಮ ಅರ್ಥ ಕಾಮವೆಂಬ ತ್ರಿವರ್ಗವನ್ನು ಅನುಭವಿಸುವ ಯೋಗ್ಯತೆ ಇದ್ದರೂ ಮಾನವನು ಅದನ್ನು ಒದಗಿಸಿ ಕೊಳ್ಳುವ ದಾನಧರ್ಮಾದಿಗಳನ್ನು ಮಾಡದೆ ಇದ್ದರೆ ಕೇವಲ ಲೋಭಿಯಾಗಿ ಅವನು ಬದುಕಿದ್ದರೂ ಮೃತನಾದವನಂತೆಯೇ ಎಂದು ತಿಳಿಯಬೇಕು.

೯-೧೦. ಓ ಯುಧಿಷ್ಠಿರ! ದಾನಮಾಡದವರೂ ಹೋಮುವನ್ನೆಸಗದವರೂ ಪುಣ್ಯತೀರ್ಥಗಳಲ್ಲಿ ಮರಣಹೊಂದದವರೂ ಮತ್ತು ಬ್ರಾಹ್ಮಣೋತ್ತಮರಿಗೆ ಸುವರ್ಣ ಅನ್ನ ಮತ್ತು ನೀರು ಇವುಗಳನ್ನು ಸಮರ್ಪಣೆಮಾಡದವರೂ ಮುಂದೆ ದೀನರೂ ತಿನ್ನುವುದಕ್ಕಿಲ್ಲದವರೂ ಒರಟರೂ ಕಪಾಲಧಾರಿಗಳಾದ ಭಿಕ್ಷುಕರೂ ಆಗಿ ಜನ್ಮತಾಳುವುದು ಸ್ವತಸ್ಸಿದ್ಧವು.

೧೧. ಬಹಳ ಶ್ರಮದಿಂದ ಸಂಪಾದಿಸಿ ತಮ್ಮ ಪ್ರಾಣಕ್ಕಿಂತಲೂ ಉತ್ಕೃಷ್ಟ ವೆಂದು ತಿಳಿದಿರುವ ಈ ದ್ರವ್ಯಕ್ಕೆ ದಾನವೊಂದೇ ಸರಿಯಾದ ಮಾರ್ಗ. ಉಳಿದು ವೆಲ್ಲಾ ಕೇವಲ ವಿಪತ್ತುಗಳೆಂದೇ ತಿಳಿಯಬೇಕು.

**ನೋಪಭೋಗ್ಯೈಃ ಕ್ಷಯಂ ಯಾನ್ತಿ ನ ಪ್ರದಾನ್ಯೈಃ ಸಮೃದ್ಧಯಃ ।**
**ಪೂರ್ವಾರ್ಜಿತಾನಾಮನ್ಯತ್ರ ಸುಕೃತಾನಾಂ ಪರಿಕ್ಷಯಾತ್ ॥ ೧೨ ॥**

**ಅದೃಷ್ಟಪರತತ್ರ್ವೋಪಿ ಪಾತ್ರೇಭ್ಯೋ ವಿಸೃಜೇದ್ಧನಂ ।**
**ಯಸ್ಮಾನ್ಮೃತಸ್ಯ ತನ್ನಾಸ್ತಿ ತಸ್ಮಾತ್ಸಾಂಶಯಿಕಂ ವರಂ ॥ ೧೩ ॥**

**ದಾನಾನಿ ಬಹುರೂಪಾಣಿ ಕಥಯಾಮಿ ತವಾನಘ ।**
**ವ್ಯಾಸವಾಲ್ಮೀಕಿಮನ್ವಾದ್ಯೈಃ ಕಥಿತಾನಿ ಪುರಾ ಮಮ ॥ ೧೪ ॥**

**ಕಿಂಚಿದ್ವ್ರತಂ ಯತ್ಕ್ರಿಯತೇ ಪೂಜ್ಯತೇ ಚ ತ್ರಿಲೋಚನಃ ।**
**ದೀಯತೇ ಯಚ್ಚ ಪಿಪ್ರೇಭ್ಯ ಏತಜ್ಜನ್ಮತರೋಃ ಫಲಂ ॥ ೧೫ ॥**

೧೨. ಐಶ್ವರ್ಯ, ಸಂಪತ್ತು, ಇವು ತಾವು ಉಪಭೋಗಿಸುವುದರಿಂದಲೂ ಮತ್ತು ದಾನಮಾಡುವುದರಿಂದಲೂ ಎಂದಿಗೂ ನಾಶಹೊಂದುವುದಿಲ್ಲ. ತಾನು ಪೂರ್ವಜನ್ಮದಲ್ಲಿ ಸಂಪಾದಿಸಿರುವ ಪುಣ್ಯವಿಶೇಷಗಳು ಕಳೆಯುತ್ತಾ ಬಂದರೆ ಈ ಐಶ್ವರ್ಯ ಸಮೃದ್ಧಿಯು ನಾಶವಾಗುವುದು.

೧೩. ಈಗ ದಾನಮಾಡಿದರೆ ಮುಂದೆ ಯಾವ ಫಲವುಂಟಾಗುವುದೆಂಬುದನ್ನು ತಾನು ನೋಡಲು ಆಗದೆ ಹೋದರೂ ಮಾನವನು ಸತ್ಪಾತ್ರನಾದವನಿಗೆ ದ್ರವ್ಯವನ್ನು ದಾನಮಾಡಬೇಕು. ಮೃತನಾದವನಿಗೆ ಈ ದಾನಮಾಡುವ ಯೋಗ್ಯತೆ ಇಲ್ಲದುದರಿಂದ ದಾನಮಾಡಿದರೆ ಫಲವುಂಟೋ ಇಲ್ಲವೋ ಎಂಬ ಸಂಶಯವು ಸಹಜವಾದುದು.

೧೪. ಎಲೈ ಪರಿಶುದ್ಧಸ್ವರೂಪನಾದ ಯುಧಿಷ್ಠಿರನೇ! ಹಿಂದೆ ನನಗೆ ವಾಲ್ಮೀಕಿ ಮನು ಮುಂತಾದವರು ತಿಳಿಸಿರುವ ನಾನಾವಿಧವಾದ ದಾನಗಳನ್ನು ನಿನಗೆ ಹೇಳುವೆನು ಕೇಳು.

೧೫. ಓ ಧರ್ಮರಾಜ! ಯಾವುದಾದರೊಂದು ವ್ರತವನ್ನಾಚರಿಸಿ ಮಹೇಶ್ವರನನ್ನು ಪೂಜಿಸಿ, ಅನಂತರ ಬ್ರಾಹ್ಮಣರಿಗೆ ಯಥಾಶಕ್ತಿ ದಾನಮಾಡುವುದೇ ಮನುಷ್ಯನ ಜನ್ಮವೆಂಬ ವೃಕ್ಷಕ್ಕೆ ಫಲರೂಪವಾಗಿರುವುದು.

॥ ಯುಧಿಷ್ಠಿರ ಉವಾಚ ॥

ಬ್ರಾಹ್ಮಣಪ್ರೀಣನಾರ್ಥಾಯ ಕೇಶವಸ್ಯ ಶಿವಸ್ಯ ಚ ।
ಯಾನಿ ದಾನಾನಿ ದೇಯಾನಿ ತಾನ್ಯಾಚಕ್ಷ್ವ ಯದೂತ್ತಮ ॥ ೧೬ ॥

ಯೇನ ಚೈವ ವಿಧಾನೇನ ದಾನಂ ಪುಣ್ಯಸುಖಾವಹಂ ।
ಐಹಿಕಾಮುಷ್ಮಿಕಾವಾಪ್ತಿಂ ಕರೋತಿ ನಹಿ ಹನ್ಯತೇ ॥ ೧೭ ॥

॥ ಶ್ರೀಕೃಷ್ಣ ಉವಾಚ ॥

ತ್ರೀಣ್ಯಾಹುರತಿದಾನಾನಿ ಗಾವಃ ಪೃಥ್ವೀ ಸರಸ್ವತೀ ।
ಆಸಪ್ತಮಂ ಪುನಂತ್ಯೇತೇ ದೋಹವಾಹನವೇದನೈಃ ॥ ೧೮ ॥

ಗೋದಾನಮಾದೌ ವಕ್ಷ್ಯಾಮಿ ಪ್ರತ್ಯಕ್ಷಕ್ರಮಯೋಗತಃ ।
ಯೇನ ಚೈವ ವಿಧಾನೇನ ಅನ್ಯೂನಾಧಿಕವಿಸ್ತರಂ ॥ ೧೯ ॥

---

೧೬-೧೭. ಓ ಯದುಶ್ರೇಷ್ಠನೇ! ಬ್ರಾಹ್ಮಣರು ಕೇಶವ ಮತ್ತು ಶಿವ ಇವರ ತೃಪ್ತ್ಯರ್ಥವಾಗಿ ಯಾವ ದಾನಗಳನ್ನು ಯಾವ ವಿಧದಿಂದ ಆಚರಿಸಬೇಕು ಯಾವ ರೀತಿಯಿಂದ ಆಚರಿಸಿದರೆ ಪುಣ್ಯಪ್ರದವೂ ಸುಖಕರವೂ ಆಗುವುದು? ಅಲ್ಲದೆ ಮಾನವನಿಗೆ ಐಹಿಕಸೌಖ್ಯವನ್ನೂ ಮತ್ತು ಮುಂದಿನ ಜನ್ಮದಲ್ಲಿ ಉತ್ಕೃಷ್ಟವಾದ ಫಲಗಳನ್ನೂ ಕೊಡುವುದು? ಇವೆಲ್ಲವನ್ನೂ ವಿಸ್ತಾರವಾಗಿ ತಿಳಿಸಬೇಕು ಎಂದು ಪ್ರಾರ್ಥಿಸಿದನು.

೧೮. ಶ್ರೀ ಕೃಷ್ಣನು ಹೇಳುತ್ತಾನೆ—ಓ ಯುಧಿಷ್ಠಿರ! ಗೋದಾನ, ಭೂದಾನ, ಸರಸ್ವತೀ (ವಿದ್ಯಾ) ದಾನ, ಈ ಮೂರೂ ತುಂಬಾ ಉತ್ಕೃಷ್ಟವಾದ ದಾನಗಳೆಂದು ಹೇಳುವರು. ಇವುಗಳು ಕ್ರಮವಾಗಿ ಹಾಲು ಕರೆಯುವ ಗೋವು, ವಾಹನ (ಆಧಾರ) ವಾಗಿರುವ ಭೂಮಿ, ಮತ್ತು ಜ್ಞಾನವನ್ನುಂಟುಮಾಡುವ ವಿದ್ಯೆ ಈ ಮೂರರ ದಾನದಿಂದ ತನ್ನ ಹಿಂದಿನ ಏಳು ತಲೆಮಾರಿನವರನ್ನೂ ಪರಿಶುದ್ಧರನ್ನಾಗಿ ಮಾಡುವುದು.

೧೯. ಧರ್ಮರಾಜ! ಈಗ ನಾನು ಹೇಳಿದ ಮೂರು ದಾನಗಳಲ್ಲಿ ಮೊದಲನೆಯದಾದ ಗೋದಾನವನ್ನು ವಿಧಿಪೂರ್ವಕವಾಗಿ ಸ್ವಲ್ಪವೂ ನ್ಯೂನತೆ ಆಧಿಕ್ಯ ಇವುಗಳಿಲ್ಲದಂತೆ ಸಂಕ್ಷೇಪವಾಗಿ ಹೇಳುತ್ತೇನೆ ಕೇಳು.

|| ಯುಧಿಷ್ಠಿರ ಉವಾಚ ||

**ದೇಯಾಃ ಕಿಂಲಕ್ಷಣಾ ಗಾವಃ ಕಾಶ್ಚ ರಾಜನ್ವಿವರ್ಜಿತಾಃ |**
**ಕೀದೃಶಾಯ ಪ್ರದಾತವ್ಯಾ ನ ದೇಯಾಃ ಕೀದೃಶಾಯ ವೈ || ೨೦ ||**

|| ಶ್ರೀಕೃಷ್ಣ ಉವಾಚ ||

**ತರುಣೀ ರೂಪಸಂಪನ್ನಾ ಸುಶೀಲಾ ಚ ಪಯಸ್ವಿನೀ |**
**ನ್ಯಾಯಾರ್ಜಿತಾ ಸವತ್ಸಾ ಚ ಪ್ರದೇಯಾ ಶ್ರೋತ್ರಿಯಾಯ ಗೌಃ ||**

**ವೃದ್ಧಾ ಸರೋಗಾ ಹೀನಾಂಗೀ ವಂಧ್ಯಾ ದುಷ್ಟಾ ಮೃತಪ್ರಜಾ |**
**ದೂರಸ್ಥಾऽನ್ಯಾಯಲಬ್ಧಾ ಚ ದೇಯಾ ಗೌರ್ನ ಕಥಂಚನ || ೨೨ ||**

---

೨೦. ಯುಧಿಷ್ಠಿರನು ಪುನಃ ಪ್ರಶ್ನೆಮಾಡುತ್ತಾನೆ—ದೇವ! ಎಂತಹ ಲಕ್ಷಣಗಳುಳ್ಳ ಗೋವುಗಳನ್ನು ದಾನಮಾಡಬೇಕು. ಎಷ್ಟು ದಾನಮಾಡಬೇಕು. ಎಂತಹ ಪಾತ್ರನಿಗೆ ಕೊಡಬೇಕು. ಯಾರಿಗೆ ಕೊಡಬಾರದು. ಇವುಗಳನ್ನು ದಯವಿಟ್ಟು ತಿಳಿಸಬೇಕು. ಎನ್ನಲು ಶ್ರೀ ಕೃಷ್ಣನು ಹೇಳುತ್ತಾನೆ.

೨೧. ಓ ಯುಧಿಷ್ಠಿರ! ಎಳಕಾದುದೂ (ಪ್ರಾಯದ್ದೂ) ಒಳ್ಳೆಯ ರೂಪು ಮತ್ತು ಸೌಮ್ಯಸ್ವಭಾವ ಇವುಗಳಿಂದ ಕೂಡಿದುದೂ, ತುಂಬಾ ಹಾಲು ಕೊಡುತ್ತಿರುವುದೂ ಆದ ಹಸುವನ್ನು ಕರುಸಮೇತ ವೇದಾಧ್ಯಯನ ಸಂಪನ್ನನೂ ನಿತ್ಯ ಕರ್ಮಾನುಷ್ಠಾನತತ್ಪರನೂ ಆದ ಶ್ರೋತ್ರಿಯಬ್ರಾಹ್ಮಣನಿಗೆ ದಾನಮಾಡಬೇಕು. ಆ ಹಸುವು ಮೋಸದ ರೀತಿಯಿಲ್ಲದೆ ನ್ಯಾಯರೀತಿಯಿಂದ ಸಂಪಾದನೆ ಮಾಡಿದ್ದಾಗಿರಬೇಕು.

೨೨. ಪಯಸ್ವಿನಲ್ಲಿ ಮುದಿ, ರೋಗಪೀಡಿತವಾದುದು ಅಂಗಹೀನ, ಗೊಡ್ಡು ದುಷ್ಟವಾದ ಸ್ವಭಾವದ್ದು (ಅಗಡು) ಹಾಕಿದ ಕರುಗಳೆಲ್ಲಾ ಸಾಯುತ್ತಿರುವುದು ಅನ್ಯಾಯದಿಂದ ಸಂಪಾದಿಸಿದುದು ಇಂಥ ಹಸುವನ್ನು ಎಂದಿಗೂ ದಾನಮಾಡಬಾರದು. ದಾನಕೊಡುವಾಗ ಹಸು ಸಮೀಪದಲ್ಲೇ ಇರಬೇಕು.

**ಸ ದತ್ತ್ವೈವ ಹರೇತ್ಪಾಪಂ ಶ್ರೋತ್ರಿಯಾಯಾಹಿತಾಗ್ನಯೇ ।**
**ಅತಿಥಿಪ್ರಿಯಾಯ ದಾಂತಾಯ ಧೇನುಂ ದದ್ಯಾದ್ಗುಣಾಧಿಕೇ ॥ ೨೩ ॥**

**ಅಕುಲೀನಾಯ ಮೂರ್ಖಾಯ ಲುಬ್ಧಾಯ ಪಿಶುನಾಯ ಚ ।**
**ಹವ್ಯಕವ್ಯವ್ಯಪೇತಾಯ ನ ದೇಯಾ ಗೌಃ ಕಥಂ ಚನ ॥ ೨೪ ॥**

**॥ ಶ್ರೀಕೃಷ್ಣ ಉವಾಚ ॥**
**ಪುಣ್ಯಂ ದಿನಮಥಾಸಾದ್ಯ ಸ್ನಾತ್ವಾ ತರ್ಪ್ಯ ಪಿತೄಂಸ್ತಥಾ ।**
**ಘೃತಕ್ಷೀರಾಭಿಷೇಕಂ ಚ ಕೃತ್ವಾ ವಿಷ್ಣೋಃ ಶಿವಸ್ಯ ಚ ॥ ೨೫ ॥**

**ಸಮಭ್ಯರ್ಚ್ಯ ಯಥಾನ್ಯಾಯಂ ಪುಷ್ಪಾದಿಭಿರನುಕ್ರಮಾತ್ ।**
**ಉದಙ್ಮುಖೀಂ ಪ್ರಾಙ್ಮುಖೀಂ ವಾ ಗೃಷ್ಟಿಂ ಕೃತ್ವಾ ಪಯಸ್ವಿನೀಂ ॥೨೬॥**

---

೨೩. ಆಹಿತಾಗ್ನಿಯಾದ ಶ್ರೋತ್ರಿಯನಿಗೆ ಈ ಗೋದಾನ ಮಾಡುವುದರಿಂದ ದಾತೃವಿನ ಸಕಲ ಪಾಪಗಳೂ ನಾಶವಾಗುವುವು. ಆದುದರಿಂದ ಅತಿಥಿಗಳನ್ನು ಸತ್ಕರಿಸುವುದರಲ್ಲಿ ತುಂಬಾ ಪ್ರೀತಿಯುಳ್ಳವನೂ, ಇಂದ್ರಿಯನಿಗ್ರಹವುಳ್ಳವನೂ ಆಗಿರುವ ಇಂತಹ ಬ್ರಾಹ್ಮಣನಿಗೆ ಗುಣಭರಿತವಾದ ಒಳ್ಳೆಯ ಹಸುವನ್ನು ದಾನಮಾಡಬೇಕು.

೨೪. ನೀಚವಂಶದಲ್ಲಿ ಜನಿಸಿದವನೂ ಮೂರ್ಖ, ಲೋಭಿ, ದುಷ್ಟ, ದೇವಕರ್ಮಗಳನ್ನೂ ಪಿತೃಕರ್ಮಗಳನ್ನೂ ಮಾಡದೆ ಇರುವನು, ನಾಮಮಾತ್ರಕ್ಕೆ ಬ್ರಾಹ್ಮಣನೆನಿಸಿರುವನು ಇಂಥವನಿಗೆ ಎಂದಿಗೂ ಗೋದಾನ ಮಾಡಬಾರದು.

೨೫. ಶ್ರೀ ಕೃಷ್ಣನು ಹೇಳುತ್ತಾನೆ—ಪುಣ್ಯಕರವಾದ ದಿವಸದಲ್ಲಿ ಯಜಮಾನನು ಸ್ನಾನಮಾಡಿ ಪಿತೃದೇವತೆಗಳಿಗೆ ತರ್ಪಣಕೊಟ್ಟು ಬಳಿಕ ವಿಷ್ಣು, ಶಿವ ಮುಂತಾದ ತನ್ನ ಇಷ್ಟದೇವತೆಗೆ ಘೃತ ಕ್ಷೀರಾದಿ ಪಂಚಾಮೃತದಿಂದ ಅಭಿಷೇಕಮಾಡಬೇಕು.

೨೬. ಆಮೇಲೆ ವಿಧಿಗನುಸಾರವಾಗಿ ಪುಷ್ಪವೇ ಮುಂತಾದ ಸಾಮಗ್ರಿಗಳಿಂದ ಪೂಜಿಸಿ, ದಾನಮಾಡುವ ಪಯಸ್ವಿನಿಯನ್ನು (ತುಂಬಾ ಹಾಲುಕೊಡುವ ಹಸುವನ್ನು) ಉತ್ತರದಿಕ್ಕಿಗೋ ಪೂರ್ವದಿಕ್ಕಿಗೋ ಮುಖಮಾಡಿ ನಿಲ್ಲಿಸಬೇಕು.

ಸವತ್ಸಾಂ ವಸ್ತ್ರಸಂವೀತಾಂ ಸಿತಯಜ್ಞೋಪವೀತಿನೀಂ ।
ಸ್ವರ್ಣಶೃಂಗೀಂ ರೌಪ್ಯಖುರೀಂ ಕಾಂಸ್ಯದೋಹನಕಾನ್ವಿತಾಂ ॥ ೨೭ ॥

ಶಕ್ತಿತೋ ದಕ್ಷಿಣಾಯುಕ್ತಾಂ ಬ್ರಾಹ್ಮಣಾಯ ನಿವೇದಯೇತ್ ।
ಪುಚ್ಛೇ ಕೃಷ್ಣಾಜಿನಂ ದೇಯಂ ಗಾಂ ಪುಚ್ಛೇ ಕರಿಣಂ ಕರೇ ॥ ೨೮ ॥

ಅಶ್ವಂ ಸದಾ ಸುಕರ್ಣೇ ವಾ ದಾಸೀಂ ಶಿರಸಿ ದಾಪಯೇತ್ ।
ಗಾವೋ ಮಮಾಗ್ರತಃ ಸಂತು ಗಾವೋ ಮೇ ಸಂತು ಪೃಷ್ಠತಃ ॥ ೨೯ ॥

ಗಾವೋ ಮೇ ಹೃದಯೇ ಸನ್ತು ಗವಾಂ ಮಧ್ಯೇ ವಸಾಮ್ಯಹಂ ।
ಪ್ರದಕ್ಷಿಣಾಂ ತತಃ ಕೃತ್ವಾ ಧೇನುಂ ದ್ವಿಜವರಾಯ ತಾಂ ॥ ೩೦ ॥

---

೨೭. ಅನಂತರ ಅದರ ಕೊರಳಿಗೆ ವಸ್ತ್ರವನ್ನು ಮಾಲೆಯಂತೆ ಹಾಕಿ ಮೈಮೇಲೂ ಬಟ್ಟೆಯನ್ನು ಹೊದ್ದಿಸಿ ಶುಭ್ರವಾದ ಯಜ್ಞೋಪವೀತವನ್ನು ಧರಿಸ ಬೇಕು. ಅಲ್ಲದೆ ಈ ಹಸುವಿಗೆ ಸುವರ್ಣದ ಅಣಸುಗಳನ್ನೂ, ಬೆಳ್ಳಿಯ ಗೊರಸು ಗಳನ್ನೂ, ಅಲಂಕರಿಸಿ ಕಂಚಿನ ಹಾಲುಕರೆಯುವ ಪಾತ್ರೆಯನ್ನು ಜತೆಯಲ್ಲಿ ದಾನ ಮಾಡಬೇಕು. ದಾನಮಾಡುವಾಗ ವಂಚನೆಯಿಲ್ಲದೆ ತನ್ನ ಶಕ್ತ್ಯನುಸಾರ ದಕ್ಷಿಣೆ ಯನ್ನು ಆ ಗೋವಿನೊಡನೆ ಬ್ರಾಹ್ಮಣನಿಗೆ ಕೊಡಬೇಕು.

೨೮. ಕೃಷ್ಣಾಜಿನವನ್ನು ದಾನಮಾಡುವಾಗಲೂ ಮತ್ತು ಗೋದಾನ ಮಾಡುವಾಗಲೂ ಎರಡನ್ನೂ ಬಾಲದ ಕಡೆಯಿಂದ ದಾನಮಾಡಬೇಕು. ಆನೆ ಯನ್ನು ಸೊಂಡಲಿನ ಕಡೆಯಿಂದಲೂ ಕುದುರೆಯನ್ನು ಕಿವಿಗಳನ್ನು ಹಿಡಿದು ಕೊಂಡೂ ದಾಸಿಯನ್ನು ತಲೆಯನ್ನು ಸ್ಪರ್ಶಿಸಿ ತೋರಿಸುತ್ತಲೂ ದಾನಮಾಡ ಬೇಕೆಂದು ವಿಧಿಯಿರುವುದು.

೨೯-೩೦. ಗೋವನ್ನು ದಾನಮಾಡುವಾಗ "ನನ್ನ ಮುಂದುಗಡೆಯಲ್ಲಿಯೂ ನನ್ನ ಹಿಂಭಾಗದಲ್ಲಿಯೂ ನನ್ನ ಹೃದಯದಲ್ಲಿಯೂ ಸಹ ಯಾವಾಗಲೂ ಗೋವು ಗಳು ಇರಲಿ. ನಾನು ಗೋವುಗಳ ಮಧ್ಯದಲ್ಲೇ ವಾಸಮಾಡುತ್ತೇನೆ" ಎಂದು ಅರ್ಥವನ್ನು ಸೂಚಿಸುವ ಮಂತ್ರವನ್ನು ಹೇಳುತ್ತಾ ಆ ಗೋವನ್ನು ಪ್ರದಕ್ಷಿಣೆ ಮಾಡಿ ಬ್ರಾಹ್ಮಣೋತ್ತಮನಿಗೆ ದಾನಮಾಡಬೇಕು.

ಇಮಾಂ ಚ ಪ್ರತಿಗೃಹ್ಣೀಷ್ವ ಧೇನುರ್ದತ್ತಾ ಮಯಾ ತವ ।
ಏವಮುಚ್ಚಾರ್ಯ ತಂ ವಿಪ್ರಂ ದೇವೇಶಂ ಪರಿಕಲ್ಪಯೇತ್ ॥ ೩೧ ॥

ಅನುವ್ರಜೇಚ್ಚ ಗಚ್ಛಂತಂ ಪದಾನ್ಯಷ್ಟೌ ನರಾಧಿಪ ।
ಅನೇನ ವಿಧಿನಾ ಧೇನುಂ ಯೋ ವಿಪ್ರಾಯ ಪ್ರಯಚ್ಛತಿ ॥ ೩೨ ॥

ಸರ್ವಕಾಮಸಮೃದ್ಧಾತ್ಮಾ ಸ್ವರ್ಗಲೋಕಂ ಸ ಗಚ್ಛತಿ ।
ಸಪ್ತ ಪೂರ್ವಾನ್ಸಪ್ತಪರಾನಾತ್ಮಾನಂ ಚೈವ ಮಾನವಃ ॥ ೩೩ ॥

ಸಪ್ತ ಜನ್ಮಕೃತಾತ್ಪಾಪಾನ್ಮೋಚಯತ್ಯವನೀಪತೇ ।
ಪದೇ ಪದೇಽಶ್ವಮೇಧಸ್ಯ ಗೋಶತಸ್ಯ ಚ ಮಾನವಃ ॥ ೩೪ ॥

ಫಲಮಾಪ್ನೋತಿ ರಾಜೇಂದ್ರ ದಕ್ಷಾಯೈವಂ ಜಗೌ ಹರಿಃ ।
ಸರ್ವಕಾಮಪ್ರದಾ ಸಾ ಸ್ಯಾತ್ಸರ್ವಕಾಲೇಷು ಪಾರ್ಥಿವ ॥ ೩೫ ॥

---

೩೧. ದಾನಮಾಡುವಾಗ ಆ ಬ್ರಾಹ್ಮಣೋತ್ತಮನನ್ನು ದೇವತಾಸಾರ್ವಭೌಮನೆಂದು ಭಾವಿಸಿ "ಎಲೈ ಬ್ರಾಹ್ಮಣೋತ್ತಮನೆ! ಈ ಹಸುವನ್ನು ದಯವಿಟ್ಟು ಪ್ರತಿಗ್ರಹಿಸು" ಎಂದು ಹೇಳಬೇಕು.

೩೨-೩೫. ದಾನವನ್ನು ಸ್ವೀಕರಿಸಿ ಆ ಬ್ರಾಹ್ಮಣನು ಹೊರಟಾಗ ಅವನನ್ನು ಹಿಂಬಾಲಿಸಿ ಎಂಟು ಹೆಜ್ಜೆ (ಅಂದರೆ ಸ್ವಲ್ಪದೂರ) ಜತೆಯಲ್ಲಿ ಹೋಗಿ ಕಳುಹಿಸಿಕೊಟ್ಟು ಬರಬೇಕು. ಓ ರಾಜೇಂದ್ರ! ಈ ರೀತಿ ವಿಧಿಪೂರ್ವಕವಾಗಿ ಬ್ರಾಹ್ಮಣೋತ್ತಮನಿಗೆ ಗೋದಾನಮಾಡುವ ಮಾನವನು ಸಕಲ ಅಭೀಷ್ಟಗಳನ್ನೂ ಪಡೆದು ಸ್ವರ್ಗಲೋಕವನ್ನು ಹೊಂದುವನು. ಅಲ್ಲದೆ ತನ್ನ ಹಿಂದಿನ ಏಳು ತಲೆಮಾರಿನವರನ್ನೂ ಮುಂದಿನ ಏಳು ತಲೆಮಾರಿನವರನ್ನೂ ತನ್ನನ್ನೂ ಸಹ ಏಳು ಜನ್ಮಗಳಲ್ಲಿ ಮಾಡಿದ ಪಾಪಗಳಿಂದಲೂ ಬಿಡುಗಡೆ ಮಾಡುತ್ತಾನೆ. ಎಲೈ ರಾಜನೇ! ಇದಲ್ಲದೆ ಪದೇ ಪದೇ (ಆಗಾಗ್ಗೆ) ಅಶ್ವಮೇಧಯಾಗ ಮಾಡಿದ ಫಲವನ್ನೂ ನೂರು ಗೋದಾನದ ಫಲವನ್ನೂ ಪಡೆಯುವನು. ಓ ಯುಧಿಷ್ಠಿರ! ಈ ಗೋದಾನ ವಿಧಿಯನ್ನು ಮತ್ತು ಅದರಿಂದುಂಟಾಗುವ ಫಲಗಳನ್ನು ಮಹಾವಿಷ್ಣುವು ಹಿಂದೆ ದಕ್ಷಪ್ರಜಾಪತಿಗೆ ತಿಳಿಸಿದ್ದನು. ಎಲೈ ರಾಜವಲ್ಲಭ! ಈ ಗೋದಾನವು ಎಲ್ಲಾ ಕಾಲಗಳಲ್ಲಿಯೂ ಸಕಲ ಇಷ್ಟಾರ್ಥಗಳನ್ನೂ ಸಲ್ಲಿಸುವುದು.

ಭವತ್ಯಸೌ ಪಾಪಹರಾ ಯಾವದಿಂದ್ರಾಶ್ಚತುರ್ದಶ ।
ಸರ್ವೇಷಾಮೇವ ಪಾಪಾನಾಂ ಕೃತಾನಾಮಪಿ ಜಾನತಾ ॥ ೩೬ ॥

ಪ್ರಾಯಶ್ಚಿತ್ತಮಿದಂ ಪ್ರೋಕ್ತಮನುತಾಪೋಪಬೃಂಹಿತಂ ।
ಸರ್ವೇಷಾಮೇವ ದಾನಾನಾಮೇಕಜನ್ಮಾನುಗಂ ಫಲಂ ॥ ೩೭ ॥

ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈಃ ಶೂದ್ರೈಶ್ಚಾನ್ಯೈಶ್ಚ ಮಾನವೈಃ ।
ಲೋಕಾಃ ಕಾಮಗಮಾಃ ಪ್ರಾಪ್ತಾ ದತ್ತ್ವೈತದ್ವಿಧಿನಾ ನೃಪ ॥ ೩೮ ॥

ಗೋಭ್ಯೋಽಧಿಕಂ ಜಗತಿ ನಾಪರಮಸ್ತಿ ಕಿಂಚಿತ್ ।
ದಾನಂ ಪವಿತ್ರಮಿತಿ ಶಾಸ್ತ್ರವಿದೋ ವದಂತಿ ॥

---

೩೬-೩೭. ಹದಿನಾಲ್ಕು ಮಂದಿ ಇಂದ್ರರಿರುವವರೆಗೂ ಎಂದರೆ ಮಹಾಪ್ರಳಯದವರೆಗೂ ಮಾಡುವ ಪಾಪಗಳನ್ನೆಲ್ಲಾ ಈ ಗೋದಾನವು ತಪ್ಪದೆ ನಾಶಮಾಡುವುದು. ತಿಳಿಯದೆ ಮಾಡಿದ ಪಾಪಗಳಿಗೂ ಮತ್ತು ತಿಳಿದು ಮಾಡಿರುವ ಪಾಪಗಳಿಗೂ ಈ ಗೋದಾನವು ಪ್ರಾಯಶ್ಚಿತ್ತರೂಪವಾಗಿರುವುದು. ಅಲ್ಲದೆ ಈ ಗೋದಾನವು ಇತರ ಸಕಲ ದಾನಗಳಿಂದುಂಟಾಗುವ ಫಲಗಳೆಲ್ಲವನ್ನೂ ಒಂದೇ ಜನ್ಮದಲ್ಲಿ ಉಂಟುಮಾಡುವುದು.

೩೮. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೂ ಮತ್ತು ಇತರ ಮಾನವರೂ ಸಹ ಈ ಗೋವನ್ನು ನಾನು ಹೇಳಿದ ವಿಧಿಗನುಸಾರ ಹಿಂದೆ ದಾನಮಾಡಿ ತಾವು ಅಪೇಕ್ಷಿಸಿದ ಸ್ವರ್ಗಾದಿಲೋಕಗಳನ್ನು ಪಡೆದಿರುವರು,

೩೯. ಎಲೈ ಧರ್ಮರಾಜ! ಶಾಸ್ತ್ರಜ್ಞರು ಗೋವಿಗಿಂತಲೂ ಉತ್ಕೃಷ್ಟವೂ ಮತ್ತು ಪವಿತ್ರವೂ ಆಗಿರುವ ದಾನವು ಈ ಪ್ರಪಂಚದಲ್ಲಿ ಬೇರೆ ಇಲ್ಲವೆಂದು ಹೇಳುವರು. ಒಳ್ಳೆಯ ಸಂಪತ್ತುಗಳನ್ನೂ ಮತ್ತು ದೇವಲೋಕವನ್ನೂ ಅಪೇಕ್ಷಿಸುವವರು

ಸತ್ಸಂಪದಃ ಸುರಸದಶ್ಚ ಸವಿಾಹಮಾನ್ಯೈಃ ।
ದೇಯಾಃ ಸದೈವ ವಿಧಿನಾ ದ್ವಿಜಪುಂಗವಾಯ　　　　॥ ೩೯ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ
ಯುಧಿಷ್ಠಿರ ಸಂವಾದೇ ಪ್ರತ್ಯಕ್ಷ ಧೇನುದಾನ ವಿಧಿವರ್ಣನಂ
ನಾಮೈಕಪಂಚಾಶದುತ್ತರಶತತಮೋಽಧ್ಯಾಯಃ.



ಯಾವಾಗಲೂ ಬ್ರಾಹ್ಮಣೋತ್ತಮನಿಗೆ ಹಿಂನೆ ಹೇಳಿದ ವಿಧಿಯಂತೆ ಗೋದಾನ ಮಾಡಬೇಕು.

ಇಲ್ಲಿಗೆ ಶ್ರೀಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀಕೃಷ್ಣ ಮತ್ತು
ಯುಧಿಷ್ಠಿರ ಇವರ ಸಂವಾದದಲ್ಲಿ ಪ್ರತ್ಯಕ್ಷ ಗೋದಾನ ವಿಧಿ
ವರ್ಣನೆಯೆಂಬ ನೂರೈವತ್ತೊಂದನೆಯ ಅಧ್ಯಾಯವು
ಮುಗಿದುದು.



# ಅಥ ಶ್ರೀ ಭವಿಷ್ಯೇ ಮಹಾಪುರಾಣ

## ಉತ್ತರಪರ್ವಣಿ

## ದ್ವಿಪಂಚಾಶದುತ್ತರಶತತಮೋಽಧ್ಯಾಯಃ

---

॥ ಶ್ರೀಕೃಷ್ಣ ಉವಾಚ ॥

ಅಥಾತಃ ಸಂಪ್ರವಕ್ಷ್ಯಾಮಿ ಧೇನೂನಾಂ ಕಲ್ಪನಾಂ ನೃಪ ।
ವಿಶೇಷವಿಧಿನಾ ಯಾಶ್ಚ ದೇಯಾಃ ಕಾಮಾನಭೀಪ್ಸುಭಿಃ ॥ ೧ ॥

ಕಾಮಂ ಯದ್ದೀಯತೇ ದಾನಂ ಸಮಗ್ರಂ ತತ್ಸುಖಾವಹಂ ।
ಅಸಮಗ್ರಂ ತು ದೋಷಾಯ ಭವತೀಹ ಪರತ್ರ ಚ ॥ ೨ ॥

ತಸ್ಮಾನ್ನ ದಕ್ಷಿಣಾಹೀನಂ ವಿಧಾನವಿಕಲಂ ತಥಾ ।
ದೇಯಂ ದಾನಂ ಮಹಾರಾಜ ಸಮಗ್ರಫಲಕಾಮ್ಯಯಾ ॥ ೩ ॥

---

### ನೂರಐವತ್ತೆರಡನೆಯ ಅಧ್ಯಾಯ

೧. ಶ್ರೀಕೃಷ್ಣನು ಹೇಳುತ್ತಾನೆ—ಎಲೈ ರಾಜನೆ! ಅನೇಕ ಇಷ್ಟಾರ್ಥಗಳನ್ನು ಅಪೇಕ್ಷಿಸುವ ಮಾನವರು ವಿಶೇಷ ವಿಧಿಯಿಂದ ದಾನಮಾಡಬೇಕಾದ ಧೇನು ಸ್ವರೂಪವನ್ನು ಹೇಳುವೆನು ಕೇಳು.

೨. ಸಂಪೂರ್ಣವಾದ ವಿಧಿಯನ್ನನುಸರಿಸಿ ಇಚ್ಛಾಪೂರ್ವಕವಾಗಿ ಕೊಡುವ ದಾನವು ಸುಖವನ್ನುಂಟುಮಾಡುವುದು. ಸಮಗ್ರವಾಗಿಲ್ಲದ ದಾನವು ಮಾನವನಿಗೆ ಇಹಪರಗಳೆರಡರಲ್ಲೂ ದೋಷವನ್ನುಂಟುಮಾಡುವುದು.

೩. ಓ ಮಹಾರಾಜ! ಆದುದರಿಂದ ಸಂಪೂರ್ಣ ಫಲಗಳನ್ನಪೇಕ್ಷಿಸುವವನು ವಿಧಿಯನ್ನನನುಸರಿಸದೆಯೂ, ದಕ್ಷಿಣಾ ಹೀನನಾಗಿಯೂ ಎಂದಿಗೂ ದಾನಮಾಡಬಾರದು.

**ಅನ್ಯಥಾ ದೀಯಮಾನಂ ತದಹಂಕಾರಾಯ ಕೇವಲಂ |**
**ಪ್ರತ್ಯಕ್ಷಂ ಚಾರ್ಥಹಾನಿಃ ಸ್ಯಾನ್ನ ವಾ ತತ್ಫಲದಂ ಭವೇತ್ || ೪ ||**

**ತಿಲಧೇನುಂ ಪ್ರವಕ್ಷ್ಯಾಮಿ ಶೃಣು ಪಾರ್ಥಿವಸತ್ತಮ |**
**ವಾರಾಹೇಣ ಪುರಾ ಪ್ರೋಕ್ತಾಂ ಮಹಾಪಾತಕನಾಶಿನೀಂ || ೫ ||**

**ಯಾಂ ದತ್ವಾ ಬ್ರಹ್ಮಹಾ ಗೋಘ್ನಃ ಪಿತೃಹಾ ಗುರುತಲ್ಪಗಃ |**
**ಅಗಾರದಾಹೀ ಗರದಃ ಸರ್ವಪಾಪರತೋಽಪಿ ವಾ || ೬ ||**

**ಮಹಾಪಾತಕಯುಕ್ತಶ್ಚ ಸಂಯುಕ್ತಶ್ಚೋಪಪಾತಕೈಃ |**
**ಮುಚ್ಯತೇ ಹ್ಯಖಿಲೈಃ ಪಾಪೈಃ ಸ್ವರ್ಗಲೋಕಂ ಚ ಗಚ್ಛತಿ || ೭ ||**

---

೪. ಹೀಗೆ ವಿಧಿಯನ್ನನುಸರಿಸದೆ ಮಾಡುವ ದಾನವು ಕೇವಲ ಆತ್ಮ ಪ್ರಶಂಸೆಯ ಅಹಂಕಾರಕ್ಕೆ ಮಾತ್ರ ಕಾರಣವಾಗುವುದೇ ಹೊರತು ಫಲದಾಯಕ ವಾಗುವುದಿಲ್ಲ. ಇದರಿಂದ ಕೇವಲ ದ್ರವ್ಯವ್ಯಯವೇ 'ವಿನಾ ಯಾವ ಪ್ರಯೋ ಜನವೂ ಇಲ್ಲ.

೫. ಎಲೈ ರಾಜಶ್ರೇಷ್ಠನೇ ! ಹಿಂದೆ ವರಾಹಾವತಾರಮಾಡಿದ್ದಾಗ ಮಹಾ ವಿಷ್ಣುವು ತಿಲಧೇನುವಿನ ವಿಷಯವನ್ನೂ, ಅದರ ದಾನಾದಿ ವಿಧಿಯನ್ನೂ ಹೇಳಿರು ವೆನು. ಈ ದಾನವು ಪಂಚಮಹಾಪಾತಕಗಳನ್ನು ಸಹ ನಾಶಮಾಡುವುದು.

೬-೭. ಈ ತಿಲಧೇನುವನ್ನು (ತಿಲಧೇನು ಸ್ವರೂಪವು ಈ ಮುಂದೆ ವಿವರಿ ಸಲ್ಪಟ್ಟಿದೆ) ದಾನಮಾಡುವುದರಿಂದ, ಬ್ರಹ್ಮಹತ್ಯಮಾಡಿದವನೂ, ಗೋಹತ್ಯ ಮಾಡಿದವನೂ, ಪಿತೃಹತ್ಯಮಾಡಿದವನೂ, ಗುರುಪತ್ನಿಯಲ್ಲಿ ಸುಖಿಸಿದವನೂ, ಮನೆಗಳನ್ನು ಸುಟ್ಟವನೂ, ವಿಷವನ್ನು ಕೊಟ್ಟು ಜನಗಳನ್ನು ಕೊಂದವನೂ, ಅಲ್ಲದೆ ಸಕಲ ಪಾಪಗಳಲ್ಲಿಯೂ ಸದಾ ನಿರತನಾಗಿರುವನೂ, ಮತ್ತು ಮಹಾ ಪಾತಕಗಳಿಂದ ಕೂಡಿದವನೂ, ಇತರ ಅನೇಕ ಸಣ್ಣಸಣ್ಣ ಉಪಪಾತಕಗಳಿಂದ ಯುಕ್ತನಾದವನೂ ಸಹ, ತನ್ನ ಸಕಲ ಪಾಪಗಳನ್ನೂ ಕಳೆದು ಕೊಳ್ಳುವುದಲ್ಲದೆ ಸ್ವರ್ಗಲೋಕವನ್ನೂ ಹೊಂದುವನು.

ಅನುಲಿಪ್ತೇ ಮಹೀಪೃಷ್ಠೇ ಕೃಷ್ಣಾಜಿನಸಮಾವೃತೇ ।
ಧೇನುಂ ತಿಲಮಯೀಂ ಕೃತ್ವಾ ದರ್ಭಾನಾಸ್ತೀರ್ಯ ಸರ್ವತಃ ॥ ೮ ॥

ತಿಲಾಃ ಶ್ವೇತಾಸ್ತಿಲಾಃ ಕೃಷ್ಣಾಸ್ತಿಲಾ ಗೋಮೂತ್ರವರ್ಣಕಾಃ ।
ತಿಲಾನಾಂ ಚ ವಿಚಿತ್ರಾಣಾಂ ಧೇನುಂ ಸರ್ವಾಂ ಚ ಕಾರಯೇತ್ ॥ ೯ ॥

ದ್ರೋಣಸ್ಯ ವತ್ಸಕಂ ಕುರ್ಯಾಚ್ಚತುರಾಢಕಿಕಾಂ ಚ ಗಾಂ ।
ಸ್ವರ್ಣಶೃಂಗೀಂ ರೌಪ್ಯಖುರಾಂ ಗಂಧವರ್ಣವತೀಂ ತಥಾ ॥ ೧೦ ॥

ಕಾರ್ಯಾ ಶರ್ಕರಯಾ ಜಿಹ್ವಾ ಗುಡೇನಾಸ್ಯಂ ಚ ಕಂಬಲಾತ್ ।
ಇಕ್ಷುಪಾದಾಂ ತಾಮ್ರಪೃಷ್ಠೀಂ ಶುಕ್ತಿಮುಕ್ತಾಫಲೇಕ್ಷಣಾಂ ॥ ೧೧ ॥

ಪ್ರಶಸ್ತಪತ್ರಶ್ರವಣಾಂ ಫಲದಂತವತೀಂ ಶುಭಾಂ ।
ಸ್ರಗ್ದಾಮಪುಚ್ಛಾಂ ಕುರ್ವೀತ ನವನೀತಸ್ತನಾನ್ವಿತಾಂ ॥ ೧೨ ॥

---

೮-೯. ಈ ದಾನಕ್ಕೆ ಸಿದ್ಧಮಾಡುವಾಗ ಭೂಮಿಯನ್ನು ಚನ್ನಾಗಿ ಸಾರಿಸಿ, ಅದರ ಮೇಲೆ ಕೃಷ್ಣಾಜಿನವನ್ನು ಹಾಸಿ ಅದರ ಮೇಲೆ ಎಲ್ಲಕಡೆಯಲ್ಲಿಯೂ ದರ್ಭೆಗಳನ್ನು ಹರಡಬೇಕು. ಅನಂತರ ಬಿಳಿಯ ಎಳ್ಳು, ಕಪ್ಪು ಎಳ್ಳು, ಅಥವಾ ಗೋಮೂತ್ರವರ್ಣವುಳ್ಳ ಎಳ್ಳು ಅಥವಾ ಇತರ ಚಿತ್ರವಿಚಿತ್ರವಾದ ಬಣ್ಣದ ಎಳ್ಳು, ಇವುಗಳಿಂದ ಗೋವಿನ ಆಕೃತಿಯನ್ನು ನಿರ್ಮಿಸಬೇಕು.

೧೦. ಒಂದು ದ್ರೋಣಪ್ರಮಾಣದ (ಒಂದು ಕೊಳಗ) ಎಳ್ಳಿನಿಂದ ಅದರ ಕರುವನ್ನೂ ನಾಲ್ಕು ಕೊಳಗ ಪ್ರಮಾಣದ ಎಳ್ಳಿನಿಂದ ಹಸುವನ್ನೂ ರಚಿಸಬೇಕು. ಇದಕ್ಕೆ ಚಿನ್ನದಿಂದ ಕೊಂಬುಗಳನ್ನೂ ಬೆಳ್ಳಿಯಿಂದ ಗೊರಸುಗಳನ್ನೂ ಮಾಡಿಸಿ ಗಂಧದ ಬಣ್ಣವುಳ್ಳಂತೆ ಮಾಡಬೇಕು.

೧೧. ಸಕ್ಕರೆಯಿಂದ ಅದರ ನಾಲಗೆಯನ್ನೂ, ಬೆಲ್ಲದಿಂದ ಮುಖವನ್ನೂ, ಮತ್ತು ಮುಖರೋಮಗಳನ್ನೂ ರಚಿಸಬೇಕು. ಕಬ್ಬಿನ ಜಲ್ಲೆಯಿಂದ ಕಾಲುಗಳನ್ನೂ ತಾಮ್ರದಿಂದ ಪೃಷ್ಟಪ್ರದೇಶವನ್ನೂ ಮತ್ತು ಕಪ್ಪೆಯಚಿಪ್ಪು, ಮುತ್ತು ಇವುಗಳಿಂದ ಕಣ್ಣುಗಳನ್ನೂ ನಿರ್ಮಿಸಬೇಕು.

೧೨. ಅಲ್ಲದೆ ಶ್ರೇಷ್ಠವಾದ ಎಲೆಗಳಿಂದ ಕಿವಿಗಳನ್ನೂ, ಹಣ್ಣುಗಳಿಂದ ಹಲ್ಲುಗಳನ್ನೂ, ಹುವ್ವಿನಮಾಲೆಯಿಂದ ಬಾಲವನ್ನೂ, ಶುಭಕರವಾಗಿರುವಂತೆ ಮಾಡಬೇಕು. ಮತ್ತು ಈ ಹಸುವಿಗೆ ಬೆಣ್ಣೆಯಿಂದ ಕೆಚ್ಚಲನ್ನು ರಚಿಸಬೇಕು.

**ಸಿತವಸ್ತ್ರಶಿರಾಲಂಬಾಂ ಸಿತಸರ್ಷಪರೋಮಿಕಾಂ ।**
**ಫಲೈರ್ಮನೋಹರೈರನ್ನೈರ್ಮಣಿಮುಕ್ತಾಫಲಾನ್ವಿತಾಂ ॥ ೧೩ ॥**

**ಈದೃಕ್ಸಂಸ್ಥಾನಸಂಪನ್ನಾಂ ಕೃತ್ವಾ ಶ್ರದ್ಧಾಸಮನ್ವಿತಃ ।**
**ಕಾಂಸ್ಯೋಪದೋಹನಾಂ ದದ್ಯಾತ್ಪರ್ವಕಾಲೇ ಸಮಾಗತೇ ॥ ೧೪ ॥**

**ಯಾ ಲಕ್ಷ್ಮೀಃ ಸರ್ವಭೂತಾನಾಂ ಯಾ ವೈ ದೇವೇಷ್ವವಸ್ಥಿತಾ ।**
**ಧೇನುರೂಪೇಣ ಸಾ ದೇವೀ ಮಮ ಪಾಪಂ ವ್ಯಪೋಹತು ॥ ೧೫ ॥**

**ತತಃ ಪ್ರದಕ್ಷಿಣಾಂ ಕೃತ್ವಾ ಪೂಜಯಿತ್ವಾ ಪ್ರಣಮ್ಯ ಚ ।**
**ಸದಕ್ಷಿಣಾ ಮಯಾ ತುಭ್ಯಂ ದತ್ತೇತ್ಯುಕ್ತ್ವಾ ವಿಸರ್ಜಯೇತ್ ॥ ೧೬ ॥**

**ಅನೇನ ವಿಧಿನಾ ದತ್ತ್ವಾ ತಿಲಧೇನುಂ ನರಾಧಿಪ ।**
**ಸರ್ವಪಾಪವಿನಿರ್ಮುಕ್ತೋ ಪರಂ ಬ್ರಹ್ಮಾಧಿಗಚ್ಛತಿ ॥ ೧೭ ॥**

---

೧೩. ಬಿಳಿಯ ಸಾಸುವೆಗಳಿಂದ ರೋಮಗಳನ್ನು ರಚಿಸಿ, ಈ ಹಸುವಿನ ತಲೆಯಲ್ಲಿ ಬಿಳಿಯ ಬಟ್ಟೆಯನ್ನು ಜೋಲಾಡುವಂತೆ ಹೊದ್ದಿಸಬೇಕು. ಇದರ ಮುಂದುಗಡೆ ಬಗೆಬಗೆಯಾದ ಹಣ್ಣುಗಳನ್ನೂ ಮನೋಹರವಾದ ನಾನಾ ವಿಧ ಪಕ್ವಾನ್ನಗಳನ್ನೂ ಮಣಿ, ಮುತ್ತು ಮುಂತಾದವುಗಳನ್ನೂ ಇರಿಸಬೇಕು.

೧೪–೧೬. ಈರೀತಿ ರಚಿಸಿದ ತಿಲಧೇನುವನ್ನು ಹಾಲು ಕರೆಯುವ ಕಂಚಿನ ಪಾತ್ರೆಯೊಡನೆ ಪರ್ವಕಾಲಗಳಲ್ಲಿ ಶ್ರದ್ಧಾಭಕ್ತಿಸಮನ್ವಿತನಾಗಿ ಬ್ರಾಹ್ಮಣನಿಗೆ ದಾನಮಾಡಬೇಕು. ದಾನಕ್ಕೆ ಮುಂಚೆ 'ಸಕಲ ಭೂತಗಳಿಗೂ ಸಂಪತ್ತುಂಟು ಮಾಡುವವಳೂ ಸದಾ ದೇವತೆಗಳಲ್ಲಿ ನೆಲಸಿರುವವಳೂ ಆದ ಲಕ್ಷ್ಮಿಯು, ಈ ಹಸುವಿನ ರೂಪವಾಗಿದ್ದು ನನ್ನ ಪಾಪವನ್ನು ಹೋಗಲಾಡಿಸಲಿ', ಎಂದು ಪ್ರಾರ್ಥಿಸಿ ನಮಸ್ಕಾರಮಾಡಿ, ಅನಂತರ ಎಲೈ ವಿಪ್ರೋತ್ತಮನೇ! ದಕ್ಷಿಣಾಸಮೇತವಾದ ಈ ಧೇನುವನ್ನು ನಿನಗೆ ಕೊಟ್ಟಿರುವೆನೆಂದು ಹೇಳಬೇಕು.

೧೭. ಎಲೈ ರಾಜೇಂದ್ರ! ಈರೀತಿ ವಿಧಿಪೂರ್ವಕವಾಗಿ ತಿಲಧೇನುವನ್ನು ದಾನಮಾಡುವ ಮಾನವನು ಸಕಲ ಪಾಪಗಳಿಂದಲೂ ವಿಮುಕ್ತನಾಗಿ ಕೊನೆಗೆ ಅವನು ಪರಬ್ರಹ್ಮಸ್ವರೂಪವನ್ನೈದುವನು.

ಯಶ್ಚ ಗೃಹ್ಣಾತಿ ವಿಧಿವದ್ದೀಯಮಾನಾಂ ಪ್ರಮೋದತೇ ।
ದೀಯಮಾನಾಂ ಪ್ರಶಂಸಂತಿ ಯೇ ಚ ಸಂಹೃಷ್ಟಮಾನಸಾಃ ॥ ೧೮ ॥

ತೇಽಪಿ ದೋಷವಿನಿರ್ಮುಕ್ತಾ ಬ್ರಹ್ಮಲೋಕಂ ವ್ರಜಂತಿ ತೇ ।
ಪ್ರಶಾಂತಾಯ ಸುಶೀಲಾಯ ವೇದವ್ರತರತಾಯ ಚ ॥ ೧೯ ॥

ಧೇನುಂ ತಿಲಮಯೀಂ ದತ್ವಾ ನ ಶೋಚತಿ ಕೃತಾಕೃತೇ ।
ತ್ರಿರಾತ್ರಂ ಯಸ್ತಿಲಾಹಾರಸ್ತಿಲಧೇನುಪ್ರದೋ ಭವೇತ್ ॥ ೨೦ ॥

ಏಕಾಹಮಥ ವಾ ರಾಜನ್ನ ಯುಂಜ್ಯೇದಂತರಾತ್ಮನಾ ।
ದಾನಾದ್ವಿಶುದ್ಧಿಃ ಪಾಪಸ್ಯ ತಸ್ಯ ಪುಣ್ಯವತೋ ನೃಪ ॥ ೨೧ ॥

---

೧೮. ಶಾಸ್ತ್ರೋಕ್ತವಾಗಿ ದಾನವನ್ನು ಸ್ವೀಕರಿಸುವವರು, ವಿಧಿಪೂರ್ವಕವಾಗಿ ದಾನಮಾಡುವುದನ್ನು ಅನುಮೋದಿಸುವವರು, ದಾನಮಾಡುವುದನ್ನು ಹೊಗಳುವವರು,

೧೯. ಈ ದಾನವಿಷಯದಲ್ಲಿ ಸಂತೋಷಹೊಂದುವವರು ಎಲ್ಲರೂ ಸಹ ತಮ್ಮ ಸಕಲಪಾಪಗಳನ್ನೂ ಕಳೆದುಕೊಂಡು ಬ್ರಹ್ಮಲೋಕವನ್ನು ಸೇರುವರು.

೨೦. ಶಾಂತನೂ, ಒಳ್ಳೆಯ ನಡತೆಯುಳ್ಳವನೂ ಮತ್ತು ವೇದೋಕ್ತ ವ್ರತಾನುಷ್ಠಾನತತ್ಪರನೂ ಆಗಿರುವ ಬ್ರಾಹ್ಮಣೋತ್ತಮನಿಗೆ ತಿಲಧೇನುವನ್ನು ದಾನಮಾಡಬೇಕು. ದಾನ ಕೊಡುವುದಕ್ಕೆ ಬಹುವೆಚ್ಚತಗಲಿತೆಂದು ದುಃಖಪಡಬಾರದು. ಈ ತಿಲಧೇನುವನ್ನು ದಾನಮಾಡುವವನು ಮೂರುದಿನ ಕೇವಲ ಎಳ್ಳನ್ನೇ ಆಹಾರವನ್ನಾಗಿ ಉಪಯೋಗಿಸಬೇಕು.

೨೧. ಅಷ್ಟು ಸಾಗದೆ ಇದ್ದರೆ ಪರಿಶುದ್ಧವಾದ ಮನಸ್ಸಿನಿಂದ ಕೊನೆಗೆ ಒಂದು ದಿನವಾದರೂ ಎಳ್ಳನ್ನೇ ಆಹಾರವನ್ನಾಗಿ ಉಪಯೋಗಿಸಬೇಕು. ಎಲೈ ರಾಜನೇ! ಪುಣ್ಯವಂತನಾದ ಈ ದಾತೃವಿಗೆ ಈ ತಿಲಧೇನುವಿನ ದಾನದಿಂದ ಸಕಲ ಪಾಪಗಳೂ ತೊಲಗುವುವು.

ಚಾಂದ್ರಾಯಣಾದಭ್ಯಧಿಕಂ ಕಥಿತಂ ತಿಲಭಕ್ಷಣಂ ।
ಬಾಲತ್ವೇ ಚೈವ ಯತ್ಪಾಪಂ ಯೌವನೇ ವಾರ್ಧಕೇ ತಥಾ ॥ ೨೨ ॥

ವಾಚಾ ಕೃತಂ ತು ಮನಸಾ ಕರ್ಮಣಾ ಯಚ್ಚ ಸಂಚಿತಂ ।
ಉದಕಷ್ಠೀವನೇ ಚೈವ ನಗ್ನಸ್ನಾನೇನ ಯದ್ಭವೇತ್ ॥ ೨೩ ॥

ಮುಶಲೇನೋದ್ಧೃತೇ ನಾಪಿ ಲಂಬಿತೇ ಬ್ರಾಹ್ಮಣೇ ತಥಾ ।
ವೃಷಲೀಗಮನೇ ಚೈವ ಗುರುದಾರಾಭಿಗಾಮಿನಿ ॥ ೨೪ ॥

ಸುರಾಪಾನೇನ ಯತ್ಪಾಪಮಭಕ್ಷ್ಯಸ್ಯ ಚ ಭಕ್ಷಣಾತ್ ।
ತತ್ಸರ್ವಂ ವಿಲಯಂ ಯಾತಿ ತಿಲಧೇನುಪ್ರದಾಯಿನಾಂ ॥ ೨೫ ॥

ಯಮಮಾರ್ಗೇ ಮಹಾಘೋರೇ ನದೀ ವೈತರಣೀ ಸ್ಮೃತಾ ।
ವಾಲುಕಾಯಾಃ ಸ್ಥಲಂ ಚೈವ ಪಚ್ಯಂತೇ ಯತ್ರ ಪಾಪಿನಃ ॥ ೨೬ ॥

---

೨೨. ಎಳ್ಳನ್ನು ಭಕ್ಷಣೆಮಾಡಿದರೆ ಚಾಂದ್ರಾಯಣವ್ರತವನ್ನು ಆಚರಿಸಿದ ಪುಣ್ಯಕ್ಕಿಂತಲೂ ಹೆಚ್ಚಿನ ಪುಣ್ಯವುಂಟಾಗುವುದು. ಹುಡುಗರಾಗಿದ್ದಾಗ ಮಾಡಿದ ಪಾಪವೂ, ಯವ್ವನ ಮತ್ತು ಮುಪ್ಪು ಇವುಗಳಲ್ಲಿ ಉಂಟಾಗಿರುವ ಪಾಪಗಳೂ ಸಹ ಈ ತಿಲಭಕ್ಷಣೆಯಿಂದ ನಾಶವಾಗುವುವು.

೨೩–೨೫. ವಾಙ್ಮನಃಕರ್ಮಗಳಿಂದ ಉಂಟಾದ ಪಾತಕಗಳೂ, ನೀರಿನಲ್ಲಿ ಉಗುಳುವುದು, ಬೆತ್ತಲೆಯಾಗಿ ಸ್ನಾನಮಾಡುವುದು, ಇವುಗಳಿಂದ ಬಂದಿರುವ ಪಾಪಗಳೂ, ಒನಕೆಯ ಸಂಬಂಧದಿಂದ ಬಂದ ಪಾಪಗಳೂ, ಬ್ರಾಹ್ಮಣರಲ್ಲಿ ಮಾಡಿರುವ ಪಾತಕಗಳೂ, ಶೂದ್ರಸ್ತ್ರೀ ಸಂಗಮ, ಗುರುಪತ್ನೀಗಮನ, ಸುರಾಪಾನ (ಹೆಂಡ ಕುಡಿಯುವುದು), ತಿನ್ನಲು ಅಯೋಗ್ಯವಾದ (ಅಭಕ್ಷ್ಯವೆನಿಸಿದ) ಪದಾರ್ಥಗಳನ್ನು ತಿನ್ನುವಿಕೆ, ಇವುಗಳಿಂದುಂಟಾಗುವ ಪಾತಕಗಳೂ, ಇವೆಲ್ಲವೂ ತಿಲಧೇನುವನ್ನು ದಾನಮಾಡುವವರಿಗೆ ನಾಶವಾಗುವುವು.

೨೬–೨೮. ಪರಲೋಕಮಾರ್ಗದಲ್ಲಿ ವೈತರಣೀ ಎಂಬ ನದಿಯೊಂದಿರುವುದು. ಅಲ್ಲಿರುವ ಮರಳಭೂಮಿಯಲ್ಲಿ ಪಾಪಿಗಳು ಚೆನ್ನಾಗಿ ತಪಿಸಲ್ಪಡುವರು. ಅಲ್ಲಿ ಕಬ್ಬಿಣದ ಮುಖವುಳ್ಳ ಕಾಗೆಗಳೂ, ಭಯಂಕರವಾದ ನಾಯಿಗಳೂ ಸಹ

ಯತ್ರ ಲೋಹಮುಖಾಃ ಕಾಕಾ ಯತ್ರ ಶ್ವಾನೋ ಭಯಾವಹಾಃ ।
ನಿಕೃತ್ಯ ಪಾಪಿನಾಂ ಮಾಂಸಂ ಭಕ್ಷಯಂತಿ ಬುಭುಕ್ಷಿತಾಃ ॥ ೨೭ ॥

ಅಸಿಪತ್ರವನಂ ಚೈವ ಲೋಹಕಂಕಟಶಾಲ್ಮಲೀಂ ।
ಏತಾನ್ಸರ್ವಾನತಿಕ್ರಮ್ಯ ತತೋ ಯಮಪುರಂ ವ್ರಜೇತ್ ॥ ೨೮ ॥

ವಿಮಾನೇ ಕಾಂಚನೇ ದಿವ್ಯೇ ಮಣಿರತ್ನವಿಭೂಷಿತೇ ।
ತತ್ರಾರುಹ್ಯ ನರಶ್ರೇಷ್ಠೋ ಗಚ್ಛತೇ ಪರಮಾಂ ಗತಿಂ ॥ ೨೯ ॥

ಗುಣಹೀನೇ ನ ದಾತವ್ಯಾ ನ ದಾತವ್ಯಾ ಧನೇಶ್ವರೇ ।
ಕುಂಡೇ ಗೋಲೇ ಚ ಲುಬ್ಧೇ ಚ ನ ಚ ದೇಯಾ ಕದಾಪಿ ಸಾ ॥ ೩೦ ॥

ಏಕಾ ಏಕಸ್ಯ ದಾತವ್ಯಾ ಮುನಿಭಿಃ ಕಥಿತಂ ಪುರಾ ।
ಅರಣ್ಯೇ ನೈಮಿಷೇ ಪಾರ್ಥ ನಾರದೇನ ನಿವೇದಿತಂ ॥ ೩೧ ॥

---

ಪಾಪಿಗಳಾದ ಜನಗಳ ಮಾಂಸವನ್ನು ಕತ್ತರಿಸಿ ತಿನ್ನಲು ಆತುರಗೊಂಡು ಭಕ್ಷಿಸುವುವು. ಕತ್ತಿಯಂತೆ ಹರಿತವಾದ ಎಲೆಗಳುಳ್ಳ ಮರಗಳ ಕಾಡು, ಕಬ್ಬಿಣದ ಮುಳ್ಳುಗಳುಳ್ಳ ಶಾಲ್ಮಲೀವೃಕ್ಷದ ವನ ಇವೆಲ್ಲಾ ಇವೆ. ಈ ತಿಲಧೇನುವನ್ನು ದಾನಮಾಡಿದವನು ಮೃತನಾದ ಮೇಲೆ ಭಯಂಕರವಾದ ಈ ಮಾರ್ಗವನ್ನು ಮುತ್ತು, ರತ್ನ ಇವುಗಳಿಂದ ಅಲಂಕರಿಸಲ್ಪಟ್ಟ ಚಿನ್ನದ ವಿಮಾನದಲ್ಲಿ ಕುಳಿತು ದಾಟಿ, ಅನಂತರ ಯಮನ ಪಟ್ಟಣವನ್ನು ಸೇರಿ, ಅಲ್ಲಿ ಉತ್ತಮವಾದ ಸ್ಥಾನವನ್ನು ಹೊಂದುವನು.

೩೦. ಗುಣಹೀನ, ಐಶ್ವರ್ಯಶಾಲಿ, ಗಂಡನು ಜೀವಿಸಿದ್ದಾಗಲೇ ಸ್ತ್ರೀಗೆ ವ್ಯಭಿಚಾರದಿಂದ ಹುಟ್ಟಿದ ಕುಂಡಸಂಜ್ಞಕನಾದ ಪುರುಷ, ಪತಿಯು ಮೃತನಾದ ಮೇಲೆ ವ್ಯಭಿಚಾರದಿಂದ ಜನಿಸಿದ ಗೋಲಕ, ಜಿಪುಣ ಇಂತಹವರಿಗೆ ಯಾವಾಗಲೂ ಎಂದಿಗೂ ಈ ತಿಲಧೇನುವನ್ನು ದಾನಮಾಡಬಾರದು.

೩೧. ಓ ಪಾರ್ಥ! ಒಬ್ಬನಿಗೆ ಒಂದೇ ತಿಲಧೇನುವನ್ನು ದಾನಮಾಡಬೇಕೆಂದು ಹಿಂದೆ ಮುನಿಗಳು ಹೇಳಿದ್ದರು. ಇದನ್ನೇ ನಾರದಮಹರ್ಷಿಗಳು ನನಗೆ ನೈಮಿಷಾರಣ್ಯದಲ್ಲಿ ತಿಳಿಸಿದರು.

**ತತ್ತೇಹಂ ಸಂಪ್ರವಕ್ಷ್ಯಾಮಿ ಸಮ್ಯಕ್ಫಲಸಹಸ್ರದಂ |**
**ಇದಂ ಪುಣ್ಯಂ ಪವಿತ್ರಂ ಚ ಮಾಂಗಲ್ಯಂ ಕೀರ್ತಿವರ್ಧನಂ || ೩೨ ||**

**ವಿಪ್ರಾಣಾಂ ಶ್ರಾವಯೇಚ್ಛ್ರಾದ್ಧೇ ಅನಂತಫಲಮಶ್ನುತೇ |**
**ಬಹುಭ್ಯೋ ನ ಪ್ರದೇಯಾನಿ ಗೌರ್ಗೃಹಂ ಶಯನಂ ಸ್ತ್ರಿಯಃ ||೩೩||**

**ವಿಭಜ್ಯಮಾನಾನ್ಯೇತಾನಿ ದಾತಾರಂ ಪಾತಯಂತ್ಯಧಃ |**
**ಸಾ ತು ವಿಕ್ರಯಮಾಪನ್ನಾ ದಹತ್ಯಾಸಪ್ತಮಂ ಕುಲಂ || ೩೪ ||**

**ಅಸ್ಯಾ ದಾನಪ್ರಭಾವೇನ ವಿಮಾನಂ ಸರ್ವಕಾಮಿಕಂ |**
**ಸಮಾರುಹ್ಯ ನರೋ ಯಾತಿ ಯತ್ರ ದೇವೋ ಹರಿಃ ಸ್ವಯಂ || ೩೫ ||**

**ಏಷಾ ಚೈವ ಪ್ರದಾತವ್ಯಾ ಪ್ರಯತೇನಾಂತರಾತ್ಮನಾ |**
**ಪೌರ್ಣಮಾಸ್ಯಾಂ ಚ ಮಾಘಸ್ಯ ಕಾರ್ತಿಕ್ಯಾಂ ಚೈವ ಭಾರತ || ೩೬ ||**

---

೩೨. ಉತ್ಕೃಷ್ಟವಾದ ಸಹಸ್ರಾರು ಫಲಗಳನ್ನು ಕೊಡುವ ಈ ತಿಲಧೇನುವಿನ ವಿಷಯವನ್ನೇ ಈಗ ನಾನು ನಿನಗೆ ಹೇಳುವೆನು ಕೇಳು. ಈ ತಿಲಧೇನು ದಾನವು ಪುಣ್ಯವೂ, ಪರಮ ಪವಿತ್ರವೂ, ಮಂಗಲಕರವೂ ಮತ್ತು ಕೀರ್ತಿಯನ್ನು ಅಭಿವೃದ್ಧಿಪಡಿಸುವುದೂ ಆಗಿದೆ.

೩೩. ಶ್ರಾದ್ಧಕಾಲದಲ್ಲಿ ಬ್ರಾಹ್ಮಣರಿಗೆ ಈ ತಿಲಧೇನು ವಿಷಯವನ್ನು ಶ್ರವಣಮಾಡಿಸಿದರೆ ಅನಂತವಾದ ಫಲವು ದೊರೆಯುವುದು. ಗೋವುಗಳು, ಮನೆ, ಹಾಸಿಗೆ ಮತ್ತು ಸ್ತ್ರೀ ಇವರನ್ನು ಅನೇಕ ಮಂದಿಗೆ ದಾನಮಾಡಬಾರದು.

೩೪. ಇವುಗಳನ್ನು ಅನೇಕಮಂದಿಗೆ ಹಂಚಿಕೊಟ್ಟರೆ ದಾನಮಾಡುವನನ್ನು ಅಧಃಪಾತಾಳಕ್ಕೆ ಬೀಳಿಸುವುದು. ಇದನ್ನೇ ವಿಕ್ರಯಮಾಡಿದರೆ ಆತನ ಏಳು ತಲೆಮಾರಿನವರನ್ನೂ ಪಾಪಕ್ಕೆ ಗುರಿಮಾಡಿ, ನರಕಕ್ಕೆ ಗುರಿಮಾಡುವುದು.

೩೫. ದಾತೃವು ಈ ತಿಲಧೇನುವಿನ ದಾನಮಹಿಮೆಯಿಂದ ಸಕಲ ಇಷ್ಟಾರ್ಥಗಳನ್ನು ದೊರಕಿಸಿ ಕೊಡುವ ವಿಮಾನವನ್ನೇರಿ, ವಿಷ್ಣುಲೋಕ (ವೈಕುಂಠ) ಕ್ಕೆ ಹೋಗುವನು.

೩೬. ಇಂದ್ರಿಯನಿಗ್ರಹವುಳ್ಳವನಾಗಿ ಪರಿಶುದ್ಧವಾದ ಮನಸ್ಸಿನಿಂದ ಈ ತಿಲಧೇನುವನ್ನು ಮಾಘ ಮತ್ತು ಕಾರ್ತಿಕ ಈ ಮಾಸಗಳ ಪೂರ್ಣಿಮೆಯಲ್ಲಿ ದಾನಮಾಡಬೇಕು.

ಚಂದ್ರಸೂರ್ಯೋಪರಾಗೇ ತು ವಿಷುವೇ ಅಯನೇ ತಥಾ ।
ಷಡಶೀತಿಮುಖೇ ಚೈವ ವ್ಯತೀಪಾತೇ ತು ಸರ್ವದಾ ॥ ೩೭ ॥

ವೈಶಾಖ್ಯಾಂ ಮಾರ್ಗಶೀರ್ಷ್ಯಾಂ ವಾ ಗಜಚ್ಛಾಯಾಸು ಚೈವ ಹಿ ।
ಏಷಾ ತೇ ಕಥಿತಾ ಪಾರ್ಥ ತಿಲಧೇನುರ್ಮಯಾನಘ ॥ ೩೮ ॥

ಯಾವಂತಿ ಧೇನೋ ರೋಮಾಣಿ ಗಾತ್ರೇಷು ನೃಪಪುಂಗವ ।
ತಾವದ್ವರ್ಷಸಹಸ್ರಾಣಿ ತದಾ ಸ್ವರ್ಗೇ ಮಹಿಯತೇ ॥ ೩೯ ॥

ಯಶ್ಚ ಗೃಹ್ಣಾತಿ ವಿಧಿವದ್ದೀಯಮಾನಾಂ ಚ ಪಶ್ಯತಿ ।
ಅನುಮೋದಯತೇ ಚೈವ ತೇ ಸರ್ವೇ ಸ್ವರ್ಗಗಾಮಿನಃ ॥ ೪೦ ॥

ಧೇನುಂ ಧನಾಧಿಪತಯೋ ಮಗಧೋದ್ಭವೇನ ।
ಮಾನೇನ ಯೇ ತಿಲಮಯೀಂ ಚತುರಾಢಕೇನ ॥
ಕೃತ್ವಾ ಯಥೋಕ್ತರಚನಾಂ ಕೃತಚಾರುವತ್ಸಾಂ ।
ಯಚ್ಛಂತಿ ತೇ ಭುವಿ ಭವಂತಿ ವಿಮುಕ್ತಪಾಪಾಃ ॥ ೪೧ ॥

---

೩೭–೩೮. ಓ ಭರತಕುಲೋತ್ಪನ್ನನಾದ ಯುಧಿಷ್ಠಿರನೇ! ಚಂದ್ರಸೂರ್ಯ ಗ್ರಹಣಗಳಲ್ಲಿಯೋ, ವಿಷುವತ್ಪುಣ್ಯಕಾಲ, ದಕ್ಷಿಣಾಯನ ಮತ್ತು ಉತ್ತರಾಯಣ, ಷಡಶೀತಿಪುಣ್ಯಕಾಲ, ವ್ಯತೀಪಾತವಿರುವ ದಿನ, ವೈಶಾಖ ಪೂರ್ಣಿಮಾ, ಮಾರ್ಗಶೀರ್ಷ ಪೂರ್ಣಿಮಾ ಇವುಗಳಲ್ಲಿಯೋ ಅಥವಾ ಗಜಚ್ಛಾಯಾಸಂಜ್ಞಕ ಪುಣ್ಯದಿನದಲ್ಲೋ ಈ ತಿಲಧೇನುವನ್ನು ದಾನಮಾಡಬಹುದು.

೩೯. ಎಲೈ ರಾಜಕುಲೋತ್ತಮನೇ! ತಾನು ದಾನಮಾಡುವ ಧೇನುವಿನ ಶರೀರದಲ್ಲಿ ಎಷ್ಟು ರೋಮಗಳಿರುವುವೋ ಅಷ್ಟು ಸಾವಿರ ವರ್ಷಗಳಕಾಲ ಯಜಮಾನನು ಸ್ವರ್ಗಲೋಕದಲ್ಲಿ ವಾಸಿಸುತ್ತಾ ಪೂಜಿಸಲ್ಪಡುವನು.

೪೦. ದಾನವನ್ನು ವಿಧಿಪೂರ್ವಕವಾಗಿ ಸ್ವೀಕರಿಸುವವನೂ, ಈ ಸನ್ನಿವೇಶವನ್ನು ಆಸಕ್ತಿಯಿಂದ ನೋಡುವವನೂ, ಅನುಮೋದಿಸುವವನೂ, ಇವರೆಲ್ಲರೂ ಸ್ವರ್ಗವನ್ನು ಸೇರುವರು.

೪೧. ಮಗಧದೇಶದಲ್ಲಿ ರೂಢಿಯಿರುವಂತೆ ನಾಲ್ಕು ಕೊಳಗ ಪ್ರಮಾಣದ ಎಳ್ಳಿನಿಂದ ಶಾಸ್ತ್ರೋಕ್ತವಾಗಿ ಧೇನುವನ್ನೂ ಸುಂದರವಾದ ಕರುವನ್ನೂ ರಚಿಸಿ ಭಕ್ತಿಪೂರ್ವಕವಾಗಿ ದಾನಮಾಡುವ ಮಾನವನು ತನ್ನ ಸಕಲ ಪಾಪಗಳನ್ನೂ ಕಳೆದುಕೊಂಡು ಮುಕ್ತನಾಗುವನು.

**ಪ್ರತಿಗೃಹ್ಣಾಮಿ ದೇವಿ ತ್ವಾಂ ಕುಟುಂಬಭರಣಾಯ ಚ ।**
**ಕಾಮಂ ದೇಯಾ ದಯಾಸ್ಮಭ್ಯಂ ಧೇನೋ ತ್ವಂ ಸರ್ವದಾ ಹ್ಯಸಿ ॥೪೨॥**

**ಇತಿ ಶ್ರೀ ಭವಿಷ್ಯೇಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣಯುಧಿಷ್ಠಿರ ಸಂವಾದೇ ತಿಲಧೇನುದಾನವ್ರತವಿಧಿವರ್ಣನಂ ನಾಮ ದ್ವಿಪಂಚಾಶದುತ್ತರಶತತಮೋಽಧ್ಯಾಯಃ.**



---

೪೨. ಈ ತಿಲಧೇನುವನ್ನು ಪ್ರತಿಗ್ರಹಮಾಡುವಾಗ, ಬ್ರಾಹ್ಮಣನು ಎಲೌ ಗೋರೂಪಧಾರಿಣಿಯಾದ ದೇವಿಯೇ ! ನನ್ನ ಸಂಸಾರನಿರ್ವಹಣ ಕ್ಕೋಸ್ಕರ ನಿನ್ನನ್ನು ಸ್ವೀಕರಿಸುವೆನು. ತಾಯೇ! ದಯಾಸ್ವರೂಪಿಣಿಯೂ ಧೇನುರೂಪಿನಿಯೂ ಆದ ನೀನು ನನ್ನ ಸಕಲ ಇಷ್ಟಾರ್ಥಗಳನ್ನೂ ಕೊಟ್ಟು ಯಾವಾಗಲೂ ನಮ್ಮನ್ನು ಕಾಪಾಡು, ಎಂದು ಹೇಳಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದ ಶ್ರೀಕೃಷ್ಣ ಮತ್ತು ಯುಧಿಷ್ಠಿರ ಇವರ ಸಂವಾದದಲ್ಲಿ ತಿಲಧೇನುದಾನವ್ರತವಿಧಿವರ್ಣನೆಯೆಂಬ ನೂರೈವತ್ತೆರಡನೆಯ ಅಧ್ಯಾಯ ಮುಗಿದುದು.

## ಉತ್ತರಪರ್ವದ ತೃತೀಯ ಸಂಪುಟ ಸಮಾಪ್ತಂ.

